R. N. B. 2554

# ಶಿವಾನುಭವ

—ం౦೦●೦೦೦—

ಸಂಪುಟ ೨೮ ] [ ಸಂಚಿಕೆ ೧

ಸಂಪಾದಕರು

**ಫ. ಗು. ಹಳಕಟ್ಟಿ**

ಬಿ. ಎ. ಎಲ್. ಎಲ್. ಬಿ.



[ಬಿ. ಪ್ರ. ೫-೧೨-೦] ವಿಜಾಪುರ [ ಜನವರಿ ೧೯೫೪

# ವಿಷಯಾನುಕ್ರಮಣಿಕೆ

# ಶಿವಾನುಭವ

ವರ್ಷ ೨೮ | ಜಾನೇವರಿ ೧೯೫೪ | ಸಂಚಿಕೆ ೧

## ಲಿಂಗಗಳು

( ಲೇಖಕ:— ಶ್ರೀ ಬಸಪ್ಪ. ಚೆ. ಪಟ್ಟೇದ. )



ಅನಾದಿ ಲಿಂಗವು ಒಂದೇ ಒಂದು. ಅದು ಏಕಮೇವಾದ್ವಿತೀಯವು ಹೀಗಿದ್ದು ಇಲ್ಲಿ ಲಿಂಗಗಳು ಎಂಬ ಶಿರೋಲೇಖ ಬರೆದಿವೆ. ಕಾರಣವೇನೆಂದರೆ - ಆ ಒಂದೇ ಒಂದು ಆಗಿರುವ ಲಿಂಗವು ಮುಂದೆ ತ್ರಿಲಿಂಗ, ಷಡ್ಲಿಂಗ, ನವಲಿಂಗಗಳಾಗಿ ವರ್ತಿಸಿತು. ಅಂತೇ ಲಿಂಗಗಳು ಎಂಬ ಬಹು ವಚನ ಇಟ್ಟದ್ದು ತಪ್ಪಲ್ಲ. ಈ ಲಿಂಗಗಳನ್ನೆಲ್ಲ ತುಸು ಹೆಚ್ಚಾಗಿ ವಿವೇಚಿಸುವದೇ ಈ ಲೇಖದ ಉದ್ದಿಷ್ಟವಾಗಿದೆ.

ಸ್ಥಳವೆಂದರೆ ಹತ್ತನೆಯದಾದ ಅಣುಚಕ್ರಗತ ನಿರವಯವ ಲಿಂಗವು. "ಲೀಯತೇ ಗಮ್ಯತೇಯತ್ರ । ಜಗದೇ ತಚ್ಚರಾಚರಂ ॥ ತದೇವಂ ಲಿಂಗಮಿತ್ಯಾಹುಃ । ಲಿಂಗತತ್ವವಿಶಾರದಾಃ ॥೧॥" ಎಂದು ವರ್ಣಿತವಾದುದೇ ಆ ನಿರವಯವ ಲಿಂಗವು. ಇದು ಮುಂದೆ ಅಂಗ ಲಿಂಗವೆಂದೆರಡಾಯಿತು. ಅಂಗವೆಂದರೆ ಸ್ಥೂಲ ( ಹೊರಗೆ ), ಲಿಂಗವೆಂದರೆ ಸೂಕ್ಷ್ಮ ( ಒಳಗೆ ). ಲಿಂಗಗಳು ಪೂಜ್ಯ, ಅಂಗಗಳು ಪೂಜಕ. ಲಿಂಗಗಳು ಅಂಗದ ಉದ್ಧಾರಕ್ಕಾಗಿಯೇ ಇರುತ್ತವೆ. ಅಂಗಗಳೂ ೧೨ ಲಿಂಗಗಳೂ ೧೨ ಇರುವವು. ಲಿಂಗಗಳು ಪ್ರಣವಗಳಿಂದ ಉದ್ಭವಿಸಿರುತ್ತವೆ.

## ತ್ರಿಲಿಂಗಗಳು

ತ್ಯಾಗಾಂಗ- (=ಅನಿಷ್ಟವಾದುದನ್ನು ತ್ಯಜಿಸುವ ಅಂಗ), ಭೋಗಾಂಗ (ಲಿಂಗಾರ್ಪಿತವಾದುದನ್ನೇ ಭೋಗಿಸುವ ಲಿಂಗ), ಯೋಗಾಂಗ (ಲಿಂಗದಲ್ಲಿ ಬೆರೆದು ತದ್ರೂಪವಾಗುವ ಅಂಗ.) ಇವುಗಳಲ್ಲಿ ಕ್ರಮವಾಗಿ ಬ-ಸ-ವ ಎಂಬ ಪ್ರಣವಗಳು ಸಂಬಂಧವಾಗಿರುವವು. ಆ ಪ್ರಣವಗಳೇ ಓಳಯಿಂದ ಇಷ್ಟ ಲಿಂಗ, ಪ್ರಾಣಲಿಂಗ ಭಾವಲಿಂಗ ಸ್ವರೂಪವಾಗಿರುವವು. ಇವಲ್ಲದೆ ನಿಷ್ಕ ಲಲಿಂಗ, ನಿಃಶೂನ್ಯಲಿಂಗ ನಿರಂಜನಲಿಂಗವೆಂಬ ಮೂರು ಶೂನ್ಯಲಿಂಗಗ ಳಿರುವವು. ಅವುಗಳ ವಿವರವು ಮುಂದೆ ಬರುವದು.

## ಷಡ್ ಲಿಂಗಗಳು

ಇವು ಪ್ರಸಾದಲಿಂಗಗಳು. ಸಾಕಾರಲಿಂಗಗಳು. ಶೂನ್ಯ ಲಿಂಗಗಳನ್ನು ಆಕಾರವುಳ್ಳ ಲಿಂಗಗಳಿಂದಲೇ ಅರಿಯಲು ಸಾಧ್ಯವಾಗಿದೆ. ನಿರಿಂದಲೇ ಉಗಿಯ ಕಲ್ಪನೆ ಬರುವದು. ಮೇಲೆ ಹೇಳಿದ ಬ-ಸ-ವ ಎಂಬ ಅಕ್ಷರ ಗಳನ್ನು ಕೂಡಿಸಿದರೆ 'ಬಸವ' ಎಂಬುದು ಹುಟ್ಟುವದು. ಬಸವ (ಅಂದರೆ ಸಾಮಾನ್ಯವಾಗಿ ಮನುಷ್ಯ, ಅದರಲ್ಲಿಯೂ ಸುಜ್ಞಾನಿ ಮನುಷ್ಯ, ಲಿಂಗ ಧಾರೀ ಮನುಷ್ಯ, ಭಕ್ತ, (ಶರಣ) ನನ್ನು ಕಂಡು ಅವನ ವರ್ತನವನ್ನು ನಿರೀಕ್ಷಿಸಿದರೆ ಅವನ ಸುಜ್ಞಾನ ಮಹಾಜ್ಞಾನ (ಓಂಕಾರವು) ನಿರಾತಂ ಕವಾಗಿ ತಿಳಿಯುವದು. ಆದುದರಿಂದ ಬಸವ ಎಂಬುದೇ ಓಂಕಾರದ ಮೂಲವು ಹಾಗೂ ಬ, ಸ, ವ ಅಕ್ಷರಗಳೇ ಓಂಕಾರಗತ ಅ. ಉ. ಮ್ ಗಳ ಉತ್ಪತ್ತಿ ಸ್ಥಾನವು. ಇಷ್ಟು ಮೊದಲು ಹೇಳಿ ಮುಂದೆ ಷಡ್‌ಲಿಂಗ ಗಳನ್ನು ಬರೆಯುವಾ.

ಈಶ್ವರ(ಭಕ್ತ) ದುಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಎಂಬ ಷಡಂಗದಲ್ಲಿ ಕ್ರಮವಾಗಿ ನ, ಮ: ಶಿ, ವಾ, ಯ, ಓಂ ಎಂಬ ಪ್ರಣವ ಗಳು ಸಂಬಂಧವಾಗಿರುತ್ತವೆ. ಅವೇ ಸಾಲಾಗಿ ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಲಿಂಗ, ಪ್ರಸಾದಲಿಂಗ, ಮಹಾಲಿಂಗ, ಸ್ವರೂಪದಿಂದ ವಾಸಿಸುತ್ತಿರುವವು ಪ್ರತಿಯೊಬ್ಬ ಅಂಗನಲ್ಲಿ ಇವು ಒಂದೊಂದೇ ವಿಶೇಷ ರೀತಿಯಿಂದ ಅವರವರ ಪ್ರಗತಿಗನುಸರಿಸಿ ಇರುವವೆಂದು ಹೇಳಲ್ಪಟ್ಟಿದ್ದರೂ ನಿಜವಾಗಿ ಈ ಆರೂ ಲಿಂಗಗಳು ಪ್ರತಿಯೊಬ್ಬನಲ್ಲಿ ಇದ್ದೇ ಇರುವವು. ಇವು ದೇಹದಲ್ಲಿ ಇರುವ ಸ್ಥಳವೆಂದರೆ ಹೃದಯವು. ಗುದದಿಂದ ಭೂಮ

ಧ್ಯದ ವರೆಗೆ (ಆಧಾರ ಚಕ್ರದಿಂದ ಆಜ್ಞಾಚಕ್ರದ ವರೆಗೆ) ಆ ಹೃದಯವು ಪಸರಿಸಿರುವನು. ಮಹಾಲಿಂಗದ ಅಂತ್ಯಕ್ಕೆ ಇಲ್ಲ. ಅಗ್ನಿಮಂಡಲವು ಸಂಭ ವಿಸುವದರಿಂದ ಅಲ್ಲಿಯೇ ಚಿದಂಬರವು (ಚಿತ್ = ಮಹಾಜ್ಞಾನ, ಅಂಬರ= ಆಕಾಶ, ಇಲ್ಲವೆ ಶೂನ್ಯತೆ) ಹುಟ್ಟುವದು. ಇಲ್ಲಿ ಭಕ್ತನು ಸ್ಥಳದಲ್ಲಿ ಬೆರೆದು ಸಮರಸವಾಗುವನು. ಭಕ್ತನೆಂಬ ಹೆಸರು ಷಡಂಗರಿಗೂ ಸಾಮಾನ್ಯವಾ ದುದು. ಅದಕ್ಕೆ ಪಂಚಾಕ್ಷರ ಇಲ್ಲವೇ ಷಡಕ್ಷರ ಮಂತ್ರವೇ ಸಾಧನವಾ ಗಿರುವದು. ಇಲ್ಲಿ ಭಕ್ತನು ಕೊನೆಗೆ ಸದ್ಭಾವತ್ರಯ (ಪ್ರಕಾಶನ, ಪ್ರವ ರ್ತನ, ಮೋಹನ) ದಿಂದ ಮುಕ್ತನಾಗಲೇಬೇಕು. ಈ ಷಡ್ಲಿಂಗಗಳಿಗೆ ಸೂರ್ಯಮಂಡಲದ ಲಿಂಗಗಳೆನ್ನುವರು ಇವು ಸೂರ್ಯನಂತೆ ತಾಪ ದಾಯಕವಾಗಿವೆ. ಏಕೆಂದರೆ (೧) ಲಿಂಗಗಳು ಮೊದಲು ಶಕ್ತಿಯಿಂದ ಕೂಡಿರುವವು. ಕೊನೆಗೆ ಶಕ್ತಿಗಳನ್ನು ಕಲೆಗಳ ಸ್ವರೂಪಗಳಲ್ಲಿ ರೂಪಾಂ ತರಿಸಬೇಕಾಗುವದು. (೨) ಹಾಗೂ ಲಿಂಗಗಳನ್ನು ಸೂಚಿತ್ತ, ಸುಬುದ್ಧಿ, ನಿರಹಂಕಾರ, ಸುಮನ, ಸುಜ್ಞಾನ, ಸದ್ಭಾವಗಳಿಂದ ಪೂಜಿಸಬೇಕಾಗುತ್ತದೆ. ಇವೆರಡೂ ಕಾರ್ಯಗಳು ಅತಿ ಕಷ್ಟದಾಯಕವಾಗಿವೆ. ಈ ಲಿಂಗಗಳನ್ನು ಶ್ರೀಚನ್ನಬಸವೇಶ್ವರನು ಸ್ಥಾಪಿಸಿದನು.

## ಶೂನ್ಯಲಿಂಗತ್ರಯವು.

ಸ್ಥೂಲಾಂಗ, ಸೂಕ್ಷ್ಮಾಂಗ, ಕಾರಣಾಂಗ ಇವು ತ್ಯಾಗಾಂಗ ಭೋಗಾಂಗ ಯೋಗಾಂಗಗಳ ಪ್ರತಿಶಬ್ದಗಳಾಗಿವೆ. ಇವುಗಳಲ್ಲಿ ಕ್ರಮವಾಗಿ ಅ, ಉ, ಮ್, ಪ್ರಣವಗಳು ಸಂಬಂಧವಾಗಿರುವವು. ಆವೇ ಪ್ರಣವಗಳು ಓಳ ಯಿಂದ ನಿಷ್ಕಲಲಿಂಗ (ಕಲಾಪೂರ್ಣಲಿಂಗ). ನಿಃಶೂನ್ಯಲಿಂಗ (ಬಿಂದು ಜನಿತಲಿಂಗ), ನಿರಂಜನಲಿಂಗ (ನಿರ್+ಅಂಜನ=ನಿರಂಜನ ಅಂದರೆ ಸ್ಪಷ್ಟತೆ ಇಲ್ಲದಿರುವ ಲಿಂಗ) ಸ್ವರೂಪದಿಂದ ವಾಸಿಸುವವು. ಇವೇ ಶೂನ್ಯ ಗರ್ಭಸ್ಥ ಲಿಂಗಗಳು. ಷಡ್ಲಿಂಗಗಳಲ್ಲಿ ಕಾಣುವ ಆದಾನ ವಸ್ತುಗಳೂ ಇವುಗಳಲ್ಲಿ ಇರುವದಿಲ್ಲ. ಚಂದ್ರನಂತೆ ಶೀತಲವಾಗಿವೆ. ಇವನ್ನು ಶೂನ್ಯಸಿಂಹಾಸನ ವೇರಿದ ಮತ್ತು ಶೂನ್ಯಸಂಪಾದನೆಯನ್ನು ವಿರಚಿಸಿದ, ಗುಹೇಶ್ವರ ಭಕ್ತ ನಾದ, ಶ್ರೀಪ್ರಭುದೇವರು ಸ್ಥಾಪಿಸಿದರು ಇವು ಶಿರಸ್ಸಿನಲ್ಲಿರುವವು. ಬ್ರಹ್ಮ ರಂಧ್ರ (ಉನ್ಮನಿ) ಚಕ್ರ. ಶಿಖಾಚಕ್ರ ಪಶ್ಚಿಮಚಕ್ರಗಳಲ್ಲಿ ಕ್ರಮವಾಗಿ ಅ (ಓಂ), ಉ (ಷಂ), ಮ್ (ಹಂ) ಎಂಬ ಬೀಜಾಕ್ಷರಗಳು (ಪ್ರಣವ

ಗಳು) ಸಂಬಂಧವಾಗಿವೆ. ಅವೇ ಈ ಶೂನ್ಯಲಿಂಗಗಳ ಸ್ವರೂಪದಿಂದ ಹಾಸಿರುವವು. ಕಲಾ-ಬಿಂದು-ನಾದಗಳೆಲ್ಲ ಲಯವಾಗಿ, ಪರಶಿವ ಪರಬ್ರಹ್ಮ ದಲ್ಲಿ ಬೇದು ಒಂದೇ ಒಂದು ಸ್ಥಳವಾಗುವದು. ನಾದಲಿಂಗ (ನಿರಂಜನ ಲಿಂಗ)ದ ಕೊನೆಯಲ್ಲಿ ಇಲ್ಲಿ ನಿರ್ಲಯಲ ಮಂಡಲವಾಗುವದು.

ಷಡ್‌ಲಿಂಗಗಳಿಗೂ ಶೂನ್ಯಲಿಂಗಗಳಿಗೂ ಕಲಾಲಿಂಗವೇ (ಮಹಾ ಲಿಂಗ, ನಿಷ್ಕಲಲಿಂಗ) ಗಳೇ ಮಧ್ಯವರ್ತಿ (ಕೇಂದ್ರ) ಲಿಂಗವಾಗಿವೆ. ಷಡ್ ಲಿಂಗಗಳು ಮಹಾಲಿಂಗದಿಂದ ಬೆಳೆಯುತ್ತಲೂ ಶೂನ್ಯಲಿಂಗಗಳು ನಿಷ್ಕಲ ಲಿಂಗದಿಂದ ಅಳಿಯುತ್ತಲೂ ಹೋಗಿರುತ್ತವೆ. ಮಹಾಲಿಂಗವೇ ಕೆಳಗಿನ ಪಂಚಲಿಂಗಗಳ ರೂಪವನ್ನು ತಾಳುವದು. ಅದು ಹೇಗೆಂದರೆ— (೧) ಮಹಾಲಿಂಗವೇ ಶ್ರೋತ್ರೇಂದ್ರಿಯವೆಂಬ ಈಶಾನಮುಖದೊಳಗೆ, 'ಯ'ಕಾರ ಮಂತ್ರ ಮೂರ್ತಿಯಾಗಿ ಪ್ರಸಾದಲಿಂಗವೆಂಬ ನಾಮದಿಂದ ಇರುತ್ತಿದ್ದು ಸುಶಬ್ದ ದುಶಬ್ದಗಳೆರಡನ್ನು ಕೈಕೊಳ್ಳಲು ಆ ಶಬ್ದಪ್ರಸಾದವನ್ನು ಶರಣನು ಸ್ವೀಕರಿಸುವನು. (೨) ಮಹಾಲಿಂಗವೇ ತ್ವಗಿಂದ್ರಿಯವೆಂಬ ತತ್ಪುರುಷ ಮುಖದೊಳಗೆ 'ವ' ಕಾರ ಮಂತ್ರ ಮೂರ್ತಿಯಾಗಿ ಜಂಗಮಲಿಂಗನಾಮ ದಿಂದ ಇರುತ್ತಿದ್ದು ಮೃದು ಕಠಿಣಾದಿ ಸ್ಪರ್ಶಗಳನ್ನು ಕೈಕೊಳ್ಳಲು ಆಸ್ಪರ್ಶ ಪ್ರಸಾದವನ್ನು ಪ್ರಾಣಲಿಂಗಿಯು ಸ್ವೀಕರಿಸುವನು. ಅವನಿಗೆ ಅದು ಪ್ರಸಿದ್ಧ ಪ್ರಸಾದವಾಗುವದು (೩) ಮಹಾಲಿಂಗವೇ ನಯನೇಂದ್ರಿಯವೆಂಬ ಅಘೋರ ಮುಖದೊಳಗೆ 'ಶಿ' ಕಾರ ಮಂತ್ರ ಮೂರ್ತಿಯಾಗಿ ಶಿವಲಿಂಗ ನಾಮದಿಂದ ಇರುತ್ತಿದ್ದು ಪೀತಾದಿ ಸರ್ವರೂಪಂಗಳನ್ನು ನೋಡುತ್ತಿರಲು ಆ ರೂಪಪ್ರಸಾದವು ಪ್ರಸಾದಿಗೆ ಸಿದ್ಧಪ್ರಸಾದವಾಗುವದು.

(೪) ಮಹಾಲಿಂಗವೇ ಜಿಹ್ವೇಂದ್ರಿಯವೆಂಬ ವಾಮದೇವ ಮುಖ ದೊಳಗೆ 'ಮ'ಕಾರ ಮಂತ್ರ ಮೂರ್ತಿಯಾಗಿ ಗುರುಲಿಂಗ ನಾಮದಿಂದ ಇರುತ್ತಿದ್ದು ಷಡ್‌ರಸಗಳನ್ನು ಸ್ವೀಕರಿಸಲು ಅದು ಮಹೇಶ್ವರನಿಗೆ ಶುದ್ಧ ಪ್ರಸಾದವಾಗುವದು.

(೫) ಮಹಾಲಿಂಗವೇ ಘ್ರಾಣೇಂದ್ರಿಯವೆಂದು ಸದ್ಯೋಜಾತ ಮುಖ ದೊಳಗೆ 'ನ'ಕಾರ ಮಂತ್ರಮೂರ್ತಿಯಾಗಿ ಆಚಾರಲಿಂಗ ನಾಮದಿಂದ ಇರು ತ್ತಿದ್ದು ಸುಗಂಧ ದುರ್ಗಂಧಗಳೆರಡನ್ನು ಕೈಕೊಳ್ಳಲು ಈಶ್ವರನಿಗೆ (ಭಕ್ತನಿಗೆ) ಅದು ಗಂಧ ಪ್ರಸಾದವಾಗುವದು.

ಇದು ಕಲಾಲಿಂಗವಾದ ಮಹಾಲಿಂಗವು ಬೆಳೆದುದಾಯಿತು. ಇನ್ನು ಕಲಾಪೂರ್ಣಲಿಂಗವಾದ ನಿಷ್ಕಲವು ಅಳಿದು ಶೂನ್ಯಲಿಂಗಗಳಾದುದನ್ನು ನೋಡುವ.

೧. ಮಹಾಲಿಂಗವೇ ಮೊದಲು ಸೂಕ್ಷ್ಮವಾದ ಸಕಲ (ಕಲೆಯುಳ್ಳ) ಲಿಂಗವು. ಮಹಾಲಿಂಗದ ಪತ್ತು ಮಡಿಯಾಗಿ ಅದರ ಅಧಿರಾಜನೆನಿಸುವ ನಿಷ್ಕಲಲಿಂಗವು ಸಹ ಸೂಕ್ಷ್ಮತರ ಕಲಾಲಿಂಗವೆಂದು ಹೇಳುವ ಪ್ರಯೋಜನವೇ ಇಲ್ಲ.

೨. ಕಲೆಯು ಬಿಂದುವಿಗಿಂತ ದೊಡ್ಡದು.. ಆ ಕಾರಣ ಕಲಾಪೂರ್ಣ ಲಿಂಗವು (ನಿಷ್ಕಲಲಿಂಗವು) ಕ್ಷಯಿಸುತ್ತ ಕ್ಷಯಿಸುತ್ತ ಅದು ಬಿಂದು ಸ್ವರೂಪಕ್ಕೆ ಬರಲು ಶೂನ್ಯಲಿಂಗವೆನಿಸುವದು.

೩. ಬಿಂದುಪ್ರಾಯದ ನಿಃಶೂನ್ಯಲಿಂಗವು ಕ್ಷೀಣಿಸಿ ಮಾಯವಾಗಿ ನಾದಸ್ವರೂಪಕ್ಕೆ (ಚಿತ್ ಧ್ವನಿಸ್ವರೂಪಕ್ಕೆ) ಬಂದರೆ ಅದೇ ನಿರಂಜನ ಲಿಂಗವಾಗುವದು. ಇನ್ನು ಇವುಗಳ ವಿವರವು ಕೆಳಗೆ ಇರುವದು.

(೧) ನಿಷ್ಕಲಲಿಂಗ— ಶೂನ್ಯಲಿಂಗಗಳಲ್ಲಿ ಮೊದಲನೆಯದಾದ ಈ ಲಿಂಗವು ಸ್ಥೂಲಾಂಗಕ್ಕೆ ಸಂಬಂಧಿಸಿದ ನಾದವೆನಿಸುವ 'ಅ'ಕಾರ ಪ್ರಣವದಲ್ಲಿಯೇ ಉದ್ಭವಿಸುವದು. ಇದು ಪೂರ್ಣ ಕಲೆಯುಳ್ಳ ಲಿಂಗವಾದುದರಿಂದ ಕಲಾಪೂರ್ಣವಾದ 'ಓಂ'ಕಾರವೇ ಇದರ ಬೀಜಪ್ರಣವವಾಗಿದೆ.

ಶೂನ್ಯಲಿಂಗ — ಸೂಕ್ಷ್ಮಾಂಗಗತ ಬಿಂದುವೆನಿಸಿದ ಉಕಾರ ಪ್ರಣವವೇ 'ಕ್ಷಂ' ಎಂಬ ಹೆಸರಿನಿಂದ ನಿಃಶೂನ್ಯ ಲಿಂಗದ ಉತ್ಪತ್ತಿ ಸ್ಥಾನವಾಗಿದೆ. 'ಉ' ಪ್ರಣವಕ್ಕೆ ಅದು ಹೇಗೆ 'ಕ್ಷಂ' ಎಂಬ ಹೆಸರು ಪ್ರಾಪ್ತವಾಗುವದೆಂಬುದನ್ನು ಕೆಳಗೆ ವಿವರಿಸಿದೆ.

ಕ್ಷ ( = ಕ + ಸ )— ಇದರಲ್ಲಿ ಕಕಾರದಿಂದ ಸಕಾರದ ವರೆಗೆ ಎಲ್ಲ ವ್ಯಂಜನಗಳ ಸಮಾವೇಶವೂ ಅದೆ. ವ್ಯಂಜನಗಳು ಶಕ್ತಿ (ಬಿಂದು) ಸ್ವರೂಪದವು. ಇವಕ್ಕೆ ಸ್ವರ (ಶಿವ) ಕೂಡಿದರೆ ಮಾತ್ರ ಕಾರ್ಯಪ್ರವೃತ್ತ (ಉಚ್ಚರಿತ) ವಾಗುವವು. ಆದುದರಿಂದ 'ಕ್ಷ'ವು ಉಕಾರಕ್ಕೆ ಸರಿಯಾಗಿರುವುದು. ನಿಃಶೂನ್ಯ ಲಿಂಗಕ್ಕೆ ಈ 'ಕ್ಷ' ಕಾರ ಪ್ರಣವವೇ ಬೀಜಪ್ರಣವವು.

೩. ನಿರಂಜನಲಿಂಗ— ಇನ್ನು ಕಾರಣಾಂಗಕ್ಕೆ ಸಂಬಂಧಿಸಿದ ಕಲೆ ಎನಿಸುವ 'ಮ್' ಕಾರ ಪ್ರಣವವೂ ನಿರಂಜನ ಲಿಂಗವೂ ಉಳಿದವು.

ಆದುದರಿಂದ ನಿರಂಜನಲಿಂಗವು ನಾದ ಜನಿತವಾದುದರಿಂದ ನಾದ ವಾದ 'ಹ್' ಕಾರ ಪ್ರಣವವೇ ಇದರ ಬೀಜಪ್ರಣವವೆಂದು ಎಣಿಸಲ್ಪಟ್ಟಿದೆ. ಈ 'ಹ್' ಕಾರ ಪ್ರಣವವು ಅದು ಹೇಗೆ ನಾದವೆಂಬುದನ್ನು ಕೆಳಗೆ ತೋರಿಸಲಾಗಿದೆ.

ಅ ಕಾರವೇ ನಾದವೆಂಬುದನ್ನು ನೀವು ಬಲ್ಲಿರಷ್ಟೇ! ಈ ಅಕಾರವೇ ವರ್ಣಮಾಲೆಯಲ್ಲಿ ಮೊದಲನೆಯದಾಗಿದೆ 'ಹ' ಕಾರವು ಕೊನೆಯದಾಗಿದೆ. ಅಕಾರ ವರ್ಣಮಾಲೆಯು ಉಪಕ್ರಮ ಉಪಸಂಹಾರಗಳಾದ ಇವೆರಡೂ ವರ್ಣಗಳು ಒಂದೇ! ಮೇಲಾಗಿ ಇವೆರಡೂ ಕೊರಳಲ್ಲಿಯೇ ಹುಟ್ಟುವವು.

ಈ ವಿವರವನ್ನು ನೋಡಿದರೆ 'ಅ' ಕಾರವೆಂಬ ನಾದ ಪ್ರಣವದಲ್ಲಿ ನಿಷ್ಕಲನೆಂಬ ಕಲಾಲಿಂಗವೂ 'ಮ' ಕಾರವೆಂಬ ಕಲಾಪ್ರಣವದಲ್ಲಿ ನಿರಂಜನನೆಂಬ ನಾದಲಿಂಗವೂ, ಹುಟ್ಟಿದ್ದು ತೋರಿಸಲ್ಪಟ್ಟಿದೆ. ಹೀಗೆ ಇವು ಏಕೆ ಪಲ್ಲಟಿಸಿವೆ? ಎಂಬ ಶಂಕೆಯು ಬರಬಹುದು ಆದರೆ ಅದರಲ್ಲೇನೂ ಹುರುಳಿಲ್ಲ. ಏಕೆಂದರೆ, ನಾದ ಕಲೆಗಳು ಬೀಜ ವೃಕ್ಷಗಳಂತೆ ಪರಸ್ಪರ ಕಲೆತುಕೊಂಡೇ ಇರುವವು. ಅಂದರೆ ನಾದದಲ್ಲಿ ಕಲೆಯೂ, ಕಲೆಯಲ್ಲಿ ನಾದವೂ ಬೆರೆದೇ ಇರುವವು. ಆ ಕಾರಣ ನಾದದಲ್ಲಿ ಹುಟ್ಟಿದುದು ಕಲೆಯಲ್ಲಿ ಹುಟ್ಟಿದಂತೆಯೂ ಕಲೆಯಲ್ಲಿ ಹುಟ್ಟಿದುದು ನಾದದಲ್ಲಿ ಹುಟ್ಟಿದಂತೆಯೂ ಸಹ ಅರ್ಥ ಹೊರಟೇ ಹೊರಡುವದು, ಮೇಲಾಗಿ ಇಷ್ಟ, ಪ್ರಾಣ, ಭಾವಲಿಂಗಗಳು ಕ್ರಮವಾಗಿ ಹೆಚ್ಚೆಚ್ಚು ಸೂಕ್ಷ್ಮವಾಗುತ್ತ ಹೋದಂತೆಯೇ ಈ ಶೂನ್ಯಲಿಂಗಗಳಾದ ನಿಷ್ಕಲಲಿಂಗ, ನಿಃಶೂನ್ಯ ಲಿಂಗ, ನಿರಂಜನ ಲಿಂಗಗಳಾದರೂ ಬರಬರುತ್ತ ಹೆಚ್ಚೆಚ್ಚು ಸೂಕ್ಷ್ಮವಾಗುತ್ತ ಹೋಗುತ್ತಲೇ ಹೋಗಿವೆ. ಎರಡೂ ಕಡೆ ಒಂದೇ ಧೋರಣೆ ಉಂಟು.

## ಹಂ, ಕ್ಷಂ ಗಳ ವಿಶೇಷ ವಿಚಾರ

ಇವು ಮಹಾಲಿಂಗದ ಆಜ್ಞಾಚಕ್ರದ ಎರಡು ದಳಪ್ರಣವಗಳು. ದೇಹದಲ್ಲಿ ಆಜ್ಞಾ ಚಕ್ರವು ಭ್ರೂಮಧ್ಯದೊಳಗೆ ಅದೆ. ಭ್ರೂಮಧ್ಯಕ್ಕೆ ಹೊಂದಿರುವ ಎರಡು ಕಣ್ಣುಗಳೇ ದೇಹದಲ್ಲಿರುವ ಹೊರಗಣ ದಳಗಳು. ಬಲಗಣ್ಣು 'ಹಂ' ಅದು ಸೂರ್ಯನೇತ್ರ ಎಡಗಣ್ಣು 'ಕ್ಷಂ' ಅದು ಚಂದ್ರನೇತ್ರ. ಇದೇ ಮಾತನ್ನು ಶ್ರೀ ಶಂಕರಾಚಾರ್ಯರು ಅನ್ನಪೂರ್ಣಾಷ್ಟಕದಲ್ಲಿ

"ಚಂದ್ರಾರ್ಕ ವರ್ಣೇಶ್ವರೀ" ಎಂದು ಆಕೆಯನ್ನು ಸ್ತುತಿಸಿರುವರು ಸೂರ್ಯ ಚಂದ್ರವರ್ಣಗಳ ಅಕ್ಷರಗಳ ಸ್ವಾಮಿನಿ ಎಂದು ಆಕೆಯನ್ನು ಕೊಂಡಾಡಿರುವರು.

ಬಲಗಣ್ಣಿನಲ್ಲಿ ಸೂರ್ಯ ಅಂದರೆ ವಿಸರ್ಗವೆನಿಸುವ ಹ' (ಹಂ), ಇದರಲ್ಲಿ 'ಅ' ಕಾರದಿಂದ 'ಅಃ' ದ ವರೆಗೆ ಇರುವ ಎಲ್ಲ ಸ್ವರಗಳು ಬರುವವು. ಇದಲ್ಲದೆ ವ್ಯಂಜನಗಳ ಕಡೆಯ ಹಕಾರವಾದರೂ ಇದರಲ್ಲೇ ಕೂಡಿಕೊಳ್ಳುವದು ಎಡಗಣ್ಣಿನಲ್ಲಿ ಚಂದ್ರ ಅಂದರೆ 'ಕ್ಷಂ', ಇದರಲ್ಲಿ ಕಕಾರದಿಂದ ಸಕಾರದವರೆಗೆ ಇರುವ ಎಲ್ಲ ವ್ಯಂಜನಗಳು ಬರುವವು. ಆದುದರಿಂದ ಈ ಅಸಾಮಾನ್ಯವಾದ ಹಂ, ಕ್ಷಂ ಗಳಲ್ಲಿ ವರ್ಣಮಾಲೆಯ ಅಕ್ಷರಗಳೆಲ್ಲ ಸೇರಿಕೊಂಡಿರುವವು.

ಇನ್ನು ಉಳಿಯಿತು ವರ್ಣಮಾಲೆಯಲ್ಲಿ ಕಲಿಸುವ ಕಟ್ಟಕಡೆಯ ಜ್ಞ (ಜ್ಞಾನ, ಮಹಾಜ್ಞಾನ) ಎಂಬುದು ಅದೇ ಮಹಾಲಿಂಗದ ಚಿತ್‌ಶಕ್ತಿಯೆನಿಸುವ 'ಓಂ' ಕಾರವು ಈ ಓಂಕಾರಕ್ಕೆ ಮಹಾಜ್ಞಾನವೇ ಅಂಗವಾಗಿದೆ. ಆ ಕಾರಣ ಓಂಕಾರವೂ 'ಜ್ಞ' ಕಾರವೂ ಒಂದೇ ಎಂದು ತಿಳಿಯಬೇಕು. ಇಲ್ಲಿ 'ಜ್ಞ' ವನ್ನು ಆಜ್ಞಾ (ಜ್ಞಾನ) ಚಕ್ರವಾಗಿಯೂ 'ಓಂ' ವನ್ನು ಅಲ್ಲಿರುವ ಮಹಾಲಿಂಗವಾಗಿಯೂ ಹೇಳಿರುವರು. ಈ ಚಕ್ರದ ಕರ್ಣಿಕೆಯ ಮಧ್ಯ ಬಿಂದುವೇ ಓಂ (ಮಹಾಲಿಂಗವು)

ಸಾರಾಂಶ — ಕಲಾ ಓಂಕಾರವೇ (ನಿಷ್ಕಲ ಲಿಂಗವೇ) ಮುಂದೆ 'ಹಂ, ಹಾಗೂ "ಕ್ಷಂ" ಆಗುವದು ಅಂದರೆ ಮಹಾಲಿಂಗವು "ಹಂ, ಕ್ಷಂ, ಓಂ" ಆಗಿದ್ದರೆ, ನಿಷ್ಕಲಲಿಂಗವು (ಕಲಾ ಓಂಕಾರವು) 'ಕ್ಷ' ಹಾಗೂ 'ಹಂ' ಆಗಿರುವದು. ಮಹಾಲಿಂಗದಲ್ಲಿ ದಳ ಪ್ರಣವವಾಗಿ ಹಂ ಕ್ಷಂಗಳು ಇದ್ದರೆ ನಿಷ್ಕಲ ಲಿಂಗದಲ್ಲಿ ಹಂ ಕ್ಷಂಗಳು ಹುದುಗಿಕೊಂಡಿರುವವು.

## ನವಲಿಂಗಗಳು

ಆಚಾರಾದಿ ಆರು ಲಿಂಗಗಳೊಡನೆ, ಇಷ್ಟಪ್ರಾಣ ಭಾವಲಿಂಗಗಳು ಇಲ್ಲವೆ ನಿಷ್ಕಲ, ನಿಃಶೂನ್ಯ, ನಿರಂಜನ ಲಿಂಗಗಳು ಕೂಡಿದರೆ, ಅವನ್ನು ನವಲಿಂಗಗಳೆನ್ನುವರು. ಆ ಮೂರು ಈ ಮೂರುಗಳು ಒಂದೇ ಎಂಬುದನ್ನು ಷಡ್‌ಲಿಂಗಗಳನ್ನು ಬರೆಯುವಾಗ ಆರಂಭದಲ್ಲಿಯೇ ತೋರಿಸಿರುತ್ತದೆ. ಬ, ಸ, ವ ಎಂಬ ಪ್ರಣವಗಳೇ ಇಷ್ಟ ಪ್ರಾಣಭಾವ ಲಿಂಗಗಳಾಗಿರುವವು ಮತ್ತು ಅವೇ ಬ, ಸ, ವ ಎಂಬುವುಗಳೇ ಅ, ಉ, ಮ್

ಗಳ ಉತ್ಪತ್ತಿ ಸ್ಥಾನವವಾದುದರಿಂದ ಇವುಗಳಿಂದ ಹುಟ್ಟಿದ ನಿಷ್ಕಲಾದಿ ಶೂನ್ಯ ತ್ರಿಲಿಂಗಗಳೂ ಕೂಡ ಆ ಓಂಕಾರಕ್ಕೆ ಭಿನ್ನವಲ್ಲ.

ಭಕ್ತರು ಬರೇ ಪಂಚಾಕ್ಷರೀ ಮಂತ್ರವನ್ನೇ ಜಪಿಸಬೇಕು ಶೂನ್ಯಮಯವಾದ ಓಂಕಾರವನ್ನು ಜಪಿಸಬಾರದು. ವಿರಕ್ತರು ಮಾತ್ರ ಅವುಗಳ ಅ, ಉ, ಮ್ ಎಂಬ ನಾದ ಬಿಂದು ಕಲೆಗಳನ್ನು ಜಪಿಸಬೇಕು. ಅವರು ಹೇಳಿಕೇಳಿ ಪ್ರಪಂಚ ರಹಿತರು. ಪ್ರಾಪಂಚಿಕರಾದ ಭಕ್ತರಿಗೆ 'ಓಂ' ಕಾರವು ತರವಲ್ಲ; ಎಂದು ಬೋಳೆಯ ಸ್ವಭಾವದವರ ಭಾವನೆ ಇದೆ, ಇದು ಸರಿಯಾಗಿರುವದಿಲ್ಲ.

ಹೀಗಾದರೂ ನನಗೆ ಪಂಚಾಕ್ಷರೀ ಮಂತ್ರ ಬೋಧಿಸಿದ ಗುರುಗಳು ಓಂಕಾರವನ್ನು ಜಪಿಸಬೇಡೆಂದೇ ಹೇಳಿದ್ದರು. ನಾನು ಮುಂದೆ ಶಿವಾನುಭವದ "ಅಲ್ಪಸ್ವಲ್ಪ" ಪರಿಚಯ ಮಾಡಿಕೊಂಡಮೇಲೆ ಪುನಃ ಅದರ ವಿಚಾರ ಮಾಡಿದೆನು. "ನಾವು ವಿರಕ್ತರಾಗದಿದ್ದರೂ ಅಲಿಪ್ತ ಸಂಸಾರಿಗಳು ಸುಜ್ಞಾನ (ಲಿಂಗ) ವನ್ನೇ ಪೂಜಿಸುತ್ತೇವೆ. ಕೊನೆಗೆ ಮಹಾಲಿಂಗದಲ್ಲೇ ಸಮರಸವಾಗುವದಿದೆ. ಓಂಕಾರವನ್ನು ಭಜಿಸದಿದ್ದರೆ ಓಂಕಾರ (ಮಹಾಜ್ಞಾನ) ಸ್ವರೂಪವಾದ ಮಹಾಲಿಂಗದಲ್ಲಿ ಬೆರೆದು ತದ್ರೂಪವಾಗುವದು ಹೇಗೆ?" ಎಂಬ ಆಲೋಚನೆಗೊಳಗಾಗಿ ಪುನಃ ಪುನಃ ಯೋಚಿಸಲು "ಆ ಗುರುಗಳು ಹೇಳಿದುದು ಸರಿಯಾಗುವದಿಲ್ಲ., ಬೋಳೆಯ ಸ್ವಭಾವದ್ದು;" ಎಂದು ನಿಶ್ಚಿತವಾಯಿತು. ನಿಜ! ಆದರೆ "ಮಂತ್ರಮೂಲೋ ಗುರೋರ್ವಾಕ್ಯಂ" ಎಂದಿರುವದರಿಂದ ಅದನ್ನು ಹೇಗೆ ಉಲ್ಲಂಘಿಸ ಬೇಕೆಂಬ ಹೊಸ ಚಿಂತೆ ಉದ್ಭವಿಸಿತು. "ತನ್ನ ತಾನರಿದಡೆ ತನಗೆ ತಾನೇ ಗುರು" ಎಂದು ಹೇಳಿದುದು ನೆನಪಿಗೆ ಬಂತು. ಆಗ ಈ ಗುರುವಿನ ಗುರುವಾದ ಮಹಾಗುರು ಪ್ರೇರಣೆಯಿಂದ ಆ ಮಾತನ್ನು ಮೀರಿ, ಓಂಕಾರದ ಹಾಗೂ ಶೂನ್ಯಲಿಂಗಗಳ ವಿಚಾರಕ್ಕೆ ತೊಡಗಿದೆನು. ಈಗ ಅದರಲ್ಲಿಯೂ ಮುನ್ನಡೆಯು ಸಾಗಿದೆ. ಅದರಿಂದೇನೂ ನನ್ನ ಪ್ರಪಂಚಕ್ಕೆ ಸ್ವಲ್ಪವೂ ಕುಂದು ಕೊರತೆ ಬಂದಿಲ್ಲ. ತಿರುಗಿ ಎಲ್ಲರೀತಿಯಿಂದಲೂ ಒಳಿತಾಗಿಯೇ ಉಜ್ವಲತೆಯುಂಟಾಗಿದೆ. ಆದ್ದರಿಂದ ಭಕ್ತಜನರೆಲ್ಲರು ನಿಃಶಂಕೆಯಿಂದ ನವಲಿಂಗ ಜಪವನ್ನು ಕೂಡ ಮಾಡಬೇಕಾಗಿ ಬಿನ್ನವಿಸುವೆನು. ಜಪಗಳ ಲೇಖವನ್ನು ಮುಂದಿನ ಸಾರೆ ಬರೆಯಲಾಗುವದು.

———

## ಲಿಂಗಗಳ ಪತ್ರಿಕೆ--- ಮೇಲಿನ ಲೇಖನದ ಸಾರಾಂಶರೂಪ

| ಸಂಖ್ಯೆ | ವಿವರ | ಸೂರ್ಯ ಮಂಡಲ ಲಿಂಗಗಳು | | | | | |
|---|---|---|---|---|---|---|---|
| | | ತ್ರಿಲಿಂಗಗಳು ಮತ್ತು ಷಡ್ಲಿಂಗಗಳು ವಿಶೇಷ (ಶರಾ) | | | | | |
| ೧ | ಅಂಗಗಳು | ತ್ಯಾಗಾಂಗ | | ಭೋಗಾಂಗ | | ಯೋಗಾಂಗ | |
| ೨ | ಪ್ರಣವಗಳು | (ಬಸವ) -ಬ | | ಸ | | ವ | |
| ೩ | ಲಿಂಗಗಳು | ಇಷ್ಟಲಿಂಗ | | ಪ್ರಾಣಲಿಂಗ | | ಭಾವಲಿಂಗ | |
| ೪ | ಶೂನ್ಯಸ್ಥಿತಿ | ನಾದ (ನಾಮ) (ಓಂ) -ಅ | | ಬಿಂದು (ಆಕಾಶ) ಉ | | ಕಲೆ (ಗ.ಣ) ಮ್ | |
| ೫ | ಷಡ್ಲಿಂಗಪ್ರಣವ | ನ | ಮಃ | ಶಿ | ವಾ | ಯ | ಓಂ |
| ೬ | ಷಡ್ಲಿಂಗಗಳು | ಆಚಾರಲಿಂಗ | ಗುರುಲಿಂಗ | ಶಿವಲಿಂಗ | ಚರಲಿಂಗ | ಪ್ರಸಾದಲಿಂಗ | ಮಹಾಲಿಂಗ |
| ೭ | ದಳಪ್ರಣವ | ವಾದಸಾಂತ (ವ—ಸ) | ಬಾದಿಲಾಂತ (ಬ—ಲ) | ಡಾದಿಫಾಂತ (ಡ—ಫ) | ಕಾದಿಠಾಂತ (ಕ—ಠ) | ಅ—ಅಃ | ಹ. ಕ್ಷ. |
| ೮ | ದಳಪ್ರಣವ ಸಂಖ್ಯೆ | ೪ | ೬ | ೧೦ | ೧೨ | ೧೬ | ೨ |

೧ (ಅ) ತಾಪದಾಯಕ ವಿಷಯಗಳಲ್ಲಿ ಅಲಿಪ್ತತೆಯಿಂದಿರುವದು ಪ್ರಯಾಸಕರವಲ್ಲ.

(ಬ) ಲಿಂಗಗಳ ಶಕ್ತಿಗಳನ್ನು ಕೊನೆಗೆ ಕಲೆಗಳಲ್ಲಿ ರೂಪಾಂತರಿಸುವದು ಮಹಾಕಷ್ಟವು.

(ಆ ಕಾರಣ ಲಿಂಗಗಳು ಸೂರ್ಯ ಮಂಡಲದವು)

೨ ಮಹಾಲಿಂಗದ ಕೊನೆಗೆ ಇಲ್ಲಿ ಅಗ್ನಿಮಂಡಲವು ಅಲ್ಲಿಯೇ ಚಿದಂಬರವು. ಎಲ್ಲವೂ ಚಿತ್‌ಸ್ವರೂಪ ಹೊಂದುವದು. ಈ ಚಿತ್ತು ಸದ್ರೂಪವೂ ಆನಂದ ರೂಪವೂ ಇರುವದು. ಇಂತಹ ಚಿತ್ತು (ಮಹಾಜ್ಞಾನವು) ಕೊನೆಗೆ ಶೂನ್ಯವಾಗುವದು. ಅಂದರೆ ಸತ್—ಚಿತ್-ಆನಂದ (ಸಚ್ಚಿದಾನಂದ) ಸ್ವರೂಪಗಳು ಕಟ್ಟಕಡೆಗೆ ಅನಾದಿಲಿಂಗ ಇಲ್ಲವೆ ಸ್ವಸ್ಥಲಿಂಗದಲ್ಲಿ ಅಥವಾ ಸ್ಥಳದಲ್ಲಿ ಬೆರೆದು ಒಂದೇ ಒಂದಾಗುವವು.

ಮೊದಲಿನವು ಸಚ್ಚಿದಾನಂದವಾಗಿ ಸ್ವಸ್ಥ ಅಂಗದಲ್ಲಿ ಕೂಡುವವು. ಇವೂ ಸ್ಥಳದಲ್ಲಿಯೇ ಬೆರೆಯುವವು.

ವಿರಕ್ತರನ್ನು ಸ್ಥಳಗೊಳಿಸುವ ಸಂಸ್ಕಾರವೆಂದರೆ ಇದೇ;



ಶ್ರೀ

| ಕ್ರಮಸಂಖ್ಯೆ | ವಿವರ | ಚಂದ್ರ ಮಂಡಲ ಲಿಂಗಗಳು<br>ಶೂನ್ಯ ತ್ರಿಲಿಂಗಗಳು | | | ಶರಾ |
|---|---|---|---|---|---|
| ೧ | ಅಂಗಗಳು | ಸ್ಥೂಲಾಂಗ | ಸೂಕ್ಷ್ಮಾಂಗ | ಕಾರಣಾಂಗ | |
| ೨ | ಪ್ರಣವಗಳು | ಅ | ಉ | ಓಂ | |
| ೩ | ಲಿಂಗಗಳು | ನಿಷ್ಕಲಲಿಂಗ | ನಿಃಶೂನ್ಯಲಿಂಗ | ನಿರಂಜನಲಿಂಗ | |
| ೪ | ಶೂನ್ಯಸ್ಥಿತಿ | ಚಿನ್ನಾದ | ಚಿದ್ಬಿಂದು | ಚಿತ್ಕಲೆ | |
| ೫ | ಪರ್ಯಾಯ ಲಿಂಗಗಳು | ಕಲಾಲಿಂಗ | ಬಿಂದುಲಿಂಗ | ನಾದಲಿಂಗ | |

೧ (ಅ) ಷಡ್ಲಿಂಗಗಳಲ್ಲಿರುವ ಆಧಾವ ವಸ್ತುಗಳೂ ಇಲ್ಲಿ ಇಲ್ಲ. ಅಂತೆಯೇ ಇವು ಶೂನ್ಯ ಲಿಂಗಗಳು.
(ಬ) ವಿಷಯಗಳಲ್ಲಿರುವ ತಾಪಕಷ್ಟಗಳು ಇವುಗಳಲ್ಲಿಲ್ಲ. ಅಂತೇ ಇವು ಶಾಂತವಾದವುಗಳು.

೨ ನಾದಲಿಂಗದ ಕೊನೆಗೆ ಇಲ್ಲಿ ನಿರ್ವಯಲಮಂಡಲವು ಕಲೆಯು ಬಿಂದುವಿನಲ್ಲಿ ಬಿಂದುವು ನಾದದಲ್ಲಿಯೂ ನಾದವು ಕಡೆಗೆ ಅನಾದಿಲಿಂಗ ಇಲ್ಲವೆ ನಿರಾಲಂಬಲಿಂಗ ಅದರ ಸ್ಥಳದಲ್ಲಿಯೂ ಬೆರೆಯುವದರಿಂದ ಎಲ್ಲವೂ ಅಡಗುವವು. ಅಂತೆಯೇ ಇದು ನಿರ್ವಯಲ ಮಂಡಲವು.

ಎರಡನೆಯವು ಕಲೆ. ಬಿಂದು ನಾದಗಳಾಗಿ ನಿರಾಲಂಬದಲಿಂಗದಲ್ಲಿ ಸೇರಿರುವವು.

ಇವು ಸ್ಥಳದಲ್ಲಿಯೇ ಬೆರೆಯುವವು.

ಇದನ್ನು ಪಡೆಯದಿದ್ದರೆ ಅವರು ಮಾಡಿದುದು ವ್ಯರ್ಥ

---

# ಚಕ್ರಗತದಳ ಪ್ರಣವಗಳ ವಿವರ.

| ಕ್ರಮಸಂಖ್ಯೆ | ಚಕ್ರಗಳೂ ಅವುಗಳ ವರ್ಣವೂ | ದಳಗಳ ಸಂಖ್ಯೆ | ದಳಗಳ ಪ್ರಣವಗಳು | ಲಿಂಗಗಳು. | ಪ್ರಣವಗಳಲ್ಲಿರುವ ಅಧಿದೈವ (ರುದ್ರ) | ಅಲ್ಲಿರುವ ಶಕ್ತಿಗಳು | [illegible] |
|---|---|---|---|---|---|---|---|
| ೧ | ೨ | ೩ | ೪ | ೫ | ೬ | ೭ | ೮ |
| ೧ | ಆಧಾರಚಕ್ರ (ಪೀತ) | ೪ | ವ | ನ (ಆಚಾರಲಿಂಗ) | ಪಿನಾಶಕೇಶನೆಂಬ ರುದ್ರ | ವಾರುಣಿ ಎಂಬ ಶಕ್ತಿ | |
| ೨ | | | ಶ | | ಖಡ್ಗೇಶ ,, | ವಾಯುವಿ ,, | |
| ೩ | | | ಷ | | ಅಂಬುಕೇಶ ,, | ರಕ್ಷೋಧಾರುಣಿ ,, | |
| ೪ | | | ಸ | | ಶ್ವೇತಾಂಬುಕೇಶ ರುದ್ರ | ಸಹ ಜೀವಿ ,, | |
| ೫ | | | ಬ | | ಶಿಖಿ ,, | ವಾಗ್ಮಿ ,, | |
| ೬ | | | ಭ | | ಸಕಲಾಂಡ ,, | ಜಲಜಿ ,, | |

| | | | | | | |
|---|---|---|---|---|---|---|
| ೭ | ಸ್ವಾಧಿಷ್ಠಾನ(ನೀಲಿ) | ೬ | ಮ | ಮ: (ಗುರುಲಿಂಗ) | ದ್ವಿಲಾಂಡ ರುದ್ರ | ಸುಷುಮಿ ಎಂಬ ಶಕ್ತಿ |
| ೮ | | | ಯ | | ಮಹಾಕಾಲ ,, | ಈಶ್ವರಿ ,, |
| ೯ | | | ರ | | ಪಾರಿ ,, | ರೇವತಿ |
| ೧೦ | | | ಲ | | ಜಂಬುಕೇಶ್ವರ ,, | ಮಘುವಿ ,, |
| ೧೧ | | | ಡ | | ದಾರುಕ ,, | ವಿರಜಿ ,, |
| ೧೨ | | | ಢ | | ಅರ್ಧನಾರೀಶ್ವರ ರುದ್ರ | ಕಾಲೋದರಿ ,, |
| ೧೩ | | | ಣ | | ಉಮಾಕಾಂತ ರುದ್ರ | ಪೋತನಿ ,, |
| ೧೪ | | | ತ | | ಶಿಖಂಡಿ ,, | ಭದ್ರಕಾಳಿ ,, |
| ೧೫ | | | ಥ | | ದಂಡಿ ,, | ಯೋಗಿನಿ ,, |
| | ಮಣಿಪೂರಕ (ಕುಂಕುಮ) | ೧೦ | | ಶಿ (ಶಿವಲಿಂಗ) | | |

| | | | | | | | | |
|---|---|---|---|---|---|---|---|---|
| ೧೬ | | | ದ | | ಪ್ರಸ್ಫುರ | ರುದ್ರ | ಶಂಖಿನಿ ಎಂಬ | ಶಕ್ತಿ |
| ೧೭ | | | ಧ | | ಅಕ್ರಿಯ | ,, | ಗರ್ಜಿನಿ | " |
| ೧೮ | | | ನ | | ಮೀನಕೇಶ | ,, | ಕಾಳರಾತ್ರಿ | " |
| ೧೯ | | | ಪ | | ಉಮೇಶ | ,, | ಕೂರ್ಧಿನಿ | " |
| ೨೦ | | | ಫ | | ರೋಹಿತ | ,, | ಕಪರ್ದಿನಿ | " |
| ೨೧ | | | ಕ | | ಕ್ರೋಧೇಶ | ,, | ಮಹಾಕಾಳಿ | " |
| ೨೨ | | | ಖ | | ಚಂಡೇಶ | ,, | ಸರಸ್ವತಿ | " |
| ೨೩ | | | ಗ | | ಪಂಚಾತ್ಮಕ | " | ಗೌರಿ | " |
| ೨೪ | | | ಘ | | ಶಿವೋತ್ತಮ | ,, | ಮಂತ್ರವಿ | " |
| ೨೫ | | | ಙ | | ಏಕರುದ್ರ | ,, | ಆತ್ಮಶಕ್ತಿ | " |
| ೨೬ | | | ಚ | | ಕೂರ್ಮವಧ | ,, | ಭೂತಮಾತೆ | " |

| | | | | | | |
|---|---|---|---|---|---|---|
| ೧೭ | ಅನಾಹತಚಕ್ರ (ಹರಿತ) | ೧೨ | ಛ | ಜಾ (ಜಂಗಮಲಿಂಗ) | ಏಕನೇತ್ರ ರುದ್ರ | ಅಂಭೋಧಂ ಎಂಬ ಶಕ್ತಿ |
| ೧೮ | | | ಜ | | ಚತುರಾನನ ,, | ಡತ್ರಿವಿಣಿ ,, |
| ೧೯ | | | ಝ | | ಅಚಲೇಶ ,, | ನಗರಿ ,, |
| ೨೦ | | | ಞ | | ಸರ್ವೇಶ ,, | ಖೇಚರಿ ,, |
| ೨೧ | | | ಟ | | ಸೋಮೇಶ ,, | ಮಂಜರಿ |
| ೨೨ | | | ಠ | | ಅಂಗುಲಿ ,, | ರೂಪಿಣಿ ,, |
| ೨೩ | | | ಅ | | ಶ್ರೀಕಂಠ ,, | ಪೂರ್ಣೋದರಿ ,, |
| ೨೪ | | | ಆ | | ಅನಂತಸೂಕ್ಷ್ಮ ,, | ವಿರಜೆ ,, |
| ೨೫ | | | ಇ | | ತ್ರಿಮೂರ್ತಿ | ಜ್ವಾಲ್ಮಲಿ ,, |
| ೨೬ | | | ಈ | | ಅಮರೇಶ ,, | ಲೋಲಾಕ್ಷಿ |

| | | | | | | | | |
|---|---|---|---|---|---|---|---|---|
| | ಅನಾಹತಚಕ್ರ (ಹರಿತ) | ೧೨ | | ವಾ (ಜಂಗಮಲಿಂಗ) | | | | |
| ೩೭ | | | ಉ | | ಸದ್ಯೋಜಾತ | | ವರ್ತುಲಾಕ್ಷಿ | ,, |
| ೩೮ | | | ಊ | | ಅನುಗ್ರಹೇಶ್ವರ | , | ಶೀಘನನಾಶಿಕೆ | ,, |
| ೩೯ | | | ಋ | | ಅಕ್ರೂರ | ,, | ದೀರ್ಘಮುಖಿ | |
| ೪೦ | | | ೠ | | ಮಹಾಸೇನ | ,, | ಗೋಮುಖಿ | |
| | ವಿಶುದ್ಧಿ (ಸ್ಫಟಿಕ) | ೧೬ | | ಯ (ಪ್ರಸಾದಲಿಂದ) | | | | |
| ೪೧ | | | ಌ | | ನೈರುತ | ,, | ದೀರ್ಘಜಿಹ್ವೆ | ,, |
| ೪೨ | | | ೡ | | ವಾರಣ | ,, | ಕುಂಡೋದರಿ | ,, |
| ೪೩ | | | ಏ | | ಕ್ರೂರ | ,, | ಊರ್ಧ್ವಕೇಶಿ | ,, |
| ೪೪ | | | ಐ | | ದೃಷ್ಟಿ | ,, | ವಿಕೃತಮುಖಿ | ,, |
| ೪೫ | | | ಓ | | ಭಯಾನಕ | ,, | ಜ್ವಾಲಾಮುಖಿ | ,, |
| ೪೬ | | | ಔ | | ಊರ್ಧ್ವಕೇಶ | ,, | ಉಲ್ಕಾಮುಖಿ | ,, |

| | | | | | | | | |
|---|---|---|---|---|---|---|---|---|
| ೪೭ | | | ಅಂ | | ವಿರೂಪಾಕ್ಷ | ,, | ಶ್ರೀಮುಖಿ | ,, |
| ೪೮ | | | ಆಃ | | ಧೂಮ್ರಕೇಶ | ,, | ವಿದ್ಯಾಮುಖಿ | ,, |
| ೪೯ | | | ಹಂ | | ಶಿವ | ,, | ಮಾಯಾ | ,, |
| | ಆಜ್ಞಾ (ಮಾಣಿಕ್ಯ) | ೨ | | ಓಂ (ಮಹಾಲಿಂಗ) | | | | |
| ೫೦ | | | ಕ್ಷಂ | | ಸಂವರ್ತಕ | ,, | ಅನ್ನಿತೆ | ,, |

# ಬಸವಣ್ಣನವರ ಆರ್ಥಿಕ ನೀತಿ

—೦( ಮ. ಮಲ್ಲಪ್ಪ. ಜ್ಞಾನಮಂದಿರ. ಹಲಗೂರು. )೦—



ನಾಡಿನ ಉನ್ನತ್ಯಾವನತಿಯು ನಾಡಿನ ಆರ್ಥಿಕ ನೀತಿಯನ್ನು ಅವಲಂಬಿಸಿರುತ್ತದೆ. ನಾಡಿನ ಉದ್ಯೋಗ ಬೇಸಾಯಗಳ ಮೇಲೆ ಆರ್ಥಿಕ ಸಮಸ್ಯೆಯು ನಿಂತಿರುತ್ತದೆ. ಯಾವ ನಾಡು ಬೇಸಾಯದಲ್ಲಿ ಅಭಿವೃದ್ಧಿ ಪಡೆದು, ಸಿರಿಸಂಪತ್ತುಗಳು ನೆಲೆಯಾಗಿ ನೆಲೆಸಿ, ಆರ್ಥಿಕ ನೀತಿಯು ನೆಲೆಗಟ್ಟು ಸುಭದ್ರವಾಗಿ ಆರ್ಥಿಕನೀತಿಯು ಪರರಾಷ್ಟ್ರದವರನ್ನು ತನ್ನಕಡೆಗೆ ಸೆಳೆದು ಕೊಳ್ಳುತ್ತದೆ. ಇದು ಪ್ರಜಾಪ್ರಭುತ್ವ ಯುಗವು ಪ್ರಜಾಸರ್ಕಾರದಲ್ಲಿ ಪ್ರಜೆಗಳು ಬಲಗಟ್ಟಿನಿಂದ ಬಾಳಿದರೆ ಸರ್ಕಾರವು ಸಡಿಲವಿಲ್ಲದೆ ಸರಾಗದಿಂದ ಸಾಗುವುದು. ಪ್ರತಿಯೊಬ್ಬ ಪ್ರಜೆಯೂ ಶಾಂತಿಪ್ರಿಯನಾಗಿ ಜೀವಿಸಿದರೆ ಇಡೀ ರಾಷ್ಟ್ರದಲ್ಲಿ ಹಂಚಿಕೆಗಳು ಸರಿಸಮಾನವಾಗಿ ಸಾಗಬೇಕು. ಇಂದಿನ ಸಂಯುಕ್ತರಾಷ್ಟ್ರ ಸಂಘದ ಆರ್ಥಿಕ ಮಿತಿಯು ಹದಗೆಟ್ಟಿರಬೇಕಾದರೆ ಶಾಂತಿಯು ತಿಣ್ಣಗಾಗಿಯೇ ಇದ್ದಿರಲೇಬೇಕು. ಶ್ರೀ ಸಾಧು ಟಿ. ಎಲ್. ವಾಸ್ವಾನಿಯವರು ಹೇಳುವುದು ಪಾಶ್ಚಿಮಾತ್ಯ ಅರ್ಥಶಾಸ್ತ್ರವು ಅನೈತಿಕವಾದ ಕಾರಣದಿಂದಲೇ ಬಕಾಸುರನಂತಿದೆ-ನಿಜವಿದ್ದಿರಲಾರದು ಎಂಬುದು ಗೊತ್ತಾಗಲಿ. ಇಷ್ಟೇ ಅಲ್ಲದೆ ಗಾಂಧಿಜೀಯವರೂ ಕೂಡ ಪಾಶ್ಚಿಮಾತ್ಯ ಅರ್ಥಶಾಸ್ತ್ರವು ಸರ್ವೋನ್ನತ ವಿಚಾರಬಿಂದುಗಳಿಂದ ರಚಿಸಲ್ಪಟ್ಟಿರುವುದಿಲ್ಲ. ಕಾರಣ ಅದು ಅರ್ಥಶಾಸ್ತ್ರವು ಸರ್ವೋನ್ನತ ಶಾಸ್ತ್ರವಾಗದೆ ಅನರ್ಥ ಶಾಸ್ತ್ರವಾಗಿರುವುದು. ಎಂದು ಹೇಳಿರುವುದು ಮನುಜರ ಮನಕ್ಕೆ ಬರಲಿ.

ಹನ್ನೆರಡನೆ ಶತಮಾನದಲ್ಲಿ ಕಲಚೂರ್ಯ ಚಕ್ರಾಧಿಪತ್ಯದ ಪ್ರಧಾನಿ ಬಸವಣ್ಣನವರು ಆರ್ಥಿಕ ನೀತಿಯ ಬಲಗಟ್ಟಿನಿಂದ ದೊರೆಗಳು ರಾಜ್ಯಸೂತ್ರವನ್ನು ಹಿಡಿಯುವಂತೆ ಮಾಡಿದರು. ಜನಜೀವನವು ಕಲ್ಯಾಣಕರವಾಗಿ, ಉಚ್ಚ ನೀಚ ಹಾಗೂ ಜಾತೀಯ ಭಾವನೆಗಳನ್ನು ಬಿಟ್ಟು ಸಕಲ ಕೆಲಸಗಳನ್ನು ಮಾಡುತ್ತಿದ್ದ ಕಾರಣ ಅವು ಆತ್ಮೋನ್ನತಿಯ ಸಾಧನ

ಗಳಾದವು. ಪ್ರತಿಯೊಬ್ಬ ಪೌರನೂ ತನ್ನ ಶಕ್ತಿಯ ಸದುಪಯೋಗ ಮಾಡಿ ನೀತಿಯಿಂದ ನಡೆಯಲು ಅವಕಾಶವಾಯಿತು. ಸರಿಸಮಾನತೆ, ಬಂಧುತ್ವವು ಬೆಳೆದು ಬಂಧುರ ಬಗೆಯು ಬೆರೆಯಿತು. ಉದ್ಯೋಗಗಳ ವೃದ್ಧಿಯಾಗಿ ಸಮಾಜದಲ್ಲಿ ಸಂಪತ್ತು ಕೇಂದ್ರೀಕೃತವಾಗದೆ ಸರ್ವ ಸಮನಾಗಿ ಹಂಚಲ್ಪಟ್ಟಿತು. ವೈಯಕ್ತಿಕ ಹಿತ ಹಾಗೂ ಸಾಮಾಜಿಕ ಕಲ್ಯಾಣವು ಒಂದೇ ವೇಳೆಯಲ್ಲಿಯೇ ಸಾಧ್ಯವಾಯಿತು. ಕಾಯಕ ಕೈಕೊಂಡವರಿಗೆ ಮಾತ್ರ ಅನುಭವ ಮಂಟಪದಲ್ಲಿ ಪ್ರವೇಶವಿತ್ತು. ಬಸವಣ್ಣನವರ ಸಮಾಜ ರಚನೆಯು ಜಾತ್ಯಾತೀತ ಸರ್ವೋದಯ ಸಮಾಜದ ಉಗಮ ಸ್ಥಾನವು. ಭಾರತದ ಬಾಪೂಜಿಯವರ ಗ್ರಾಮೋದ್ಯೋಗದ ತಳಹದಿಯ ಮೇಲೆ ಬಸವಣ್ಣನವರ ಕಾಯಕ ತತ್ವವು ಕಂಗೊಳಿಸುವುದು.

ನಾಡಿನ ಸಿರಿ ಸಂಪತ್ತು ಅಭಿವೃದ್ಧಿಯಾಗಿ ಜನರು ಸುಖಶಾಂತಿಗಳಿಂದಿರಬೇಕಾದರೆ ಕಾಯಕವೇ ಶ್ರೇಷ್ಠವೆಂದೂ, ಅದಕ್ಕಾಗಿ ಸಮಾಜವು ಉತ್ಸಾಹ ಹುರುಪುಗಳಿಂದ ಅದರಲ್ಲಿ ನಿರತರಾದರೆ ಸ್ವರ್ಗಸುಖವು. ಅಂಗೈಯಲ್ಲಿರುವ ನೆಲ್ಲಿಕಾಯಿಯು ಅಂತೆ ! Work is worship ಎಂದು ಕಾರ್ಲೈಲನು ಹೇಳಿದಂತೆಯೇ ಬಸವಣ್ಣನವರೂ 'ಕಾಯಕವೇ ಕೈಲಾಸ' ಎಂದರು. ಇವರ ಅನುಯಾಯಿಗಳ ವಾಣಿಯು ವೇದಿಸಿತು. "ಮನಶುದ್ಧವಿಲ್ಲದವಂಗೆ ದ್ರವ್ಯದ ಬಡತನವಲ್ಲದೆ ಚಿತ್ತ ಶುದ್ಧನಾಗಿ ಕಾಯಕ ಮಾಡುವಲ್ಲಿ ಸದ್ಭಕ್ತಂಗೆ ಎತ್ತ ನೋಡಿದತ್ತ ಲಕ್ಷ್ಮಿ ತಾನಾಗಿಪ್ಪಳು, ಮಾರಯ್ಯಪ್ರಿಯ ಅಮರೇಶ್ವರ ಲಿಂಗದ ಸೇವೆಯುಳ್ಳನ್ನಕ್ಕರ " ಕಾಯಕವನ್ನು ಕೈಕೊಳ್ಳುವುದೇ ಮಾನವೀಯತೆ ಎಂಬುದನ್ನು ಅನುಷ್ಠಾನದಲ್ಲಿ ಬಸವಣ್ಣನವರು ತಂದಕಾರಣವೇ ವೀರಶೈವ ಸಮಾಜದಲ್ಲಿ ಸಕಲ ಕಾಯಕಗಳೂ ಒಂದೇ ಸ್ಥಾನಮಾನ ಬಂದಿತು. ಮನುಸ್ಮೃತಿಯ ಭಯಂಕರ ಹಾವಳಿಯು ಬಸವಣ್ಣನವರಿಗಿಂತ ಹಿಂದೆ ಜನತೆಯನ್ನು ತಿಂದಿತು. ಮನುಸ್ಮೃತಿಯ ಭಯಂಕರ ಆರ್ಥಿಕ ನೀತಿಯು ಹರಿಗೆಟ್ಟಿತ್ತು. ಚರ್ಮದ ಉದ್ಯೋಗ ಅಗಸತನ, ಹಜಾಮತನ, ಗ್ರಾಮಶುದ್ಧತೆ, ಗಾಣಿಗತನ ಮುಂತಾದವು ಕೀಳೆಂದು ಅಭಿಪ್ರಾಯವನ್ನು ಉತ್ತಮವರ್ಗವು ಸಮಾಜಕ್ಕೆ ಕೊಟ್ಟಿತು. ಇದು ಕಾರಣ ಉದ್ಯೋಗಗಳ ಬೆಳವಣಿಗೆಯು ಕುಂಟಾಗುವಂತಾಯಿತು. ಉದ್ಯೋಗಾವಲಂಬನದಿಂದ ಮೇಲು ಕೀಳು, ಹೆಚ್ಚು ಕಡಿಮೆ ಎಂಬ ಭೇದವು ಜನಾಂಗದಲ್ಲಿ ಮೂಡುವಂತಾಯಿತು.

ಇಂದಿನ ಸಮಾಜದ ಪರಿಸ್ಥಿತಿಯು ಹರಿದು ಹಂಚಲಾಗಿ ಹೋಗಿದೆ ಎಂದರೆ ತಪ್ಪೇನಾಗಲಾರದು. ನಮ್ಮ ನಮ್ಮಲ್ಲಿ ಶ್ರೇಷ್ಠ ಕನಿಷ್ಠಗಳು ತಾಂಡವ ವಾಡುತ್ತಾ, ಪರಕೀಯರಿಗೆ ಉದ್ಯೋಗ ಸಂಪತ್ತು ಹೆಚ್ಚುತ್ತಾ ಧನಿಕರೂ ಮತ್ತು ಬಂಡವಾಳಗಳೂ ಸ್ವಾರ್ಥ ಸಾಧಿಸುತ್ತಾ ಸಮಾಜದ ವಿನಾಶಕ್ಕೆ ಕಾರಣವಾಗುತ್ತಿದ್ದಾರೆ. ಆರ್ಥಿಕ ವಿಷಮತೆಯೇ ಪ್ರಪಂಚದ ಆಂದೋಳನಕ್ಕೆ ಕಾರಣವಾಗಿರುತ್ತದೆ. Black market ವ್ಯಾಪಾರದಿಂದ ತಮ್ಮ ಬೊಜ್ಜು ಬೆಳೆಯಿಸಿ, ಎಲ್ಲೆಕ್ಷನ ಸಂಘ ಸಂಸ್ಥೆಗಳ ಮಾರ್ಗಗಳಲ್ಲಿ ಕೈಹಾಕಿ, ಶಿಕ್ಷಣ ಗಂಧದ ನವಿರೂ ಇಲ್ಲದ ಸಿರಿವಂತ ಸ್ವಾರ್ಥಿಗಳ ಸಡಗರ ಸಂಭ್ರಮವನ್ನು ಹೇಳತೀರದು! ಕಾಯಕದ ಮಹತ್ವವನ್ನು ತಿಳಿಯದೆ ಹಿಂದಿನವರು ಸಂಪಾದಿಸಿದ ಹಣದಿಂದಲೇ ತಮ್ಮ ವಹಿವಾಟನ್ನು ನಡೆಯಿಸಿಕೊಂಡು ಸಮಾಜ ಬಾಂಧವರನ್ನು ಅಡಿಗೆ ಅದುಮುತ್ತಿದ್ದಾರೆ. ಹಣಗಾರರು ಹಾಗೂ ಇತರ ಮನುಜರ ಸಂಬಂಧವನ್ನು ಬೆಕ್ಕು ಇಲಿಗಳಂತೆಯೂ, ಪರಸ್ಪರ ಮೋಸಗೊಳಿಸಲು ಹೆಣಗಾಡುತ್ತಿರುವ ವೈರಿಗಳಂತೆಯೂ ಇದ್ದಾರೆ ಎಂಬುದನ್ನು ಒಮ್ಮೆ ಗಾಂಧೀಜಿಯವರು ತಿಳಿಸಿದ್ದಾರೆ. ಬಣ್ಣಗಟ್ಟಿದ ಬಸವಣ್ಣನವರ ತತ್ವವೇ ಮಹಾತ್ಮ ಗಾಂಧೀಜಿಯವರ ತತ್ವವಾಗಿದೆ. ಬಸವಣ್ಣನವರು ತಮ್ಮ ಆರ್ಥಿಕ ನೀತಿಯಿಂದ ನೈತಿಕ ಔದ್ಯೋಗಿಕ ಅವನತಿಗಳನ್ನು ಅಳಿಸಿದುದಲ್ಲದೆ ಉದ್ಯೋಗಗಳನ್ನು ಅವಲಂಬಿಸಿದಲ್ಲಿ ಯಾವ ಹೆಚ್ಚು ಕಡಿಮೆ ಇಲ್ಲವೆಂಬುದನ್ನು ಪ್ರತ್ಯಕ್ಷ ಗೊಳಿಸಿದರು. ಉದ್ಯೋಗಗಳನ್ನು ಅವಲಂಬಿಸಿದ ಜನರೇ ಶ್ರೇಷ್ಠರು. ಸೋಮಾರಿಗಳೂ ಪರತಂತ್ರ ಜೀವಿಗಳೂ ಶ್ರೇಷ್ಠರಲ್ಲ. ಸ್ವಾವಲಂಬಿಗಳು ಮಾತ್ರ ದೊಡ್ಡವರ. ಸಮಾಜದಲ್ಲಿ ಹಣಕ್ಕಿಂತ ಸತ್ಯ, ದುಡಿತ, ಸಮಾನತೆ, ಬಂಧು ಪ್ರೇಮಾದಿ ಸದ್ಗುಣಗಳು ಉತ್ತಮ ಭಗವದ್ಭಕ್ತನು ಮನೆಗೆ ಬಂದರೆ ಆತನ ಉದ್ಯೋಗವನ್ನು ಕೇಳಿ ಆನಂತರ ಮರ್ಯಾದೆ ಮಾಡುವಂತಿಲ್ಲ. ಉದ್ಯೋಗವನ್ನು ಕೇಳಿ ಮಣಿಹಾಕುವಂತಿಲ್ಲ. ಸಕಲ ಕಾಯಕಗಳೂ ಪವಿತ್ರವಾಗಿವೆ. ಬೇಸಾಯ ಮಾಡಿದರೇನು? ಶರೀರ ಶ್ರಮದಿಂದ ದುಡಿದು ಕೆಲಸ ಮಾಡಿದರೆ ಸಾಕು ಅವರೇ ಸದ್ಭಕ್ತರು. ಅವರ ಸಂದರ್ಶನಕ್ಕಾಗಿ ಬಸವಣ್ಣನವರು ಹಾತೊರೆಯುತ್ತಾರೆ. ಬಸವಣ್ಣನವರು ಉದ್ಯೋಗ ಸ್ವಾತಂತ್ರ್ಯವನ್ನು ಎಂದೋ ಕೊಟ್ಟಿದ್ದಾರೆ. ಒಕ್ಕಲುತನದ ಮುದ್ದಯ್ಯ, ದನಗಾಹಿ ರಾಮಣ್ಣ, ಕಟ್ಟಿಗೆ ಕಾಯಕದ ಮೋಳಿಗೆ ಮಾರಯ್ಯ, ಬುಟ್ಟಿಯನ್ನು

ಹೆಣೆಯುತ್ತಿದ್ದ ಕೇತಯ್ಯ, ಹೊಲಿಗೆಯ ರಾಮಿತಂದೆ, ಚಮ್ಮಾರಿಕನದ ಹರಳಯ್ಯ, ಹಗ್ಗವನ್ನು ತಯಾರಿಸುತ್ತಿದ್ದ ಚಂದಯ್ಯ, ವೈದ್ಯವೃತ್ತಿಯ ಸಂಗಣ್ಣ, ಅಗಸತನದ ಮಡಿವಾಳ ಮಾಚಯ್ಯ, ಕ್ಷವರಿಗನಾದ ಹಡಪದ ಅಪ್ಪಣ್ಣ, ಡೋಹರ ಕೆಲಸದ ಕಕ್ಕಯ್ಯ ಇತ್ಯಾದಿಯವರು ಕಾಯಕವನ ಕೈಗೊಂಡಿದ್ದರು. ಗಂಡಸು ಹೆಂಗಸು ಎನ್ನದೆ ಉದ್ಯೋಗಗಳನ್ನು ಕೈಕೊಂಡಿದ್ದು ಅವರೆಲ್ಲರೂ ಬಸವಣ್ಣನವರಷ್ಟೇ ಗೌರವವನ್ನು ಪಡೆದಿದ್ದರು. ಎಲ್ಲಿ ಉದ್ಯೋಗಸಂಪತ್ತು ನೆಲೆಯಾಗಿರುವದೋ ಅಲ್ಲಿ ಆರ್ಥಿಕ ನೀತಿಯು ಆಧಿಕ್ಯವನ್ನು ಪಡೆಯದೆ ಇರದು!

ಹಲವು ಉದ್ಯೋಗಗಳ, ಅನೇಕ ಮತಗಳ, ಮುಹದ್ವಿಷಯಗಳ ಮಂದಿಯನ್ನು ಸೇರಿಸಿ ಸ್ವಾವಲಂಬಿ ಸಮಾಜವನ್ನು ಬಸವಣ್ಣನವರು ರಚಿಸಿದರು. ಗೋತ್ರವರ್ಣದ ಬಣಬೆಯ ಬೆಳೆಯಿಂದ ಏನುಪ್ರಯೋಜನ? "ವರ್ಣಾಶ್ರಮ ವ್ಯವಸ್ಥೆ" ಎಂದರೆ ಮನಸ್ಸುಬಂದಂತೆ ಮಾಡಿದ ಸಮಾಜ ರಚನೆಯಲ್ಲವು; ಇದರ ತಳಹದಿಯಲ್ಲಿ ಸಿದ್ಧಾಂತಗಳ ಜ್ಞಾನವುಂಟು, ಮನುಜ ಸಮಾಜದ ಉದ್ಧಾರಕ್ಕೆ ಅಗತ್ಯವಿದ್ದ ನಿಯಮಗಳ ಜ್ಞಾನವೂ ಉಂಟು." ಎಂದಿದ್ದಾರೆ ಗಾಂಧೀಜಿಯವರು. ಗಾಂಧಿಯವರು ಕಂಡ ಜಾತ್ಯಾತೀತ ಸರ್ವೋದಯ ಸಮಾಜದ ಉಗಮವನ್ನು ಬಸವಣ್ಣನವರಲ್ಲಿ ಕಾಣಲಾರೆವೇ? ಅವರಿವರ ಕುಲಜಾತಿಗಳನ್ನು ಹುಡುಕಿಹೋಗುವದರಲ್ಲಿ ಯಾವ ಪ್ರಯೋಜನವು ತಾನೇ ಇರುತ್ತದೆ? ಮಾನವ ಕಲ್ಯಾಣಕ್ಕೆ ಸಂಕುಚಿತ ಭಾವನೆಯು ಒಳ್ಳಿತಲ್ಲ.

> ಕೊಲ್ಲುವನೇ ಮಾದಿಗ, ಹೊಲಸತಿಂಬವನೇ ಹೊಲೆಯ! ಕುಲವೇನೋ ಅವಂದಿರ ಕುಲವೇನೋ? ಸಕಲಜೀವಾತ್ಮರುಗಳಿಗೆ ಲೇಸನೆ ಬಯಸುವ ನಮ್ಮ ಕೂಡಲಸಂಗನ ಶರಣರೇ ಕುಲಜರು.

ಜ್ಞಾತಿಯ ಮೇಲು ಕೀಳು ಸಮಾಜದ ಅಭ್ಯುದಯಕ್ಕೆ ಸರಿಹೋಗುವದಿಲ್ಲವಂತೆ? ಮಧುವರಸಯ್ಯನೆಂಬ ಬ್ರಾಹ್ಮಣರ ಮಗಳನ್ನು ಹರಳಯ್ಯನವರೆಂಬ ಮಾದಿಗರ ಮಗನಿಗೆ ಬಸವಣ್ಣನವರು ಮದುವೆ ಮಾಡಿಸಿದರು. ಅನೇಕ ಕುಲಗಳ ಜನರು ಸೌಹಾರ್ದತೆಯಿಂದ ಸೇರಿದಾಗ ಪುನಃ ಆ ಸಮಾಜದಲ್ಲಿ ಮೇಲುಕೀಳನ್ನು ಎಣಿಸುವುದು ಯೋಗ್ಯವೇ? ಎಲ್ಲಿಯಾದರೂ ಸರಿಯೇ! ರಟ್ಟೆಮುರಿದು ದುಡಿಮೆಯಿಂದ ಕೂಲಿಮಾಡಿ ಭಗವಂತನ

ನಿಲವನ್ನು ತಿಳಿಯಲಿಕ್ಕೆ ಹಾತೊರೆಯುತ್ತಿದ್ದರೇ ಹೊರತು ಬಿಜ್ಜಳನ ಭಂಡಾರಕ್ಕಾಗಿ ಬಸವಣ್ಣನವರು ಕಾಯುತ್ತಿರಲಿಲ್ಲ.

ಹೊತ್ತಾರೆ ಎದ್ದು ಕಣ್ಣ ಹೊಸೆಯುತ್ತ ಎನ್ನೊಡಲಿಂಗೆ, ಎನ್ನೊಡಿವೆಗೆ, ಎನ್ನ ಮಡದಿಮಕ್ಕಳಿಗೆಂದು ಕುದಿದೆನಾದರೆ ಎನ್ನ ಮನಕ್ಕೆ ಮನವೇ ಸಾಕ್ಷಿ!

"ಆಸನೇಶಯನೇ ಯಾನೇ। ಸಂಪರ್ಕೇ ಸಹ ಭೋಜನೇ।
ಸಂಚರಂತಿ ಮಹಾಘೋರೇ। ನರಕೇ ಕಾಲಮಕ್ಷಯಂ।
ಎಂಬ ಶ್ರುತಿಯ ಬಸವಣ್ಣ ನೋದುವನು" ಎಂಬರು,

'ಭವಿ ಬಿಜ್ಜಳನ ಗದ್ದುಗೆಯ ಕೆಳಗೆ ಕುಳ್ಳಿರ್ದು ಓಲೈಸಿಹನೆ'ಂದು ನುಡಿವರಯ್ಯಾ ಪ್ರಮಥರು. ಕೊದುವೆನುತ್ತರವನವರಿಗೆ ಕೊಡಲಮ್ಮೆನೆ; ಹೊಲೆಯ ಹೊಲೆಯರ ಮನೆಹೊಕ್ಕು, ಸಲೆ ಕೈಕೂಲಿಯ ಮಾಡಿಯಾದರೆಯೂ, ನಿಮ್ಮನಿಲವಿಂಗೆ ಕುದಿವೆನಲ್ಲದೆ, ಎನ್ನೊಡಲವಸರಕ್ಕೆ ಕುದಿದೆನಾದರೆ ತಲೆದಂಡ। ಕೂಡಲಸಂಗಮದೇವಾ.

ಬಸವಣ್ಣನವರು ಸಕಲ ಉದ್ಯೋಗಗಳಿಗೆ ಬೆಲೆಯನ್ನು ಕೊಟ್ಟ ಕಾರಣ ಸಮಾಜದ ವಿಧಾಯಕ ಸತ್ವವು ಬೆಳೆಯಿತು. ಹೆಚ್ಚಿಗೆ ಹದ್ದು ಮೀರಿದ ಮಹತ್ವವನ್ನು ಹಣಕ್ಕೆ ಸಮಾಜದಲ್ಲಿ ಕೊಡದೆ ಇದ್ದ ಕಾರಣ ಹಣಗಾರರ ಹಮ್ಮು ಅಳಿಯುವಂತಾಯಿತು. ಹಿಂದೂ ಸಮಾಜವನ್ನು ದುರ್ದೆಸೆಗೀಡುಮಾಡಿದ ಮನುವಿನ ವರ್ಣಾಶ್ರಮದಂತೆಯೇ ವೀರಶೈವ ಸಮಾಜದ ದುರ್ದೆಶೆಯನ್ನು ಸ್ವಾಮಿಗಳೂ, ಸಿರಿವಂತರೂ ಇಂದು ಮಾಡುತ್ತ ಕುಳಿತಿರುವರು. ಆದರೆ ಅಂದು ಬಸವಣ್ಣನವರು ಸಮಾಜದಲ್ಲಿನ ಪ್ರತಿಯೊಬ್ಬ ವ್ಯಕ್ತಿಯ ಹೊಟ್ಟೆಬಟ್ಟೆಗಾಗಿ ಸುಖಶಾಂತಿಗೆ ಅನುಕೂಲ ಆರ್ಥಿಕ ಯೋಜನೆಗಳನ್ನು ಕಲ್ಪಿಸದೆ ಇದ್ದಿಲ್ಲ. ಸಕಲ ಉದ್ಯೋಗಾವಲಂಬಿಗಳಿಗೂ ಮಂಗಳವಾಗಬೇಕೆಂಬುದೇ ಬಸವಣ್ಣನವರ ಆರ್ಥಿಕ ನೀತಿಯು. ಬಸವಣ್ಣನವರು ಪ್ರಗತಿಪರ ವಿಶಾಲ ತತ್ವಗಳಿಂದ ಸಮಾಜವನ್ನು ಕಟ್ಟಿದ ಕಾರಣವೇ ಉದ್ಯೋಗಿಗಳ ಸಂಬಂಧದ ಉಚ್ಚನೀಚವನು ಮರೆಮಾಡಿದರು. ಈ ಸುಧಾರಣೆಯನ್ನು ಸಾಗಿಸಲು ಸುಲಭಸಾಧನೆಯ ಅಹಿಂಸಾ ತತ್ವವಾಗಿತ್ತು.

ದಯವಿಲ್ಲದ ಧರ್ಮವದೇವುದಯ್ಯಾ? ದಯವೇ ಬೇಕು ಸಕಲಪ್ರಾಣಿಗಳೆಲ್ಲರಲ್ಲಿಯೂ; ದಯವೇ ಧರ್ಮದ ಮೂಲವಯ್ಯಾ; ಕೂಡಲಸಂಗಯ್ಯನಂತಲ್ಲದೊಲ್ಲನಯ್ಯಾ.

ಧರ್ಮವೃಕ್ಷದ ತಾಯಿ ಬೇರು ದಯೆಯು. ಅಹಿಂಸಾಧರ್ಮಿಗಳಲ್ಲದವರು ಧರ್ಮಶೀಲರಲ್ಲವ ಪ್ರಯುಕ್ತ ಪರಮಾತ್ಮನಿಗೆ ಸಲ್ಲರು. ವಿಶ್ವಶಾಂತಿ ಸ್ಥಾಪನೆಯ ನೀತಿಯೇ ಬಸವಣ್ಣನವರ ನೀತಿಯು. ರಾಜ್ಯದಲ್ಲಿನ ಪ್ರತಿಯೊಬ್ಬ ಪ್ರಜೆಯೂ ತನ್ನ ಯಥಾಶಕ್ತಿಯ ಕಂದಾಯವನ್ನು ಕೊಡುವಂತೆ ಇವರು ಮಾಡಿದರು. ತಮ್ಮ ಸಹಜವಾದ ನಿಷ್ಪಕ್ಷಪಾತ ಆರ್ಥಿಕನೀತಿಯನ್ನು ಅನುಷ್ಠಾನಕ್ಕೆ ತಪ್ಪದೆ ತಂದರು. ಸಮಾಜಕ್ಕೆ ಭಿಕ್ಷುಕತನವು ಮಾರಿಬೀಜವೆಂದರಿತು ಅದರ ಪರಿಹಾರಕ್ಕೆ ಬಂಕಡಲೆಯನ್ನು ವಿಧಿಸಿದರು. ವೃದ್ಧರೂ, ಸಣ್ಣಮಕ್ಕಳೂ, ನಿರಾಶ್ರಿತರೂ ಅಂಗವಿಹೀನರೂ ಸರ್ಕಾರದಿಂದ ಕಾಪಾಡಲು ಅವರಿಗೆ ಅನ್ನಸತ್ರಾಲಯಗಳಿದ್ದವು. 'ಸಿದ್ಧರಾಮ' ಕಪ್ಪಕಾಣಿಕೆಯನ್ನು ಮಾಂಡಳಿಕರು ಭಂಡಾರಕ್ಕೆ ತಂದೊಪ್ಪಿಸುತ್ತಿದ್ದರು. ಶ್ರೀಮಂತರು ದೀನದರಿದ್ರರ ಕಷ್ಟದುಃಖಗಳಲ್ಲಿ ಭಾಗಿಯಾಗುವಂತೆ ಇವರು ಏರ್ಪಡಿಸಿದರು. ಸರ್ಕಾರದಲ್ಲಿ ವ್ಯಯವನ್ನು ಕಮ್ಮಿಸಾಕಿ, ಆದಾಯವನ್ನು ಹೆಚ್ಚಿಸುವ ಸುಧಾರಣೆಗಳನ್ನು ತಯಾರಿಸಿ, ದೇಶದ ಆಪತ್ತುವಿಪತ್ತನು ಪರಿಹರಿಸಲು ನಿಷ್ಕಾಮಕರ್ಮಯೋಗದಿಂದ ಪ್ರಜೆಗಳು ತಾವಾಗಿಯೇ ಮುಂದೆ ಬರುತ್ತಿದ್ದರು. ಭೋಗಪದಾರ್ಥಗಳ ಸುಂಕವನ್ನು ಹೆಚ್ಚಿಸಿದ ಕಾರಣ ಭೋಗಜೀವನದ ಕೆಟ್ಟಪರಿಣಾಮವು ನಿಂತುಹೋಗುವಂತಾಯಿತು.

—o—

## “ ಮಾರ್ಗದರ್ಶಕ-ಪರಿಹರ ”

(ಲೇಖಕ: - ಪಿ. ಜಿ. ಅಂಗಡಿ. ಸಂಗೊಳ್ಳಿ.)

ಎಫ್. ವಾಯ್. ಆರ್ಟ್ಸ (ಅ) ಲಿಂಗರಾಜ ಕಾಲೇಜ ಬೆಳಗಾವಿ.



ಯಾವ ಕವಿಗಳಿಗೆ ಪ್ರತಿಭಾಸಂಪತ್ತು ಚೆನ್ನಾಗಿರುವದೋ ಅವರು ಮಹಾ ಕವಿಗಳೇ ಆಗುತ್ತಾರೆ. ಪ್ರತಿಭೆಯು ಆಯಾ ಕವಿಯ ಭಾವಭಾಂಡಾರಕ್ಕನೆ ಸಾರವಾಗಿಯೂ, ಸ್ಫೂರ್ತಿಗುಣಕ್ಕನು ಗುಣವಾಗಿಯೂ ಇರುವುದು. ಯಾವುದೊಂದು ವಿಷಯವೇ ಆಗಲಿ ಕವಿಗೆ ಪೂರ್ವದಲ್ಲಿ ಅಪರಿಚಿತವಾಗಿದ್ದರೆ ಅವನ ಬರಿಯ ಪ್ರತಿಭೆಯಿಂದ ಸ್ಪಷ್ಟವಾಗುವದಿಲ್ಲ. ಪೂರ್ಣಪರಿಚಿತವಾದ ಭಾವಗಳನೇಕವು ಎಲ್ಲೆಲ್ಲಿಯೋ ಅಡಗಿಕೊಂಡಿರುತ್ತವೆ. ಕವಿಗೆ ಸ್ಫೂರ್ತಿಬಂದು ಪ್ರತಿಭೆಯು ಅತ್ಯುಚ್ಚಸ್ಥಾನಕ್ಕೇರುವಾಗ ಕವಿಗೆ ಮರೆತು ಹೋಗಿದ್ದ ಪೂರ್ವ ವಿಷಯಗಳೂ ಸನ್ನಿವೇಶಗಳೂ ತಟ್ಟನೆ ಸ್ಫುರಿಸಿ ಹೊಂದಿಕೆಯಾಗಿ ಹೃದಯತಂತ್ರಿಯು ಮೀಟಿ ಧ್ವನಿಮಾಡುವವು. ಆ ಸಮಯದಲ್ಲಿ ತಕ್ಕ ಪದಸಾಮಗ್ರಿ ಕರುಣವನಿಗೆ, ಪದಗಳೂ ಜೋಡಣೆಯಾಗಿ ಬಂದು ನಾಲಿಗೆಯಿಂದ ಭಾವವ್ಯಕ್ತಿಯನ್ನು ಮಾಡಿಸುತ್ತವೆ. ಹೊರಗಿನ ಪ್ರಕೃತಿ ವಸ್ತುಗಳೂ, ಕೇಳಿ ತಿಳಿದ ವಿಷಯಗಳೂ, ಅನುಭವರಾಜ್ಯದಲ್ಲಿ ಸೇರಿಕೊಂಡು ಪ್ರತಿಭೆಗೆ ಚಲನ ಶಕ್ತಿಯನ್ನು ಕೊಡುವವು. ಪ್ರತಿಭೆಯು ಉತ್ತಮವಾಗಿಲ್ಲದೇ ಹೋದರೆ ಅನೇಕ ವಿಷಯಗಳನ್ನು ಕವಿಯು ಬಿಟ್ಟುಬಿಡಬೇಕಾಗುತ್ತದೆ; ಸನ್ನಿವೇಶಗಳ ಗುಣಾವಗುಣಗಳನ್ನು ಕಾಣದೆ ಕೈಬಿಡಬೇಕಾಗುತ್ತದೆ. ಹೇಳುವ ರೀತಿಯಲ್ಲಿಯೂ ತೃಪ್ತಿಯುಂಟಾಗುವದಿಲ್ಲ. ಹರಿಹರನಿಂದ ಒಂದು ಉದಾಹರಣೆಯನ್ನು ತೆಗೆದುಕೊಳ್ಳೋಣ. ಗಿರಿಜೆಯು ಪುಷ್ಪಕ ವಿಮಾನಾರೂಢಳಾಗಿ ಹಿಮವತ್ಪರ್ವತದಿಂದ ಕಿಷ್ಕಿಂಧೆಗೆ ಬರುವ ಸನ್ನಿವೇಶದಲ್ಲಿ ಮಹಾಕವಿಯಾದವನು ಕೆಳಗಿರುವ ಗಿರಿನದಿಗಳನ್ನು ಪೈರು ಪಚ್ಚೆಗಳನ್ನೂ ವಿಮಾನದ ಗಮನವೇಗವನ್ನು ಹೇಗೆ ತಿಳಿಸಿದ್ದಾನೆ; ಒಂದೊಂದು ಉಪಮಾನದಿಂದ ಒಂದೊಂದು ವರ್ಣನೆಯಿಂದ, ಅದು ನಮ್ಮ ಮನಸ್ಸಿಗೆ ಅಂಟಿ ನಾವೇ ಪುಷ್ಪಕ ವಿಮಾನದಲ್ಲಿ ಸಂಚಾರಮಾಡುತ್ತಿರುವಂತೆ, ಆನಂದ ಪರವಶತೆಯನ್ನು ಹೊಂದುವಂತೆ ಪ್ರತಿಭೆಯ ಸ್ವರೂಪವನ್ನು ತೋರಿಸಿ ಕೊಡುತ್ತಿದ್ದನು.

ಒಳ್ಳೆಯ ಕವಿಯಲ್ಲಿ ಕವಿತಾಲಕ್ಷಣಗಳು ಹೇಗೆ ಉತ್ತಮವಾಗಿರುವವೋ ಹಾಗೆಯೇ ವಿಮರ್ಶಗುಣಗಳೂ ಉತ್ತಮವಾಗಿರುತ್ತವೆ. ಹೀಗೆಂದು ಹೇಳಿದ ಮಾತ್ರಕ್ಕೆ ಕವಿಯು ತನ್ನ ಪದ್ಯಗಳನ್ನೂ ಭಾವನೆಗಳನ್ನೂ ಪೃಥಕ್ ಪೃಥಕ್ಕಾಗಿ ತೂಕ ಮಾಡುತ್ತ ಕಾಲಕಳೆಯುವನೆಂದು ಭ್ರಮಿಸಬಾರದು. ಔಚಿತ್ಯವೆಂಬುದು ಕವಿಗೆ ಸ್ವಯಂವೇದ್ಯ. ತಿಳಿಯುತ್ತದೆ ಪ್ರತಿಭೆಯು ತೀವ್ರವಾಗಿದ್ದಾಗಲೂ ಔಚಿತ್ಯವೇದಿಯಾದವನು ಎಚ್ಚರವಾಗಿಯೇ ಇರುವನು. ಔಚಿತ್ಯಜ್ಞಾನವು ಪ್ರತಿಭೆಯ ಒಂದು ಅಂಗವಾಗಿ ಏರ್ಪಡುತ್ತದೆ. ಮಹಾಕವಿಗಳೂ ಕೂಡ ಈ ಔಚಿತ್ಯದ ಒರೆಗಲ್ಲಿನಲ್ಲಿ ಒಂದೊಂದು ವೇಳೆ ಕೀಳು ಬಣ್ಣವನ್ನು ತೋರಿಸಿದ್ದಾರೆ. ಔಚಿತ್ಯವನ್ನು ಮೀರಿ ಮನಸ್ಸು ಕೆಲಸಮಾಡುತ್ತಿದ್ದರೆ ಬುದ್ಧಿವಿಕಲ್ಪವೆಂದು ಹೇಳುವರಲ್ಲದೆ ಪ್ರತಿಭೆಯೆಂದು ಹೇಳುವದಿಲ್ಲ. ಆಗ ನಮಗೆ ಬೇಸರಿಕೆಯಾಗುತ್ತದೆ. ಇನ್ನು ಹರಿಹರನು ಆತನೇನು ಮಾಡುವುದು? ಆ ಭಕ್ತಿಯ ಭರವೂ ಆ ಕವಿತಾವೇಶವೂ ಬಂದು ಬಿಟ್ಟರೆ ಔಚಿತ್ಯವೆಂಬುದು ಆತನ ಹತ್ತಿರ ಹೋಗಲು ಹೆದರುತ್ತವೆ.

ಹರಿಹರನನ್ನು ಕವಿಯೆಂದು ವಿಚಾರಮಾಡುವಾಗ ಇವುಗಳೆಲ್ಲ ಬರಬೇಕಾಗುವುದು. ಕವಿಯೆಂದರೆ ನಮಗೆ ಕಾವ್ಯದ ಮೇಲೆ ದೃಷ್ಟಿ. ಕಾವ್ಯವೆಂದರೆ ವಿಮರ್ಶೆಯ ಮಾತು ಬರುತ್ತದೆ. ಕಾವ್ಯವಿಮರ್ಶೆಯಲ್ಲಿ ಉತ್ತಮ ಸಾಹಿತ್ಯ ಲಕ್ಷಣಗಳನ್ನಿಟ್ಟುಕೊಂಡು ಉತ್ತಮ ಕವಿಯನ್ನು ಓದುತ್ತೇವೆ. ಉತ್ತಮ ಸಾಹಿತ್ಯವನ್ನು ಓದುವ ರೀತಿಯಲ್ಲಿ, ಅನುಭವಿಸುವ ರೀತಿಯಲ್ಲಿ, 'ಕಲ್ಗಿಲಾವಣಿ' ಯನ್ನು ಓದುವದಿಲ್ಲ, ಅನುಭವಿಸುವದಿಲ್ಲ.

ಆದರೆ ಹರಿಹರನು ಕೇವಲ ಕವಿಯಲ್ಲ. ಯಾರಾದರೂ ಹರಿಹರನನ್ನು ಕೇವಲ ಕವಿಯನ್ನಾಗಿ ಭಾವಿಸಿ ಸಾಹಿತ್ಯ ಚರಿತ್ರೆಯಲ್ಲಿ ಸ್ಥಾನನಿರ್ಣಯ ಮಾಡಹೋದರೆ ಅವರನ್ನು ನಾವು ಕುರುಡರೆಂದು ಕರೆಯುತ್ತೇವೆ. ಹರಿಹರನು ವೀರಶೈವ ಗುರು. ಆತನ ಜೀವನ ಚರಿತ್ರೆಯಿಂದ ಹರಿಹರನು ಗಣಪುರುಷನ ಅವತಾರವೆಂದು ತಿಳಿಯುತ್ತದೆ. ಹರಿಹರನು ಮಹಾಪವಾಡ ಪುರುಷನೂ ಆಗಿರುತ್ತಾನೆ. ಈ ಮಹಿಮಾ ಪುರುಷನು ಬಸವ ಚನ್ನಬಸವಾದಿಗಳಿಗಿಂತ ಯಾವ ವಿಧದಲ್ಲಿಯೂ ಕಡಿಮೆಯಿಲ್ಲ. ಬಸವನಕಾಲಕ್ಕೆ ಹಿಂದೆ ಅಥವಾ ಆತನ ಸಮಕಾಲದಲ್ಲಿಯೇ ವೀರಶೈವವನ್ನು ದಕ್ಷಿಣದಲ್ಲಿ ಉದ್ಧರಿಸಿದವನು ಹರಿಹರನು. ಹರಿಹರನು ವೀರಶೈವ ಮತದಲ್ಲಿ ಪ್ರಬ

ಲವಾದ ಮೂಲಸ್ತಂಭವಾಗಿದ್ದು ತನ್ನ ಮತದಿಂದ ಶಿಷ್ಯರನೇಕರನ್ನು ವಿದ್ಯಾವಂತರನ್ನಾಗಿ ಮಾಡಿ, ಆ ವೀರಶೈವವು ಹಂಡುವಂತೆ ಪ್ರಯತ್ನ ಪಟ್ಟವನು. ಹರಿಹರನ ಕೀರ್ತಿಯೂ ಪ್ರಾಬಲ್ಯವೂ ಮಗ್ರಾಸಿಗೆ ಸಮೀಪವಾದ ತಿರುವೆಳ್ಳೂರಿನವರಿಗೆ ಹರಡಿತ್ತೆಂಬುದನ್ನು ಆತನ ಜೀವನ ಚರಿತ್ರೆಯಿಂದಲೇ ಹೇಳಬಹುದಾಗಿದೆ.

ಹರಿಹರನು ಪ್ರಾಶಸ್ತ್ಯಕ್ಕೆ ತಕ್ಕಂತೆ ಎಷ್ಟೋ ಪದ್ಯಗಳನ್ನು ಬಹಳ ಸೊಗಸಾಗಿ ಬರೆದು ಕನ್ನಡಿಗರ ಗೌರವಕ್ಕೆ ಪಾತ್ರನಾಗಿರುವನು. ಹದಿಮೂರನೆಯ ಶತಮಾನದಲ್ಲಿದ್ದ ಮಲ್ಲಿಕಾರ್ಜುನನು ತನ್ನ ಸೂಕ್ತಿ ಸುಧಾರ್ಣವದಲ್ಲಿಯೂ, ಹದಿನೈದನೆಯ ಶತಮಾನದಲ್ಲಿದ್ದ ಅಭಿನವವಾದಿ ವಿದ್ಯಾನಂದನು ತನ್ನ ಕಾವ್ಯ ಕಾವ್ಯಸಾರದಲ್ಲಿಯೂ ಹರಿಹರನದ ಪದ್ಯಗಳನ್ನು ಉದ್ಧೃತಮಾಡಿರುತ್ತಾರೆ. ಈ ಕಾವ್ಯಸಂಗ್ರಹಕಾರರು ಈ ರೀತಿ ಹರಿಹರನನ್ನು ಗೌರವಿಸಿರುವುದು ಆತನಿಗೆ ಸಾಹಿತ್ಯದಲ್ಲಿ ಗೌರವಸ್ಥಾನವನ್ನು ದೊರಕಿಸುವುದಾಗಿದೆ. ಇಲ್ಲಿ ಒಂದು ಆಶ್ಚರ್ಯಕರವಾದ ಸಂಗತಿ ಇರುವುದು. ಜೈನರೂ ವೈದಿಕಮತದವರೂ, ವೀರಶೈವರೂ ಮತಪ್ರಪಂಚದಲ್ಲಿ ವಾದವಿವಾದಗಳ ಪ್ರಬಲಯುದ್ಧಗಳನ್ನು ಮಾಡಿ ಮಾಡಿ ಪರಸ್ಪರ ಬದ್ಧದ್ವೇಷಿಗಳೆಂದು ಕಂಡು ಬಂದರೂ ಸಾಹಿತ್ಯಪ್ರಪಂಚದಲ್ಲಿ ಎಲ್ಲರೂ ಭ್ರಾತೃಗಳೇ, ಎಲ್ಲರೂ ಬಂಧುಗಳೇ, ಎಲ್ಲರೂ ಪರಸ್ಪರ ಪ್ರೀತಿ ಗೌರವ ವಿಶ್ವಾಸಗಳನ್ನುಳ್ಳವರೇ ಎಂಬುದನ್ನು ಈ ಜೈನ ಸಂಗ್ರಹಕಾರರು ಸ್ಪಷ್ಟವಾಗಿ ತೋರಿಸಿದ್ದಾರೆ. ಸಾಹಿತ್ಯದಲ್ಲಿ ಮತಪಕ್ಷಪಾತಗಳಿಲ್ಲ.

ಹರಿಹರನು ಇನ್ನೊಂದು ಕಾರಣದಿಂದಲೂ ಗೌರವಾರ್ಹನಾಗಿರುತ್ತಾನೆ:—

ನೋಡುವೊಡೊಂದಕ್ಕರಮುದು
ಮಾಡುವೊಡುಚ್ಚರಣೆಗರಿದು ಮೂರುಂತೆರನಂ ।
ಕೂಡೆಕವಿತತಿ ವಿಚಾರಿಸ
ಬೇಡದರಿಂ ಅವಿಯಲಕ್ಷಣಂಗಳನಿದರೊಳ್ ॥

ಎಂದು ಲೋಕವಿರುದ್ಧವಾಗಿದ್ದರೂ ಪಾಂಡಿತ್ಯಾಭಿಮಾನದಿಂದ ನಡೆಸುತ್ತಿದ್ದ ಈ ಆಚರಣೆಯನ್ನು ಕಂಠೋಕ್ತವಾಗಿ ೧೨ನೆಯ ಶತಮಾನದಲ್ಲಿಯೇ ಖಂಡಿಸಿದವನು ನಮಗೆ ತಿಳಿದಮಟ್ಟಿಗೆ ಹರಿಹರನೊಬ್ಬನೇ. ಇದು ಸಾಹಿತ್ಯ

ಚಾರಿತ್ರಕಾರರಿಗೂ ಭಾಷಾಚರಿತ್ರಕಾರರಿಗೂ ಎಷ್ಟೋ ಉಪಕಾರಕವಾಗಿದೆ. ಮಾತಿನಲ್ಲಿಲ್ಲದಿಗ್ದ ಆಚರಣೆಯ ಲೆಖನದಲ್ಲಿ ಕ್ಲೇಶಕರವೆಂದು, ಇದು ಹೊರಟು ಹೋಗಬೇಕೆಂದೂ ಹರಿಹರನ ಕಾಲದಲ್ಲಿ ಕೆಲವರು ಅಭಿಪ್ರಾಯ ಪಟ್ಟಿರಬೇಕು. ಅವರು ಪಂಡಿತರಿಗೆ ಹೆದರಿ ಬಾಯಿಬಿಟ್ಟು ಹೇಳಲಾರದೆ ಪೇಚಾಡುತ್ತಿದ್ದಾಗ ಧೈರ್ಯಶಾಲಿಯಾದ ಹರಿಹರನು ಒಂದೇ ತಡವೆಗೆ ಅದ್ದ ಗಟ್ಟನ್ನು ಕಿತ್ತಿಸಿದನು. ಕೇಶಿರಾಜನು ಅಟಿಕುಳಕ್ಷಗಳ ವಿಚಾರವಾಗಿ ನಿಯಮಗಳನ್ನು ವಿಧಿಸಿ, ಪದಗಳ ಪಟ್ಟಿಗಳನ್ನು ಕೊಟ್ಟು ಪ್ರಯಾಸ ಪಟ್ಟರೂ ಹರಿಹರನಿಂದಾದ ಬೀಜಾರೋಪಣವು ಫಲಿಸಿಯೇ ಫಲಿಸಿತು. ಆ ಕಾಲಜ್ಞಾನದ ಹರಿಹರನ ಮತವಂತೆ ಈ ಲಕ್ಷಣದಲ್ಲಿ ಈ ಅಟಿಗಳು ಮಾಯ ವಾಗಿಯೇ ಹೋದವು. ಕೃತ್ರಿಮೋಚ್ಚಾರಣೆಯ ಸಂಧಾನವನ್ನು ಬಯಲಿ ಗೆಳೆದು ಅದನ್ನು ಧ್ವಂಸಮಾಡಿದ ಕೀರ್ತಿಯು ಹರಿಹರನಿಗೇ ಸಲ್ಲತಕ್ಕದ್ದು.

ಕನ್ನಡ ಸಾಹಿತ್ಯದಲ್ಲಿ ಮೊಟ್ಟಮೊದಲು ತಲೆದೋರಿರುವ ಶತಕಗ ಳನ್ನು ಪರಿಶೀಲಿಸುವುದಾದರೆ, ಪಂಪಾಶತಕವು ಹೆಚ್ಚುಕಡಿಮೆ ಮೊದಲನೆ ಯವುಗಳಲ್ಲಿ ಗಣಿಸಿಯುವಾಗುತ್ತದೆ. ಹರಿಹರನಿಗಿಂತ ಹಿಂದೆ ಚಂದ್ರಚೂ ಡಾಮಣಿ ಶತಕವು ರಚಿತವಾಗಿರುವದೆಂದು ತಿಳಿದುಬಂದರೂ ಪಂಪಾಶತಕವು ಪುರಾತನಶತಕಗಳಲ್ಲಿ ಒಂದಾಗಿದೆಯೆಂದು ಖಂಡಿತವಾಗಿ ಹೇಳಬಹುದು. ಈ ರೀತಿ ನೂತನ ಪಂಗತವೊಂದನ್ನು ಕನ್ನಡ ಸಾಹಿತ್ಯದಲ್ಲಿ ತಂದ ಹರಿ ಹರನನ್ನು ನಾವೆಲ್ಲರೂ ಗೌರವಿಸಬೇಕಾಗಿದೆ.

ಇನ್ನೊಂದು ಪ್ರಬಲವಾದ ಕಾರಣದಿಂದಲೂ ಹರಿಹರನು ಗೌರವಾ ರ್ಹನು. ಈತನು ವೀರಶೈವ ಕವಿಗಳಲ್ಲಿ ಮೊದಲಿಗನಾಗಿಯೂ, ಇತರರಿಗೆ ಮಾರ್ಗದರ್ಶಕನಾಗಿಯೂ ಇರುತ್ತಾನೆ. "ನರಸ್ತುತಿಯನ್ನು ಮಾಡಿ ಕೆಡ ಬೇಡಿ, ಶರಣರ ಕಥೆಗಳನ್ನು ಬರೆದು ಮುಕ್ತಿಯನ್ನು ಪಡೆಯಿರಿ" ಎಂಬು ದಾಗಿ ಹರಿಹರನು ಉಪದೇಶಮಾಡಿ ಅದನ್ನು ತನ್ನ ಆಚರಣೆಯಲ್ಲಿಯೂ ತೋರಿಸಿರುತ್ತಾನೆ. ಈತನು ಹಾಕಿದ ಮೇಲ್ಪಂಕ್ತಿಯನ್ನು ವೀರಶೈವ ಕವಿ ಗಳೆಲ್ಲರೂ ಸಾಮಾನ್ಯವಾಗಿ ಅನುಸರಿಸಿರುತ್ತಾರೆ. ಷಡಕ್ಷರಿಯು ರಾಜಶೇಖರ ವಿಲಾಸವನ್ನು ಬರೆಯುವಾಗ ತಾನು ಹರಿಹರನ ಅನುಯಾಯಿಯೆಂಬು ದನ್ನು ಹೇಳಿಕೊಂಡಿರುವನು. "ಯತಿತಿಲಕನಾದವನು ಶೃಂಗಾರರಸವನ್ನು ನೆನಸಬಹುದೇ, ಅದರಲ್ಲಿ ಮುಳುಗಿಹೋಗಬಹುದೇ?' ಎಂದರೆ ಹರಿಹರ

ನನ್ನು ಬಯಲಿಗೆಳೆದು 'ಹರಿಯರ ಮಾರ್ಗವನ್ನು ನಾನು ಹಿಡಿದಿರುವೆನು ಅನ್ಯಥಾ ಅಲ್ಲ'— ಎಂದು ಉಪಾಯದಿಂದ ತಪ್ಪಿಸಿಕೊಂಡಿರುವನು.

ಅನುಚಿತವಾಗ್ಲಿ ಯೋಗಿಜನಮಂಡನ ನಿಂ ಕೃತಿನೇಳ್ವುದಿಲ್ಲಿ ಕೇ
ಳ್ಮನಸಿಜ ಕೇಳಿ ಮುಖ್ಯ ಜನರಂಜನ ವರ್ಣನೆ ಗೈವುದೆಂದು ಸ
ಜ್ಜನರಿವನೆನ್ನದಿರ್ಕೆ ಶಿವಯೋಗಿ ಹರೀಶ್ವರ ಮಲ್ಲಣಾರ್ಯರಿಂ
ಪಿನ ಪೊಸಕಬ್ಬಮಂ ನೆಗಳ್ದರಾನವರಂತಿರೆ ಪೇಳ್ವೆನಿಂತಿದಂ ||

ಇವುಗಳಿಂದ ಹರಿಹರನು ವೀರಶೈವರಿಗೆಲ್ಲ ಹೇಗೆ ಆದಿಕವಿಯಾಗಿ ಪರಿಣಮಿಸಿರುವನೆಂಬುದನ್ನೂ ಕನ್ನಡ ಸಾಹಿತ್ಯದಲ್ಲಿ ಆತನ ಮಹಿಮೆಯು ಎಷ್ಟರ ಮಟ್ಟಿಗೆ ವ್ಯಾಪಿಸಿದೆ ಎಂಬುದನ್ನೂ ತಿಳಿಯಬಹುದಾಗಿದೆ. ಅನೇಕ ಕವಿಗಳು ಹರಿಹರನ ಭಾವಗಳನ್ನೂ ಆ ಭಾವಪ್ರದರ್ಶನ ಕ್ರಮವನ್ನೂ ತೆಗೆದುಕೊಂಡಿರುವರೆಂಬುದನ್ನೂ ಕೆಲವು ಉದಾಹರಣೆಗಳಿಂದ ಸ್ಪಷ್ಟಪಡಿಸಬಹುದು.

ಷಡಕ್ಷರಿಯು ಹರಿಹರನಿಂದ ಅನೇಕ ಭಾವಗಳನ್ನು ತೆಗೆದುಕೊಂಡಿರುವನು. ಇಲ್ಲಿ ಒಂದು ಉದಾಹರಣೆ—

ಎನೆ ತಾರಕರಿಗೆ ಕೋಪಂ
ಮನದೋಳ್ ಪುಟನೆಗ್ಗಿ ಮುಖದೊಳವತರಿಸಿ ವಿಲೋ
ಚನದೊಳ್ ಪಸರಿಸಿ ಪರ್ಬನ
ಕೊನೆಯೋಳ್ ಕುಡಿಗೊಂಡು ನಿಮಿರೆ ನಡುಗುತೆ ನುಡಿದಂ ||

ಎಂಬ ಹರಿಹರನ ಪದ್ಯದೊಡನೆ ಷಡಕ್ಷರಿಯು ಶಬರಶಂಕರ ವಿಲಾಸದ ಈ ಪದ್ಯವನ್ನು ಹೋಲಿಸೋಣ.

ಒಳಕೊರೆಯೆ ದು ಶಾಂತಿರಸಂ
ಮೊಳೆತುದು ಕೋಪಾಗ್ನಿ ಪೊಗೆದುದುಸಿರೊಳ್ಪಿಡುಗ |
ಣ್ಗಳ ಕಡೆಯೊಳ್ ಕಿಡಿಗೆದರ್ದುದು
ಬಳಿಕಲದಿರ್ದು ಮೊಗದೊಳ್ ಚಲಂಪುನಂದನನಾ ||

ಈ ರೀತಿ ಪ್ರಸಿದ್ಧರಾದ ಕವಿಗಳು ಕೂಡ ಹರಿಹರನ ಭಾವಗಳನ್ನೂ ಶೈಲಿಯನ್ನೂ ಅನುಕರಿಸುವರು. ಇತರ ಕವಿಗಳು ಹರಿಹರನಿಂದ ಕದ್ದಿರುವ ಪದ್ಯಭಾವಗಳು ಅನೇಕ ಇವೆ. ಒಟ್ಟಿನಲ್ಲಿ ಇವುಗಳೆಲ್ಲ ಹರಿಹರನ ಪ್ರಾಮುಖ್ಯತೆಯನ್ನು ತೋರಿಸುತ್ತವೆ.

ಒಟ್ಟಿನ ಮೇಲೆ ಹರಿಹರನು ಕನ್ನಡ ಸಾಹಿತ್ಯದಲ್ಲಿ ಮುಖ್ಯವಾದ ಸ್ಥಾನವನ್ನು ಪಡೆದಿರುತ್ತಾನೆ. ಹರಿಹರನು ಮಹಾ ಪ್ರಮಥಪುರುಷನಾಗಿಯೂ ಗಣಪುರುಷನ ಅವತಾರವಾಗಿಯೂ, ಆಚಾರ ಪರಂಪರೆಗೆ ಸೇದನನಾಗಿಯೂ, ನಿಷ್ಕಪಟಿಯಾದ ಭಕ್ತನಾಗಿಯೂ ವೀರಶೈವೋದ್ಧಾರಕನಾಗಿಯೂ, ಮಾರ್ಗದರ್ಶಕನಾಗಿಯೂ, ಗುರುವಾಗಿಯೂ ಇರುವುದರಿಂದ ನಮಗೆ ಆತನಲ್ಲಿ ಭಯಭಕ್ತಿಗಳಿವೆ, ಪೂಜ್ಯಭಕ್ತಿಯಿದೆ. ಕನ್ನಡ ಸಾಹಿತ್ಯಾಭಿವೃದ್ಧಿಗೂ, ಕನ್ನಡ ಸಾಹಿತ್ಯಚರಿತ್ರೆಗೂ ಹರಿಹರನಿಂದ ಆಗಿರುವ ಉಪಕಾರವು ಘನತರವಾದುದು. ಹರಿಹರನು ಉನ್ನತ ಸ್ಥಾನವನ್ನು ಪಡೆಯುವುದಕ್ಕೆ ಈ ಕಾರಣಗಳೇ ಸಾಕು. ಗುರುವಿಗಿಂತ ಬುದ್ಧಿವಂತರಾದ ಶಿಷ್ಯರಿದ್ದರೆ ಆ ಕೀರ್ತಿಯು ಗುರುವಿಗೇ ಸಲ್ಲತಕ್ಕದೆಂದು ನಾವು ತಿಳಿಯುತ್ತೇವೆ. ನಮ್ಮ ಕನ್ನಡ ಸಾಹಿತ್ಯದಲ್ಲಿ ಹಾಗೆ ಗುರುವಿಗಿಂತ ಹೆಚ್ಚು ಕವಿತಾಶಕ್ತಿಯನ್ನೂ ನೈಪುಣ್ಯವನ್ನೂ ಪ್ರತಿಭೆಯನ್ನೂ ಕಲ್ಪನಾಚಾತುರ್ಯವನ್ನು ಆ ಗುರುಪ್ರಸಾದದಿಂದಲೇ ಪಡೆದ ಚಾಮರಸ ಷಡಕ್ಷರಿಯಂತಹ ಶಿಷ್ಯರು ದೊರೆತಿರುವುದೇನೋ ನಿಜ. ಆದರೆ ರಸಸ್ಫೂರ್ತಿ, ಪ್ರತಿಭೆ ಮುಂತಾದುವು ಹೇಗೆ ಪುಣ್ಯವಿಶೇಷದಿಂದ ಲಬ್ಧವಾಗಬೇಕೋ ಹಾಗೆಯೇ ಗುರುಪದವಿಯೂ ಪ್ರಾಶಸ್ತ್ಯವೂ ಪುಣ್ಯವಿಶೇಷದಿಂದಲೇ ಲಬ್ಧವಾಗಬೇಕೆಂದು ನಾವು ತಿಳಿಯುತ್ತೇವೆ. ಸಾಹಿತ್ಯ ಚರಿತ್ರೆಯ ರಾಜಮಾರ್ಗದಲ್ಲಿ "ಹರಿಹರ ಜ್ಯೋತಿ"ಯು ಆತ್ಮಸ್ವರೂಪೋನ್ನತಿಯಿಂದ ಉಜ್ವಲವಾದ ಬೆಳಕನ್ನು ಬೀರುತ್ತ, ದಾರಿಗರ ಕಣ್ಮನಗಳಿಗೆ ಆಶ್ಚರ್ಯವನ್ನುಂಟುಮಾಡುತ್ತ, ಚಿರಕಾಲವೂ ಉಪಕಾರಕವಾಗಿರುವುದುಂಟು ! ಇದುವೇ ಹರಿಹರನ ಮಾರ್ಗದರ್ಶಕ !! ಇದೇ ಹರಿಹರನ ಸ್ಥಾನ ನಿರ್ಣಯ ನಿದರ್ಶನ !!!

# ಅತಿಥಿ - ಜಂಗಮನಿಷ್ಠೆ

## [ಭಕ್ತ ವೀರಣ್ಣೊಡೆಯ ಮತ್ತು ಅವನ ಬಳಗ]

(ಬರೆದವರು:—ಗೀಕುಂದ ಅವಧಾನಿ ಶಾಸ್ತ್ರಿಗಳು, ಕೃತಪುರ–ವಸ್ತ್ರ-
ನಿವಾಸ ವಸತಿ ಬಳ್ಳಾರಿ. )



ಸಿದ್ಧಪುರದಲ್ಲಿ ವೀರಣ್ಣೊಡೆಯನೆಂಬ ಜಂಗಮನಿಷ್ಠ ತಪೋಮೂರ್ತಿ ಸಚ್ಛೀಲ ಶಿವಭಕ್ತನಿದ್ದನು. ಈ ಮನೆತನಕ್ಕೆ ಕೆಲಗ್ರಾಮಗಳ ಒಡೆತನವಿದ್ದುದರಿಂದ ಒಡೆಯರೆಂದು ಕರೆಯುವ ವಾಡಿಕೆಯಿತ್ತು. ಈತನಿಗೆ ಸುಮಂಗಳೆಯೆಂಬ ಪತ್ನಿಯೂ, ಸಿದ್ಧಲಿಂಗ ಶಿವಲಿಂಗ ಎಂಬ ಇಬ್ಬರು ಮಕ್ಕಳೂ, ಸಿದ್ಧಲಿಂಗೊಡೆಯನ ಸತಿ ಮಹದೇವಿ ಎಂಬ ಸೊಸೆ, ಹೀಗೆ ಐವರದೊಂದು ಚಿಕ್ಕ ಬಳಗವಿತ್ತು. ಎಲ್ಲರೂ ಧರ್ಮಶೀಲರು, ಶಿವಭಕ್ತರು, ಸಮ್ಯಕ್–ವಿಚಾರಪರರು, ಕಾರ್ಯಾವಸರದಲ್ಲಿಯೂ ಶಿವನನ್ನು ಮರೆಯದವರು. ಜಂಗಮನನ್ನು ಶಿವನ ಸಾಕಾರ ರೂಪವೆಂದು ಭಾವಿಸಿ, ವ್ಯವಹಾರ ಉದ್ಯೋಗ ಮನೆಗೆಲಸ ಮುಂತಾದುದನೆಲ್ಲ ಜಂಗಮಸೇವೆಗಾಗಿ ಮೀಸಲಿರಿಸಿ, ಸಂಸಾರದಲ್ಲೊದಗುವ ಸುಖಗಳನ್ನಷ್ಟೇ ಏಕೆ ದುಃಖಗಳನ್ನು ಸಹ ಕರುಣಾನಿಧಿಯಾದ ಶ್ರೀ ಶಂಕರ (ಸುಖವನ್ನುಂಟುಮಾಡುವವ) ನ ಕರುಣೆಯಿಂದಲೇ ಒದಗುವವೆಂದು ಭಾವಿಸಿದ್ದರು.

ಶಿವ–ಜಂಗಮರಲ್ಲಿರುವ ಇವರ ಅಪಾರ ಪ್ರೇಮನಿಷ್ಠೆಗಳಿಗಾಗಿ ಶಿವನು ತಲ್ಲಣಿಸಿ, ಕಾರ್ಯಾವಸರದಲ್ಲಿ ಕೂಸನ್ನು ಮರೆತ ತಾಯಿ ಫಕ್ಕನೆ ನೆನಪುಗೊಂಡು ಕೂಸಿನೆಡೆಗೆ ಧಾವಿಸಿ ಬರುವಂತೆ, ಶಿವನು ಪಾರ್ವತಿಯನ್ನು ತನ್ನ ಅರ್ಧಾಂಗದಲ್ಲಿ ಅಡಗಿಸಿ, ಆ ಬಸುರಿನಲ್ಲಿ ಗಣೇಶನನ್ನಿರಿಸಿ, ಭಾಲಚಂದ್ರನನ್ನು ವಿಭೂತಿಯಲ್ಲಿ ಎರಕ ಹೊಯ್ದು, ರುಂಡಮಾಲೆ-ನಾಗಭೂಷಣಗಳನ್ನು ಅಕ್ಷಮಾಲೆಗಳನ್ನಾಗಿ ಪರಿಣಮಿಸಿ, ಗಜಚರ್ಮವನ್ನು ಕಾಷಾಯಾಂಬರವನ್ನಾಗಿ ವ್ಯಾಘ್ರಚರ್ಮವನ್ನು ಕಂಥೆಯನ್ನಾಗಿ ಹೊದೆದು ತ್ರಿಶೂಲವನ್ನು ದಂಡವನ್ನಾಗಿ ಹಿಡಿದು ಕಪಾಲವನ್ನು ಕಮಂಡಲವನ್ನಾಗಿ ಗ್ರಹಿಸಿ ಗಂಗೆಗೆ ಆವಾಸವನ್ನು ಕಲ್ಪಿಸಿ, ಕೈಲಾಸದಿಂದ ಹೊರಡುವಾಗ

ಲಿಂಗ ಮುಕುರದಲ್ಲಿ ತನ್ನಾತ್ಮವನ್ನು ಪ್ರತಿಬಿಂಬಿಸಿ ಅಂಗದ ಮೇಲೆ ಧರಿಸಿ ಮರಳಿ ಹೊರದೆಗೆದು ಅದರಲ್ಲಿ ತನ್ನ ಸಾಕಾರ ನಿರಾಕಾರಂಗಳ ವಿಮರ್ಶೆಗೊಂಡು ಭಕ್ತಪರೀಕ್ಷೆಯಲ್ಲಿ ತಾನು ತೇರ್ಗಡೆ ಹೊಂದುವ ಧೀರನಾಗಿ ಶಾಂತನಾಗಿ, ಸುಂದರನಾಗಿ, ಲಿಂಗೋದ್ಭವ ಲೀಲಾಕರಂತೆ ದೈದೀಪ್ಯಮಾನನಾಗಿ ಹೊರತಲುವನಾಗಲು, ಪಾರ್ವತಿಯು— ದೇವಾ! ಭೋಗಗಳ ಆಶೆಯಿಂದ ನಿನ್ನ ನೆನೆವರು ಕನಿಷ್ಠ ಭಕ್ತರು. ಇಷ್ಟ ಭೋಗಗಳು ಒದಗಿದಾಗ ಜಂಗಮನನ್ನು ಆದರಿಸುವವರು ನಿನ್ನ ಸಾಧಾರಣ ಭಕ್ತರು. ಕರಳು ಗೀಚುವ ಕಷ್ಟ ಒದಗಿದ್ದರೂ ಜಂಗಮನನ್ನು ಆರಾಧಿಸುವವರು ನಿನ್ನ ಅಸಾಧಾರಣ ಭಕ್ತರು. ವಿರಕ್ತರು ಅರ್ಥಾತ್ ವೀರಶೈವರು. ಇದರಿಂದ ನಿನ್ನ ಭಕ್ತ ಹಾಗೂ ಜಂಗಮ ಬಳಗವನ್ನು ತಕ್ಕರೀತಿಯಲ್ಲಿ ಪರೀಕ್ಷಿಸ ಬಯಸುವೆನೆಂದು, ತನ್ನ ಕಿರಿಬೆರಳುಂಗುರವಾದ ಶೇಷನಿಗೆ ತಕ್ಕ ಉಪದೇಶಮಾಡಿ ಮುಂಗಡಿಯಾಗಿ ಕಳುಹಿಸಿದಳು.

ಇತ್ತ ಶಿವಭಕ್ತ ವೀರಣ್ಣೊಡೆಯನ ಮನೆಯಲ್ಲಿ ಹಿರಿಮಗನಾದ ಸಿದ್ಧಲಿಂಗೊಡೆಯನು ಮೈತೊಳೆದು ಶಿವಾರ್ಚನೆಯ ಕೋಣೆಗೆ ಬಂದು, ಲಿಂಗಪೂಜೆಗೋಸುಗ ಕೊಡ್ರಲು ಧಾವಳಿ (ಬಿಳಿಯ ಉಣ್ಣೆಯ ಪವಿತ್ರವಾದ ಕಂಬಳಿ) ಸಹಿತ ಸುತ್ತಿದ ದರ್ಭಾಸನದ ಸುರುಳಿಯನ್ನು ಬಿಚ್ಚಿ ಹೋಗಲು, ನಾಗಸರ್ಪವು ಹೆಡೆಯೆತ್ತಿ ಬಲವಾಗಿ ಕಚ್ಚಿತು. ಕೂಡಲೆ 'ಹಾಯ್' 'ಸಾಂಬಶಿವಾ' ಎಂದು ಕೂಗಿ ಪ್ರಾಣಬಿಟ್ಟನು. ಮನೆಯವರೆಲ್ಲರೂ ಗಾಬರಿಯಿಂದ, ತೊಡಗಿದ ಉದ್ಯೋಗಗಳನ್ನು ಅಲ್ಲಿಯೇ ಬಿಟ್ಟು ಬಂದು ನೋಡುತ್ತಾರೆ. ಸರ್ಪವು ಬಿಲಸೇರಿತು, ಸಿದ್ಧಲಿಂಗೊಡೆಯನು ಪ್ರಾಣ ನೀಗಿದ್ದಾನೆ. ಕಂಡು, ಹಾಯ್ ಶಿವನೇ ಇದನೇನು ಮಾಡಿದೆ! ಎಂದು ಎಲ್ಲರೂ ಗೋಳಿಟ್ಟರು (ಲೌಕಿಕರ ಸಂಪರ್ಕದ ಪ್ರಭಾವ, ಪಾರ್ವತಿಯ ಮಾಯೆಯ ಶಕು.)

ಇಷ್ಟರಲ್ಲಿ ಮುಂಚೆ ಬಾಗಿಲಿನಿಂದ "ಅಯ್ಯಾ! ಹಸಿದು ಬಂದ ಜಂಗಮಕ್ಕೆ ಆಪ್ಯಾಯನವಿತ್ತು!" ಎಂಬ ಕೂಗು ಕೇಳಿಸಿತು. ಹನಿವೆರೆದ ಕಣ್ಣುಗಳ ನೊರೆಸಿಕೊಳ್ಳುತ್ತ, ವೀರಣ್ಣೊಡೆಯನು ಬಾಗಿಲೆಡೆಗೆ ಬರುತ್ತಲೇ ಎದುರಿನಲ್ಲಿ ಪರಶಿವನೇ ಮೂರ್ತಿವೆತ್ತು ಬಂದಂತಿರುವ ಜಂಗಮನನ್ನು ನೋಡಿದನು. ದುಃಖವು ಅಡಗಿತು. ಮುಖವನ್ನು ಹಿಂತಿರುವಿ ಪರಿವಾರಕ್ಕೆ ಬೆರಳಿನಿಂದ ಸಂಕೇತಮಾಡಲು ಎಲ್ಲರೂ ದುಃಖವನ್ನಡಗಿಸಿಕೊಂಡರು.

ವೀರಣ್ಣೊಡೆಯನು ಜಂಗಮನನ್ನು ಅರ್ಘ್ಯ ಪಾದ್ಯಾದಿಗಳಿಂದ ಸತ್ಕರಿಸಿ ಒಳಗೆ ಕರೆತಂದು ಆಸನ ದಿಂಬುಗಳಿರಿಸಿ ಕೂಡ್ರಿಸಿದನು. ಹಾಗೆಯೇ ಒಳಗೆ ಬಂದು. ನೋಡಿದಿರಾ! ಶಿವನೇ ಮೂರ್ತಿಗೊಂಡಂತಿರುವ ಜಂಗಮನು ಹಸಿದು ಬಂದಿದ್ದಾನೆ, ಮುಂದೇನು ಮಾಡುವುದು?

ಕೂಡಲೆ ಶಿವನಿಚ್ಛೆಯಂತೆ ಇಹಯಾತ್ರೆಯನ್ನು ಮುಗಿಸಿ ಹೊರಟವನಾಗಿ ಚಿಂತಿಸಿ ಫಲವೇನು! ಎಂದು ಪತ್ನಿಯು. ಮರಳಿ ಕರೆತರಲು ಸಾಧ್ಯವೇ! ಎಂದು ಮಗನು. ಪ್ರಾತಿನಿಧ್ಯವನ್ನು ಮುಗಿಸಿ ಹೊರಟವರಿಗಾಗಿ ಚಿಂತಿಸಲುಂಟೇ! ಎಂದು ಸೊಸೆಯು. ನಡೆದು ಜಂಗಮ ಸತ್ಕಾರದ ನಂತರ ಮುಂದಿನ ವಿಚಾರವೆಂದು ಎಲ್ಲರೂ ಕೈಗೂಡಿ, ಶವವನ್ನು ಸುಖಾಸನದಲ್ಲಿ ಕುಳ್ಳಿರಿಸಿ, ಎಡಗೈಯಲ್ಲಿ ಅವನಿಷ್ಟಲಿಂಗವನ್ನಿರಿಸಿ, ಬಲಗೈಯಿಂದ ಲಿಂಗವನಾಚ್ಛಾದಿಸಿ ಶಿವಾರ್ಚನೆಯ ಗೃಹದ ಬಾಗಿಲೆಳೆದುಕೊಂಡು ಬಂದು ಮೊದಲಂತೆ ಅತ್ತೆಸೊಸೆಯರು ಅಡಿಗೆಗೆ ತೊಡಗಿದರು. ಶಿವಲಿಂಗೊಡೆಯನು ಬಂದ ಜಂಗಮಕ್ಕೆ ಪೀಠ ಮೊದಲಾಗಿ ಪೂಜೆಯ ಸಾಮಗ್ರಿಗಳನ್ನು ಸಿದ್ಧಪಡಿಸತೊಡಗಿದನು. ವೀರಣ್ಣೊಡೆಯನು ಬಂದ ಜಂಗಮನಿಗೆ ಚಮರಿಯಿಂದ ಗಾಳಿಹಾಕಹತ್ತಿದನು. ತುಸುಹೊತ್ತಿನಲ್ಲಿ ಜಂಗಮನು ಮಾರ್ಗಾಯಾಸದಿಂದ ಬಳಲಿದವನಂತೆ ನಟಿಸಿ, ದಿಂಬಿನ ಮೇಲುರುಳಿ ಕಣ್ಣು ಮುಚ್ಚಿ ಅಂತರ್ಹಿತನಾಗಿ ಅಡಗಿಸಿಕೊಂಡಿರುವ ಪಾರ್ವತಿಯನ್ನು ಕುರಿತು— ನೋಡಿದೆಯಾ? ಭಕ್ತರ ಇರವನ್ನು! ಸುಮ್ಮನೆ ಇರುವವಳಲ್ಲ ನೀನು! ನಿನ್ನ ಕವಣೆಗೊಳ ಪಟ್ಟಿಂದಾದರೂ ಜಂಗಮ ಸೇವೆಗೆ ಕುಂದಿದರೇ? ನಿನ್ನದನ್ನು ನೀನೆ ಸಂಪಡಿಸು, ನನ್ನನ್ನು ಬಯಲಿಗೆ ತರಬೇಡ.

ಅವ್ಯಕ್ತ ಪಾರ್ವತಿ—ಸ್ವಾಮಿ! ಅವರ ಮಾಕೃತಿಗಳಿಂದೇನು ಅವರ ಅಂತರಾಳವನ್ನು ಅರಿಯ ಬಯಸುತ್ತೇನೆ. ಬಯಕೆ ಬಯಲು (ಬಯಕೆ ಪೂರ್ತಿಯಿಂದುಂಟಾಗುವ ನಿವೃತ್ತಿ) ಗಂಗಾಧಾರನು ನೀನೆ!

ಇಷ್ಟರಲ್ಲಿ ತಯಾರ ಎಂಬ ಧ್ವನಿಯಾಯಿತು.

ಚಮರೀ ಸೇವೆಯಲ್ಲಿ ಆನಂದಪರವಶನಾದ ವೀರಣ್ಣೊಡೆಯನು ಭಾನಗೊಂಡು ಜಂಗಮನನ್ನು ನಿರೀಕ್ಷಿಸಿದನು. ನಿದ್ರೆಯ ಅವಸ್ಥೆಯಲ್ಲಿದ್ದ ಜಂಗಮನ ಎದುರಿನಲ್ಲಿ ನಿಂತು, ಸ್ಥಿರಚರವೆಲ್ಲ ವ್ಯಾಪಿಸಿದ ವಿಭುವೇ, ಜಂಗಮಮೂರ್ತಿಯಾಗಿ ಬಂದಿಹ ಪ್ರಭುವೇ, ಯೋಗ ಸಮಾಧಿ ಗಮ್ಯ

ಯೋಗೀಶ್ವರ ಶಿವನೇ ಭೋಃ ಪರಾಕ್ (ಗುರುಜಂಗಮರನ್ನು ಯೋಗ ಸಮಾಧಿಯಿಂದ ಕೆಳಗೆ ತರಿಸುವ ನುಡಿಯು) ಭೋಃ ಪರಾಕ್ ಎಂದು ಎಲ್ಲರೊಂದೇ ಧ್ವನಿಯಿಂದ ಘೋಷಿಸಿದೊಡನೆ ಜಂಗಮನು ಕಣ್ತೆರೆದನು.

ಜಂಗಮನನ್ನು ಕರೆತಂದು ಪೀಠದಮೇಲೆ ಕೂಡ್ರಿಸಿ ವೀರಣ್ಣೊಡೆಯನು ಪಾದಪೂಜೆಯನ್ನು ಮಾಡಿದನು. ಶಿವಲಿಂಗನು ಪಾದೋದಕದಿಂದ ಎಲ್ಲವನ್ನೂ ಶುಚಿಗೊಳಿಸಿದನು. ಮಾತ್ರ ಪ್ರಮಾದದಿಂದಲೋ ಜಂಗಮನಿಗೆ ವಿಕಲ್ಪ ಉಂಟಾಗಬಾರದೆಂತಲೋ ಶಿವಾರ್ಚನೆಯ ಕೋಣೆಯ ಬಾಗಿಲು ತೆರೆಯಲಿಲ್ಲ. ಜಂಗಮ ತೀರ್ಥ ಸ್ವೀಕರಿಸಿ ಎಲ್ಲರೂ ಪವಿತ್ರರಾದರು. ಮತ್ತು ಜಂಗಮಾರೋಗಣೆಯ ಕಾರ್ಯಕ್ಕೆ ಸನ್ನದ್ಧರಾದರು.

ಆಗ ಜಂಗಮನು– (ಶಿವನು ಪಾರ್ವತಿಯ ಮಾತನ್ನು ನೆನಪಿಗೆತಂದು) ಜಂಗಮಾರೋಗಣೆಗೆ ಇದು ಉಚಿತವೇ? ಜೊತೆಗೆ ಭಕ್ತರಿಲ್ಲದೆ ಈ ಜಂಗಮನಿಗೆ ತೃಪ್ತಿಯಾಗದು, ಎನಲು ಕೂಡಲೆ ಮಗನು ತಂದೆಗಾಗಿ ಕೂಡ್ರಲು ಪೀಠವನ್ನು ಹಾಕಿದನು. ಮರಳಿ ಜಂಗಮನು ಶಿವಲಿಂಗೊಡೆಯನನ್ನು ಕುರಿತು— ನಿನಗಾಗಿ ಬೇಡವೇ ಎನಲು, ಮಹದೇವಿಯಕ್ಕಳು ಮುಂದು ಮಾದು ಮೈದುನನಿಗಾಗಿ ಪೀಠವನ್ನು ಹಾಕಿದಳು. ಜಂಗಮನ ಜೊತೆಗೆ ತಂದೆ ಮಗ ಇಬ್ಬರೂ ಕೂತುಕೊಂಡರು. ಮಹದೇವಿಯಕ್ಕಳು ಮೂವರಿಗೂ ಅಡಿಯಣಿಗೆ (ಅಡ್ಡಣಿಗೆ) ಗಳನಿಟ್ಟು ಅವುಗಳ ಮೇಲೆ ಚನ್ನಾಗಿ ಉಜ್ಜಿದ ಹೊಳೆಯುಳ್ಳ ಹರವಾದ ಅಂಚಿನ ಬೆಳ್ಳಿಯ ತಟ್ಟೆಗಳನ್ನಿರಿಸಿದಳು. ಹಾಗೂ ಉಪ್ಪು, ಉಪ್ಪಿನಕಾಯಿ, ಚಟ್ನಿ, ಕೋಸಂಬರಿ, ಪಲ್ಯಗಳ ಸಜ್ಜುಗೊಳಿಸಿ ಅತ್ತೆಯು ಕೈಯಲ್ಲಿ ಹಿಡಿದುಕೊಂಡಿರುವ ಪಂಚಪಾತ್ರೆಯನ್ನು ತನ್ನ ಕೈಗೆ ತೆಗೆದುಕೊಂಡು, ಬಳಸಲು ಬರುತ್ತಿರುವಾಗ ಅಕ್ಕಳ ಹಣೆಯ ವಿಭೂತಿ (ಶಿವನ ವೈನೇಳಗು) ತನ್ನ ಹೃದಯದಲ್ಲಿರುವ ಎನ್ಗಳವಾದ ಕಂಕುಮದ ಬಟ್ಟು (ಶಿವನೊಡನೆ ಬೆರೆತು ಇರುವ ಪಾರ್ವತಿಯ ಅನುರಾಗ) ಇವುಗಳು ಶಿವನು ಸಾಂಬನೆಂದು ತಿಳಿಸುವಂತಿದ್ದವು. ಅಕ್ಕನನ್ನು ನೋಡಿ ಜಂಗಮನು—ಇವಳು ನಿನ್ನ ಮಗಳೇ?

ಅಲ್ಲ ಬುದ್ಧೀ ಇವಳು ನನ್ನ ಸೊಸೆ.

ಜಂಗಮನು ಶಿವಲಿಂಗೊಡೆಯನ ನಿರಖಿಸುತ್ತ ಹಾ! ಇದೇನು ಇವನು ಚಿಕ್ಕವನು!

ಆಗಮಾತ್ರ ವೀರಣ್ಣೊಡೆಯನ ಕಣ್ಣುಗಳಿಂದ ತಡೆಯದೆ ಬಿಸಿಲಿನ ಮಳೆಯಂತೆ ಹನಿಗಳುದುರಿದವು. ಜಂಗಮನು ಮಹಾದೇವಿಯಕ್ಕಳ ಕಡೆಗೆ ಕೈಮಾಡಿದೊಡನೆ ಕೈಕಂಭದ ಚಾಚಿದ ಕೈಯಿಂದ ಬಾಗಿಬಂದಿಯು ತಡೆದು ನಿಲ್ಲುವಂತೆ ಅಕ್ಕಳು ಅಲ್ಲಿಯೇ ಗಕ್ಕನೆ ನಿಂತುಕೊಂಡಳು. ಜಂಗಮನು ಮೋರೆಯನ್ನು ಕಿವುಚಿ (ಸಂಕೋಚಿತ ಮಾಡಿ) ಇಂದು ನಮಗೆ ಯಾವ ಪಾಪ ಎದುರಾದನೋ! ಅಂತೆಯೇ ನಮಗೆ ಕಣ್ಣೀರೊಳಿಸುತ್ತ ಜಂಗಮಾರೋಗಣೆಯ ಮಾಡುವ ಭಕ್ತನ ಮನೆ ಸಿಕ್ಕಿದುದು. ಏನು ವಿಚಿತ್ರ! ಈ ಸೌಭಾಗ್ಯವತಿಯನು ಎಲ್ಲಿಂದ ಸೆರೆಹಿಡಿದು ತಂದಿರುವಿ ನೈಜವನ್ನು ನುಡಿ?

ಪ್ರಭೋ! ಇವಳು ನನ್ನ ಸೊಸೆ, ಹಿರಿಯ ಮಗನ ಹೆಂಡತಿ. ಪರಮ ಪತಿವ್ರತೆಗೆ ಸೆರೆಯು ಬಂಧನವೇ! ಈ ಸಾಧ್ವಿಯ ಪತಿಯು ಶಿವಾರ್ಚನೆಯ ಕೋಣೆಯಲ್ಲಿ 'ಇಷ್ಟಲಿಂಗ'ದ ಪೂಜೆಯನ್ನು ಮಾಡಿಕೊಳ್ಳಲು, ಸುತ್ತಿಟ್ಟ ತನ್ನ ಆಸನದ ಸುರುಳಿಯನ್ನು ಉರುಳಿಸ ಹೋದಾಗ ಅವನ ಕರೆ ಬಂದುದರಿಂದ ಲೌಕಿಕ ರೀತಿಯಲ್ಲಿ "ಬಳಿಕೊಂದು ನೆವದಿಂದ' ಎಂಬಂತೆ ಸರ್ಪಕಚ್ಚಿದುದಂತ ಶಿವಸನ್ನಿಧಿಗೈದಿದನು. ಕ್ಷಣಮಾತ್ರ ಅವಕಾಶ ಸಿಕ್ಕಿದ್ದರೆ ಅವನ ದೂತರನ್ನು ತಡೆದು, ನಮ್ಮೊಂದಿಗೆ ಜಂಗಮಾರೋಗಣೆಯಲ್ಲಿ ಸೇವಾಭಾಗಿಯಾಗಿ ಮುಗಿಸಿ, ಶಿವನೆಡೆಗೈದುವ ಧೀರ! ಪರಮ ವೀರ!! ಆತನ ನೆಂಪುಗೊಂತು

ಸಾಕು! ಈ ಡಂಭಕತನದ ಮಾತು ಬಿಟ್ಟು ತೋರಿಸಾದೃಶ್ಯವನು. ಜಂಗಮನು ಸಹಿತ ಎಲ್ಲರೂ ಶಿವಾರ್ಚನೆಯ ಕೋಣೆಯೊಳಗೆ ನೆರೆದಿದ್ದಾರೆ. ಲಿಂಗವನ್ನು ಕೈಯಲ್ಲಿ ಹಿಡಿದು ಬಲಗೈಯಿಂದ ನಿರ್ಮಾಲ್ಯವನೆತ್ತುವ ರೀತಿಯಲ್ಲಿ ಕೂತಿರುವ ಮಂತ್ರಮಯ ಶರೀರವನ್ನು ಕಂಡು—ಮೋಸದ ಮಸೆ ಡಾಂಭಿಕ ಭಕ್ತಿಯ ಪರದೆಯ ಒಳಗೆ ಕುತಂತ್ರವನ್ನು ಹೂಡಿರುವವರ ಗುಂಪು, ಎಂದು ರೌದ್ರಾವೇಶದಿಂದ ಘುಡುಘುಡಿಸಿ, — ದುಷ್ಟಾ, ನೀಚ ಅಧಮಾಧಮಾ, ಲಿಂಗಕಟ್ಟಿದ ಕಟುಕನೇ! ಮಗನ ಮೃತಶರೀರವನ್ನು ಮನೆಯಲ್ಲಿಟ್ಟುಕೊಂಡು ಜಂಗಮನೊಡನೆ ಸಾಗ್ರಾಸ ಭೋಜನೆಗಾಗಿ ಆನಂದದಿಂದ ಕೂಡ್ರುವ ನೀನು ತಂದೆಯೋ?

ಬುದ್ಧೀ! ತಾವು ಜಗದ ಜೀವಿಗಳಿಗೆಲ್ಲ ಆಶ್ರಯಸ್ಥಾನರು. ತಮ್ಮ ಆಶ್ರಯದಿಂದ ದೂರಾಗಿ ನಾವುಗಳು ಜೀವಿಸುವುದೆಂತು! ರೋಷವನ್ನಡಗಿಸಿ ಶಾಂತರಾಗಿರಿ, ದಯೆಯ ದೃಷ್ಟಿ ಬೀರಿರಿ.

ಪ್ರಪಂಚವೆಂಬ ಧರ್ಮಶಾಲೆಯಲ್ಲಿ ಎಲ್ಲೆಲ್ಲಿಂದಲೋ ಯಾತ್ರಾರ್ಥಿಗಳು ಬಂದಿಳಿಯುವರು. ಬಂದವರಲ್ಲಿ ಕೆಲವರು ಮುಂದೆ ಕೆಲವರು ಹಿಂದೆ ಆಗಿ ತಮ್ಮ ತಮ್ಮ ಜಾಗೆಯನ್ನು ತೆರವು ಮಾಡಿದಂತೆ ನಾವು ಸಹ ನಮ್ಮ ಜಾಗೆಯನ್ನು ತೆರವುಮಾಡಬೇಕು. ಅದಕಾಗಿ ಯಾರು ಯಾರಿಗೋಸ್ಕರ ದುಃಖಿಸುವುದು? ಇನ್ನು ಲೌಕಿಕ ದೃಷ್ಟಿಯಿಂದ ಊಟಕ್ಕೆ ಕರೆದದ್ದು ಅನುಚಿತವೆನಿಸಬಹುದು. ಆದರೆ ಅತಿಥಿಯಾದ ಜಂಗಮನು ಶಿವಸ್ವರೂಪನೆಂದರಿದು ತಮ್ಮಿಚ್ಛೆಯಂತೆ ನಡೆದುಕೊಳ್ಳುವುದೇ ಔಚಿತ್ಯವೆನಿಸಿ ಹಾಗೆ ಮಾಡಿದೆನು. ತಪ್ಪಿದ್ದರೆ ಕ್ಷಮಿಸುವುದೆಂದನು.

ಜಂಗಮನು- ಮನಸಾ ಸಂತುಷ್ಟನಾದರೂ ಕೋಪವನ್ನಡಗಿಸದೆ ಸುಮಂಗಲಮ್ಮ ( ವೀರಣ್ಣೊಡೆಯನ ಹೆಂಡತಿ ) ನ ಕಡೆಗೆ ಮುಖತಿರುವಿ ತಾಯೀ! ನಿನಗೆ ತಾಯಿಯೆನಬಹುದೇ? ನವಮಾಸ ಬಸುರಿನಲ್ಲಿ ಹೊತ್ತು, ಬಾಲ್ಯದ ಬಳಲಿಕೆಯಲ್ಲಿ ಹಲವು ಹರಕೆಗಳ ತೆತ್ತು, ಜೋಪಾನ ಮಾಡಿ, ಅಕ್ಕರೆಯಿಂದ ಮದುವೆ ಮಾಡಿ, ಸತಿಸಹಿತ ಮಾತೃಸೇವೆಗಣಿಯಾದ ಮಗನನ್ನು ಕಳೆದುಕೊಂಡು, ದುಃಖಿಸದಿರುವ ತಾಯಿ ಎಲ್ಲಿಯಾದರೂ ಸಿಕ್ಕುವಳೇ? ತಾಯಿರೂಪೀ ಮಗುವಿಗೆ ವಿಷವೆರೆದು ಊಬ್ಬಿನಿಂದ ಹಾಲು ಕುಡಿವ ಮಾರಿಯೋ! ಮಗುವಿನ ಶವವು ಮನೆಯಲ್ಲಿರುವಾಗ ಅತಿಥಿ ಜಂಗಮಕ್ಕೆ ಭೋಜನ ಮಾಡಿಸುವ ಚಕ್ಕಂದದ ಸವಿಗಲಿತ ನಿನ್ನನ್ನು ಕಂಡು ಜಿಗುಪ್ಸೆಯಾಗುತ್ತದೆ.

ಸುಮಂಗಲಮ್ಮನು ತಂದೆಯೇ! ಮಗಳ ನಡತೆ ಕೊಂಕಾದರೆ ತಂದೆಗೆ ರೋಷ ಬರುವದು ಸಹಜ. ಅದರಲ್ಲಿ ಮೂಢತೆಗೆ ಆಸ್ಪದ. ನೀವೇ ಹೇಳಿ! ಮಗನೆಂದು ಪ್ರೀತಿಸುವುದು ಜೀವಕ್ಕೋ ಶರೀರಕ್ಕೋ? ಶರೀರಕ್ಕೆ ಪ್ರೀತಿಸುವುದಾದರೆ ಶರೀರವಿನ್ನೂ ಇದೆ, ದುಃಖಿಸುವ ಕಾರಣವಿಲ್ಲ. ಜೀವಕ್ಕಾದರೂ ಜೀವವು ದೃಶ್ಯ ವಸ್ತುವಲ್ಲ. ಆದರಿಂದ ಪ್ರೀತಿಸಲು ಬರುವದಲ್ಲ. ಎರಡರ ಸಂಯೋಗವನ್ನು ಪ್ರೀತಿಸುವುದೆಂದರೆ ಈ ಸಂಯೋಗ ವಿಯೋಗದ ಕಾರ್ಯ ಅರ್ಥಾತ್ ಇಷ್ಟಬಂದಾಗ ಶರೀರದೊಡನೆ ಬೆರೆತು ಕೊಳ್ಳುವ ಹಾಗೂ ಅಗಲುವ ಅಧಿಕಾರ ಇದನ್ನು ಪಡೆದವರುಂಟೇ? ತಮ್ಮ ತಮ್ಮ ಕರ್ಮ ವಿಪಾಕದ ಫಲ ಭೋಗಕ್ಕಾಗಿ ಈಶದತ್ತ ಶರೀರ, ಭೋಗಕಾಲ ಕ್ಲುಪ್ತಿಗೊಳಪಟ್ಟವರೇ ಎಲ್ಲರೂ. ಈಗ ಆಪನು ಈಶದತ್ತ ಅವಧಿ

ಯನ್ನು ಮುಗಿಸಿ ಹೋದಂತೆ ನಮ್ಮ ಅವಧಿಯನ್ನು ಮುಗಿಸಿ ನಾವೂ ಹೋಗಲೇ ಬೇಕು ಹೀಗಿರುವಾಗ ಯಾವುದಾದರಲ್ಲಿ ನಮಗೆ ಅಧಿಕಾರ ವಿಲ್ಲವೋ ಅದಕ್ಕಾಗಿ ಶೋಚಿಸಿ ಫಲವೇನು! ಜೀವಿಗಳಾದ ಸ್ತ್ರೀಪುರುಷ ರಿಗೆ ನಮಗೆ ಸಂಪ್ರದಾಯಕ್ಕನುಸರಿಸಿ ಈಶ-ಗುರು ಭಕ್ತಿಪರರಾಗಿ ಅತಿಥಿ-ಜಂಗಮಸೇವೆಯಲ್ಲಿ ನಿಷ್ಠಾವಂತರಾಗಿರುವುದು ಧರ್ಮ. ಅದರಿಂದ ಸಂಪ್ರ ದಾಯ ಹಾಗೂ ಮನೆತನದ ಕೀರ್ತಿಗೆ ಕುಂದು ತರದಂತೆ ಜಂಗಮ ತೃಪ್ತಿಗೋಸುಗ ಪತಿದೇವನಿಗೆ ಸಹಕರಿಸುವದನ್ನು ಬಿಟ್ಟು 'ಇಕ್ಕಲಾರದ ಕೈ ಎಂಜಲು' ಎಂಬಂತೆ ಕುಂಟು ನೆವ (ಶಿವನೆಡೆಗೈದಿದ ಮಗನ) ದಿಂದ ಜಂಗಮ ವಿಮುಖತೆಗೆ ಎಡೆಯುಂಟಾಗಬಾರದೆಂದು ಸಿದ್ಧಳಾದುದು ತಪ್ಪೇನು!

ಜಂಗಮನೆ ಆನಂದವು ಇಮ್ಮಡಿಸಿತು. ಆದರೂ ಕೋಪವನ್ನು ಹಿಂಗಿ ಸದೆ ಶಿವಲಿಂಗನನ್ನು ಕುರಿತು- ಜನ್ಮತಃ ನೀನು ಅವನನ್ನು ಒಪೆಯುತ್ತ ಬಂದಿರುವಿ. ಇದೀಗ ತಾರುಣ್ಯದಲ್ಲಿ ಕಾಲಿಡುವ ನೀನು ಈ ವರೆಗೆ ಪೂರ್ವಾ ಪರ ಪ್ರಾಪ್ತ ಭೋಗದೊಡವೆಗಳಲ್ಲಿ ಅಣ್ಣನೊಡನೆ ಪಾಲುಗಾರನಾಗಿದ್ದೆ. ಈಗ ಸರ್ವವೂ ನನ್ನದೇ ಆಯಿತೆಂಬ ಉಬ್ಬಿನಲ್ಲಿದ್ದ ನಿನಗೆ ಶೋಕವೆಲ್ಲಿಯದು ಮೂಢಾ, ಸ್ವಾರ್ಥಿ ಪಾಪಾತ್ಮಾ!

ಇನ್ನೂ ಏನೇನನ್ನೋ ಬಯ್ದು ದೂರುತ್ತಿರುವಾಗಲೇ ಶಿವಲಿಂಗನು ಕೈ ಮುಗಿದು ನಿಂತುಕೊಂಡು ಆರ್ಯಾ! ನಾನು ಚಿಕ್ಕವನು. ತಮ್ಮನ್ನು ಸಂತೈಸುವುದನೇನು ಬಲ್ಲೆ! ತಾವು ಹಲವು ತಪ್ಪುಗಳನ್ನು ನನ್ನ ಮೇಲೆ ಹೊರಿಸಿರಿ. ಆದರೆ ಸಂಸಾರದಲ್ಲಿರುವ ವಸ್ತುಗಳು ಯಾರಸೊತ್ತು? ಅಪ್ಪ ಬಿಟ್ಟುದದನ್ನು ಮಗನು, ಮಗನು ಬಿಟ್ಟುದುದನ್ನು ಮೊಮ್ಮಗನು. ಇವ ರಲ್ಲಿ ಯಾರೂ ಬರುವಾಗ ತಂದಿಲ್ಲ, ಬಂದಮೇಲೆ ಪಡೆದುದನ್ನು ಒಯ್ಯು ವಂತಿಲ್ಲ, ಬಿಟ್ಟೇ ಹೋಗಬೇಕು. ಇನ್ನು ಅಣ್ಣತಮ್ಮರ ಸಂಬಂಧ-ಜೀವರು ಹಲವು ಶರೀರಗಳನ್ನು ಹೊತ್ತವರು. ಯಾರು ಯಾರ ಅಣ್ಣ ಯಾರ ತಮ್ಮ ಜನನದ ಮುಂಚೆ ಅಣ್ಣ-ತಮ್ಮ, ತಂದೆ-ಮಾವ, ಶತ್ರು-ಮಿತ್ರ ಯಾರಾದರೂ ಆಗಿರಬಹುದು. ಎಲ್ಲವೂ ಆಯಾ ಶರೀರವಿರುವ ವರೆಗೆ ಮಾತ್ರ. ಶರೀರವು ಮರೆಯಾದರೆ ಸಂಬಂಧವಿರದು.

ಪ್ರಪಂಚವು ಒಂದು ಸಂತೆ. ಮಾರಲು ಕೊಳ್ಳಲು ಜನರು ನೆರೆ ಯುವರು. ಮಾರುವವನ - ಮಾರಾಟ, ಕೊಳ್ಳುವವನ - ಕೊಳ್ಳುವಿಕೆ,

ತುಗಿದು ಹೊರಟು ಹೋದರೆ ಚಿಂತಿಸುವರುಂಟೇ? ಶಿವನಪ್ಪಣೆಯೇ ಜಂಗಮನಪ್ಪಣೆಯೆಂದು ಊಟಕ್ಕೆ ಕುಳಿತೆ, ದೋಷವಿದ್ದರೆ ಶಿಕ್ಷೆ ವಿಧಿಸಿರಿ.

ಉಕ್ಕಿದ ಆನಂದದಿಂದ ಜಂಗಮನು ಶಿವಲಿಂಗನನ್ನು ಎದೆಗಪ್ಪಿಕೊಳ್ಳಲು ತವಕಿಸಿದನು ಅವ್ಯಕ್ತ ಪಾರ್ವತಿಯು ಒಳಗಿನಪ್ಪಿಯೇ ಚಿಮಟಿಗೆ ಇಟ್ಟು ಎಚ್ಚರಿಸಿದಳು. ಕೂಡಲೇ ಜಂಗಮನು ಮಹದೇವಿಯಕ್ಕಳ ಕಡೆಗೆ ನೋಡಿ - ಮಗಳೇ! ಇವರಂತೂ ಕಟುಕರು. ಇವರ ವರ್ತನಕ್ಕಾಗಿ ನಿನಗೆ ಜಿಗುಪ್ಸೆಯುಂಟಾಗುವಬದಲು ನೀನು ಅವರಿಗೆ ಸಹಕರಿಸಿರುವಿ. ಅದರಿಂದ ನಿನ್ನ ಸತೀತ್ವದ ವಿಷಯವಾಗಿ ಸಂಶಯ ಉಂಟಾಗುವದು. ಸ್ತ್ರೀಗೆ ಪತಿಯೇ ಪರದೈವ, ಪತಿವಿರಹಿತ ನಾರಿಯ ಜೀವನ ನೀರಿಲ್ಲದ ಮೀನಿನಂತೆ! ನೀನು ಸತ್ಕುಲ ಜಾತಳಾಗಿ ತೋರುವಿ ಆದರೆ ಅದಕ್ಕನುಗುಣವಾದ ವರ್ತನೆ ಇಲ್ಲದಿರುವದೆಂತು? ಪಾಪಿಗಳ ಸಂಸರ್ಗದಿಂದ ಪತಿಸ್ತ್ರೀ ಮತಿ ವಿಭ್ರಮಗೊಂಡಂತಿದೆ! ಪತಿ ವಿಯೋಗದಿಂದ ಎಡರು ದೂರಾಯಿತೆಂದು ಭಾವಿಸಿರಲಿಕ್ಕಿಲ್ಲವಷ್ಟೇ?

ಶಿರತಗ್ಗಿಸಿ ನಿಂತ ಮಹದೇವಿಯಕ್ಕಳಿಗೆ ಶಬ್ದಗಳು ಕರ್ಣದಲ್ಲಿ ಶೂಲವನಿಂದಂತಾಗುತ್ತಿದ್ದವು. ಆದರೂ ಅವು ಜಂಗಮ ಮುಖದಿಂದ ಹೊರಟದ್ದರಿಂದ ಸಹನೆಗೊಂಡವಳಾಗಿ, ತಂದೆಯೇ! ನೀನು ಶಿವರೂಪನೆಂಬುದೇ ಸತ್ಯ. ನೀನು ಗಣೇಶ ( ಬಸವಣ್ಣನಲ್ಲಿದ್ದ ಗಣಪತಿಯು ಸಹ ಆಗಿದನು ) ಷಣ್ಮುಖ ವೀರಭದ್ರರಿಗೆ ಜನ್ಮದಾತನಾದಂತೆ ಬಾಲೆಯರಿಗೆ ಜನ್ಮವಿತ್ತಿದ್ದರೆ ನೀವಿಷ್ಟು ತಿರಸ್ಕರಿಸುತ್ತಿದ್ದಿಲ್ಲ. ಇನ್ನು ನೀನು ನಿನ್ನ ವ್ಯಾಪಕ ಗರ್ಭದಲ್ಲಿ ಜನ್ಮವಿತ್ತ ಸಂಖಿ, ವೀರೆ, ಜನ್ನ, ಮಹದೇವಿಯಕ್ಕ ಮುಂತಾದ ಅಕ್ಕಗಳಿಗೆ ಬಳಲಿಸಿದುದು ಜಗ ಡಂಗುರವಾಗಿದೆ. ಸಾಲದುದಕ್ಕೆ ನನ್ನನ್ನು ಬಳಲಿಸಲತ್ನಿಸುವೆಯಾ! ಜಂಗಮನಾದರೇನು ಅವ್ಯಾಯನಕ್ಕೆ ನೀಡುವೆ. ಆದರೆ ಮೊದಲು ನಿನ್ನ ಮಾತುಗಳನ್ನು ಖಂಡಿಸುವೆ.

ಬ್ರಹ್ಮಮೊದಲಾಗಿ ಜಗದ ಜೀವಿಗಳೆಲ್ಲರೂ ಸ್ತ್ರೀಯರೇ (ಮೊಲೆಗಳೆ ದೇವುದೇ ಸಾಕ್ಷಿ) ಆ ಜೀವಿಗಳಿಗೆ ಪತಿಯಾದ ಪರಮಪತಿಯನ್ನು ಹೊಂದುವುದಕ್ಕೆಂದು ಲೌಕಿಕದ ಪತಿಯನ್ನು ಆತನ ಪತಿರೂಪವೆಂದು ಭಾವಿಸಿ, ಪೂಜಿಸಿ, ಸೇವಿಸಿ, ಆಜ್ಞಾನುರೂಪ ವರ್ತಿಸಿ ಆತನಿಗೆ ತುಷ್ಟಿಯನ್ನುಂಟು ಮಾಡುವುದು ಧರ್ಮವಾಗಿತ್ತು, ಇದರಲ್ಲಿ ನಾನು ಕುಂದು ತಂದುಕೊಂ

ಡಿಲ್ಲ. ಸತಿ ಶಿರೋಮಣಿಯೆಂದೆನಿಸಿದ ಪಾರ್ವತಿಯು ಆಜ್ಞೆಯನ್ನು ಮೀರಿ ದಳು. ಲೆತ್ತದ ಕಾಯಿಯನ್ನು ಪತಿಯು ಹಣೆಗೆಸೆದು ಬುಗುಟೆಯನ್ನುಂಟು ಮಾಡಿದಳು (ಅನ್ಯಕ್ತ ಪಾರ್ವತಿಯು ನಡುಗಿದಳು) ಹಾಗೆ ಎಂದೂ ಯಾವ ಪ್ರಮಾದವೂ ನನ್ನಲ್ಲಿ ಕಾಣದಿರುವವುದರಿಂದ, ಶಿವ (ಮಂಗಲ) ಭಾವದ ಪತಿಯು ನನಗೆ ತನ್ನ ಅಧಾ೯ಂಗಿಯೆಂದು ಭಾವಿಸಿದ್ದನಲ್ಲದೆ, ಒಮ್ಮೆಯೂ ತುಚ್ಛಭಾವನೆಯಿಂದ ಕಾಣಲಿಲ್ಲ. ಇದಲ್ಲದೆ ಇಷ್ಟ ಲಿಂಗಪೂಜೆ ಯಲ್ಲಿ ನನಗೆ ಸಹಕಾರಿಯಾಗಿ ನಾನೇ ತಾನಾಗಿ ವರ್ತಿಸಿರುವದರಿಂದ, ಅರ್ಧಾಂಗಿ ಪದಕ್ಕೆ ಸಲ್ಲದ ನನ್ನ ಭಾಗ್ಯಕ್ಕೆ ಎಣೆಯಿಲ್ಲ. ತೊಂದರೆ ಪಡಿ ಸಿದ ಕೌಶಿಕನನ್ನು ಜರಿದು ಲೋಗನ ಗಂಡರ ನೋಲೆಯೊಳಗಿಕ್ಕಲೆಂದಂಥ ಅಕ್ಕ ಮಹದೇವಿಯ ಗರತಿಯೂ ನನಗೆ ಬರಲಿಲ್ಲ. ನನ್ನತ್ತೆ-ಮಾವಂದಿರು ಪತಿಭಕ್ತಿ ಲಿಂಗನಿಷ್ಠೆಗಳಲ್ಲಿ ನನಗೆ ಸಹಕರಿಸಿದರು ಮೈದುನನಾದರೋ ಸೀತೆಗೆ ಲಕ್ಷ್ಮಣನಂತೆ! ಹೀಗೆ ಪವಿತ್ರಾತ್ಮದಿಂದ ಬೆರೆದ ಈ ಮನೆಗೆ ಕೈಲಾಸ ಸಾಟಿಯೇ? ಇದರಿಂದ ಪತಿಯ ವಂಶವನ್ನು ಜರೆಯುವ ಜಂಗ ಮನ ಬಾಯಿ ವಿಷನ ಇಂಗಿದನ (ನಂಜುಂಡನ ಬಾಯಿಯಾಗಿರಬೇಕು. (ಶಿವನು ತತ್ತರಿಸಿದನು) ನನ್ನ ತೌರು ಪವಿತ್ರವು. ನನ್ನ ಕಾಯ ತಂದೆಗಳ ಬಳು ಪವಿತ್ರವು. ಇದಕ್ಕೆ ನಾನೇ ಸಾಕ್ಷಿ, ಈ ನನ್ನ ಲಿಂಗವೇ ಸಾಕ್ಷಿ.

ಜಂಗಮನ ಕೊರಳ ಲಿಂಗವು ಆನಂದದಿಂದ ಲೋಲಾಡಿತು. ಅದನ್ನು ಜಂಗಮನು (ಶಿವನು) ಸಾವರಿಸಿ ಹಿಡಿಯಬೇಕಾಯಿತು. (ಶಿವ ಪಾರ್ವತಿ ಗಣೇಶರು ತತ್ತರಿಸಿದರು. ಶಿವಲಿಂಗವು ಮಾತ್ರ ಆನಂದ ತುಂದಿಲವಾಗಿ ಲೋಲಾಡಿತು) ಧನ್ಯ ಧನ್ಯ ಧನ್ಯ! ಇದೀಗ ಪತಿಯು ತನ್ನ ಆತ್ಮವನ್ನು ಶಿವನಲ್ಲಿ ಬೆರೆಯಿಸಿದ್ದಾನೆ. "ತುಂಭದ ಗಂಗೆಯು ಪೂಜಿಸುವವೇಳೆಗೆ ತುಂಬಿದ ಗಂಗೆಯು ದೊರೆತಂತೆ" ಪತಿ ಶರೀರದಲ್ಲಿ ವಾಸವಾದ ಶಿವ ನನ್ನು ಈಗ ಭೂಮಾ (ವ್ಯಾಪಕ) ರೂಪದಲ್ಲಿ ಕಾಣುತ್ತಿದ್ದೇನೆ.

ಲೌಕಿಕವೆಂಬುದೊಂದು ಶಿವನ ನಾಟ್ಯಶಾಲೆ. ಶಿವನಪ್ಪಣೆಯನ್ನು ತಾಳಿಸಿ ವೇಷ ಮಾಡುವವನೇ ನೈಜವಾದ ಕಲೆಗಾರ. ಕಲೆಗಾರನ ಹಾವ-ಭಾವ ನಟನೆಗಳೆಲ್ಲ ಶಿವನು ಸಂಕಲ್ಪಿಸಿದ (ಬರೆದ) ರೀತಿಯಲ್ಲಿಯೇ. ಜರುಗಿ ಮುಕ್ತಾಯವಾಗುವವು. ಇದೀಗ ಪತಿಯು ವೇಷ ಮುಗಿಯಿತು. ಈ ವರೆಗೆ ನನ್ನದು ಸಧವಾ-ವೇಷವಿದ್ದು ಇನ್ನೂ ವಿಧವಾ ವೇಷವಲ್ಲಿ ಪ್ರಾರ್ಥಿಸಲಿದ್ದೇನೆ. ವಿಧವೆ ವಿರಕ್ತ ವೇಷಗಳೆರಡೂ ಒಂದೇ ಮಾದು

ರಿಯಳು. ಪತಿಯನ್ನಗಲಿದ ಸ್ತ್ರೀಯು ಅರಿಷಿಣ, ಕುಂಕುಮ, ಕಾಡಿಗೆ, ಹೆರಳ ಸಿಂಗಾರ, ಬಿಳಿ ವಸ್ತ್ರ-ಭೂಷಣಗಳನೆಂದಿಗೂ ಸ್ಪರ್ಶಿಸಳು. ಅರ್ಥಾತ್ ವಿಲಾಸದ ವಸ್ತುಗಳನ್ನು ಬಳಸುವುದಿಲ್ಲ. ಸಾತ್ವಿಕ ಆಹಾರ ನಿದ್ರೆ, ಭಾಷಣ, ಜನಸಂಸರ್ಗಗಳಲ್ಲಿ ಮಿತಿಯಿಂದಿದ್ದು ಅನ್ಯಭವಿ (ಕೇವಲ ವಿಷಯ ಭೋಗಾಸಕ್ತ ಜೀವಿ) ಗಳ ಸಂಗವಿರಹಿತಳಾಗಿ ಗುರುಲಿಂಗಜಂಗಮ ಸೇವೆಯಲ್ಲಿರುವುದೇ ವಿಧವೆಗೆ ಉಚಿತವು. ವಿರಕ್ತನಿಗಾದರೂ ಇವೇ ಬೇಕು. ಇವುಗಳಿಲ್ಲದ ವಿರಕ್ತತೆ ವಿಧವೆಗಿಂತಲೂ ಕರಕಷ್ಟ. ನಾನೀಗ ಅಂತ್ಯಾಶ್ರಮಿಯು. ಶಿವಸಂಕಲ್ಪದಿಂದ ಒದಗಿದ ಈ ವೇಷವನ್ನು ಅದರ ಷ್ಟಣೆಯ ರೀತಿಯಲ್ಲಿ ನಡೆಸಿ ಪೂರ್ತಿಗೊಳಿಸಿ ಶಿವನಲ್ಲಿ ಬೆರೆದ ಪತಿಯನ್ನು ಕೂಡುವೆ. ಇದರಲ್ಲಿ ದುಃಖಕ್ಕೆ ಅವಕಾಶವೆಲ್ಲಿ? ಪ್ರಪಂಚ ರೀತಿಗನುಸಾರವಾಗಿ ಪತಿಯ ಅಂತ್ಯಸಂಸ್ಕಾರವನ್ನು ಮುಗಿಸದೆ ಬಳಿಕೆ ಭೋಜನಗಳಲ್ಲಿ ತೊಡಗಿರುವುದು ಅನ್ಯಾಯವೇನೋ ಸರಿ! ಆದರೆ ನನ್ನ ಉಭಯ ಕುಲಗಳಲ್ಲಿಯೂ ಅತಿಥಿ-ಜಂಗಮ ಸೇವೆಗೆ ಪ್ರಾಧಾನ್ಯತೆ ಇರುವುದರಿಂದ ಅತಿಥಿಯಾಗಿ ಬಂದ ಜಂಗಮನೊಂದು, ಮರಳಿ ಬಾರದೆಂಬ ಮೂಪಂದಿರ ಹೇತುವನ್ನನುಲಕ್ಷಿಸಿ, "ನದಿಯು ಡೊಂಕು ಸಮುದ್ರಕ್ಕೆ ಸಪಿಸ"ವೆಂಬ ಭಾವನೆಯಿಂದ ವರ್ತಿಸಿದೆನು. ಶಿವನೇ ಇದು ಅಪರಾಧವೇ?

ಅಕ್ಕಳ ಮಾತಿನಿಂದ ಜಂಗಮನಿಗಾದ ಆನಂದವು ಬಣ್ಣಿಸಲಸಾಧ್ಯ. ಅದನ್ನು ತೋರಗೊಡದೆ ಶಿವಸನ್ನಿಧಿಗೆ ಬಂದು, ತನ್ನ ಕಮಂಡಲದಿಂದ ಸಂಜೀವಿನಿಯಾದ ಗಂಗೆಯನ್ನು ಸಂಕಲ್ಪಿಸಿ, ಆ ಶವದ ಮೇಲೆ ಪ್ರೋಕ್ಷಣೆ ಮಾಡಲು ಸಿದ್ಧಲಿಂಗೊಡೆಯನು ಕಣ್ಣು ತೆರೆದು, ಲಿಂಗಪೂಜೆಗಾಗಿ ಕೂತವನಂತೆ ಲಿಂಗಪೂಜೆಗೆ ಅಣಿಯಾಗುವಷ್ಟರಲ್ಲಿ ಮುಂದಿದ್ದ ಜಂಗಮನನ್ನು ಕಂಡು "ಜಂಗಮ ಮುಂದಿರಲು ಲಿಂಗಪೂಜೆ ಎಂತಯ್ಯಾ" ಎಂಬ ಭಾವನೆಯಿಂದ ಲಿಂಗವನ್ನು ಕರಡಿಗೆಯೊಳಗಿರಿಸಿ ಜಂಗಮಕ್ಕೆ ಸಾಷ್ಟಾಂಗವೆರಗಿದನು. ಆಗ ವೀರಣ್ಣೊಡೆಯನ ಪರಿವಾರಕ್ಕಾದ ಆನಂದವು ಪ್ರಪಂಚವನ್ನೇ ಹಿಡಿಸದಂತಿತ್ತು.

ಪ್ರಣಾಮದಿಂದೆದ್ದು ಕೈಜೋಡಿಸಿ ನಿಂತ ಸಿದ್ಧಲಿಂಗೊಡೆಯನನ್ನು ಕುರಿತು ಜಂಗಮನು-ನಿನಗೆ ಸರ್ಪಕಚ್ಚಿದ ಹಾಗೂ ವಿಷವೇರಿ ಶರೀರವನ್ನು ಬಿಟ್ಟದರ ನೆನಪು ಇರುವುದಷ್ಟೇ? ನಿನ್ನ ಮರಣಾನಂತರದ ಘಟನೆಯನ್ನು ನಿನಗೆ ಪ್ರತ್ಯಕ್ಷ ತೋರಿಸುವ ಉದ್ದೇಶದಿಂದ ಭಕ್ತಹಿತಾರ್ಥವಾಗಿ ಸಂಚ

ರಿಸಿ ಘೋಷಿಸಿದ ಪುಣ್ಯವನ್ನು ಧಾರೆಯೆರೆದು, ಮೃತ್ಯು ಮುಖದಿಂದ ನಿನ್ನನ್ನು ಕಡೆಗೆ ತಂದಿದ್ದೇನೆ. ಇಗೋ ಇಲ್ಲಿ ಬಾ! ಎಂದು ಸಿದ್ಧಲಿಂಗೊಡೆಯನನ್ನು ಅಡಿಗೆಯ ಮನೆಯ ಪಕ್ಕದ ಊಟದಮನೆಗೆ ಕರೆತಂದು, ಇದು ನೋಡಿದೆಯಾ? ಜಂಗಮದ ಜೊತೆಗೆ ಊಟಕ್ಕೆ ಕೂಡ್ರುವ ನಿನ್ನ ತಂದೆ ಹಾಗೂ ತಮ್ಮನ ಪೀಠಗಳನ್ನು. ಹಾಗೂ ನಿನ್ನ ಸತಿಯು ಬಳಸಲಿಕ್ಕೆಂದು ತುಂಬಿ ತಂದ ಈ ಪಂಚಪಾತ್ರೆಯನ್ನು, ತಾನು ಮುಂದೆ ಕರೆದೊಯ್ದು ನಿನ್ನ ತಾಯಿಯು ಬಿಸಿ ಹೋಳಿಗೆಗಳನ್ನು ತಯಾರಿಸಲು ತುಪ್ಪ ಎರೆದ ಒಲೆಯಮೇಲಿನ ಬಾಣಲಿಯನ್ನು ನೋಡು. ಈಗ ಕಿಂಚಿತ್ತಾದರೂ ನಿನ್ನ ವಿಯೋಗದ ಚಿಂತೆ ಇದೆಯೇ? ಇಂಥ ಕ್ರೂರಿಗಳ ಜೊತೆಗೆ ಹೇಗೆ ಬಾಳುವೆ? ಪರಮಾಶ್ಚರ್ಯ!

ಸಿದ್ಧಲಿಂಗೊಡೆಯನ ಕಣ್ಣುಗಳಲ್ಲಿ ನೀರು ತುಂಬಿತು. ಕೋಡಿವರಿಯಿತು ಅವ್ಯಕ್ತ ಪಾರ್ವತಿಯು ಈಗ ನನ್ನ ಪರೀಕ್ಷೆಗೆ ಕಳೆ ಬಂದಿತೆಂದು ಹರ್ಷಗೊಂಡಳು. ಪಾರ್ವತಿಯು ಅರ್ಥವಿಲ್ಲದ ಉಬ್ಬುಸರಿತ ಬಸರಿನ ಗಣಪತಿಯು ಲೋಕ ಜನನಿಯ ಕಡೆಗೆ ಮುಖವೆತ್ತಿ ತಾಳ್ಮೆಗೊಳ್ಳು ಎಂಬ ಭಾವನೆಯಿಂದ ನೋಡಿದನು. ಕಂಠವು ಗದ್ಗದವಾಯಿತು. ರೋಮಾಂಚನಗಳಿದ್ದವು. ಆನಂದ ತುಂದಿಲನಾಗಿ ಜಂಗಮನನ್ನು ಕುರಿತು ಶಿವನೆ ಇದನೇನು ಮಾಡಿದೆ! ಇದು ಲಪನದ ಕ್ರಿಯೆಯೋ, ನಮ್ಮ ಮನೆತನದ ಕೀರ್ತಿಯು ಗಣದೊಡೆಯ (ಗಣೇಶ) ನಾದ ತಂದೆಯಿಂದಲೇ ಉಳಿಯಿತು. ಗಣಪತಿಯ ಅಪ್ಪಣೆಯನ್ನು ಪಾಲಿಸಿದದ ನನ್ನ ತಾಯಿ, ತಮ್ಮ ಪತ್ನಿ ಇವರುಗಳೆಲ್ಲ ಶಿವಗಣಗಳು ಇವರನ್ನು ನೆರೆಯಿಸಿಕೊಂಡಿದ್ದ ಜಂಗಮನು ಶಿವನು. ಗಣದಲ್ಲಿ ಕೂಡಿದ ಮೇಲೆ ಶಿವನಾದರೇನು ಗಣಪತಿಯಾನನು ಸಾಸಿ ವರ್ತಿಸದಿದ್ದರೆ ಹಿಂದಿನ ಬವಣಿ (ಯುದ್ಧಕ್ಕೆ ಹೊರಟಾಗ ಹೂಳಿದ ರಥದ) ಇಂದಿಗೂ ಒದಗುವುದು (ಜಂಗಮರೂಪ ಶಿವನು ಯುದ್ಧಕ್ಕೆ ಹೊರಟಾಗ ಹೂಳಿದ ರಥವ ನೆನೆಸುಗೊಂತನು.) ಜಂಗಮಮೂರ್ತಿಯೇ! ಈ ಮನೆಯಲ್ಲಿ ಹುಟ್ಟಿದ ನಾನು ಧನ್ಯ! ನನ್ನ ಬಳಗ ಧನ್ಯ! ಇವರ ಸೇವೆಯು ಒದಗಿದ ನೀನೂ ಧನ್ಯ!.! ಎಂದು ಕುಣಿಯುತ್ತಲು, ಜಂಗಮನ ವೇಷದ ಮುಸಕು ಹರಿಯುತ್ತಿ ನಿಜರೂಪು ಕಾಣುತ್ತ ಶಿವನೇ! ನಿಂಗಾರು ಈ ಕೌತುಕ ನಟಿಸಲುದ್ಯುಕ್ತಿಸಿದರು! ಅಮ್ಮನವರೇ! ಶಿವನರ್ಧಾಂಗದಲ್ಲಿ ಪಾರ್ವತಿಯನ್ನು ಕಾಣುತ್ತ ಅಮ್ಮಾ ವಿದ್ಯೆವಿಭವಾದಿ ಪರಿಕರದೊಳೊಂದಿ

ನೀನು ಶಿವನನುಪಕರಿಸದಿದ್ದಲು ಈ ವಿನೋದವು ಪ್ರಪಂಚಕ್ಕೆ ತೋರಿಕೆ ಎತ್ತಣದು. ಹಾಗೆಯೇ ಬಸವನ ಗಣೇಶನನ್ನು ಕಾಣುತ್ತ ಗಣಾಧೀಶನೇ! ತಂದೆ ನಿಶ್ಚಲನು ತಾಯಿ ಚಟುವಟಿಕೆಯುಳ್ಳವಳು ಇವರೀರ್ವರಿಂದುಂಟಾದ ಈ ವಿನೋದದ (ಆಟದ) ಜಗತ್ತಿನಲ್ಲಿ ವೃಥಾ ಅಭಿಮಾನಗೊಂಡು ಚಕ್ರದ ಕಾಲುಗಳಂತೆ ಜೀವಿಗಳು ಸುತ್ತುತ್ತಲಿದ್ದಾರೆ. ಚಕ್ರಮಧ್ಯದ ಗೂಟವನ್ನಾಶ್ರಯಿಸಿದ ಕರಳುಗಳಂತೆ ಗಣೇಶ (ಸಮ್ಯಕ್-ವಿಚಾರ) ನನ್ನು ಆಶ್ರಯಿಸಿದವರು ಬದುಕುವರೆಂಬಂತೆ ನಿನ್ನಿಂದ ನಾವು ಈ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದೆವು. ಎಂದು ಗಣೇಶ ಶಿವಪಾರ್ವತಿಯರಿಗೆ ವಂದಿಸಲು ಎಲ್ಲರೂ ಪ್ರಕಟರಾಗಿದ್ದರೆ. ಭಕ್ತವೀರಣ್ಣೊಡೆಯನ ಮನೆ ಝಗಝಗಿಸ ಹತ್ತಿತು.

ಆಗ ಶಿವಸಹಿತ ಎಲ್ಲರೂ ಒಕ್ಕೊರಲಿನಿಂದ ವೀರಣ್ಣೊಡೆಯ ಹಾಗೂ ಅವನ ಬಳಗವನ್ನು ಉದ್ದೇಶಿಸಿ ನಿಮ್ಮಗಳ ನಿರ್ವ್ಯಾಜ ಜಂಗಮಪ್ರೇಮ ನಿಷ್ಕಪಟ ವ್ಯವಹಾರ, ಸಮ್ಯಕ್-ಜ್ಞಾನ ಧೃಡವಿರತಿ ಭಕ್ತಿಗಳಿಗಾಗಿ ನಾವು ಋಣಿಯಾಗಿರುವೆವು.

ಪ್ರಪಂಚವು ನಿಮ್ಮನ್ನು ಅನುಕರಿಸಿ ಅಂತ್ಯಾಶ್ರಮದ ವೀರಶೈವ ಧರ್ಮದ ರಹಸ್ಯವನ್ನು ಅರಿತುಕೊಳ್ಳಲಿ. ಎಂದು ಆಶೀರ್ವದಿಸಿ, ಎಲ್ಲರಿಂದ ಸಾಷ್ಟಾಂಗ ಪ್ರಣಾಮವನ್ನು ಸ್ವೀಕರಿಸುತ್ತ ಅಲ್ಲಿಯೇ ಅಂತರ್ಧಾನರಾದರು.

---

## ಜ್ಞಾನ ವಿಕಾಸ

[ ಲೇಖಕರು:- ಶ್ರೀಯುತ ಭೀ. ಶ್ರೀ. ಕುಲಕರ್ಣಿ, ವಿಜಾಪುರ. ]

—❦●❦—

ಜಗತ್ತಿನ ಸರ್ವ ಪ್ರಾಣಿಗಳಲ್ಲಿ ಮನುಷ್ಯನೂ ಒಂದು ಪ್ರಾಣಿಯು ಸನುನಾಗಿರುವನು. ಆದರೆ ಮನುಷ್ಯಪ್ರಾಣಿಯು ಇತರ ಪ್ರಾಣಿಗಳಂತೆ ಒಂದು ಹೀನಾವಸ್ಥೆಯ ಪ್ರಾಣಿಯಲ್ಲ. ಇದಕ್ಕೆ ಕಾರಣವೆಂದರೆ "ಜ್ಞಾನ." ಜ್ಞಾನವು ಸರ್ವ ಪ್ರಾಣಿಗಳಲ್ಲಿಯೂ ಇರುವದು ಕಂಡುಬರುವದು. ಆದರೆ ಆ ಜ್ಞಾನವು ಸಾಕಷ್ಟು ವಿಕಾಸವಾಗದಕ್ಕೆ ಅಲ್ಪವಟ್ಟಿನಲ್ಲಿಯೇ ಉಳಿದಿರುವದೆಂಬುದೇ ಈ ಲೇಖದ ಮೂಲ ಉದ್ದೇಶವಾಗಿರುವದು. ಇದಕ್ಕೆ ಕಾರಣಗಳು ಕೆಳಗೆ ವರ್ಣಿಸಿದೆಂತಿದೆ.

ಇತರ ಪ್ರಾಣಿಗಳಲ್ಲಿ ಜ್ಞಾನವಿರುವದೆಂಬುದು ಕಂಡು ಹಿಡಿಯಲು, ಮತ್ತು ಆ ಜ್ಞಾನವನ್ನು ವಿಕಾಸಗೊಳಿಸಿದರೆ ವಿಕಾಸಹೊಂದುವದೆಂದು ಯಾವ ಆಧಾರದಮೇಲಿಂದ ಕಂಡುಕೊಳ್ಳಬಹುದೆಂಬುವದೂ ಒಂದು ಪ್ರಶ್ನೆಯಾಗಿದೆ. ಈ ಪ್ರಶ್ನೆಗೆ ಉತ್ತರಿಸಲು ತೀರ ಸುಲಭವಾದ ಮಾರ್ಗವೊಂದಿದೆ. ಅದಾವದೆಂದರೆ, ನಿತ್ಯವೂ ನಮ್ಮ ದೃಷ್ಟಿಗೆಬೀಳುವ ಮಂಗನನ್ನಾಡಿಸುವ ಗಾರುಡಿಗರನ್ನು ನೋಡಬಹುದು. ಮಂಗನಿಗೆ ಬುದ್ಧಿಗಲಿಸಲು ಯುಕ್ತಿ, ಅದರ ಅಲ್ಪ ಜ್ಞಾನವನ್ನು ವಿಕಾಸಗೊಳಿಸಿ, ಆ ಮಂಗನಿಂದ ಬೇಕಾದ ಕೆಲಸವನ್ನಾದರೂ ಆತನು ಮಾಡಿಸಿಕೊಳ್ಳುವದು ಸರ್ವರೂ ನೋಡಿದ ಒಂದು ದೃಶ್ಯವಾಗಿದೆ. ಆದರೆ ಅದು ಕೇವಲ ದೃಶ್ಯವಲ್ಲ. ಒಂದು ಅನುಭವ ಪಡೆಯುವಂಥ ಅನುಭವಾತ್ಮಕವಾದ ತುಂಬಿದ ಒಂದು ಜ್ಞಾನದ ಮಾರ್ಗವಾಗಿದೆ. ಇದರಂತೆ ಸರ್ಕಸ್ಸಿನಲ್ಲಿಯು ಕ್ರೂರ ಪ್ರಾಣಿಗಳ ಕ್ರೂರತೆಯನ್ನು ಕಳೆದು ಹೇಗೆ ಬೇಕಾದಂತೆ ಅವುಗಳನ್ನು ಆಟವಾಡಿಸಲು ಸರ್ಕಸ್ಸಿನವರು ತಮ್ಮೆದುರು ಮೋಜುಮಾಡಿ ತೋರಿಸುವ ಮೋಜವೂ ಒಂದು ಅನುಭವ ವ್ಯಕ್ತಮಾಡುವಂತಹದೇ ಆಗಿದೆ. ಇದರಮೇಲಿಂದ ಕಂಡುಬರುವದೇನೆಂದರೆ, ಜಗತ್ತಿನ ಸರ್ವ ಪ್ರಾಣಿಗಳಲ್ಲಿ ಜ್ಞಾನವು ಅಲ್ಪಮಟ್ಟಿಗಿದ್ದುದು ಅದನ್ನು ವಿಕಾಸಪಡಿಸಿದರೆ ಮಾತ್ರ ಜ್ಞಾನವು ವಿಕಾಸಹೊಂದುವದೆಂದು ತಿಳಿಯಲು ಈ ಪ್ರಾಣಿಗಳೇ ಒಂದು ಅನುಭವವನ್ನುಂಟುಮಾಡುವ ದೃಷ್ಟವಾಗಿವೆ. ಹೀಗೆಯೂ ಕೇಳಬಹುದು. ಮನುಷ್ಯಪ್ರಾಣಿಯಲ್ಲಿಯೂ ಪಲವು ಜನ ಬುದ್ಧಿಶೂನ್ಯರಾಗಿರುವರಲ್ಲವೆಂದು. ಮನುಷ್ಯನಿಗೂ ಕೂಡ ಬುದ್ಧಿಯು ಮೊದಲು ಅಲ್ಪಮಟ್ಟಿಗೇ ಇರುವದು. ಅದು ಜನಸಾಮಾನ್ಯರಲ್ಲಿ ಬೆರೆತು, ಬುದ್ಧಿ ಗಲಿತು ಬೆಳೆಯುವಂಥದಾಗಿರುವದು. ಇದಕ್ಕೂ ನಾವು ಉದಾಹರಣೆಯನ್ನು ಕೊಡಬಹುದು. ಅದಾವುದೆಂದರೆ, ಮನುಷ್ಯನು ಜನ್ಮಿಸಿದಕೂಡಲೇ ಜ್ಞಾನಯುಕ್ತನಾಗಿ ಜನ್ಮಿಸಿರುವದಿಲ್ಲ. ಮುಂದೆ ದೊಡ್ಡವನಾಗಿ ಮಾತಾಪಿತರಿಂದ ಬುದ್ಧಿ ಕಲಿತು, ಆರುವರ್ಷದವನಾಗಿ ಮುಂದೆ ಗುರುಗಳಿಂದ ವಿದ್ಯೆ ಕಲಿತು ತನ್ನ ಜ್ಞಾನ ವಿಕಾಸಪಡಿಸಿಕೊಳ್ಳುತ್ತಾ ಬೆಳೆಯುವವನಾಗುವನು. ಆದರೆ ಗುರು ವಿದ್ಯೆಗಿಂತಲೂ ಮಾತಾಪಿತರುಗಳ ಮತ್ತು ಸ್ನೇಹಿತರಿಂದಲೇ ಸಾಕಷ್ಟು ವ್ಯವಹಾರಿಕ ಜ್ಞಾನವು ಮನುಷ್ಯಪ್ರಾಣಿಗೆ ಒದಗುವದು. ಇವೆಲ್ಲವೂ ಮನುಷ್ಯನಿಗೆ ಒದಗದಿದ್ದರೆ ಮಾತ್ರ ಆತನು ಬುದ್ಧಿಶೂನ್ಯನಾಗಿಯೇ ಉಳಿಯುವನು. ಮುಖ್ಯವಾಗಿ ಮಾತಾಪಿತರಲ್ಲಿ ಸಾಕಷ್ಟು ಜ್ಞಾನವು ಬೇಕು.

ಮಕ್ಕಳು ಹುಟ್ಟಿದಂದಿನಿಂದ ತಾಯಿತಂದೆ ಮತ್ತು ಗುರುಗಳು, ಒಳ್ಳೆಯ ಸ್ನೇಹಿತರೇ ಆತನ ಗುರುಗಳು. ಹೀಗಿರುವಲ್ಲಿ ಅಜ್ಞಾನವು ಆತನಲ್ಲಿ ಉಳಿಯಲು ಶಕ್ಯವೇ ಇಲ್ಲ. ಇಲ್ಲಿ ಇನ್ನೊಂದು ವ್ಯತ್ಯಾಸವು ಕಂಡುಬರುತ್ತಿದೆ. ಅದಾವದೆಂದರೆ ಈ ಎಲ್ಲ ವಿದ್ಯೆಯ ಸಲಕರಣೆಗಳಿದ್ದಾಗ್ಯೂ ಸಿರಿವಂತ ಜನರು ಬಹಳ ಜನ ಬುದ್ಧಿಹೀನರಾಗಲು ಕಾರಣವೇನು ? ಇದೂ ಒಂದು ಗೂಢವಾದ ಪ್ರಶ್ನೆಯೇ ಆಗಿದೆ. ಆದರೆ ತಿಳಿದುಕೊಂಡರೆ ಮಾತ್ರ ಇದೂ ಸಾಮಾನ್ಯ ಪ್ರಶ್ನೆಯೇ ಸರಿ. ಇದಕ್ಕೆ ಒಂದು ಉದಾಹರಣೆಯನ್ನು ಕೊಡಬಹುದು. ಕಬ್ಬಿಣವು ಬಹು ಕಠಿಣವಾದ ಖನಿಜವಾಗಿರುವದು. ಅದನ್ನು ಹಾಗೆಯೇ ಮಣಿಸಲು ಜಗತ್ತಿನ ಯಾವ ಪ್ರಾಣಿಗಳಿಗೂ ಶಕ್ಯವೇ ಇಲ್ಲ. ಆದುದರಿಂದ ಮನುಷ್ಯಪ್ರಾಣಿಯು ಜ್ಞಾನಯುಕ್ತ ಪ್ರಾಣಿಯಾಗಿರುವದರಿಂದ ಆ ಪ್ರಾಣಿಯು ಕಂಡುಹಿಡಿದಿರುವದೇನಂದರೆ, ಕಬ್ಬಿಣವನ್ನು ಬೆಂಕೆಯಿಂದ ಕಾಯಿಸಲಾಗಿ, ಸಾಕಷ್ಟು ಕಾಸಿದನಂತರ ಹೇಗೆ ಮಣಿಸಬೇಕೆಂದಿರುವೆವೋ ಹಾಗೆ ಮಣಿಸಬಹುದೆಂದು ಕಂಡುಹಿಡಿದಂತೆ ನಮ್ಮ ಜ್ಞಾನವೂ ಸಹ ಒಂದು ಖನಿಜಪದಾರ್ಥವೇ ಸರಿ. ಇದು ಖನಿಜವಲ್ಲ. ಆದರೆ ಹೋಲಿಸಲು ಮಾತ್ರ ಖನಿಜ. ದೇಹವೆಂಬ ಭೂಮಿಯ ಖನಿಜವೇ ಸರಿ. ಇದನ್ನು ಬೆಂಕೆಯಿಂದ ಕಾಯಿಸಿ ವಿಕಾಸಪಡಿಸಲು ಬಾರದ ಖನಿಜ. ಇದಕ್ಕೆ ಮಣಿಸಲು ಬಡತನವೇ ಒಂದು ಬೆಂಕೆಯು ಸರಿ. ಅದುವೇ ಜ್ಞಾನವನ್ನು ವಿಕಾಸಪಡಿಸಲು ಒಂದು ದಾರಿ. ಮಾತಾಪಿತರಿಂದ ಜ್ಞಾನವು ಸಿಗದಿದ್ದರೆ ಮಾತ್ರ ಈ ಬಡತನವೇ ಗುರುವಾಗಿದ್ದಂತೆ ಆತನಿಗೆ ಪರಿಣಮಿಸುವದು. ಎಲ್ಲಿ ನೋಡಿದಲ್ಲಿ ಬಡತನದಲ್ಲಿ ಜ್ಞಾನಯುಕ್ತರಾದ ಜನರನ್ನೂ ಮತ್ತು ಸಿರಿವಂತ ಜನರಲ್ಲಿ ಅಜ್ಞಾನಿಗಳು ಹೆಚ್ಚಿಗಿರುವದನ್ನೂ ನಾವು ಕಾಣಬಹುದು. ಆದರೆ ಅದೆಲ್ಲವೂ ದೇವರ ಮಹಿಮೆಯೆಂಬುದು ಶುದ್ಧ ತಿಳಿಗೇಡಿತನವೇ ಸರಿ. ಇದಕ್ಕೆ ಮೇಲೆ ಕೊಟ್ಟ ಉದಾಹರಣೆಗಳೇ ಸಾಕ್ಷಿ. ಆದರೆ ಉದಾಹರಣೆಗಳಿಂದ ತೀವ್ರವೇ ನಾವು ತಿಳಿಯಬಹುದು. ಇದೇನು ಒಂದು ದೊಡ್ಡ ಪ್ರಶ್ನೆಯಲ್ಲ. ಆದರೆ ತಿಳಿಗೇಡಿಗಳಿಗೆ ಮಾತ್ರ ತಿಳಿಸುವ ಒಂದು ಮೋಜಿನ ಪ್ರಶ್ನೆಯೇ ಸರಿ.

ಜ್ಞಾನವು ವಿಕಾಸವಾಗುವದೆಂಬ ಮಾತು ನಿಜ. ಆದರೆ ಅದರಲ್ಲಿಯೂ ಒಂದು ಮಿತಿಯುಂಟು. ಅದಾವದೆಂದರೆ ಇದಕ್ಕೂ ಒಂದು ಉದಾಹರಣೆಯುಂಟು. ಹುಚ್ಚು ಜನರನ್ನು ನೋಡದ ಜನರಿಲ್ಲ. ಹೀಗೆ ಹುಚ್ಚಾಗಲಿಕ್ಕೆ ಕಾರಣವೇನೆಂದರೆ ಜ್ಞಾನದ ವಿಕಾಸಕ್ಕೆ ಅದರ ವಿಕಾಸದ ಪರಿಮಿತಿಯನ್ನು ಮೀರಿ ಮುಂದೆ ಸಾಗಿದ್ದಕ್ಕೆ ಮಾತ್ರ ಮಿದುಳು

ಅತೀ ವಿಕಾಸಕ್ಕೆ ತಡೆಯದೆ ಬಲಹೀನತೆಗೊಳಗಾಗಿ, ಕರಗಿಹೋಗುವದು. ಜ್ಞಾನವು ಹೇಗೆ ಕರಗುವದೆಂಬುದಕ್ಕೆ ಇದೇ ಸಾಕ್ಷಿ. ಜ್ಞಾನವು ಒಂದು ಸಮಾಶೀಲತೆಯನ್ನು ಕಾದುಕೊಂಡಿರುವದರಿಂದ ಮನುಷ್ಯನು ಇದಕ್ಕೆ ಮಕ್ಕಳು ಮರಿಗಳಿಗಿಂತ ಹೆಚ್ಚು ಜೋಪಾನ ಮಾಡುವದು ಮನುಷ್ಯನ ಮುಖ್ಯ ಕರ್ತವ್ಯವಾಗಿದೆ. ಉಣುವಾಗ್ಗೆ ಪರಿಮಿತಿತಪ್ಪಿ ಉಂಡರೆ ಹೇಗೆ ಅಜೀರ್ಣವಾಗುವದೋ ಹಾಗೆ ಜ್ಞಾನಕ್ಕೆ ಮಿತಿಮೀರಿ ವಿಕಾಸಪಡಿಸಿದರೆ ಹುಚ್ಚುಹಿಡಿಯುವದು ಸ್ವಾಭಾವಿಕವಾಗಿದೆ. ಹುಚ್ಚು ಜನರು ಹುಚ್ಚರಲ್ಲ. ಆ ಜನರೇ ಜಗತ್ತಿನಲ್ಲಿಯ ಇನ್ನಿತರ ಜ್ಞಾನಯುಕ್ತ ಜನರಕ್ಕಿಂತಲೂ ಹೆಚ್ಚು ಜ್ಞಾನವಂತರೆಂದು ಎದೆತಟ್ಟಿ ಹೇಳಬಹುದು. ಆದರೆ ಆತನು ಮಿತಿಮೀರಿ ಜ್ಞಾನ ವಿಕಾಸಪಡಿಸಿಕೊಂಡದ್ದೇ ಹುಚ್ಚುತನದ ಮೂಲ. ಆದುದರಿಂದಲೇ ಆದಿಕಾಲದ ಜನರು ಆತನಿಗೆ ಹುಚ್ಚ ಎಂದಿರುವದು ಸ್ವಾಭಾವಿಕ.

ಮನುಷ್ಯನಾದರೂ ಅಜ್ಞಾನದಲ್ಲಿಯೇ ಇದ್ದು ಬುದ್ಧಿಗಲಿತಂತೆ ಇನ್ನಿತರ ಪ್ರಾಣಿಗಳಾದರೂ ಏಕೆ ಕಲಿಯಬಾರದೆಂಬ ಪ್ರಶ್ನೆಯು ತೀವ್ರವೇ ಆವರಿಸುವದು. ಆದರೆ ಇದು ಮಾತ್ರ ಒಂದು ತಿಳಿಯುವಂಥ ಬಹು ಆಳವಾದ ಪ್ರಶ್ನೆಯಾಗಿದೆ. ಇದು ಸರ್ವಸಾಮಾನ್ಯ ಜನರಿಗೆ ತಿಳಿಯದ ಮಾತಾಗಿದೆ. ಆದರೆ ಇದನ್ನು ನಮ್ಮ ಜ್ಞಾನದೃಷ್ಟಿಯಿಂದ ಕಂಡು ಹಿಡಿದರೆ ಬಹು ಸುಲಭವಾದದ್ದೇ ಇದೆ. ಜ್ಞಾನವು ವಿಕಾಸವಾದನಂತರ ಆ ಜ್ಞಾನಕ್ಕೆ ಪ್ರಶ್ನಿಸಿದರೆ ಬೇಕಾದಂತಹ ಕಠಿಣ ಪ್ರಶ್ನೆಗೂ ಸರಳತೆಯಲ್ಲಿ ತರಲು ಯತ್ನಿಸುವದು. ಇತರ ಪ್ರಾಣಿಗಳಲ್ಲಿ ಮಿತ್ರತ್ವವೆಂಬ ಭಾವನೆಯು ಮಾತ್ರ ಇರುವದಿಲ್ಲ. ಈ ಒಕ್ಕಟ್ಟೇ ಇಲ್ಲದಿದ್ದ ಮೇಲೆ ಈ ಜ್ಞಾನವಿಕಾಸವೆಂಬ ಬೆಂಕಿಯೇ ಇಲ್ಲದಿದ್ದಮೇಲೆ ವಿಕಾಸವಾಗಲು ಹೇಗೆ ಬರುವದು? ನಾವು ಒಂದು ವೇಳೆ ಹಿಂದಿನ ಇತಿಹಾಸ ತೆಗೆದರೆ ಹೀಗೆ ತಿಳಿದು ಬರುವದಲ್ಲಾ, ಮನುಷ್ಯನು ಮೊದಲು ಪಶುಗಳಂತೆ ವರ್ತಿಸುತ್ತಿದ್ದನಂತೆ ಅವನಿಗೆ ಮಿತ್ರತ್ವವೆಂಬ ಅರಿವೇ ಇದ್ದಿಲ್ಲವಂತೆ, ಅಡವಿಗಳಲ್ಲಿ ಪಶುಗಳಂತೆ ಈ ಮನುಷ್ಯ ಪಶುವಾದರೂ ಕಾಲಹರಣ ಮಾಡುತ್ತಿತ್ತಂತೆ, ಹೀಗಿರಲು ಒಂದು ಜ್ಞಾನಯುಕ್ತ ಮನುಷ್ಯ ಪ್ರಾಣಿಯಿಂದಲೇ ಈ ಒಕ್ಕಟ್ಟೆಂಬ ಅರಿವಾಗಿರಬೇಕೇ ಹೊರತು ಇನ್ನಿತರ ಅಜ್ಞಾನಯುಕ್ತವಾದ ಪ್ರಾಣಿಗಳಿಂದಾಗಲಿಕ್ಕಿಲ್ಲ. ಆದರೆ ಒಕ್ಕಟ್ಟಿಗೆ ಮೂಲವೆಂದರೆ “ಭಾಷೆ” ಭಾಷೆಯು ಜಾನಕ್ಕೆ ಮೂಲ. ಈ ಜ್ಞಾನದ ಮೂಲವೆಂದರೆ ಒಕ್ಕಟ್ಟು ಇವೆಲ್ಲ ಕಾರಣಗಳಿಂದ ಮನುಷ್ಯ ಪ್ರಾಣಿಯು ಸುಧಾರಿಸುತ್ತ

ಇಂದು ಚಂದ್ರಲೋಕಕ್ಕೆ ಪ್ರಯಾಣ ಬೆಳೆಸಲು ಸಹ ಸಾಧನ ಸಾಮುಗ್ರಿ ಗಳನ್ನು ಸಿದ್ಧಗೊಳಿಸಿದೆ. ಆದರೆ ಇಸೇ ಜ್ಞಾನವು ಮೊದಲು ಅಂದರೆ ಮನುಷ್ಯನುತ್ಪತ್ತಿಯ ಮೊದಲಲ್ಲಿ ಏಕೆ ಇದ್ದಿಲ್ಲ? ಹಾಗೆಯೇ ಇನ್ನಿತರ ಪ್ರಾಣಿಗಳಾದರೂ ಇಂದಿಲ್ಲ ಇನ್ನು ಮುಂದೆ ಎಷ್ಟೋ ಕಾಲಗಳ ಮೇಲೆ ನಮ್ಮಂತೆಯೇ ಜ್ಞಾನಯುಕ್ತ ಪ್ರಾಣಿಗಳಾಗಬಹುದೆಂದು ಧಾರಾಳವಾಗಿ ಕಂಡು ಕೊಳ್ಳಬಹುದು.

"ದಣವಿಲ್ಲದವ ಹೆಣಕ್ಕಿಂತಲೂ ಕಡೆ" ಎಂಬ ನಾಣ್ಣುಡಿಯಂತೆ "ಬುದ್ಧಿ ಇಲ್ಲದವ ಕೀಟಕಕ್ಕಿಂತಲೂ ಕಡೆ" ಎಂಬ ನಾಣ್ಣುಡಿಯು ಇಲ್ಲದಿದ್ದರೂ ನಾವು ತರ್ಕಿಸಬಹುದು. ಬುದ್ಧಿಯು ಸ್ವತಂತ್ರವಿಲ್ಲ. ಅದು ಪರತಂತ್ರವಾಗಿದೆ. ಪರ ರಿಂದ ದೊರೆಯುವಂಥದ್ದಾಗಿರುವದರಿಂದ ಪಂಡಿತರಾದ ಸೇವೆಯಿಂದ ವರ್ತಿಸ ಬೇಕು. ಇದು ಮನುಷ್ಯನ ಮೂಲವಾಗಿದೆ. ಈ ಒಕ್ಕಟ್ಟಿನಲ್ಲಿಯೂ ಕೂಡ ಲೋಪದೋಷಗಳುಂಟು. ಅವಾವವೆಂದರೆ ದುಶ್ಚಟ, ದುರ್ಗುಣ, ಇವೆರಡೂ ಮನುಷ್ಯನ ಒಳ್ಳೆಯ ದಾರಿಯನ್ನು ತಪ್ಪಿಸಿ, ಅಡ್ಡದಾರಿಯನ್ನು ಹಿಡಿಸುವಂತ ಹವು. ಆದರೆ ಇವೆರಡರ ಮೂಲ ಒಂದೇ. ದುಶ್ಚಟದಿಂದಲೇ ದುರ್ಗುಣವು ಉತ್ಪತ್ತಿಯಾಗುವದು. ಆದರೆ ಇವು ಮಾತ್ರ ಅಡ್ಡದಾರಿ ಎಂದರೆ ಶೀರ ಸಾಮೀಪ್ಯತರುವ ದಾರಿಗಳಾಗಿವೆ. ಆದರೆ ಬಹುದೂರ ಸಾಗಿದಲ್ಲಿ ಸಿಗುವಂತಹ ದಾರಿಯು ಜ್ಞಾನದ ಮಾರ್ಗವಾಗಿದೆ. ಆದರೆ ಸಾಮೀಪ್ಯದ ಅಡ್ಡದಾರಿಯು ಕಲ್ಲು ಮುಳ್ಳುಗಳಲ್ಲಿ ಒಯ್ಯುವಂತೆ ದುಶ್ಚಟವು ದುರ್ಮಾರ್ಗಕ್ಕೆ ಶೀಘ್ರವೇ ಒಯ್ಯುವದು. ಆದರೆ ಮುಂದೆ ಆ ಅಡೆತಡೆಗಳಿಂದ ದುಶ್ಚಟವು ನಿವಾರಣ ವಾಗುವದೇ ಹೊರತು ಅದಕ್ಕೆ ಇನ್ನಿತರ ಸಲಹೆಯು ಅವಶ್ಯವೇ ಇಲ್ಲ. ಇದರಿಂದಲೇ ಒಕ್ಕಟ್ಟು ಎಂಬ ಭಾವನೆಯು ಹಿಂದಿನಿಂದ ತಿಳಿದುಬರುವದು. ಆದುದರಿಂದ ಹಿರಿಯರ ಮಾತು ಮನ್ನಿಸಿ ನಡೆಯಬೇಕು. ಹಿರಿಯರೆಂದರೆ ಈ ಎಲ್ಲ ಅನುಭವ ಪಡೆದವರಾದ್ದರಿಂದ ಅವರ ನುಡಿಯನ್ನು ಮನ್ನಿಸಿ ನಡೆದರೆ ಜೀವನವು ಸುಗಮವಾಗಿ ಸಾಗುವದು. ಕೇವಲ ನಾನು ಪೂರ್ವಜನ್ಮದಲ್ಲಿ ಮಾಡಿದ ಪಾಪದ ಫಲವೆಂದು ನರಳುತ್ತ ಕಾಲಹರಣಮಾಡುವದು ಶುದ್ಧ ತಿಳಿಗೇಡಿತನವೇ ಸರಿ. ಪೂರ್ವಜನ್ಮದಲ್ಲಿ ಪಾಪಮಾಡಿದ್ದರೆ ದೇವಾಧಿದೇವನ್ನು ಮನುಷ್ಯಜನ್ಮವನ್ನೇ ಕೊಡುತ್ತಿದ್ದಿಲ್ಲ. ಇದು ಪುರಾಣ ಪಠಿಸಿದವರಿಗೆ ಮಾತ್ರ ತಿಳಿದ ವಿಷಯ. ಆದುದರಿಂದ ಇಂಥ ಪವಿತ್ರವಾದ ಮಾನವಜನ್ಮದಲ್ಲಿ ಜನಿಸಿ ಪಾಪಕ್ಕೆ ಗುರಿಯಾಗುವದೆಂದರೆ ಅಜ್ಞಾನವೇ ಕಾರಣ. ಆದುದರಿಂದ ಅಜ್ಞಾನ ವನ್ನು ಹೋಗಲಾಡಿಸಲು ಪ್ರಯತ್ನಿಸಬೇಕೇ ಹೊರತು ಅದನ್ನು ಹೆಚ್ಚಿಸಕೂಡದು.





# ಶಿವಾನುಭವ




:: ಸಂಪಾದಕರು ::

ಗು. ಹಳಕಟ್ಟಿ

ಬಿ. ಎ. ಎಲ್. ಎಲ್. ಬಿ.





ವಿಜಾಪೂರ [[illegible]ಬರ ೧೯[illegible]

# ವಿಷಯಾನುಕ್ರಮಣಿಕೆ.



# ಶಿವಾನುಭವ

| ವರ್ಷ ೨೮ | ಸೆಪ್ಟೆಂಬರ ೧೯೫೪ | ಸಂಚಿಕೆ ೯ |
| --- | --- | --- |

## ಜೀವನದರ್ಪಣ

-(ಲೇ. ಡಾ|| ಎಸ್. ಬಿ. ಪಾಠಕ ಗಾಂಧೀಜಿ ರೋಡ ವಿಜಯಪೂರ)-



ಜೀವನದರ್ಪಣ ಎಂಬ ಲೇಖ ಒಂದನ್ನು ಬರೆಯಲು ಆರಂಭಿಸಿದ್ದೇನೆ —

ಅದಕ್ಕನುಗುಣವಾದ ಗ್ರಂಥಗಳ ಆಧಾರ, ಪೂರ್ವಜರ ಮತ್ತು, ಸದ್ಯದ ಮಹಾಸಂಶೋಧಕರ ಅಭಿಪ್ರಾಯದಂತೆ ಶ್ರೀ ಅರವಿಂದ ಮಹಾಯೋಗಿಗಳ ವಚನಗಳು ಸಾಧಕ ಜೀವಿಗಳಿಗೆ ಒಳ್ಳೇ ಸುಲಭಮಾರ್ಗವಾಗಿವೆ. ಅವು ಭಕ್ತಿ ಭಾಂಡಾರಿ ಶ್ರೀ ಬಸವಣ್ಣನವರ ವಚನದ ತಿರುಳು. ಆಧ್ಯಾತ್ಮ ಸಾಧನೆಯಲ್ಲಿ ನಿರತರಾದ ಭಾವಭರಿತರಾದ ಸ್ಥಿತ ಪ್ರಜ್ಞರಾದ ಅವಧೂತರ ಇರುವಿಕೆಯ ರಹಸ್ಯ. ಈ ಒಂದು ಬರಹದ ಸಾರಾಂಶ ಭಾಗ ಶ್ರೀ ಭಗವಾನ ಅರವಿಂದ ಮಹರ್ಷಿಗಳ ಕರ್ಮಯೋಗದ ಮೊದಲನೇ ಚಿಕ್ಕದೊಂದು ನುಡಿಗೆ ನನ್ನ ಆಧ್ಯಾತ್ಮ ಬಂಧುಗಳಾದ ಹಲಸಂಗಿ ಶ್ರೀ ರಾಂಘಣ್ಣನವರು ಹಲವಾರು ಸಲ ಆಶ್ರಮ ದರ್ಶನಕ್ಕೆ ಹೋಗಿ ಬಂದವರು ಮತ್ತೂ ಕೆಲವು ದಿವಸ ಆಶ್ರಮದಲ್ಲಿ ಇದ್ದವರು, ಇವರಿಂದ ನಾನು ಬರೆಯಲು ಈಗ ಆರಂಭಿಸಿರುವ ಜೀವನದರ್ಪಣ ಎಂಬ ಚಿಕ್ಕ ಲೇಖಕ್ಕೆ ಅತ್ಯಂತ ಸಹಾಯ ಸಹಕಾರ ದೊರೆತಿದೆ. ಈ ಚಿಕ್ಕದೊಂದು ಲೇಖನದ ಶ್ರೇಯಸ್ಸು ಅವರಿಗೆಯೇ ಇದೆ.

ಶ್ರೀ ಅರವಿಂದರು ಪರಾತ್ಪ ತತ್ವವನ್ನು ವಿಶೇಷವಾಗಿ ಪ್ರತಿಪಾದಿಸುತ್ತಾರೆ. ಆದ್ದರಿಂದ ಜಗನ್ಮಾತೆಯನ್ನು ತಿಳಿದುಕೊಳ್ಳಲಿಕ್ಕೆ ಪ್ರಯತ್ನಿಸುವಾ.

ನಾವು ಸಾಮಾನ್ಯವಾಗಿ ಈಶ್ವರನನ್ನೂ ಪರಮೇಶ್ವರನನ್ನೂ ಗುರ್ತಿಸಿದ್ದೇವೆ. ಯಾಕಂದರೆ ದೂರದಿಂದಲೇ ಅವರನ್ನು ಕೇಳಿ ತಿಳಕೊಳ್ಳಲು ಬರುತ್ತದೆ. ರಾಜನನ್ನು ಹಾಗೆ ಗುರ್ತಿಸುತ್ತಾರೆ. ಅವನು ಹೇಗೆ ಆಳುತ್ತಾನೆ, ಆಡಳಿತದ ಭಾಗವನ್ನು ಅವನು ಹೇಗೆ ನೋಡಿಕೊಳ್ಳುತ್ತಾನೆ, ಇದನ್ನು ತಿಳಿದು ಅದರಂತೆ ಪರಮೇಶ್ವರನೂ ಅವನ ಸರಕಾರವೂ ಇವೆ. ಸೃಷ್ಟಿಯೇ ಅವನ ರಾಜ್ಯ. ಅವನ ಚಿತ್‌ಶಕ್ತಿಯೇ ಅವನ ಸರಕಾರ. ಅದನ್ನು ಹುಟ್ಟಿಸಿ ಆಳುವಶಕ್ತಿ, ಅವನಲ್ಲಿದೆ. ಆ ಚಿತ್ ಶಕ್ತಿಯೇ ವಿಶ್ವದಲ್ಲಿ ಜಗನ್ಮಾತೆ, ಎನಿಸಿಕೊಳ್ಳುತ್ತದೆ. ಆಕೆಯೇ ವಿಶ್ವಪಾಲನೆಯಲ್ಲಿ ನಾಲ್ಕು ಸ್ವರೂಪವನ್ನು ಧಾರಣಮಾಡುತ್ತಾಳೆ. ಅವು ಮಹೇಶ್ವರಿ, ಮಹಾಕಾಲಿ, ಮಹಾಲಕ್ಷ್ಮೀ, ಮಹಾಸರಸ್ವತಿ ಎಂದು ಇವೆ.

ಜ್ಞಾನ, ಶೌರ್ಯ, ಪ್ರೇಮ ಮತ್ತು ಸೌಂದರ್ಯ ಇವು ನಾಲ್ಕು ಹಾಗೂ ಕಾರ್ಯ ಕುಶಲತೆ ಈ ಗುಣಗಳಿಗನುಸಾರವಾಗಿ ಜನರು ಸೃಷ್ಟಿಯಲ್ಲಿ ಕಾರ್ಯ ಮಾಡುತ್ತಾರೆ. ಅವರು ಎಲ್ಲಿ ಹಲವು ಆಗುತ್ತವೆಯೋ ಆ ಲೋಕದಲ್ಲಿ ಇರುತ್ತಾರೆ. ಅಲ್ಲಿ ಅನೈಕ್ಯವು ಇನ್ನೂ ಆಗಿರುವದಿಲ್ಲ. ಇದಕ್ಕೆ ( *overmind plane* ) ಎಂದು ಶ್ರೀ ಅರವಿಂದರು ಅನ್ನುತ್ತಾರೆ.

ಬುದ್ಧಿ ಲೋಕದಲ್ಲಿ ಸ್ವರ್ಗ ಲೋಕದಲ್ಲಿ ದೇವತೆಗಳು ದೇವರ ರಾಜ್ಯದ ಅಧಿಕಾರಿಗಳು ( *Departmental heaas* ) ಇರುತ್ತಾರೆ. ಅವರಲ್ಲಿ ಅಷ್ಟು ಐಕ್ಯವಿರುವದಿಲ್ಲ. ತಮ್ಮ ವಿಭಾಗದ ಕಾರ್ಯವನ್ನು ತಾವು ಮಾಡುವರೆಂದೂ ಇನ್ನೊಂದು ವಿಭಾಗಕ್ಕೆ ಸಂಬಂಧವಿಲ್ಲವೆಂದೂ ತಿಳಕೊಂಡಿರುತ್ತಾರೆ. ಮಂತ್ರಿ ಮಂಡಳದ (*Joint responsibility*) ಒಟ್ಟು ಜವಾಬ್ದಾರಿಯ ಭಾರವು ಇವರ ಮೇಲೆ ಇರುವದಿಲ್ಲ. ಅಷ್ಟು ಸ್ವತಂತ್ರತೆ ಅಷ್ಟು ಅಜ್ಞಾನ ಇವರಲ್ಲಿ ಬಂದಂತಾಯಿತು. ಪ್ರಾಣ ಲೋಕದಲ್ಲಿ ಬೆಜವಾಬುದಾರಿ ನೌಕರರು ತಮ್ಮ ತಪ್ಪನ್ನು ಇನ್ನೊಬ್ಬರ ಮೇಲೆ ಹಾಕುತ್ತ ತಾವು ಸರಕಾರಕ್ಕಾಗಿ ಇದ್ದೇವೆ ಎಂಬುದನ್ನು ಮರೆತು, ಪಗಾರಕ್ಕಾಗಿ ಇದ್ದೇವೆ,

ಎಂದು ತಿಳಿದು ನಡೆಯುತ್ತಿರುತ್ತಾರೆ. ಆದರೆ ಅವರೂ ಸರಕಾರದ ಅಂಗ ವಾಗಿರುವರು. ಮುಖ್ಯ ಮಂತ್ರಿಯು ಹಾಗೆ ಇಂಥ ಎಲ್ಲ ತರದ ದೇವತೆ ಗಳನ್ನು ಜಗನ್ಮಾತೆಯೇ ನೋಡಿ ಕೊಳ್ಳುತ್ತಾಳೆ.

ಇವಳು ಶ್ರೇಷ್ಠ ದೇವತೆಗಳನ್ನು ವಿಭೂತಿಗಳನ್ನಾಗಿಮಾಡಿ ಭೂ ಲೋಕಕ್ಕೆ ಕಳಿಸುವಳು. ಇವರು ಜನರಿಗೆ ಯೋಗ್ಯ ದಾರಿಯಲ್ಲಿ ಹೇಗೆ ನಡೆಯ ಬೇಕೆಂಬುದನ್ನು ನಡೆದು ತೋರಿಸುವರು. ಕೆಲವೊಂದು ಸಾರೆ ಪರಮೇಶ್ವರನ ಅಸ್ತಿತ್ವವನ್ನು ತೋರಿಸಿ ಎಚ್ಚರಿಸಿ ಹೋಗಲಿಕ್ಕೆ ತನ್ನ ತಾತ್ಪೂರ್ತಿಕ ಶರೀರವನ್ನು ಧಾರಣ ಮಾಡಿಕೊಂಡು ಶಕ್ತಿಗಳನ್ನೂ ವ್ಯಕ್ತಿಗಳನ್ನೂ ಕಳಿಸುತ್ತಾಳೆ. ಇವರೆಲ್ಲರಿಗೂ ನಾವು ದೇವರೆಂದು ಪೂಜಿ ಸುತ್ತ ಬಂದಿದ್ದೇವೆ.

ಪ್ರತಿಯೊಬ್ಬರ ಹೃದಯದಲ್ಲಿ ಈಶ್ವರನಿದ್ದಾನೆಂದು ಕೇಳಿದ್ದೇವೆ. ಆ ಈಶ್ವರನೇ ಪರಮೇಶ್ವರಿಯ ಅಂಶ, ನಮ್ಮೊಳಗಿರುವ ಮಾತೆ. ಯಾಕಂದರೆ ಅಂತಃಕರಣವೇ (ಪ್ರೇಮವೇ) ಹೆಂಣಿನ ಸ್ವಭಾವ, ಜ್ಞಾನವೇ ಗಂಡಿನ ಸ್ವಭಾವ. ನಮ್ಮ ಸಹಸ್ರದಳ ಕಮಲದಲ್ಲಿರು ವಂತಹ ಆತ್ಮನೇ ಪರಮೇಶ್ವರನ ಅಂಶ. ಆತ್ಮನಿಗೆ ರೂಪವಿಲ್ಲ. ಆದರೆ ಅಂತರಾತ್ಮನಿಗೆ ರೂಪವಿದ್ದು ಶರೀರವೂ ಇದೆ. ಎಲ್ಲಿ ರೂಪಗೊಳ್ಳಲಿಕ್ಕೆ ಪ್ರಾರಂಭವಾಯಿತೋ ಅಲ್ಲಿಯೇ ಸೃಷ್ಟಿಯ ಉತ್ಪತ್ತಿ. ಹಾಗೂ ಅದನ್ನು ಬೆಳಿಸುವದು ಜಗನ್ಮಾತೆಯ ಕೆಲಸ. ಆದರಂತೆ ನಮ್ಮೊಳಗಿನ ಅಂತರಾತ್ಮನು (ಳು) ಬುದ್ಧಿ, ಪ್ರಾಣ, ಸ್ಥೂಲ ಶರೀರಗಳನ್ನು ಸೃಷ್ಟಿಸಿಕೊಂಡು ಅವನ್ನು ಬೆಳಸುತ್ತ ಪೂರ್ಣತೆಗೊಯ್ಯುತ್ತ ಸೃಷ್ಟಿಯ ಲೀಲೆಯಲ್ಲಿ ತನ್ನ ಭಾಗವನ್ನು ನಿರ್ವಹಿಸುತ್ತಿರುತ್ತಾನೆ(ಳೆ). ಆದ್ದರಿಂದ ನಮ್ಮ ಶರೀರಗಳ ಅರ್ಥಾತ್ ಗುಣ ಗಳ ಮಾಲಿಕನೇ ಅವನಾಗಿದ್ದರಿಂದ ಅವನಿಂದಲೇ ಅವು ತಿದ್ದತಕ್ಕವು. ಅವನಿಗೆ ಮೀರಿದ ಕೆಲವೊಂದು ಪ್ರಸಂಗದಲ್ಲಿ ವಿಶ್ವದ ಅಂದರೆ ಬುದ್ಧಿ ಮತ್ತು ಪ್ರಾಣ ಲೋಕದ ತೆರೆಗಳು, ಶಕ್ತಿಗಳು ವಿರುದ್ಧವಾಗಿ ನಿಂತಲ್ಲಿ ವಿಶ್ವಾತೀತ ಪರಮೇಶ್ವರಿಯ ಸಹಾಯವನ್ನು ಪಡೆಯುತ್ತಾನೆ. ವಿಶ್ವದ ಶಕ್ತಿಗಳಲ್ಲಿ ಅನೈಕ್ಯತೆಯೂ ಅಹಂಭಾವವೂ ಬಂದಿರುವದರಿಂದ ವ್ಯಕ್ತಿ ಯನ್ನು ತಮ್ಮ ಹಿಡಿತದಲ್ಲಿ ಇಟ್ಟುಕೊಳ್ಳಬೇಕೆಂಬ ಹವ್ಯಾಸವಿರುತ್ತದೆ. ಆದ್ದರಿಂದ ತ್ರಿಗುಣಗಳನ್ನು ತಿದ್ದುವ ಕೆಲಸವು ಆಗಲಾರದ್ದೆಂದು ಇಂದಿನ

ವರೆಗಿನ ಸಾಧು ಸಂತರೂ ಜ್ಞಾನಿಗಳೂ ತಮ್ಮಲ್ಲಿಯ ಅಂತರಾತ್ಮನನು ಭಕ್ತಿಯೋಗದಿಂದ ಪಡೆದು ಅಥವಾ ಸಹಸ್ರ ದಳ ಕಮಲದೊಳಗಿನ ಆತ್ಮ ನನ್ನು ಜ್ಞಾನಯೋಗದಿಂದ ಪಡೆದು ಆನಂದವನ್ನು ಶಾಂತಿಯನ್ನು ಹೊಂದಿ ಶರೀರ ಗುಣಧರ್ಮಗಳಿಗೆ ಅಲಕ್ಷ್ಯಮಾಡಿ ನಾನು ಆತ್ಮಸ್ವರೂಪನು, ಅಂತ ರಾತ್ಮಸ್ವರೂಪನೂ ಆಗಿ ನನಗಾವ ಬಂಧನವಿಲ್ಲ ವೆಂದೂ ಪರಮೇಶ್ವರನೇ ಮುಖ್ಯನೆಂದೂ ಉಳಿದದ್ದು ನಶ್ವರವೆಂದೂ ಭಾವಿಸಿದ್ದಾರೆ.

ಶ್ರೀ ಅರವಿಂದರು ನಮ್ಮೊಳಗಿನ ಅಂತರಾತ್ಮನ ಮುಖಾಂತರ ಜಗ ನ್ಮಾತೆಯನ್ನು ಸಾಕ್ಷಾತ್ಕರಿಸಿಕೊಂಡು ಅವಳ ಸಹಾಯದಿಂದ ವಿಶ್ವ ಶಕ್ತಿ ಗಳ ಆತಂಕವನ್ನು ದೂರಮಾಡಿಕೊಂಡು ಗುಣಗಳನ್ನು ತಿದ್ದಲಿಕ್ಕೆ ಬರುತ್ತ ದೆಂದು ಹೇಳುವರು. ಯಾಕಂದರೆ ಈ ಎಲ್ಲ ಸರಕಾರವು ಅವಳ ಕೈಯ್ಯಲ್ಲಿದೆ. ಆದರೆ ಇಂದಿನ ವರೆಗಿನ ಜ್ಞಾನಿಗಳು ಪರಮೇಶ್ವರಿಯ ಸರಕಾರದ ಪರಿ ಚಯ ಮಾಡಿಕೊಳ್ಳದೆ ಪರಮೇಶ್ವರ ನೆಡೆಗೆ ಹೋಗಿ ಸೃಷ್ಟಿಯ ಮತ್ತು ತಮ್ಮ ಗುಣಗಳ ರೂಪಾಂತರವನ್ನು ಮಾಡಿಕೊಳ್ಳದೆ ಬಂದಿದ್ದಾರೆಂದು ಶ್ರೀ ಅರವಿಂದರ ಮತವಿದೆ.

ಪರಮೇಶ್ವರನು ಭೂಮಿಯಮೇಲೆ ಕಾಲಕಾಲಕ್ಕೆ ಅವತರಿಸುತ್ತಾ ನೆಂದು ನಮ್ಮ ನಂಬಿಕೆ ಇದೆ. ಅದರಂತೆ ಜಗನ್ಮಾತೆಯೂ ಅವತರಿಸಿ ಬರುತ್ತಾಳೆ. ಪರಮೇಶ್ವರನು ಜ್ಞಾನ ಸ್ವರೂಪಿಯಾಗಿ ಜ್ಞಾನವನ್ನು ಹೇಳಿದರೆ ಪರಮೇಶ್ವರಿಯು ಆದರಂತೆ ಅವರನ್ನು ನಡೆಯುಲಿಕ್ಕೆ ಹಚ್ಚು ತ್ತಾಳೆ. ತಂದೆಯು ಮುಖದೊಳೆದು ಅಂಗಿಹಾಕಿಕೊಂಡು ಬಾ ಎಂದು ಮಗನಿಗೆ ಹೇಳಿದರೆ, ತಾಯಿ ಮುಖದೊಳೆದು ಅಂಗಿ ತೊಡಿಸಿ ಕಳಿಸು ತ್ತಾಳೆ. ಅವಳು ಇನಾಮನ್ನು ಪಡೆಯಲು ಬೇಕಾದದ್ದೆಲ್ಲವನ್ನು ತಿಳಿಸಿ ಮಗನಿಗೆ ಯೋಗ್ಯನನ್ನಾಗಿ ಮಾಡುತ್ತಾಳೆ. ಆದ್ದರಿಂದ ಮಾತೆಯ ಸಹಾ ಯದಿಂದ ಏನು ಶಕ್ಯವೋ ಅದು ಗುರುವಿನ ಸಹಾಯದಿಂದಲೂ ಅಶಕ್ಯ. ನಾವು ನಮ್ಮ ನ್ಯೂನತೆಗಳನ್ನು ಗುರುವಿನಲ್ಲಿ ಪೂರ್ಣ ಹೇಳುವದಿಲ್ಲ. ಆದರೆ ತಾಯಿಗೆ ಹೇಳುತ್ತೇವೆ. ಆಮೇಲೆ ಅದಕ್ಕೆ ತಕ್ಕ ಉಪಾಯವನ್ನು ಅವಳು ಮಾಡುತ್ತಾಳೆ. ಶ್ರೀ ಅರವಿಂದರ ರೂಪಾಂತರ ಯೋಗದಲ್ಲಿ "ತಾಯಿಯ ಹೊರತು ಗತಿಯಿಲ್ಲ" ವೆಂದು ಸ್ಪಷ್ಟ ಪಡಿಸಿದ್ದಾರೆ. ಅವಳು ಗುರುವಿನಂತೆ ಬೆದರಿಸಿ ಧಿಕ್ಕಾರ ಮಾಡಿದರೆ ಯಾರೂ ಈ ಹಾನಿಯನ್ನು

ತುಳಿಯಲಾರರು. ಆದ್ದರಿಂದ ಪರಮೇಶ್ವರಿಯೇ ಮನುಷ್ಯರೂಪ ಧಾರಣ ಮಾಡಿ "ಮಾತೆ" ಎಂದು ಹೆಸರಿಟ್ಟುಕೊಂಡು ಮಾನವರನ್ನು ದೇವ ಮಾನವರನ್ನಾಗಿ ಮಾಡಲಿಕ್ಕೆ ಪಾಂಡಿಚೇರಿಯಲ್ಲಿ ಬಂದು ನಿಂತಿದ್ದಾಳೆ. ಇದು "*Letters of Shri Arovinda on the Mother*" ಎಂಬ ಗ್ರಂಥದಲ್ಲಿ ಸ್ಪಷ್ಟವಾಗಿ ಹೇಳಿದ್ದಾರೆ.

ಆಶ್ರಮವೆಲ್ಲವನ್ನು ಅವರೆ ನೋಡಿ ಕೊಳ್ಳುತ್ತಿದ್ದರು, ಈಗಲೂ ನೋಡುತ್ತಾರೆ. ಶ್ರೀ ಅರವಿಂದರು ಜ್ಞಾನ ಸ್ವರೂಪರು. ರಾಜರು, ಮಾಲ ಕರು. ಶ್ರೀ ತಾಯಿಯವರು. ಶಕ್ತಿಸ್ವರೂಪರು, ವ್ಯವಸ್ಥಾಪಕರು. ಆಶ್ರಮ (ಸೃಷ್ಟಿಸಂಸಾರ) ದ ಸಂಸಾರವನ್ನು ಸಾಗಿಸಿಕೊಂಡು ಹೋಗುವವರು. ಆಶ್ರಮದ ಸಾಧಕರು ಶ್ರೀ ತಾಯಿಯವರ ಬಗ್ಗೆ ಶ್ರೀ ಅರವಿಂದರಲ್ಲಿ ವಿನಂತಿ ಮಾಡಿಕೊಂಡರೆ, "ಮಾತೆ ಬೇರೆಯಲ್ಲ, ನಾನೇ ಈ ವ್ಯವಸ್ಥೆ ಯನ್ನು ಮಾಡಿದ್ದೇನೆ. ಈ ವ್ಯವಸ್ಥೆಯು ತಾತ್ಪೂರ್ತಿಕವಾದದ್ದಲ್ಲ. ನೀವೆ ಲ್ಲರೂ ಅವಳ ಮುಖಾಂತರವೇ ನನ್ನಲ್ಲಿಗೆ ಬರಬೇಕು" ಎಂದು ಅವರು ಬರೆದಿದ್ದಾರೆ. ಅಂದಮೇಲೆ ಶ್ರೀ ಅರವಿಂದರಲ್ಲಿ ಭಕ್ತಿ ಯಾರಿಗಾದರೂ ಹುಟ್ಟಿದರೆ ಅವರು ಶ್ರೀ ತಾಯಿಯವರನ್ನು ನೋಡಿ ಬರಬೇಕು. ನಂತರ ಹೃದಯದಲ್ಲಿ ಅನಿಸಿದಂತೆ ಮಾಡಬೇಕು. ಅವರು ಪಾಶ್ಚಾತ್ಯರೆಂದು ಕೆಲ ವರ ಮೂಗು ಮುರಿಯುತ್ತಾರೆ. ಆದರೆ ನಮ್ಮ ದೇಶದಜ್ಞಾನ, ಪಾಶ್ಚಾ ತ್ಯರ ಅಚ್ಚುಕಟ್ಟುತನ ಐಹಿಕ ವ್ಯವಸ್ಥೆ ಇವುಗಳನ್ನು ಕೂಡಿಸಲು ಅರ ವಿಂದರು ಅವತರಿಸಿದ್ದರಲ್ಲವೆ? ಅವರು ಇಲ್ಲಿ ಹುಟ್ಟಿ ಇಂಗ್ಲಂಡದಲ್ಲಿ ಕಲಿತು ತಿರುಗಿ ಇಲ್ಲಿಯೇ ಬಂದು ಆಶ್ರಮವನ್ನು ಸ್ಥಾಪಿಸಿ ಮಾತೆ ಯನ್ನು ಅಂದರೆ (ಶಕ್ತಿಯನ್ನು) ಪಶ್ಚಿಮದಿಂದ ಆಕರ್ಷಿಸಿ ಇಹಪರಗಳೆರ ಡನ್ನು ಸಾಧಿಸಲಿಕ್ಕೆ ಅನುಕೂಲವಾಗುವಂತೆ ಮಾಡಿದ್ದಾರೆ.

ಆಶ್ರಮದಲ್ಲಿಯ ಅಚ್ಚುಕಟ್ಟುತನಯನ್ನೂ ವ್ಯವಸ್ಥೆಯನ್ನೂ ಸ್ವಚ್ಛತೆ ಯನ್ನೂ ನೋಡಿದರೆ ಯಾವ ರಾಜದಂಡದಿಂದಲೂ ಸಾಧ್ಯವಾಗಲಾರದು ವ್ಯವಸ್ಥೆ ಎಲ್ಲಕಡೆಗೂ ಅಲ್ಲಿದೆ. ತಾಯಿಯವರು ನಮ್ಮ ಹೃದಯದಲ್ಲಿದ್ದಾ ರೆಂಬ ಭಾವನೆ ತಪ್ಪಿದಲ್ಲಿ ಶಿಕ್ಷೆ ಯಾಗುತ್ತಿದೆಂಬ ಅನುಭವ, ಅಂಜಿಕೆ, ಇದೆಲ್ಲವನ್ನು ನೋಡಿ (ದರ್ಶಿಸಿ) ಅನುಭವಿಸಬೇಕು. ಬರಿ ವಿಚಾರಿಸುತ್ತ ಚಿಕಿತ್ಸೆಮಾಡುತ್ತ, ಕೂಡ್ರಬಾರದು.

ಜಗತ್ತಿನಲ್ಲಿ ನಾವು ಹೇಗೆ ಇರಬೇಕು ಎಂಬುದನ್ನು ತೋರಿಸುವದಕ್ಕಾಗಿ ಪ್ರಯೋಗ ಶಾಲೆಯನ್ನು ತೆಗೆದಿದ್ದಾರೆಂಬುದು, ಅವರು ಅಡಿಗೆಯನ್ನು ಹೇಗೆ ಮಾಡುತ್ತಾರೆ, ಹೇಗೆ ಬಟ್ಟೆ ಒಗೆಯುತ್ತಾರೆ, ಕೊಡಕೊಳ್ಳುವವರ ವ್ಯವಹಾರವನ್ನು ಹೇಗೆ ಮಾಡುತ್ತಾರೆ, ಜನರ ಕೂಡ ಹೇಗೆ ನಡೆದು ಕೊಳ್ಳುತ್ತಿದ್ದಾರೆ, ಬೇಡಿಕೊಳ್ಳುವವರ ಕೂಡ ಹೇಗೆ ನಡೆದು ಕೊಳ್ಳುತ್ತಿದ್ದಾರೆ, ಗಂಡು ಹೆಂಣು ಯಾವಭಾವದಿಂದ ಇರುತ್ತಾರೆ, ಶಾರೀರಕ ವ್ಯಾಯಾಮವನ್ನು ಹೇಗೆ ಮಾಡುತ್ತಾರೆ, ಎಷ್ಟು ಸ್ವಲ್ಪ ಮಾತಾಡುತ್ತಾರೆ, ಒಕ್ಕಲತನವನ್ನೂ ಹೂ ದೋಟವನ್ನು ಹೇಗೆ ಸರ್ವಾಂಗ ಸುಂದರವಾಗಿ ಇಟ್ಟಿರುತ್ತಾರೆ, ಇದೆಲ್ಲವನ್ನು ನೋಡಿದಲ್ಲಿ ಗೊತ್ತಾಗುವದು. ಅಲ್ಲದೆ ಅವ್ಯವಸ್ಥಿತವಾಗಿದ್ದವರು ಆ ವಾತಾವರಣದಲ್ಲಿ ತಾಯಿಯವರ ಸನ್ನಿಧಿಯಲ್ಲಿ ವ್ಯವಸ್ಥಿತವೇಳೆ ಪಾಲಿಸುತ್ತ ಕೆಲಸವನ್ನು ತಪ್ಪದೇ ಮಾಡುತ್ತಿರುತ್ತಾರೆ. ಅದು ನಮ್ಮ ಯೋಗ್ಯತೆಯಲ್ಲ, ನಮ್ಮನ್ನು ಯಂತ್ರವನ್ನಾಗಿ ಮಾಡಿ ತಾಯಿಯವರು ನಿಯಂತ್ರಣ ಮಾಡುತ್ತ ನಡೆಯಿಸಿಕೊಂಡು ಹೋಗುತ್ತಾರೆ. ಅಂದರೆ ನಮ್ಮೊಳಗಿನ ಅಂತರಾತ್ಮನ ಆದೇಶದಂತೆ ನಡೆಯಲಿಕ್ಕೆ ಅಲ್ಲಿ ಸಹಜವಾಗುತ್ತದೆ. ಅಂದರೆ ಅಂತರಾತ್ಮನ ಜಾಗ್ರೃತಿಯು ತೀವ್ರವಾಗಿ ಆಗುತ್ತದೆ. ಆ ಮೇಲೆ ಭಕ್ತಿ ವಿಶ್ವಾಸ ಬೆಳೆಯುತ್ತವೆ. ಪ್ರಾರ್ಥನೆಯಿಂದ ಶಕ್ತಿಯನ್ನು ಪಡೆಯಲಿಕ್ಕೆ ಬರುತ್ತದೆ. ಈಗಾಗಲೇ ಹೇಳಿದ ಕರ್ಮಯೋಗಕ್ಕೆ ನಾವು ಯೋಗ್ಯರಾಗುತ್ತ ಹೋಗುತ್ತೇವೆ.

ಶ್ರೀ ಅರವಿಂದರು "ನಿಮ್ಮನ್ನು ನೀವು ತಾಯಿಯವರಿಗೆ ಒಪ್ಪಿಸಿರಿ" ಎಂದು ಹೇಳಿದ್ದಾರೆ. ಉಳಿದದ್ದೆಲ್ಲವನ್ನು ನಿಮ್ಮ ಸಲುವಾಗಿ ಅವರು ಮಾಡುತ್ತಾರೆ. ಆದರೆ ನಿಮ್ಮ ಇಚ್ಛೆಯಂತೆ ಶ್ರೀ ತಾಯಿಯವರಿಗ ಮಾಡೆಂದರೆ ಆಗದು. ಅದು ಅಜ್ಞಾನ. ಹೀಗೆ ನಾವು ಮಹಾತಾಯಿಯವರ ಕೂಸಾಗಿ ಆನಂದದಿಂದ ದೇವರ ಸನ್ನಿಧಾನದತ್ತ ಸಾಗುವಾ.

---

# ಮಿತ್ರ! ಏನು ಚಂದವು?

## (ಶ್ರೀ ಆನಂದ ಕವಿಗಳು ಕುರುಗುಂದ)



೧

ದುರುಳ ಜನರಿಗೆ ಜಗಳಚಂದವು.
ಸರಳ ಜನರಿಗೆ ಸತ್ಯಚಂದವು.
ಪರಮ ಪುಣ್ಯದ ಕಾರ್ಯಚಂದವು. ಭಲರೆ: ಬಹುಚಂದ
ಜರಠ ಜನರಿಗೆ ವಿರತಿ ಚಂದವು.
ತರುಣಿ ತರುಣರ ಮದುವೆ ಚಂದವು.
ಸರಸ ಕನ್ನಡ ನುಡಿಯು ಚಂದವು ಭಲರೆ ಬಹುಚಂದ

೨

ಫಲವು ಇದ್ದರೆ ಹೊಲವು ಚಂದವು.
ಬಲವು ಇದ್ದರೆ ಬಾಳ್ವೆ ಚಂದವು.
ಉಲಿವ ಕೋಕಿಲ ದನಿಯು ಚಂದವು ಭಲರೆ! ಬಹು ಚಂದ
ಎಳೆಯ ಮಕ್ಕಳ ಮಾತು ಚಂದವು
ಮಳೆಯು ಬಿದ್ದರೆ ಭೂಮಿ ಚಂದವು
ಬಿಳಿಯ ಖಾದಿಯ ಬಟ್ಟೆ ಚಂದವು, ಭಲರೆ! ಬಹು ಚಂದ

೩

ರೊಕ್ಕ ಇದ್ದರೆ ಸಂತೆ ಚಂದವು
ಚಿಕ್ಕತನದಲ್ಲಿ ವಿದ್ಯೆಚಂದವು
ಮಕ್ಕಳಿದ್ದರೆ ಮನೆಯು ಚಂದವು, ಭಲರೆ! ಬಹುಚಂದ
ಚೊಕ್ಕ ಚಿನ್ನದ ಬಣ್ಣ ಚಂದವು
ಲಕ್ಷ್ಯವಿಟ್ಟರೆ ಕೆಲಸ ಚಂದವು
ನಕ್ಕು ಕೇಳುವ ಕಥೆಯು ಚಂದವು ಭಲರೆ! ಬಹುಚಂದ

೪

ನಾದ ವಿದ್ದರೆ ಗಾನ ಚಂದವು
ವೇದ ಶಾಸ್ತ್ರದ ವಚನ ಚಂದವು
ಸಾಧು ಸಂತರ ಸಂಗ ಚಂದವು. ಭಲರೆ ಬಹುಚಂದ
ವ್ಯಾಧಿಯಿಲ್ಲದ ದೇಹ ಚಂದವು
ಭೇದ ವಿಲ್ಲದ ಬುದ್ಧಿ ಚಂದವು
ಓದು ಬರೆಯುವ ಸಾಲೆ ಚಂದವು. ಕಲಿತರತಿ ಚಂದ

೫

ನೀರು ಇದ್ದರೆ ಊರು ಚಂದವು
ಶೂರರಿದ್ದರೆ ದೇಶ ಚಂದವು
ಸಾರಿ ಪೇಳುವೆ ಗೋವು ಚಂದವು. ಪೊರೆವುದತಿ ಚಂದ
ಚಾರು ಮಿತ್ರಾ ! ಏನು ಚಂದವು
ಭಾರತಾಂಬೆಯು ಸೇವೆ ಚಂದವು
ವೀರ ಶಂಕರ ನಾಮ ಚಂದವು. ನೆನವುದತಿ ಚಂದ

---

# ನನ್ನಯ್ಯ

ಲೇಖಕ:— ಶ್ರೀ ಬಾಣದ. ಲಿಂಗಣ್ಣ. ಶಾಲಾ ಗುರೂಜಿ.

( ಹಿಂದಿನ ಸಂಚಿಕೆಯಿಂದ ಬಂದದ್ದು )

ಗುಂಡಯ್ಯ:—(ಹೊನ್ನುತೋರಿಸಿ) ಯಾರವುುಂದೆಯೂ ಹೇಳಬೇಡ. ಇದರಲ್ಲಿ ನೀನು ಅರ್ಧ ತೆಗೆದುಕೊಳ್ಳು ನಾನು ಅರ್ಧ ತೆಗೆದುಕೊಳ್ಳುವೆ. ಒಬ್ಬರಿಗೂ ಸುದ್ದಿ ಆಗಬಾರದು ನೋಡು ತಿಳಿಯಿತೆ? (ಹಂಚಿಕೊಡುವನು)

ತೆರೆ

(ನೀಲಪ್ಪನ ಮನೆ)

ನೀಲಪ್ಪ — ಶಿವಗಂಗೀ .. ಏ ಶಿವಗಂಗೀ ನನಗೆ ಗೊತ್ತುಂಟು. ಬಾರೆ ಇಲ್ಲಿ.

ಶಿವಗಂಗಿ — ಏಕೆ ಇಷ್ಟು ಕೂಗೋದು.

ನೀಲಪ್ಪ — ನೋಡು. ನಾನು ವಿಭೂತಿ ನೋಡಲು ಹೊರಟರೆ ಇಷ್ಟು ಹೊನ್ನು ಸಿಕ್ಕ್ಯದ (ತೋರಿಸುವನು)

ಶಿವಗಂಗಿ — ಈಗಾದರೂ ತಿಳಿಯಿತೆ? ವಿಭೂತಿಯ ಮಹಾತ್ಮೆ? ಈ ಹೊನ್ನನ್ನು ನಿಮ್ಮ ಹತ್ತಿರ ಇಟ್ಟುಕೊಳ್ಳದೇ ನಮ್ಮ ಶರಣರ ಕಡೆ ಒಪ್ಪಿಸಿಬಿಡಿ.

ನೀಲಪ್ಪ — ನನಗೆ ಗೊತ್ತುಂಟು. ಹಾಗೆ ಮಾಡುವೆನು. ಅಲ್ಲದೆ ನಾನು ಇನ್ನು ಮೇಲೆ ಪ್ರತಿನಿತ್ಯ ಸ್ನಾನ ಪೂಜೆ ಎಲ್ಲವನ್ನೂ ಮಾಡಿ ಊಟಮಾಡುವೆ. ಈಗ ನನಗೆ ತಿಳಿಯಿತು ನಮ್ಮ ಅಷ್ಟಾವರಣದ ಮಹಾತ್ಮೆ

(ತೆರೆಬೀಳುವದು)

## ದೃಶ್ಯ ೭

(ಸುಜ್ಞಾನಿಗಳು ಹಾಗೂ ಮಾತಂಗ ಮಾತನಾಡುತ್ತ ಪ್ರವೇಶಿಸುವರು. ಮಾತಂಗನು ಲಿಂಗಧಾರಿಯಾಗಿದ್ದಾನೆ)

ಸುಜ್ಞಾನಿಗಳು — ಮಾತಂಗಾ, ನೋಡಿದಿಯಾ ನಿನ್ನ ಹೆಂಡತಿಯ ಗುಣಗಳನ್ನು? ನಿನ್ನವಳೆಂದು ನೀನು ಹಂಬಲಿಸುತ್ತಿದ್ದಿ. ನೀನು ಸತ್ತನೆಂಬ ಸುದ್ದಿ ಕೇಳಿ ತನ್ನ ವಿಟಪುರುಷನೊಡನೆ ಹೋದಳಂತೆ ಕೇಳಿದೆಯೋ?

ಮಾತಂಗ — ಮಹಾನುಭಾವರೆ, ಈಗಲೇ ಅವರಿದ್ದೆಡೆಹೋಗಿ ಆ ನೀಚರಿಬ್ಬರನ್ನೂ ಕೊಲೆಮಾಡಿ ಬರುವೆನು. ನನ್ನಿಂದ ಸೈರಿಸುವದು ಆಗಲೊಲ್ಲದು.

ಸುಜ್ಞಾನಿಗಳು:— ಮಾತಂಗಾ! ನೀನು ಈಗ ಲಿಂಗಧಾರಿಯಾಗಿರುವೆ. ಮತ್ತೆ ಅಂತಹ ಹೇಯ ಕಾರ್ಯಗಳನ್ನು ಮಾಡುವಿಯಾ? ಶರಣ ಗಟ್ಟಿವಾಳಯ್ಯನ ಹೆಂಡತಿಗೆ ಇಬ್ಬರು ವಿಟಪುರುಷರಿರಲು ಅವರಿಬ್ಬರೂ ನನ್ನವಳು ನನ್ನವಳೆಂದು ಬಡಿದಾಡಲು ಅವನು ಸಹನತೆಯಿಂದ ಅವಳು ನಿಮ್ಮಿಬ್ಬರಿಗೂ ಇದ್ದಾಳೆ. ಎಂದು ಹೇಳಿ ಅವಳಂತಹ ಎರಡು ಶರೀರಮಾಡಿ ಒಬ್ಬರಿಗೊಂದು ಒಬ್ಬರಿಗೊಂದು ಕೊಟ್ಟನಂತೆ. ಇದು ಶರಣರ, ಲಿಂಗಧಾರಿಗಳ ಅಹಿಂಸಾ ಧರ್ಮ ತಿಳಿಯಿತೆ?

ಮಾತಂಗ — ತಮ್ಮಿಚ್ಛೆಯಂತೆ ಆಗಲಿ ಗುರುಗಳೇ

ಸುಜ್ಞಾನಿಗಳು:— ಮಾತಂಗಾ! ನೀನು ಭಕ್ತಿಯಿಂದ ನಿನ್ನ ಗುರುವನ್ನು ಕಾಣುತ್ತಿರುವದು ನನಗೆ ದಿನೇ ದಿನೇ ನಿನ್ನ ಮೇಲೆ ಪ್ರೇಮು ಹೆಚ್ಚಾಗತೊಡಗಿದೆ.

ಮಾತಂಗಃ— ಗುರುಗಳೇ ಅಂತಹ ಭಕ್ತಿಯೇ ನನ್ನದು? ಇನ್ನೂ ನನ್ನ ಮನವು ಮಲಿನತೆಯಿಂದ ದೂರಾಗಿಲ್ಲ. ಅದಕ್ಕೂ ತಮ್ಮ ಕೃಪೆ ಬೇಕು.

ಸುಜ್ಞಾನಿಗಳುಃ— ಮಾತಂಗಾ! ಮಾತಂಗಾ!! ಇನ್ನು ನಿನಗೆ ಮಾತಂಗ ನೆನ್ನಲಾರೆ!!! ನೀನು ನನ್ನ ಪ್ರೀತಿಯ ಪ್ರಾಣದ ಶಿಷ್ಯ ಅದಕ್ಕಾಗಿ ನಿನಗೆ ನನ್ನ ಪ್ರೇಮದ ಹೆಸರಿನಿಂದ ನನ್ನಯ್ಯನೆಂದು ಕರೆಯುವೆ. ನನ್ನಯ್ಯ ?

ಮಾತಂಗಃ— ಧನ್ಯ, ಧನ್ಯ, ನಾನೇಧನ್ಯ. ( ಪಾದಕ್ಕೆರಗುವನು )

ಸುಜ್ಞಾನಿಗಳುಃ— (ಮೇಲೆತ್ತಿ) ಏಳು ನನ್ನಯ್ಯ! ಮೇಲೇಳು (ಅಪ್ಪುವನು) ನನ್ನಯ್ಯ! ಇನ್ನು ಕಲ್ಯಾಣಕ್ಕೆ ಹೊರಡುವಾ ನಡೆ. ನನಯ್ಯ. ( ಗುರುಗಳು ವಚನ ಅನ್ನುತ್ತಹೋಗುವರು. ಅವರ ಹಿಂದೆ ನನ್ನಯ್ಯನು. ಹೋಗುವನು )

ಆತ್ಮ ತೇಜವನು ಬಿಟ್ಟಾಗಲೇ ಗುರುವನರಿದ! ಮನವಿಕಾರವ ಬಿಟ್ಟಾಗಲೇ ಲಿಂಗವನರಿದ! ಧನವಿಕಾರವ ಬಿಟ್ಟಾಗಲೇ ಜಂಗಮುವನರಿದ। ಇಂತೀ ತ್ರಿವಿಧ ನಾಸ್ತಿಯಾದಂಗಲ್ಲದೆ ನಿಃಕಳಂಕ ಮಲ್ಲಿಕಾರ್ಜುನನಲ್ಲಿ ಸಹಜ ಭಕ್ತನಲ್ಲ.

—ತೆರೆ—

(ಗುಡ್ಡದ ದೃಶ್ಯ)

ಸುಜ್ಞಾನಿಗಳು — ನನ್ನಯ್ಯಾ ನನಗೆ ಏಕೋ ಸ್ವಲ್ಪ ಆಯಾಸವಾಗಿದೆ. ಆ ದೇವಾಲಯದ ಮುಂದಿನ ಗಿಡದ ನೆರಳಿನಲ್ಲಿ ಕೂಡೋಣ ನಡೆ.

ಮಾತಂಗ — ತಾವು ಗಿಡದ ನೆರಳಿನಲ್ಲಿ ಮಲಗಿಕೊಂಡು ವಿಶ್ರಾಂತಿ ತೆಗೆದುಕೊಳ್ಳಿರಿ. ಅಷ್ಟರಲ್ಲಿ ನಾನು ಪತ್ರಿ, ಪುಷ್ಪ, ಅರ್ಘ್ಯ ಎಲ್ಲಾ ಪೂಜಾಸಾಮಗ್ರಿಗಳನ್ನು ವ್ಯವಸ್ಥೆಗೊಳಿಸುವೆನು.

ಸುಜ್ಞಾನಿಗಳು ನಿನ್ನಿಚ್ಛೆ ನನ್ನಯ್ಯಾ.

(ಮುಂದೆ ಹೋಗಿ ಗುರುಗಳು ಮಲಗುವರು. ನನ್ನಯ್ಯನು ಹೋಗುವನು. ಸ್ವಲ್ಪ ಸಮಯದಲ್ಲಿ ಒಬ್ಬನು ರಕ್ತ ಸೋರುತ್ತಿರುವ ರುಂಡವನ್ನು ಮಲಗಿದ ಗುರುಗಳ ಬಳಿಯಲ್ಲಿ ಇಟ್ಟು ಓಡುವನು. ಹಿಂದಿನಿಂದ ಒಬ್ಬ ಸೈನಿಕನು ಓಡಿ ಬಂದು)

ಸೈನಿಕ — ಅಲಾ ಕಳ್ಳಾ, ನಮ್ಮ ರಾಜಕುಮಾರನ ಶಿರವನ್ನು ತಂದವನು ನೀನೇ ವಾಹವಾ! ನಿನ್ನ ಆಯುಷ್ಯ ಮುಗಿಯಿತೆಂದೇ ತಿಳಿ. ಶಾಬಾಶ್ ಇವನ ಡಂಭಾಚಾರದ ವೇಷ ನೋಡಿರಿ. ಕೊರಳಲ್ಲಿ ರುದ್ರಾಕ್ಷಿ, ಮೈಯೆಲ್ಲಾ ವಿಭೂತಿ, ಇಂತಹ ವೇಷ ಧರಿಸಿ ಹೀನ ಕೃತಿಯನ್ನಾಚರಿಸುವಿಯಾ? ನಮ್ಮ ದೊರೆಗಳ ಆಜ್ಞೆಯಂತೆ ಸದ್ಯ ನಿನ್ನ ಶಿರವನ್ನೇ ಕೊಚ್ಚುವೆ (ಕತ್ತಿಯನ್ನು ಮೇಲೆತ್ತುವನು. ಅಷ್ಟರಲ್ಲಿ)

ಮಾತಂಗ— ಯಾರವರು? ತಡೆ ತಡೆ· (ಓಡುತ್ತ ಬರುವನು) ನೀಚಾ ನನ್ನ ಗುರುವಿನ ಮೇಲೆ ಕೈಯೆತ್ತುವಿಯಾ? ( ಗುರುಗಳು ಏಳುವರು )

ಸುಜ್ಞಾನಿಗಳು — ಇದೇನು ನನ್ನಯ್ಯ ಹೀಗೇಕೆ?

ಸೈನಿಕ — ಏನೆಂಬುದು ಈಗ ತಿಳಿಯುವದಿಲ್ಲ. ನಿನ್ನ ಶಿರವನ್ನು ಕೊಚ್ಚಿದಾಗ ತಿಳಿಯುವದು. ನೋಡು ಇಲ್ಲಿ (ರುಂಡ ತೋರಿಸುವನು)

ಮಾತಂಗ — (ಗಾಬರಿಯಿಂದ) ಇದು ಯಾರದು? ಸುಮ್ಮನೇ ನನ್ನ ಗುರುವಿನ ಮೇಲೆ ಅಪರಾಧವೆ?

ಸುಜ್ಞಾನಿಗಳು — ಮಹಾನುಭಾವರೇ ನಾವು ನಿರಪರಾಧಿಗಳು. ಸ್ವಲ್ಪ ಆಯಾಸವಾದ ಮೂಲಕ ಇಲ್ಲಿ ಮಲಗಿಕೊಂಡಿದ್ದೆವು. ಇಷ್ಟರಲ್ಲಿ ಈ ಘಟನೆ ಜರುಗಿದೆ.

ಸೈನಿಕ — ಅದನ್ನೇನೂ ನಾನು ಕೇಳುವವನಲ್ಲ. ರಾಜಕುಮಾರನ ರುಂಡವು ಯಾರಲ್ಲಿ ಸಿಗುವದೋ ಅವರ ರುಂಡವನ್ನು ತರಬೇಕೆಂದೂ ದೊರೆಗಳಾಜ್ಞೆಯಾಗಿದೆ ತಿಳಿಯಿತೆ ?

ಸುಜ್ಞಾನಿಗಳು — (ಬಾಗಿನಿಂತು) ತಮ್ಮದೊರೆಗಳಾಜ್ಞೆಪಾಲಿಸಿಕೊಳ್ಳಿ.

ಮಾತಂಗ — ಇಲ್ಲ. ಇಲ್ಲಾ. ಗುರುಗಳು ಅಪರಾಧಿಯಲ್ಲ. ನಾನೇ ಅಪರಾಧಿ ನನ್ನ ರುಂಡವನ್ನೇ ತೆಗೆದುಕೊಳ್ಳಿ ( ಗುರುಗಳನ್ನು ಹಿಂದಕ್ಕೆ ಸರಿಸಿ ತಾನು ಬಾಗಿ ನಿಲ್ಲುವನು )

ಸೈನಿಕ — ( ಸ್ವಗತ ) ಉಪಾಯವಿಲ್ಲ. ( ಕತ್ತಿ ಎತ್ತಿ ಹೊಡೆಯ ಹೋಗುವನು. ಕತ್ತಿ ಹಿಂದೆ ಜಾರಿಬೀಳುವದು. ಹೀಗೆ ಮೂರುಸಾರೆ ಎತ್ತಿ ಹೊಡೆಯುವಾಗ ಹಿಂದೆ ಬೀಳುವದು ) ಅಯ್ಯೋ ಇವರು ಯಾರೋ ಮಹಾತ್ಮರು ಕಾಣಿಸುತ್ತದೆ. ( ನಮಸ್ಕರಿಸಿ ) ಮಹಾನುಭಾವರೆ ಈ ಅಜ್ಞಾನಿಯ ತಪ್ಪು ಕ್ಷಮಿಸಿರಿ.

ಸುಜ್ಞಾನಿಗಳು — ಏಳಯ್ಯ. ನಿನ್ನದೇನು ತಪ್ಪು? ಇದರಲ್ಲಿ ಎಲ್ಲವೂ ಆ ಮಹಿಮನ ಲೀಲಾ.

ಸೈನಿಕ — ಇನ್ನು ನಾನು ಹೊರಡುವೆ. ರಾಜಾಜ್ಞೆಯಂತೆ ಆ ಕೊಲೆಗಡಕನನ್ನು ಶೋಧಿಸುವೆ.

ಸುಜ್ಞಾನಿಗಳು — ನಡೆಯಬೇಕು. ಶರಣು.

ಮಾತಂಗ — ಗುರುಗಳೇ ನಡೆಯಿರಿನ್ನು. ಪೂಜೆಯನ್ನು ಮುಗಿಸಿಕೊಳ್ಳಿರಿ. ವೇಳೆ ಬಹಳವಾಗಿದೆ.

ಸುಜ್ಞಾನಿಗಳು— ನಡೆ ನನ್ನಯ್ಯಾ. ಪೂಜೆಯನ್ನು ಮುಗಿಸಿಕೊಂಡು ಹೊರಡುವಾ ನಡೆ. ಇನ್ನು ಕಲ್ಯಾಣ ನಗರವು ಸ್ವಲ್ಪೇ ದೂರ ಉಳಿದಿದೆ.

(ಹೋಗುವರು)

ತೆರೆ ಬೀಳುವದು.

## ದೃಶ್ಯ ೮



(ಕಲ್ಯಾಣ ನಗರದಲ್ಲಿ ಶಿವಾನುಭವ ಮಂಟಪ. ಶರಣ ಶರಣೆಯರು ನೆರೆದಿದ್ದಾರೆ. ಅದರಲ್ಲಿ ಶಿವಗಂಗಿಯೂ ಇದ್ದಾಳೆ ಎಲ್ಲರ ಕೈಯಲ್ಲಿ ತಾಡ ಓಲೆಗಳ ಎಲೆಗಳು ಇವೆ. ಹಣೆಯ ಮೇಲೆ ವಿಭೂತಿ ಕಂಗೊಳಿಸುತ್ತಿದೆ.

ಶುಭ್ರವಾದ ಮಡಿ ಬಟ್ಟೆಗಳನ್ನುಟ್ಟಿದ್ದಾರೆ. ಪ್ರಭುಗಳು ಶಾಂತ ಚಿತ್ತ ರಾಗಿ ಸಿಂಹಾಸನದ ಮೇಲೆ ವಿರಾಜಮಾನ ರಾಗಿದ್ದಾರೆ.)

ಪ್ರಭುಗಳು— ಶರಣ ಶರಣೆಯರೇ ! ತಾವೆಲ್ಲರೂ ಅನುಭಾವದ ಅಮೃತ ರಸವನ್ನು ಸುರಿಸುತ್ತ, ಆ ಅನುಭಾವದ ಅನುಭವವನುಂಡು ಪರಿಶುದ್ಧವಾದ ನಡೆಯಿಂದ ನಡೆದು ಎಲ್ಲರಿಗೂ ಆದರ್ಶ ಪ್ರಾಯರಾಗಿ ರುವದು ನನಗೆ ಮನ ಹಿಡಿಯಲಾರದಷ್ಟು ಆನಂದ ಉಕ್ಕಿ ಬರುತ್ತಿದೆ. ತಮ್ಮೆಲ್ಲರ ನಡೆ, ತಮ್ಮೆಲ್ಲರ ನೀತಿ ಇಷ್ಟೆ ಪರಿಶುದ್ಧವಾಗಿದೆಯೆಂದು ಹೇಳುವ ದಲ್ಲ. ತಮ್ಮೆಲ್ಲರ ವಿಚಾರಗಳನ್ನುಂಡುವರ ನಾಡಿನ ಜನತೆ ಬೆರಗಾಗಿ ಮೊರೆ ಹೊಕ್ಕಿದ್ದಾರೆ. ಇದು ಶರಣ ಧರ್ಮಕ್ಕೆ ಶೋಭೆ, ಎಂದು ಎದೆ ತಟ್ಟಿ ಹೇಳಬಹುದು ಅಂತೆಯೇ ಓಡಿಸಾ ಪ್ರಾಂತದಲ್ಲಿ ಸುಜ್ಞಾನಿ ಮುನಿ ಗಳೆಂಬವರು ಲಿಂಗ ನಿಷ್ಠೆಯುಳ್ಳವ ರಾಗಿದ್ದಾರೆ. ಅಲ್ಲದೆ ಲಿಂಗಧಾರಣೆ ಮಾಡುವದು ಹಾಗೂ ಅಜ್ಞರನ್ನು ಸುಜ್ಞರನ್ನಾಗಿ ದುರ್ಮಾರ್ಗದಲ್ಲಿದ್ದ ವರನ್ನು ಸುಮಾರ್ಗದಲ್ಲಿ ನಡೆಯುವಂತೆ ಮಾಡುವ ಕಾಯಕವನ್ನು ಮಾಡು ತ್ತ ಸಂಚರಿಸುವರು. ನಿಜವಾಗಿಯೂ ಅವರು ಶರಣ ಧರ್ಮರಕ್ಷಕರು. ತಮ್ಮ ಕಾಯಕದಲ್ಲಿ ಚಾಚೂ ತಪ್ಪದೇ ಮುಂದುವರಿಸಿದ್ದಾರೆ. ಇಷ್ಟೇ ಏಕೆ ? ಪ್ರಸಂಗ ಬಂದಲ್ಲಿ ಇಂತಹ ಕಾರ್ಯಗಳಿಗಾಗಿ ತಮ್ಮ ದೇಹವನ್ನೂ ಪಣವಾಗಿ ಒಡ್ಡಿದ್ದಾರೆ.

ಬಸವಣ್ಣನವರು— (ಎದ್ದು) ಶರಣರಿಗೆ ಶರಣು ! ಅದೆಲ್ಲವೂ ತಮ್ಮ ಕೃಪೆ. ಸಧ್ಯ ಆ ಮಹಾ ಮಹಿಮರು ಎಲ್ಲಿ ?

ಪ್ರಭುಗಳು— ಕಲ್ಯಾಣ ನಗರಕ್ಕೆ ಬರಬೇಕೆಂಬಾಸೆಯಿಂದ ಹೊರಟು ದಾರಿಯಲ್ಲಿ ಅನೇಕ ಕಷ್ಟಗಳನ್ನು ಸಹಿಸುತ್ತ ಹೊರಟಿದ್ದಾರೆ.

ಅಕ್ಕಮಹಾದೇವಿ — (ಎದ್ದು ನಮಿಸಿ) ಪ್ರಭುಗಳ ಪಾದ ಸನ್ನಿಧಿಗೆ ಶರಣು! ಆ ಮಹಾತ್ಮರು ಇಲ್ಲಿಗೆ ಬರಬೇಕಾದರೆ ಇನ್ನೂ ಬಹಳ ದಿವಸ ಗಳು ಬೇಕಾಗ ಬಹುದೆ ?

ಪ್ರಭುಗಳು — ಇಲ್ಲ ತಾಯಿ! ಅವರು ಈಗ ಕಲ್ಯಾಣ ನಗರವನ್ನು ಸಮೀಪಿಸಿದ್ದಾರೆ. ಇಂದೇ ಅವರು ಇಲ್ಲಿಗೆ ಬರುವರು. ಅದೂಕೂಡ ಇಷ್ಟ ರಲ್ಲಿಯೇ ಬರಬಹುದು. ಕಾರಣ ಇಂದಿನ ದಿನವನ್ನು ನೀವೆಲ್ಲರೂ ಸುದಿನ ವೆಂದು ಎಣಿಸಬೇಕು. ಶರಣರ ದಿನವೆಂದು ಎಣಿಸಬೇಕು. ಇಂದು

ಸೋಮವಾರ ನೆನಪಿರಲಿ! ಸೋಮವಾರ ಶರಣರ ದಿನ. ಸೋಮವಾರ ಶರಣರ ದಿನ!

ಎಲ್ಲರೂ — ( ಒಂದೇಸ್ವರದಿಂದ ) ಸೋಮವಾರ ಶರಣರ ದಿನ ! ಸೋಮವಾರ ಶರಣರ ದಿನ.

ಪ್ರಭುಗಳು — ನಿನ್ನೆ ಚರ್ಚಿಸಿದ ಆಶೆಯ ವಿಷಯವಾಗಿ ತಾವೆಲ್ಲರೂ ಓದಿ ತೋರಿಸಬೇಕೆಂದು ಬಿನ್ನಯಿಸುವೆ. ಭಕ್ತಿ ಭಾಂಡಾರಿ ಬಸವಣ್ಣನವರೇ ತಾವು ಮೊದಲು ಪ್ರಾರಂಭಿಸಬೇಕು.

ಬಸವಣ್ಣನವರು — (ಎದ್ದು ನಮಿಸಿ) ಪ್ರಭುಗಳಾಜ್ಞೆ ಎನ್ನ ಶಿರದ ಮೇಲೆ. ( ಓದುವರು )

ಆಸೆಗೆ ಹುಟ್ಟಿದ ಪ್ರಾಣಿಗಳು ಆಸೆಯನೆ ಕಲಿತು ಪುಣ್ಯ
ಪದವಿಯ ಬಯಸಿದರೆ ಭವಮಾಲೆಯು ಬರವು ತಪ್ಪದು ।
ಬೇಡಲು ಹುಟ್ಟಿದ ಪ್ರಾಣಿಗಳಿಗೆ ಬೇಡಲು ವಿಧಿಯೇ? ಸೂಳೆಗೆ
ಹುಟ್ಟಿದ ಪ್ರಾಣಿಗೆ ನಿಜಗುಣ ಸಜ್ಜನ ವಪ್ಪುದೆ ? ಲಿಂಗದುದಯ
ಶರಣ ವಿಸ್ತಾರವು ಬಯಸಿದರೊಳವೇ ಕೂಡಲಸಂಗಮದೇವಾ
ನಿಮ್ಮಲ್ಲಿ ॥

( ಭಾವ ) ಸತಿಪತಿಗಳ ಪ್ರೇಮದ ಆಶೆಯ ತಾಕಲಾಟದಲ್ಲಿ ಮಾನವನು ಕೂಸಾಗಿ ಜನಿಸಿ ಆಸೆಯನ್ನು ಕಲಿತು ಪುಣ್ಯ ದವಿಯ ಆಸೆ ಮಾಡಿದರೆ ಈ ಸಂಸಾರದ ಜೋಂಜಾಟ ತಪ್ಪೀತೆ ? ಮನದಲ್ಲಿ ಹೇಯವಾದ ಆಸೆಯ ರಾಶಿಯನ್ನೇ ತುಂಬಿಕೊಂಡಿರುವ ಈ ಜಡ ಪ್ರಾಣಿಗಳಿಗೆ ಕೂಡಲ ಸಂಗಮನ ಮನ ಒಲೆಯುವದೇ ?

ಪ್ರಭುಗಳು — ತಾವು ಕುಳಿತುಕೊಳ್ಳಿ. ಒಳ್ಳೇ ಚೆನ್ನಾಗಿದೆ. ಸಿದ್ಧ ರಾಮೇಶ್ವರ ತಂದೆಗಳೇ ತಾವುಗಳು ಪ್ರಾರಂಭಿಸಬೇಕು.

ಸಿದ್ಧರಾಮ — ಪ್ರಭುಗಳ ಇಚ್ಛೆ —

ಆಸೆ ಎಂಬವಳು ಆರನಾದಡೂ ತನ್ನತ್ತಲೆಳೆವಳು ನೋಡಾ ಈ ।
ಆಸೆ ಎಂಬವಳು ಅವರಿವರೆನ್ನದೆ ಆರನಾದಡೆಯೂ ಕೊಲಲಿಕ್ಕೆ
ಬಗೆವಳು ।
ಈ ಆಸೆ ಎಂಬವಳಿಂದಲೇ ನಿಮ್ಮೆಡೆಗಾಣದಿಪ್ಪೆ. ಈಯಾಸೆ ಎಂಬವಳ
ಎಂದಿಂಗೆ ನೀಗಿ ಎಂದು ನಿಮ್ಮನೊಡಗೂಡಿ ಬೇರಾಗದೆಂದಿಪ್ಪೆನೋ
ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ ।

( ಭಾವ ) ಆಸೆಗೆ ಅವರಿವರೆಂದು ಭೇಧವಿಲ್ಲ. ಈ ಆಸೆಯು ಅರಸನ ಮೊದಲುಗೊಂಡು ಆಳಿನವರೆಗೆ ತನ್ನತ್ತ ಸೆಳೆಯುವದು.

ಪ್ರಭುಗಳು — ನಿನ್ನೆ ನಿರ್ಣಯಿಸಿದ ವಿಷಯಕ್ಕೆ ತಕ್ಕಂತೆ ಹೊಂದಿಕೆಯಾಗಿದೆ. ವೀರಾಗಿಣಿ ಮಹಾದೇವಿಯಕ್ಕನವರೇ ತಾವುಗಳು ಪ್ರಾರಂಭಿಸಬೇಕು.

ಮಹಾದೇವಿ — ಶರಣರ ಪಾದಪದ್ಮಗಳಲ್ಲಿ ವಂದಿಸುವೆ-

ತೆರಣಿಯ ಹುಳು ತನ್ನ ಸ್ನೇಹದಿಂದ ಮನೆಯಮಾಡಿ ತನ್ನ ನೂಲು ತನ್ನನೇ ಸುತ್ತಿ ಸಾವತೆರನಂತೆ ಮನ ಬಂದುದ ಬಯಸಿ ಬೇವುತ್ತಿರುವೆನಯ್ಯಾ! ಎನ್ನ ಮನದ ದುರಾಶೆಯ ಬಿಡಿಸಿ ನಿಮ್ಮತ್ತ ತೋರಾ ಚನ್ನಮಲ್ಲಿಕಾರ್ಜುನಾ-

( ಭಾವ ) ಮನಸಿನ ದುರಾಸೆಯು ಮನಕ್ಕೆ ಸುತ್ತುಹಾಕಿಕೊಂದರೆ ರೇಶಿಮೆಯ ಹುಳು ತನ್ನ ರಕ್ಷಣೆಗೆ ತನ್ನ ನೂಲು ಸುತ್ತಿಕೊಂಡು ಒಳಗೇ ಸಾಯುವಂತೆ ಈ ಆಸೆಯು ಮನವನ್ನು ಸುತ್ತಿ ಮನವನ್ನೇ ಕೊಲ್ಲುವದು.

ಪ್ರಭುಗಳು — ಬಹಳೇ ಹೊಂದಿಕೆಯಾದ ವಚನ ಶರಣರಾದ ಉರಿಲಿಂಗ ಪೆದ್ದಿಗಳೇ ತಾವುಗಳು ಪ್ರಾರಂಭಿಸಬೇಕು.

ಉರಿಲಿಂಗಪೆದ್ದಿ — ಪ್ರಭುಗಳ ಪಾದಕೃಪೆಯ ಬಲದಿಂದ (ವಂದಿಸಿ)

ಆಸೆಯುಳ್ಳನ್ನಕ್ಕ ಒಬ್ಬರ ಆಶ್ರಯಿಸುವದು ಆಶ್ರಯದಾಸೆ ಕಷ್ಟ ಕಾಣಿರಯ್ಯ ! ಆಸೆಯೇ ದಾಸತ್ವ ನರಾಶೆಯೇ ಈಶತ್ವ. ದಾಸತ್ವದ ಈಶತ್ವದ ಈ ಅನುವ ವಿಚಾರಿಸಿ ನಿರಾಶೆಯಾಗಿಪ್ಪದೇ ಈಶ ಪದವಯ್ಯಾ ! ಉರಿಲಿಂಗ ಪೆದ್ದಿಪ್ರೇಯವಿಶ್ವೇಶ್ವರಾ !

( ಭಾವ) ಮಾನವನಿಗೆ ಆಸೆಯಿದ್ದರೆ ಅವನು ದಾಸ್ಯತ್ವವನ್ನು ವಹಿಸಲೇಬೇಕು. ಆದಾಸ್ಯ ವಹಿಸದಿದ್ದರೆ ಆ ಆಸೆ ಪೂರ್ಣವಾಗದು. ಆದರೆ ದಾಸ್ಯತ್ವಕ್ಕಿಂತಲೂ ಈಶತ್ವವೇ ಮೇಲೆಂದು ತಿಳಿದೊಡೆ ಆ ನಿರಾಸೆಯಿಂದ ಇರುವದೇ ಮೇಲು.

ಪ್ರಭುಗಳು — ಒಬ್ಬರಿಗಿಂತ ಒಬ್ಬರ ವಚನಗಳು ಭಾವಗರ್ಭಿತವಾಗಿ ಮಿಗಿಲಾಗಿವೆ. ( ತಾವು ಎದ್ದು ನಿಂತು )

ಹೊನ್ನುಮಾಯೆ ಎಂಬರು. ಮಣ್ಣು ಮಾಯೆ ಎಂಬರು. ಹೆಣ್ಣು ಮಾಯೆ ಎಂಬರು. ಹೊನ್ನು ಮಾಯೆಯಲ್ಲ. ಮಣ್ಣು ಮಾಯೆಯಲ್ಲ. ಹೆಣ್ಣು ಮಾಯೆಯಲ್ಲ. ಮನದ ಮುಂದಣಾಸೆಯೇ ಮಹಾಮಾಯೆ । ಕಾಣಾ ಗುಹೇಶ್ವರಾ !

(ಭಾವ) ಜಗದೊಳಗಿನ ಮರುಳ ಮಾನವರು ಹೆಣ್ಣು ಹೊನ್ನು ಮಣ್ಣು ಇವುಗಳು ಮಾಯೆ ಎಂದು ಒರಲುತ್ತಿರುವರು. ಆದರೆ ಇವುಗಳಲ್ಲಿ ಯಾವದೂ ಮಾಯೆಯಲ್ಲ. ಅವರವರ ಮನದ ಮುಂದಿನ ಆಸೆಯೇ ಮಹಾಮಾಯೆ. ಕಾರಣ ಮಾನವರು ಆಸೆಯಿಂದ ದೂರ ಸರಿಯ ಬೇಕು. ಅದುವೇ ಮುಕ್ತಿ ಮಾರ್ಗದ ಹೇಳಿದ್ದಾರೆ.

ಬಸವಣ್ಣ — ಪೂಜ್ಯರಲ್ಲಿ ಬಿನ್ನಹ- ಇಂದಿನ ವಿಷಯ ಸಮಾಪ್ತಿಗೊಳಿಸಿ ನಾಳಿನ ವಿಷಯ ಸೂಚಿಸಬೇಕು. ಎಲ್ಲರೂ ತಮ್ಮತಮ್ಮ ಕಾಯಕಗಳಿಗೆ ಹೋಗಲು ವೇಳೆಯಾಗಿದೆ.

ಪ್ರಭುಗಳು — ತಮ್ಮೆಲ್ಲರ ಇಚ್ಛೆಯೇ ನನ್ನಿಚ್ಛೆ. ನಾಳಿನ ವಿಷಯ ಇಷ್ಟಲಿಂಗದ ಮಹತ್ವ.

ಎಲ್ಲರೂ — ಪ್ರಭುಗಳಾಜ್ಞೆ -( ಒಂದೇ ಸ್ವರದಿಂದ )

ಒಬ್ಬನು — ( ಬಂದು ) ಪ್ರಭುಗಳ ಚಿತ್ತಕ್ಕೆ ಅರಿಕೆ-ಬಾಗಿಲಲ್ಲಿ ಯಾರೋ ಶರಣರು ಬಂದಿದ್ದಾರೆ.

ಪ್ರಭುಗಳು — ಆ ಮಹಾನುಭಾವರನ್ನು ಒಳಗೆ ಕರೆದು ತನ್ನಿ-( ಹೋಗುವನು ) ಎಲ್ಲರೂ ಎದ್ದು ನಿಲ್ಲಿರಿ. ಸುಜ್ಞಾನಿಮುನಿಗಳು ಬಂದಂತೆ ಕಾಣಿಸುತ್ತಿದೆ. ಅವರ ಸಂಗಡ ಅವರ ಪ್ರೀತಿಯ ಶಿಷ್ಯ ನನ್ನಯ್ಯನೂ ಇರಬೇಕು. ನಾವೆಲ್ಲರೂ ಸ್ವಾಗತಿಸೋಣ—

ಎಲ್ಲರೂ — ಮಹಾ ಮುನಿಗಳಿಗೆ ಶರಣು. ಶರಣು!

ಸುಜ್ಞಾನಿಗಳು — ಶರಣ, ಶರಣೆಯರಿಗೆ ಶರಣು ! ಶರಣು !! ಶರಣು !!!

ಎಲ್ಲರೂ — ನನ್ನಯ್ಯಗಳಿಗೆ ಶರಣು! ಶರಣು!!

ನನ್ನಯ್ಯ — ತಮ್ಮೆಲ್ಲರಿಗೂ ಶರಣು! ಶರಣು!! ಶರಣು!!!

ಬಸವಣ್ಣನವರು — ಮಹಾನುಭಾವರೆ! ತಾವು ದಾರಿನಡೆದು ಹಸಿವೆಯಿಂದ ಬಳಲಿದ್ದೀರಿ. ಮೊದಲು ಶಿವನ ದಾಸೋಹಕ್ಕೆ ನಡೆಯಿರಿ.

( ಒಬ್ಬರನ್ನೊಬ್ಬರು ಅಪ್ಪಿ ನಮಸ್ಕರಿಸುವರು ) ತೆರೆಬೀಳುವದು.

ಓಂ ಓಂ ಓಂ ಓಂ ಓಂ.

— ಸಮಾಪ್ತಿ —

# ಬಸವೇಶ್ವರನ ವಿಶ್ವಸಂದೇಶ

ಲೇ:- ಶ್ರೀ ಭೋಗಿಶೆಟ್ಟಿ ಜೂಗಪ್ಪನವರು ಎಂ. ಎ.; ಐ. ಎ. ಎಸ್.



೧೨ನೆಯ ಶತಮಾನದಲ್ಲಿ ಮಹಾ ಧರ್ಮಕ್ರಾಂತಿ ನಡೆದಿತ್ತೆಂಬದು ಚರಿತ್ರ ವಿದಿತ. ವೈದಿಕ, ಬೌದ್ಧ, ಜೈನ ಧರ್ಮಗಳ ಕಾದಾಟ, ತಿಕ್ಕಾಟ ತೀವ್ರವಾಗಿ ನಡೆದಿತ್ತು. ಚಾರ್ವಾಕ ವಿಷಯಸುಖಾನಂದ ತತ್ವ ಹರಡಿತ್ತು. ಆಸ್ತಿಕತ್ವವು ನಾಶವಾಗಿ, ನಾಸ್ತಿಕತ್ವವು ಪ್ರಭಲವಾಗಿತ್ತು. ಇಂತಹ ವಿಷಮ ಪರಿಸ್ಥಿತಿಯಲ್ಲಿ ಸರ್ವಧರ್ಮಗಳ ಸತ್ಯಾರ್ಥ ತತ್ವವನ್ನು ಸಮನ್ವಯ ಮಾಡುವ ಭಾರ ಕನ್ನಡ ನಾಡಿನ ಮೇಲೆ ಬಿತ್ತು. ಧರ್ಮಕಾಮಿಗಳು, ಕರ್ಮವೀರರಾದ ಕನ್ನಡಿಗರು, ಎಷ್ಟು ಚಂದವಾಗಿ, ಅಂದವಾಗಿ, ಮುಚ್ಚು ಮರೆಯಿಲ್ಲದೆ ಕೇಳಿದೊಡನೆ ಎಲ್ಲರಿಗೂ ಅರ್ಥವಾಗಿ ಮನ ಮುಟ್ಟುವಂತೆ ಮುತ್ತಿನಂತಹ ಮುದ್ದು ಮಾತುಗಳಿಂದ ವಿಶ್ವಸಮ್ಮತವಾದ ತತ್ವವನ್ನು ಬೋಧಿಸಿದರು! ಜನ ಜಾಗೃತಿಗೋಸುಗ ತಮ್ಮ ತಾಯಿನುಡಿಯಲ್ಲಿ ವಿಶ್ವಪ್ರೇಮ ಗಾನವನ್ನು ಮಾಡಿ ಕನ್ನಡ ನುಡಿಯ ಸೊಬಗು, ಸಿಂಗಾರ, ಬಿಕ್ಕಟ್ಟು, ಮಾಧುರ್ಯ, ನಾವೀನ್ಯ ಗಳನ್ನು ಹೊರಚಿಮ್ಮಿದರು. ನಮ್ಮ ದುರದೃಷ್ಟದಿಂದ, ವಚನ ವಾಙ್ಮಯು, ಕೆಲಕಾಲ ಅಡಗಿ ಹೋಗಿತ್ತು. ಪುನಃ ನಮ್ಮ ಸುದೈವದಿಂದ ರಾವ ಬಹಾದ್ದೂರ ಶ್ರೀ. ಹಳಕಟ್ಟಿ ಅವರು ಬಹಳ ಪ್ರಯಾಸಪಟ್ಟು ಮಠಗಳಲ್ಲಿ ಗೆದ್ದಲು ಪಾಲಾಗಿದ್ದ ತಾಳಿಯ ಗರಿಗಳ ಪ್ರತಿಗಳನ್ನು ಶೇಖರಿಸಿ ಪರಿ ಶೋಧಿಸಿ, ಪರಿಷ್ಕರಿಸಿ ತಮ್ಮ "ಶಿವಾನುಭವ" ಪತ್ರಿಕೆಯಲ್ಲಿ ವಚನಗಳನ್ನು ಪ್ರಕಟಿಸುತ್ತಾ ಬಂದರು. ಕನ್ನಡಿಗರ ಪುಣ್ಯ ಫಲಿಸಿತು. ಸಿಂಗನ್ನಡ ದೇವಿ ಸಾಕ್ಷಾತ್ಕಾರವಾದಳು. ಕನ್ನಡಿಗರು ವಚನ ಕನ್ನಡಿಯಲ್ಲಿ ತಮ್ಮ ದಿವ್ಯ ನಿಜರೂಪವನ್ನು ಕಂಡು. ಅಭಿಜ್ಞಾನಿಗಳಾದರು. ಶ್ರೀ. ಶ್ರೀನಿವಾಸ ಮೂರ್ತಿಗಳು "ವಚನ ಧರ್ಮಸಾರ" ದಲ್ಲಿ ವಚನದ ಮಹತ್ವವನ್ನು ಒರೆಗಲ್ಲಿಗೆ ಒರೆದು, ತೀಡಿ, ತಲನಮಾಡಿ, ವಚನಧರ್ಮ ವಿಶ್ವಧರ್ಮವೆಂದು ಸಾರಿರುವರು. ಶ್ರೀ. ರಂಗನಾಥ ದಿವಾಕರರು ವಚನಶಾಸ್ತ್ರದ ಉಜ್ವಲ ತತ್ವಗಳನ್ನು ಉಪನಿಷತ್ತುಗಳಿಗೆ ಸಮವೆಂದು ಬಣ್ಣಿಸಿರುವರು. ಶ್ರೀ. ಲಕ್ಷ್ಮಣರಾಯ ಹೊಯಿಸಳರು "ವಚನ ಬಸವನ ಮೊಲ್ಲೆ ಸರಗಿಯು

ಸುಚಿಯು ಸುರಭಿಯು । ಸುಲಭವೋಹಕ । ವಚನಜ್ಞಾನದ ಸುಧೆಯು ಕ್ಷೀರವು । ವಚನ ಚೇತನ ಜ್ಯೋತಿಯು " ಎಂದು ಕೊಂಡಾಡಿರುವರು. ಶ್ರೀ. ಆಲೂರು ವೆಂಕಟರಾಯರು" ಬಸವಣ್ಣನವರು ಭಾಷಾಜನಕರೆಂದು ವಚನ ಸಾಹಿತ್ಯದ ಹೆಚ್ಚಳವನ್ನು ನುಡಿದಿರುವರು. ರೆವರೆಂಡು ಚನ್ನಪ್ಪ ಉತ್ತಂಗಿ ಅವರು " ಅನುಭವ ಮಂಟಪ " ವಚನ ಸಾಹಿತ್ಯ ವಿಷಯವಾಗಿ ಉಜ್ವಲವಾದ ಲೇಖನಗಳನ್ನು ಬರೆದಿರುವರು.

" ಕುಲ ನಿತ್ತೊಡೆ ಒಲ್ಲೆ, ಸಿರಿಯನಿತ್ತೊಡೆ ಒಲ್ಲೆ, ಹಿರಿದಪ್ಪ ರಾಜ್ಯವ ನಿತ್ತೊಡೆ ಒಲ್ಲೆ, ನಿಮ್ಮ ಶರಣರ ಸೂಳ್ನುಡಿಯು ಒಂದರಗಳಿಗೆ ಇತ್ತೊಡೆ ನಿನ್ನ ನಿತ್ತೆ ಕಾಣಾ ರಾಮನಾಥಾ " ಎಂದು ಜ್ಞಾನಿಗಳೇ ಹಿಗ್ಗಿ ಹಂಬಲಿಸಿರುವರು. ವಚನಗಳನ್ನು ಧರ್ಮ ಪಿಪಾಸುಗಳು, ಕರ್ಮಯೋಗಿಗಳು, ನೀತಿ ವಿದ್ಯಾವಿಮರ್ಶಕರು, ಸಾಹಿತಿಗಳು ಈ ರೀತಿಯಾಗಿ ಬಣ್ಣಿಸಲು ಕಾರಣವೇನು ? ವಚನಗಳು ದೊಡ್ಡ ಷಟ್ಪದಿಗಳ ಕಾವ್ಯವಲ್ಲ ! ವಿಷಯಾನಂದವನ್ನುಂಟು ಮಾಡುವ ಕಥೆಗಳಲ್ಲ ! ವಚನಗಳು ಪುಂಡರಾಲಿಪ ಕಥೆಗಳಲ್ಲ. ಭಾವಕರು, ಭಕ್ತರು, ಬದ್ಧರು ಕೇಳುವ ಉಪನಿಷತ್ತುಗಳು ; ಜ್ಞಾನಸಾಧನೆಯ ಮೆಟ್ಟಿಲುಗಳು. ಲೋಕ ಕಲ್ಯಾಣದ ಸೂತ್ರಗಳು ! ಶ್ರೀ ಬಸವಣ್ಣನವರು ಧರ್ಮ ಸಂಶೋಧನೆ ಮಾಡಲು ಕಲ್ಯಾಣ ಪಟ್ಟಣದಲ್ಲಿ ಸ್ಥಾಪಿಸಿದ " ಅನುಭವ ಮಂಟಪ " ದಲ್ಲಿ ಆತ್ಮ ಆತ್ಮ ಮಥನಿಸಿ, ಕುಲ, ಮತ, ವೃತ್ತಿ, ಸ್ತ್ರೀ, ಪುರುಷ ಭೇದ ತೊರೆದು ಕಾಶ್ಮೀರ, ವಂಗ, ಕಳಿಂಗ, ಆಂಧ್ರ, ತಮಿಳ, ಗುಜರಾತು ಎಲ್ಲ ಪ್ರಾಂತಗಳಿಂದ ಬಂದ ಸತ್ಯಶರಣರು, ಅನುಭವಿಗಳು, ಧರ್ಮಬೋಧನೆಮಾಡಿ ನುಡಿದಂತೆ ನಡೆದು ನಿರ್ಜೀವವಾಗಿದ್ದ ಧರ್ಮಕ್ಕೆ ಜೀವಕಳೆಯು ತುಂಬಿ ಸಾರಿದ ವಿಶ್ವಪ್ರೇಮ ಸಂದೇಶವು ವಿಶ್ವಮೋಹಕವಲ್ಲದಿಪ್ಪುದೆ ! ವಿಶ್ವಸಮ್ಮತವಲ್ಲದಿಪ್ಪುದೆ !

ವಚನಗಳ ಸಂದೇಶವನ್ನು ಒಂದೇ ಮಾತಿನಲ್ಲಿ ಹೇಳುವದಾದರೆ ಅದು ಇದೆ : " ದಯವಿಲ್ಲದ ಧರ್ಮ ಅದು ಏವುದಯ್ಯ ? ದಯವೇ ಧರ್ಮದ ಮೂಲವಯ್ಯ ; ದಯವೇ ಬೇಕು ಸಕಲ ಪ್ರಾಣಿಗಳಲ್ಲಿ " ; " ಕಾಯಕವೇ ಕೈಲಾಸ " ವೆಂದು ಬಣ್ಣಿಸಿ (Work is Worship) ಎಲ್ಲ ಕೈ ಕಸುಬುಗಳ ಸಾಮಾನ್ಯ ಜನರನ್ನು ಮನ್ನಿಸಿದರು. ಕುಲ, ಮತಗಳ ವರ್ಗವನ್ನು ಮುರಿದಿಕ್ಕಿ ಗುಣಕ್ಕೆ ಸತ್ಕ್ರಿಯಾಚರಣೆಗೆ ಪ್ರಥಮ

ಸ್ಥಾನವನ್ನು ಕೊಟ್ಟು ಸಮತಾ ತತ್ವವನ್ನು ಬಸವಣ್ಣನವರು ತಮ್ಮ ವಿಶ್ವ ಹೃದಯದಿಂದ "ಉತ್ತಮ ಕುಲದಲ್ಲಿ ಹುಟ್ಟಿದನೆಂಬ ಕಷ್ಟತರದ ಹೊರೆ ಹೊರಿಸದಿರಯ್ಯ", "ಎನಗಿಂತ ಕಿರಿಯರಿಲ್ಲ, ಶಿವಶರಣರಿಗಿಂತ ಹಿರಿಯ ರಿಲ್ಲ" "ಶ್ವಪಚನಾದರು ಶಿವಭಕ್ತನೆ ಕುಲಜ", "ಸಕಲ ಜೀವಾತ್ಮರಿಗೆ ಲೇಸನೆ ಬಯಸುವ ನಮ್ಮ ಕೂಡಲ ಸಂಗಮನ ಶರಣರೆ ಕುಲಜರು" ಎಂದು ನುಡಿದು, ನುಡಿದಂತೆ ನಡೆದು ಲೋಕ ಪೂಜ್ಯರಾಗಿರುವರು.

ನಂಬಲರಿಯದೆ, ನಂಬದೆ ನಾಸ್ತಿಕರಾದ ವಿತರ್ಕವಾದಿಗಳ ಹೃದಯದಲ್ಲಿ ನಂಬಿಕೆ ಒಡೆದು ಮೂಡುವಂತೆ "ನಂಬಿ ಕರೆದರೆ ಓ ಎಂದು ಓಡಿಬಾರನೆ ಶಿವನು" ಎಂದು ಬಸವಣ್ಣ ಢಣಾಢಂಗುರವಾಗಿ ಸಾರಿ ಅಸ್ತಿಕ ತತ್ವವನ್ನು ತೋರಿದ ದೈವ ಭಕ್ತ ಭಕ್ತಿ ಭಂಡಾರಿಯಾಗಿ" ವಚನದಲ್ಲಿ ನಾಮಾಮೃತ ತುಂಬಿ ನಯನದಲ್ಲಿ ನಿಮ್ಮ ಮೂರುತಿ ತುಂಬಿ, ಕಿವಿಯಲ್ಲಿ ನಿಮ್ಮ ಕೀರ್ತಿ ತುಂಬಿ, ಮನದಲ್ಲಿ ನಿಮ್ಮ ನೆನಹು ತುಂಬಿ, ಕೂಡಲ ಸಂಗಮದೇವ, ನಿಮ್ಮ ಚರಣ ಕಮಲದೊಳಗಾನು, ತುಂಬಿ" ಎಂದು ಮೃದುಮಧುರವಾದ ಸಾಹಿತ್ಯ ಸಂಗೀತಗಳ ಶೃತಿಗೂಡಿಸಿ ಹೃದಯ ವೀಣೆಯ ನುಡಿಸಿ ಭಕ್ತಿಸುಧೆಯನ್ನು ಎಲ್ಲರ ಮನದಲ್ಲಿ ತುಂಬಿ ತುಂಬಿದ ಬಸವಣ್ಣ! "ಭಕ್ತಿ ಎಂಬ ಪೃಥ್ವಿಯ ಮೇಲೆ, ಗುರುವೆಂಬ ಬೀಜವಂಕುರಿಸಿ, ಲಿಂಗವೆಂಬ ಎಲೆಯಾಯಿತ್ತು. ಲಿಂಗವೆಂಬ ಎಲೆಯಮೇಲೆ ವಿಚಾರವೆಂಬ ಹೂವಾಯಿತ್ತು, ಆಚಾರವೆಂಬ ಕಾಯಾಯಿತ್ತು, ನಿಷ್ಪತ್ತಿ ಎಂಬ ಹಣ್ಣು ಕೊಟ್ಟು ಬಿಟ್ಟು ಕಳಚಿ ಬೀಳುವಲ್ಲಿ, ಕೂಡಲ ಸಂಗಮದೇವ ತನಗೆ ಬೇಕೆಂದು ಎತ್ತಿಕೊಂಡ" ಎಂದು ಮೋಕ್ಷಾನುಭವ ಪಡೆದ ಜ್ಞಾನಯೋಗಿ ಬಸವಣ್ಣ.

ಈ ಲೋಕವು 'ಮಿಥ್ಯ' 'ಮಾಯಾ' ಎಂದು ಹೇಳುವ ವೇದಾಂತಗಳಿಗೆ "ಮರ್ತ್ಯ ಲೋಕವೆಂಬುದು ಕರ್ತಾರನ ಕಮ್ಮಟವಯ್ಯ ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರಯ್ಯ, ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರಯ್ಯ" "ದೇವಲೋಕ ಮರ್ತ್ಯ ಲೋಕವೆಂಬುದು ಬೇರಿಲ್ಲ ಕಾಣಿರೋ; ಸತ್ಯವ ನುಡಿವುದೇ ದೇವಲೋಕ; ಮಿಥ್ಯವ ನುಡಿಯುವದೇ ಮರ್ತ್ಯ ಲೋಕ; ಆಚಾರವೇ ಸ್ವರ್ಗ; ಅನಾಚಾರವೇ ನರಕ" ಎಂದು ಜೀವನದ ನೀತಿ, ರೀತಿ, ಸೌಂದರ್ಯವನ್ನು ಸಾರಿದರು. ಹುಟ್ಟು ಕುರುಡ

ಮೂಢಾಚಾರಗಳನ್ನು ನೋಡಿ "ಕಲ್ಲ ನಾಗರ ಕಂಡರೆ ಹಾಲನೆರೆ ಎಂಬರು, ದಿಟನಾಗರ ಕಂಡರೆ ಕೊಲ್ಲೆಂಬರಯ್ಯ, ಉಂಬ ಜಂಗಮ ಬಂದರೆ ನಡೆ ಎಂಬರು, ಉಣ್ಣದ ಲಿಂಗಕ್ಕೆ ಬೋನವ ಹಿಡಿ ಎಂಬರಯ್ಯಾ" ಎಂದು ಹೀಯಾಳಿಸಿ ಜ್ಞಾನಬೋಧೆ ಮಾಡಿದರು.

"ವಿಪ್ರ ಮೊದಲು ಅಂತ್ಯಜ ಕಡೆಯಾಗಿ ಶಿವಭಕ್ತರಾದವರನೆಲ್ಲರ ನೊಂದೆಯೆಂಬೆ" ಎಂದು ಅಂತ್ಯಜರ ಉದ್ಧಾರಕ್ಕಾಗಿ ಆತ್ಮಾರ್ಪಣೆ ಮಾಡಿ "ನ್ಯಾಯ ನಿಷ್ಠುರ, ದಾಕ್ಷಿಣ್ಯಪರ ನಾನಲ್ಲ, ಲೋಕ ವಿರೋಧಿ, ಶರಣ ನಾರಿಗಂಜುವನಲ್ಲ, ಕೂಡಲಸಂಗಮದೇವರ ರಾಜತೇಜದಲ್ಲಿಪ್ಪನಾಗಿ" "ನಾಳೆ ಬರುವದು ನಮಗಿಂದು ಬರಲಿ" ಎಂದು ನುಡಿದು ಅಭಯ ತತ್ವದ ಮಹತ್ವ ತೋರಿದ ಮಹಾತ್ಮ ಬಸವಣ್ಣ.

ಆಂಧ್ರ ಕವಿಪುಂಗವ ಶ್ರೀ ಪಾಲುಕುರಿಕೆ ಸೋಮನಾಥನು ಬಸವ ತತ್ವದ ಮಹತ್ವಕ್ಕೆ ತಲೆಬಾಗಿ ತೆಲುಗಿನಲ್ಲಿ ಬಸವಪುರಾಣವನ್ನು ಮೊತ್ತ ಮೊದಲು ಬರೆದು ತೆಲುಗು ದೇಶದಲ್ಲೆಲ್ಲ ಕನ್ನಡ ಕರ್ಮಯೋಗಿಯ ಮಹಿಮೆಯನ್ನು ಸಾರಿದುದು ಕನ್ನಡಿಗರು ಹೆಮ್ಮೆಪಡತಕ್ಕ ವಿಷಯ ವಲ್ಲವೆ !

ಆತ್ಮಸಾಕ್ಷಾತ್ಕಾರ ಪಥವು, ಆತ್ಮವಿದ್ಯಾ ತತ್ವಗಳು ಈ ವಚನ ಗಳಲ್ಲಿ ಥಳಥಳಿಸುತ್ತವೆ. ಮರದೊಳಗಣ ಮಂದಾಗ್ನಿಯ ಉರಿಯದಂತಿರಿಸಿದೆ, ಶರೀರದೊಳಗಾತ್ಮನ ಕಾಣದಂತಿರಿಸಿದೆ, ನೀ ಬೆರಸುವ ಭೇದಕ್ಕೆ ಬೆರಗಾದೆನೈ ರಾಮನಾಥಾ."

"ಶಿಲೆಯೊಳಗಣ ಪಾವಕನಂತೆ, ಉದಕದೊಳಗಣ ಪ್ರತಿಬಿಂಬದಂತೆ, ಬೀಜದೊಳಗಣ ವೃಕ್ಷದಂತೆ ಶಬ್ದದೊಳಗಣ ನಿಶ್ಶಬ್ದದಂತೆ. ಗುಹೇಶ್ವರಾ ನಿಮ್ಮ ಶರಣ ಸಂಬಂಧ."

"ನೆಲದ ಮರೆಯ ನಿಧಾನದಂತೆ, ಮುಗಿಲ ಮರೆಯಲಡಗಿರ್ದ ಮರೀಚನಂತೆ, ಕಂಗಳ ಮರೆಯಲಡಗಿರ್ದ ಬೆಳಕಿನಂತೆ, ಗುಹೇಶ್ವರಾ ನಿಮ್ಮ ನಿಲವು."

"ಕಲ್ಲ ದೇವರು ದೇವರಲ್ಲ, ಪಂಚಲೋಹದಲ್ಲಿ ಮಾಡುವ ದೇವರು ದೇವರಲ್ಲ, ಸೇತು ರಾಮೇಶ್ವರ, ಗೋಕರ್ಣ, ಕಾಶಿ, ಕೇದಾರ ಮೊದ ಲಾದ ಅಷ್ಟಾಷಷ್ಟಿ ಕೋಟಿ ಪುಣ್ಯ ತೀರ್ಥಂಗಳಲ್ಲಿ ಇಹ ದೇವರು ದೇವ ರಲ್ಲ, ತನ್ನ ತಾನರಿದು ತಾನಾರೆಂದು ತಿಳಿದೊಡೆ ತಾನೆ ದೇವ ನೋಡ"

ವಚನಗಳಲ್ಲಿ ಕನ್ನಡ ನುಡಿಯು ತೇಜವು ನಾವೀನ್ಯವು ಮಿನುಗುತ್ತಿವೆ. ವಚನಗಳಲ್ಲಿ ತತ್ವ ರತ್ನಗಳು ಥಳಥಳಿಸುತ್ತವೆ. ಸಾಧುವೃತ್ತಿಯು ಸೊನೆಯಂ ಸುರಿಯುತ್ತಿದೆ. ವಚನಗಳು ಲೋಕ ಕಲ್ಯಾಣಗೋಸುಗ ಕನ್ನಡಿಗರು ತಮ್ಮ ವಿಶ್ವವಾಣಿಯಿಂದ ಹಾಡಿದ ಗೀತಾಂಜಲಿ ವಚನಗಳಲ್ಲಿ ಅನುಭವದ ಅಚ್ಚು ಅಚಲವಾಗಿದೆ. ಆಚಾರದ ಕೆಚ್ಚು ಕಂಗೊಳಿಸುತ್ತಿದೆ. ವಚನಗಳು ಸಾಹಿತಿಗಳಿಗೆ ಸಾಹಿತ್ಯ, ನೀತಿ, ಧರ್ಮ ಶಾಸ್ತ್ರಜ್ಞರಿಗೆ ನೀತಿಶಾಸ್ತ್ರ, ಅನುಭವಗಳಿಗೆ ಆತ್ಮವಿದ್ಯಾದರ್ಪಣ.

ಈ ಮಹಾ ವಚನಗಳಿಗಿಂತ ಹೆಚ್ಚಿನ ಧರ್ಮ, ನೀತಿ, ಸತ್ಯ ವಿಶ್ವಪ್ರೇಮ ಸಂದೇಶ ಮತ್ತಿನ್ನೆಲ್ಲಿಹುದು ?

೮೦೦ ವರ್ಷಗಳ ಹಿಂದೆ ಶ್ರೀ ಬಸವೇಶ್ವರನು ವಿಜಾಪುರ ಪಟ್ಟಣಕ್ಕೆ ಆಗ್ನೇಯವಾಗಿ ೨೫ ಮೈಲು ದೂರದಲ್ಲಿ ಈಗಲೂ ಬಸವನ ಬಾಗೇವಾಡಿಯೆಂದು ವ್ಯವಹರಿಸಲ್ಪಡುವ ಊರಿನಲ್ಲಿ ಉತ್ತಮ ಬ್ರಾಹ್ಮಣ ವಂಶಸ್ಥರಾದ ಮಾದರಸ, ಮಾದಲಾಂಬಿಕೆ ಇವರು ಮೂರು ವರ್ಷದಿಂದ ಅನುಷ್ಠಾನ ಮಾಡುತ್ತಲಿದ್ದ ನಂದೀಶ್ವರನ ವ್ರತ ಫಲಿತವಾಗಿ ಇವರಿಗೆ ಜನಿಸಿ ಜಾತವೇದ ಮಹಾ ಮುನಿಗಳಿಂದ ಉಪದೇಶವನ್ನು ಪಡೆದು ಉಪನಯನ ಯಜ್ಞಾದಿಗಳಿಂದ ಸಂಸ್ಕಾರವಾದುದೆಂದು ಖಂಡಿಸಿ ವೀರಶೈವ ದೀಕ್ಷೆಯನ್ನು ಪಡೆದು ಲೋಕಕಲ್ಯಾಣಕ್ಕೋಸ್ಕರ (ಗ್ರೀಕ್ ದೇಶದಲ್ಲಿ ಸಾಕ್ರೆಟೀಸ್‌ನು ಜನರೊಡನೆ ಕಲೆತು ಮಾತನಾಡಿ, ಸತ್ಯ, ಧರ್ಮ ಪ್ರಚಾರ ಮಾಡಿದಂತೆ,) ಬಸವಣ್ಣ ಜನರೊಡನೆ ಅವರ ಕೃತ್ರಿಮ ಮೂಢವಿಶ್ವಾಸಗಳ ವಿಷಯ ತಿರಸ್ಕರಿಸಿ ಅವನ್ನು ನಾಶಮಾಡಿ ವಿದ್ಯಾ ಜ್ಞಾನದಾನವನ್ನು ಮಾಡಿ ಎಲ್ಲರಿಗೂ ವೀರಶೈವ ದೀಕ್ಷೆ ಕೊಡುತ್ತಾ, ಮಾಂಸಾಹಾರ, ಮದ್ಯಪಾನ ನಿಷೇಧ, ಅಸ್ಪೃಶ್ಯತಾ ನಿವಾರಣೆ, ಸರ್ವ ಸಮತಾ ತತ್ವವನ್ನು ಲೋಕದಲ್ಲಿ ಬೀರಿ ಜನ ಜಾಗ್ರತೆಮಾಡಿ, ವಿಶ್ವಖ್ಯಾತಿ ಪಡೆದ ಅನುಭವ ಮಂಟಪ ಸ್ಥಾಪನಾಚಾರ್ಯನಾಗಿ ಭಕ್ತಿ, ಪ್ರೇಮ, ಧರ್ಮ, ಆತ್ಮವಿದ್ಯಾ ಪ್ರಚಾರ ಮಾಡಿದನು. ಬಿಜ್ಜಳನ ಪ್ರಧಾನಿಯಾಗಿ ಅನೇಕ ಪವಾಡಗಳನ್ನು ಮಾಡಿ ತನ್ನ ಭಕ್ತಿ ಮಹತ್ವವನ್ನು ಪ್ರಸಿದ್ಧ ಮಾಡಿದ ಭಕ್ತಿ ಭಾಂಡಾರಿ ಬಸವಣ್ಣ !

ವೃದ್ಧ ಮೂಢಾಚಾರ ಗ್ರಹಸ್ಥರು ಬಿಜ್ಜಳನ ರಾಜ್ಯನಲ್ಲಿ ಬಸವಣ್ಣನು ಎಂತಹ ವರ್ಣ ಸಂಕರವನ್ನು ಮಾಡಿದನೆಂದು ಮಹಾ ಗೊಂದಲವನ್ನು ಅಲ್ಲಲ್ಲಿ ಕೋಲಾಹಲವನ್ನು ಮಾಡಲು, ಹೆದರದೆ ಮೂಢ ಕರ್ಮಠಾಚಾರ್ಯರು ತಂದ ಆರೋಪಣೆಯನ್ನು ಖಂಡಿಸಿ, ವೀರಶೈವ ದೀಕ್ಷೆಯನ್ನು ಪಡೆದ ನಂತರ ಪೂರ್ವಾಶ್ರಮದ ಭೇದಗಳಿಲ್ಲ. "ಪುರುಷ ಮುಟ್ಟಿದ ಲೋಹವು ಚಿನ್ನವಯ್ಯಾ! ಕಬ್ಬಿಣವೆಂದೆನ್ನಬಹುದೇ" ಎಂದು ಶುಷ್ಕ, ಜಾತಿಭೇದಗಳನ್ನು ಖಂಡಿಸಿ ತಾನು ಮಾಡಿದ ವಿವಾಹವು ಕೇವಲ ಧರ್ಮ ಸಮ್ಮತವೆಂದು ದೃಢಪಡಿಸಿದ. ಆದರೆ ಬಿಜ್ಜಳನು ಮೂಢ ಕರ್ಮಠಾಚಾರ್ಯರ ಒತ್ತಾಯಕ್ಕೆ ತುತ್ತಾಗಿ ಮಾದರಸ, ಹರಳಯ್ಯ ವಧೂವರಸರನ್ನು ಎಳೆಹೂಟೆ ನೇಗಿಲಿಗೆ ಹಾಕಿ ಮರಣ ಶಿಕ್ಷೆಯನ್ನು ವಿಧಿಸಿದನು. ಬಹಳ ಕಠಿಣತರವಾದ, ಅಧರ್ಮ ಅನ್ಯಾಯವಾದ ಮರಣ ದಂಡನೆಯನ್ನು ನಡೆಸಿದುದು ವೀರಶೈವ ಉಗ್ರ ಪಕ್ಷದವರನ್ನು ರೇಗಿಸಿ, ಪ್ರಕೋಪಗೊಳಿಸಿತು. ಬಸವಣ್ಣನವರ ಅಹಿಂಸಾ ತತ್ವ ಬೋಧೆಯನ್ನು ಅಲ್ಲಗಳೆಸಿ, ಬಿಜ್ಜಳನನ್ನೇ ಅರಮನೆಯಲ್ಲಿ ಜಗದೇವ ಬೊಮ್ಮರಸರು ಕೊಲೆ ಮಾಡಿದರು. ಕಲ್ಯಾಣ ಪಟ್ಟಣದಲ್ಲಿ ಹಾಹಾಕಾರ ಹುಟ್ಟಿತು. ಬಿಜ್ಜಳ ರಾಜನ ದಂಡು ವೀರಶೈವರನ್ನೆಲ್ಲ ಹಿಂಸೆ ಮಾಡಲು ತೊಡಗಿತು. ಕಲ್ಯಾಣ ಪಟ್ಟಣವೇ ನಾಶವಾಯಿತು. ಬಸವಣ್ಣನವರು ಈ ಹಿಂಸಾಕಾಂಡ ಚಿತ್ರವನ್ನು ನೋಡದ ಮುನ್ನ ಕೂಡಲ ಸಂಗಮದಲ್ಲಿ ಐಕ್ಯರಾದರು. ಇಂಥಾ ಸಮಯದಲ್ಲಿ ಸಹ ಹೆದರದೆ ತಮ್ಮ ಅಭಯ ತತ್ವವನ್ನು "ನಾಳೆ ಬಪ್ಪುದು ನಮಗಿಂದೇ ಬರಲಿ! ನ್ಯಾಯ ನಿಷ್ಠುರ! ದಾಕ್ಷಿಣ್ಯಪರ ನಾನಲ್ಲ! ಲೋಕವಿರೋಧಿ! ಶರಣ ನಾರಿಗಂಜುವನಲ್ಲ" ಎಂದು ಘಂಟಾಘೋಷವಾಗಿ ಸಾರಿ ಆತ್ಮಾರ್ಪಣೆ ಮಾಡಿದ ಮಹಾತ್ಮ ಬಸವಣ್ಣ ಗೀತೆಯಲ್ಲಿ ಹೇಳದಂತೆ "ಅಭಯಂಸತ್ಯ ಸಂಶುದ್ಧಿ ಜ್ಞಾನಯೋಗ ವ್ಯವಸ್ಥಿತಿ" ಯೆಂಬ ತತ್ವವನ್ನು ಆಚರಿಸಿ ಅಭಯ ಸಂಪತ್ತನ್ನು ಸಾಧಿಸಿದ ಧೀಶಾಲಿ ಬಸವಣ್ಣ! "ದಯವೇ ಧರ್ಮದ ಮೂಲವಯ್ಯಾ! ದಯವೇ ಬೇಕು ಸಕಲ ಪ್ರಾಣಿಗಳಲ್ಲಿ. ಕಳಬೇಡ, ಕೊಲಬೇಡ, ಹುಸಿಯಬೇಡ. ಅನ್ಯರಿಗೆ ಅಸಹ್ಯ ಪಡಬೇಡ. ತನ್ನ ಬಣ್ಣಿಸಲುಬೇಡ, ಇದಿರ ಹಳಿಯಲು ಬೇಡ ಇದೇ ಅಂತರಂಗ ಶುದ್ಧಿ, ಇದೇ ಬಹಿರಂಗ ಶುದ್ಧಿ ಎಂದು ಸಾರಿದ ನೀತಿ ವಿಜ್ಞಾನ ಕೋವಿದ ಬಸವಣ್ಣ! ಸರ್ವಜೀವ ದಯಾಪರ ನಾದರೆ ಕೂಡಲಸಂಗಮ ದೇವನು ಕೈಲಾಸದಿಂದ

ಬಂದು ಎತ್ತಿಕೊಳ್ಳದಿಪ್ಪನೇ ಎಂದು ವಿಶ್ವತೋಮುಖವಾಗಿ ನುಡಿದು ವಿಶ್ವಾತ್ಮಕ ಸಕಲ ಜೀವಿದಯಾ ಸಾಂ ಬಸವಣ್ಣ!

ಪೂಜ್ಯ ಬಾಪೂಜಿ ಈ ೨೦ನೆ ಶತಮಾನದಲ್ಲಿ ಹೇಳಿದ ನಿರ್ಮಾಣ ಕಾರ್ಯಕ್ರಮ ಸೂತ್ರಗಳೆಲ್ಲವನ್ನೂ ಬಸವಣ್ಣನವರು ೮೦೦ ವರ್ಷಗಳ ಹಿಂದೆ ೧೨ನೆಯ ಶತಮಾನದಲ್ಲಿಯೇ ಆಚರಿಸಿ, ಸಾಧಿಸಿದರು. ನಾವಿಂದು ಪುನಃ ಪುನಃ ನೆನೆಪಿಗೆ ತಂದುಕೊಂಡು ಆ ತತ್ವವನ್ನು ಆಚರಿಸಲು, ಪ್ರಯತ್ನ ಪಡುವದು ಅವಶ್ಯವು.

ಶ್ರೀ ಬಸವೇಶ್ವರನ ವಿಶ್ವಪ್ರೇಮ, ತತ್ವ "ಕಾಯಕವೇ ಕೈಲಾಸ" ವೆಂಬುವ ದೀಕ್ಷೆ, ಅಭಯತತ್ವ, ಭಕ್ತಿ, ಪ್ರೇಮ ಧರ್ಮ ಸಾಮ್ರಾಜ್ಯ ಸ್ಥಾಪನೆಗಾಗಿ, ಜನರ ಹೃದಯಮನಾವರಿಸಿ ವಿಶ್ವಶಾಂತಿ, ಸೌಭಾಗ್ಯ, ಸೌಖ್ಯಗಳಗೋಸುಗ, ತನು, ಮನ, ಧನಗಳನ್ನರ್ಪಿಸಿ ದುಡಿಯಲು ಜನರನ್ನು ಹುರಿದುಂಬಿಸಲಿ. ಜಯ ಬಸವೇಶ, ಭಕ್ತಜನ ಭಾಗ್ಯ ಶುಭೋದಯ ಶರಣಾಗತರಕ್ಷಕ ವೀರಶೈವ ಸಿರ್ಣಯ ಪರಮಾವತಾರ ಜಗವಾದಿದೇಶಿಕ ಪುರಾತನ ಪುಂಗವ ಶಾಂಭವೈ ಪುರಾಶ್ರಯ ಜಯದೇವ ಜಯ ಸೋಮನಾಥ ಜಯಾನಿರತಂ ಶಿವಾಧವಾ."

---

# ಜಂಗಮದಲ್ಲಿ ಜಾತಿಯನರಸ

( ಲೇಖಕ:- ಶ್ರೀ. ಕಲ್ಯಾಣಪ್ಪಾ ಬ್ಯಾಳಿ ಬಿ. ಎ. ಹುನಗುಂದ )



ಹಂಪೆಯ ಹರೀಶ್ವರ ಕವಿಯು 'ಬಸವರಾಜ ದೇವರ ರಗಳೆ' ಯಲ್ಲಿ ಬಸವಣ್ಣನವರ ಹಿರಿಮೆಯನ್ನು ಬಣ್ಣಿಸುವಾಗ ಬಸವೇಶನು " ಜಂಗಮದಲ್ಲಿ ಜಾತಿಯನ್ನರಸ " ಎಂದು ಹೇಳಿದ್ದಾನೆ. ಇದರ ಅರ್ಥವೇನು? ಜಂಗಮವೆಂಬುದು ಜಾತಿಯಲ್ಲ. ಅದು ಒಂದು ಸ್ಥಲ ಮೆಟ್ಟಿಲು ಅಥವಾ ಅಧಿಕಾರ. ಆ ಗೌರವವನ್ನು ಪಡೆದವನು ಯಾವದೇ ಜಾತಿಯವನಿದ್ದರೂ ಅವನು ಜಂಗಮನು. ಅರ್ಥಾತ್ ಮಡಿವಾಳ ಮಾಚಯ್ಯ, ಮೇದಾರ ಕೇತಯ್ಯ, ಮೊಚ್ಚಿಗರ ಹರಳಯ್ಯ ಅಂಬಿಗರ ಚೌಡಯ್ಯ, ಡೋಹರ ಕಕ್ಕಯ್ಯ, ದೇವರ ದಾಸಿಮಯ್ಯ, ಹಡಪದ ಅಪ್ಪಯ್ಯ ಇತ್ಯಾದಿ ಭಿನ್ನ ಭಿನ್ನ ಜಾತಿಯ ಮಹಾಮಹಿಮರು ಗುರುಕಾರುಣ್ಯದಿಂದ ದೀಕ್ಷೆ ಹೊಂದಿ ವೀರಶೈವರಾಗಿ ಷಟ್ ಸ್ಥಲ ಜ್ಞಾನ ಸಂಪನ್ನರಾದ್ದರಿಂದ ಜಂಗಮರೆನಿಸಿಕೊಂಡರು. ಪರಮ ಪೂಜ್ಯರಾದ ಇಂಥ ಜಂಗಮರ ಪೂರ್ವ ಜಾತಿಯನ್ನು ನಾನು ಎತ್ತಿ ಆಡಲಾರೆನು. ಅವರು ನನಗೆ ಪೂಜ್ಯರು. ಎಂಬುದೇ ಬಸವಣ್ಣನವರ ಇಂಗಿತಾರ್ಥ. ಇದು ಬಸವಣ್ಣನವರ ಜಾತ್ಯತೀತವಾದ ಅತ್ಯಂತ ವಿಶಾಲ ದೃಷ್ಟಿ. ಜಗತ್ತಿನ ವಿಭೂತಿಗಳೆಲ್ಲ ಒಸೆದು ಆಳುದೆನ್ನುವ ತತ್ವ. ಆದರೆ ಜಂಗಮತ್ವವನ್ನು ಒಂದು ವಿಶಿಷ್ಟವಾದ ಅಯ್ಯನವರೆನಿಸಿಕೊಳ್ಳುವ ಜಾತಿಗೇನೇ ಮೀಸಲಾಗಿರಿಸುವದು ಸಂಕುಚಿತ ದೃಷ್ಟಿ. ಉದಾರವಾದ ವೀರಶೈವ ಮತಕ್ಕೆ ದೊಡ್ಡ ಕಲಂಕ. ವೀರಶೈವ ಮತವು ಜಾತಿ ಸಂಕೋಲೆಗಳಿಂದ ಬಿಗಿಯಲ್ಪಡದೆ ಮುಕ್ತಗಳಾದ ಮಹನೀಯರಿಗೆ ಮುಮುಕ್ತ ದ್ವಾರವಾಗಿದೆ. ಜಂಗಮತ್ವವನ್ನು ಒಂದು ಜಾತಿಗೆ ಅಂಟಿಸುವದು ಅಜ್ಞಾನದ ಕುರುಹು.

ಈಗ ಸಮಾಜದಲ್ಲಿ ಭಕ್ತವರ್ಗ, ಮಹೇಶವರ್ಗಗಳೆಂಬೆರಡು ವರ್ಗಗಳು ರೂಢಿಯಲ್ಲಿ ಕಂಡು ಬರುತ್ತಿರುವವಲ್ಲ! ಮಹೇಶವರ್ಗಕ್ಕೆ ಜಂಗಮರೆನ್ನುವರು. ಭಕ್ತವರ್ಗಕ್ಕೆ ಜಂಗಮರೆನ್ನುವದಿಲ್ಲ. ಈ ರೂಢಿಯು ಹೇಗೆ ಎಂದು ಪ್ರಚಲಿತವಾಯಿತು? ಎಂಬ ಶಂಕೆಯು ಉದ್ಭೂತವಾಗುತ್ತದೆ. ಇದಕ್ಕೆ ಸಮಾಧಾನವೇನು? (೧) ಮೇಲ್ಕಾಣಿಸಿದ ಭಿನ್ನ ಭಿನ್ನ ಜಾತಿ

ಯವರಾದ ಜಂಗಮರ ವಂಶವು ಬೆಳೆಯುತ್ತ ಬಂದು ಕಾಲಾಂತರದಿಂದ ಅವರ ಪೂರ್ವ ಕುಲದ ಸದ್ದಡಗಿ ಜಂಗಮ ಕುಲವೆಂಬುದೊಂದೇ ಉಳಿದು ಪರಸ್ಪರ ಶರೀರ ಸಂಬಂಧದಿಂದ ಈ ಜಂಗಮ ಕುಲವು ಹಬ್ಬಿರಬಹು ದೆಂದು ಕೆಲವರು ಪ್ರತಿಪಾದಿಸಬಹುದು. (೨) ಅಥವಾ ಬಸವೇಶನ ಕಾಲಕ್ಕೆ ಪ್ರಸಿದ್ಧಿ ಹೊಂದಿದ ಭಿನ್ನ ಭಿನ್ನ ಜಾತಿಯ ೧ ಲಕ್ಷ ೯೬ ಸಾವಿರ ಗಣಂಗಳು ಮೊದಲು ಯೋಧರಿದ್ದು ಕಲ್ಯಾಣ ಕ್ರಾಂತಿಯ ತರುವಾಯ ನಿರುದ್ಯೋಗಿಗಳಾಗಿ ಅಲ್ಲಲ್ಲಿ ಹರಡಿ ಭಿಕ್ಷೆಯಿಂದ ಜೀವಿಸಿ ನಂತರ ಒಂದಿ ಲ್ಲೊಂದು ಕಾಯಕವನ್ನು ಕೈಕೊಂಡು ಜೀವಿಸಿರಬಹುದು. ಮುಂದೆ ಈ ಗಣಂಗಳು ಪರಸ್ಪರ ಶರೀರ ಸಂಬಂಧದಿಂದ ಗಣವಂಶವನ್ನು ಬೆಳೆಸುತ್ತ ಬಂದಿರಬಹುದು. ಅದಕ್ಕೇ ಅವರಿಗೆ ಗಣಂಗಳೆಂತಲೂ ಅಯ್ಯನವರೆಂತಲು ಕರೆದಿರಬಹುದೆಂದು ಕೆಲವರು ಪ್ರತಿಪಾದಿಸಬಹುದು. (೩) ಅಥವಾ ಶ್ರೀ ಗುರುಗಳಿಂದ ಅಥವಾ ಅವರ ಪ್ರತಿನಿಧಿಗಳಿಂದ ಮಾಹೇಶ್ವರ ದೀಕ್ಷೆ ಯನ್ನು (ಅಯ್ಯಾಚಾರ) ಹೊಂದಿದಂಥ ಕೆಲವು ಭಕ್ತ ಜನಗಳು ಮುಂದೆ ಅಯ್ಯಗಳೆಂದೆನಿಸಿಕೊಂಡು ಪರಸ್ಪರ ಶರೀರ ಸಂಬಂಧದಿಂದ ಅಯ್ಯನವರೆಂಬ ಜಾತಿಯನ್ನು ಬೆಳೆಯಿಸಿರ ಬಹುದು. ಹೀಗೆಂದು ಬೇರೆ ಕೆಲ ವರು ಪ್ರತಿಪಾದಿಸಬಹುದು. (೪) ಅಥವಾ ಜಂಗಮ ವೆಂಬುದು ಮೊದಲು ಕುಲವಿದ್ದಿಲ್ಲ. ಭಕ್ತ ಭವಿಗಳೆಂಬೆರಡೇ ಕುಲಗಳಿದ್ದವು. ಜನ್ಮತಃ ಲಿಂಗವಂತನೇ ಭಕ್ತ. ಅಲಿಂಗಿಯೋ ಭವಿ. ಭವಿಯು ಲಿಂಗಧಾರಣದಿಂದ ಭಕ್ತನಾಗಬಲ್ಲ. ಜನ್ಮತಃ ಲಿಂಗವಿದ್ದ ಭಕ್ತನೇ ಶುದ್ಧ ವಂಶೀಯನು. ಭವಿಯಿದ್ದು ಭಕ್ತನಾದವನು ಆಗಂತುಕನು. ಆಶುದ್ಧ ಶಿವ ಭಕ್ತರಲ್ಲಿ ಕ್ರಿಯಾಜ್ಞಾನ ಭೇದದಿಂದ ಗುರು ಜಂಗಮ ಎಂಬೆರಡು ಶಾಖೆಗಳು ಸಮಾಜದಲ್ಲಿ ರೂಢವಾದವು. ಮೊದ ಮೊದಲು ಭಕ್ತ-ಗುರು-ಜಂಗಮ ಈ ಶಾಖೆಗಳು ಮೂಲವಂಶವು ಒಂದೇ ಇದ್ದಾಗ್ಯೂ ಬರಬರುತ್ತ ಗುರು ಜಂಗಮರಿಗೆ ಸಂಬಂಧಿಸಿದ ಮನೆತನಗಳು ಭಕ್ತವಂಶವೆಂದು ಕರೆಯಿಸಿ ಕೊಳ್ಳಲು ನಾಚಿಕೊಂಡು 'ಮಹೇಶ' ಎಂಬ ಕುಲವನ್ನೇ ನಿರ್ಮಿಸಿ ಕೊಂಡು ಪರಸ್ಪರ ಶರೀರ ಸಂಬಂಧವನ್ನು ಮಾಡಿರಬಹುದಾದ್ದರಿಂದ ಸಮಾಜದಲ್ಲಿ ಭಕ್ತ ಮಹೇಶ ಎಂಬೆರಡು ಕುಲಗಳು ನಿರ್ಮಿತವಾದವು. ಹೀಗೆಂದು ಮತ್ತೆ ಕೆಲವರು ಪ್ರತಿಪಾದಿಸಬಹುದು. ಈ ನಾಲ್ಕು ವಿಧದ ಅಭಿಪ್ರಾಯಗಳು ವಿಚಾರಾರ್ಹವಾಗಿದ್ದು ಸಂಶೋಧನೆ ಮಾಡಲು ತಕ್ಕವು

ಗಳಾಗಿವೆ. ಇವುಗಳ ಸಂಬಂಧವಾಗಿ ನನಗೆ ತಿಳಿದ ಮಟ್ಟಿಗೆ ವಿವೇಚಿಸಲು ಪ್ರಯತ್ನಿಸುವೆ. ಸಂಶೋಧಕರು ನಿಜವಾದ ಸಂಗತಿಗಳನ್ನು ಸಪ್ರಮಾಣವಾಗಿ ತಿಳಿಸಿದಲ್ಲಿ ಅವರಿಗೆ ತುಂಬಾ ಉಪಕೃತನಾಗುವೆನು.

ಮೊದಲನೆಯದಾಗಿ ಬಸವಣ್ಣನವರ ಕಾಲದ ಮಾಚಯ್ಯ, ಹರಳಯ್ಯ, ಚೌಡಯ್ಯ ಮೊದಲಾದ ಶಿವಶರಣರು ಜಂಗಮರೇನೋ ನಿಜ. ಅವರು ತಮ್ಮ ವ್ಯಕ್ತಿತ್ವದಿಂದ ಜಂಗಮತ್ವವನ್ನು ಪಡೆದರೇ ವಿನಾ ಅವರ ವಂಶಕ್ಕೆ ಜಂಗಮತ್ವವು ಲಭಿಸಿದಂತೆ ಕಂಡು ಬರುವದಿಲ್ಲ. ಇಂಥ ಆಗಂತುಕ ಜಂಗಮರಲ್ಲಿ ಶರೀರ ಸಂಬಂಧಾದಿಗಳು ಘಟಿಸಿದಂತೆ ಇತಿಹಾಸ ಪ್ರಮಾಣಗಳೂ ಶೋಧವಾಗಿಲ್ಲ. ಕಾರಣ ಇವರು ವ್ಯಕ್ತಿಶ: ಜಂಗಮರಾಗಿ ಬಾಳಿ ಲಿಂಗೈಕ್ಯರಾದರೇ ವಿನಾ ಮುಂದೆ ಇವರ ಕುಲವು ಪೂರ್ವ ಕುಲವೇ ಇದ್ದಿತಲ್ಲದೆ ಅದು ವೀರಶೈವವಾಗಲಿಲ್ಲ. ೧೨ ನೆಯ ಶತಮಾನದಂಥ ಜಾತ್ಯಂಧತೆಯ ಕಾಲದಲ್ಲಿ ಮಹಾತ್ಮರಾದ ವ್ಯಕ್ತಿಗಳಿಗಷ್ಟೇ ಪೂಜ್ಯತೆಯನ್ನು ಕೊಟ್ಟಿರಬಹುದಲ್ಲದೆ ಅವರವರ ಮನೆತನದವರನ್ನೂ ಅಷ್ಟೇ ಪೂಜ್ಯತೆಯಿಂದ ಸಮಾಜವು ಕಂಡಂತೆ ತೋರುವದಿಲ್ಲ ಅವರವರ ಮನೆತನಗಳಿಗೆ ಲಿಂಗ ಧಾರಣ ವಾಗಿದ್ದರೂ ಆ ವಂಶಗಳು ಬೆಳಕೆಯಿಲ್ಲದೆ ದೂರೀ ಉಳಿದಿದ್ದು ಈಗಲೂ ಕಂಡು ಬರುತ್ತದೆ. ಅವರವರ ವಂಶಗಳು ಒಂದು ವೇಳೆ ಭಕ್ತರಾಗಿ ಉಳಿದವಲ್ಲದೆ ಜಂಗಮವಾಗಿ ಬಾಳಲಿಲ್ಲವೆಂಬುದು ರೂಢಾಚಾರ ದಿಂದ ತಿಳಿಯುತ್ತದೆ.

ಎರಡನೆಯದಾಗಿ ೧೨ ನೆಯ ಶತಮಾನದ ೧ ಲಕ್ಷ ೯೬ ಸಾವಿರ ಗಣಂಗಳಲ್ಲಿ ಅನೇಕರು ರಣರಂಗದಲ್ಲಿ ಮಡಿದಿರಬಹುದು. ಉಳಿದ ಕೆಲವರು ಉಳಿವೆ, ಸಂಗಮಗಳ ಕಡೆಗೆ ಚೆನ್ನಬಸವಣ್ಣ, ಬಸವಣ್ಣನವರ ಬೆನ್ನುಗಾವಲಾಗಿ ಸಾಗಿರಬಹುದು. ಅವರೊಡನೆ ಮಡಿದಿರಬಹುದು. ಉಳಿದವರು ಗತಿಗಾಣದೆ ಅಲ್ಲಲ್ಲಿ ಹರಡಿ ಭಕ್ತರ ಭಿಕ್ಷೆಯಿಂದ ಜೀವಿಸಿ ಗಣಂಗಳೆನಿಸಿಕೊಂಡಿರಬಹುದು. ಆದರೆ ಇವರು ಶುದ್ಧ ವೀರಶೈವ ಜಾತಿಯವರಿರದೆ ಆಗಂತುಕರಾದ್ದರಿಂದ ತೆಕ್ಕಿಕಾಯಕ, ಮುಳ್ಳು ಆವುಗೆಯ ಕಾಯಕ ಸುವ್ವಿ ಗಂಟೆಯ ಕಾಯಕ ಇತ್ಯಾದಿ ಕಾಯಕಗಳಿಂದ ಸಮಾಜದಲ್ಲಿ ಉದರ ಪೋಷಣೆ ಮಾಡಿದಂತೆ ಕಂಡುಬರುತ್ತಿದೆ. ಇಂಥಗಣಂಗಳಿಗೆ ಗುರು ಜಂಗಮ ಪೀಠಾಧಿಕಾರಗಳನ್ನು ಕೊಡಬಾರದೆಂದು ಮುಕುಟಾಗಮ ಮೊದಲಾದ ಕೆಲವು ಗ್ರಂಥಗಳು ಪ್ರತಿ ಪಾದಿಸಿವೆ. ಇಂಥ ಜಂಗಮರು

ಕಡಿಮೆಯುವರೆಂದು ಕೆಲವು ಶುದ್ಧ ವಂಶೀಯರಾದ ಭಕ್ತರು ತಮ್ಮ ಮನೆಗಳಿಗೆ ಊಟಕ್ಕೆ ಕರೆಯುವದಿಲ್ಲ. ಈ ರೀತಿಯಾಗಿ ಈ ಗಣಂಗಳವಂಶಗಳು ಮಾರ್ಪಟ್ಟಂತೆ ತೋರುತ್ತದೆ.

ಮೂರನೆಯದಾಗಿ ಗುರುಗಳೂ ಅವರ ಪ್ರತಿನಿಧಿಗಳೂ ಅಯ್ಯಾಚಾರ ಮಾಡುತ್ತ ಬಂದ ಮನೆತನದವರೆಲ್ಲ ಅಯ್ಯನವರು ಜಂಗಮರು ಎನಿಸಿಕೊಳ್ಳುತ್ತಿರುವದು ಈಗ ರೂಢಿಯಲ್ಲಿರುವದು. ಆದರೆ ಇತಿಹಾಸ ಸಂಶೋಧನೆಯಿಂದ ೧೨ ನೆಯ ಶತಮಾನದಿಂದ ಪ್ರಾದುರ್ಭವಿಸಿ ೧೮ ನೆಯ ಶತಮಾನದ ವರೆಗೆ ವ್ಯತ್ಯಾಸ ಹೊಂದುತ್ತ ಹೋಗಿ ೧೮ ನೆಯ ಶತಮಾನದ ನಂತರ ಈ ಪದ್ಧತಿಯು ನೆಲೆ ಗೊಂಡಿತೆಂದು 'ಅನಾದಿ ವೀರಶೈವ ಸಂಗ್ರಹ' ಎಂಬ ಗ್ರಂಥವನ್ನೋದಿದವರಿಗೆ ಮನವರಿಕೆಯಾಗದಿರದು. ಆದರೆ ಜಂಗಮರ ಮನೆತನಗಳು ೧೨ ನೆಯ ಶತಮಾನದಿಂದೀಚೆಗೆ ಉದ್ಭವಿಸಿದವೇ ಹೇಗೆ ? ಮೊದಲು ಹಿರೇಮಠ, ಗುರುಮಠ, ನಿರಾಭಾರಿ ಮಠಾದಿಗಳಿದ್ದಲ್ಲವೇ ? ಅವರಲ್ಲಿ ದೀಕ್ಷಾದಿ ಕ್ರಮಗಳಿರಲಿಲ್ಲವೇ ? ಎಂಬ ಪ್ರಶ್ನೆ ಹೊರಡುವದು. ಈ ವಿಷಯವನ್ನು ಕೆಳಗೆ ಪ್ರತಿಪಾದಿಸಲಾಗಿದೆ.

ಕೊನೆಯದಾಗಿ ಶೂನ್ಯ ಸಂಪಾದನೆಯಲ್ಲಿ 'ಘಟ್ಟಿವಾಳಯ್ಯಗಳ ಸಂಪಾದನೆ ಮತ್ತು ಪ್ರಭುದೇವರ ಆರೋಗಣೆಯ ಸಂಪಾದನೆ'ಗಳನ್ನು ವಿವರಿಸುವಾಗ ಅಲ್ಲಿ ಘಟ್ಟಿವಾಳಯ್ಯ ಹಾಗೂ ಪ್ರಭುದೇವರು ಜಂಗಮರನ್ನು ವಿಡಂಬಿಸಿ ನುಡಿದ ಪ್ರಸ್ತಾಪ ಬರುತ್ತದೆ. ಆ ಜಂಗಮರೆಲ್ಲಿಯವರು ? ೧೨ನೆಯ ಶತಮಾನದಲ್ಲಿಯೇ ನಾಯಿಕೊಡೆಗಳಂತೆ ಎದ್ದು ಕುಳಿತರೋ ? ಹಾಗೇನೂ ಇಲ್ಲ. ಸಂಗಮನಾಥ, ಈಶಾನ್ಯ, ಜಾತವೇದಾದಿ ಜಂಗಮರು ವಂಶಪಾರಂಪರ್ಯವಾಗಿ ಬಂದಂತೆ ಕಂಡುಬರುತ್ತದೆ. ಅವರ ತಳಬುಡವೇನು ? ವಿಚಾರಿಸೋಣ.

ಸದಾಚಾರ ಸಂಗ್ರಹ ಪುಟ ೨೬ ರಲ್ಲಿ "ಅತಿವರ್ಣಾಶ್ರಮಾ: ಪೂರ್ವೇ ನಂದ್ಯಾದಿ ಪ್ರಮಥಾಃ ಸ್ಮೃತಾ: । ತತ್ಸಂತತಿ ಸಮಾಯಾತಾ ವೀರಶೈವಾ ಇತಿಶ್ರುತಾ: ।" ಅಂದರೆ ಕೃತಯುಗದಲ್ಲಿ ಆಗಿಹೋದ ನಂದೀಶ್ವರಾದಿ ಪ್ರಮಥರು ಅತಿವರ್ಣಾಶ್ರಮಿಗಳು. ಅವರೇ ವೀರಶೈವ ಮತದ ಮೂಲ ಪ್ರವರ್ತಕರು. ಅವರ ಸೂತ್ರವಿಡಿದು ಬಂದ ಸಂತತಿಯೇ ವೀರಶೈವವೆಂದು ತಿಳಿಯಬೇಕು " ಎಂದು ಹೇಳಿದೆ. ಆದರೆ ನಂದ್ಯಾದಿಗಳ

ಸೂತ್ರವಿಡಿದು ಬೆಳೆದು ಬಂದ ವಂಶವಾವುದು ? ಸ್ವಾಯಂಭು ಆಗಮ ಲನೆಯ ಪಟಲದ ಮೂಲ ಪ್ರತಿಯಲ್ಲಿ ಹೀಗೆ ಹೇಳಿದೆ. " ನಂದ್ಯಾದಿ ಪಂಚಭಿರ್ಭೂಗತೌ ದೀಕ್ಷಿತೈಃ ಪಂಚಮೈರಪಿ । ವಂಶಸ್ತು ಪಂಚ ಮಾನಾಂತು ಗತೋವೃದ್ಧಿಂ ವರಾನನೇ ' ॥ ಭೂಮೌ ತದ್ವಂಶ ಜಾತಾನಾಂ ದೀಕ್ಷಾನುಗ್ರಹ ಕಾರಣಾತ್ ನಿಧಾಯ ನಿಜ ಶಿಷ್ಯಾಂಶ್ಚ ಪುನಸ್ತೇಮಾಂ ಸಮಾಗತಾಃ " ಅಂದರೆ ನಂದ್ಯಾದಿಗಳೈವರಿಂದ ಭೂಮಿಯಲ್ಲಿ ದೀಕ್ಷೆಹೊಂದಿದ ಪಂಚಮ ವಂಶವು ಬೆಳೆಯಿತು ಆ ವಂಶದಲ್ಲಿ ಹುಟ್ಟಿದವರೆಲ್ಲ ದೀಕ್ಷಾನುಗ್ರಹದಿಂದ ನಂದ್ಯಾದಿಗಳ ಶಿಷ್ಯರಾದರು ಅವರಿಗೆ ಪಂಚಮರೆಂಬ ಹೆಸರು. ಪಂಚಮರೆಂದರಾರು ? ಸದಾಚಾರ ಸಂಗ್ರಹದ ೧೧೯ ನೆಯ ಪುಟದಲ್ಲಿ ಹೀಗೆ ಹೇಳಿದೆ. ಮಮೇಶಾನ್ಯ ಮುಖಾಜ್ಜಾತ: ಪುರಾ ಪಂಚಮ ಸಂಜ್ಞಕಾಲ್ । ತಸ್ಮಾತ್ಪಂಚಾಸ್ಯ ಗಣಪಃ ಪಂಚಮೇತಿ ಕೀರ್ತಿತಃ ॥ ತಸ್ಯಪುತ್ರಾ ದೀಕ್ಷಿತಾಹಿ ವೀರಶೈವ ಪ್ರವರ್ತಕಾಃ ॥ ಪಂಚಮರೆಂದರೆ ಪರಮೇಶ್ವರನ ಈಶಾನ ಮುಖದಿಂದ ಹುಟ್ಟಿದ, ಪಂಚಾಸ್ಯಗಣವರನ ಮಕ್ಕಳು. ಇವರಿಗೆ ಉತ್ತರವಾತುಲದಲ್ಲಿ ಪಂಚಾರಾಧ್ಯಾ: ಎಂಬ ಹೆಸರಿದೆ. ಇವರೇ ವೀರಶೈವರ ಮೂಲಗುರುಗಳು. ಈ ಗುರುಗಳು ತಮ್ಮ ವಂಶಸ್ಥರನ್ನೇ ಗುರು ಪಟ್ಟಕ್ಕೆ ದೀಕ್ಷೆಮಾಡಿ ಆರಿಸುತ್ತಾ ನಡೆದರು. ಆದರೆ ಆಗಂತುಕರನ್ನು ಪಟ್ಟಾಧಿಕಾರಿಗಳನ್ನು ಮಾಡಲಿಲ್ಲ. ಈ ವಿಷಯವಾಗಿ ಸದಾಚಾರ ಸಂಗ್ರಹದಲ್ಲಿ. ವಂಶ್ಯ ಆಗಂತುಕಶ್ಚೇತಿ ದ್ವಿವಿಧಾ ಶಿಷ್ಯ ಉಚ್ಯತೇ । ಪೂರ್ವೋಕ್ತ ಪಂಚಮಾನಾಂತು ನಂದಿ ಭೃಂಗ್ಯಾದಯೋಃಸುತಾಃ ॥

ಗುರವಸ್ತು ತಥಾಸ್ತೇಷಾಂ ದ್ವಾವರ್ಗೌ ಪರಿಕೀರ್ತಿತೌ । ಶೈಷ್ಯಶ್ಚ ಪುತ್ರ ವರ್ಗಶ್ಚ ಕ್ರಮಾದ್ಭೇದಃ ಪ್ರಕೀರ್ತಿತ: ॥

ಲಿಂಗಿನ: ಪಂಚಮಾ ಜ್ಞೇಯಾ ಇತರೇ ಲಿಂಗಧಾರಿಣ: ।
ಅತ: ಪಂಚಮ ಸಂಜಾತಾನ್ ಗೃಹೀತ್ವಾ ಶಿಷ್ಯಪುತ್ರಕಾನ್ ॥
ವೀರ ಮಾಹೇಶ್ವರೀಂ ದೀಕ್ಷಾಂ ಕೃತ್ವಾತೇ ಶಿಷ್ಯಮಾರ್ಗಿಣಃ ।
ಪಟ್ಟಾಭಿಷೇಕ ಯುಕ್ತಾಂಶ್ಚ ಕುರ್ವಂತಿ ಚರವರ್ತಿನಃ ॥
ತವವ ವಂದ್ಯಾ: ಪೂಜ್ಯಾಶ್ಚನೇತರೇಲಿಂಗ ಧಾರಿಣ: ।
ಅತೋ ಗುರುಪದ ಪ್ರಾಪ್ತಿ: ಶ್ರೇಷ್ಠಾನ್ ಪಂಚಮ ಸಂಜ್ಞಕಾನ್
ವಿಹಾಯ ನಾಸ್ತಿ ನಾಸ್ತ್ಯೇವಂ ಅನ್ಯೇಷಾಂಲಿಂಗ ಧಾರಿಣಾಂ ॥

ಈ ಎಲ್ಲ ಶ್ಲೋಕಗಳ ತಾತ್ಪರ್ಯವೇನು ? ಪಂಚಮ ವಂಶದವರಾದ ಗುರುಗಳು ತಮ್ಮ ವಂಶದ ಶಿಷ್ಯರಿಗೆ ಮಾತ್ರ ವೀರ ಮಾಹೇಶ್ವರ ದೀಕ್ಷೆಯನ್ನುಕೊಟ್ಟು ಪಟ್ಟಕ್ಕೆ ಯೋಗ್ಯರನ್ನಾಗಿ ಮಾಡುತ್ತಿದ್ದರು. ಆಗಂತುಕ ಶಿಷ್ಯರಿಗೆ ವೀರಶೈವ ಮಾಹೇಶ್ವರ ದೀಕ್ಷೆಯನ್ನು ವಿಧಿಸುತ್ತಿರಲಿಲ್ಲ. ಅಂಥವರಿಗೆ ಪಟ್ಟವನು ಕಟ್ಟುತ್ತಿರಲಿಲ್ಲ ಎಂದು ತಿಳಿದುಬರುತ್ತದೆ. ಇದರ ಮೇಲಿಂದ ಈ ಪಂಚಮ ವಂಶದ ಮೂಲ ಗುರುಗಳಿಂದ ಮಾಹೇಶ್ವರ ದೀಕ್ಷೆ ಹೊಂದಿದ ಭಕ್ತರೆಲ್ಲ ಮಠಸ್ಥರು. ಅಯ್ಯನವರು ಎಂದೆನಿಸಿಕೊಂಡಿರಬಹುದು. ಪ್ರಪಂಚಿಕರಾದ ಭಕ್ತರಿಗೆ ಜಾತಿಯುಂಟಲ್ಲದೆ ಬಹ್ಮಚಾರಿಗಳಾದ ಗುರು ಜಂಗಮರಿಗೆ ಜಾತಿಯಲ್ಲಿಯದು ?

ಆದರೆ ಕಲಿಯುಗದಲ್ಲಿ ೧೨ ನೆಯ ಶತಮಾನದ ಪಂಚಾಚಾರ್ಯರೆನಿಸಿಕೊಂಡ ರೇವಣಸಿದ್ಧಾದಿಗಳು ಕೃತಯುಗದ ಪಂಚಾಸ್ಯ ಗಣವರನ ಮಕ್ಕಳಿಗೆ ದೀಕ್ಷೆ ಮಾಡಿದರೆಂದು ಸದಾಚಾರ ಸಂಗ್ರಹ ಸ್ವಾಯಂಭು ಆಗಮಗಳಲ್ಲಿ ಹೇಳಿದ್ದುದು ಪ್ರಕ್ಷಿಪ್ತವೂ ಅಸಂಬದ್ಧವೂ ಆಗಿರುತ್ತದೆ. ಅದೇ ಮೇರೆಗೆ ಅದೇ ಸ್ವಾಯಂಭು ಆಗಮದಲ್ಲಿ " ಮದೂರ್ಧ್ವ ಮುಖಸಂಜಾತಃ ನಿರಂಜನ ಗಣೇಶ್ವರಃ । ಶೂನ್ಯ ಪೀಠಾಧಿಕಾರೀಚ ಪಂಚಾರ್ಯ ಗುರು ವರ: ॥ ಎಂದು ಹೇಳಿದ ಮಾತು ಪ್ರಕ್ಷಿಪ್ತವೂ ಅಸಂಬದ್ಧವೂ ಆಗಿರುತ್ತದೆ. ಯಾಕಂದರೆ ಸ್ವಾಯಂಭು ಆಗಮ ಪ್ರ ೧೨ನೆಯ ಶತಮಾನದ ಶೂನ್ಯ ಪೀಠಾಧಿಕಾರಿಯಾದ ಪ್ರಭುದೇವರು ಪಂಚಾಚಾರ್ಯರ ಗುರುಗಳೆಂದು ಉಲ್ಲೇಖಿಸಿದೆ.

ಇವೆಲ್ಲ ಆಗಮ ಪ್ರಮಾಣಗಳನ್ನು ನೋಡಿದರೆ ಅನಾದಿ ಪಂಚಮ ವಂಶದಲ್ಲಿ ಸಾಮಾನ್ಯವಾದ ಭಕ್ತವರ್ಗ, ವಿಶೇಷವಾದ ಪಟ್ಟ ಚರಾದಿವರ್ಗ, ನಿರಾಭಾರಿಯಾದ ವಿರಕ್ತವರ್ಗ ಎಂದು ನಿಜಗುಣ ಶಿವಯೋಗಿಗಳು ವಿಂಗಡಿಸಿದ್ದುದು ಸಂಸ್ಕಾರ ಕ್ರಿಯಾಜ್ಞಾನ ಭೇದವೇ ಹೊರತು ಅವರವರ ಮೂಲ ವಂಶವು ಪಂಚಮವಂಶ. ಅಂತೆಯೇ ನಂದಿಕೇಶ್ವರನ ಬಳಿವಿಡಿದು ನಂದೀ ಅವತಾರವೆನಿಸಿಕೊಂಡ ಬಸವೇಶನು ಕೂಡ 'ಪಂಚಮಶಾಲಿ' ಯವನೆಂಬರಯ್ಯ ಎಂದು ಅನಾದಿವೀರಶೈವ ಸಂಗ್ರಹಕಾರರು ವಿಶದ ಪಡಿಸಿದ್ದಾರೆ. ಶೈವಗುರುಗಳು ಆತನನ್ನು ಬ್ರಾಹ್ಮಣನೆಂದು ಹೊಗಳಿದ್ದರೂ ಕಾಲಾನುಗುಣದಿಂದ ಗುರುಪೀಠದವರಿಗೆ ಆರಾಧ್ಯ ಬ್ರಾಹ್ಮಣರೆಂದು ಕರೆಯುತ್ತಿದ್ದುದನ್ನು ಬಸವೇಶನು ತನ್ನ ವಚನಗಳಿಂದ ಖಂಡಿಸಿದರೂ ಬಸ

ವನು ನಂದಿಯ ಅವತಾರನೇ ನಿಜ, ಪಂಚಮ ವಂಶೀಯನೇ ನಿಜ ಎಂಬ ಮಾತು ಹೆಚ್ಚು ಸಮಂಜಸ ಕಾಣುತ್ತದೆ. ಆದುದರಿಂದ ಅಯ್ಯನವರೆಂಬ ಜಾತಿಯು ಮೂಲ ಪಂಚಮ ಕಾಲಿಯಿಂದಲೇ ಹುಟ್ಟಿ ಮಧ್ಯಂತರದಲ್ಲಿ ಪ್ರತ್ಯೇಕವಾಗಿ ಪರಿಣಮಿಸಿತೆಂದು ನಮಗೆ ತೋರುತ್ತದೆ.

ಜಾತಿಯ ತೊಡಕು ಏನೇ ಇರಲಿ. ಜಾತ್ಯಾತೀತವಾದ ಈ ಮನ್ವಂತರದಲ್ಲಿ ವೀರಶೈವರು ಕೈಕೊಳ್ಳತಕ್ಕ ಸುಧಾರಣೆಗಳಾವು ? ಎಂಬ ಪ್ರಶ್ನೆಯು ಮಹತ್ವದ್ದಾಗಿದೆ. ವಂಶೀಯರೇ ಇರಲಿ ಆಗಂತುಕರೇ ಇರಲಿ ; ಲಿಂಗಧಾರಿಗಳೆಲ್ಲರೂ ಸರಿಸಮಾನರು. ಅವರಲ್ಲಿ ಪರಸ್ಪರ ಅನ್ನೋದಕ ವಿವಾಹ ಕಾರ್ಯಗಳು ಜರಗುವದು ಶಾಸ್ತ್ರ ದೃಷ್ಟಿಯಿಂದ ಅನುಚಿತವಲ್ಲ. ಯಾವ ವೀರಶೈವನೇ ಪ್ರಪಂಚಿಕನಾಗಿ ಒಂದು ಕಾಯಕ ಕೈಕೊಂಡು ನಮ್ಮ ಸಮಾಜದಲ್ಲಿ ವ್ಯವಹರಿಸುತ್ತಿದ್ದರೆ ಅವನಿಗೆ ಭಕ್ತನೆನಬೇಕು. ಯಾವ ವೀರಶೈವನೇ ಇರಲಿ ಬ್ರಹ್ಮಚಾರಿಯಾಗಿ ಒಂದಿಲ್ಲೊಂದು ಗುರು ಪೀಠಕ್ಕೆ ಆರಿಸಲ್ಪಟ್ಟರೆ ಅವನಿಗೇ ಗುರುವೆನ್ನಬೇಕು. ಯಾವನೇ ವೀರಶೈವನಿರಲಿ ಬ್ರಹ್ಮಚಾರಿಯಾಗಿ ಸರ್ವಸಂಗ ಪರಿತ್ಯಾಗಮಾಡಿ ಷಟ್‌ಸ್ಥಲ ಜ್ಞಾನ ಸಂಪನ್ನನಾಗಿ ದೈವದವರಿಂದ ಆರಿಸಲ್ಪಟ್ಟರೆ ಅವನಿಗೇ ವಿರಕ್ತನೆನಬೇಕು. ಇಷ್ಟು ಸುಧಾರಣೆಗಳಾದರೆ ನಮ್ಮೊಳಗಿನ ಪರಸ್ಪರ ಭೇದಗಳೆಲ್ಲ ಅಳಿದುಹೋಗಿ ಸಮಾಜವು ಬಂಧುರವಾಗುವದು. ಈಗ ಸಮಾಜಕ್ಕೆ ನಿಜವಾದ ಭಕ್ತ-ಗುರು-ಜಂಗಮರನ್ನು ಸಿದ್ಧಗೊಳಿಸುವ ಸಂಸ್ಥೆಗಳು ಅವಶ್ಯವಾಗಿವೆ. ಅಂಥಹ ಒಂದಾದರೂ ಸಂಸ್ಥೆಯನ್ನು ಸ್ಥಾಪಿಸುವದು ಸಮಾಜ ಹಿತೈಷಿಗಳ ಆದ್ಯ ಕರ್ತವ್ಯವಾಗಿದೆ.

---

## " ಕಾಯ "

ಬರೆದವರು:- ಗು. ಬ. ಪಾಟೀಲ ಮಾಸ್ತರ ಮುದಹಾಳ



ಏತಕೆ ಬಂದಿಹುದೀ ಕಾಯಾ
ಘಾತಕ ದಿಂದ ಮೆರೆವು ದೀಕಾಯಾ ||ಪಲ್ಲ||

ಕರಿಯಿಂದ ತುಂಬಿದ ಕಾಯಾ
ಭರದಿಂದ ಬೆಳದೀ ದೇಹಾ
ಶಿರಬಾಗಿ ಬೇಡದೆ ಶಿವನ—
ವಶವ ಪೊಂದದ ಕಾಯಾ ||೧||

ಮಾಯದ ಪಾಶದಿ ಸಿಲುಕಿ
ಶ್ರೇಯ ಪಡೆಯದ ಕಾಯಾ
ಬೀಯದಿ ಸಮಯಗಳಿಸಿ
ಪಯೋಧ ದಂತೆ ಮರೆಯಾಗು ಕಾಯಾ ||೨||

ನಿಕೃಷ್ಟವಾದುದೆಂದರಿತು
ನಿಕ್ಕಳಿಸುವದು ಸಂಸಾರದಿ
ನಿಕಾಯ್ಯ ಕಾಣದೆ ಮೃಡನ
ವ್ಯಾಕುಲದಲ್ಲಿ ಬೆರೆಯುವ ಕಾಯಾ ||೩||

ಕೃತಕವನು ನಿಜವೆಂದರಿತು
ಕೃತ್ತಿ ವಾಸನ ನಾಮವಜರೆದು
ಕತನಕಾಣದೆ ಜನ್ಮದಮತ್ತೆ –
ಕೃತಾಂತನ ಪಾಶಕ್ಕೊಳಗಾಗು ಕಾಯಾ ||೪||

# ಲೋಭಿಗೆ

(ಅಲ್ಲಯ್ಯನವರ ಮಠ, ಎಸ್. ಬಿ. 'ಸಾಹಿತ್ಯಭೂಷಣ' ಬೆಳಗಾವಿ.)



೧

ಕಾಯ ಕಾಯ ಕಾಯವೆಂದು ! ಮಾಯೆಯನ್ನು ಅರಿಯದೆ !
ಭಯ ಭಕ್ತಿಗಳನು ಬಿಟ್ಟು ಕುಣಿಯುತಿಳಿಸುವೆ !!
ನೀ ! ತಣಿಯಲೆಳಸುವೆ !!!

೨

ನನ್ನ ನನ್ನ ನನ್ನದೆಂದು ! ತನ್ನ ತನವನರಿಯದೆ !
ಹೊನ್ನು ಹೆಣ್ಣು ಮಣ್ಣುಗಳಲಿ ಬೆರೆಯುಬಯಸುವೆ !!
ನೀ ಬಿಡದೆ ಬಯಸುವೆ !!!

೩

ಹಣವು ಹಣವು ಹಣವು ಎಂದು ! ಕಣ್ಣು ಮುಚ್ಚಿಕೊಂಡು ಬಂದೆ!
ಕ್ಷಣವು ಕ್ಷಣವು ಕ್ಷಣವು ಬಿಡದೆ ಮರುಗಿ ಕೊರಗುವೇ !!
ನೀ ! ಸೊರಗಿ ಹೋಗುವೆ !!!

೪

ಜಾತಿ ಜಾತಿ ಜಾತಿ ಎಂದು ! ಮತಿಗೆಟ್ಟು ಜಪಿಸುತಿಹೆ !
ಕ್ಷಿತಿಯೊಳಿಹುದು ಒಂದೆ ಜಾತಿ ಧುಮುಕಬೇಡಲೋ !!
ನೀ ! ದುಡುಕಬೇಡಲೋ !!!

೫

ಬಟ್ಟೆ ಬಯಲ ನನ್ನದೆಂದು ! ಬಿಟ್ಟುಬಿಡದೆ ಸ್ಮರಿಸದೆ !
ನಟ್ಟ ನಡುವೆ ಬೆಳಗುತಿರುವ ಜ್ಯೋತಿ ನಂಬಲೋ !!
ಆ ! ರೂಪ ನಂಬಲೋ !!!

# ೭೭೦ ಅಮರ ಗಣಾಧೀಶ್ವರರು

ವೀರಶೈವ ಸಮಾಜವು ಹನ್ನೊಂದನೆಯ ಶತಮಾನದ ಮಧ್ಯಭಾಗದಿಂದ ಹದಿನಾಲ್ಕನೆಯ ಶತಮಾನದ ಮಧ್ಯಕಾಲದವ ವರೆಗೂ ಅಂದರೆ ಸುಮಾರು ಮುನ್ನೂರು ವರ್ಷ ಅತ್ಯಂತ ಪ್ರಾಬಲ್ಯ ಸ್ಥಿತಿಯಲ್ಲಿದ್ದಿತು. ಈ ಕಾಲದಲ್ಲಿ ಅದರಲ್ಲಿ ಅನೇಕ ಸತ್ಪುರುಷರೂ ಸಾಧುಗಳೂ ತತ್ವಜ್ಞಾನಿಗಳೂ ಉಗಮ ಹೊಂದಿ, ಸಮಾಜವನ್ನು ಎಲ್ಲ ಕಡೆಗೂ ವಿಸ್ತಾರಪಡಿಸಿದರು. ಈ ವೀರಶೈವ ಧಾರ್ಮಿಕ ಮತ್ತು ಸಾಮಾಜಿಕ ಚಟುವಟಿಕೆಗಳು ಮುಖ್ಯವಾಗಿ ಉತ್ತರ ಕರ್ನಾಟಕ ಮತ್ತು ಪಶ್ಚಿಮ ಆಂಧ್ರ ಪ್ರದೇಶಗಳಲ್ಲಿ ಶ್ರೀಶೈಲಕ್ಷೇತ್ರದ ಪರಿಸರದಲ್ಲಿ ಕೇಂದ್ರೀಕರಿಸಲ್ಪಟ್ಟಿದ್ದು ಕಂಡುಬರುತ್ತದೆ. ಈ ಭಾಗದಲ್ಲಿ ಪಶ್ಚಿಮ ಚಾಲುಕ್ಯರ ರಾಜಧಾನಿಗಳಾದ ಪೊಟ್ಟಿಳಕೆರೆ ಮತ್ತು ಕಲ್ಯಾಣ ಈ ಪಟ್ಟಣಗಳು ಮತ್ತು ಗಜಪತಿರಾಯರ ರಾಜಧಾನಿಯಾದ ಓರುಗಲ್ಲು ಇವುಗಳು ನೆಲಸಿದ್ದವು. ಹನ್ನೊಂದನೆಯ ಶತಮಾನದಲ್ಲಿ ಈ ನಗರಗಳು ದಕ್ಷಿಣ ಹಿಂದುಸ್ತಾನದಲ್ಲೆಲ್ಲ ನಾಗರಿಕತೆಯಲ್ಲಿ, ಶೌರ್ಯ ಸಾಹಸಗಳಲ್ಲಿ ಬಹು ಪ್ರಖ್ಯಾತಿಯನ್ನು ಹೊಂದಿದ್ದವು. ಈ ಪಟ್ಟಣಗಳಲ್ಲಿಯೇ ವೀರಶೈವ ಸಾಂಸ್ಕೃತಿಕ ಚಟುವಟಿಕೆಗಳು ಮೊದಲು ಪ್ರಾದುರ್ಭವಿಸಿ, ಎಲ್ಲ ಕಡೆಗೂ ಪ್ರಸಾರಹೊಂದಿದ್ದು ಕಂಡುಬರುತ್ತದೆ.

ವೀರಶೈವ ಧರ್ಮವು ಮೊದಲು ಓರುಗಲ್ಲಿನಿಂದ ರಾಜಮಹೇಂದ್ರಿಯವರೆಗೆ ಪ್ರಸಾರಹೊಂದಿತು. ಆಗ ಈ ಭಾಗದಲ್ಲಿ ಪಂಡಿತಾರಾಧ್ಯ ಶ್ರೀಪತಿ ಪಂಡಿತ ಮೊದಲಾದ ವಿಭೂತಿಗಳು ಉದ್ಭವಿಸಿದರು. ಶ್ರೀಪತಿ ಪಂಡಿತನು ಶ್ರೀಕರ ಭಾಷ್ಯವೆಂಬ ಭಾಷ್ಯವನ್ನು ಬರೆದಿರುವನು. ಈ ಉಭಯತರೂ ಬೇರೆ ಶಿವಶರಣರೂ ಆಂಧ್ರದೇಶದಲ್ಲಿ ಮಹತ್ವವಾದ ವೀರಶೈವ ಕ್ರಾಂತಿಯನ್ನು ಉಂಟುಮಾಡಿದರು.

ಹೀಗಿರಲು ಈ ಭಾಗದ ಪಶ್ಚಿಮದಲ್ಲಿದ್ದ ಚಾಲುಕ್ಯರ ರಾಜಧಾನಿಯಾದ ಪೊಟ್ಟಲಕೆರೆಯಲ್ಲಿ ಚಾಲುಕ್ಯ ಜಯಸಿಂಹರಾಜನು ಹನ್ನೊಂದನೆ ಶತಮಾನದ ಪೂರ್ವಾರ್ಧದಲ್ಲಿ ಪ್ರಖ್ಯಾತಿಗೆ ಬಂದನು. ಆ ಕಾಲದಲ್ಲಿ

ದೇವರದಾಸಿಮಯ್ಯನೆಂಬ ಶಿವಶರಣನು ಶ್ರೀಶೈಲ ಸಿಂಹಾಸನಾಧಿಪತಿಗಳಿಂದ ದೀಕ್ಷೆಯನ್ನು ಹೊಂದಿ ತನ್ನ ಮೂಲಗ್ರಾಮವಾದ ಕಲಬುರ್ಗಿ ಜಿಲ್ಹೆಯಲ್ಲಿರುವ ಮುದನೂರಲ್ಲಿ ನೆಲಿಸಿ ವೀರಶೈವ ಧರ್ಮವನ್ನು ಬಹು ಕಡೆಗೆ ವಿಸ್ತಾರಪಡಿಸಿದನು. ಈ ಕಾರ್ಯದಲ್ಲಿ ಅವನಿಗೆ ಜಯಸಿಂಹ ರಾಜನ ಹೆಂಡತಿಯಾದ ಸುಗ್ಗಲದೇವಿಯು ಬಹಳ ಸಹಾಯ ಮಾಡಿದಳು. ದೇವರದಾಸಿಮಯ್ಯನ ಮತ್ತು ಸುಗ್ಗಲೆಯ ಅನೇಕ ಶಿಲಾಶಾಸನಗಳಿದ್ದು ಅವುಗಳಲ್ಲಿ ಅವರು ಉಲ್ಲೇಖಿಸಲ್ಪಟ್ಟಿದ್ದಾರೆ. ಶ್ರೀಬಸವೇಶ್ವರನು ತನ್ನ ವಚನಗಳಲ್ಲಿ ಬಹುಕಡೆಗೆ ದೇವರದಾಸಿಮಯ್ಯನನ್ನೂ ಅವನ ಹೆಂಡತಿ ದುಗ್ಗಳೆಯನ್ನೂ ಬಹು ಆದರದಿಂದ ಉಲ್ಲೇಖಿಸಿದ್ದಾನೆ. ಮುಂದೆ ಇದೇ ಜಯಸಿಂಹರಾಜನ ಕಾಲದಲ್ಲಿ ಶಂಕರದಾಸಿಮಯ್ಯನು ಈಗಿನ ಹುನಗುಂದ ತಾಲೂಕಿನಲ್ಲಿರುವ ಕಂದಗಲ್ಲಿನಲ್ಲಿ ಉದ್ಭವಿಸಿ ಅನೇಕ ಪವಾಡಗಳನ್ನು ಕಲ್ಯಾಣದಲ್ಲಿ ಮಾಡಿದ್ದಾನೆ. ಶಿವಶರಣರು ಈ ಶತಮಾನದಿಂದ ಆರಂಭಿಸಿ ಮುಂದೆ ಮುನ್ನೂರು ವರ್ಷಗಳ ವರೆಗೆ ಅನೇಕ ಕಡೆಗೆ ಉದ್ಭವಿಸಿ ವೀರಶೈವ ಮತದ ಉದಾರ ತತ್ವಗಳನ್ನು ರಾಜರ ಆಸ್ಥಾನಗಳಲ್ಲಿಯೂ ಹಳ್ಳಿಪಳ್ಳಿಗಳಲ್ಲಿಯೂ ಪ್ರಸಾರಮಾಡುತ್ತ ಬಂದಿದ್ದಾರೆ. ಅವರು ತಮ್ಮ ಮತತತ್ವಗಳನ್ನು ಸುಂದರ ಗದ್ಯ ಗ್ರಂಥಗಳಾದ ವಚನಗಳ ಮುಖಾಂತರ ಜನರ ತಿಳುವಳಿಕೆಗೆ ತಂದು ಕೊಟ್ಟಿದ್ದಾರೆ. ಈ ಕಾಲದ ಸಾವಿರಾರು ಜನ ಶಿವಶರಣರು ಎಲ್ಲ ಕಡೆಗೂ ಉದ್ಭವಿಸಿ ಜನತೆಯಲ್ಲಿ ಜಾಗ್ರತೆ ಮಾಡಿದ್ದಾರೆ. ಅವರ ಸಮಗ್ರ ಚರಿತ್ರೆಗಳು ಸಮಾಜದ ದುರ್ದೈವದಿಂದ ಈಗ ಉಪಲಬ್ಧವಿರುವದಿಲ್ಲ. ಕೆಲವು ಗ್ರಂಥಗಳಲ್ಲಿ ಮಾತ್ರ ಅವರು ಮಾಡಿದ ಕಾರ್ಯಗಳ ಸವಿಸ್ತಾರ ನಿರೂಪಣೆ ಇದೆ. ಆದರೆ ಬಹುಕಡೆಗೆ ಅವರ ಹೆಸರುಗಳ ಉಲ್ಲೇಖಗಳು ಮಾತ್ರ ದೊರೆಯುತ್ತವೆ. ಹೀಗೆ ತಮಗೆ ಉಪಲಬ್ಧವಾದ ಶಿವಶರಣರ ಹೆಸರುಗಳನ್ನು ಪಂಡಿತಾರಾಧ್ಯರೂ ಪಾಲ್ಕುರಿಕೆಯ ಸೋಮಾರಾಧ್ಯರೂ ವೀರಶೈವ ಸಮಾಜದ ಸುದೈವದಿಂದ ತಮ್ಮ ಗ್ರಂಥಗಳಲ್ಲಿ ಸಂಗ್ರಹಿಸಿದ್ದಾರೆ. ಅವರು ಮಾಡಿದ ಈ ಕಾರ್ಯವು ಅತ್ಯಂತ ಮಹತ್ತರವಾದದ್ದು. ಅವರ ವಿವರಣೆಗಳನ್ನು ನಾವು ಮುಖ್ಯವಾಗಿಟ್ಟುಕೊಂಡು ಈಗಿನ ೭೭೦ಅಮರಗಣಗಳ ಚರಿತೆಯನ್ನು ಸಿದ್ಧಪಡಿಸಿದ್ದೇವೆ. ಇದರಲ್ಲಿ ಕಾಣಿಸಿದ ಯಾವ ಚರಿತ್ರೆಯಲ್ಲಿಯೂ ನಾವು ಸುಳ್ಳು ಮತ್ತು ಕಾಲ್ಪನಿಕ ವಿಧಾನಗಳನ್ನು ಸೇರಿಸಿ ಬರೆದಿಲ್ಲ. ಈ ಮಹಾನುಭಾವರ ಚರಿತ್ರೆಗಳನ್ನು ವೀರಶೈವ ಸಮಾಜದವರು ಇನ್ನೂ ಹೆಚ್ಚಿಗೆ ಸಂಶೋಧಿಸಿ ಬರೆಯಿಸುವ ಕಾರ್ಯವು ಅವರ ಮುಂದೆ ಇದೆ.

ಈ ಶಿವಶರಣರಲ್ಲಿ ಸುಮಾರು ಮುನ್ನೂರು ಜನರು ವಚನಕಾರರಾಗಿ ಹೋಗಿದ್ದಾರೆ. ಅವರ ವಿಷಯವನ್ನು ಕುರಿತು ನಾವು ನಮ್ಮ ವಚನಶಾಸ್ತ್ರ ಸಾರದ ನಾಲ್ಕು ಗ್ರಂಥಗಳಲ್ಲಿ ವಿಸ್ತಾರವಾಗಿ ನಿರೂಪಣೆ ಮಾಡಿದ್ದೇವೆ. ಇದಲ್ಲದೆ ನಾವು ಶಿವಶರಣರ ಚರಿತ್ರೆಗಳನ್ನು ಸಹ ಸಂಶೋಧಿಸಿ ಪ್ರಕಟಿಸಿದ್ದೇವೆ. ಈ ಮಹಾನುಭಾವರ ಚರಿತ್ರೆಗಳು "ಶಿವಶರಣರ ಚರಿತ್ರೆಗಳು" ಈ ಗ್ರಂಥದ ನಾಲ್ಕು ಭಾಗಗಳಲ್ಲಿ ಪ್ರಸಿದ್ಧಿಸಿದ್ದೇವೆ. ಈ ನಾಲ್ಕು ಗ್ರಂಥಗಳ ಒಟ್ಟು ಪುಟ ಸಂಖ್ಯೆ ೧೧೨೦ ಇರುತ್ತದೆ. ಈ ಚರಿತ್ರೆಗಳನ್ನು ವಾಚಕರು ಪರಿಶೀಲಿಸಿದಲ್ಲಿ ಶಿವಶರಣರ ತತ್ವಗಳಾವವು ಮತ್ತು ಅವರು ಯಾವ ಯಾವ ಕಾರ್ಯಗಳನ್ನು ಮಾಡಿದರು, ಎಂಬುದು ವಾಚಕರಿಗೆ ಸ್ಪಷ್ಟವಾಗುವದು.

"೭೭೦ ಅಮರ ಗಣಾಧೀಶ್ವರರ" ಗ್ರಂಥದಲ್ಲಿ ೧೫೦ ಪುಟಗಳಲ್ಲಿ ಅವರ ಚರಿತ್ರೆಗಳನ್ನು ಈಗ ಕ್ರೋಡೀಕರಿಸಬೇಕಾಗಿರುತ್ತವೆ. ಆದ್ದರಿಂದ ಇವುಗಳನ್ನು ನಾವು ಬಹು ಸಂಕ್ಷಿಪ್ತವಾಗಿ ವಿವರಿಸಿದ್ದೇವೆ. ಮೊದಲು ಶಿವಶರಣರ ತತ್ವಗಳನ್ನು ಕುರಿತು ಮಾತ್ರ ಈ ಗ್ರಂಥದ ಆರಂಭದಲ್ಲಿ ವಿವರಿಸಲು ಯತ್ನಿಸುತ್ತೇವೆ.

ನಾವು ೭೭೦ ಅಮರಗಣಂಗಳ ವಿಷಯವಾಗಿ ಬರೆಯಲಿಕ್ಕೆ ಯತ್ನಿಸುತ್ತಿದ್ದರೂ ವೀರಶೈವ ಸಮಾಜದಲ್ಲಿ ಇದಕ್ಕೂ ಹೆಚ್ಚು ಜನ ಮಹಾನುಭಾವರು ಉತ್ಪನ್ನರಾಗಿ ಈ ಮತವನ್ನು ಬೆಳೆಸುತ್ತ ಬಂದಿದ್ದಾರೆಂಬುದನ್ನು ನಾವು ಲಕ್ಷಿಸುವದು ಅವಶ್ಯವಿದೆ. ಹಿಂದಿನ ಕಾಲದ ವೀರಶೈವ ಗ್ರಂಥಕಾರರು ಅವರ ವಿಷಯವಾಗಿ ತಮ್ಮ ಗ್ರಂಥಗಳಲ್ಲಿ ಉಲ್ಲೇಖಿಸಿರುವದು ನಿಜವಿರುತ್ತದೆ. ಆದರೆ ೭೭೦ ಅಮರಗಣಾಧೀಶ್ವರರಲ್ಲದೆ ೧೨೦೦೦ ಷಟ್‌ಸ್ಥಲಬ್ರಹ್ಮಿಗಳೂ ಇದ್ದಾರೆ. ಅವರು ಬಸವೇಶ್ವರನ ಕಾಲದಲ್ಲಿ ಕಲ್ಯಾಣದಲ್ಲಿ ವಾಸಿಸುತ್ತಿದ್ದು ಮುಂದೆ ಶಿವಶರಣರು ಉಳವಿಗೆ ಹೋಗುವ ಕಾಲದಲ್ಲಿ ಈ ಗಣಾಧೀಶ್ವರರಲ್ಲಿ ಬಹು ಜನರು ಅವರೊಡನೆ ಅಲ್ಲಿಯವರೆಗೂ ಹೋಗಿದ್ದಾರೆ. ಈ ಕಾಲದಲ್ಲಿ ಬಿಜ್ಜಳನ ಸೈನ್ಯದೊಂದಿಗೆ ಅನೇಕ ಯುದ್ಧಗಳಾದವು. ಆಗ ಈ ಷಟ್‌ಸ್ಥಲ ಬ್ರಹ್ಮಿಗಳು ಶಿವಶರಣರಿಗೋಸ್ಕರ ತಮ್ಮ ರಕ್ತವನ್ನು ಸೂರೆಮಾಡಿದ್ದಾರೆ. ಇವರ ಅನೇಕ ಸಮಾಧಿಗಳು ಉಳವಿಯಲ್ಲಿಯ ಮಹಾಮನೆಯ ಪರ್ವತದ ಶಿಖರದಲ್ಲಿ ಪಸರಿಸಿರುತ್ತವೆ. ಅವರ ಸಮಾಧಿಗಳನ್ನು ಉಳವಿಯ ಮಾರ್ಗದಲ್ಲಿ ಅನೇಕ ಕಡೆಗೆ ನಾವು ಕಾಣಬಹುದು.

ಈ ಮಹಾನುಭಾವರಲ್ಲದೆ, ಪಾಲ್ಕುರಿಕೆ ಸೋಮಾರಾಧ್ಯನು ತನ್ನ ಗಣಸಹಸ್ರದಲ್ಲಿ ಅನೇಕ ಶರಣರ ಹೆಸರುಗಳನ್ನು ಕೊಟ್ಟಿದ್ದಾನೆ. ಅವುಗಳಾದರೂ

ಧರ್ಮಸುಧಾರಣೆಗಾಗಿ ಕಾಲಕಾಲಗಳಲ್ಲಿ ಪ್ರಯತ್ನಮಾಡಿದವರಿದ್ದಾರೆ. ಅವರೂ ಕೂಡ ಗಣಾಧೀಶ್ವರರ ಮಾಲಿಕೆಯಲ್ಲಿ ಬರುತ್ತಾರೆ.

ಈ ಯಾವತ್ತು ಮಹಾನುಭಾವರ ಚರಿತ್ರೆಗಳು ಅನೇಕ ಪುರಾಣಗಳಲ್ಲಿ ವಚನಗಳಲ್ಲಿ ಮತ್ತು ಸ್ವತಂತ್ರ ಗ್ರಂಥಗಳಲ್ಲಿ ಬಂದಿರುತ್ತವೆ. ಈ ಗ್ರಂಥಗಳಲ್ಲಿ ಅವರ ಸಂಕ್ಷಿಪ್ತ ಚರಿತ್ರೆಗಳು ಮಾತ್ರ ಉಲ್ಲೇಖವಾಗಿರುತ್ತವೆ.

ಮೇಲ್ಕಂಡ ವಿವರಣೆಗಳಿಂದ ವೀರಶೈವ ಧಾರ್ಮಿಕ ಮತ್ತು ಸಾಮಾಜಿಕ ಇತಿಹಾಸವು ಎಷ್ಟು ಉನ್ನತವಿರುತ್ತದೆಂಬುದು ವಾಚಕರಿಗೆ ಸ್ಪಷ್ಟವಾಗದಿರದು. ಈಗ ವಿಜಾಪುರ ಪಟ್ಟಣದಲ್ಲಿ ನಡೆದಿರುವ ೭೭೦ ಅಮರ ಗಣಾಧೀಶ್ವರರ ಸಮಾರಂಭದ ಕಾಲದಲ್ಲಿ ಶ್ರೀಮಾನ್ ನಿರಂಜನ ಬಂಥನಾಳ ಶಿವಯೋಗಿವರ್ಯರು ಈ ಅಮರಗಣಾಧೀಶ್ವರರ ಚರಿತ್ರೆಗಳನ್ನು ಬರಿಯಲಿಕ್ಕೆ ನನಗೆ ತಿಳಿಸಿದರು. ಈ ಕಾರ್ಯವು ಬಹು ಘನತರವಾದದ್ದಿದೆ. ಈ ಕಾರ್ಯವನ್ನು ನಾನು ಪೂರ್ಣಗೊಳಿಸಲು ನಾನು ಅಸಮರ್ಥನು. ಆದರೂ ಮಹಾಸ್ವಾಮಿಗಳವರ ಅಪ್ಪಣೆಯಾದ್ದರಿಂದ ಇದನ್ನು ಯಥಾ ಶಕ್ತಿ ನಡಿಸುವದು ನನ್ನ ಕರ್ತವ್ಯವೆಂದು ಭಾವಿಸಿ ಈ ಕಾರ್ಯದಲ್ಲಿ ನಾನು ತೊಡಗಿದ್ದೇನೆ.

ಈ ಶಿವಶರಣರ ಅನೇಕ ಚರಿತ್ರೆ ಗ್ರಂಥಗಳು ನಾಡಿನಲ್ಲಿ ಇನ್ನೂ ಉಪಲಬ್ಧವಿವೆ. ವೀರಶೈವ ಸಮಾಜದವರು ಈಗಿನ ಚರಿತ್ರೆ ಗ್ರಂಥವನ್ನು ನೋಡಿ ಈ ಚರಿತ್ರೆಗಳನ್ನು ಪೂರ್ಣಮಾಡಲು ಮುಂದಾಗುವರೆಂದು ಭಾವಿಸಿ ಈ ಕಾರ್ಯವನ್ನು ನಾನು ಕೈಕೊಂಡಿದ್ದೇನೆ.

**ಶಿವಶರಣರ ಧಾರ್ಮಿಕ ಮತ್ತು ಸಾಮಾಜಿಕ ವಿಚಾರಗಳು.**

ಶಿವಶರಣರು ಆಯಾ ಧರ್ಮಗಳ ಮಹತ್ವದ ವಿಚಾರಗಳನ್ನು ಪರಸ್ಪರ ಸಮನ್ವಯಗೊಳಿಸಿದ್ದರಿಂದ ಅವರ ಧರ್ಮವು ನಾಡಿನಲ್ಲಿ ಬೆಳಿಯಲಿಕ್ಕೆ ಕಾರಣವಾಯಿತು. ಅವರ ಈ ಪ್ರಯತ್ನದಿಂದ ಸಮಾಜ ಸಮಾಜಗಳಲ್ಲಿದ್ದ ಮೊದಲಿನ ಭೇದಭಾವವು ದೂರಾಗಲಿಕ್ಕೆ ಕಾರಣವಾಯಿತು. ಹಿಂದೂ ಧಾರ್ಮಿಕ ಇತಿಹಾಸದಲ್ಲಿ ಬೇರೆ ಬೇರೆ ಧರ್ಮದವರು ತಮ್ಮ ತಮ್ಮ ಮತ್ತು ದೇವರೇ ಹೆಚ್ಚು ಎಂದು ವಾದಿಸುತ್ತ ಒರುತ್ತಿದ್ದರು. ಉದಾಹರಣಾರ್ಥವಾಗಿ ಚೋಳರಾಜರು ಶಿವಭಕ್ತರಾಗಿ ವಿಷ್ಣು ಪೂಜಕರನ್ನು ಹಿಂಸಿಸಹತ್ತಿದ್ದರಿಂದ ರಾಮಾನುಜಾಚಾರ್ಯರು ಮೈಸೂರು ಸೀಮೆಗೆ ಓಡಿ ಬಂದು ಅಲ್ಲಿ ರಕ್ಷಣೆಯನ್ನು ಹೊಂದಬೇಕಾಯಿತು. ಇದೇ ಪ್ರಕಾರ ಅರ್ಹತರೂ ಬೌದ್ಧರೂ

ಶೈವ ವೈಷ್ಣವರೂ ತಮ್ಮ ತಮ್ಮ ಮತಕ್ಕೋಸ್ಕರ ಹೋರಾಡುತ್ತಿದ್ದದ್ದು ಕಂಡುಬರುತ್ತದೆ. ಆದರೆ ಶಿವಶರಣರು ದೇವರು ಒಬ್ಬನೇ ಇದ್ದಾನೆ, ಅವನು ವಿಶ್ವಭರಿತನಾಗಿದ್ದಾನೆ. ಅವನಿಗೆ ಆಕಾರದಿಲ್ಲ, ಎಂಬ ತತ್ವಗಳನ್ನು ಪ್ರತಿಪಾದಿಸುತ್ತ ಬಂದಿದ್ದರಿಂದ ಮೇಲೆ ಹೇಳಿದಂತೆ ಕೆಲವೊಂದು ದೇವತೆಯ ಹೆಸರಿನಿಂದ ಪರಸ್ಪರ ಹೋರಾಡುವದು ಸಮಾಜದಲ್ಲಿ ನಿಂತಿತು. ಶಿವಶರಣರು ಏಕೇಶ್ವರೀ ಪಂಥದವರಿದ್ದಾರೆಂಬುವನ್ನು ನಾವು ಲಕ್ಷಿಸುವದು ಅವಶ್ಯವು. ಉಪನಿಷತ್ತುಗಳು ಒಬ್ಬನೇ ದೇವನೆಂಬುದನ್ನು ಉದ್ಘೋಷಿಸುತ್ತವೆ. ಈ ತತ್ವವನ್ನೇ ಶಿವಶರಣರು ಅನುಸರಿಸುತ್ತ ಬಂದಿದ್ದಾರೆ.

ಶಿವಶರಣರು ತಮಗೋಸ್ಕರ ಕೆಲವೊಬ್ಬ ದೇವತೆಯನ್ನು ಕಲ್ಪಿಸಿಕೊಂಡು ಆ ದೇವತೆಗೋಸ್ಕರ ದೇವಾಲಯಗಳನ್ನು ಕಟ್ಟಿಸಿರುವದಿಲ್ಲ. ಅವರು ಪರಮಾತ್ಮನು ಮನುಷ್ಯನಲ್ಲಿಯೇ ಇರುತ್ತಾನೆ ಈ ದೇಹವೇ ದೇವಾಲಯವು, ಎಂದು ಭಾವಿಸಿ, ಅಂದರೆ ಆತ್ಮಾನುಭವಕ್ಕೆ ಮಹತ್ವಕೊಡುತ್ತ ಬಂದಿದ್ದಾರೆ. ಇದರಿಂದ ಶಿವಶರಣರ ಧರ್ಮವು ಒಂದು ವ್ಯಾಪಕ ಸ್ವರೂಪವನ್ನು ಹೊಂದಲು ಕಾರಣವಾಯಿತು. ದೇವಾಲಯಗಳು ಆಯಾ ಸಮಾಜಗಳನ್ನು ಪ್ರತ್ಯೇಕಿಸುವದುಂಟು. ಆದರೆ ಶಿವಶರಣರು ಮೇಲ್ಕಂಡ ತತ್ವವನ್ನು ಅನುಸರಿಸಿದ್ದರಿಂದ ಸಮಾಜ ಸಮಾಜಗಳಲ್ಲಿ ಐಕ್ಯತೆಯು ಉಂಟಾಗಲು ಬಹಳ ಸಹಾಯಕಾರಿಯಾಯಿತು. ಇದರಿಂದ ಶಿವಶರಣರ ಈ ತತ್ವದ ಮೂಲಕ ಅದರಲ್ಲಿ ಒಂದು ಪ್ರಸರಣ ಶಕ್ತಿಯು ಬೆಳಿಯಲಿಕ್ಕೆ ಕಾರಣವಾಗಿರುತ್ತದೆ.

ಶಿವಶರಣರ ಮೇಲೆ ವಿವರಿಸಿದ ವಿಚಾರಗಳ ಮೂಲಕ ಅವರ ಮೋಕ್ಷದ ವಿಚಾರಗಳೂ ಮೋಕ್ಷಸಾಧನೆಯ ಕ್ರಮಗಳೂ ಬೇರೆ ಧರ್ಮಾನುಯಾಯಿಗಳ ವಿಚಾರಗಳಿಂದ ಬಹು ಭಿನ್ನವಾಗಿರುತ್ತವೆ. ಶಿವಶರಣರು ಸ್ವರ್ಗ ನರಕ ಇವುಗಳು ಕೆಲವೊಂದು ಸ್ಥಾನದಲ್ಲಿ ಇರುತ್ತವೆಂದು ಭಾವಿಸಿರುವದಿಲ್ಲ. ಇವು ಈಗ ನಮಗೆ ಕಾಣುವ ಜಗತ್ತಿನಲ್ಲಿಯೇ ಇರುತ್ತವೆ, ಎಂದು ಹೇಳುತ್ತಾರೆ. ಸದಾಚಾರದಿಂದ ವರ್ತಿಸುವದೇ ಸ್ವರ್ಗವು, ಅನಾಚಾರದಿಂದ ವರ್ತಿಸುವದೇ ನರಕವೆಂದು ಅವರು ತಮ್ಮ ವಚನಗಳಲ್ಲಿ ಪ್ರತಿಪಾದಿಸಿರುತ್ತಾರೆ. ಸ್ವರ್ಗವೆಂದರೆ ಅನೇಕ ತರದ ಭೋಗಗಳನ್ನು ಅನುಭವಿಸತಕ್ಕ ಒಂದು ಸ್ಥಳವು ಎಂದು ಅವರು ಎಂದೂ ತಿಳಿದಿರುವದಿಲ್ಲ. ಮನುಷ್ಯನು ಇಹಲೋಕದಲ್ಲಿರುವಾಗ ಪುಣ್ಯಪಾಪಗಳನ್ನು ಮಾಡುತ್ತಿರುತ್ತಾನೆ. ಅವನು ಪಾಪಿಷ್ಠನಾಗಿದ್ದರೆ ಅವನು

ಮುಂದಿನ ಜನ್ಮದಲ್ಲಿ ಹೀನ ಯೋನಿಯಲ್ಲಿ ಜನ್ಮತಾಳುತ್ತಾನೆ. ಅಥವಾ ಅವನು ಇಹಲೋಕದಲ್ಲಿಯೇ ಅನೇಕ ತಾಪತ್ರಯಗಳನ್ನು ಅನುಭವಿಸುತ್ತಾನೆ. ಆತನು ಒಂದುವೇಳೆ ಸನ್ಮಾರ್ಗದಿಂದ ನಡೆದರೆ ಅವನು ಮುಂದಿನ ಜನ್ಮದಲ್ಲಿ ಸುಖವನ್ನು ಹೊಂದುತ್ತಾನೆ. ಆದ್ದರಿಂದ ಶಿವಶರಣರು ಈ ಜಗತ್ತು ಪರಮಾತ್ಮನ ಒಂದು 'ಕಮ್ಮಟ' ಎಂದರೆ ಒಂದು ಟಂಕಸಾಲೆ ಎಂದು ತಿಳಿದು ಇಲ್ಲಿ ಸಲ್ಲುವವರು ಪರಲೋಕದಲ್ಲಿಯೂ ಸಲ್ಲುವರೆಂತಲೂ ಇಲ್ಲಿ ಸಲ್ಲದವರು ಮುಂದೆ ಯಾವುದರಲ್ಲಿಯೂ ಸಲ್ಲುವದಿಲ್ಲವೆಂತಲೂ ಹೇಳುತ್ತಾರೆ.

ಮನುಷ್ಯನು ಉಚ್ಚ ವರ್ತನೆಯುಳ್ಳವನಾಗಿ ವ್ಯವಹರಿಸಿದರೆ ಅವನಲ್ಲಿ ಎಲ್ಲತರದ ವಿಕಾಸಗಳು ಉಂಟಾಗಹತ್ತುತ್ತವೆ. ಅವನು ಯಾವಾಗಲೂ ಲಿಂಗದೊಡನೆ ಇದ್ದು ಲಿಂಗದಲ್ಲಿಯೇ ತನ್ನ ಕಾರ್ಯಗಳನ್ನು ಮಾಡುತ್ತ ಕಡೆಗೆ ಲಿಂಗದಲ್ಲಿಯೇ ಅಡಗುವನೆಂದು ಅವರು ಪ್ರತಿಪಾದಿಸುತ್ತಾರೆ. ಈ ಅಂತಿಮ ಸ್ಥಿತಿಯು ಅವನಿಗೆ ಪ್ರಾಪ್ತವಾಗಲಾಗಿ ಅವನು ಲಿಂಗಾಂಗ ಸಾಮರಸ್ಯವನ್ನು ಹೊಂದಿದನೆಂದು ಅವರು ತಿಳಿಯುವದುಂಟು. ಈ ಸ್ಥಿತಿಯನ್ನು ಹೊಂದುವದನ್ನು ವೀರಶೈವರು ಅಪೇಕ್ಷಿಸಬೇಕೆಂತಲೂ ಇದಕ್ಕೋಸ್ಕರ ಅವರು ಯಾವಾಗಲೂ ಪ್ರಯತ್ನಿಸಬೇಕೆಂತಲೂ ಶಿವಶರಣರು ಯಾವಾಗಲೂ ಪ್ರಯತ್ನಿಸಬೇಕೆಂತಲೂ ಶಿವಶರಣರು ಯಾವಾಗಲೂ ತಮ್ಮ ಗ್ರಂಥಗಳಲ್ಲಿ ಹೇಳುತ್ತಬಂದಿದ್ದಾರೆ.

ಈ ಲಿಂಗಾಂಗ ಸಾಮರಸ್ಯ ಸ್ಥಿತಿಯನ್ನು ಹೊಂದಬೇಕಾದರೆ ಮನುಷ್ಯನಿಗೆ ಅವನ ಆಚರಣೆಯ ಪ್ರಕಾರ ಅನೇಕ ಜನ್ಮಗಳು ಹೋಗಬಹುದು. ಆದರೆ ಒಂದುವೇಳೆ ಅವನು ಶಿವಶರಣರ ಉಕ್ತಿಗಳ ಪ್ರಕಾರ ಸರಿಯಾಗಿ ನಡೆದರೆ ಅವನು ಒಂದೇ ಜನ್ಮದಲ್ಲಿ ಮೋಕ್ಷವನ್ನು ಹೊಂದಬಹುದು, ಅಮರಗಣಾಧೀಶ್ವರರು ಈ ಧ್ಯೇಯವನ್ನು ಮುಂದಿಟ್ಟುಕೊಂಡು ಎಲ್ಲರೊಡನೆ ವ್ಯವಹರಿಸುತ್ತ ಬಂದಿದ್ದಾರೆ. ಇದು ಅವರ ಚರಿತ್ರೆಗಳಿಂದ ತಿಳಿದುಬರುತ್ತದೆ. ಈ ಪ್ರಕಾರ ಲಿಂಗಾಂಗಸಾಮರಸ್ಯವನ್ನು ಹೊಂದುವ ಬಗ್ಗೆ ಶಿವಶರಣರು ಬೋಧಿಸುವ ಕ್ರಮಗಳು ಷಟ್‌ಸ್ಥಲ ಶಾಸ್ತ್ರದಲ್ಲಿ ಹೇಳಲ್ಪಟ್ಟಿರುತ್ತವೆ. ಆರು ಸ್ಥಳಗಳುಳ್ಳ ಶಾಸ್ತ್ರವೆಂದು ಈ ಶಬ್ದದ ಅಭಿಪ್ರಾಯವಿದೆ. ಅಂದರೆ ಆರು ಪಾವಟಿಗೆಗಳನ್ನು ದಾಟುತ್ತ ವಿಕಾಸವನ್ನು ಹೊಂದುತ್ತ ಕಡೆಯ ಸ್ಥಿತಿಯನ್ನು ವೀರಶೈವರು ಹೊಂದಬೇಕೆಂದು ಶರಣರ ಅಭಿಪ್ರಾಯವಿದೆ. ಈ ಆರು ಪಾವಟಿಗೆಗಳನ್ನು ಕುರಿತು ವಚನಕಾರರು ತಮ್ಮ ಸಿದ್ಧಾಂತ ಗ್ರಂಥಗಳಲ್ಲಿ ಸವಿಸ್ತಾರ

ವಾಗಿ ವಿವೇಚನೆ ಮಾಡಿರುತ್ತಾರೆ. ಈ ವಿಷಯದ ಬಗ್ಗೆ ವೀರಶೈವರಲ್ಲಿ ಅನೇಕ ಮತಗ್ರಂಥಗಳು ಉಂಟಾಗಿರುತ್ತವೆ. ಈ ಗ್ರಂಥಗಳು ಕನ್ನಡ, ಆಂಧ್ರ, ಸಂಸ್ಕೃತ ಮೊದಲಾದ ಭಾಷೆಗಳಲ್ಲಿ ಆಗಿರುತ್ತವೆ.

## ಶಿವಶರಣರ ಭಕ್ತಿ

ವೀರಶೈವರ ಧ್ಯೇಯವು ಲಿಂಗಾಂಗಸಾಮರಸ್ಯವನ್ನು ಹೊಂದುವದಿರುವದರಿಂದ ಅತ್ತಕಡೆಗೆ ಯಾವ ಶಕ್ತಿಯು ಅವರನ್ನು ಒಯ್ಯುತ್ತದೋ ಅದೇ ಭಕ್ತಿ ಎಂದು ಅವರು ಹೇಳುವದುಂಟು. ಮನುಷ್ಯನಲ್ಲಿ ಎರಡು ವಿಧದ ಶಕ್ತಿಗಳು ಇರುತ್ತವೆ. ಒಂದು ಶಕ್ತಿಯು ಮಾಯೆಗೆ ಒಳಗಾಗಿ ಮನುಷ್ಯನನ್ನು ಪಾರಮಾರ್ಥಸ್ಥಿತಿಯಿಂದ ದೂರಿರುವಂತೆ ಪ್ರೇರಣೆ ಮಾಡುತ್ತದೆ. ಆದರೆ ಅವನು ಅದರ ಪ್ರೇರಣೆಗೆ ಒಳಗಾಗದೆ ಲಿಂಗ ಅಥವಾ ಪಾರಮಾರ್ಥದ ಕಡೆಗೆ ಒಲಿಯುವದೂ ಉಂಟು. ಈ ಒಲವನ್ನು ಉಂಟುಮಾಡುವದೇ ಭಕ್ತಿ ಎಂದೆನಿಸಿಕೊಳ್ಳುತ್ತದೆ. ಹೀಗೆ ಭಕ್ತಿಯನ್ನು ಪ್ರಕಟಿಸಿದ ಅಸಂಖ್ಯ ಅಮರ ಗಣಾಧೀಶ್ವರರ ಹೆಸರುಗಳು ಈ ಗ್ರಂಥದಲ್ಲಿ ಬಂದಿರುತ್ತವೆ. ಭಕ್ತಿಯು ನಾನಾ ವಿಧವಾಗಿರುತ್ತದೆ. ತಾನು ದುರ್ಬಲನು ಪರಮಾತ್ಮನು ಶಕ್ತಿವಂತನು ಎಂದು ಭಾವಿಸಿ ಪರಮಾತ್ಮನ ರಕ್ಷಣೆಯನ್ನು ಬೇಡುವದು ಒಂದು ವಿಧದ ಭಕ್ತಿಯಾಗಿರುತ್ತದೆ. ಈ ವಿಧದ ಭಕ್ತಿಯನ್ನು ಭಕ್ತರು ಸಾಮಾನ್ಯವಾಗಿ ತೋರಿಸುವದುಂಟು. ಇಂಥವರ ಅನೇಕ ಚರಿತ್ರೆಗಳು ಈ ಗ್ರಂಥದಲ್ಲಿ ಬಂದಿರುತ್ತವೆ.

ಸತಿಪತಿಗಳಲ್ಲಿ ಒಂದು ತೆರದ ಪ್ರೇಮವಿರುತ್ತದೆ. ಅಂಥ ಪ್ರೇಮವನ್ನು ಭಕ್ತನು ಪರಮಾತ್ಮನಿಗೋಸ್ಕರ ತೋರಿಸುವದುಂಟು. ತಾನು ಸ್ತ್ರೀಯು, ಲಿಂಗವು ಪತಿಯು ಎಂದು ತಿಳಿದು ವ್ಯವಹರಿಸುವದುಂಟು. ಈ ತೆರದ ಭಕ್ತಿಯು ಮಹಾದೇವಿಯಕ್ಕನದಾಗಿರುತ್ತದೆ. ಇಂಥ ಪ್ರೇಮವನ್ನು ಅವಳು ಪರಮಾತ್ಮನ ಸಲುವಾಗಿ ತೋರಿಸಿದ್ದಾಳೆ. ಆಗ ಅವಳು ಹಾಡಿದ ವಚನಗಳು ಅತ್ಯಂತ ಹೃದಯಸ್ಪರ್ಶಿಯಾಗಿರುತ್ತವೆ.

ಅಮ್ಮವ್ವೆಯು ಒಬ್ಬ ಮುಗ್ಧ ಭಕ್ತಳು. ಅವಳು ಶಿವನಿಗೆ ತಾಯಿ ತಂದೆಗಳಿಲ್ಲ, ಅವನ ಸಲುವಾಗಿ ಚಿಂತಿಸುವವರಾರೂ ಇಲ್ಲ ಎಂದು ತಿಳಿದು ಅವನಿಗೆ ತಾನು ತಾಯಿಯಾಗಿ ಪೋಷಿಸಬೇಕೆಂಬ ಆತುರತೆಯು ಅವಳಲ್ಲಿ ಉಂಟಾಯಿತು. ಆಗ ಅವಳು ಅರಣ್ಯದಲ್ಲಿ ಸಂಚರಿಸುತ್ತ ಪರಮಾತ್ಮನನ್ನು

ಹುಡುಕುತ್ತ ಹೊರಟಳು. ಆಗ ಪರಮಾತ್ಮನು ಅವಳಿಗೆ ಪ್ರೀತನಾಗಿ ಅವಳಿಗೆ ಮಗುವಾಗಿ ತೋರಿಕೊಂಡನು. ಆಗ ಅಮ್ಮವ್ವೆಯು ಅವನನ್ನು ತೆಗೆದು ಕೊಂಡು ಲಾಲನೆ ಪಾಲನೆ ಮಾಡಹತ್ತಿದಳು. ಇದು ಒಂದು ತೆರದ ಭಕ್ತಿಯು.

ಇದರಂತೆಯೇ ಮೈದುನರಾಮಯ್ಯನು ಪರಮಾತ್ಮನು ತನ್ನ ಭಾವನೆಂದು ಭಾವಿಸಿ ಅವನನ್ನು ಹುಡುಕುತ್ತ ಅರಣ್ಯದಲ್ಲಿ ಸಂಚರಿಸಹತ್ತಿದನು. ಆಗ ಪರಮಾತ್ಮನು ಅವನಿಗೆ ಕಾಣಿಸಿಕೊಳ್ಳಲು ರಾಮಯ್ಯನು ಅವನನ್ನು ಮನೆಗೆ ಕರೆದುಕೊಂಡು ಬಂದು ನಮಸ್ಕರಿಸಿದನು. ಹೀಗೆ ಶಿವಶರಣರು ಅನೇಕ ವಿಧ ವಾಗಿ ತಮ್ಮ ಭಕ್ತಿಯನ್ನು ಪ್ರಕಟಮಾಡಿದ್ದಾರೆ. ಇವರ ಚರಿತ್ರೆಗಳನ್ನು ಈ ಗ್ರಂಥದಲ್ಲಿ ಕಾಣಬಹುದು.

## ಲಿಂಗಧ್ಯಾನ.

ಭಕ್ತನ ಭಕ್ತಿಯು ಪರಮಾತ್ಮನಲ್ಲಿ ಅವನು ಯಾವಾಗಲೂ ಇರುವಂತೆ ಪ್ರೇರಣೆ ಮಾಡುತ್ತದೆ. ಆಗ ಅವನು ಯಾವಾಗಲೂ ಲಿಂಗಧ್ಯಾನದಲ್ಲಿರು ತ್ತಾನೆ. ಆಗ ಅವನಿಗೆ ಸುತ್ತಲಿನ ಸನ್ನಿವೇಶಗಳು ತಗಲುವದಿಲ್ಲ. ಅವುಗ ಳಿಂದ ಅವನು ಲಿಪ್ತನಾಗಿ ಉಳಿಯುತ್ತಾನೆ. ಆಗ ಅವನು ಧ್ಯಾನಮಗ್ನ ನಾಗಿರುತ್ತಾನೆ. ಶಿವಶರಣರ ಮನಸ್ಸಿನ ಸ್ಥಿತಿಯು ಹೀಗಾಗಲು ಅವರಿಗೆ ತಮ್ಮ ಕಾಯಕದಲ್ಲಿ ಸ್ವಲ್ಪ ಅವಕಾಶವು ದೊರೆತರೆ ಸಾಕು. ಅವರು ಧ್ಯಾನ ಮಗ್ನರಾಗುತ್ತಾರೆ. ಮಾದಾರ ಚನ್ನಯ್ಯನು ಚೋಳರಾಜನಲ್ಲಿ ಒಂದು ನೌಕರಿ ಯಲ್ಲಿದ್ದು ಅವನ ದನಗಳನ್ನು ಕಾಯುತ್ತ ಇದ್ದನು. ಅವನು ತನ್ನ ಕಾಯಕ ದಲ್ಲಿ ಅವಕಾಶ ದೊರೆದಕೂಡಲೆ ತಾನಿದ್ದ ವನಪ್ರದೇಶದಲ್ಲಿ ಕೆಲವೊಂದು ಏಕಾಂತ ಸ್ಥಳವನ್ನು ಆಯ್ದುಕೊಂಡು ಅಲ್ಲಿ ಧ್ಯಾನಮಗ್ನನಾಗುವನು. ಇದ ರಿಂದ ಮನುಷ್ಯನ ಶಕ್ತಿಗಳು ವಿಕಾಸಹೊಂದುತ್ತ ಹೋಗುತ್ತವೆಂದು ಶಿವಶರ ಣರ ತಿಳಿವಳಿಕೆ ಇದೆ. ಯಾರಿದ್ದರೂ ಕೂಡ ಅವರು ದಿನದ ಕೆಲವೊಂದು ವೇಳೆಯನ್ನು ಹೀಗೆ ಪರಮಾತ್ಮನಲ್ಲಿ ಏಕಾಗ್ರಮನಸ್ಸಿನಿಂದಿರಲು ಅಭ್ಯಾಸ ಮಾಡುವದು ಅವಶ್ಯವಾಗಿರುತ್ತದೆ.

## ಕ್ರಿಯೆಗಳು.

ಹೀಗೆ ಧ್ಯಾನವು ಮಹತ್ವದ್ದೆಂದು ಶಿವಶರಣರು ಭಾವಿಸಿದ್ದರೂ ಅವರು ಕ್ರಿಯೆಗಳಿಗೂ ಅಷ್ಟೇ ಮಹತ್ವಕೊಟ್ಟಿದ್ದಾರೆ. ನೆನಹಿನ ಕೂಡ ಕ್ರಿಯೆಯೂ

ಬೇಕು ಎಂದು ಅವರು ನುಡಿದಿದ್ದಾರೆ. ಈ ಕ್ರಿಯೆಗಳಿಗೆ ವ್ರತಗಳೆಂತಲೂ ಅವರು ಹೆಸರು ಕೊಟ್ಟಿದ್ದಾರೆ. ಅನೇಕ ಶಿವಶರಣರು ತಾವು ಪರಮಾತ್ಮನ ಸಲುವಾಗಿ ಕೆಲವೊಂದು ಕಾರ್ಯ ಮಾಡುವೆವೆಂದು ಸಂಕಲ್ಪ ಮಾಡಿ, ಈ ಸಂಕಲ್ಪದಂತೆ ತಾವು ನಡೆಯುವದು ತಮ್ಮ ಕರ್ತವ್ಯವೆಂದು ಅವರು ತಿಳಿದು ಆ ಪ್ರಕಾರ ಅವರು ಆಚರಿಸುತ್ತಾರೆ. ಇದಕ್ಕೆ ಲೋಪವನ್ನು ಅವರು ತರಗೊಡುವದಿಲ್ಲ. ಒಂದು ವೇಳೆ ಲೋಪ ಬಂದಲ್ಲಿ ಅವರು ತಮ್ಮ ಪ್ರಾಣವನ್ನು ಸಹ ಅರ್ಪಿಸಲು ಮುಂದಾಗುತ್ತಾರೆ. ಇಂಥ ಉದಾಹರಣೆಗಳು ಗಣಾಧೀಶ್ವರರ ಚರಿತ್ರೆಗಳಲ್ಲಿ ಅನೇಕವಿರುತ್ತವೆ.

## ಸಮನ್ವಯ ಪ್ರಯತ್ನಗಳು.

ಶಿವಶರಣರು ಜಾತಿ ವಿಶಿಷ್ಟ ಕಲಹಗಳನ್ನು ಎಂದೂ ಪ್ರೋತ್ಸಾಹಿಸುವದಿಲ್ಲ. ಅವರು ಜಾತಿಗಳಲ್ಲಿ ಪರಸ್ಪರ ಪ್ರೇಮಾದರಗಳು ಉಂಟಾಗುವಂತೆ ಪ್ರಯತ್ನಿಸುತ್ತಾರೆ. ಅವರ ಸಿದ್ಧಾಂತದ ತತ್ವಗಳನ್ನು ಪರಿಶೀಲಿಸಿದರೆ ಇದು ಕೂಡಲೇ ಕಾಣುಬರುವಂತೆ ಇದೆ. ಅವರು ತಮ್ಮ ಉಕ್ತಿಗಳಲ್ಲಿ ಅಥವಾ ಧರ್ಮಗ್ರಂಥಗಳಲ್ಲಿ ಇತರ ಸಮಾಜಗಳನ್ನು ಹಳಿದಿರುವದು ಕಂಡುಬರುವದಿಲ್ಲ. ಇಷ್ಟೇ ಅಲ್ಲ, ಅವರು ಅವರ ಧಾರ್ಮಿಕ ಮುಖ್ಯ ತತ್ವಗಳನ್ನು ಮನ್ನಿಸಿ, ಅವುಗಳನ್ನು ತಮ್ಮ ಸಿದ್ಧಾಂತದಲ್ಲಿ ಹೆಣೆದಿರುವರು.

## ಅವರು ವೇದವಿರೋಧಿಗಳಲ್ಲ.

ಎಲ್ಲ ವಚನಕಾರರು ಮತ್ತು ವೀರಶೈವ ಸಿದ್ಧಾಂತಕಾರರು ತಾವು 'ವೇದಾಗಮೋಪನಿಷತ್ತು'ಗಳಿಗೆ ಸಮ್ಮತವಾಗುವಂತೆ ತಮ್ಮ ಸಿದ್ಧಾಂತದ ಪ್ರತಿಪಾದನೆಯು ಇರುತ್ತಿದೆ. ದೆ ಎಂದು ಮೊದಲು ಹೇಳಿ, ಆಮೇಲೆ ತಮ್ಮ ಮತತತ್ವಗಳನ್ನು ನಿರೂಪಿಸಲು ಪ್ರಾರಂಭಿಸುತ್ತಾರೆ. ಅನೇಕರು ವೀರಶೈವರು ವೇದಬಾಹ್ಯರು ಎಂದು ತಿಳಿದು, ಅವರನ್ನು ತಿರಸ್ಕರಿಸುವದುಂಟು. ಜೈನ ಬೌದ್ಧರು ವೇದಮಾರ್ಗ ವಿರೋಧಕರೆಂದು ನಾವು ಹೇಳಬಹುದು. ಆದರೆ ವೀರಶೈವರು ಅಥವಾ ಅಮರ ಗಣಾಧೀಶ್ವರರು ಈ ರೀತಿ ಆಚರಿಸಿರುವದಿಲ್ಲ. ಅವರು ವೇದ, ಆಗಮ, ಉಪನಿಷತ್ತು ಇವುಗಳಲ್ಲಿ ಪರಸ್ಪರ ವಿರೋಧವಿದೆಂದು ಅವರು ಎಂದೂ ಹೇಳಿರುವದಿಲ್ಲ. ಆಗಮಗಳು ವೇದಗಳನ್ನೂ, ವಚನಶಾಸ್ತ್ರವು ಉಪನಿಷತ್ತುಗಳನ್ನೂ ಅನುಸರಿಸುತ್ತವೆಂದು ಅನೇಕ ತಜ್ಞರ

ಅಭಿಪ್ರಾಯವಿರುತ್ತದೆ. ವಚನ ಗ್ರಂಥಗಳನ್ನು ಪರಿಶೀಲಿಸಿದವರು ಈ ಸಂಗತಿಯನ್ನು ತಮ್ಮ ಗ್ರಂಥಗಳಲ್ಲಿ ಪದೆ ಪದೇ ಒತ್ತಿ ಹೇಳುತ್ತಾರೆ. ಶಿವಶರಣರ ಅಥವಾ ಅಮರ ಗಣಾಧೀಶ್ವರರ ಚರಿತ್ರೆಗಳನ್ನು ನಾವು ಅವಲೋಕಿಸಿದಲ್ಲಿ ಈ ಸಂಗತಿಯು ದೃಢಪಡುತ್ತದೆ.

## ತ್ರಿಮತಸ್ಥರು

ಅಮರ ಗಣಾಧೀಶ್ವರರು ವೇದಾಂತವನ್ನು ಎಂದೂ ತಿರಸ್ಕರಿಸಿರುವದು ಕಂಡುಬಂದಿಲ್ಲ. ವೇದಾಂತದಲ್ಲಿ ಕರ್ಮಮಾರ್ಗ ಮತ್ತು ಜ್ಞಾನ ಮಾರ್ಗ ಎಂದು ಎರಡು ಮಾರ್ಗಗಳಿವೆ. ಇವುಗಳಲ್ಲಿ ಜ್ಞಾನ ಮಾರ್ಗವು ಪ್ರಾಮುಖ್ಯವಾದದ್ದು. ಆದರೆ ಕರ್ಮ ಮಾರ್ಗವು ಅಷ್ಟು ಪ್ರಾಮುಖ್ಯವಾದುದಲ್ಲ. ಈ ಕರ್ಮ ಮಾರ್ಗವು ಆಯಾ ಸಾಂಪ್ರದಾಯಗಳಂತೆ ಭಿನ್ನ ಭಿನ್ನ ತೆರನಾಗಿರಬಹುದು. ಆದರೆ ಜ್ಞಾನಮಾರ್ಗವು ಹೀಗೆ ಇರುವದಿಲ್ಲ. ವೇದಾಂತದಲ್ಲಿ ದ್ವೈತಾದ್ವೈತ ವಿಶಿಷ್ಟಾದ್ವೈತವೆಂಬ ಮಾರ್ಗಗಳು ಈಗಿನ ಕಾಲದಲ್ಲಿ ಮಹತ್ವವಾದವುಗಳು. ಆದರೆ ಅಮರಗಣಾಧೀಶ್ವರರು ಅಥವಾ ಶಿವಶರಣರು ಈ ಮೂರೂ ಮಾರ್ಗಗಳಲ್ಲಿಯ ಮುಖ್ಯ ತತ್ವಗಳನ್ನು ತಮ್ಮ ಸಿದ್ಧಾಂತದಲ್ಲಿ ಸಮನ್ವಯಗೊಳಿಸಿದ್ದಾರೆ. ಆದರೆ ದ್ವೈತಾದ್ವೈತಿಗಳು ಪರಸ್ಪರ ವೈಮನಸ್ಯವನ್ನು ತೋರಿಸುವದಲ್ಲದೆ ಈ ಉಭಯತರು ವಿಶಿಷ್ಟಾದ್ವೈತಿಗಳನ್ನು ದೂರೀಕರಿಸುತ್ತಾರೆ. ಆದರೆ ಅಮರಗಣಾಧೀಶ್ವರರು ಅಥವಾ ಶಿವಶರಣರು ಈ ಮೂರೂ ಮಾರ್ಗಗಳ ತತ್ವಗಳನ್ನು ತಮ್ಮ ಷಟ್‌ಸ್ಥಲ ಸಿದ್ಧಾಂತದಲ್ಲಿ ಬಹು ಜಾಣತನದಿಂದ ಹೆಣೆದಿದ್ದಾರೆ. ಅವರು ತಮ್ಮ ಬಾಹ್ಯ ಆಚರಣೆಯಲ್ಲಿ ದ್ವೈತವನ್ನು ಅವಲಂಬಿಸುತ್ತಾರೆ. ಅಂದರೆ ಅವರು ಜಗತ್ತಿನಲ್ಲಿ ಭಿನ್ನತೆಗಳು ಇರುತ್ತವೆಂಬ ತತ್ವವನ್ನು ಅವರು ಸ್ವೀಕರಿಸುತ್ತಾರೆ. ಅಂದರೆ ಅವರು ಶುದ್ಧಾದ್ವೈತಿಗಳಂತೆ ಮಾಯಾವಾದವನ್ನು ಅವಲಂಬಿಸುವದಿಲ್ಲ. ಅವರು ಹೀಗೆ ಈ ವಾದವನ್ನು ಅವಲಂಬಿಸದಿದ್ದರೂ ಕಡೆಗೆ ಜಗತ್ತಿನಲ್ಲಿಯ ಪ್ರಾಣಿಗಳು ಪ್ರಗತಿಯನ್ನು ಹೊಂದುತ್ತ ಹೊಂದುತ್ತ ಕಡೆಗೆ ಅವು ಪರಮಾತ್ಮನಲ್ಲಿಯೇ ಲಯವಾಗುತ್ತವೆಂದು ಪ್ರತಿಪಾದಿಸುತ್ತಾರೆ. ಹೀಗೆ ಇಲ್ಲಿ ಅವರು ಶುದ್ಧಾದ್ವೈತಿಗಳ ಸಮೀಪವಿದ್ದಾರೆ. ಆದ್ದರಿಂದ ಅಮರ ಗಣಾಧೀಶ್ವರರು ಅಥವಾ ಶಿವಶರಣರು ದ್ವೈತಾದ್ವೈತಿಗಳೆಂತಲೂ ಭೇದಾಭೇದ ಮಾರ್ಗದ ಪುರಸ್ಕರ್ತರೆಂತಲೂ ಕರೆಯಲ್ಪಟ್ಟಿದ್ದಾರೆ. ಈ ಪ್ರಕಾರ ಈ ಉಭಯ ಮತ

ಗಳು ಅಂದರೆ ದ್ವೈತಿಗಳೂ ಅದ್ವೈತಿಗಳೂ ಪರಸ್ಪರ ವಿರೋಧ ಭಾವವನ್ನು ಉಂಟುಮಾಡಿಕೊಂಡಿದ್ದರೂ ವಚನಕಾರರು ಅಥವಾ ಅಮರ ಗಣಾಧೀಶ್ವರರು ಈ ರೀತಿಯಾಗಿ ಭೇದವನ್ನು ಕಲ್ಪಿಸಿಕೊಳ್ಳದೆ ಈ ಎರಡೂ ಮತಗಳನ್ನು ಸಮನ್ವಯಗೊಳಿಸಿದ್ದಾರೆ.

ಹೀಗೆ ಶಿವಶರಣರು ದ್ವೈತಾದ್ವೈತ ಮಾರ್ಗವನ್ನು ಆಚರಿಸುವಲ್ಲಿ ಅವರು ರಾಮಾನುಜಾಚಾರ್ಯರ ವಿಶಿಷ್ಟಾದ್ವೈತ ಸಿದ್ಧಾಂತಕ್ಕೆ ಹೆಚ್ಚಿಗೆ ಸಮೀಪವರ್ತಿಯಾಗಿದ್ದಾರೆ. ಆದರೆ ವಿಶಿಷ್ಟಾದ್ವೈತ ಮತಕ್ಕಿಂತಲೂ ಶಿವಶರಣರು ತಮ್ಮ ಸಿದ್ಧಾಂತಕ್ಕೆ ಬಹು ವ್ಯಾಪಕ ಸ್ವರೂಪವನ್ನು ತಂದುಕೊಂಡಿದ್ದಾರೆ. ರಾಮಾನುಜ ಪಂಥದವರು ತಮ್ಮ ಆಚರಣೆಯಲ್ಲಿ ಉಳಿದ ಮತದವರಂತೆ ಸ್ಮೃತಿಗಳಲ್ಲಿ ಹೇಳಿದ ಆಚರಣೆಗಳಂತೆ ನಡೆದುಕೊಳ್ಳುತ್ತಾರೆ. ಎಲ್ಲ ಬ್ರಾಹ್ಮಣರಂತೆ ಅವರು ಸ್ಮೃತಿ ಗ್ರಂಥಗಳನ್ನು ಆದರಿಸುತ್ತಾರೆ. ಆದ್ದರಿಂದ ಈ ಎಲ್ಲರ ಬಾಹ್ಯ ಆಚರಣೆಗಳು ಒಂದೇ ಆಗಿರುತ್ತವೆ. ಒಂದು ವೇಳೆ ಭಿನ್ನವಿದ್ದರೂ ಆ ಭಿನ್ನತೆಗಳು ಅತ್ಯಲ್ಪವಾಗಿರುತ್ತವೆ. ಆದರೆ ಅಮರ ಗಣಾಧೀಶ್ವರರು ತಾವು ಪ್ರತಿಪಾದಿಸುವಂತೆಯೇ ಆಚರಿಸುತ್ತ, ತಮ್ಮ ಆಚರಣೆಗಳನ್ನು ಷಟ್‌ಸ್ಥಲಾಚರಣೆಗಳಲ್ಲಿ ಅನುಗೊಳಿಸಿದ್ದಾರೆ. ಇದು ಅವರ ಮುಖ್ಯ ವೈಶಿಷ್ಟ್ಯವಾಗಿದೆ. ಇದರಿಂದ ಅಮರ ಗಣಾಧೀಶ್ವರರ ಆಚರಣೆಗಳು ಭಿನ್ನತೆರನಾಗಿ ಕಂಡರೂ ಅವರು ಹಿಂದೂ ಸಮಾಜದಲ್ಲಿರುವ ಭಿನ್ನತೆಗಳನ್ನು ದೂರ ಮಾಡಲು ಹೇಗೆ ಪ್ರಯತ್ನಿಸಿದ್ದಾರೆಂಬುದು ಮೇಲ್ಕಂಡ ಸಂಗತಿಗಳಿಂದ ತಿಳಿದುಬರುತ್ತದೆ. ಈ ಸಂಗತಿಯು ಕೆಳಗೆ ವಿವರಿಸಿರುವ ವಿಷಯಗಳಿಂದಲೂ ಹೆಚ್ಚಿಗೆ ದೃಢಪಡುತ್ತದೆ.

## ಷಟ್ ಶಾಸ್ತ್ರಗಳು.

ಹಿಂದೂ ಧರ್ಮ ಗ್ರಂಥಗಳಲ್ಲಿ ಷಟ್‌ಶಾಸ್ತ್ರಗಳೆಂದು ಆರು ಮುಖ್ಯ ಶಾಸ್ತ್ರಗಳಿವೆ. ಅವು ಪೂರ್ವ ಮೀಮಾಂಸ, ಉತ್ತರ ಮೀಮಾಂಸ, ಸಾಂಖ್ಯ, ಯೋಗ, ವೈಶೇಷಿಕ ಮತ್ತು ನ್ಯಾಯ ಎಂದಿರುತ್ತವೆ. ಇವುಗಳಲ್ಲಿ ಸಾಂಖ್ಯ ಮತ್ತು ಯೋಗಗಳೇ ಬಹು ಮಹತ್ವವಾದವುಗಳು. ಭಗವದ್ಗೀತಾ ಮುಂತಾದ ಗ್ರಂಥಗಳು ಇವುಗಳಿಗೆ ಪ್ರಾಶಸ್ತ್ಯವನ್ನು ಕೊಟ್ಟಿರುತ್ತವೆ.

## ಸಾಂಖ್ಯ ಶಾಸ್ತ್ರ

ಶಿವಶರಣರು ಅಥವಾ ಅಮರ ಗಣಾಧೀಶ್ವರರು ತಮ್ಮ ಗ್ರಂಥಗಳಲ್ಲಿ ಸಾಂಖ್ಯಶಾಸ್ತ್ರದ ತತ್ವಗಳ ಬಹುಭಾಗವನ್ನು ಅನುಸರಿಸುತ್ತ ಬಂದಿದ್ದಾರೆ.

ವೀರಶೈವರ 'ಕರಣ ಹಸುಗೆ' ಎಂಬ ಗ್ರಂಥದ ಪರಿಶೀಲನೆಯಿಂದ ಇದು ಸ್ಪಷ್ಟವಾಗುತ್ತದೆ. ಅದರಲ್ಲಿ ಸಾಂಖ್ಯಶಾಸ್ತ್ರದ ೨೫ ತತ್ವಗಳನ್ನೂ ಶಿವಾಗಮಗಳ ಳಂತೆ ೧೧ ತತ್ವಗಳನ್ನೂ ಅವರು ಅನುಸರಿಸಿದ್ದು ಕಂಡು ಬರುತ್ತದೆ. ಸಾಂಖ್ಯ ಶಾಸ್ತ್ರವು ಮನುಷ್ಯನ ಕ್ರಿಯೆಗಳ ಅವನ ಇಂದ್ರಿಯಗಳ ಪರಸ್ಪರ ಸಂಬಂಧ ವನ್ನು ವರ್ಣಿಸುತ್ತದೆ. ಈ ಶಾಸ್ತ್ರವು 'ಭಾರತೀಯರ ಮಾನಸ ಶಾಸ್ತ್ರ'ವೆಂದು ತಜ್ಞರು ಕರೆದಿರುತ್ತಾರೆ. ಈ ಶಾಸ್ತ್ರವನ್ನು ಆಧಾರವಾಗಿಟ್ಟುಕೊಂಡು ಅಮರ ಗಣಾಧೀಶ್ವರರು ತಮ್ಮ ಷಟ್‌ಸ್ಥಲಗಳನ್ನು ನೆಲೆಗೊಳಿಸಿದ್ದಾರೆ.

## ಯೋಗಶಾಸ್ತ್ರ

ಅದರಂತೆಯೇ ಗಣಾಧೀಶ್ವರರು ಯೋಗಶಾಸ್ತ್ರದ ತತ್ವಗಳನ್ನು ತಮ್ಮ ಷಟ್‌ಸ್ಥಲ ಸಿದ್ಧಾಂತದಲ್ಲಿ ಸಂಬಂಧಿಸಿದ್ದಾರೆ. ಷಟ್‌ಸ್ಥಲಗಳಲ್ಲಿ ಷಟ್‌ಚಕ್ರ ಗಳ ವಿವರಣೆಯು ಇರುತ್ತದೆ. ಆದರೆ ಅಮರ ಗಣಾಧೀಶ್ವರರು ಪಾತಂಜಲಿಯು ನಿರ್ಮಿಸಿದ ಈ ಯೋಗಶಾಸ್ತ್ರದ ಮುಂದೆಯೂ ಹೋಗಿ ಅಗೋಚರವಾಗಿರುವ ಸ್ಥಳಗಳನ್ನು ಅಥವಾ ಚಕ್ರಗಳನ್ನು ಉಲ್ಲೇಖಿಸಿದ್ದಾರೆ. ಅವು ಬ್ರಹ್ಮರಂಧ್ರ ದಲ್ಲಿಯ ಚಕ್ರ, ಅಣುಚಕ್ರ ಮತ್ತು ಪಶ್ಚಿಮಚಕ್ರ ಎಂದಿವೆ. ಶಿವಶರಣರು ಮಾಡಿದ ಇವುಗಳ ವರ್ಣನೆಯನ್ನು ಪರಿಶೀಲಿಸಿದಲ್ಲಿ ಅವು ಅರವಿಂದಘೋಷರು ಉಲ್ಲೇಖಿಸಿರುವ ಅತೀಂದ್ರಿಯಗಳ ಸ್ಮರಣೆಯನ್ನು ತಂದುಕೊಡುತ್ತದೆ. ಇವು ಗಳ ವಿಚಾರಗಳನ್ನು ಹಡಪದಪ್ಪಣ್ಣಗಳ ಭಾರ್ಯೆಯಾದ ಲಿಂಗಮ್ಮನು ತನ್ನ ವಚನಗಳಲ್ಲಿ ಬಹು ಸ್ಫುಟವಾಗಿ ವಿವರಿಸಿದ್ದಾಳೆ. ಹೀಗೆ ಅಮರ ಗಣಾಧೀ ಶ್ವರರು ಬಹು ಆಶ್ಚರ್ಯಕರವಾದ ರೀತಿಯಿಂದ ಹಿಂದೂಧರ್ಮದಲ್ಲಿರುವ ಅನೇಕ ಪಂಥ, ಮತ, ಮತ್ತು ಧರ್ಮ ಇವುಗಳಲ್ಲಿ ಭೇದಗಳು ಉಳಿಯ ದಂತೆ ಪ್ರಯತ್ನಿಸಿದ್ದು ಕಂಡುಬರುತ್ತದೆ.

## ಶೈವರು

ಬಸವೇಶ್ವರನ ಕಾಲದಲ್ಲಿ ದ್ರಾವಿಡ ದೇಶದ ಶೈವರೂ ಪ್ರಬಲರಾಗಿದ್ದರು. ಅವರಲ್ಲಿ ಅನೇಕ ಸಾಧುಸತ್ಪುರುಷರೂ ವಿದ್ವಾಂಸರೂ ಆಗಿಹೋಗಿದ್ದಾರೆ. ಅವರಿಗೂ ಕರ್ನಾಟಕದ ಶಿವಶರಣರಿಗೂ ನಿಕಟ ಸಂಬಂಧವಿರುತ್ತದೆ. ಶಿವಶರಣರು ಅಥವಾ ಅಮರ ಗಣಾಧೀಶ್ವರರು ದ್ರಾವಿಡ ಶೈವರ ತತ್ವಗಳನ್ನೂ ಸ್ವೀಕರಿಸಿರು ವದು ಕಂಡು ಬರುತ್ತದೆ. ಮೇಲೆ ನಾವು ಸಾಂಖ್ಯ ಶಾಸ್ತ್ರದ ೨೫ ತತ್ವಗಳನ್ನು ಮತ್ತು ಶೈವರ ೧೧ ತತ್ವಗಳನ್ನು ಗಣಾಧೀಶ್ವರರು ಅನುಸರಿಸಿದ್ದುದನ್ನು ಉಲ್ಲೇ

ಖಿಸಿದ್ದೇವಷ್ಟೇ. ಇವುಗಳಲ್ಲಿ ೧೧ ತತ್ವಗಳನ್ನು ಗಣಾಧೀಶ್ವರರು ಅನುಸರಿಸಿದ್ದು ದ್ರಾವಿಡ ಶೈವರ ಅನುಕರಣವಾಗಿರುತ್ತದೆ. ಈ ೧೧ ತತ್ವಗಳು, ಐದು ಸಾದಾಖ್ಯ ಗಳು, ಐದು ಕಲೆಗಳು ಮತ್ತು ೧ ಸದಾಶಿವ ತತ್ವ ಹೀಗೆ ಇರುತ್ತವೆ. ದ್ರಾವಿಡ ಶೈವರು ತಮ್ಮ ತತ್ವಗಳ ಜ್ಞಾನದಿಂದ ಕಡೆಯ ತತ್ವವಾದ ಸದಾಶಿವ ತತ್ವ ಅಥವಾ ಪರಬ್ರಹ್ಮವನ್ನು ಸಾಧಿಸತಕ್ಕುದೆಂದು ಪ್ರತಿಪಾದಿಸುತ್ತಾರೆ. ಈ ೩೬ ತತ್ವಗಳ ವಿಷಯವಾಗಿ ದ್ರಾವಿಡ ವಾಙ್ಮಯದಲ್ಲಿ ಉದ್ಗ್ರಂಥಗಳಾಗಿರುತ್ತವೆ. ದ್ರಾವಿಡ ಶೈವರು ಶ್ರೇಷ್ಠತರಗತಿಯ ತತ್ವಜ್ಞಾನಿಗಳೆಂದು ಭಾರತದಲ್ಲಿ ಪ್ರಸಿದ್ಧಿಯನ್ನು ಹೊಂದಿದ್ದಾರೆ. ಅಮರಗಣಾಧೀಶ್ವರರೂ ಸಹ ದ್ರಾವಿಡ ಶೈವರ ೩೬ ತತ್ವಗಳ ಬಹುಭಾಗವನ್ನು ಅಂಗೀಕರಿಸಿರುತ್ತಾರೆ. ಇದರಿಂದ ಭಾರತದಲ್ಲಿಯ ಧಾರ್ಮಿಕ ಭಿನ್ನಭಾವನೆಗಳನ್ನು ದೂರ ಮಾಡುವ ಅವರ ಪ್ರಯತ್ನಗಳು ಚನ್ನಾಗಿ ತಿಳಿದುಬರುವಂತೆ ಇವೆ.

## ಪಾಶುಪತ ಕಾಳಾಮುಖರು.

ಕರ್ನಾಟಕದಲ್ಲಿ ಈ ಕಾಲದಲ್ಲಿ ಪಾಶುಪತ ಮತಸ್ತರೂ ಕಾಳಾಮುಖರೂ ಬಹು ಪ್ರಬಲರಾಗಿದ್ದರು. ಅವರು ಶೈವಸಾಂಪ್ರದಾಯಗಳನ್ನು ಅನುಸರಿಸುವವರಾಗಿದ್ದರು. ಅಮರಗಣಾಧೀಶ್ವರರು ಅಂಗೀಕರಿಸಿದ ಶಿವಾನುಭವದ ತತ್ವಗಳ ಮೂಲಕ ಈ ಸಮಾಜದವರೂ ಕೂಡ ವೀರಶೈವರಲ್ಲಿ ಮುಂದೆ ಸಮಾವೇಶವಾದರು.

## ಜೈನರು.

ಈ ಕಾಲದಲ್ಲಿ ಜೈನರು ಬಹು ಪ್ರಬಲ ಸಮಾಜದವರಾಗಿದ್ದರು. ಜೈನರ ವಿಹಾರಗಳೂ ಮಠಗಳೂ ಬಸವೇಶ್ವರನ ಕಾಲದಲ್ಲಿ ಎಲ್ಲ ಕಡೆಗೂ ಪಸರಿಸಿದ್ದವು. ಇವರು ಪ್ರಪಂಚವನ್ನು ತ್ಯಜಿಸಿ ಅರಣ್ಯ ಮಧ್ಯದಲ್ಲಿ ಗುಹೆಗಳನ್ನು ಕೊರೆದು ಏಕಾಂತವಾಸಿಗಳಾಗಿ ಪರಮಾರ್ಥ ಸಾಧನೆಯಲ್ಲಿದ್ದುದು ಕಂಡು ಬರುತ್ತದೆ. ಆದರೆ ಶಿವಶರಣರು ಹೀಗೆ ಸಂಸಾರ ತ್ಯಾಗಮಾಡುವದು ಅನಾವಶ್ಯಕವೆಂದು ಪ್ರತಿಪಾದಿಸಿ ಜನತೆಯಲ್ಲಿಯೇ ಇದ್ದು ತಮ್ಮ ಶಿವಾನುಭವವನ್ನು ಅನುಸರಿಸುವವರಾಗಿದ್ದರು. ಜೈನರು ಅಹಿಂಸಾವಾದಿಗಳು. ಅವರಂತೆಯೇ ಶಿವಶರಣರು ಅಹಿಂಸಾವಾದಿಗಳಾಗಿದ್ದಾರೆ. ಇದರಿಂದ ಶಿವಶರಣರ ಶಿವಾನುಭವದ ತತ್ವಗಳಿಗೆ ಜೈನರು ಒಲಿದವರಾಗಿ ಅವರಲ್ಲಿ ಬಹುಜನರು ವೀರಶೈವ

ಮತಾವಲಂಬಿಗಳಾಗಿದ್ದದ್ದು ಕಂಡುಬರುತ್ತದೆ. ಈ ಪ್ರಕಾರ ಈ ಕಾಲದಲ್ಲಿ ಹಿಂದುಸ್ತಾನದಲ್ಲಿದ್ದ ಪ್ರಮುಖ ಸಮಾಜಗಳು ಅಮರಗಣಾಧೀಶ್ವರರ ತತ್ವಗಳನ್ನು ಅನುಸರಿಸುತ್ತ ಬಂದರೆಂಬುದು ಗೊತ್ತಾಗುತ್ತದೆ.

ಈ ವರೆಗೆ ನಾವು ವೀರಶೈವ ಸಿದ್ಧಾಂತ ಅಥವಾ ಅಮರಗಣಾಧೀಶ್ವರರು ಪಾಲಿಸುತ್ತಿದ್ದ ತತ್ವಗಳಿಗೂ ಇತರ ಮತಾನುಯಾಯಿಗಳಿಗೂ ಇರುವ ತಾರತಮ್ಯವನ್ನು ವಿವರಿಸಿದೆವು. ಈಗ ನಾವು ಅಮರ ಗಣಾಧೀಶ್ವರರ ತತ್ವಗಳನ್ನು ಸ್ಥೂಲ ದೃಷ್ಟಿಯಿಂದ ವಿವರಿಸುವದು ಅವಶ್ಯವಿದೆ. ಇವರು ಯಾರೆಂಬುದರ ತಿಳಿವಳಿಕೆಯು ಬಹುಜನ ಸಮಾಜದಲ್ಲಿ ಕೆಲಮಟ್ಟಿಗೆ ಮಾತ್ರ ಇರುತ್ತದೆ. ಅವರು ಹಿಂದಿನಕಾಲಕ್ಕೆ ಆಗಿಹೋದ ಅಲೌಕಿಕರು ಎಂಬ ತಿಳಿವಳಿಕೆಯು ಅವರಲ್ಲಿ ಇರುತ್ತದೆ. ಆದರೆ ಅವರು ಹೀಗಿರದೆ ಐತಿಹಾಸಿಕ ಪುರುಷರಾಗಿದ್ದಾರೆ. ಈಗಿನ ಗ್ರಂಥದಲ್ಲಿ ಅವರ ಚರಿತ್ರೆಗಳನ್ನು ವಿವರಿಸುವದು ಮುಖ್ಯವಾಗಿರುತ್ತದೆ. ಆದರೂ ಅವರು ಪ್ರತಿಪಾದಿಸಿದ ಸಾಮಾನ್ಯ ತತ್ವಗಳ ಕರ್ನಾಟಕಸ್ಥರು ಅರಿಯುವದು ಅವಶ್ಯವಿರುವದರಿಂದ ಅವುಗಳನ್ನು ನಾವು ಬಹು ಸಂಕ್ಷಿಪ್ತವಾಗಿ ಇಲ್ಲಿ ವಿವರಿಸುತ್ತೇವೆ.

## ವಚನಶಾಸ್ತ್ರ.

ಅಮರ ಗಣಾಧೀಶ್ವರರ ಧರ್ಮತತ್ವಗಳು ವಚನಶಾಸ್ತ್ರದಲ್ಲಿ ಅಡಕವಾಗಿರುತ್ತವೆ. ವಚನಕಾರರಲ್ಲಿ ಬಹುಜನರು ಬಸವೇಶ್ವರನ ಮತ್ತು ಅವನ ಹಿಂದಿನಕಾಲದಲ್ಲಿ ಆಗಿಹೋಗಿರುವದರಿಂದ ಅವರೆಲ್ಲರು ಅಮರಗಣಾಧೀಶ್ವರರಾಗಿದ್ದಾರೆ. ೧೪ನೇ ಶತಮಾನದ ತರುವಾಯ ಕೆಲವು ವಚನಗ್ರಂಥಗಳನ್ನು ಕೆಲವು ಶಿವಶರಣರು ರಚಿಸಿದ್ದಾರೆ. ಅವರು ಸಹ ಅಮರ ಗಣಂಗಳೆಂದು ಗ್ರಹಿಸಲ್ಪಟ್ಟಿರುವದಿಲ್ಲ.

## ಲಿಂಗಧಾರಿಗಳು.

ಅಮರ ಗಣಾಧೀಶ್ವರರೆಲ್ಲರೂ ಲಿಂಗಧಾರಿಗಳಾಗಿ, ಲಿಂಗಾಂಗ ಸಾಮರಸ್ಯವನ್ನು ಹೊಂದುವದೇ ಅವರ ಧ್ಯೇಯವಾಗಿರುತ್ತದೆ.

ಲಿಂಗಾಂಗಸಾಮರಸ್ಯಕ್ಕೆ ಲಿಂಗಧಾರಣವು ಬಹು ಅವಶ್ಯವಾದುದು. ಯಾವ ಅಮರಗಣಾಧೀಶ್ವರನೂ ಲಿಂಗಧಾರಣವಿಲ್ಲದೇ ಇರುವದಿಲ್ಲ.

ಯಾವನ್ನೂ ಚರಾಚರ ಜಗತ್ತಿನಲ್ಲಿ ಶಿವನು ಇರುವದರಿಂದ ಎಲ್ಲ ಪ್ರಾಣಿಗಳ ಸ್ಥಿತಿಲಯಗಳಿಗೆ ಕಾರಣನಾದ ನಿಷ್ಕಳ ರೂಪ ಶಿವನಿಗೆ ಲಿಂಗ ವೆಂಬ ಹೆಸರು ಇರುತ್ತದೆ. ಲಿಂಗಧಾರಣವು ಹೇಗೆ ನಿರ್ವಹಿಸಲ್ಪಡುತ್ತದೆಂಬುದು ಶ್ರೀಸಿದ್ಧೇಶ್ವರ ವಚನ ಮತ್ತು ಕಾರ್ಯ ಗ್ರಾಮದ ಪ್ರಭುಗಳು ಬಹು ಸುಂದರ ವಾಗಿ ತಮ್ಮ ಉಕ್ತಿಗಳಲ್ಲಿ ವಿವೇಚಿಸಿದ್ದಾರೆ. ಮನುಷ್ಯನಿಗೆ ಸ್ಥೂಲ ಸೂಕ್ಷ್ಮ ಕಾರಣ ತನುಗಳಿದ್ದು ಲಿಂಗದೀಕ್ಷೆಯಿಂದ ಈ ತನುಗಳಲ್ಲೆಲ್ಲ ಇಷ್ಟ ಪ್ರಾಣ ಭಾವಲಿಂಗಗಳು ಉದ್ಭೂತವಾಗುತ್ತವೆ. ಅವುಗಳಿಗೆ ಅನುಕ್ರಮವಾಗಿ ವೇಧಾ ದೀಕ್ಷೆ, ಮಂತ್ರದೀಕ್ಷೆ, ಮತ್ತು ಕ್ರಿಯಾದೀಕ್ಷೆ ಎಂಬ ಹೆಸರುಗಳಿರುತ್ತವೆ. ಇವುಗಳ ರೀತಿಯನ್ನು ತೋಂಟದ ಸಿದ್ಧಲಿಂಗೇಶ್ವರನು ಬಹು ಚನ್ನಾಗಿ ಕೆಳಗಿನ ವಚನದಲ್ಲಿ ನಿರೂಪಿಸಿದ್ದಾನೆ. ಅದನ್ನೇ ನಾವು ಇಲ್ಲಿ ಕೆಳಗೆ ಕೊಡುತ್ತೇವೆ.

ವಚನ:— ವೇಧಾದೀಕ್ಷೆ, ಮಂತ್ರದೀಕ್ಷೆ, ಕ್ರಿಯಾದೀಕ್ಷೆ ಎಂಬದೀಕ್ಷಾ ತ್ರಯಗಳಿಂದ ತನುತ್ರಯಂಗಳ ಪೂರ್ವಾಶ್ರಯಂಗಳ ಕಳೆದು ಲಿಂಗತ್ರಯಂಗಳ ಸಂಬಂಧಿಸಿದನದೆಂತೆಂದೊಡೆ ವೇಧಾದೀಕ್ಷೆಯೆಂದು ಶ್ರೀಗುರು ತನ್ನ ಹಸ್ತ ಶಿಷ್ಯ ಮಸ್ತಕದಲ್ಲಿ ಸಂಯೋಗ ಮಾಡಿಡನು. ಮಂತ್ರದೀಕ್ಷೆಯೆಂದು ಶ್ರೀಗುರುವು ಪ್ರಣವು ಪಂಚಾಕ್ಷರಿ ಮಂತ್ರವ ಕರ್ಣದಲ್ಲಿ ಉಪದೇಶಿಸಿದನು. ಕ್ರಿಯಾದೀಕ್ಷೆಯೆ ಆ ಮಂತ್ರ ಸ್ವರೂಪವನೆ ಇಷ್ಟಲಿಂಗ ಸ್ವರೂಪವನೆ ಮಾಡಿ ಕರಸ್ಥಲದಲ್ಲಿ ಸಂಬಂಧಿಸಿದನು. ಇದು ಕಾರಣ ವೇಧಾದೀಕ್ಷೆಯಿಂದ ಕಾರಣತನುವಿನ ಪೂರ್ವಾ ಶ್ರಯವ ಕಳೆದು ಭಾವಲಿಂಗ ಸಂಬಂಧವಾಯಿತು. ಮಂತ್ರದೀಕ್ಷೆಯಿಂದ ಸೂಕ್ಷ್ಮತನುವಿನ ಪೂರ್ವಾಶ್ರಯುವಳಿದು ಪ್ರಾಣಲಿಂಗ ಸಂಬಂಧವಾಯಿತು. ಕ್ರಿಯಾದೀಕ್ಷೆಯಿಂದ ಸ್ಥೂಲತನುವಿನ ಪೂರ್ವಾಶ್ರಯುವಳಿದು ಇಷ್ಟಲಿಂಗ ಸಂಬಂಧವಾಯಿತು. ಅಂಗತ್ರಯದಲ್ಲಿ ಲಿಂಗತ್ರಯ ಧರಿಸಿದೆನಯ್ಯ ಮಹಾ ಲಿಂಗಗುರುಶಿವಸಿದ್ಧೇಶ್ವರ ಪ್ರಭುವೇ.

ಮೇಲ್ಕಂಡ ವಚನದಲ್ಲಿ ತ್ರಿಲಿಂಗಗಳು ಮನುಷ್ಯನ ಮೂರು ಶರೀರ ಗಳಿಗೆ ಹೇಗೆ ಸಂಬಂಧಪಡುತ್ತವೆಂಬುದನ್ನು ಚನ್ನಾಗಿ ವಿವರಿಸಿದ್ದಾಗಿದೆ. ಅಮರ ಗಣಾಧೀಶ್ವರರು ಈ ಪ್ರಕಾರ ಅಂಗಲಿಂಗ ಸಂಬಂಧ ಮಾಡಿಕೊಂಡು ಕಡೆಗೆ ಲಿಂಗದಲ್ಲಿಯೇ ಸಾಮರಸ್ಯವನ್ನು ಹೊಂದುವದು ಅವರ ಧ್ಯೇಯವಾಗಿರು ತ್ತದೆ. ಈ ವಿಚಾರಗಳು ಶಿವಶರಣರ ಅಸಂಖ್ಯ ಉಕ್ತಿಗಳಲ್ಲಿ ಉಲ್ಲೇಖಿಸ

ಲ್ಪಟ್ಟಿರುತ್ತವೆ. ಕೆಳಗಿನ ವಚನದಲ್ಲಿ ಈ ಲಿಂಗದ ಸ್ವರೂಪವು ಬಹು ಚನ್ನಾಗಿ ವಿವರಿಸಲ್ಪಟ್ಟಿರುತ್ತದೆ.

## ಲಿಂಗವೆಂದರೇನು.

ಲಿಂಗವೆಂಬುದು ಪರಶಕ್ತಿಯುತ ಪರಶಿವನ ನಿಜದೇಹ, ಲಿಂಗವೆಂಬುದು ಪರಶಿವನ ನಿರತಿಶಯಾನಂದ ಸುಖವು, ಲಿಂಗವೆಂಬುದು ಪರಶಿವನ ಪರಮ ಜ್ಞಾನ, ಲಿಂಗವೆಂಬುದು ಅಖಂಡಿತವೇದ, ಪಂಚಸಂಜ್ಞೆ, ಲಿಂಗವೆಂಬುದು ತಾಹರಿಬ್ರಹ್ಮರ ನಡುಮನೆಗಳ ಜ್ಯೋತಿರ್ಲಿಂಗ, ಎಂದು ಪ್ರಸಿದ್ಧ ವಚನಕಾರನಾದ ಉರಿಲಿಂಗಪೆದ್ದಿಯು ತನ್ನ ಒಂದು ವಚನದಲ್ಲಿ ವಿವರಿಸಿದ್ದಾನೆ.

## ಮೋಕ್ಷ.

ಮನುಷ್ಯನು ಪರಮಾತ್ಮನಲ್ಲಿ ಐಕ್ಯ ಹೊಂದುವ ರೀತಿಯನ್ನು ಕೆಳಗೆ ಕಾಣಿಸಿದ ವಚನದಲ್ಲಿ ಅಖಂಡೇಶ್ವರನು ಬಹು ಚನ್ನಾಗಿ ನಿರೂಪಿಸಿದ್ದಾನೆ. ಅದು ಯಾವದೆಂದರೆ,

ವಚನಃ— ಆಕಾಶದಲ್ಲಿ ತೋರುವ ಇಂದ್ರಚಾಪವಡುಗುವದಕ್ಕೆ ಆಕಾಶವೇ ಆಶ್ರಯವಲ್ಲದೆ ಬೇರೆ ಮತ್ತೆ ಆಶ್ರಯವುಂಟೆ ಅಯ್ಯಾ? ಗಾಳಿಯಿಂದ ತೋರಿದ ಸುಳಿಗಾಳಿಯಡಗುವದಕ್ಕೆ ಗಾಳಿಯೇ ಆಶ್ರಯವಲ್ಲದೆ ಬೇರೆ ಮತ್ತೆ ಆಶ್ರಯವುಂಟೆ ಅಯ್ಯಾ? ಅಗ್ನಿಯಲ್ಲಿ ತೋರಿದ ಕಿಡಿಗಳು ಅಡಗುವದಕ್ಕೆ ಅಗ್ನಿಯೇ ಆಶ್ರಯವಲ್ಲದೆ ಬೇರೆ ಮತ್ತೆ ಆಶ್ರಯವುಂಟೆ ಅಯ್ಯಾ? ಆದಿಅನಾದಿಯಿಂದತ್ತತ್ತವಾದ ಪರವಸ್ತುವಿನಲ್ಲಿ ರೂಪಿಸಿ ತೋರಿದನು ನಿಜೈಕ್ಯವಡಗುವದಕ್ಕೆ ಆ ಪರವಸ್ತುವೇ ಆಶ್ರಯವಲ್ಲದೆ ಬೇರೆ ಮತ್ತೆ ಆಶ್ರಯವುಂಟೆ ಅಖಂಡೇಶ್ವರಾ?

ಈ ವಚನದಲ್ಲಿ ಹೇಳಿದಂತೆ ಮನುಷ್ಯನು ಪರಮಾತ್ಮನಲ್ಲಿ ಜನ್ಮ ತಾಳಿದ್ದರಿಂದ ಅವನು ಕಡೆಗೆ ಪರಮಾತ್ಮನಲ್ಲಿಯೇ ಐಕ್ಯ ಹೊಂದುವನಾಗಿದ್ದಾನೆ. ಈ ಪ್ರಕಾರ ಅಮರಗಣಾಧೀಶ್ವರರ ಮೋಕ್ಷದ ಕಲ್ಪನೆಗಳು ಇರುತ್ತವೆ.

## ಸ್ವರ್ಗ ನರಕ.

ಮೇಲೆ ಕಾಣಿಸಿದ ತತ್ವಗಳನ್ನು ಅಮರಗಣಾಧೀಶ್ವರರು ಪ್ರತಿಪಾದಿಸುವದರಿಂದ ಅವರು ಕೈಲಾಸ ಮತ್ತು ಸ್ವರ್ಗ ಇವುಗಳ ಅಸ್ತಿತ್ವವನ್ನು ಒಪ್ಪುವದಿಲ್ಲ. ಮನುಷ್ಯನು ಲಿಂಗದ ವಿಚಾರದಂತೆ ನಡೆದು ಕಡೆಗೆ ಲಿಂಗದಲ್ಲಿಯೇ

ಮುಕ್ತನಾಗುತ್ತಾನೆ. ಈ ಬಗ್ಗೆ ಸಿದ್ಧರಾಮೇಶ್ವರನು ತನ್ನ ಒಂದು ವಚನದಲ್ಲಿ ಹೇಳಿರುವದೇನೆಂದರೆ:—.

ತಪವ ಮಾಡಿ ಸ್ವರ್ಗವ ಪಡೆದಿಹೆವೆಂಬವನ ಮುಖವ ನೋಡಲಾಗದು ಮಾದಿಗ ಡೋಹರು ಶ್ವಪಚರು ಹೋಹುದೆಲ್ಲ ಸ್ವರ್ಗವೇನಯ್ಯ? ಲಿಂಗದ ಕುರುಹ ತಿಳಿದು ಅಂಗಗುಣಗಳನತಿಗಳೆದು ಲಿಂಗವಾದುದೇ ಸ್ವರ್ಗ ನೋಡಯ್ಯ ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ.

## ಷಟ್‌ಸ್ಥಲಗಳು.

ಈ ಪ್ರಕಾರ ಶಿವಶರಣರು ಸ್ವತಂತ್ರ ವಿಚಾರಿಗಳಾಗಿ ತಮ್ಮ ಮತವನ್ನು ಸ್ಪಷ್ಟ ಶಬ್ದಗಳಿಂದ ಪ್ರಕಟಮಾಡಿದ್ದಾರೆ. ಸಾಮರಸ್ಯವು ಅಮರಗಣಾಧೀಶ್ವರರ ಧ್ಯೇಯವಾಗಿರುವದರಿಂದ ಈ ಸ್ಥಿತಿಯನ್ನು ಹೇಗೆ ಹೊಂದಬೇಕೆಂಬುದನ್ನು ಯಾವಾಗಲೂ ಅವರು ಯೋಚಿಸುತ್ತಿರುತ್ತಾರೆ. ಮತ್ತು ಅವರು ಅದರಂತೆಯೇ ಯಾವಾಗಲೂ ನಡೆಯುತ್ತಾರೆ. ಪರಮಾತ್ಮ ಸಾಧನೆಗೋಸ್ಕರ ಆರು ಮೆಟ್ಟಿಲುಗಳಿದ್ದು ಅವುಗಳಂತೆ ಅವರು ಆಚರಿಸುವವರಾಗಿದ್ದಾರೆ. ಅವುಗಳಿಗೆ ಷಟ್‌ಸ್ಥಲಗಳೆಂಬ ಹೆಸರು. ಅವು ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ ಶರಣ, ಐಕ್ಯ ಎಂದಿರುತ್ತವೆ. ಇವುಗಳಿಗೆ ಅಮರಗಣಾಧೀಶ್ವರರು ತಮ್ಮ ಸಿದ್ಧಾಂತದಲ್ಲಿ ಉಚ್ಚ ಸ್ಥಾನವನ್ನು ಕೊಟ್ಟಿದ್ದಾರೆ. ಈ ಆರು ಸ್ಥಳಗಳ ವಿಷಯವಾಗಿ ಅಮರಗಣಾಧೀಶ್ವರರ ವಾಙ್ಮಯದಲ್ಲಿ ಬಹು ಪ್ರಗಲ್ಭವಾದ ವಿಚಾರಗಳಿರುತ್ತವೆ. ಷಟ್‌ಸ್ಥಲಗಳೆಂದರೆ ಮನುಷ್ಯನ ಪ್ರಗತಿಯ ಮೆಟ್ಟಿಲುಗಳು ಎಂದು ಹೇಳಬಹುದು. ಮನುಷ್ಯನು ಇಹಲೋಕಕ್ಕೆ ಬಂದಂದಿನಿಂದ ಪರಮಾತ್ಮನಲ್ಲಿ ಐಕ್ಯಸ್ಥಿತಿಯನ್ನು ಹೊಂದುವವರೆಗೆ ಅವನ ದೇಹ, ಮನಸ್ಸು, ಚಿತ್ತ, ಶಕ್ತಿ ಮೊದಲಾದವುಗಳು ಹೇಗೆ ಹೇಗೆ ಮಾರ್ಪಡುತ್ತ ಹೋಗುತ್ತವೆಂಬುದರ ವಿವರಣೆಯು ಈ ಷಟ್‌ಸ್ಥಲಶಾಸ್ತ್ರದಲ್ಲಿ ಇರುತ್ತದೆ.

ಈ ವಿಕಾಸತೆಯಲ್ಲಿ ಆಯಾ ಶರೀರಗಳ ಪ್ರಕಾರ ಆರು ವಿಭಾಗಗಳು ಮಾಡಲ್ಪಟ್ಟಿರುತ್ತವೆ. ಸ್ಥೂಲ ಶರೀರವು ಮನುಷ್ಯನ ಬಹಿರಂಗದ ವ್ಯವಹಾರಗಳಿಗೆ ಸಂಬಂಧಿಸಿದ್ದಿದ್ದು ಇದರ ವಿಕಾಸವು ಭಕ್ತ ಮಹೇಶ್ವರ ಎಂಬ ಎರಡು ಸ್ಥಲಗಳಲ್ಲಿ ನಿರ್ದೇಶಿಸಲ್ಪಟ್ಟಿದೆ. ಸ್ಥೂಲ ಶರೀರದ ತರುವಾಯ ಸೂಕ್ಷ್ಮ ಶರೀರವಿದ್ದು ಇದು ಮನುಷ್ಯನ ಅಂತರಂಗಿಕ ವ್ಯಾಪಾರಗಳಿಗೆ ಸಂಬಂಧಿಸಿದ್ದಿದ್ದು ಜ್ಞಾನೇಂದ್ರಿಯಗಳ ಮೂಲಕ ಇದರ ವ್ಯವಹರಣೆಯು ನಡೆಯು

ತ್ತದೆ. ಈ ಶರೀರದ ವಿಕಾಸವು ಪ್ರಸಾದಿ ಮತ್ತು ಪ್ರಾಣಲಿಂಗಿ ಎಂಬ ಎರಡು ಸ್ಥಲಗಳಾಚರಣೆಗಳ ಮೂಲಕ ಒದಗುತ್ತದೆ. ಇದರ ತರುವಾಯ ಕಾರಣಶರೀರವಿದ್ದು ಇದು ಮನುಷ್ಯನ ಬಹಿರಂಗ ಮತ್ತು ಅಂತರಂಗ ವ್ಯಾಪಾರ ಗಳಿಗೆ ಚೈತನ್ಯಸ್ವರೂಪವಾಗಿ ವ್ಯವಹರಿಸುತ್ತದೆ. ಇದರ ಮೂಲಕವಾಗಿಯೇ ಉಳಿದ ಎರಡು ಶರೀರಗಳ ವ್ಯಾಪಾರಗಳು ನಡೆಯುತ್ತವೆ. ಇದಕ್ಕೆ ಭಾವ ಶರೀರವೆಂಬ ಹೆಸರಿದ್ದು ಈ ಶರೀರದ ವಿಕಾಸವು ಶರಣ ಮತ್ತು ಐಕ್ಯ ಸ್ಥಲ ಗಳಲ್ಲಿ ಉಂಟಾಗುತ್ತದೆ. ಈ ಪ್ರಕಾರ ಈ ಸ್ಥಲಗಳ ವಿವರಣೆಯು ಇದ್ದು ಇವುಗಳ ವಿಸ್ತಾರವಾದ ವಿವೇಚನೆಯು ವಚನವಾಙ್ಮಯದಲ್ಲಿ ಯಾವಾಗಲೂ ಬರುತ್ತದೆ. ಅಮರ ಗಣಾಧೀಶ್ವರರು ಈ ತತ್ವಗಳನ್ನು ಅನುಸರಿಸುತ್ತ ಬೋಧೆ ಮಾಡುತ್ತ ಸಮಾಜದಲ್ಲಿ ಧಾರ್ಮಿಕ ಕ್ರಾಂತಿಯನ್ನು ಮಾಡಿದ್ದಾರೆ.

ದ್ವೈತಾದ್ವೈತ ಮತಾನುಯಾಯಿಗಳಲ್ಲಿ ತಾವು ಪರಮಾತ್ಮನ ಸಾನ್ನಿಧ್ಯ ವನ್ನು ಹೊಂದಬೇಕು, ಅಥವಾ ಅವನಲ್ಲಿ ಐಕ್ಯತೆಯನ್ನು ಹೊಂದಬೇಕೆಂಬ ವಿಚಾರಗಳಿರುತ್ತವೆ. ಆದರೆ ಅವರು ಈ ವಿಚಾರಗಳನ್ನು ಹೇಗೆ ರೂಪಕ್ಕೆ ತರಬೇಕೆಂಬುದರ ವಿಷಯವಾಗಿ ಯಾವ ನಿಶ್ಚಿತ ಯೋಜನೆಗಳನ್ನು ಮಾಡಿದ್ದು ಕಂಡುಬರುವದಿಲ್ಲ.

## ಮಾಯಾವಾದಿಗಳು.

ಶುದ್ಧಾದ್ವೈತಿಗಳು ಈ ಜಗತ್ತು ಮಾಯಾಮಯವಾದದ್ದು ಮತ್ತು ಅದು ನಿಜವಸ್ತುವಲ್ಲ, ಎಂದು ಭಾವಿಸಿರುವದರಿಂದ ಅವರು ಕ್ರಿಯೆಗಳಿಗೆ ಮಹತ್ವಕೊಟ್ಟಿರುವದಿಲ್ಲ. ಅವರು ಯಾವಾಗಲೂ ತಾತ್ವಿಕ ವಿಚಾರಗಳಲ್ಲಿ ಮಗ್ನರಾಗಿರುತ್ತಾರೆ. ಮನುಷ್ಯನು ಹೇಗೆ ಪ್ರಪಂಚದಲ್ಲಿ ವರ್ತಿಸಬೇಕೆಂಬುದರ ಬಗ್ಗೆ ದೀರ್ಘ ವಿವೇಚನೆ ಮಾಡುವದರಲ್ಲಿ ಅವರು ಮುಂದುವರಿದಿಲ್ಲ.

## ದ್ವೈತಿಗಳು

ದ್ವೈತ ಸಾಂಪ್ರದಾಯಕರು ಭಾರತದಲ್ಲಿ ಅನೇಕರಿದ್ದಾರೆ. ಆದರೆ ಅವರು ಕರ್ಮಮಾರ್ಗಕ್ಕೆ ಹೊಂದಿಕೊಂಡು ಕರ್ಮಠರಾಗಿರುತ್ತಾರೆ. ಅವರು ತಮ್ಮ ಕ್ರಿಯೆಗಳನ್ನು ಕೇವಲ ಯಾಂತ್ರಿಕ ರೀತಿಯಿಂದ ಜರುಗಿಸುತ್ತಾ ಇದ್ದಾರೆ.

## ಭಕ್ತಿಪಂಥದವರು.

ಭಕ್ತಿಪಂಥದವರು ಅಸಂಖ್ಯಾತವಾಗಿ ನಾಡಿನಲ್ಲಿ ಇದ್ದಾರೆ. ಆದರೆ ಈ ಮತದವರು ಕೇವಲ ಪರಮಾತ್ಮನ ಭಜನೆ, ಸ್ತೋತ್ರ, ಅವನ ಪೂಜಾದಿ ಕಾರ್ಯಗಳಲ್ಲಿ ತೊಡಗಿರುತ್ತಾರೆ. ಆದರೆ ಮನುಷ್ಯನು ತನ್ನ ಪ್ರಪಂಚವನ್ನು ಹೇಗೆ ನಿರ್ವಹಿಸಬೇಕೆಂಬುದನ್ನು ಕುರಿತು ಅವರು ಸಾಕಷ್ಟು ವಿವೇಚನೆ ಮಾಡಿರುವದಿಲ್ಲ.

## ಮನುಷ್ಯನ ನಡೆಯ ಸುಧಾರಣೆ.

ಇದರಿಂದ ಹಿಂದೂ ಸಮಾಜಗಳಲ್ಲಿ ನೈತಿಕ ಮತ್ತು ವ್ಯವಹಾರಿಕ ಶಾಸ್ತ್ರಗಳು ಬಹಳ ಹಿಂದೆ ಬಿದ್ದಿರುತ್ತವೆ. ಆದರೆ ಅಮರ ಗಣಾಧೀಶ್ವರರು ಕೈಕೊಂಡ ಕ್ರಿಯೆಗಳು ಈ ಪ್ರಕಾರ ಇದೆ, ಅವರು ಮನುಷ್ಯನ ವ್ಯವಹಾರ ನಡೆ, ನುಡಿ, ಆಚಾರ, ಮನಸ್ಸಿನ ಪ್ರಗತಿ ಮತ್ತು ಅವನ ತಿಳಿವಳಿಕೆ ಇವುಗಳನ್ನು ಹೆಚ್ಚಿಸುವದು ಈ ಮೊದಲಾದ ವಿಷಯಗಳ ಕಡೆಗೆ ಹೆಚ್ಚಿಗೆ ಗಮನ ಕೊಟ್ಟು ಮನುಷ್ಯನು ತನ್ನ ವಿಕಾಸವನ್ನು ಹೇಗೆ ಮಾಡಿಕೊಳ್ಳಬೇಕೆಂಬುದನ್ನು ವಿವೇಚನೆ ಮಾಡಿದ್ದು ಕಂಡುಬರುತ್ತದೆ. ಅವರು ಏರ್ಪಡಿಸಿದ ಷಟ್‌ಸ್ಥಲ ಶಾಸ್ತ್ರದಲ್ಲಿ ಈ ಸಂಗತಿಯು ಸ್ಪಷ್ಟವಾಗಿ ತಿಳಿದುಬರುವಂತೆ ಇದೆ. ಈ ವಿಷಯವಾಗಿ ಅವರು ಅನೇಕ ಗ್ರಂಥಗಳನ್ನು ಬರೆದದ್ದು ಅವುಗಳ ಆಧಾರದಿಂದ ನಾವು ಕೆಳಗಿನ ಷಟ್‌ಸ್ಥಲಗಳ ವಿವರಣೆಗಳನ್ನು ಮಾಡಿದ್ದೇವೆ. ಶಿವಶರಣರ ತತ್ವವಿಚಾರಗಳಲ್ಲಿ ಇದು ಬಹು ಮಹತ್ವದ ಭಾಗವಾಗಿರುವದರಿಂದ ಷಟ್‌ಸ್ಥಲಗಳನ್ನು ನಾವು ಬೇರೆಬೇರೆಯಾಗಿ ಕೆಳಗೆ ಕೊಟ್ಟಿದ್ದೇವೆ.

## ಭಕ್ತಸ್ಥಲ.

ಭಕ್ತಸ್ಥಲವು ಮನುಷ್ಯನ ಪ್ರಗತಿಯಲ್ಲಿ ಮೊದಲನೆಯದಾಗಿದೆ. ಇದನ್ನು ದೃಢಪಡಿಸುವದರಿಂದಲೇ ಅವನ ಭಾವೀ ಪ್ರಗತಿಯು ಸ್ಥಿರಪಡುತ್ತದೆ. ವಿಶ್ವಾಸವೇ ಇದರ ಮುಖ್ಯ ಲಕ್ಷಣವು. ವಿಶ್ವಾಸದಿಂದಲೇ ಆಸ್ತಿಕ ಬುದ್ಧಿಯು ಉಗಮಹೊಂದುತ್ತದೆ. ಆರಂಭದಲ್ಲಿ ಮನುಷ್ಯನಿಗೆ ಅವಿಶ್ವಾಸವು ಇದ್ದುದಾದರೆ ವಸ್ತುವಿನ ಮಹತ್ವವು ತಿಳಿಯದೇ ಹೋಗಿ ಅವನ ಕಾರ್ಯಗಳು ಕುಂಠಿತವಾಗುತ್ತವೆ. ಮನುಷ್ಯನು ಅನುಭವಿಕರ ಉದಾಹರಣೆಯನ್ನು ಕಣ್ಣುಮುಂದಿಟ್ಟುಕೊಂಡು ಅವರ ಮಾತಿನ ಮೇಲೆ ವಿಶ್ವಾಸವನ್ನಿಟ್ಟು ನಡೆಯ

ಬೇಕು. ವಿಶ್ವಾಸವನ್ನು ಒತ್ತಟ್ಟಿಗೆ ಶೇಖರಿಸುವದರಿಂದ ಹೆಚ್ಚು ಶಕ್ತಿಯು ಬರುತ್ತದೆ. ಬೇರೆ ಬೇರೆ ಎಳೆಗಳನ್ನು ಕೂಡಿಸಿ ಹೊಸೆದು ಹಗ್ಗ ಮಾಡಿದರೆ ಅದರಿಂದ ದೊಡ್ಡ ಆನೆಯನ್ನು ಸಹ ಕಟ್ಟಬಹುದು. ವಿಶ್ವಾಸವು ದೃಢ ವಾಗಬೇಕಾದರೆ ಭಕ್ತಿ ಎಂಬ ಅಭ್ಯಾಸವು ಅವಶ್ಯವಾದುದು. ಭಕ್ತನು ಇಷ್ಟ ಲಿಂಗದಲ್ಲಿ ಪ್ರೇಮವುಳ್ಳವನಾದರೆ ಅವನಲ್ಲಿ ವಿಶ್ವಾಸವು ಸ್ಥಿರವಾಗಿ ನೆಲೆಗೊಳ್ಳುವದು. ಭಕ್ತಿಯೊಡನೆ ಸದಾಚಾರವು ಬಹಳ ಅವಶ್ಯವಾದದ್ದು. ಅಂದರೆ ಮನುಷ್ಯನು ತನ್ನ ಸಮಾಜದವರೊಡನೆ ಹೇಗೆ ನಡೆಯಬೇಕು, ಅವರ ಪ್ರೀತಿ ಒಲವುಗಳನ್ನು ಹೇಗೆ ಸಂಪಾದಿಸಬೇಕು, ಎಂಬುದನ್ನು ತಿಳಿದುಕೊಂಡು ಹಾಗೆ ಆಚರಿಸುವದೇ ಸದಾಚಾರವೆಂದು ಹೇಳಲ್ಪಡುತ್ತದೆ. ಆದ್ದರಿಂದ ಅನುರಗ ಣಾಧೀಶ್ವರರು ತಮ್ಮ ಉಕ್ತಿಗಳಲ್ಲಿ ಯಾವಾಗಲೂ ಸದಾಚಾರವನ್ನೇ ಬೋಧಿಸುತ್ತಾರೆ. ಅವರ ನೈತಿಕ ವಚನಗಳಲ್ಲಿ ಶ್ರೇಷ್ಠ ವಿಚಾರಗಳು ತುಂಬಿರುತ್ತವೆ. ಈ ವಿಷಯದಲ್ಲಿ ಅವರು ಬಹಳ ಮುಂದುವರಿದಿದ್ದಾರೆಂಬುದು ಅವರ ಗ್ರಂಥಗಳಿಂದ ತಿಳಿದುಬರುತ್ತದೆ. ಅವರು ತಮ್ಮ ಸದಾಚಾರ ನಿರೂಪಣೆಯಲ್ಲಿ ಉಚ್ಚ ಪಾರಮಾರ್ಥಿಕ ವಿಚಾರಗಳನ್ನು ಸೇರ್ಪಡೆ ಮಾಡಿದ್ದಾರೆ. ಇವುಗಳಿಗೆ 'ಭಕ್ತಿಯ ವಚನ' ಗಳೆಂಬ ಹೆಸರಿದೆ. ಶಿವಶರಣರ ಭಕ್ತಿಯ ವಿಚಾರಗಳು ಮನುಷ್ಯನ ಮನಸ್ಸನ್ನು ಮೇಲ್ಮಟ್ಟಕ್ಕೆ ಒಯ್ಯುವಂಥವು ಇರುತ್ತವೆ. ಅವು ಅತ್ಯಂತ ಹೃದಯಸ್ಪರ್ಶಿಯಾಗಿರುತ್ತವೆ. ಈ ಪ್ರಕಾರ ವರ್ತಿಸುವವನು ಭಕ್ತನೆಂದು ಹೇಳಲ್ಪಡುತ್ತಾನೆ.

## ಮಹೇಶ್ವರ ಸ್ಥಲ

ಮಹೇಶ್ವರ ಸ್ಥಲದವನಿಗೆ ನಿಷ್ಠೆಯು ಬಹಳ ಅವಶ್ಯವು. ಅವನು ಕಟ್ಟಾಚರಣೆಯುಳ್ಳವನಾಗಿ ಧೈರ್ಯದಿಂದ ಪ್ರಪಂಚದಲ್ಲಿ ವ್ಯವಹರಿಸುತ್ತಾನೆ. ನೋಡಬಾರದ ವಿಷಯಗಳನ್ನೆಂದಿಗೂ ಅವನು ನೋಡಲಾರನು. ಆಡಬಾರದ ನುಡಿಗಳನ್ನು ಎಂದಿಗೂ ಆಡುವದಿಲ್ಲ. ನಿಷ್ಠೆಯು ಪ್ರತಿನಿತ್ಯದ ತಪಸ್ಸಿನಂತೆ ಇರುತ್ತದೆ. ಹಿಂದಿನ ಕಾಲದ ಋಷಿಗಳು ಮಾಡುತ್ತಿದ್ದ ತಪಸ್ಸು ನಿರಂತರವಾಗಿರದೆ ತಮ್ಮ ದೈವೀಶಕ್ತಿಯನ್ನು ಪ್ರಸನ್ನ ಮಾಡಿಕೊಂಡ ಬಳಿಕ ತಮ್ಮ ಅಭೀಷ್ಟವನ್ನು ಪೂರೈಸುವವರಾಗಿದ್ದಾರೆ. ಆದರೆ ಷಟ್‌ಸ್ಥಲಗಳ ಪ್ರಕಾರ ಮಹೇಶ್ವರನಾದವನು ಹೀಗೆ ವ್ಯವಹರಿಸಿದರೆ ಪ್ರತಿ ಕ್ಷಣ ತನ್ನ ನಿತ್ಯದ ಆಚರಣೆಗಳನ್ನು ತಾನಿರುವ ವರೆಗೂ ಪೂರೈಸುತ್ತ ಹೋಗುತ್ತಾನೆ. ಮಹೇಶ್ವರನು ಕ್ರಮೇಣ

ನಿತ್ಯ ತಪಸ್ಸಿನಿಂದ ತನ್ನ ಶಕ್ತಿಯನ್ನು ಬೆಳೆಸುತ್ತ ಅದನ್ನು ಸ್ಥಿರಪಡಿಸುತ್ತಾನೆ. ಮನುಷ್ಯನು ಯಾವಕೆಲಸವನ್ನು ಕೈಕೊಂಡರೂ ಅವನು ಅದನ್ನು ಬಿಟ್ಟುಬಿಡದೇ ನಿರ್ವಹಿಸುತ್ತಾನೆ. ಮಹೇಶ್ವರನು ಸ್ಥಿರಬುದ್ಧಿಯುಳ್ಳವನು, ಮತ್ತು ಧೈರ್ಯವಂತನು. ಎಂಥ ಸಂಕಟಗಳು ಬಂದರೂ ಅವುಗಳನ್ನು ಅವನು ಎದುರಿಸಿ ಅವುಗಳೊಳಗಿಂದ ಪಾರಾಗುವಂಥವನು ಇರುತ್ತಾನೆ. ಮಹೇಶ್ವರನು ದೀಕ್ಷಾಬದ್ಧನಾದಬಳಿಕ ಅವನು ತನ್ನ ಸ್ವಾರ್ಥವನ್ನು ಬದಿಗೊತ್ತಿ ಕೇವಲ ಸಮಾಜ ಹಿತದ ಕೆಲಸಗಳಲ್ಲಿ ತೊಡಗುವವನು ಇರುತ್ತಾನೆ. ಮಹೇಶ್ವರನು ಲಿಂಗದಲ್ಲಿ ಅತ್ಯಂತ ನಿಷ್ಠೆಯುಳ್ಳವನಾಗಿ ಅನ್ಯ ದೇವರುಗಳಿಗೆ ಎಂದೂ ನಮಸ್ಕರಿಸನು. ಅವನು ತನ್ನ ಧರ್ಮದ ಹಾದಿಯನ್ನು ಬಿಟ್ಟು ಕಂಡಕಂಡ ದೈವಗಳಿಗೆ ಕೈಮುಗಿಯುವದಿಲ್ಲ. ಅವನು ಡಾಂಭಿಕ ತನದ ವೃತ್ತಿಯವನಿರುವದಿಲ್ಲ. ಅವನ ಅಂತರಂಗವು ಶುದ್ಧವಾಗಿರುತ್ತದೆ. ಅವನು ಸೂತಕ, ಶಕುನ ತೀರ್ಥಯಾತ್ರೆಗಳನ್ನು ಮಾಡನು. ಅವನು ತನ್ನ ವ್ರತನಿಯಮಗಳಿಗೆ ಭಂಗವನ್ನು ಉಂಟುಮಾಡಿಕೊಳ್ಳುವದಿಲ್ಲ.

ಭಕ್ತ ಮಹೇಶ್ವರರ ಆಚರಣೆಗಳಲ್ಲಿ ಕೆಲವು ವ್ಯತ್ಯಾಸಗಳಿರುತ್ತವೆ. ಭಕ್ತನಿಗೆ ನೇಮ ವ್ರತಗಳ ಪ್ರತಿಬಂಧವು ಅಷ್ಟಿರುವದಿಲ್ಲ. ಆದರೆ ಮಹೇಶನು ಅವುಗಳನ್ನು ಆವಶ್ಯವಾಗಿ ಪಾಲಿಸಲೇಬೇಕು. ಮಹೇಶನಿಗೆ ಎಷ್ಟೇ ವಿಘ್ನಗಳು ಬಂದರೂ ಅವನು ತಾನು ಮುಂದೆ ಇಟ್ಟ ಹೆಜ್ಜೆಯನ್ನು ಹಿಂದೆ ಎಂದಿಗೂ ಇಡಲಾರನು. ಈ ಪ್ರಕಾರ ಭಕ್ತ ಮಹೇಶ್ವರರ ಆಚರಣೆಗಳು ಇರುತ್ತವೆ. ಉಭಯತರು, ಕ್ರಿಯಾಬದ್ಧರು ಇರುತ್ತಾರೆ. ಆದರೆ ಅವರಲ್ಲಿ ಮಹೇಶ್ವರನಾದವನು ದೃಢಬುದ್ಧಿಯುಳ್ಳವನಾಗಿ ಕೈಕೊಂಡ ಕಾರ್ಯವನ್ನು ಎಂದಿಗೂ ಬಿಡುವದಿಲ್ಲ.

## ಪ್ರಸಾದಿ

ಮಹೇಶ್ವರ ಸ್ಥಲವು ಆಧ್ಯಾತ್ಮಿಕ ಬೆಳವಣಿಗೆಯ ಎರಡನೆಯ ಮೆಟ್ಟಿಲು ಇದ್ದು ಪ್ರಸಾದಿ ಸ್ಥಲವು ಮೂರನೆಯದಾಗಿರುತ್ತದೆ. ಮಹೇಶ್ವರನು ನೇಮ ವ್ರತಾದಿಗಳಿಂದ ನಡೆದುಕೊಳ್ಳುತ್ತಾನೆ. ಪ್ರಸಾದಿಯು ಸಾವಧಾನ ಮತ್ತು ಸುಪ್ರಸನ್ನತೆಗಳಿಂದ ನಡೆಯುತ್ತಾನೆ. ಅವನು ಯಾವಾಗಲೂ ಮೃದು ಮಧುರ ವಚನಗಳನ್ನಾಡುವನು. ಅವನು ಯಾವಾಗಲೂ ಶಾಂತತೆಯಿಂದ ಶೋಭಿಸುತ್ತಾನೆ. ಮಹೇಶನು ಧೈರ್ಯದಿಂದ ಎದೆಗೊಟ್ಟು ಕಾರ್ಯಮಾಡುತ್ತಾನೆ.

ಆದರೆ ಪ್ರಸಾದಿಯು ತಾಳ್ಮೆಯಿಂದ ಕಷ್ಟಗಳನ್ನು ಜಾಣ್ಮೆಯಿಂದ ಎದುರಿಸುತ್ತ ಕಾರ್ಯಗಳನ್ನು ಸಿದ್ಧಿಗೆ ಒಯ್ಯುತ್ತಾನೆ. ಇವೆಲ್ಲವು ಪ್ರಸಾದಿಯ ಲಕ್ಷಣಗಳಾಗಿವೆ. ಇದಕ್ಕೆ ಸಾವಧಾನವೆಂದು ಷಟ್‌ಸ್ಥಲಶಾಸ್ತ್ರದಲ್ಲಿ ಹೆಸರು ಇರುತ್ತದೆ. ಇದು ಉತ್ಕ್ರಾಂತಿಯ ಚಿನ್ಹವಾಗಿದೆ. ಪ್ರಸಾದಿಯು ತಾನು ಮಾಡುವಂಥ ಪ್ರತಿಯೊಂದು ಕೆಲಸವನ್ನು ಈಶ್ವರಾರ್ಪಣ ಬುದ್ಧಿಯಿಂದ ಮಾಡುತ್ತಾನೆ. ಅವನಲ್ಲಿ ಅಹಂ ಭಾವವು ಎಳ್ಳಷ್ಟು ಇರುವದಿಲ್ಲ. ಅವನು ಎಲ್ಲವನ್ನು ಲಿಂಗ ತೃಪ್ತಿಗಾಗಿಯೇ ಮಾಡುತ್ತಾನೆ. ತನಗಾಗಿ ಮಾಡುವವರು ಬಹುಶಃ ಸಂಕಟ ಬಂದಾಗ ವ್ಯಥೆಪಡುವದುಂಟು. ಆದರೆ ಪ್ರಸಾದಿಸ್ಥಲದವರು ಪರಮಾತ್ಮನಿಗಾಗಿ ಎಲ್ಲ ಕಾರ್ಯಗಳನ್ನು ಮಾಡುವದರಿಂದ ಅವರು ಸುಖಿಗಳಾಗಿರುತ್ತಾರೆ. ಪ್ರಸಾದಿಯು ತೋರಿಕೆಗಾಗಿ ಉಣ್ಣುವದು, ಉಡುವದು, ತೊಡುವದು, ಮಾಡುತ್ತಿದ್ದರೂ ಅವೆಲ್ಲವುಗಳನ್ನು ಅವನು ಲಿಂಗತೃಪ್ತಿಗಾಗಿ ಮಾಡುತ್ತಾನೆ. ತನಗಾಗಿ ಮಾಡುವವನು ಯಾವಾಗಲೂ ಸಂಕಟ ಬಂದಾಗ ವ್ಯಥೆಪಡುತ್ತಾನೆ. ಆದರೆ ಪರಮಾತ್ಮನಿಗಾಗಿ ಮಾಡುವವನು ಸುಖಿಯಾಗಿರುತ್ತಾನೆ. ಭಗವದ್ಗೀತೆಯಲ್ಲಿ ಶ್ರೀಕೃಷ್ಣಪರಮಾತ್ಮನು ತನಗೆ ಅರ್ಪಿಸಿ, ಕಾರ್ಯಮಾಡಬೇಕೆಂದು ಅರ್ಜುನನಿಗೆ ಬೋಧಿಸುತ್ತಾನೆ. ಈ ಬೋಧೆಗೆ ಹಿಂದೂ ಧರ್ಮಶಾಸ್ತ್ರಕಾರರು ಬಹಳ ಮನ್ನಣೆಕೊಡುತ್ತಾರೆ. ಅಮರಗಣಾಧೀಶ್ವರರಾದರೂ ಇದೇ ತತ್ವವನ್ನು ಪ್ರಸಾದಿಸ್ಥಲದಲ್ಲಿ ಪಾಲಿಸುತ್ತ ಲಿಂಗಾರ್ಪಿತ ಭಾವವುಳ್ಳವರಾಗಿ ಅನುಭವಿಸಬೇಕೆಂದು ಪದೇ ಪದೇ ಅವರು ಹೇಳುತ್ತಾರೆ. ವೀರಶೈವ ಸಮಾಜದಲ್ಲಿ ಪ್ರಸಾದಿಗಳಿಗೆ ಉನ್ನತ ಸ್ಥಾನವಿದೆ. ಮೇಲ್ಕಂಡ ವಿಚಾರಗಳನ್ನು ಗಣಾಧೀಶ್ವರರು ಸಮರ್ಥಿಸುವದರಿಂದ ಪ್ರಸಾದಿ ಸ್ಥಲಕ್ಕೆ ಮನ್ನಣೆಯು ಉಂಟಾಗಿದೆ.

## ಪ್ರಾಣಲಿಂಗಿ ಸ್ಥಳ

ಸ್ವಾನುಭಾವವುಳ್ಳಾತನೇ ಪ್ರಾಣಲಿಂಗಿಯು. ಷಟ್‌ಸ್ಥಲ ಶಾಸ್ತ್ರದಲ್ಲಿ ಅನುಭಾವವು ಪ್ರಾಣಲಿಂಗಿಯ ಲಕ್ಷಣವೆಂದು ಹೇಳಲ್ಪಡುತ್ತದೆ. ಪ್ರತಿಯೊಬ್ಬನು ತನ್ನ ಜೀವವನ್ನು ಮೋಹಿಸುವದನ್ನು ನೋಡುತ್ತೇವೆ. ಪ್ರಾಣಲಿಂಗಿಯು ತನ್ನ ಜೀವದ ಮೇಲಿದ್ದಂತೆಯೇ ಅನ್ಯ ಜೀವಿಗಳನ್ನು ಸಹ ಪ್ರೀತಿಸುತ್ತಾನೆ. ಪ್ರಾಣಲಿಂಗಿಯು ತನ್ನ ಜೀವಿತದ ಮೇಲಿನ ಮೋಹವನ್ನು ತೊರೆದು ಸರ್ವ ಪ್ರಾಣಿಗಳನ್ನು ಪರವಸ್ತು ಅಂದರೆ ಪರಮಾತ್ಮನೋಪಾದಿಯಲ್ಲಿ ನೋಡುತ್ತಿರುವದರಿಂದ ಆತನಿಗೆ ಪ್ರಾಣಲಿಂಗಿ ಎಂಬ ಹೆಸರು ಬಂದಿದೆ. ಪ್ರಾಣಲಿಂಗಿಗೆ

ಪರೋಪಕಾರ ಭೂತದಯೆ ಇವೆರಡು ಮಹತ್ವದ ಗುಣಗಳಿರುತ್ತವೆ. ಪ್ರಾಣಲಿಂಗಿಯಲ್ಲಿ ಸಾಧುವರ್ಯ ಕ್ರೈಸ್ತನಂತಹ ಸೇವಾ ಬುದ್ಧಿಯೂ ಭಗವಾನ್ ಬುದ್ಧನಂತಹ ಭೂತದಯೆಯೂ ವಿರಾಜಿಸುತ್ತವೆ. ಪ್ರಾಣಲಿಂಗಿಯು ತನ್ನ ದಯಾರ್ದ್ರ ಹೃದಯದಿಂದ ವೈರಿಗಳನ್ನು ಸಹ ತನ್ನ ಪ್ರೇಮಪಾಶದಿಂದ ಬಂಧಿಸಿಕೊಳ್ಳುವನು. ಸಕಲ ಪ್ರಾಣಿಗಳಲ್ಲಿ ಅವನು ದಯೆಯುಳ್ಳವನಾಗಿ "ದಯವಿಲ್ಲದ ಧರ್ಮವದಾವುದಯ್ಯಾ? " ಎಂದೆನ್ನುತ್ತಾನೆ. ಪ್ರಾಣಲಿಂಗಿಗೆ ಪ್ರಾಣವೇ ಲಿಂಗವು, ಲಿಂಗವೇ ಪ್ರಾಣವಾಗಿರುತ್ತದೆ. ಪ್ರಸಾದಿಯು ತನ್ನ ಶಾಂತಸ್ವಭಾವದಿಂದ ಲಿಂಗದ ಪ್ರೀತಿಯನ್ನು ಸಂಪಾದಿಸುತ್ತಿದ್ದರೆ ಪ್ರಾಣಲಿಂಗಿಯು ತನ್ನ ಲಿಂಗವನ್ನು ತನ್ನ ಪ್ರಾಣದ ಸ್ವರೂಪವಾಗಿ ಮಾಡಿಕೊಂಡಿರುತ್ತಾನೆ. ಅವರಲ್ಲಿ ಸಾಮರಸ್ಯವಿದೆ. ಅನ್ಯರು ಕೇಡು ಬಗೆದರೆ ಪ್ರಸಾದಿಯು ಸಮಾಧಾನ ತಾಳುತ್ತಾನೆ. ಆದರೆ ಪ್ರಾಣಲಿಂಗಿಯು ಅವರನ್ನು ಕಾಡಿಹರಸುತ್ತಾನೆ. ಈ ಪ್ರಕಾರ ಪ್ರಾಣಲಿಂಗಿಯ ಆಚರಣೆಯು ಇರುವದರಿಂದ ಅವನ ಅಂತರಿಂದ್ರಿಯಗಳ ಚಲನೆಯು ಕ್ರಮೇಣ ಬಹಳ ಅದ್ಭುತವಾಗಹತ್ತುತ್ತವೆ. ಅವನಲ್ಲಿರುವ ಷಟ್‌ಚಕ್ರಗಳ ಗತಿಯು ಬಹಳ ಉನ್ನತವಾಗಹತ್ತುತ್ತದೆ. ಅವನ ಅಂತಃಶಕ್ತಿಯು ಬೆಳೆಯುತ್ತದೆ. ಇದರಿಂದ ಅವನ ಮೂಲಕ ಅನೇಕ ಸಿದ್ಧಿಗಳು ಸಹ ತಾವಾಗಿಯೇ ಜರಗಹತ್ತುತ್ತವೆ. ಯೋಗಾಭ್ಯಾಸ ಮಾಡುತ್ತಿರುವ ಬಲ್ಲಿದರು ಸಹ ಅವನಿಗೆ ಸಮಾನತೆಯನ್ನು ಹೊಂದುವದಿಲ್ಲ. ಈ ಪ್ರಕಾರ ಪ್ರಾಣಲಿಂಗಿಯು ಒಬ್ಬ ಉಚ್ಚ ಶಿವಾನುಭವಿ ಎಂದೆನಿಸಿಕೊಳ್ಳುತ್ತಾನೆ. ಸಿದ್ಧಿಗಳನ್ನು ಮಾಡುವ ಸಾಮರ್ಥ್ಯವು ಅವನಲ್ಲಿ ಉಂಟಾಗಿದ್ದರೂ ಅವನು ಆ ಸಾಮರ್ಥ್ಯವನ್ನು ಉಪಯೋಗಿಸುವದಿಲ್ಲ. ಈ ಪ್ರಕಾರ ಪ್ರಾಣಲಿಂಗಿಯು ಜಗತ್ತಿನಲ್ಲಿ ವ್ಯವಹರಿಸುತ್ತಾನೆ.

## ಶರಣ ಸ್ಥಲ

ಅರಿವುಳ್ಳಾತನೇ ಶರಣನು. ಅರಿವೆಂದರೆ ನಾನು ಯಾರು, ಎಲ್ಲಿಂದ ಬಂದೆ, ಯಾಕೆ ಬಂದೆ, ನನ್ನ ಮುಂದಿನ ಧ್ಯೇಯವೇನು, ಇದನ್ನು ಸಾರಾಸಾರ ವಿಚಾರಿಸುವ ವಿವೇಕವು. ಈ ವಿವೇಕದಿಂದ ಆತನಿಗೆ ಐಹಿಕರ ಸುಖದ ಅಸಾರತೆಯೂ ಪಾರಮಾರ್ಥ ಸುಖದ ಸತ್ಯತೆಯೂ ದೃಗ್ಗೋಚರವಾಗುತ್ತವೆ. ಆಗ ಅವನಿಗೆ ಶಿವಶರಣರು 'ಜ್ಞಾನಿ' ಎಂದು ಕರೆಯುತ್ತಾರೆ. ಶರಣನು ಸದಸದ್ವಿವೇಕ ಬುದ್ಧಿಯುಳ್ಳವನಾಗಿರುತ್ತಾನೆ. ಶರಣನು ಮಾನವ ಪ್ರಾಣಿಗಳಿಗೆ

ಹಿತವಾಗುವಂಥ ಅನುಭವದ ವಚನಾಮೃತವನ್ನು ರಚಿಸಿ ಹರಡುವನು. ಅವನು ತನ್ನ ಅನುಭವದಂತೆ ಆಚರಿಸುತ್ತಾನೆ. ಶರಣನಿಗೆ ಸುಖದುಃಖ ಸ್ತುತಿನಿಂದೆ ಇವು ಗಳ ಬಾಧೆಯಾಗುವದಿಲ್ಲ. ಅವನು ಚಿನ್ನವನ್ನು ಮಣ್ಣಿಗಿಂತ ಕಡೆ ಎಂದು ಕಾಣು ತ್ತಾನೆ. ಆದ್ದರಿಂದ ಅವನು ನಿರಾಶೆ ನಿರ್ಭಯವುಳ್ಳವನಾಗಿರುತ್ತಾನೆ. ಅವನ ಆಚಾರ ವಿಚಾರಗಳೆಲ್ಲವು ಪರಮಾತ್ಮನಲ್ಲಿ ಲೀನವಾಗಿರುತ್ತವೆ. ಶರಣನು ಲಿಂಗದಲ್ಲಿಯೇ ಮನಮಗ್ನನಾಗಿ ತಾನು ಸಾಕ್ಷಾತ್ ಲಿಂಗವೇ ಆಗುವ ಹವ ಣಿಕೆಯಲ್ಲಿರುತ್ತಾನೆ. ಅವನು ಯಾವಾಗಲೂ ಪರವಸ್ತುವಿನ ಸಂಸರ್ಗವನ್ನು ವಿಶೇಷವಾಗಿ ಹಂಬಲಿಸುತ್ತಾನೆ. ಹೀಗೆ ಶರಣನು ಪರಮಾತ್ಮನೊಡನೆ ಬೆಳೆದು ಸತಿಪತಿಭಾವವುಳ್ಳವನಾಗಿರುತ್ತಾನೆ. ಅವನು ಪರಮಾತ್ಮನನ್ನು ಆಶ್ರಯಿಸುವ ಹವಣಿಕೆಯಲ್ಲಿರುತ್ತಾನೆ. ಈ ಪ್ರಕಾರ ಶರಣನ ಶ್ರೇಷ್ಠ ಆಚರಣೆಯು ಇರು ತ್ತದೆ. ಬಸವಾದಿ ಪ್ರಮಥರ ಕಾಲದಲ್ಲಿ ಆಗಿಹೋದ ಮಹಾಪುರುಷರು ಇಂಥ ಶರಣಸ್ಥಲದವರೆಂದು ಪ್ರಸಿದ್ಧಿಯನ್ನು ಹೊಂದಿದ್ದಾರೆ. ಇವರೇ ವಚನ ವಾಂಙ್ಮಯವನ್ನು ಉಂಟುಮಾಡಿದ್ದಾರೆ. ಇವರನ್ನು ಬಹು ಜನ ಸಮಾಜವು ಅಮರಗಣಾಧೀಶ್ವರರೆಂದು ಕರೆದು ಮನ್ನಿಸುತ್ತ ಬಂದಿರುತ್ತದೆ.

## ಐಕ್ಯಸ್ಥಳ

ಅರಿವು ಪರಮಾತ್ಮನಲ್ಲಿ ಸಮರಸ ಭಾವವನ್ನು ಹೊಂದಿ ನಿರ್ಭಾವ ಹೊಂದಲು ಅದು ಐಕ್ಯಸ್ಥಲವು. ಅರುವಿನಿಂದ ಅಂಗ ಮತ್ತು ಲಿಂಗ ಇವು ಬೇರೆ ಬೇರೆ ಎಂಬ ಭಾವವನ್ನು ಅಳಿದು ಇವೆರಡೂ ಒಂದೇ ಎಂಬುದು ಉಂಟಾಗಬೇಕು. ಅಂಗವು ಮನದಲ್ಲಿ ಬೆರೆದು ಲಿಂಗವೇ ಆದಬಳಿಕ ಆತ ನಲ್ಲಿ ಅಂಗದ ಯಾವ ವಾಸನೆಯೂ ಉಳಿಯುವದಿಲ್ಲ. ಅಂಗದ ವಾಸನೆ ಇದ್ದ ವರು ಲಿಂಗೈಕ್ಯರಾಗಲಾರರು. ಅವರು ಪುನಃ ಪುನಃ ಭವದಲ್ಲಿ ಹುಟ್ಟಿಬರ ಬೇಕಾಗುತ್ತದೆ. ಲಿಂಗೈಕ್ಯನಿಗೆ ಪುನರ್ಜನ್ಮವಿಲ್ಲ. ಇಂಥವನು ವಾಸನೆಯನ್ನು ಅಳಿದು ಪರಮಾತ್ಮನಲ್ಲಿಯೇ ಲೀನ ಕೊಂಡತಕ್ಕದ್ದು.

ಲಿಂಗೈಕ್ಯನಾದಕೂಡಲೆ ಜೀವವು ಹೋಗಿಬಿಡುತ್ತದೆ. ಆದ್ದರಿಂದ ಲಿಂಗೈಕ್ಯ ಈ ಶಬ್ದವು ಸತ್ತಾಗಮಾತ್ರ ಉಪಯೋಗಿಸಲ್ಪಡುತ್ತದೆ.

ಅಂಗವು ಲಿಂಗದಲ್ಲಿ ಬೆರೆದಾಗ ಉಂಟಾದ ಸ್ಥಿತಿಯನ್ನು ವರ್ಣಿಸಲು ಯಾರಿಗೂ ಸಾಧ್ಯವಿಲ್ಲ.'ನಾವು ಅರಿತೆವು' ಎಂದು ಅನ್ನುವವರು ಶರಣರು.

# ವಿಷಯಾನುಕ್ರಮಣಿಕೆ

# ಶಿವಾನುಭವ

ವರ್ಷ ೨೮ | ಫೇಬ್ರುವರಿ ೧೯೫೪ | ಸಂಚಿಕೆ ೨

## ಷ. ಬ್ರ. ಭಕ್ತಸ್ಥಲವೂ ಭಗವದ್ಗೀತೆಯೂ

(ಲೇಖಕ:— ಶ್ರೀ. ಸಿ. ನಾ. ಮಹಾಂತಣ್ಣವರ. ಹುನೂರು.)

— ೦೦೦ —

ನಮ್ಮೀ ಭರತಖಂಡದ ಮುಖ್ಯ ಕೇಂದ್ರವಾದ ದಿಲ್ಲಿಯಲ್ಲಿ ನಮ್ಮ ನಮ್ಮ ಪ್ರಾಂತಗಳ ಹಿತಾಹಿತಗಳ ಬಗ್ಗೆ ವಿಚಾರಿಸುವ ಮುಖ್ಯ ಮಂತ್ರಿ ..ನ ಇರುವದಷ್ಟೇ! ಅದರಂತೆ ನಮ್ಮೀ ದೇಹದ ಹಿತಾಹಿತಗಳನ್ನು ವಹಿ ..ನ ಸರ್ವಾತ್ಮಕನು (ಜ್ಞಾನಾತ್ಮಕನು) ಇರುವನು ಆತನಿಗೂ ಮುಖ್ಯ ..ಕುಟಸ್ಥಾನವದೆ, ದಿಲ್ಲಿಯ ಮುಖ್ಯ ಕೇಂದ್ರದ ಕೆಳಗೆ ಮುಂಬಯಿ, ..ಪ್ರಸ, ಗುಜರಾಥ, ಕಾಶ್ಮೀರ ಸಂಯುಕ್ತಪ್ರಾಂತಾದಿಗಳು ಇರುವಂತೆ ..ದಲ್ಲಿ ಭ್ರೂಮಧ್ಯಸ್ಥಾನದ ಕೆಳಗೆ ದರ್ಪಣಾಕೃತಿ, ಅರ್ಧಚಂದ್ರಾ.., ಕುಂಡಲಾಕೃತಿ, ದಂಡಕಾಕೃತಿ, ತಾರಕಾಕೃತಿಯುಳ್ಳ ಪಂಚಸ್ಥಾನ ..ಂಟು. ಪ್ರತಿಯೊಂದು ಪ್ರಾಂತದ ವರ್ತಮಾನವು ವಿಮಾನ, ಫೋನ, ..ಯೋ, ತಾರಾಯಂತ್ರ, ಟಪಾಲಾದಿಗಳಿಂದ ಮುಖ್ಯ ಕೇಂದ್ರಸ್ಥಾನ ದಿಲ್ಲಿಗೆ ತಿಳಿಯುವಂತೆ ಶರೀರದಲ್ಲಿ ಪಂಚೇಂದ್ರಿಯಗಳ ಮುಖದಿಂದ ..ಸ್ಥಾನವಾದ ಜ್ಯೋತಿರಾಕೃತಿಯುಳ್ಳ ಭ್ರುಕುಟಿಮಧ್ಯ ಸ್ಥಾನಕ್ಕೆ ಸ್ಥಾನಗಳ ಸುದ್ದಿಯು ತಿಳಿಯಬರುವಂತೆ ಜಗದೀಶನು ರಚಿಸಿದ್ದಾನೆ. ಶರೀರದ ಸುಖದುಃಖಗಳನ್ನು ಅನುಭವಿಸಲು ಸರ್ವಾತ್ಮನ ಪ್ರತಿ ..ನಂತಿದ್ದ ಜೀವಾತ್ಮನೇ ಕಾರಣನಾಗಿದ್ದಾನೆ. ಆತನ ಗುಣಾವಗುಣ ಶೀಲ, ನೀತ್ಯಾನೀತಿ, ಕರ್ಮಾಕರ್ಮ ಜ್ಞಾನಾಜ್ಞಾನಗಳ ಮೇಲಿಂದ ..ಶ್ಚಿತ ಸುಖಗಳನ್ನು ನಿರ್ಣಯಿಸಬಹುದು. ಇಂಥಶಾಶ್ವತ, ಅವ್ಯಯ, ..

ನಿತ್ಯ ನಿರಾಮಯಾಂಶನಾದ ಆತ್ಮನ ಜ್ಞಾನವು ಯಾವ ಜೀವಾತ್ಮನಿಗೆ ಸಂಭವಿಸುವದೋ ಅಂಥ ಜೀವಾತ್ಮನು ಜಗನ್ಮಿಥ್ಯವ ಮಾಡಿ, ಅವನ್ನು ಮರೆದು ಜಗದಂತರ್ಯಾಮಿಯೊಳು ನಿಯೋಗಿಸಲು ನಡಕಟ್ಟಿ ನಿಲ್ಲುವನು. ಇದುವೇ ಪಾರಮಾರ್ಥಿಕ ಸ್ವರಾಜ್ಯವು.

ಇಂಥ ಸ್ವರಾಜ್ಯ ಸುಖವನ್ನು ಅನುಭವಿಸಿದ ಅನುಭಾವಿಗಳು "ಆದಿಶೂನ್ಯಂ ಮಧ್ಯಶೂನ್ಯಂ ಅಂತ್ಯಶೂನ್ಯಂ ನಿರಾಮಯಂ। ಸರ್ವಶೂನ್ಯಂ ನಿರಾಕಾರಂ ನಿಶ್ಶಬ್ದಂ ಬ್ರಹ್ಮ ಉಚ್ಯತೆ" ಎಂಬಂತೆ "ಪೃಥ್ವಿಗೆ ಮೈಯೆಲ್ಲಯೋನಿ, ಜಲಕ್ಕೆ ಶರೀರವೆಲ್ಲ ಕಾಲು, ಅಗ್ನಿಗೆ ಶರೀರವೆಲ್ಲ ಬಾಯಿ ವಾಯುವಿಗೆ ತನುವೆಲ್ಲ ಮೂಗು, ಆಕಾಶಕ್ಕೆ ಕಾಯವೆಲ್ಲ ಹೊಟ್ಟೆ, ಆತ್ಮನಿಗೆ ಮೈಯೆಲ್ಲ ಕಣ್ಣು, ಪೃಥ್ವಿಗೆ ಘ್ರಾಣವೇ ಇಂದ್ರಿಯ, ಗಂಧವೇ ವಿಷಯ. ಜಲಕ್ಕೆ ಜಿಹ್ವೆಯೇ ಇಂದ್ರಿಯ, ರುಚಿಯೇ ವಿಷಯ. ಅಗ್ನಿಗೆ ನೇತ್ರವೇ ಇಂದ್ರಿಯ ರೂಪೇ ವಿಷಯ, ವಾಯುವಿಗೆ ತ್ವಕ್ಕೇ ಇಂದ್ರಿಯ, ಸ್ಪರ್ಶನವೇ ವಿಷಯ. ಆಕಾಶಕ್ಕೆ ಶ್ರೋತ್ರವೇ ಇಂದ್ರಿಯ, ಶಬ್ದವೇ ವಿಷಯ. ಆತ್ಮನಿಗೆ ಮನಸ್ಸೇ ಇಂದ್ರಿಯ, ಭಾವವೇ ವಿಷಯ. ಪೃಥ್ವಿಯಲ್ಲಿರ್ಪ ಗಂಧಕ್ಕೆ ಘ್ರಾಣೇಂದ್ರಿಯವೇ ಕಾರಣವಾಯಿತು, ಜಲದೊಳಗಿರ್ಪ ರುಚಿಗೆ ಜಿಹ್ವೇಂದ್ರಿಯದಲ್ಲಿರ್ಪ ಅಗ್ನಿಯೇ ಕಾರಣವಾಯಿತು, ಅಗ್ನಿಯಲ್ಲಿರ್ಪ ರೂಪಿಗೆ ನೇತ್ರೇಂದ್ರಿಯದಲ್ಲಿರ್ಪ ಜಲವೇ ಕಾರಣವಾಯಿತ್ತು, ವಾಯುವಿನೊಳಗಿರ್ಪ ಸ್ಪರ್ಶನಕ್ಕೆ ತ್ವಗಿಂದ್ರಿಯದಲ್ಲಿರ್ಪ ಪೃಥ್ವಿಯೇ ಕಾರಣವಾಯಿತ್ತು, ಆಕಾಶದಲ್ಲಿಪ್ಪ ಶಬ್ದಕ್ಕೆ ಶ್ರೋತ್ರೇಂದ್ರಿಯದಲ್ಲಿರ್ಪ ಆಕಾಶವೇ ಕಾರಣವಾಯಿತ್ತು, ಇಂತಿಪ್ಪ ಭಾವದಲ್ಲಿ ಚಿತ್‌ಶಕ್ತಿ ಹುಟ್ಟಲು, ಮನವೇ ಮಹಾಲಿಂಗವಾಯಿತ್ತು, ಶಬ್ದದಲ್ಲಿ ಪರಾಶಕ್ತಿ ಹುಟ್ಟಲುಶ್ರೋತ್ರವೇ ಪ್ರಸಾದಲಿಂಗವಾಯಿತ್ತು. ಸ್ಪರ್ಶನದಲ್ಲಿ ಆದಿಶಕ್ತಿ ಹುಟ್ಟಲು ಸ್ಪರ್ಶನವೇ ಜಂಗಮಲಿಂಗವಾಯಿತ್ತು. ರೂಪಿನಲ್ಲಿ ಇಚ್ಛಾಶಕ್ತಿ ಹುಟ್ಟಲು ನೇತ್ರವೇ ಶಿವಲಿಂಗವಾಯಿತ್ತು. ರಸದಲ್ಲಿ ಜ್ಞಾನಶಕ್ತಿ ಹುಟ್ಟಲು ಜಿಹ್ವೆಯೇ ಗುರುಲಿಂಗವಾಯಿತ್ತು,- ಗಂಧದಲ್ಲಿ ಕ್ರಿಯಾಶಕ್ತಿ ಹುಟ್ಟಲು ಘ್ರಾಣವೇ ಆಚಾರಲಿಂಗವಾಯಿತ್ತು- ಗ್ರಹಿಸುವದೇ ಜ್ಞಾನೇಂದ್ರಿಯವಾಯಿತ್ತು- ಬಿಡುವದೇ ಕರ್ಮೇಂದ್ರಿಯವಾಯಿತ್ತು. ಇಂತಿಪ್ಪ ಇಂದ್ರಿಯಗಳೆಲ್ಲ ಲಿಂಗಸ್ವರೂಪಗಳಾಗಿ, ವಿಷಯಂಗಳೇ ಶಕ್ತಿಸ್ವರೂಪವಾದ ಮಹಾಪುರುಷನ ಸ್ವರೂಪಿನಲ್ಲಿ ಇಷ್ಟಲಿಂಗವು ನೆಲೆಗೊಂಡಲ್ಲಿ, ಆ ಲಿಂಗದ ಮೋಹವೇ ಪ್ರಾಣಲಿಂಗವಾಯಿತ್ತು, ಆ ಲಿಂಗದ ಹಾ

ಠವೇ ಭಾವಲಿಂಗವಾಯಿತ್ತು. ಭೂತಂಗಳೇ ಲಿಂಗಕ್ಕೆ ಅಂತರಂಗಗಳಾದವು. ಅಲ್ಲದೆ ಆ ಲಿಂಗಗಳೇ ಭೂತಂಗಳಿಗೆ ಚೈತನ್ಯವಾದ ಪ್ರಾಣಂಗಳಾಗಿ, ಆ ಲಿಂಗಂಗಳೇ ಶರಣನ ಲಿಂಗಂಗಳಾಗಿ, ಲಿಂಗಗಳೇ ಶಿವನಾಗಿ, ಶರಣನೇ ಸತಿ, ಲಿಂಗವೇ ಪತಿಯಾಗಿ, ಇಬ್ಬರ ಸಮರಸ ಭಾವವೇ ಪರಮಾನಂದ ರತಿ ಸುಖವಾಗಿ, ಆ ಸುಖದಲ್ಲಿ ಎರಡುಂ ಏಕವಾಗಿ ಭೇದದೋರದೆ ನಿಶ್ಶಬ್ದ ಬ್ರಹ್ಮವಾಗಿರ್ಪುದೇ, ಲಿಂಗೈಕ್ಯ ಕಾಣಾ ಮಹಾಘನ ದೊಡ್ಡದೇಶಿಕಾರ್ಯ ಗುರುಪ್ರಭುವೇ

ಜ್ಞೇಯಂ ಯತ್ಪ್ರವಕ್ಷ್ಯಾಮಿ ಯಜ್ಞಾತ್ವಾಽಮೃತಮಶ್ನುತೇ
ಅನಾದಿ ಮತ್ಪರಂ ಬ್ರಹ್ಮ ನ ಸತ್ತನ್ನಾಸದುಚ್ಯತೇ ||೧||

ಸರ್ವತಃ ಪಾಣಿ ಪಾದಂ ತತ್ಸರ್ವತೋಽಕ್ಷಿ ಶಿರೋಮುಖಂ|
ಸರ್ವತಃ ಶ್ರುತಿಮಲ್ಲೋಕೇ ಸರ್ವಮಾವೃತ್ಯ ತಿಷ್ಠತಿ ||೨||

ಬಹಿರಂತಶ್ಚ ಭೂತಾನಾಮಚರಂ ಚರಮೇವ ಚ|
ಸೂಕ್ಷ್ಮತ್ವಾತ್ತದವಿಜ್ಞೇಯಂ ದೂರಸ್ಥಂ ಚಾಂತಿಕೇ ಚ ತತ್ ||೩||

ಜ್ಯೋತಿಷಾಮಪಿ ತಜ್ಜ್ಯೋತಿಸ್ತಮಸಃ ಪರಮುಚ್ಯತೇ|
ಜ್ಞಾನಂ ಜ್ಞೇಯಂ ಜ್ಞಾನಗಮ್ಯಂ ಹೃದಿ ಸರ್ವಸ್ಯ ವಿಷ್ಠಿತಮ್ ||೪||

ಭಗವದ್ಗೀತೆಯಾದರೂ ಬ್ರಹ್ಮ ಸ್ವರೂಪವನ್ನುಸರಿ ಆ ಬ್ರಹ್ಮವು ಸರ್ವರ ಹೃದಯದಲ್ಲಿ ವಿಶಿಷ್ಟ ರೂಪದಿಂದ ಅಧಿಷ್ಠಿತವಾಗಿರುವದೆಂಬುದನ್ನು ಹೇಳುತ್ತದೆ.

ಶಿವಶರಣರಣರಾದರೂ " ನೋಟವೇ ಕೂಟ, ಕೂಟವೇ ಪ್ರಾಣ, ಪ್ರಾಣವೇಏಕ, ಏಕವೇ ಸಮರಸ, ಸಮರಸವೇ ಲಿಂಗ, ಲಿಂಗವೇ ಪರಬ್ರಹ್ಮ ಪರಬ್ರಹ್ಮವೇ ಪೂರ್ಣವೆಂಬದಾಗಿ ಹೇಳುವರು.

ಪರಂ ವಿಜ್ಞಾನಮಾನಂದಂ ಕಲಾಪಿಂಡಸ್ತಥೈವ ಚ|
ಮೂರ್ತಿಬ್ರಹ್ಮ ತಥಾ ಷಟ್ಕಂ ಬ್ರಹ್ಮಭೇದಮುದಾಹೃತಂ||

ಒಂದಾಗಿರುವ ಪರಬ್ರಹ್ಮವು ಪರ (ಮಹಾಲಿಂಗ), ವಿಜ್ಞಾನ (ಪ್ರಸಾದಲಿಂಗ), ಆನಂದ (ಜಂಗಮಲಿಂಗ), ಕಲಾ (ಶಿವಲಿಂಗ), ಪಿಂಡ (ಗುರುಲಿಂಗ), ಮೂರ್ತಿಬ್ರಹ್ಮ (ಆಚಾರಲಿಂಗ) ವೆಂದು ಆರು ಭೇದವುಳ್ಳದ್ದಾಯಿತು.

ಇದೇ ಸಂಗತಿಯನ್ನು ಕುರಿತು ಒಬ್ಬಾನೊಬ್ಬ ಅನುಭಾವಿಯು—

ಆಗಮಾಚಾರಲಿಂಗಂಚ ಆತ್ಮಂಚ ಗುರುಲಿಂಗಕಂ।
ಶತ್ಪ್ರಾಣ ಶಿವಲಿಂಗಂಚ ಇಂತಿಯಂ ಚರಲಿಂಗಕಂ ॥೧॥
ವಿಷಯಂಚ ಪ್ರಸಾದಾಖ್ಯಂ ತೃಪ್ತಿಶ್ಚ ಮಹಾಲಿಂಗಕಂ।
ಸರ್ವಾಂಗ ಷಡು ಲಿಂಗಂಚ ಷಟ್‌ಸ್ಥಲಿ ಬ್ರಹ್ಮ ಉಚ್ಯತೇ ॥೨॥

ಈ ಪ್ರಕಾರ ಷಟ್‌ಸ್ಥಲ ಬ್ರಹ್ಮಭೇದವನ್ನು ಮಾಡುವನು. ಆ ಬ್ರಹ್ಮ ಭೇದಗಳ ವಿವರ:—

ಪರಬ್ರಹ್ಮಕ್ಕೆ ಆತ್ಮ ತತ್ವಹುಟ್ಟಿತ್ತು. ಆತ್ಮತತ್ವಕ್ಕೆ ಜ್ಯೋತಿರಾಕೃತಿಯಾಯಿತ್ತು. ಆ ಜ್ಯೋತಿಕೃತಿಗೆ ಓಂಕಾರ ಪ್ರಣವು ಪುಟ್ಟಿತ್ತು ಆ ಪ್ರಣವುಕ್ಕೆ ಆಜ್ಞಾಚಕ್ರವಾಯಿತ್ತು ಆಜ್ಞಾಚಕ್ರಕ್ಕೆ ಐಕ್ಯವೆಂಬ ಅಂಗವಾಯಿತ್ತು, ಐಕ್ಯವೆಂಬ ಅಂಗಕ್ಕೆ ಸದ್ಭಾವ ಹಸ್ತವಾಯಿತ್ತು. ಸದ್ಭಾವ ಹಸ್ತಕ್ಕೆ ಮಹಾಲಿಂಗವಾಯಿತ್ತು. ಆ ಮಹಾಲಿಂಗಕ್ಕೆ ಹೃದಯ ಎಂಬ ಮುಖವಾಯಿತ್ತು. ಆ ಹೃದಯ ಎಂಬ ಮುಖಕ್ಕೆ ಚಿತ್ ಎಂಬ ಶಕ್ತಿಯಾದಳು. ಆ ಚಿತ್‌ಶಕ್ತಿಗೆ ಸಮರಸ ಭಕ್ತಿಯಾಯಿತ್ತು. ಆ ಸಮರಸ ಭಕ್ತಿಗೆ ತೃಪ್ತಿ ಪದಾರ್ಥವಾಯಿತ್ತು ಆ ತೃಪ್ತಿ ಪದಾರ್ಥಕ್ಕೆ ಸುತೃಪ್ತಿ ಪ್ರಸಾದವಾಯಿತ್ತು. ಇಂತೀ ೧೩ ಸಕೀಲಂಗಳು ಮನದಲ್ಲಿ ಸೋಂಕಿದರೆ ಅರಿವುದೇ ಶಾಂತ್ಯಾತೀತೋತ್ತರ ಕಲೆಯಾಯಿತ್ತು. ವಿಚಾರಿಸುವಲ್ಲಿಗೆ ಮಹಾಸಾದಾಖ್ಯವಾಯಿತ್ತು. ನಿಶ್ಚಯಿಸಿದಲ್ಲಿಗೆ ಅಖಂಡವೆಂಬ ಲಕ್ಷಣವಾಯಿತ್ತು. ದೃಢೀಕರಿಸುವಲ್ಲಿಗೆ ಮಹಾ ಸಂಜ್ಞೆಯಾಯಿತ್ತು. ಶಬ್ದವಿಟ್ಟು ನುಡಿವುದೇ ಗಾಯತ್ರೀ ವೇದವಾಯಿತ್ತು, ಇಂತೀ ಹದಿನೆಂಟು ಸಕೀಲಂಗಳ ಬಲ್ಲ ಮಹಾತ್ಮಂಗೆ ನಮೋ ನಮೋ ಎಂಬೆ ಕಾಣಾ ಮಹಾ ಸತ್ಯಜಗತ್ಪ್ರಿಯ ಸಂಗನಬಸವೇಶ್ವರ ಪ್ರಭುವೇ

ವಿಜ್ಞಾನ ಬ್ರಹ್ಮಕ್ಕೆ ಆಕಾಶ ತತ್ವಹುಟ್ಟಿತ್ತು. ಆಕಾಶ ತತ್ವಕ್ಕೆ ದರ್ಪಣಾಕೃತಿಯಾಯಿತ್ತು. ಆ ದರ್ಪಣಾಕೃತಿಗೆ ಯಕಾರ ಪ್ರಣವುವಾಯಿತ್ತು. ಆ ಯಕಾರ ಪ್ರಣಮಕ್ಕೆ ವಿಶುದ್ಧಿ ಚಕ್ರವಾಯಿತ್ತು. ಆ ವಿಶುದ್ಧಿ ಚಕ್ರಕ್ಕೆಶರಣನೆಂಬ ಅಂಗವಾಯಿತ್ತು. ಆ ಶರಣನೆಂಬ ಅಂಗಕ್ಕೆ ಸುಜ್ಞಾನವೆಂಬ ಹಸ್ತವಾಯಿತ್ತು. ಆಸುಜ್ಞಾನ ಹಸ್ತಕ್ಕೆ ಪ್ರಸಾದ ಲಿಂಗವಾಯಿತ್ತು. ಆ ಪ್ರಸಾದ ಲಿಂಗಕ್ಕೆ ಶ್ರೋತ್ರವೆಂಬ ಮುಖವಾಯಿತ್ತು. ಆ ಶ್ರೋತ್ರವೆಂಬ ಮುಖಕ್ಕೆ ಪರಾಶಕ್ತಿಯಾದಳು. ಆ ಪರಾಶಕ್ತಿಗೆ ಆನಂದ ಭಕ್ತಿಯಾಯಿತ್ತು. ಆ

ಆನಂದಭಕ್ತಿಗೆ ಶಬ್ದ ಪದಾರ್ಥವಾಯಿತ್ತು. ಆ ಶಬ್ದ ಪದಾರ್ಥಕ್ಕೆ ಸುಶಬ್ದ ಪ್ರಸಾದವಾಯಿತ್ತು. ಇಂತೀ ೧೩ ಸಕೀಲಂಗಳು ಮನದಲ್ಲಿ ಸೋಂಕಿದರೆ ಅರಿವುದೇ ಶಾಂತ್ಯತೀತವೆಂಬ ಕಲೆಯಾಯಿತ್ತು. ವಿಚಾರಿಸಿದಲ್ಲಿಗೆ, ಶಿವ ಸಾದಾಖ್ಯವಾಯಿತ್ತು, ನಿಶ್ಚಯಿಸಿದಲ್ಲಿಗೆ ಪರಿಪೂರ್ಣವೆಂಬ ಲಕ್ಷಣವಾಯಿತ್ತು, ದೃಢೀಕರಿಸಿದಲ್ಲಿಗೆ ಅನಾದಿವತ್ ಎಂಬ ಸಂಜ್ಞೆಯಾಯಿತ್ತು. ಶಬ್ದ ವಿಟ್ಟು ನುಡಿವುದೇ ಅಜಪವೇದವಾಯಿತ್ತು. ಇಂತೀ ಹದಿನೆಂಟು ಭೇದ ಸಕೀಲಂಗಳ ಬಲ್ಲ ಮಹಾತ್ಮಂಗೆ ನಮೋ ನಮೋ ಎನುತಿರ್ದೆ ಕಾಣಾ ಮಹಾಸತ್ಯ ಜಗತ್ಪ್ರಿಯ ಸಂಗನಬಸವೇಶ್ವರ ಪ್ರಭುವೇ||

ಆನಂದ ಬ್ರಹ್ಮಕ್ಕೆ ವಾಯುತತ್ವ ಹುಟ್ಟಿತ್ತು, ಆ ವಾಯುತತ್ವಕ್ಕೆ ಅರ್ಧ ಚಂದ್ರಾಕೃತಿಯಾಯಿತ್ತು. ಆ ಅರ್ಧಚಂದ್ರಾಕೃತಿಗೆ ವಕಾರ ಪ್ರಣವವಾಯಿತ್ತು. ಆ ವಕಾರ ಪ್ರಣವಕ್ಕೆ ಅನಾಹತ ಚಕ್ರವಾಯಿತ್ತು. ಆ ಅನಾಹತ ಚಕ್ರಕ್ಕೆ ಪ್ರಾಣಲಿಂಗಿ ಎಂಬ ಅಂಗವಾಯಿತ್ತು. ಆ ಪ್ರಾಣಲಿಂಗಿ ಎಂಬ ಅಂಗಕ್ಕೆ ಸುಮನ ಹಸ್ತವಾಯಿತ್ತು. ಆ ಸುಮನ ಹಸ್ತಕ್ಕೆ ಜಂಗಮ ಲಿಂಗವಾಯಿತ್ತು. ಆ ಜಂಗಮಲಿಂಗಕ್ಕೆ ತ್ವಗಿಂದ್ರಿಯ ಮುಖವಾಯಿತ್ತು. ಆ ತ್ವಗಿಂದ್ರಿಯ ಮುಖಕ್ಕೆ ಆದಿಶಕ್ತಿಯಾದಳು. ಆ ಶಕ್ತಿಗೆ ಅನುಭಾವ ಭಕ್ತಿಯಾಯಿತ್ತು. ಆ ಅನುಭಾವಭಕ್ತಿಗೆ ಸ್ಪರ್ಶನ ಪದಾರ್ಥವಾಯಿತ್ತು. ಆ ಸ್ಪರ್ಶನ ಪದಾರ್ಥಕ್ಕೆ ಸುಸ್ಪರ್ಶನ ಪ್ರಸಾದವಾಯಿತ್ತು. ಇಂತೀ ೧೩ ಸಕೀಲಂಗಳು ಮನದಲ್ಲಿ ಸೋಂಕಿದರೆ ಅರಿವುದೇ ಶಾಂತಿ ಕಲೆಯಾಯಿತ್ತು. ವಿಚಾರಿಸಿದಲ್ಲಿಗೆ ಅಮೂರ್ತ ಸಾದಾಖ್ಯವಾಯಿತ್ತು ನಿಶ್ಚಯಿಸಿದಲ್ಲಿಗೆ ನಿತ್ಯವೆಂಬ ಲಕ್ಷಣವಾಯಿತ್ತು. ದೃಢೀಕರಿಸಿದಲ್ಲಿಗೆ ಲಿಂಗಕ್ಷೇತ್ರವೆಂಬ ಸಂಜ್ಞೆಯಾಯಿತ್ತು. ಶಬ್ದವಿಟ್ಟು ನುಡಿವುದೇ ಅಥರ್ವಣ ವೇದವಾಯಿತ್ತು. ಇಂತೀ ೧೮ ಸಕೀಲಂಗಳ ಬಲ್ಲ ಮಹಾತ್ಮಂಗೆ ನಮೋ ನಮೋಎಂಬೆ ಕಾಣಾ ಮಹಾಸತ್ಯ ಜಗತ್ಪ್ರಿಯ ಸಂಗನಬಸವೇಶ್ವರ ಪ್ರಭುವೇ||

ಕಲಾ ಬ್ರಹ್ಮದಿಂದ ಅಗ್ನಿತತ್ವ ಹುಟ್ಟಿತ್ತು. ಆ ಅಗ್ನಿತತ್ವಕ್ಕೆ ಕುಂಡಲಾಕೃತಿಯಾಯಿತ್ತು. ಆ ಕುಂಡಲಾಕೃತಿಗೆ ಶಿಕಾರ ಪ್ರಣವವಾಯಿತ್ತು. ಶಿಕಾರ ಪ್ರಣವಕ್ಕೆ ಮಣಿಪೂರಕ ಚಕ್ರವಾಯಿತ್ತು. ಆ ಮಣಿಪೂರಕ ಚಕ್ರಕ್ಕೆ ಪ್ರಸಾದಿ ಎಂಬ ಅಂಗವಾಯಿತ್ತು. ಆ ಪ್ರಸಾದಿ ಎಂಬ ಅಂಗಕ್ಕೆ ನಿರಹಂಕಾರ ಹಸ್ತವಾಯಿತ್ತು ಆ ನಿರಹಂಕಾರ ಹಸ್ತಕ್ಕೆ ಶಿವಲಿಂಗವಾಯಿತ್ತು, ಆ ಶಿವಲಿಂಗಕ್ಕೆ ನೇತ್ರೇಂದ್ರಿಯ ಮುಖವಾಯಿತ್ತು. ಆ ನೇತ್ರೇಂದ್ರಿಯಕ್ಕೆ

ಇಚ್ಛಾ ಶಕ್ತಿಯಾದಳು. ಆ ಇಚ್ಛಾಶಕ್ತಿಗೆ ಸಾವಧಾನವೆಂಬ ಭಕ್ತಿಯಾಯಿತ್ತು ಆ ಸಾವಧಾನ ಭಕ್ತಿಗೆ ರೂಪು ಪದಾರ್ಥವಾಯಿತ್ತು. ಆ ರೂಪು ಪದಾರ್ಥಕ್ಕೆ ಸುರೂಪು ಪ್ರಸಾದವಾಯಿತ್ತು. ಇಂತೀ ೧೩ ಸಕೀಲಂಗಳು ಮನದಲ್ಲಿ ಸೋಂಕಿದರೆ ಅರಿವುದೇ ವಿದ್ಯಾಕಲೆಯಾಯಿತ್ತು ವಿಚಾರಿಸಿದಲ್ಲಿಗೆ ಮೂರ್ತಿ ಸಾದಾಖ್ಯವಾಯಿತ್ತು. ನಿಶ್ಚಯಿಸಿದಲ್ಲಿಗೆ ಆನಂದವೆಂಬ ಲಕ್ಷಣವಾಯಿತ್ತು. ದೃಢೀಕರಿಸಿವಲ್ಲಿಗೆ ಶರೀರಸ್ಥವೆಂಬ ಸಂಜ್ಞೆಯಾಯಿತ್ತು. ಶಬ್ದವಿಟ್ಟು ನುಡಿವುದೇ ಸಾಮವೇದವಾಯಿತ್ತು. ಇಂತಿ ೧೮ ಸಕೀಲಂಗಳ ಬಲ್ಲ ಮಹಾತ್ಮಂಗೆ ನಮೋ ನಮೋ ಎಂಬೆನು ಕಾಣಾ ಮಹಾಸತ್ಯ ಜಗತ್ಪ್ರಿಯ ಸಂಗನಬಸವೇಶ್ವರ ಪ್ರಭುವೇ॥

ಪಿಂಡಬ್ರಹ್ಮದಿಂದ ಅಮೃತ (ಅಪ್ಪು) ತತ್ವಹುಟ್ಟಿತ್ತು, ಆ ಅಮೃತ ತತ್ವಕ್ಕೆ ದಂಡಾಕೃತಿಯಾಯಿತ್ತು. ಈ ದಂಡಾಕೃತಿಗೆ ಮಕಾರ ಪ್ರಣವವಾಯಿತ್ತು. ಆ ಮಕಾರ ಪ್ರಣವಕ್ಕೆ ಸ್ವಾಧಿಷ್ಠಾನ ಚಕ್ರವಾಯಿತ್ತು, ಆ ಸ್ವಾಧಿಷ್ಠಾನ ಚಕ್ರಕ್ಕೆ ಮಹೇಶ್ವರನೆಂಬ ಅಂಗವಾಯಿತ್ತು, ಆ ಮಹೇಶ್ವರನೆಂಬ ಅಂಗಕ್ಕೆ ಸುಬುದ್ಧಿ ಹಸ್ತವಾಯಿತ್ತು. ಆ ಸುಬುದ್ಧಿ ಹಸ್ತಕ್ಕೆ ಗುರುಲಿಂಗವಾಯಿತ್ತು. ಆ ಗುರುಲಿಂಗಕ್ಕೆ ಜಿಹ್ವೆ ಎಂಬ ಮುಖವಾಯಿತ್ತು ಆ ಜಿಹ್ವೆ ಎಂಬ ಮುಖಕ್ಕೆ ಜ್ಞಾನಶಕ್ತಿಯಾದಳು. ಆ ಜ್ಞಾನಶಕ್ತಿಗೆ ನೈಷ್ಠಿಕಾ ಭಕ್ತಿಯಾಯಿತ್ತು. ಆ ನೈಷ್ಠಿಕಾ ಭಕ್ತಿಗೆ ರುಚಿ ಪದಾರ್ಥವಾಯಿತ್ತು. ಆ ರುಚಿ ಪದಾರ್ಥಕ್ಕೆ ಸುರುಚಿ ಪ್ರಸಾದವಾಯಿತ್ತು. ಇಂತೀ ೧೩ ಸಕೀಲಂಗಳು ಮನದಲ್ಲಿ ಸೋಂಕಿದರೆ ಅರಿವುದೇ ಪ್ರತಿಷ್ಠಾ ಕಲೆಯಾಯಿತ್ತು. ವಿಚಾರಿಸಿದಲ್ಲಿಗೆ ಕರ್ತೃ ಸಾದಾಖ್ಯವಾಯಿತ್ತು. ನಿಶ್ಚಯಿಸಿದಲ್ಲಿಗೆ ಚಿತ್ತೆಂಬ ಲಕ್ಷಣವಾಯಿತ್ತು. ದೃಢೀಕರಿಸಿದಲ್ಲಿಗೆ ಗೂಢವೆಂಬ ಸಂಜ್ಞೆಯಾಯಿತ್ತು. ಶಬ್ದವಿಟ್ಟು ನುಡಿವುದೇ ಯಜುರ್ವೇದವಾಯಿತ್ತು. ಇಂತೀ ೧೮ ತೆರದ ಸಕೀಲಂಗಳ ಬಲ್ಲ ಮಹಾತ್ಮಂಗೆ ನಮೋ ನಮೋ ಎಂಬೆನಯ್ಯ ಮಹಾನಿತ್ಯ ಜಗತ್ಪ್ರಿಯ ಸಂಗನಬಸವೇಶ್ವರ ಪ್ರಭುವೇ॥

ಮೂರ್ತಿ ಬ್ರಹ್ಮದಿಂದ ಪೃಥ್ವಿ ತತ್ವಹುಟ್ಟಿತ್ತು. ಆ ಪೃಥ್ವಿತತ್ವಕ್ಕೆ ಚಾರಕಾಕೃತಿಯಾಯಿತ್ತು. ಆ ಚಾರಕಾಕೃತಿಗೆ ನಕಾರವೆಂಬ ಪ್ರಣವವಾಯಿತ್ತು. ಆ ನಕಾರ ಪ್ರಣವಕ್ಕೆ ಆಧಾರ ಚಕ್ರವಾಯಿತ್ತು. ಆ ಆಧಾರ ಚಕ್ರಕ್ಕೆ ಭಕ್ತನೆಂಬ ಅಂಗವಾಯಿತ್ತು ಆ ಭಕ್ತನೆಂಬ ಅಂಗಕ್ಕೆ ಸುಚಿತ್ತ ಹಸ್ತವಾಯಿತ್ತು. ಆ ಸುಚಿತ್ತ ಹಸ್ತಕ್ಕೆ ಆಚಾರ ಲಿಂಗವಾಯಿತ್ತು. ಆ

ಆಚಾರಲಿಂಗಕ್ಕೆ ಘ್ರಾಣೇಂದ್ರಿಯವೆಂಬ ಮುಖವಾಯಿತ್ತು. ಆ ಘ್ರಾಣೇಂದ್ರಿಯ ಮುಖಕ್ಕೆ ಕ್ರಿಯಾಶಕ್ತಿಯಾದಳು. ಆ ಕ್ರಿಯಾಶಕ್ತಿಗೆ ಶ್ರದ್ಧಾಭಕ್ತಿಯಾದಳು. ಆ ಶ್ರದ್ಧಾಭಕ್ತಿಗೆ ಗಂಧಪದಾರ್ಥವಾಯಿತ್ತು. ಆ ಗಂಧ ಪದಾರ್ಥಕ್ಕೆ ಸುಗಂಧ ಪ್ರಸಾದವಾಯಿತ್ತು. ಇಂತೀ ೧೩ ಸಕೀಲಂಗಳು ಮನದಲ್ಲಿ ಸೋಂಕಿದರೆ ಅರಿವುದು ನಿವೃತ್ತಿಯಾಯಿತ್ತು. ವಿಚಾರಿಸಿದಲ್ಲಿಗೆ ಕರ್ಮಸಾದಾಖ್ಯವಾಯಿತ್ತು, ನಿಶ್ಚಯಿಸಿದಲ್ಲಿಗೆ ಸತ್ತುವೆಂಬ ಲಕ್ಷಣವಾಯಿತ್ತು. ದೃಢೀಕರಿಸಿದಲ್ಲಿಗೆ ಪರವೆಂಬ ಸಂಜ್ಞೆಯಾಯಿತ್ತು. ಶಬ್ದವಿಟ್ಟು ನ.ಡಿವುದೇ ಋಗ್ವೇದವಾಯಿತ್ತು. ಇಂತೀ ಹದಿನೆಂಟು ತೆರದ ಸಕೀಲಂಗಳ ಬಲ್ಲ ಮಹಾತ್ಮಂಗೆ ನಮೋ ನಮೋ ಎನುತಿರ್ದೆನು ಕಾಣಾ ಮಹಾಸತ್ಯ ಜಗತ್ಪ್ರಿಯ ಸಂಗನಬಸವೇಶ್ವರ ಪ್ರಭುವೇ||

ಸರ್ವಾಚಾರ ಸಂಪತ್ತಿನಾಚರಣೆಯ ಉದಯಾಧಾರ ವಿಶ್ರಾಂತಿಗೆ ಮೂಲಕಾರಣವಾದ ನಿಃಕಲ ಬ್ರಹ್ಮವು ತಾನೊಂದೇ ತನ್ನ ಚಿಚ್ಛಕ್ತಿಯ ನೆನಹು ಮಾತ್ರದಿಂದ ಅಂಗಲಿಂಗವೆಂಬ ಉಭಯ ಸ್ವರೂಪವನು ತಳೆಯಿತು. ಆ ಅಂಗದಲ್ಲಿ ಅಖಂಡಭಕ್ತಿಯೆಂಬುದು ಪುಟ್ಟಿತು. ಆ ಅಂಗಲಿಂಗ ಭಕ್ತಿವಿಡಿದು ಆಚರಿಸುತ್ತಿದ್ದ ಹಾಗೆ, ಒಂದು ಲಿಂಗವೇ ಮುಂದಕ್ಕಾಚರಣೆಯನು ಕುರಿತು ಇಷ್ಟಪ್ರಾಣ ಭಾವವೆಂಬ ತ್ರಿವಿಧ ಲಿಂಗಂಗಳಾಯಿತು. ಆ ಲಿಂಗಂಗಳ ಬಳವಿಡಿದು ಅಖಂಡ ಭಕ್ತಿ ಎಂಬುದು ತಾನೊಂದೇ ಕ್ರಿಯಾಭಕ್ತಿ, ಜ್ಞಾನಭಕ್ತಿ, ಮಹಾಜ್ಞಾನ ಭಕ್ತಿಗಳೆಂಬ ಮೂರು ತೆರನಾಯಿತು. ಹೀಗೆ ಒಂದಂಗ ಲಿಂಗ ಭಕ್ತಿಗಳೇ ತ್ರಿವಿಧಾಂಗ ಲಿಂಗ ಭಕ್ತಿಗಳಾದವು. ಅದು ಕಾರಣವಾಗಿ ಆ ತ್ರಿವಿಧಾಂಗದಲ್ಲಿ ತ್ರಿವಿಧ ಲಿಂಗ ಸಂಬಂಧವ ಮಾಡಿಕೊಂಡು ತ್ರಿವಿಧ ಭಕ್ತಿವಿಡಿದು ಆಚರಿಸುತ್ತಿರ್ದ ಹಾಗೆ ಆ ತ್ರಿವಿಧ ಲಿಂಗಾಂಗಗಳೇ ಮುಂದಕ್ಕಾಚರಣೆಯನು ಕುರಿತು ಷಡ್ವಿಧ ಲಿಂಗಂಗಳಾದವು. ಅದು ಹೇಗೆಂದೊಡೆ ಭಾವಲಿಂಗವೆಂಬುದು ತಾನೊಂದೇ ಮಹಾಲಿಂಗ, ಪ್ರಸಾದಲಿಂಗವೆಂದು ಎರಡು ತೆರನಾಯಿತು. ಪ್ರಾಣಲಿಂಗವೆಂಬುದು ತಾನೊಂದೇ ಜಂಗಮಲಿಂಗ ಶಿವಲಿಂಗವೆಂಬ ಎರಡು ಭೇದವಾಯಿತು. ಇಷ್ಟಲಿಂಗವೆಂಬುದು ತಾನೊಂದೇ ಗುರುಲಿಂಗ ಆಚಾರಲಿಂಗವೆಂಬ ಎರಡು ಪ್ರಕಾರವಾಯಿತು. ಆ ಲಿಂಗಗಳ ಬಳಿವಿಡಿದು ತ್ರಿವಿಧ ಅಂಗಗಳೇ ಷಡ್ವಿಧ ಅಂಗಗಳಾದವು. ಅದು ಹೇಗೆಂದೊಡೆ ಯೋಗಾಂಗವೆಂಬುವದು ತಾನೊಂದೇ ಐಕ್ಯ ಶರಣನೆಂದು ಎರಡು ತೆರನಾಯಿತು.

ಭೋಗಾಂಗವೆಂಬುವದು ತಾನೊಂದೇ ಪ್ರಾಣಲಿಂಗಿ ಪ್ರಸಾದಿಗಳೆಂಬ ದ್ವಿವಿಧವಾಯಿತು. ತ್ಯಾಗಾಂಗವೆಂಬುವದು ತಾನೊಂದೇ ಮಹೇಶ್ವರ ಭಕ್ತರೆಂಬ ಎರಡು ಭೇದವಾಯಿತು. ಆ ಅಂಗಗಳ ಬಳಿವಿಡಿದು ತ್ರಿವಿಧ ಭಕ್ತಿಗಳೇ ಷಡ್ವಿಧ ಭಕ್ತಿಗಳಾದವು. ಅದು ಹೇಗೆಂದೊಡೆ ಮಹಾಜ್ಞಾನ ಭಕ್ತಿಯೆಂಬುದು ತಾನೊಂದೇ ಸಮರಸ ಭಕ್ತಿ, ಆನಂದ ಭಕ್ತಿಗಳೆಂಬ ಎರಡು ತೆರನಾಯಿತು. ಜ್ಞಾನ ಭಕ್ತಿಯೆಂಬುದು ತಾನೊಂದೇ ಅನುಭಾವಭಕ್ತಿ ಸಾವಧಾನ ಭಕ್ತಿಗಳೆಂಬ ದ್ವಿವಿಧವಾಯಿತು. ಕ್ರಿಯಾಭಕ್ತಿಯೆಂಬುದು ತಾನೊಂದೇ ನೈಷ್ಠಿಕಾಭಕ್ತಿ, ಶ್ರದ್ಧಾ ಭಕ್ತಿಗಳೆಂಬ ಎರಡು ಭೇದವಾಯಿತು, ಹೀಗೆ ತ್ರಿವಿಧ ಭಕ್ತಿಗಳೇ ಷಡ್ವಿಧ ಭಕ್ತಿಗಳಾದವು. ಈ ರೀತಿಯಲ್ಲಿ ಷಡ್ವಿಧ ಅಂಗಲಿಂಗ ಭಕ್ತಿಗಳಾದವು. ಅದು ಕಾರಣವಾಗಿ ಷಟ್‌ಸ್ಥಳವೆಂಬೊಡೆ, ಷಡ್ವಿಧಾಂಗ, ಬ್ರಹ್ಮನೆಂಬೊಡೆ ಷಡ್ವಿಧಲಿಂಗ. ಒಡಗೂಡಿಕನೆಂದಡೆ ಈ ಷಡಂಗದಲ್ಲಿ ಷಡ್ವಿಧ ಲಿಂಗವ ಸಂಬಂಧವ ಮಾಡಿಕೊಂಡು ಷಡ್ವಿಧ ಭಕ್ತಿವಿಡಿದು. ಆಚರಿಸಿ, ಆ ಷಡ್ವಿಧಾಂಗ ಲಿಂಗ ಭಕ್ತಿಗಳಿಗೆ ಮಾತ್ರಸ್ಥಾನವಾದ ನಿಃಕಲ ಬ್ರಹ್ಮವನ್ನು ಒಂದಾಗಿ ಬೆರೆದಿಹೆನೆಂದು ಉದ್ಯೋಗಿಸಿದೊಡೆ ಅದು ಅಂತಪ್ಪ ಆಚರಣೆಯು ಆರಿಗೆ ನಿಲುಕುವದಯ್ಯಾ, ಆದಂಗೆ ಎಟಕೀತೆ? ಸ್ವಾಮಿ ಎಂದು ಬೆಸಗೊಂಡೊಡೆ ಕ್ರಿಯಾಬಾಹ್ಯನಾದ ವೇದಾಂತಿಗೆ, ಜ್ಞಾನ ಬಾಹ್ಯರಾದ ಸಿದ್ಧಾಂತಿಗಳಿಗೆ, ಜ್ಞಾನಕ್ರಿಯಾ ಬಾಹ್ಯರಾದ ಯೋಗಾಭ್ಯಾಸಿಗಳಿಗೆ ಎಟಕೀತೇ? ಎಟಕದು. ಅರ್ಪಣದ ಅಂಗ ಸಂಬಂಧವಾದ ರೂಪು ಷಡ್ವಿಧ ಪದಾರ್ಥಗಳನ್ನು ಇಷ್ಟಲಿಂಗದೊಡನೆ ಕೂಡಿದ ಆಚಾರಾದಿ ಷಡ್ವಿಧ ಲಿಂಗಗಳಿಗೆ ಷಡ್ವಿಧ ಸಕೀಲಗಳಿಂದ ಸಮರ್ಪಿಸಿಕೊಂಬ ಕಾಯಾರ್ಪಣದೊಳಗರ್ಪಣದ ಮನೋಸಂಬಂಧವಾದ ೩೬ ರುಚಿ ಪದಾರ್ಥಗಳನ್ನು ಪ್ರಾಣಲಿಂಗದೊಡನೆ ಕೂಡಿದ ಮೂವತ್ತಾರು ಲಿಂಗಗಳಿಗೆ ಮೂವತ್ತಾರು ತೆರದ ಭಕ್ತಿ ಸಕೀಲಂಗಳಿಂದ ಸಮರ್ಪಿಸಿಕೊಂಬ ಕರಣಾರ್ಪಣದ ಭೇದಾರ್ಪಣದ ಆತ್ಮಸಂಬಂಧವಾದ ಇನ್ನೂರಾಹದಿನಾರು ತೃಪ್ತಿಪದಾರ್ಥಗಳನ್ನು ಭಾವಲಿಂಗದೊಡನೆ ಕೂಡಿದ ಇನ್ನೂರಾಹದಿಮೂರು ಲಿಂಗಗಳಿಗೆ ತೆರದ ಭಕ್ತಿ ಸಕೀಲಂಗಳಿಂದ ಸಮರ್ಪಿಸಿಕೊಂಬ ಭಾವಾರ್ಪಣದ ಭೇದವಾಂ ಕಾಯಾರ್ಪಣವರ್ಪಿತವಾಗಿ ಉಳಿದುದೇ ಶುದ್ಧಪ್ರಸಾದ, ಕರಣಾರ್ಪಿತವರ್ಪಿತವಾಗಿ ಉಳಿದುದೇ ಸಿದ್ಧಪ್ರಸಾದ,, ಭಾವಾರ್ಪಣವಾಗಿ ಉಳಿದುದೇ ಪ್ರಸಿದ್ಧ ಪ್ರಸಾದವೆಂಬ ನಿಲುಕಡೆಯು ನರಿದು ಸೊಪ್ಪಡಗಿದ ಒಂದಾನೊಂದೆ

ಗಳೆದ ವೃಕ್ಷದಲ್ಲಿ ಹುಳುವಿಲ್ಲವೆಂಬ ಹಾಗೆ ಈ ತ್ರಿವಿಧ ಪ್ರಸಾದವ ಪಡೆದ ನುಭವಿಸಿದ ಶಿವಶರಣನ ತನು ಕರಣೇಂದ್ರಿಯ ಶಬ್ದ ಜಾಲಂಗಳು ಪಟಲ ವಳಿದ ನಿಃಪತಿ, ತನ್ನಲ್ಲಿ ತಾನೇ ಪರಮ ಶಾಂತಿಯನೈದಿಪ ಸ್ವಕೀಯ ವಾದ ಮಹಾಲಿಂಗದಲ್ಲಿ ಐಕ್ಯದಿರವು.

ಅಂಗದಮೇಲೆ ಸಾಕಾರವಿಡಿದು ಮಂತ್ರಾಹ್ವಾನಗಳಿಂದ ಅಷ್ಟವಿಧಾ ರ್ಚನೆ ಷೋಡಶೋಪಚಾರಂಗಳಲ್ಲಿ ವ್ಯಾಪಿಸಿಕೊಂಡಿಪ್ಪುದೀಗ ಇಷ್ಟಲಿಂಗ. ಆ ಇಷ್ಟಲಿಂಗಕ್ಕೆ ಆಶ್ರಯವಾಗಿ ಚತುರ್ದಶ ಇಂದ್ರಿಯಂಗಳಲ್ಲಿ ತನ್ಮು ಖವಾಗಿ ಸರ್ವೇಂದ್ರಿಯಗಳಿಗೆ ಚೈತನ್ಯವಾಗಿ ಪ್ರಾಣದಲ್ಲಿ ಪರಿಪೂರ್ಣವಾ ಗಿಪ್ಪುದೀಗ ಪ್ರಾಣಲಿಂಗ, ಆ ಪ್ರಾಣಲಿಂಗಕ್ಕೆ ಆದಿಯಾಗಿ ಭಾವ ಭ್ರಮೆ ಗಳು ನಷ್ಟವಾಗಿ, ಅನುಭಾವದಲ್ಲಿ ಅನುವಾಗಿ ಭಾವ, ಸದ್ಭಾವ, ನಿರ್ಭಾ ವಂಗಳಲ್ಲಿ ಭರಿತನಾಗಿ ಭಾವಬ್ರಹ್ಮನೆಂಬ ಭೇದವಿಲ್ಲದೆ ಸನ್ನಿಹಿತ ಭಾವ ದಿಂದ ಇಪ್ಪುದೀಗ ಭಾವಲಿಂಗ. ಇಂತೀ ಮೂರುಲಿಂಗದ ಮೂಲ, ಆರು ಲಿಂಗದ ಅಂತ್ಯವನೊಳಕೊಂಡು, ಮಾರ್ಗಕ್ರಿ, ನಿಃಕ್ರಿಯೆಯಾಗಿ, ಧ್ಯಾನ ನಷ್ಟವಾಗಿ, ಮಂತ್ರಗೋಪ್ಯವಾಗಿ, ಜ್ಞಾನ ಶೂನ್ಯವಾಗಿ, ಭಾವ ದಿಗಂಬ ರವಾಗಿ ಘನಕ್ಕೆ ಘನವಾದ ಪರಬ್ರಹ್ಮವು ತಾನೇ ಸೌರಾಷ್ಟ್ರಸೋಮೇಶ್ವರಾ.

ಮಹಾನಾದ ಕಳೆಯೇ ಲಿಂಗಕ್ಕಾಶ್ರಯವಾಗಿ, ಲಿಂಗದ ಕಳೆಯೇ ಹೃದಯದ ಕಳೆಯೇ ಜ್ಞಾನಕ್ಕಾಶ್ರಯವಾಗಿ, ಜ್ಞಾನದ ಕಳೆಯೇ ನಿತ್ಯ ಕ್ಕಾಶ್ರಯವಾಗಿ ನಿತ್ಯನಿರವಯ ಚಿಕ್ಕಯ್ಯಪ್ರಿಯ ಸಿದ್ಧಲಿಂಗ ಇಲ್ಲ, ಇಲ್ಲ.॥

ಅರ್ಥ:— ಮಹಾನಾದವುಳ್ಳ ಪರಬ್ರಹ್ಮದ ಚಿತ್ಕಳೆಯೇ ಇಷ್ಟಲಿಂಗಕ್ಕೆ ಚೈತನ್ಯವಾಗಿ, ಇಷ್ಟಲಿಂಗದ ಚೈತನ್ಯಕಳೆಯೇ ಮನದಲ್ಲಿ ಪ್ರಾಣಲಿಂಗ ವಾಗುವದಕ್ಕೆ ಆಸ್ಪದವಾಗಿ, ಮನದಲ್ಲಿ ಬೆಳಗಲ್ಪಟ್ಟ ಪ್ರಾಣಲಿಂಗವೇ ಚಿತ್ಪ್ರಾ ಣವನು ಒಳಕೊಂಬುವದಕ್ಕೆ ಆಶ್ರಯವಾದ ಭಾವಲಿಂಗವಾಗಿ ಆ ಪ್ರಾಣ ವನೊಳಕೊಂಡಿಪ್ಪ ಭಾವಲಿಂಗವೇ ಆತ್ಮವನೊಳಕೊಂಬುದಕ್ಕೆ ಆಶ್ರಯ ವಾದ ಮಹಾಲಿಂಗವಾಗಿ ಶಾಶ್ವತವಾದ ನಿರಾಕಾರವಾದ ಪರಶಿವಲಿಂಗವು ಅಂತರಂಗ ಬಹಿರಂಗದಲ್ಲಿ ಭಿನ್ನವಿಲ್ಲೆಂಬರ್ಥ.

ಪರಪುಟ್ಟನಾದವು ಎಂಬ ಲಿಂಗತರಗೆಲೆಗಳಿಗೊಂದೇ ಗಾಳಿ ಹಾರುತ್ತಿ ರ್ಪವು. ಒಂದೇ ಅನಿಲನಿಂದ ದೇಹ ಸರಪಟಿಗಳೊಳಗೆಲ್ಲ ಕರಿದಡೆ ೬ ಎಂಬಾತನೇ ಬಿಡಾಡಿ.

ಅರ್ಥ:— ಚಿದಾಕಾರಕ್ಕೆ ಏಕಾರ್ಥವಾದ ಚಿದ್ಘನ ಲಿಂಗವೇ ಓಂಕಾರ ಸ್ವರೂಪವಾದ ಇಷ್ಟಲಿಂಗವಾಗಿಪ್ಪುದು. ಅಂಗದಲ್ಲಿ ಸಂಸಾರ ವಿಷಯ ರಸ ವರತ ಇಂದ್ರಿಯಂಗಳಿಗೆ ಇಷ್ಟಲಿಂಗ ಚೈತನ್ಯ ಸ್ವರೂಪವಾದ ಪ್ರಾಣ ಲಿಂಗ ಸಂಬಂಧವಾಗಿಪ್ಪುದು. ಚೈತನ್ಯಸ್ವರೂಪವಾದ ಪ್ರಾಣಲಿಂಗ ಸಂಬಂಧ ದಿಂದ ವಿಷಯಂಗಳತ್ತ ಚರಿಸುತ್ತಿದ್ದವು. ದೇಹಪ್ರಾಣ ಆತ್ಮಾಂಗದೊಳಗೆಲ್ಲ ಇಷ್ಟಲಿಂಗ ಪ್ರಾಣಲಿಂಗ ಭಾವಲಿಂಗವಾಗಿ ನೆಲೆಗೊಂಡಿಪ್ಪುದು. ಒಂದೇ ಬ್ರಹ್ಮವು. ಸಗುಣ ನಿರ್ಗುಣ ಮನೋಲಯ ನಿರಂಜನ ಪೂಜೆಗಳಿಂದಾ ರಾಧಿಸಿ, ಶಿವೋಹಂ, ಪ್ರಾಣೋಹಂ, ಬ್ರಹ್ಮೋಹಂ ಎಂದುಚ್ಚರಿಸಿದೊಡೆ, ತನ್ನ ನಿಜವನರಿವ ಜ್ಞಾನವನು ಎಚ್ಚರಿಸಿ ಕೊಡುವಾತನೇ ಚಿತ್ತಿಗೆ ಚೈತನ್ಯ ವಾದನಿಃಕಲ ಬ್ರಹ್ಮವು ಎಂಬುದರ್ಥ

ಗುರುಕರುಣದಿಂದೊದಗಿದ ಇಷ್ಟಲಿಂಗದಲ್ಲಿ ವಿಶ್ವಾಸ ಬಲಿದಲ್ಲಿ ಆಯು ತಲಿಂಗ ಆ ಇಷ್ಟಲಿಂಗದ ಭಾವ ಮನೋವೇದ್ಯವಾದಲ್ಲಿ ಸ್ವಾಯುತಲಿಂಗ. ಆ ಇಷ್ಟಲಿಂಗದ ಭಾವ, ಮನೋವೇದ್ಯಸುಖವು ಭಿನ್ನವಾಗಿ ತೋರದೆ ಅನು ಭವ ಪರಿಣಾಮ ಪೂರಿತವಾದಲ್ಲಿ ಸನ್ನಿಹಿತಲಿಂಗ, ಇಂತು ಇಷ್ಟಪ್ರಾಣ ಭಾವಲಿಂಗಗಳು ತನುತ್ರಯಂಗಳಲ್ಲಿ ಆಯುತ ಸ್ವಾಯುತ ಸನ್ನಿಹಿತಂಗಳಾ ಗಲು, ಆ ಶರಣನ ಷಡಂಗದಲ್ಲಿ ಷಡ್ವಿಧಲಿಂಗ ಸಂಬಂಧವಾದುದೇ ಷಟ್‌ಸ್ಥಲಂಗಳೆಂದು ಪ್ರಭುದೇವರು ನಿರೂಪಿಸಿದರು.

ವಾಗ್ಬ್ರಹ್ಮಿಗಳೆಲ್ಲರು ಪಡುವ ಪಾಟವ ನೋಡಿ, ನಮ್ಮ ಭಕ್ತರು ತ್ಯಾಗಾಂಗದಲ್ಲಿ ಇಷ್ಟಪ್ರಾಣ ಭಾವಕ್ಕೆ ಬಾಹ್ಯ ಪದಾರ್ಥರೂಪವ ಈಕ್ಷಣ ಜ್ಞಾನಸ್ಪರ್ಶನ ಜ್ಞಾನದಿಂದ ಅರ್ಪಿಸಿ, ದೇಹಪ್ರಸಾದಿಯಾಗಿ ಚರಕ್ಷೇಪದಲ್ಲಿ ಇಷ್ಟಲಿಂಗ ಪೂಜಕರಾಗಿ ಅನಿಷ್ಟವ ಹರಿಹರಿಸಿದರು. ಭೋಗಾಂಗದಲ್ಲಿ ಇಷ್ಟ ಪ್ರಾಣ ಭಾವಕ್ಕೆ ದೇಹ ಪದಾರ್ಥರೂಪವ ರೂಪು ರುಚಿ ತೃಪ್ತಿ ಯಿಂದ ಅರ್ಪಿಸಿ ಪ್ರಾಣಪ್ರಸಾದಿಯಾಗಿ ಲಿಂಗಕ್ಷೇಪದಲ್ಲಿ ಪ್ರಾಣಲಿಂಗ ನೈಷ್ಠಿಕರಾಗಿ ವಾಯುಗುಣವಿಕಾರವ ಕೆಡಿಸಿದರು. ಯೋಗಾಂಗದಲ್ಲಿ ಇಷ್ಟ ಪ್ರಾಣ ಭಾವಲಿಂಗಕ್ಕೆ ವಾಯು ಪದಾರ್ಥರೂಪವ ಸ್ಥೂಲ ಸೂಕ್ಷ್ಮಕಾರ ಣದಿಂದ ಅರ್ಪಿಸಿ ಮಹಾಪ್ರಸಾದಿಯಾಗಿ ಗುರು ಕ್ಷೇಪದಲ್ಲಿ ಮನೋ ಗುಣ ವಿಕಾರವ ಪರಿಹರಿಸಿದರು ಗುಹೇಶ್ವರ ಲಿಂಗದಲ್ಲಿ.

ಕುಚಿತ್ತವಳಿದು ಸುಚಿತ್ತ ನೆಲೆಗೊಂಡು ಆಚಾರ ಲಿಂಗದಲ್ಲಿ ಅವಿ ರಳ ಸಮರಸ ಸೌಖ್ಯವ ನರಿಯ ಬಲ್ಲಡೆ ಭಕ್ತನೆಂಬೆನು. ಕುಬುದ್ಧಿ ಅಳಿದು

ಸುಬುದ್ಧಿ ನೆಲೆಗೊಂಡು ಗುರುಲಿಂಗದಲ್ಲಿ ಅವಿರಳ ಸಮರಸ ಸೌಖ್ಯವನರಿಯಬಲ್ಲಡೆ ಮಹೇಶ್ವರನೆಂಬೆನು. ಅಹಂಕಾರಪಳಿದು ನಿರಹಂಕಾರ ನೆಲೆಗೊಂಡು ಶಿವಲಿಂಗದಲ್ಲಿ ಅವಿರಳ ಸಮರಸ ಸೌಖ್ಯವನರಿಯಬಲ್ಲಡೆ ಪ್ರಸಾದಿಯೆಂದೆನು. ಕುಮನವಳಿದು ಸುಮನ ನೆಲೆಗೊಂಡು ಜಂಗಮದಲ್ಲಿ ಅವಿರಳ ಸಮರಸ ಸೌಖ್ಯವನರಿಯ ಬಲ್ಲಡೆ ಪ್ರಾಣಲಿಂಗಿಯೆಂಬೆನು. .ಅಜ್ಞಾನವಳಿದು ಸುಜ್ಞಾನ ನೆಲೆಗೊಂಡು ಪ್ರಸಾದಲಿಂಗದಲ್ಲಿ ಅವಿರಳ ಸಮರಸ ಸೌಖ್ಯವನರಿಯ ಬಲ್ಲಡೆ ಶರಣನೆಂಬೆನು. ದುರ್ಭಾವವಳಿದು ಸದ್ಭಾವ ನೆಲೆಗೊಂಡು ಮಹಾಲಿಂಗದಲ್ಲಿ ಅವಿರಳ ಸಮರಸ ಸೌಖ್ಯವನರಿಯ ಬಲ್ಲಡೆ ಐಕ್ಯನೆಂಬೆನು. ಇಂತೀ ಷಡ್ಬ್ರಹ್ಮವನೊಡಗೂಡುವ ಮಹಾಶರಣ ಪಾದಕ್ಕೆ ನಮೋ ನಮೋ ಎಂಬೆನಯ್ಯ ಅಖಂಡೇಶ್ವರಾ॥

ಕಾಯ ಇಂದ್ರಿಯಂಗಳಲ್ಲಿ ಮೆಚ್ಚಿಹನ್ನಕ್ಕರ ಭಕ್ತಸ್ಥಳವಿಲ್ಲ. ಆತ್ಮ ಹಲವು ವಿಷಯಂಗಳಲ್ಲಿ ಹರಿವನ್ನಕ್ಕರ ಮಹೇಶ್ವರ ಸ್ಥಲವಿಲ್ಲ. ಹಿಂದು ಕಿರಿದನರಿದು ರೋಚಕ ಅರೋಚಕವೆಂಬನ್ನಕ್ಕರ ಪ್ರಸಾದಿಸ್ಥಲವಿಲ್ಲ. ಜಾಗ್ರದಲ್ಲಿ ಕಂಡು, ಸ್ವಪ್ನದಲ್ಲಿ ತೋರಿ, ಸುಷುಪ್ತಿಯಲ್ಲಿ ತಿಳಿವನ್ನಕ್ಕರ ಪ್ರಾಣಲಿಂಗ ಸಂಬಂಧಿಯಲ್ಲ, ಚತುರ್ವಿಧ ಫಲ ಪದಂಗಳಲ್ಲಿ ಕಾಂಬ ಕಾಣಿಕೆಯುಳ್ಳನ್ನಕ್ಕರ ಶರಣ ಸ್ಥಲವಿಲ್ಲ. ಅರಿದೆ ಮರೆದೆ ಎಂಬ ಸಂದೇಹವುಳ್ಳನ್ನಕ್ಕರ ಐಕ್ಯಸ್ಥಲವಿಲ್ಲ. ಇಂತೀ ಷಟ್‌ಸ್ಥಲಂಗಳಲ್ಲಿ ಸೋಪಾನದ ಮೆಟ್ಟಿನಂತೆ ಒಂದು ಬಿಟ್ಟು ಒಂದನೇರುವನ್ನಕ್ಕರ ಸ್ಥಳಕುಳ ಭರಿತನಾಗಬೇಕು. ಮೇಲನೇರಿ ಕೆಳಗೆ ಇಳಿವೆನೆಂಬ ಭಾವನಿಂದಲ್ಲಿ ಆರನೆಣಿಸಲಿಲ್ಲ. ನೂರೊಂದು ಬೇರೊಂದು ಮುಟ್ಟಲಿಲ್ಲ. ಕರಗಿದ ಬಂಗಾರಕ್ಕೆ ಕರಚರಣಗಳಿಲ್ಲದಂತೆ ಆತ ಕುರುಹಡಗಿದ ಷಟ್‌ಸ್ಥಲ ಬ್ರಹ್ಮ, ನಿಷ್ಕಳಂಕ ಮಲ್ಲಿಕಾರ್ಜುನಾ॥

ಭಕ್ತಂಗೆ ಕ್ರಿ. ಮಹೇಶ್ವರಂಗೆ ನಿಶ್ಚಯ, ಪ್ರಸಾದಿಗೆ ಅರ್ಪಣ, ಪ್ರಾಣಲಿಂಗಿಗೆ ಯೋಗ, ಶರಣಂಗೆ ನಿಬ್ಬೆರಗು. ಐಕ್ಯಂಗೆ ನಿರ್ಲೇಪ, ಇಂತೀ ಷಟ್‌ಸ್ಥಲವ ನವಗ್ರಹಿಸಿ, ನಿಂದ ವಿರಕ್ತವ ಏಕಸ್ಥಲದಾಟ, ನಿಜತತ್ವದ ಕೂಟ,' ಶಂಭುವಿಂದಿತ್ತ, ಸ್ವಯಂಭುವಿಂದತ್ತ ಅತಿಬಳನೋಡಾ ಮಾತುಳಂಗ ಮಧುಕೇಶ್ವರನು॥

ಭಕ್ತಂಗೆ ವಿಶ್ವಾಸ, ಮಹೇಶ್ವರಂಗೆ ನೈಷ್ಠೆ, ಪ್ರಸಾದಿಗೆ ಅವಧಾನ ಪ್ರಾಲಿಂಗಿಗೆ ಯೋಗ, ಶರಣಂಗೆ ಮುನ್ನವೇ ಬಿಡುಗಡೆ, ಐಕ್ಯಂಗೆ ಕುರು

ಹ ಗೊಂಬುವದಕ್ಕೆ ಮುನ್ನವೇ ನಿರಾಳ, ಇಂತೀ ಷಟ್ ಸ್ಥಲ ಭೇದ ಎನ್ನಯ್ಯ ಪ್ರಿಯ ನಿಷ್ಕಳಂಕಮಲ್ಲಿಕಾರ್ಜುನಾ||

ವಿಶ್ವಾಸದಿಂದ ಭಕ್ತನಾಗಿ, ಆ ವಿಶ್ವಾಸದೊಳಗಿನ ನಿಷ್ಠೆಯಿಂ ಮಾಹೇಶ್ವರನಾಗಿ, ಆ ನಿಷ್ಠೆಯೊಳಗಿನ ಸಾವಧಾನದಿಂ ಪ್ರಸಾದಿಯಾಗಿ, ಆ ಸಾವಧಾನದೊಳಗಣ ಸ್ವಾನುಭಾವದಿಂ ಪ್ರಾಣಲಿಂಗಿಯಾಗಿ, ಆ ಸ್ವಾನುಭಾವದೊಳಗಣ ಅರುವಿನಿಂ ಶರಣನಾಗಿ, ಆ ಅರಿವು ನಿಜದಲ್ಲಿ ಸಮರಸಭಾವವನ್ನೈದಿದ ನಿರ್ಭಾವಪದದೊಳು ನಿಂದ ಭೇದವೆಂತಿದ್ದಿತೆಂದಡೆ, ಮುಂದೆ ಐಕ್ಯಸ್ಥಲವಾದದು.

ಕಣ್ಣೆ ಭಕ್ತನ ಸೋಂಕು, ಮುಖ ಜಿಹ್ವೆ ಮಾಹೇಶ್ವರನ ಸೋಂಕು, ಅಂಗ ಸಂಬಂಧ ಪ್ರಸಾದಿಯ ಸೋಂಕು, ಕರಸ್ಥಳ ಪ್ರಾಣಲಿಂಗಿಯ ಸೋಂಕು, ಉತ್ತಮಾಂಗ ಶರಣನ ಸೋಂಕು, ಅಮಳೋಕ್ಯ ಐಕ್ಯನ ಸೋಂಕು, ಭಕ್ತಂಗೆ ಆಚಾರಲಿಂಗ, ಮಾಹೇಶ್ವರಂಗೆ ಸದಾಚಾರಲಿಂಗ ಪ್ರಸಾದಿಗೆ ವಿಚಾರಲಿಂಗ, ಪ್ರಾಣಲಿಂಗಿಗೆ ಸರ್ವಾವಧಾನ ಸನ್ನದ್ಧಲಿಂಗ, ಶರಣಂಗೆ ಅವಿರಳ ಸಂಪೂರ್ಣಲಿಂಗ, ಐಕ್ಯಂಗೆ ಪರಮಪರಿಪೂರ್ಣಲಿಂಗ, ಇಂತೀ ಆರ ಸ್ಥಲ, ಷಟ್ ಕರ್ಮ, ಆ ಷಡ್ವಿಧ ಭೇದಂಗಳಲ್ಲಿ ಮುಂದಣವಸ್ತು ಒಂದುಂಟೆಂದು ಸಂಗವ ಮಾಡುವದಕ್ಕೆ ಆರಂಗದ ಪಥಗೂಡಿಕಾಂಬಲ್ಲಿ ವಸ್ತುವ ನೋಡಗೂಡುವದೊಂದೇ ಭೇದ. ಇಂತೀ ಸ್ಥಲವಿವರ. ಕೂಟಸಂಬಂಧ. ಏಕಮೂರ್ತಿ ತ್ರಿವಿಧ ಸ್ಥಲವಾಗಿ, ತ್ರಿವಿಧ ಸ್ಥಲಮೂರ್ತಿ ಷಟ್ ಸ್ಥಲವಾಗಿ ಮಿಶ್ರಕ್ಕೆ ಮಿಶ್ರ. ತತ್ವಕ್ಕೆ ತತ್ವ. ಬ್ರಹ್ಮಕ್ಕೆ ಪರಬ್ರಹ್ಮ. ಹಲವು ಹೊಲಬಿನ ಪಥದಲ್ಲಿ ಬಂದಡೂ, ಪಥ ಹಲವಲ್ಲದೆ. ನಗರಕ್ಕೊಂದೇ ಹೊಲಬು. ಇಂತೀ ಸ್ಥಲ ವಸ್ತು ನಿರ್ವಾಹ. ಶಂಭುಗಿಂದಿತ್ತ ಸ್ವಯಂಭುವಿಂದತ್ತ ಅತಿಬಳ ನೋಡಾ ಮಾತಳಂಗ ಮಧುಕೇಶ್ವರನು||

ವ್ಯವಹಾರದಲ್ಲಿ ಯಾವದೊಂದು ಆಟದಲಿ ನೋಟಗೊಂಡ ಜನರು "ಇದೇನು ದೊಡ್ಡ ಬ್ರಹ್ಮವಿದ್ಯೆಯಲ್ಲ ಬಿಡು" ಎಂದು ಆ ಆಟಮಾಟಗಳನ್ನು ಹೀಯಾಳಿಸುವದುಂಟು. ಹಾಗು ಅವುಗಳ ಸಂಬಂಧವಾಗಿ ಯಾವನಾದರೂ ಬೆಳಸಿ ಬಹಳ ಹೊತ್ತಿನ ವರೆಗೆ ಹೇಳುತ್ತ ಕುಳಿತರೆ "ಏನೋ ಅಲ ಓದಬೇತ, ಮುಖ್ಯಮಾತೊಂದು ಹೇಳು" ಎನ್ನುವ ಪರಿಪಾಠವೂ ಉಂಟು. ಇದರಿಂದ ಬ್ರಹ್ಮವಿದ್ಯೆಯು ಎಲ್ಲರಿಗೂ ಸಾಧ್ಯವಿಲ್ಲೆಂದೂ ಆ ವಿದ್ಯೆಯು ಶ್ರೀವ್ಯಾಸ ಮಹರ್ಷಿಯಂಥ ಋಷಿಗಳಿಗೆ ಸಾಧ್ಯವೆಂತಲೂ

ಹಾಗು ಆ ಋಷಿಯು ಹದಿನೆಂಟು ಪುರಾಣಗಳನ್ನು ತನ್ನ ಬುದ್ಧಿಶಕ್ತಿಯಿಂದ ಬರೆದಿದ್ದರೂ ಆ ಪುರಾಣ ಕೇಳುವವರಿಗೆ ಬೇಸರ ಬರುವದೆಂತಲೂ ಅವುಗಳ ಸಾರಾಂಶ ಕೇಳುವ ಇಚ್ಛೆಯು ಮಾತ್ರ ಆಗುವದಾಗಿ ಅನುಭವದ ಸಂಗತಿಯಾಗಿದೆ. ಪುರಾಣಗಳನ್ನು ಬರೆಯುವ ಶಕ್ತಿಯು ಆ ಮಹರ್ಷಿಗೆ ಬ್ರಹ್ಮಜ್ಞಾನದಿಂದ ಉಂಟಾಗಿರಬೇಕು. ತನ್ನ ಬ್ರಹ್ಮಜ್ಞಾನಾನುಭವವನ್ನು ಭಾರತದ ಕೌರವ ಪಾಂಡವರ ನಡುವೆ ನಡೆದ ಯುದ್ಧಾರಂಭದ ಸನ್ನಿವೇಶವನ್ನು ಶ್ರೀ ಕೃಷ್ಣಾವತಾರ ಮೂರ್ತಿಯನ್ನೇ ಮಹಾಜ್ಞಾನಾನಂದದ ರೂಪಗೊಳಿಸಿ, ಅರ್ಜುನನು ತನ್ನ ಕರ್ತವ್ಯದಲ್ಲಿ ವಿಷಾದ ಪಡುವ ಸಮಯಾಚಾರವನ್ನು ಮುಂದುಮಾಡಿ ಹದಿನೆಂಟು ಪುರಾಣಂಗಳನ್ನು ವಿಸ್ತಾರಗೊಳಿಸಿದ ಮಹಾತ್ಮನು ಹದಿನೆಂಟು ಅಧ್ಯಾಯಗಳಲ್ಲಿ ಅಧ್ಯಾತ್ಮ ವಿದ್ಯೆಯ ಅನುಭವಾಮೃತವನ್ನು ಸರ್ವಕಾಲವೂ ಜನಸಂದಣಿ ಪಾನ ಮಾಡಲೆಂದು ಬರೆದ ಭಗವದ್ಗೀತೆಯ ಕಡೆಗೆ ಶಿವಾನುಭವಿಗಳು ಲಕ್ಷ್ಯಗೊಟ್ಟು ಆ ಗೀತೆಯ ತತ್ವಗಳು ಷಟ್‌ಸ್ಥಲ ಬ್ರಹ್ಮಿಗಳ ಭಕ್ತಸ್ಥಳಕ್ಕೆ ಎಷ್ಟರ ಮಟ್ಟಿಗೆ ಏಕರೂಪತೆಯನ್ನು ಹೊಂದುವವೆಂಬದನ್ನು ನೋಡುವದು ಸಹಜಾನುಭವವಾಗಿದೆ.

"ಅನುಭಾವವಿಲ್ಲದ ಭಕ್ತಿ ಕಲಿಕೆಳಗಪ್ಪದಯ್ಯ. ಅನುಭಾವವೇ ಭಕ್ತಿಗಾಧಾರ ಅನುಭಾವವೇ ಭಕ್ತಿಗೆ ನೆಲೆವನೆ,, ಎಂಬ ಶರಣರ ಉಕ್ತಿಯಂತೆ ಗೀತೆಯಾದರೂ "ಮಚ್ಚಿತ್ತಾ ಮದ್ಗತಪ್ರಾಣಾ ಬೋಧಯಂತಃ ಪರಸ್ಪರಂ। ಕಥಯಂತಶ್ಚಮಾಂನಿತ್ಯಂ ತುಷ್ಯಂತಿ ಚರಮಯಂತಿಚ|| ಶಿವಶರಣರು ಆ ಪರಬ್ರಹ್ಮಕ್ಕೆ ಅಖಂಡ ಪರಿಪೂರ್ಣ ಗೋಳಕಾಕಾರ ತೇಜೋಮೂರ್ತಿಯಪ್ಪ ಮಹಾಲಿಂಗವನ್ನು ಪೀಠ, ಕಟಿ, ವರ್ತುಳ, ಗೋಮುಖ ನಾಳ, ಗೋಳಕಗಳೆಂಬ ಷಟ್‌ಸ್ಥಾನಂಗಳನ್ನು ಸೂಚಿಸುವ ಷಡಾಕೃತಿಯಲ್ಲಿ ಇಷ್ಟಲಿಂಗವನ್ನು ಶಿಷ್ಯನ ಚಿತ್ಕಲಾರೂಪವನ್ನೇ ಬಹಿಷ್ಕರಿಸಿ ಕರಸ್ಥಲಕ್ಕೆ ಕೊಟ್ಟು ತ್ರಿಕಾಲ ಲಿಂಗಪೂಜೆಗೆ ಅನುಕೂಲವಾಗುವಂತೆ ವ್ಯವಸ್ಥೆಗೊಳಿದ್ದಾರೆ. ಆ ಲಿಂಗಪೀಠವೇ ಭಕ್ತನಿಗೆ ಆಧಾರಚಕ್ರ. ಭಕ್ತನು ತನ್ನಲ್ಲಿ ಷಟ್‌ಸ್ಥಳಗಳನ್ನೂ ಷಟ್‌ಚಕ್ರಗಳನ್ನೂ ಅರಿಯುವನು. ಈ ವಿಷಯವಾಗಿ ಹಲ ಸಕೀಲಗಳನ್ನು ಈಮೊದಲು ತೋರ್ಪಡಿಸಿದೆ. ಇದರಂತೆ ಸಗುಣೋಪಾಸನೆಯನ್ನು ಸ್ಪಷ್ಟೀಕರಿಸುವ "ಮಯ್ಯಾವೇಶ್ಯ ಮನೋಯೇಮಾಂ ನಿತ್ಯಯುಕ್ತಾ ಉಪಾಸತೆ । ಶ್ರದ್ಧಯಾ ಪರಯೋಪೇತಾಸ್ತೇ ಮೇ ಯುಕ್ತ

ತಮಾಮತಾಃ|| ಮತ್ತು ನಿರ್ಗುಣೋಪಾಸನೆಯನ್ನು ಸೂಚಿಸುವ "ಸನ್ನಿಯಮ್ಯೇಂದ್ರಿಯಗ್ರಾಮಂ ಸರ್ವತ್ರ ಸಮಬುದ್ಧಯಃ | ತೇ ಪ್ರಾಪ್ನುವಂತಿ ಮಾಮೇವ ಸರ್ವಭೂತ ಹಿತೇರತಾಃ" || ಆದರೆ ಈ ನಿರ್ಗುಣ ಉಪಾಸನೆಯು ಅಧಿಕ ಕಷ್ಟಕರವುಳ್ಳದ್ದೆಂದು "ಕ್ಲೇಶೋಧಿಕ ತರಸ್ತೇಷಾಮವ್ಯಕ್ತಾಸಕ್ತ ಚೇತಸಾಂ" ಎಂದು ಹೇಳಿ "ಯೇತು ಸರ್ವಾಣಿ ಕರ್ಮಾಣಿ ಮಯಿ ಸನ್ಯಸ್ಯ ಮತ್ಪರಾಃ | ಅನನ್ಯೇನೈವ ಯೋಗೇನ ಮಾಂ ಧ್ಯಾಯಂತ ಉಪಾಸತೇ|| ತೇಷಾಮಹಂ ಸಮುದ್ಧರ್ತಾ ಮೃತ್ಯು ಸಂಸಾರ ಸಾಗರಾತ್| ಭವಾಮಿ ನಚಿರಾತ್ ಪಾರ್ಥಮಯ್ಯಾವೇಶಿತ ಚೇತಸಾಮ್|| ಮಯ್ಯೇವ ಮನ ಆದತ್ಸ್ವ ಮಯಿ ಬುದ್ಧಿಂ ನಿವೇಶಯ| ನಿವಸಿಷ್ಯಸಿ ಮಯ್ಯೇವ ಅತ ಊರ್ಧ್ವಂ ನಸಂಶಯಃ|| ಈ ಶ್ಲೋಕಗಳಲ್ಲಿ ಇಷ್ಟಪ್ರಾಣ, ಭಾವಲಿಂಗಗಳ ಅನುಸಂಧಾನದಿಂದ ಉಂಟಾಗುವ ಸಾಮರಸ್ಯವು ವ್ಯಕ್ತವಾಗುತ್ತದೆ. "ದೇವ ದ್ವಿಜ ಗುರುಪಾಜ್ಞ ಪೂಜನಂ ಶೌಚಮಾರ್ಜವಂ| ಬ್ರಹ್ಮಚರ್ಯಮಹಿಂಸಾ ಚಶಾರೀರಂ ತಪ ಉಚ್ಯತೇ" || ಈ ಶ್ಲೋಕದಿಂದ ಭಕ್ತನ ಗುರು ಲಿಂಗ ಜಂಗಮ (ಶರಣ) ದಾಸೋಹವನ್ನು ಹೇಳುತ್ತದೆ.

ವೀರಶೈವರ ಶಿವಪೂಜೆಯ ಕೋಣೆ, ಅಥವಾ ಗುರುಮಠ, ಅಥವಾ ದೇವರಮನೆಗಳು ಎಷ್ಟು ಶುದ್ಧ, ಮನೋಹರ ಪ್ರಸನ್ನಕರವಾಗಿರುತ್ತವೆಯೋ, ಹಾಗು ಕ್ರಿಯಸ್ಥರು ತ್ರಿಕಾಲದ ಸ್ನಾನ, ಜಂಗಮ ತೀರ್ಥಪಾನ, ನಿಯತ ಪ್ರಸಾದ ಸೇವದಿಂದಿರುವರೋ, ಲಿಂಗಾರ್ಚನೆಯಲ್ಲಿಯೇ ಶಿವಯೋಗವನ್ನು ಪೂರ್ವಯೋಗಾಂಗ ಉತ್ತರಯೋಗಾಂಗ ಪೂರಿತ ಪರಮಯೋಗವನ್ನು ಸಾಧಿಸುವರೋ ಹಾಗೆ, ಭಗವದ್ಗೀತೆಯ "ಅಭ್ಯಾಸಯೋಗ" ಈ ಅಧ್ಯಾಯದಲ್ಲಿ ಯೋಗಾಭ್ಯಾಸವನ್ನು ಕುರಿತು ಕೆಳಗಿನಂತೆ ಹೇಳುವದಾಗಿದೆ.

ಯೋಗೀಯುಂಜೀತ ಸತತಮಾತ್ಮಾನಂ ರಹಸಿ ಸ್ಥಿತಃ| ಏಕಾಕೀ ಯತ ಚಿತ್ತಾತ್ಮಾ ನಿರಾಶೀರ ಪರಿಗ್ರಹಃ||

ಶುಚೌದೇಶೇ ಪ್ರತಿಷ್ಠಾಪ್ಯ ಸ್ಥಿರಮಾಸನ ಮಾತ್ಮನಃ | ನಾತ್ಯುಚ್ಛ್ರಿತಂ ನಾತಿ ನೀಚಂ ಚೈಲಾಜಿನ ಕುಶೋತ್ತರಂ|| ತತ್ರೈಕಾಗ್ರಂ ಮನಃ ಕೃತ್ವಾಯತ ಚಿತ್ತೇಂದ್ರಿಯಕ್ರಿಯಃ| ಉಪವಿಶ್ಯಾಸನೇ ಯುಂಜ್ಯಾದ್ಯೋಗ ಮಾತ್ಮ ವಿಶುದ್ಧಯೇ|| ಸಮಂ ಕಾಯ ಶಿರೋಗ್ರೀವಂ ಧಾರಯನ್ನಚಲಂ ಸ್ಥಿರಃ| ಸಂಪ್ರೇಕ್ಷ್ಯ ನಾಸಿಕಾಗ್ರಂ ಸ್ವಂ ದಿಶಶ್ಚಾನವಲೋಕ

ಯನ್॥ ಪ್ರಶಾಂತಾತ್ಮಾ ವಿಗತಭೀರ್ಬ್ರಹ್ಮಚಾರಿವ್ರತೇ ಸ್ಥಿತ:। ಮನ:
ಸಂಯಮ್ಯ ಮಚ್ಚಿತ್ತೋಯುಕ್ತ ಆಸೀತ ಮತ್ಪರ:॥ ಯುಂಜನ್ನೇವ ಸದಾಽಽ
ತ್ಮಾನಂ ಯೋಗೀ ನಿಯತಮಾನಸ:। ಶಾಂತಿಂ ನಿರ್ವಾಣ ಪರಮಾಂ
ಮತ್ ಸಂಸ್ಥಾಮಧಿ ಗಚ್ಛತಿ॥ ಯುಕ್ತಾಹಾರ ವಿಹಾರಸ್ಯ ಯುಕ್ತ ಚೇಷ
ಸ್ಯ ಕರ್ಮಸು। ಯುಕ್ತಸ್ವಪ್ನಾವಬೋಧಸ್ಯ ಯೋಗೀ ಭವತಿ ದು:ಖಹಾ॥
ಯದಾವಿನಿಯತಂ ಚಿತ್ತಮಾತ್ಮನ್ಯೇವಾವ ತಿಷ್ಠತೇ। ನಿಸ್ಪೃಹ: ಸರ್ವಕಾ
ಮೇಭ್ಯೋಯುಕ್ತ ಇತ್ಯುಚ್ಯತೇ ತದಾ॥ ಯಥಾದೀಪೋ ನಿವಾತಸ್ಥೋ
ನೇಂಗತೇ ಸೋಪಮಾಸ್ಮೃತಾ। ಯೋಗಿನೋ ಯತ ಚಿತ್ತಸ್ಯ ಯುಂಜ
ತೋಯೋಗಮಾತ್ಮನ:॥ ಯತ್ರೋಪರಮತೇ ಚಿತ್ತಂ ನಿರುದ್ಧಂ ಯೋಗ
ಸೇವಯಾ। ಯತ್ರ ಚೈವಾತ್ಮನಾಽಽತ್ಮಾನಂ ಪಶ್ಯನ್ನಾತ್ಮನಿ ತುಷ್ಯತಿ॥

ಪಿಂಡಸ್ಥಲ:— ಅಪರೇಯ ಮಿತಸ್ತ್ವನ್ಯಾಂ ಪ್ರಕೃತಿಂ ವಿದ್ಧಿ ಮೇ
ಪರಾಂ। ಜೀವಭೂತಾಂ ಮಹಾಬಾಹೋಯಯೇದಂ ಧಾರ್ಯತೇ ಜಗತ್॥

ಏತದ್ಯೋನೀನಿ ಭೂತಾನಿ ಸರ್ವಾಣೀತ್ಯುಪಧಾರಯ। ಅಹಂಕ
ತ್ಸ್ನಸ್ಯ ಜಗತ: ಪ್ರಭವ: ಪ್ರಲಯಸ್ತಥಾ॥ ಮತ್ತ: ಪರತರಂ ನಾನ್ಯತ್ಕಿಂ
ಚಿದಸ್ತಿ ಧನಂಜಯ। ಮಯಿ ಸರ್ವಮಿದಂ ಪ್ರೋತಂ ಸೂತ್ರೇಮಣಿ
ಗಣಾ ಇವ ಶಿವಶರಣರು ಈ ಸ್ಥಲದಲ್ಲಿ ಮಣಿಗಳ ಸೂತ್ರದಂತೆ ತ್ರಿಣ
ಯನ ನೀನಿಪ್ಪೆಯಯ್ಯ, ಆತ್ಮನೊಬ್ಬನೇ ತನು ಭಿನ್ನ ಅಣುರೇಣು ಮಧ್ಯ
ದೊಳು ಗುಣಭರಿತ ನೀನೆಂದು ಮಣಿಯುತಿಪ್ಪೆನಯ್ಯ ರಾಮನಾಥಾ॥

ಪಿಂಡಜ್ಞಾನ ಸ್ಥಲ:— ಪರಸ್ತಸ್ಮಾತ್ತು ಭಾವೋಽನ್ಯೋಽವ್ಯಕ್ತೋಽ
ವ್ಯಕ್ತಾತ್ ಸನಾತನ:। ಯ:ಸ ಸರ್ವೇಷು ಭೂತೇಷು ನಶ್ಯತ್ಸು ನ ವಿನ
ಶ್ಯತಿ॥

ಪುರುಷ: ಸಪರ: ಪಾರ್ಥ ಭಕ್ತ್ಯಾಲಭ್ಯಸ್ತ್ವನನ್ಯಯಾ। ಯಸ್ಯಾಂತ:
ಸ್ಥಾನಿ ಭೂತಾನಿ ಯೇನ ಸರ್ವಮಿದಂ ತತಮ್॥

ಅಯ್ಯಾ ನೀನು ನಿರಾಕಾರವಾಗಿದ್ದಲ್ಲಿ ನಾನು ಜ್ಞಾನವೆಂಬ ವಾಹನ
ವಾಗಿದ್ದೆ ಕಾಣಾ. ನೀನು ನಾಟ್ಯಕ್ಕೆ ನಿಂದಲ್ಲಿ ಚೈತನ್ಯವೆಂಬ ವಾಹನ
ವಾಗಿದ್ದೆ ಕಾಣಾ. ನೀನು ಸಾಕಾರವಾಗಿದ್ದಲ್ಲಿ ನಾನು ವೃಷಭನೆಂಬ ವಾಹ
ನವಾಗಿದ್ದೆ ಕಾಣಾ ನೀನು ಎನ್ನ ಭವವ ಕೊಂದಿಹೆನೆಂದು ಜಂಗಮವಾಗಿ
ಬಂದಲ್ಲಿ ನಾನು ಭಕ್ತನೆಂಬ ವಾಹನವಾಗಿದ್ದೆ ಕಾಣಾ ಕೂಡಲಸಂಗಮ
ದೇವಾ॥

ಸಂಸಾರ ಹ್ಯೇಯ ಸ್ಥಲ:— ನಹಿಪ್ರ ಪಶ್ಯಾಮಿ ಮಮಾಪನುದ್ಯಾ। ದ್ಯಚ್ಛೋಕ ಮುಚ್ಛೋ ಷಣಮಿಂದ್ರಿಯಾಣಾಂ॥ ಅವಾಪ್ಯ ಭೂಮಾವಸ ಪತ್ನಮೃದ್ಧಂ। ರಾಜ್ಯಂ ಸುರಾಣಾಮಪಿ ಚಾಧಿಪತ್ಯಂ॥ ಅಥ ಚೈನಂ ನಿತ್ಯ ಜಾತಂ ನಿತ್ಯಂವಾಮನ್ಯಸೇ ಮೃತಂ। ತಥಾಪಿ ತ್ವಂ ಮಹಾ ಬಾಹೋ ನೈನಂ ಶೋಚಿತುಮರ್ಹಸಿ॥

ಕಪ್ಪೆಸರ್ಪನ ನೆರಳಲ್ಲಿ ಇರ್ಪಂತೆ ಎನಗಾಯಿತ್ತಯ್ಯ; ಅಕಟಕಟಾ ಸಂಸಾರ ವ್ರಥಾ ಹೋಯಿತಲ್ಲಾ ಕೆರ್ತ್ಯ ಕೂಡಲಸಂಗಮದೇವಾ, ಇದನ ತಪ್ಪಿಸಿ ಎನ್ನನು ರಕ್ಷಿಸಯ್ಯ ಪ್ರಭುವೇ॥

ಜ್ಞಾನ ಭೋಧ ಮಾಡುವ ಕೃಷ್ಣನು ಅರ್ಜುನನಿಗೆ ಗುರುಕಾರು ಣ್ಯವು ಅವಶ್ಯವೆಂಬುದನ್ನು ಹೇಳುವನು.

ಗುರುಕಾರುಣ್ಯ ಸ್ಥಲ: — ಅನ್ಯೇ ತ್ವೇವಮಜಾನಂತ: ಶ್ರುತ್ವಾನ್ಯೇಭ್ಯ ಉಪಾಸತೇ ತೇಽಪಿ ಚಾತಿತರಂತ್ಯೇವ ಮೃತ್ಯುಂ ಶ್ರುತಿಪರಾಯಣಾ:॥

ಮಡಿಕೆಯ ಮಾಡುವರೆ ಮಣ್ಣೇ ಮೊದಲು, ತೊಡಗೆಯ ಮಾಡು ವರೇ ಹೊನ್ನೇ ಮೊದಲು ಶಿವಪಥವನರಿವಡೆ ಗುರುಪಥವೇ ಮೊದಲು ಕೂಡಲಸಂಗಮನರಿವಡೆ ಶರಣರ ಸಂಗವೇ ಮೊದಲು॥

ಲಿಂಗಧಾರಣ ಸ್ಥಲ:— ಈಶ್ವರ: ಸರ್ವಭೂತಾನಾಂ ಹೃದ್ದೇಶೇಽ ರ್ಜುನ ತಿಷ್ಠತಿ। ಭ್ರಾಮಯನ್ಸರ್ವ ಭೂತಾನಿಯಂತ್ರಾ ರೂಢಾನಿ ಮಾಯಯಾ॥ ತಮೇವ ಶರಣಂಗಚ್ಛ ಸರ್ವಭಾವೇನ ಭಾರತ। ತತ್ಪ್ರಸಾದಾತ್ಪ ರಾಂಶಾಂತಿಂ ಸ್ಥಾನಂ ಪ್ರಾಪ್ಸ್ಯಸಿ ಶಾಶ್ವತಂ॥ ಮನ್ಮನಾ ಭವ ಭಕ್ತೋ ಮದ್ಯಾಜೀ ಮಾಂ ನಮಸ್ಕುರು। ಮಾಮೇವೈಷ್ಯಸಿ ಸತ್ಯಂ ತೇ ಪ್ರತಿ ಜಾನೇ ಪ್ರಿಯೋಽಸಿ ಮೇ॥

ಲಿಂಗದ ಉಡಿಗೆಯ ಪಶುನಾನಯ್ಯ ವೇಷಧಾರಿಯಾನು. ಉದರ ಪೋಷಕನಾನು ಗೂಡಲಸಂಗನ ಶರಣರ ಧರ್ಮದ ಕಪಿಲೆಯಾನು॥



# ಶಿವಶರಣರು ಸಮಾಜಕ್ಕೆ ಸಲ್ಲಿಸಿದ ಸೇವೆ.

(ಲೇಃ- ಜಿ. ಎಮ್. ಕಟಗೇರಿ, ಬೇಲೂರು.)

—ooo—

ಶ್ರೀ ಶಿವನ ಸ್ವರೂಪಿಗಳಾದ ಶಿವಶರಣರು ಆಗಿ ಹೋಗಿದ್ದಾರೆ, ಎಂದು ಹೇಳುವವರು ತಮ್ಮ ಒಳಗಣ್ಣನ್ನು ತೆರೆದು ನೋಡಿದ್ದಾದರೆ ಶಿವಶರಣರು ಇದ್ದಾರೆ ಎಂಬ ಕಲ್ಪನೆಗಳು ಬಂದಾವು. ಅವರು ವ್ಯಕ್ತಿಗತವಾಗಿ ಬಾಳಿ ಹೋಗಿಲ್ಲ. ಒಂದು ಶಕ್ತಿಯಾಗಿ ಬಾಳಿ ಹೋಗಿದ್ದಾರೆ, ಎಂದು ಹೇಳಲು ಕೆಸರು, ಮಳಲು, ನೊರೆ, ತೊರೆಗಳು ಎಲ್ಲವೂ ಸಿಹಿ, ಎಲ್ಲವೂ ರುಚಿ, ಎಲ್ಲವೂ ಸದುಪಯೋಗ. ಕಳವೆ ಇಲ್ಲದೆ ಅವರದೇ ಆದ ವಚನ ಸಾಹಿತ್ಯವು ಪ್ರವಾಹವಾಗಿ ಹರಿಯುತ್ತಿರುವಾಗ, ಅಪರಂಜಿಯಾಗಿ ಕಂಗೊಳಿಸುತ್ತಿರುವಾಗ ಅವರ ನೆನಹು ನನಸಾಗದೆ ಇರದು.

ನಮ್ಮೀ ನಾಡಿಗೆ ಅಚ್ಚಗನ್ನಡದ ಬೇಸಾಯಗಾರರಾದ ಉಪನಿಷತ್ಕರ್ತೃಗಳಾಗಿ ಮಹರ್ಷಿಗಳೆನಿಸಿದ ಕನ್ನಡಿಗರು ಹೆಮ್ಮೆಪಡಬಹುದಾದ ಮಹಾ ಶಕ್ತಿಗಳಾಗಿರುವರು. ಶಿವಶರಣರ ಸಾಹಿತ್ಯದಲ್ಲಿ ಜೀವಕಳೆಯಿದೆ, ಮತ್ತು ಈ ಸಾಹಿತ್ಯ ಅಮೌಲ್ಯವಾದುದು. ಧರ್ಮ ಗ್ರಂಥಗಳಾದ, ಸಿದ್ಧಾಂತ ಗ್ರಂಥಗಳಾದ ಉತ್ತಮ ಸಾಹಿತ್ಯ ಗ್ರಂಥಗಳಾದ, ತಮ್ಮ ಮನೋಭಾವವನ್ನು ಮೆರೆಯಿಸಿದ, ವಿಶ್ವಧರ್ಮ ಸಾರವನ್ನು ಸರಳ ಶೈಲಿಯಲ್ಲಿ ತಿಳಿಸುವ, ಒಂದು ಸಾಹಿತ್ಯವನ್ನು ಹೆಣೆದು ಜನಸಮೂಹದೆದುರಿಗೆ ಇಟ್ಟಿದ್ದಾರೆ. ಈ ಮಾಲೆಯೇ ನಮ್ಮಗಳೆಲ್ಲರಿಗೆ ನೀತಿಯ ನೆಲೆಗಟ್ಟನ್ನು ಭದ್ರಪಡಿಸಿದೆ, ಭದ್ರಪಡಿಸುತ್ತಲಿದೆ, ಇನ್ನೂ ಭದ್ರಪಡಿಸುವದು. ಇಂಥ ಶಿವಶರಣರ ವಚನಸಾಹಿತ್ಯವನ್ನು ಅರಿತುಕೊಂಡರೆ ಸಾಕು. ಅವನು ಅರಿತುಕೊಳ್ಳುವ ಸಾಹಿತ್ಯವಾವುದೂ ಉಳಿಯದು. “ಕತ್ತೆ ಬಲ್ಲುವೇ ಕಸ್ತೂರಿಯ ?’ ಎಂಬ ನಾಣ್ಣುಡಿಯಂತೆ ನಮ್ಮ ಜನಸಮುದಾಯವು ಅದನ್ನು ಅರಿಯಬೇಕಾದಷ್ಟು ಅರಿತಿಲ್ಲವೆಂದರೂ ಯೋಗ್ಯವು. ಇಂಗ್ಲೀಷದಲ್ಲಿ "*Golden Sayings*" ಬಹಳ ಮಹತ್ವದವು ಎಂದು ತಿಳಿದುಕೊಂಡು ತಮ್ಮ ಜೀವನವನ್ನೇ ಇಂಗ್ಲೀಷಕ್ಕೆ ಮೀಸಲಿಟ್ಟ ಅನೇಕ ಮಹಾ ವ್ಯಕ್ತಿಗಳು ಉಂಟು. ಆದರೆ ಕನ್ನಡ ಸಾಹಿತ್ಯದ ಜೀವರತ್ನಗಳು ಈ ವಚನಗಳು ಎಂಬುದನ್ನು ವ್ಯಕ್ತಿಗಳು ಅರಿತಿಲ್ಲವೆಂದೇ ನಾನು ಇಲ್ಲಿ ಹೇಳಬ

ಯನುತ್ತೇನೆ. ಕಾಯಕವೇ ಕೈಲಾಸ, ಸತ್ಯವೇ ಶಿವನು, ಎಂಬ ಮಾತುಗಳನ್ನ *It's worship, Truth is God* ಎಂದು ಹೇಳಿದ್ದಾರೆ. ಕನ್ನಡ ಸಾಹಿತ್ಯವು ಸುಲಿದ ಬಾಳೆಯ ಹಣ್ಣು ಎಂದು ಅನುಭವಾಮೃತಕಾರರು ಹೇಳಿದ್ದುಂಟು. ಸಾಹಿತ್ಯ ಮಾತಂತೂ ಇರಲಿ

ಇನ್ನುನಾವು ಜಾತೀಯತೆಯ ಮಾತಿನತ್ತ ಹೊರಳಿದ್ದಾದರೆ, ಮಹಾತ್ಮಾ ಗಾಂಧೀಜಿಯವರು ೨೦ನೆಯ ಶತಮಾನದಲ್ಲಿ ಅಸ್ಪೃಶ್ಯರನ್ನು ಉದ್ಧಾರ ಮಾಡಿದ ಕಾರ್ಯವನ್ನು ಶಿವಶರಣರು ೧೨ನೇ ಶತಮಾನದಲ್ಲಿ 'ವಿಪ್ರ ಮೊದಲು ಅಂತ್ಯಜಕಡೆಯಾಗಿ ಎಲ್ಲರನ್ನೂ ಒಂದೇ ಎಂಬೆ. ಬ್ರಾಹ್ಮಣನಾಗಲಿ, ಕ್ಷತ್ರಿಯನಾಗಲಿ, ವೈಶ್ಯನಾಗಲಿ, ಶೂದ್ರನಾಗಲಿ, ಗುರುಕಾರುಣ್ಯವ ಪಡೆದು ಅಂಗದ ಮೇಲೆ ಲಿಂಗವ ಧರಿಸಿದವನು ಆಚಾರ ಸಂಪನ್ನ ಸತ್‍ಕ್ರಿಯನಾದ ಮಹಾತ್ಮನೇ ಮೂರುಲೋಕಕ್ಕೆ ಅಧಿಕಾರಿ' ಎಂಬ ಭಕ್ತಿಯುಕ್ತ ಮಾತುಗಳಿಂದ ಸರ್ವರಿಗೂ ತಿಳಿಯಾಗಿ ಅದರಿಂದಾಗುವ ದುಷ್ಪರಿಣಾಮವನ್ನು ತಿಳಿಸಿಕೊಟ್ಟಿದ್ದಾರೆ. ಇಷ್ಟೇ ಅಲ್ಲ, ಹರಳಯ್ಯ ಹಾಗು ಮಧುವರಸ ಇವರಲ್ಲಿ ನೆಂಟಸ್ತನ ಮಾಡಿಸಿದ್ದಾರೆ.

ಸಮಾಜವು ನೀತಿಯಿಂದ ಕೂಡಿದ್ದು, ನೀತಿಯು ಮಾನವ ಸಜೀವಾಳವು. ಅದು ಸತ್ಯ, ಅಹಿಂಸೆ, ಅಸ್ತೇಯ, ಅಪರಿಗ್ರಹ, ಇಂದ್ರಿಯನಿಗ್ರಹ, ಬ್ರಹ್ಮಚರ್ಯ ಮೊದಲಾದ ಕವಲುಗಳಿಂದೆ ಕೂಡಿದೆ, ಎಂದು ತಿಳಿದು ಇಂದು ಮಹಾತ್ಮಾಜೀಯವರು ಹೋರಾಡಿದಂತೆ ಅಂದು ಶರಣರು "ಸತ್ಯ ನುಡಿವುದೇ ಸ್ವರ್ಗಲೋಕ" "ದಯವು ಬೇಕು ಸಕಲ ಪ್ರಾಣಿಗಳಲ್ಲಿ" "ಕಳಬೇಡ ಕೊಲಬೇಡ" "ಇಂದಿಗೆಂದು ನಾಳೆಗೆಂದು ಚಿಂತಿಸಬೇಡ" "ಶರಣಸತಿ ಲಿಂಗಪತಿ" "ಲೋಕದಡೊಂಕ ನೀವೇಕೆ ತಿದ್ದುವಿರಿ, ನಿಮ್ಮ ನಿಮ್ಮ ತನುವ ಸಂತೈಸಿಕೊಳ್ಳಿರಿ" ಎಂಬ ಅನೇಕ ತಮ್ಮ ಹಿತನುಡಿಗಳಿಂದ ಕನ್ನಡಿಗರು ಎಂದೆಂದಿಗೂ ಮರೆಯದ ನೀತಿಮಾರ್ಗವನ್ನು ತೋರಿಸಿದ್ದಾರೆ. ನೀತಿಮಾರ್ಗವನ್ನು ಅನುಸರಿಸದಿದ್ದರೆ ಕಾಗೆ ಕೋಳಿಗಳಂತ ನಮ್ಮ ಬಾಳು ಕೀಳು.

'ಅಂಬಲಿ ಕಂಬಳಿ ಮಾಸ್ತು ಮಿಕ್ಕದ್ದೆಲ್ಲ ಜಾಸ್ತು' ಎಂಬ ಸೂಕ್ಷ್ಮ ತತ್ವದಂತೆ ಇವರು (ಶಿವಶರಣರು) ತಮಗೂ ಸಹಿತ ಪರರಿಗೆ ಬೇಕಾದ ವಸ್ತುವನ್ನು ಗಳಿಸುತ್ತಿದ್ದಿಲ್ಲ. ಇದಕ್ಕೆ ಉದಾ:— ಒರ್ವ ಕಳ್ಳನು ಜಂಗಮ ವೇಷದಲ್ಲಿ ಬಸವಣ್ಣನವರ ಧರ್ಮಪತ್ನಿಯ ಮೈಮೇಲಿನ ಆಭರಣಗಳನ್ನು

ಬಿಚ್ಚಲು ಹೋದನು. ಅಲ್ಲದೆ ಇವರು ಮೇಲಿಂದ ಮೇಲೆ ಹೇಳುತ್ತಿದ್ದರು-ಪರದ್ರವ್ಯಕ್ಕೆ ಆಶೆಮಾಡಿದರೆ 'ನರಕವೇಗತಿ'. ಅದು ಕಾರಣ ಯಾವತ್ತೂ ಶಿವಶರಣರು ಕಾಯಕಮಾಡುವಾಗ "ಹೊನ್ನಿನೊಳ ಗೊಂದೆಡೆಯು ಅನ್ನದೊಳ ಗೊಂದಗುಳ ಸೀರೆಯೊಳ ಗೊಂದೆಳೆಯು ಎನ್ನದೆನಲಾರ"- ಈ ಶಿವಶರಣರ ಮಾರ್ಗವನ್ನು ಅನುಸರಿಸಿ ನಾವು ಕಾಯಕಸಾಗಿಸಿದರೆ ನಮ್ಮ ರಾಜಕೀಯ ಮಟ್ಟಲು ಯಾವ ಸ್ಥಿತಿಗೆ ಬರುತ್ತಿತ್ತು ಬಲ್ಲಿರಾ? !

ವೇದ, ಆಗಮ, ಶಾಸ್ತ್ರ ಪುರಾಣವೆಲ್ಲವು ಕರ್ಮಕ್ಕೆ ಹೆಚ್ಚು ಮಹತ್ವ ಕೊಡುತ್ತವೆ. ಆದರೆ ವಚನಕಾರರು ಭಕ್ತಿಗೆ ಹೆಚ್ಚು ಮಹತ್ವಕೊಟ್ಟಿದ್ದಾರೆ. ಭಕ್ತಿಯೇ ಬೇಕಾದ್ದನ್ನು ಸಾಧಿಸುವ ಸಾಧನ ಎಂದು ಕಂಡು ಹಿಡಿದು ಅನುಭವಿಸಿದ್ದಾರೆ. ಅದು ಕಾರಣ ಜಗದಣ್ಣ ಬಸವಣ್ಣನು "ಭಕ್ತಿಭಾಂಡಾರಿಯಾದನು, ಎಂಬುದು "ಭಕ್ತಿಪ್ರಿಯ ನಮ್ಮ ಕೂಡಲಸಂಗನು ದೇವಾ" ಈ ವಚನದಿಂದ ತಿಳಿಯುತ್ತದೆ.

ಸ್ತ್ರೀಯರಿಗೂ ದೀಕ್ಷೆ ಮತ್ತು ಷಟ್‌ಸ್ಥಲ ಸಾಧನ ಮಾರ್ಗಗಳು ಉಂಟೆಂದು ಸಮಾನವಾದ ಅವಕಾಶವನ್ನು ಕೊಟ್ಟುದರ ಫಲವನ್ನು ಈ ನಮ್ಮ ಶಿವಶರಣರಲ್ಲಿ ಕಾಣಬಹುದು. ಹೆಂಗಸರು ಮಾಯೆಯೆಂದಾಗಲಿ, ಅವರು ಕೀಳೆಂದಾಗಲಿ; ಕೇವಲ ಗೃಹಕೃತ್ಯ ನಿರ್ವಹಣದ ತೊತ್ತು ಎಂದಾಗಲಿ ಪುರುಷನ ಭೋಗಸಾಮಗ್ರಿ ಯೆಂದಾಗಲಿ ಭಾವಿಸದೆ, ಅವರೂ ಜ್ಞಾನವನ್ನು ಉಪದೇಶಿಸಬಲ್ಲ ಮಹಾನುಭಾವಿಗಳೆಂದು ಶಿವಶರಣರ ಪವಿತ್ರವಾದ ವಚನ ಧರ್ಮ ಗೌರವಿಸುತ್ತಿದೆ. ಗಂಡು ಹೆಚ್ಚು ಹೆಣ್ಣು ಕಡಿಮೆ ಎಂದು ಹೆಣ್ಣನ್ನು ಅಲ್ಲಗಳೆಯಬಾರದು. ದೇಹದಿಂದ ಮಾತ್ರ ಗಂಡು ಹೆಣ್ಣುಗಳ ಭೇದವೇ ಹೊರತು, ಆತ್ಮವು ಗಂಡೂ ಅಲ್ಲ, ಹೆಣ್ಣೂ ಅಲ್ಲ. ಆತ್ಮನಿಗೆ ಅಂಟಿಕೊಂಡಿರುವ ಮಲತ್ರಯಗಳು ಕಳಚಿಬಿದ್ದರೆ ಸ್ವರೂಪ ಜ್ಞಾನ ಉಂಟಾಗುವದರಿಂದ ಸ್ತ್ರೀ ದೇಹಧಾರಿಗೂ ಮೋಕ್ಷ ಉಂಟು, ಲಿಂಗೈಕ್ಯ ಉಂಟು, ಎಂದು ವಚನ ಧರ್ಮ ಹೇಳುತ್ತಿದೆ. ಒಟ್ಟಿನಮೇಲೆ ವಿಶ್ವಧರ್ಮವಾದ ನಮ್ಮ ವೀರಶೈವ ಧರ್ಮದಲ್ಲಿ ಹೆಣ್ಣು ಮತ್ತು-ಗಂಡು ಗಳಿಬ್ಬರಿಗೂ ಸಂಸ್ಕಾರ ಉಂಟು. ಆದರೆ ಉಳಿದ ಧರ್ಮಗಳ ಉದಾಹರಣೆ ತಕ್ಕೊಂಡದ್ದಾದರೆ ನಮ್ಮ ಧರ್ಮಗಳಂತೆ ಗಂಡುಹೆಂಡರುಗಳಿಗೆ ಸಂಸ್ಕಾರವಿಲ್ಲ. ಮಹಾದೇವಿಯಕ್ಕ, ಮುಕ್ತಾಯಕ್ಕ, ಮೊದಲಾದವರು ಹೇಗೆಯೇ ಮುಕ್ತಿಯನ್ನು ಪಡಿದಿದ್ದಾರೆ. ತಾಯಿದೇವರೆಂದು ವೇದಹೇಳಿತು.

ಆದರೆ ಅದಕ್ಕಿಂತ ಮುನ್ನಡಿಯನ್ನಿಟ್ಟ ನಮ್ಮ ವಚನ ಧರ್ಮವು ಹೆಂಣು ದೇವರೆಂದು ಸಾರಿತು. ಈಗ ನಡೆದಿರುವ ಸ್ತ್ರೀಸ್ವಾತಂತ್ರ್ಯ ಕಾರ್ಯವನ್ನು ಶಿವಶರಣರು ಮೇಲ್ಕಾಣಿಸಿದಂತೆ ೧೨ನೆಯ ಶತಮಾನದಲ್ಲಿ ಜರುಗಿಸಿದ್ದಾರೆ, ಎಂಬುದು ಕೆಳಗಿನ ವಚನದಿಂದ ತಿಳಿದು ಬರುತ್ತದೆ.

"ಗಂಡುಳ್ಳವನ್ಮ ನ ಗೌರಿ ಎಂದು ಕರೆದಡೆ
ಭೂಮಂಡಲಕ್ಕೆ ಅರಸನಾಗಿ ಹುಟ್ಟುವನಾತನು.
ಗಂಡುಳ್ಳವನ್ಮನ ಒಡೆವೆರೆಗಾತ
ನರಕದಲಿ ದಿಂಡುಗೆಡದಿಪ್ಪನೈ ರಾಮನಾಥ

ಅದುಕಾರಣ ಶಿವಶರಣರನ್ನು ಅನುಸರಿಸುವದು ನಮ್ಮೆಲ್ಲರ ಆದ್ಯ ಕರ್ತವ್ಯ.

---

## ಕಾಯಕದ ರೀತಿಗಳು

( ಲೇಖಕಃ— ಶ್ರೀ ಜೆ. ತಿಮ್ಮಪ್ಪ, ಶಿರಿಗೆರೆ. )

—೦೦೦—

ದಿ. ೧೬-೧-೫೪ನೇ ಶನಿವಾರ ಚಳಿಗಾಲದ ಸೇವಾಶಿಬಿರದ ಮುಕ್ತಾಯ ಸಮಾರಂಭ ದಾವಣಗೆರೆ ಸಿಟಿ ಡಾ. ಪಿ. ನಾಗನಗೌಡರ ಅಧ್ಯಕ್ಷತೆಯಲ್ಲಿ ಏರ್ಪಟ್ಟಿತ್ತು. ಈ ಸಮಾರಂಭದ ಅಂಗವಾಗಿ ಹಿಂದೀ ವಿದ್ಯಾರ್ಥಿಗಳು "ಕಾಯಕವೇ ಕೈಲಾಸ" ವೆಂಬ ನಾಟಕವನ್ನು ಅಭಿನಯಿಸಿದರು. ಈ ಸಮಾರಂಭದಲ್ಲಿ ಶ್ರೀ ತರಳಬಾಳು ಜಗದ್ಗುರು ಶ್ರೀ ಶಿವಕುಮಾರ ಶಿವಾಚಾರ್ಯ ಮಹಾಸ್ವಾಮಿಗಳು ನಾಟಕೀಯ ವಸ್ತುವಿನ ಪರಿಚಯ ಮಾಡುತ್ತಾ ಈ ದಿನದ ಸಮಾರಂಭದ ಅಂಗವಾಗಿ ನಡೆದಿರುವ ಕಾರ್ಯಕ್ರಮಗಳಲ್ಲಿ ಕಾಯಕವೇ ಕೈಲಾಸವೆಂಬ ನಾಟಕ ಪ್ರದರ್ಶನವು ಒಂದು ಕಾರ್ಯಕ್ರಮವಿತ್ತು. ಇಲ್ಲಿ ವಿದ್ಯಾರ್ಥಿಗಳ ಚಟುವಟಿಕೆ ಪ್ರಾರಂಭವಾದಂದಿನಿಂದಲೂ, ಪ್ರತಿಸಮಾರಂಭದಲ್ಲೂ ಒಂದೊಂದು ನಾಟಕವು ಪ್ರದರ್ಶಿತವಾಗುತ್ತಿರುವುದು ಪದ್ಧತಿಯಾಗಿರುವದು. ಇವುಗಳಲ್ಲಿ ಶರಣಸಾಹಿತ್ಯಕ್ಕೆ ಸಂಬಂಧಪಟ್ಟುವೇ ಹೆಚ್ಚಾಗಿರುತ್ತವೆ. ಶರಣಸಾಹಿತ್ಯವೆಂದರೆ ಸಾಮಾನ್ಯವಾಗಿ ವೀರಶೈವದ ಧರ್ಮಸಿದ್ಧಾಂತವೆಂದು ಜನರು ಭಾವಿಸುತ್ತಾರೆ. ಆದರೆ ಈ ಕಮ್ಮ ಭಾವನೆ ಸರಿಯಾದುದಲ್ಲ. ನಾವು ಯಾವದೇ ಒಂದು ಧರ್ಮ

ಸಿದಾ ನ್ನು ತನ್ನದಲ್ಲವೆಂಬ ಸಂಕುಚಿತ ದೃಷ್ಟಿಯಿಂದ ನೋಡಬಾರದು. ನಾವು ಇಲ್ಲಿಯೇ ಮುಗ್ಗರಿಸುತ್ತಿದ್ದೇವೆ. ನಮ್ಮ ಈ ಸಂಕುಚಿತ ಮನೋಭಾವವೇ ಈ ಜಾತಿಮತಗಳ ಕಲಹಕ್ಕೆ ಕಾರಣ. ನಾವು ಪ್ರತಿಯೊಂದು ಧರ್ಮಸಿದ್ಧಾಂತವನ್ನೂ ವಿಶಾಲಭಾವನೆಯಿಂದ ಪರಿಶೀಲಿಸಬೇಕು. ಯಾವುದೇ ಧರ್ಮತತ್ವವಾಗಲೀ ಪ್ರತಿಯೊಂದು ದೇವನೆಡೆಗೆ ಮಾನವನನ್ನು ಕರೆದೊಯ್ಯುವ ಹೆದ್ದಾರಿಯೆಂಬುದನ್ನು ನಾವು ಮನಗಾಣಬೇಕು. ನಮ್ಮ ಸ್ವಧರ್ಮದ ಮಹತ್ವ ಮತ್ತು ವೈಶಿಷ್ಟ್ಯಗಳ ಪರಿಜ್ಞಾನವಾಗಬೇಕಾದರೆ ಪರಧರ್ಮಗಳ ಅರಿವು, ಅತ್ಯಾವಶ್ಯಕ. ವೀರಶೈವಧರ್ಮ ಅಂದರೆ ಶರಣಧರ್ಮವು. ಅದು ಯಾವುದೇ ಒಂದು ಜಾತಿಮತವನ್ನು ನಿರ್ದೇಶಿಸಿಲ್ಲ. ಅದು ಮಾನವ ಪ್ರಪಂಚವನ್ನೇ ಒಂದು ಬಾಂಧವ್ಯದಲ್ಲಿ ಬಂಧಿಸಲು ಯತ್ನಿಸುತ್ತಿದೆ. ಈ ಶರಣಧರ್ಮದಲ್ಲಿ ನಾವು ಉಪನಿಷತ್ ಧರ್ಮದ ವಿಶಾಲತೆಯನ್ನೂ, ಬೌದ್ಧಧರ್ಮದ ಅಹಿಂಸೆಯನ್ನೂ, ಜೈನಧರ್ಮದ ದಯೆಯನ್ನೂ ಮುಸ್ಲಿಂ ಧರ್ಮದ ಏಕನಿಷ್ಠೆಯನ್ನೂ, ಕ್ರೈಸ್ತಧರ್ಮದ ಭಕ್ತಿಯನ್ನೂ ಕಾಣಬಹುದಾಗಿದೆ.

ಶರಣ ಧರ್ಮದ ಗುರಿ ಕೇವಲ ಪರಲೋಕಸುಖವಲ್ಲ. ಇಹಲೋಕದ ಸುಖವೂ ಗುರಿಯಾಗಿದೆ. ಆದ್ದರಿಂದಲೇ ಅಣ್ಣ ಬಸವಣ್ಣನವರು ಲೋಕವೆಂಬುದು ಕರ್ತಾರನ ಕಮ್ಮಟವಯ್ಯ, ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರಯ್ಯಾ. ಇಲ್ಲಿ ಸಲ್ಲದವರು ಅಲ್ಲಿ ಸಲ್ಲರಯ್ಯಾ ಎಂದು ಹೇಳಿದ್ದಾರೆ. ಜಗತ್ತಿನ ನಾನಾ ಧರ್ಮಗಳು ಕೇವಲ ಒಬ್ಬೊಬ್ಬ ವ್ಯಕ್ತಿಗಳಿಂದ ಕಂಡುಹಿಡಿಯಲ್ಪಟ್ಟಿವೆ. ಆದರೆ ಈ ವೀರಶೈವ ಧರ್ಮವು ಯಾವನೇ ಒಬ್ಬ ವ್ಯಕ್ತಿಯಿಂದ ಕಂಡುಹಿಡಿಯಲ್ಪಟ್ಟುದಲ್ಲ. ನೂರಾರು ಜನ ಶರಣ ಶರಣೆಯರ ವಾದ ವಿವಾದಗಳ ಫಲವಾಗಿ ಉದಯಿಸಿದ ಅನುಭವಗಳ ಸಾರವಿದು. ಒಂದೇ ಒಂದು ಮಾತಿನಲ್ಲಿ ಹೇಳುವದಾದರೆ ಈ ಶರಣ ಧರ್ಮವು ಸರ್ವಾಧಿಕಾರಿ ಧರ್ಮವಲ್ಲ. ಪ್ರಜಾಪ್ರಭುತ್ವದ ವಿಶಾಲ ವಿಚಾರ ತಳಹದಿಯ ಮೇಲೆ ಕಟ್ಟಲ್ಪಟ್ಟ ಧರ್ಮ. ಇದು ರಾಜರ ಕಾಲವಲ್ಲ, ಅಂತೆಯೇ ಸರ್ವಾಧಿಕಾರಿಗಳ ಕಾಲವೂ ಅಲ್ಲ. ಪ್ರಜಾಪ್ರಭುತ್ವಕಾಲ. ಆದರೆ ಪ್ರಜಾಪ್ರಭುತ್ವ ರಾಜಕೀಯ ಕ್ಷೇತ್ರಕ್ಕೆ ಮಾತ್ರ ಅನ್ವಯಿಸುತ್ತದೆಂದು ನಾವು ಭಾವಿಸಿದ್ದೇವೆ. ಆದರೆ ನಾವಿಂದು ಪ್ರತಿ ಸಂದರ್ಭದಲ್ಲೂ ಪ್ರಜಾ ಪ್ರಭುತ್ವವನ್ನು ಆದರಿಸುವ ಯುಗದಲ್ಲಿದ್ದೇವೆ. ನಮ್ಮ ಶರಣರು ಧಾರ್ಮಿಕ ಕ್ಷೇತ್ರದಲ್ಲೂ ಪ್ರಜಾಪ್ರಭುತ್ವದ ಉಪಯೋಗ ಮಾಡಿಕೊಂಡಿದ್ದಾರೆ. ನಮ್ಮ

ನಾಡಿನ ಭವಿಷ್ಯವನ್ನು ರೂಪಿಸಲು ಘಟನಾವಳಿಯನ್ನು ರೂಪಿಸಿಕೊಂಡಿದ್ದೇವೆ. ಶರಣರು ಈಗ್ಗೆ ಎಂಟುನೂರು ವರ್ಷಗಳ ಕೆಳಗೆ ಅನುಭವ ಮಂಟಪವನ್ನು ರಚಿಸಿಕೊಂಡು ಅಲ್ಲಿ ಜಗತ್ತಿನ ಮಾನವರ ನಾನಾ ಜನರ ಅನುಭವಗಳ ಸಮ್ಮೇಲನವಾಗುವುದರಿಂದ ಈ ಶರಣ ಧರ್ಮವು ಎಂದೆಂದಿಗೂ ಉಪಯೋಗವಾಗುವ ವಿಶಾಲ ತಳಹದಿಯ ಮೇಲೆನಿಂತಿದೆ ಅನೇಕ ತಜ್ಞರು ಅಭಿಪ್ರಾಯ ಪಟ್ಟಿರುವಂತೆ ಶರಣ ಸಾಹಿತ್ಯದಂತಹ ಸಾಹಿತ್ಯ ಜಗತ್ತಿನ ಯಾವ ಭಾಷೆಯಲ್ಲೂ ಇಲ್ಲವೆಂಬುದು ನಿಜವಾಗಿಯೂ ನಾವು ವಿಶೇಷವಾಗಿ ಕನ್ನಡಿಗರು ಹೆಮ್ಮೆ ಪಟ್ಟುಕೊಳ್ಳುವ ಸಂಗತಿಯಾಗಿದೆ. ಶರಣರು ನಾನಾ ಸಮಸ್ಯೆಗಳ ಪರಿಹಾರವನ್ನು ಕಂಡು ಹಿಡಿಯುವ ಮೂಲಕ ವಿಶ್ವಶಾಂತಿಗೆ ಭದ್ರವಾದ ನೆಲಗಟ್ಟನ್ನು ಕಟ್ಟಿದರು. ಅಂತಹ ಅನೇಕ ಸಮಸ್ಯೆಗಳಲ್ಲಿ ನಿರುದ್ಯೋಗ ಸಮಸ್ಯೆಯೂ ಒಂದು. ಇಂದಿಗೂ ಇದು ನಮ್ಮನಾಯಕರನ್ನು ಚಿಂತೆಗೆ ಈಡುಮಾಡಿದೆ. ಶರಣರು ನಿರುದ್ಯೋಗ ಸಮಸ್ಯೆಯನ್ನು ಹೇಗೆ ಪರಿಹರಿಸಿದರೆಂಬುದನ್ನು ನೀವಿಂದು ಈ ನಾಟಕದಲ್ಲಿ ನೋಡುತ್ತೀರಿ. ಎಂದಾದರೂ ಈ ನಿರುದ್ಯೋಗ ಸಮಸ್ಯೆಗೆ ಮೂಲ ಕಾರಣರು "ಕಲಿತವರು" "ತಿಳಿದವರು" ಎಂಬುದನ್ನು ನೀವಿಲ್ಲಿ ಕಾಣುತ್ತೀರಿ. ಇಂದಾದರೂ ನಮ್ಮ ನಾಡು ಕೊರತೆಯಿಂದ ಕೂಡಿದೆ. ನಾವು ಶರಣರ ಮಾರ್ಗದಲ್ಲಿ ನಡೆದರೆ ನಿಜವಾಗಿಯೂ ನಮ್ಮ ಭವಿಷ್ಯ ಭವ್ಯವಾಗುವುದರಲ್ಲಿ ಸಂಶಯವಿಲ್ಲ. ಶರಣರ ಆರ್ಥಿಕ ಯೋಜನೆಗೆ ನೀತಿಯು ತಳಹದಿಯಾದೆ. ದಯೆಯು ಹೊದಿಕೆಯಿದೆ. ಆರ್ಥಿಕಸ್ಥಿತಿ ಇಂದು ರಷ್ಯಾದಲ್ಲಿ ಉತ್ತಮವಾಗಿದೆ. ಆದರೆ ಅಲ್ಲಿ ದಯೆಗೆ ಸ್ಥಾನವಿಲ್ಲ. ಅಮೇರಿಕಾದಲ್ಲಿ ಉತ್ತಮವಾಗಿದೆ ಎಂದರೆ ಅಲ್ಲಿ ನೀತಿಗೆ ಗೌರವವಿಲ್ಲ. ನೀತಿ ಮತ್ತು ದಯೆಗಳಿಲ್ಲದ ಆರ್ಥಿಕ ಯೋಜನೆ ಎಂದಾದರೂ ಅಶಾಂತಿಗೀಡಾಗದಿರದು.

ಜಗತ್ತಿನ ಅಶಾಂತಿಗೆ ಕಾರಣ ಆರ್ಥಿಕ ದುರವಸ್ಥೆ. ನಾಳೆ ವಿಶ್ವದ ಮಹಾಯುದ್ಧವಾದರೆ ಅದು ಆರ್ಥಿಕ ನೀತಿಯ ಕಾರಣದಿಂದಲೇ. ಜಗತ್ತನ್ನು ವಿನಾಶಮುಖದಿಂದ ಉಳಿಸಬೇಕಾದರೆ ಶರಣರ ಆರ್ಥಿಕ ನೀತಿಯನ್ನು ನಾವು ಅಂಗೀಕರಿಸಬೇಕು. ಇದನ್ನು ಅವರು ಕಾಯಕ ಸಿದ್ಧಾಂತವೆಂದು ಕರೆದಿದ್ದಾರೆ. ಈ ಸಿದ್ಧಾಂತದಲ್ಲಿ ಯಾರಿಗೂ ವಿನಾಯತಿ ಇಲ್ಲ. ಯಾರು ಬಚ್ಚಿಡುವಂತಿಲ್ಲ. ಹಂಚುವ ಉಣ್ಣುವ ನೀತಿಯಿದೆ, ಎಂಬುದಾಗಿ ಅಪ್ಪಣೆ ಕೊಡಿಸಿದರು.

# ಬಸವಣ್ಣನವರು ಸಮಾಜ ಕ್ರಾಂತಿ ಪುರುಷರು

—०००—

**ಕ್ರಾಂತಿಯ ಸ್ವರೂಪ —**

ಕ್ರಾಂತಿ ಎಂದೊಡನೆ ಮೈನವಿರೇಳುತ್ತದೆ. ಧ್ವನಿ ಕುಗ್ಗಿ ಕಠೋರವಾಗುತ್ತದೆ. ಹೃದಯ ವಿಹ್ವಲಗೊಳ್ಳುತ್ತದೆ. ಮನದಲ್ಲಿ ವಿಚಾರಗಳ ಕೋಲಾಹಲ ಏಳುತ್ತದೆ. ಭ್ರಮೆ ಯಾಗುತ್ತದೆ. ಕ್ರಾಂತಿ ಎಂದರೆ ರವಿಯುದಯದಂತೆ ಜನರ ಕಲುಷಿತ ಮನಸ್ಸನ್ನು ಹಸಗೊಳಿಸಿ ನಯವಾಗಿ ಚೈತನ್ಯವಾಗಿ ಹಳೆಯದೆಲ್ಲಾ ಹೊಸತನ್ನಾಗಿ ಮಾಡುತ್ತದೆ. ದೇಶದಲ್ಲಿಯ ಅನೀತಿ ರಾಜದಾಡಳಿತೆಯನ್ನು ಕಿತ್ತೊಗೆಯಲು, ಸಮಾಜದ ಅತ್ಯಾಚಾರ ಅನ್ಯಾಯವನ್ನು ಕಡಿದೊಗೆಯಲು ಕ್ರಾಂತಿಯ ಕೊಡಲಿ ಬೇಕು. ಸಮಾಜದ ಹಳೆಯ ಸಂಪ್ರದಾಯಗಳನ್ನು ಹತ್ತಿಕ್ಕಿ ಹೊಸಸಮಾಜವನ್ನು ಕಟ್ಟಲು ಒಂದು ಕ್ರಾಂತಿಬೇಕು. ಹೀಗೆ ಕ್ರಾಂತಿಗಳಲ್ಲಿ ಎರಡು ವಿಧವುಂಟು. ಒಂದು ರಾಜ್ಯಕ್ರಾಂತಿ ಮತ್ತೊಂದು ಸಮಾಜಕ್ರಾಂತಿ. ಅನೀತಿ ಅನ್ಯಾಯದ ಮೇಲೆ ರಾಜ್ಯಕ್ರಾಂತಿಯಾಗುತ್ತದೆ. ಅತ್ಯಾಚಾರ ಪಕ್ಷಪಾತದ ಮೇಲೆ, ಧರ್ಮದ ಹೆಸರಿನಲ್ಲಿ ಸಮಾಜಕ್ರಾಂತಿ ಯಾಗುತ್ತದೆ. ಜನತ್ತಿನಲ್ಲಿ ಸಣ್ಣ ಪುಟ್ಟ ಸಮಾಜಕ್ರಾಂತಿಗಳು ಎಷ್ಟೋ ಆಗಿವೆ. ಅವುಗಳಲ್ಲಿ ಮುಖ್ಯವಾದವುಗಳು ನಾಲ್ಕು, ಯುರೋಪದಲ್ಲಿ, ಮಧ್ಯ ಏಶಿಯಾದಲ್ಲಿ, ಭಾರತದಲ್ಲಿ, ಮತ್ತು ಚೀನದಲ್ಲಿ.

ಯುರೋಪದಲ್ಲಿ ಆದ ಕ್ರಾಂತಿಯು ಸಾಕ್ರೇಟೀಸನಿಂದ, ಏಸುವಿನಿಂದ ಗ್ರೀಕ ಹಳೆಧರ್ಮದ ಮೂಢನಂಬಿಕೆಯಿಂದ ಸಮಾಜದಲ್ಲಿ ಅಧರ್ಮ ಅನೀತಿ ಹೆಚ್ಚಾಗಿ, ಜನ ಲ್ಲಿ ಅಜ್ಞಾನದ ಅಂಧಕಾರವು ಪಸರಿಸಿತ್ತು. ಮನುಷ್ಯನು ಬದುಕು ಸುಖಕ್ಕಾಗಿ, ಆನಂದಕ್ಕಾಗಿ, ಸುಖ ಆನಂದವನ್ನು ಸಂಪಾದಿಸಲು ದೇವತೆಗಳನ್ನು ಒಲಿಸಲು ಎಂಥ ಕೆಲಸನ್ನಾದರೂ ಮಾಡುತ್ತಿದ್ದರು.

ಸಾವು ನೋವು ಸುಖದುಃಖಗಳನ್ನು ಕುರಿತು ಪ್ಲೇಟೋ ಅನೇಕ ಪ್ರಶ್ನೆಗಳನ್ನು ಸಾಕ್ರೇಟೀಸಗೆ ಕೇಳಿದ್ದಾನೆ. 'Is there a life after death? What is the meaning of the good and evil around us? How can we work in the right way? What

is happiness? These questions we ask to day They are the questions put two thousand years ago. Plato offers his wisdom and his vision of the happy life to help us find the answer.

ಅಜ್ಞಾನದ ಅಂಧಕಾರಕ್ಕೆ ಜ್ಞಾನದ ದೀವಿಗೆ ಹಚ್ಚಿದವನು ಸಾಕ್ರೇಟಿಸ್. ಜ್ಞಾನದ ಜ್ಯೋತಿಯಿಂದ ಜಗತ್ತಿನಲ್ಲಿ ಬೆಳಕು ತಂದವ ಏಸುಕ್ರಿಸ್ತ.

ಕಾನ್‌ಸ್ಟಾಂಟಿನೋಪಲ್‌ನಲ್ಲಿ ಮೂಡಣ ಸಾಮ್ರಾಜ್ಯವೂ ಪಾರ್ಸಿಸ್ಥಾನ ಸಾಮ್ರಾಜ್ಯವೂ ಪರಸ್ಪರವಾಗಿ ಹೋರಾಡುತ್ತ ಹೆಣಗುತ್ತ ಇಬ್ಬರ ನಡುವೆ ಸಂಪದ್ಯುಕ್ತವಾಗಿದ್ದ ಏಶಿಯಾ ಮೈನರ್ ಪ್ರದೇಶವನ್ನು ಹಾಳು ಮಾಡಿ ತಾವು ಹಾಳಾಗಿ ಹೋದವು. ಆಗ ಅಲ್ಲಿ ಲೂಟಿ ಹೊಡೆಯುವ ಆಶೆ, ತಮ್ಮ ತಮ್ಮೊಳಗೆ ಹೊಡೆದಾಡುವದು, ಕೊಲೆ ಸುಲಿಗೆಗಳಿದ್ದವು. ಅರಬಸ್ಥಾನ ತುರ್ಕಸ್ಥಾನದ ನಿವಾಸಿಗಳಲ್ಲಿ ಒಕ್ಕಟ್ಟೇ ಉಳಿಯಲಿಲ್ಲ. ಬಂದ ಅರಸರ ಅಮಾನುಷತ್ವ ಬೆಳೆಯುತೊಡಗಿತು. ಇಂಥ ಸಮಯದಲ್ಲಿ 'ನಾವೆಲ್ಲರೂ ಅಣ್ಣತಮ್ಮಂದಿರು, ದೇವರು ಒಬ್ಬನೇ ಇದ್ದಾನೆ, ಅವನು ಹೇಯಕೃತಿಗಳನ್ನು ಸೇರುವದಿಲ್ಲ' ಎಂಬ ಸಂದೇಶವನ್ನು ದೇವದೂತ ಮಹ್ಮದ ಪೈಗಂಬರರು ತಂದರು.

ಭರತಖಂಡವು ಪುಣ್ಯಭೂಮಿ, ವೇದಗಳ ಮೂಲಸ್ಥಾನ. ಇಂಥ ಪುಣ್ಯಸ್ಥಳದಲ್ಲಿ ದೇವರ ಹೆಸರಿನಲ್ಲಿ ಸ್ವಾರ್ಥವನ್ನು ಬಯಸಿ ಅಲ್ಲದ ಸಲ್ಲದ ಕೃತಿಗಳನ್ನು ಮಾಡಲು ಹೇಸುತ್ತಿರಲಿಲ್ಲ. ಆಗ ಅಹಿಂಸಾ-ಶಾಂತಿಯನ್ನು ಸೂರ್ಯಚಂದ್ರರನ್ನಾಗಿ ಮಾಡಿಕೊಂಡು ಜಗತ್ತಿಗೆ ಬೆಳಕನ್ನು ಕೊಟ್ಟವ ಗೌತಮ. ಚೀನದಲ್ಲಿಯೂ ಕಾನ್‌ಫೂಶಿಯಸ್‌ನು ಸಂದೇಶವನ್ನು ತಂದು ಜನರಿಗೆ ಕೊಟ್ಟ. ಇವರೆಲ್ಲರ ಗುರಿ ಒಂದೇಯಾಗಿದೆ. ಮಾರ್ಗಗಳು ಮಾತ್ರ ಬೇರೆ ಬೇರೆ. ಗುರಿ ಒಂದೇ ಯಾದರೂ ಮಾರ್ಗಗಳು ಬೇರೆಬೇರೆ ಯಾಗಲು ಕಾರಣವುಂಟು. ಅವು ಭೌಗೋಲಿಕ, ರಾಜಕೀಯ ಕಾರಣಗಳು. ಇವುಗಳ ಮೇಲೆ ಅನೇಕ ಸಮಾಜ ಸಂಪ್ರದಾಯಗಳ ಬದಲಾವಣೆಗಳು ಪಾಶ್ಚಾತ್ಯ ದೇಶದಲ್ಲಿ ಆದವು. ಆದರೆ ನಮ್ಮ ಭಾರತವು ಸುವರ್ಣಭೂಮಿ. ಇಲ್ಲಿ ಉಸುಕು ಬಿತ್ತಿ ಮುತ್ತು ಬೆಳೆಯುವಂತಹ ಭೂಮಿ. ಇಂಥ ದೇಶಕ್ಕೆ ಯಾವ ಕೊರತೆಯೂ ಇಲ್ಲ. ಜನರು ಉಂಡುಟ್ಟು ಸುಖದಿಂದ

ಕಾಲಹರಣಮಾಡುತ್ತ ಶಯ್ಯೆಯಮೇಲೆ ಸ್ವಪ್ನಾದಾವಸ್ಥೆಯಲ್ಲಿ ಕಂಡ ಸಂಗತಿಗಳನ್ನು ಬಿಡಿಸುವಂತೆ ವೇದಗಳು ಹುಟ್ಟಿದವು. ಇವು ಹುಟ್ಟಿದವೇನೋ ಸರಿ. ಆದರೆ ಪರಿಶುದ್ಧಿಯಾಗಿ ಬೆಳಕಿಗೆ ಬರಲಿಲ್ಲ. ಇದ್ದುದು ಒಂದು, ಆದದ್ದು ಬೇರೆ. ಹೀಗಾಗಿ ಹಿಂದೂಧರ್ಮದಲ್ಲಿ ಹೊಲಸೆದ್ದು ನಷ್ಟಕೆ ಗುರಿ ಮಾಡಿತು.

### ಬಸವಣ್ಣನವರು ಹುಟ್ಟಿದುದು —

ಕಂನಾಡಿನಲ್ಲಿ ಆರ್ಯರು ಸೇರಿ, ದ್ರಾವಿಡರ ಸಂಸ್ಕೃತಿಯನ್ನು ನಾಶ ಗೊಳಿಸಿ ತಮ್ಮ ಶಕ್ತಿಯಿಂದ ಜನರನ್ನು ಅನ್ಯಾಯಮಾರ್ಗಕ್ಕೆ ಎಳೆದರು. ಯಾವ ಸ್ವಾತಂತ್ರ್ಯವನ್ನು ಅವರಿಗೆ ಕೊಡದೆ ವೇಶ್ಯ ಶೂದ್ರರನ್ನು ಕೀಳು ವರ್ಗದವರೆಂದು ಕಡೆಗಣಿಸಿದರು. ದ್ವಿಜರು ನಿಜವಾಗಿ ದ್ವಿಜಗಳೇ ಆದವು. ಮನುಷ್ಯತ್ವವನ್ನು ಅರಿಯಲಿಲ್ಲ. 'ತಾವು ಬ್ರಹ್ಮನ ಮಕ್ಕಳು, ನಾವೇ ಶ್ರೇಷ್ಠರೆಂದು ಭಾವಿಸಿದ ಜನರು ಜಾತಿಯ ಗರ್ವಾಂಧತೆಯಲ್ಲಿ ಮುಳುಗಿ ದರು. ಅವರನ್ನು ಹೊಡದೆಬ್ಬಿಸಿದ ಮಹಾಸತ್ಪುರುಷ ಬಸವಣ್ಣನವರು. ಬಸವಣ್ಣನವರು ಬ್ರಾಹ್ಮಣರಾದರೂ ಕೂಡ ತಮ್ಮ ಜನರೇ ಕೆಳವರ್ಗದ ವರ ಮೇಲೆಮಾಡುವ ಅತ್ಯಾಚರವನ್ನು ಖಂಡಿಸಿ ಅದನ್ನು ಹೋಗಲಾ ಡಿಸುವ ಸಲುವಾಗಿ ತಮ್ಮ ವೇಷವನ್ನು ಬದಲಾಯಿಸಿದರು.

### ಬಸವಣ್ಣನವರ ದೃಷ್ಟಿಕೋನ ಮತ್ತು ಮಹಾತ್ಮಾ ಗಾಂಧಿಯವರ ದೃಷ್ಟಿಕೋನ —

ಜನತೆಯಲ್ಲಿ ಸಮಾನತೆಯನ್ನು ತರುವಸಲುವಾಗಿ, ಅಸ್ಪೃಶ್ಯತೆ ಯನ್ನು ಹೋಗಲಾಡಿಸಲು ಹೆಣಗಾಡಿದವರು ಬಸವಣ್ಣ ಮತ್ತು ಮಹಾತ್ಮಾ ಗಾಂಧಿ. ಹೊಲೆಯರನ್ನು, ಮಾದಿಗರನ್ನು ಕಲೆಹಾಕಿ ಉಚ್ಚಮಟ್ಟಕ್ಕೇರಿಸಿ ದರು. ಜನತೆಯಲ್ಲಿ ಸಮಾನತೆಯನ್ನು ತಂದರು. ನಾವೆಲ್ಲರೂ ಮನುಷ್ಯ ರೆಂಬ ಭಾವನೆಯನ್ನು ತಿಳಿಸಿದರು. ಆದರೆ ಬಸವಣ್ಣನವರ ದೃಷ್ಟಿಕೋ ನವು ಎಂಥದಿದೆ? ಎಂಬುದನ್ನು ನಾವು ಊಹಿಸಬಹುದು. ಬಸವಣ್ಣನ ವರು ಅಸ್ಪೃಶ್ಯತೆ ನಿವಾರಣೆಗಾಗಿ ಅಸ್ಪೃಶ್ಯರನ್ನೇ ಮೇಲಕ್ಕೆತ್ತಿದರು. ಆದರೆ ಮಹಾತ್ಮಾಜೀಯವರು ಅಸ್ಪೃಶ್ಯತೆಯ ನಿವಾರಣೆಗೆ ಉಚ್ಚವರ್ಗದವರನ್ನು ಕೆಳಮಟ್ಟಕ್ಕೆ ತಂದರು. ಅಸ್ಪೃಶ್ಯರನ್ನು ಸುಧಾರಿಸಿ ಮೇಲ್ತರಗತಿಗೆ ಒಯ್ದ ವರು ಬಸವಣ್ಣನವರು. ಮೇಲ್ತರಗತಿಯ ಜನರನ್ನು ಕೆಳತರಗತಿಗೆ ಅಂದರೆ ಸುಧಾರಿಸಿದ ಜನರನ್ನು ಅಸ್ಪೃಶ್ಯರಲ್ಲಿ ಕೂಡಿಸಿ ಸಮಾನತೆಯನ್ನೇ ಮಾಡಿ ದವರು ಗಾಂಧೀಯವರು. ಅಂದಮೇಲೆ ನಮ್ಮ ಕರ್ನಾಟಕದ ಶರಣನ ದೃಷ್ಟಿ

ಕೋನ ಎಂಥದು ಇತ್ತು, ಎಂಬುದನ್ನು ನಾವು ಊಹಿಸಬಹುದು. ಬ್ರಹ್ಮನ ಮಕ್ಕಳು ನಾವೇ ಶ್ರೇಷ್ಠರೆಂದು ತಿಳಿದು ಸೊಕ್ಕಿನಿಂದ ನಡೆಯುತ್ತಿದ್ದ ಜನರ ಹಾದಿಯನ್ನು ಬಿಟ್ಟು, ನೀವು ಬ್ರಹ್ಮನ ಮಕ್ಕಳಾದರೆ, ನಾವು ಶಿವ ಶರಣರೆಂದರೂ, ಸಾಕಷ್ಟು ತತ್ವಗಳು ಸಾಕಷ್ಟು ಗ್ರಂಥಗಳಲ್ಲಿದ್ದವು. ಬರೀ ಹೇಳುವದರಿಂದ ಏನೂ ಪ್ರಯೋಜನ ವಿಲ್ಲೆಂಬುದನ್ನು ಬಸವಣ್ಣನವರು ತಿಳಿದಿದ್ದರು. ಈಜು ಬಾರದವನು ಬಾವಿಯಲ್ಲಿ ಬಿದ್ದಾಗ ಹಾಗೆ ಮಾಡ ಬೇಕು, ಹೀಗೆ ಮಾಡಬೇಕು, ಕೈಕಾಲು ಬಡಿ ಎಂದು ಹೇಳುವದರಿಂದ ಆತ ಬದುಕಲಾರ. ಆತನಿಗೆ ಸಹಾಯ ಮಾಡಬೇಕು, ಎತ್ತಿ ಹಿಡಿಯಬೇಕು, ಅದ ರಂತೆ ಇಂದ್ಕು ಅತಿ ಅಜ್ಞಾನದ ಅಂಧಕಾರದಲ್ಲಿ ಮುಳುಗಿದ ಜನತೆಗೆ ವೇದ ಗಳಲ್ಲಿಯ ತತ್ವಗಳನ್ನು ಹೇಳುವದರಿಂದ ಉಪಯೋಗವಿಲ್ಲ. ಜನರು ತಿಳಿ ವಳಿಕೆಯಾಗಲೆಂದು "ಗಿಳಿಯೋದಿ ಫಲವೇನು? ಬೆಕ್ಕು ಬಹುದ ಹೇಳಲ ರಿಯದು. ಜಗವೆಲ್ಲ ಕಾಂಬ ಕಣ್ಣು ತನ್ನ ಕೊಂಬ ಕೊಯಿಲೆಯ ಕಾಣ ಲರಿಯದು. ಇದಿರಗುಣವ ಬಲ್ಲೆವೆಂಬರು ತಮ್ಮ ಗುಣವ ಅರಿಯರು" ಸಮಾಜದಲ್ಲಿ ಹೊಕ್ಕು "ಜನಸೇವೆಯೇ ಈಶ ಸೇವೆ. ಕಾಯಕವೇ ಕೈಲಾಸ" ಎಂದು ಸಾರುತ್ತ ಸೇವೆಮಾಡಲು ಟೊಂಕಕಟ್ಟಿನಿಂತರು. ಈಜುಬಾರದವನ ಸಹಾಯಕ್ಕೆ ಈಜುಕುಂಬಳ ಕಾಯನ್ನು ಕೊಟ್ಟ ಶರಣರ ವಚನಾಮೃ ತವನ್ನು ನೀಡಿದರು. ನಾಯಿಗೆ ಹುಗ್ಗಿ ದಕ್ಕುವದಿಲ್ಲವಂತೆ. ಹಾಗೆ ಕೆಲವರಿಗೆ ವಚನಗಳು ಸೇರಲಿಲ್ಲ,

### ಕಾಯಕವೇ ಕೈಲಾಸ

ನಾವು ಕೈಲಾಸ ಕಾಣಬೇಕಾದರೆ ಕಾಯಕ ಮಾಡಬೇಕು. ಮನು ಷ್ಯನು ಹುಟ್ಟಿ ಬಂದಮೇಲೆ ಆತನ ಜೀವನದಲ್ಲಿ ಎಡರು ತೊಡರುಬರುತ್ತಿವೆ. ಅವನು ಧೀರತೆಯಿಂದ ಶಾಂತಿಯಿಂದ ಸಾಧನೆಮಾಡಿಕೊಳ್ಳಬೇಕು. ಸಂಸಾರದಲ್ಲಿ ನಾವು ಕಾರ್ಯದಲ್ಲಿಯೇ ಸುಖವನ್ನು ಪಡೆಯುತ್ತೇವೆ. ಲೋಕಕ್ಕೆ ಅನ್ನವ ನೀಡುವ ನೇಗಿಲಯೋಗಿ ತನ್ನ ಕಾರ್ಯದಲ್ಲಿಯೇ ಸ್ವರ್ಗ ಕಾಣುತ್ತಾನೆ.

"ನೇಗಿಲಕುಳದೊಳು ಅಡಗಿದೆ ಕರ್ಮ, ನೇಗಿಲ ಮೇಲೆಯೇ ನಿಂತಿದೆ ಧರ್ಮ" ಎಂದು ಕುವೆಂಪುರವರು ಹೇಳಿದ್ದು ಯಥಾರ್ಥ ವಿದೆ. ಇದೇ ರೀತಿಯಾಗಿ ತಮ್ಮ ಕಾಯಕದಲ್ಲಿಯೇ ಕೈಲಾಸವಿದೆ. ಹಿಂದಿನಕಾಲದಲ್ಲಿ ಯಂತೆ ಗವಿ ಕಂದರಗಳಲ್ಲಿಯೇ ಆಶ್ರಮ ಕಟ್ಟಿಕೊಂಡು ತಪಶ್ಚರ್ಯ ಮಾಡುತ್ತ ಮುಕ್ತಿಯ ಮಾರ್ಗವನ್ನು ಕಂಡುಕೊಳ್ಳುವ ಕಾಲವಲ್ಲ. ಇಂದಿ

ವಂತೆಯೇ ಬಸವಣ್ಣನವರ ಕಾಲದಲ್ಲಿಯೂ ಕೂಡ ಹೀಗೆ ಪರಿಸ್ಥಿತಿ ಇರ ಬೇಕು. ಹಗಲುರಾತ್ರಿ ದುಡಿದರೂ ಹೊಟ್ಟೆಗೆ ಅನ್ನ ಸಿಗದ ಕಾಲದಲ್ಲಿ "ಕಾಯಕವೇ ಕೈಲಾಸವೆಂದು" ಉಸುರಿದರು.

**ಜನಸೇವೆಯೇ – ಈಶಸೇವೆ –**

ಅನ್ಯಾಯದಿಂದ ಅತ್ಯಾಚಾರದಿಂದ ಬಳಲುವ ಜನತೆ ಕಿವಿವರಾತು ಸೈರಿಸಲಿಲ್ಲ. ಆದರಿಂದ ಉಪಯೋಗವಾಗಲಿಲ್ಲ. ಸಮಾಜದಲ್ಲಿಯ ಕುಂದು ಕೊರತೆಯನ್ನು ಹೋಗಲಾಡಿಸಲು ಸಮಾಜ ಸೇವೆಯನ್ನು ಮಾಡ ಹತ್ತಿದರು. ಜನಸೇವೆ ಮಾಡಹತ್ತಿದರು.

ಜನರ ಕಲುಷಿತ ಆತ್ಮವನ್ನು ಉದ್ಧಾರ ಮಾಡಿದಾಗ ಶಿವನೊ ಲಿಯುವ ಎಂದುಸಾರಿದರು. ಮಹಾತ್ಮಾಗಾಂಧಿಯಾದರೂ ಕೂಡ ಜನಸೇ ವೆಯೇ ಈಶಸೇವೆ ಎಂದು ಹೇಳಿದರು.

**ಇದೇ ಅಂತರಂಗ ಶುದ್ಧಿ – ಇದೇ ಬಹಿರಂಗ ಶುದ್ಧಿ —**

ಸಮಾಜದಲ್ಲಿ ಕೊಲೆ ಸುಲಿಗೆ ಸುಳ್ಳಾಡುವದನ್ನು ಖಂಡಿಸಿದರು. ಪರ ರಿಗೆ ಹೀಯಾಳಿಸಬೇಡಿರಿ. ಬಂದ ಅತಿಥಿಗಳಿಗೆ ಪ್ರೀತಿಯಿಂದ ಬರಮಾಡಿ ಕೊಳ್ಳಿರಿ. ಅವರ ಸೇವೆ ಮಾಡಿರಿ. ಮನುಷ್ಯನು ಹುಟ್ಟಿಬಂದ ಮೇಲೆ ಎಲ್ಲರೊಡನೆ ಸಹಕರಿಸಬೇಕಾಗುವದು. ಸಮಾಜದಲ್ಲಿ ಬಳುವೆ ಮಾಡ ಬೇಕಾಗುವದು. ಸಮಾಜದಲ್ಲಿ ಅನೇಕ ಜನರು ತುಂಬಿದ್ದಾರೆ. ಇಂಥದ ರಲ್ಲಿ ನಮ್ಮ ಜೀವನರಥವು ಸಾಗನುವಾಗಿ ಸುಪಥದಲ್ಲಿ ಸಾಗಬೇಕಾದರೆ ಬಸವಣ್ಣನವರು ಸತ್ಸಂಗ ಹಿಡಿ ಎಂದು ಹೇಳಿದರು. ಶರಣರ ಸತ್ಸಂಗ ದಲ್ಲಿದ್ದರೆ ನಿನ್ನ ಅಂತರಾತ್ಮ ಶುದ್ಧಿಯಾಗುವದು. "ಗಿರಿಗಳ ಮೇಲೆ ಹಲವು ತರುಮರಾದಿಗಳಿರ್ದು ಶ್ರೀಗಂಧದಸನ್ನಿಧಿಯಲು ಪರಿಮಳವಾ ಗದೇ? ಎಷ್ಟು ಚಂದವಾದ ದೃಷ್ಟಾಂತ! ಮರ್ತ್ಯ ಲೋಕದವರಿಗೆ ಕೈಬಿಡ ಬಾರದಮೋಹ ಸುಖ. ಈ ಸುಖಸಂಪಾದನೆಗಾಗಿಯೇ ಮಾನವನು ಸುವರ್ಣಸೇತುವೆಯನ್ನು ಕಟ್ಟಿ ದೇವಲೋಕಕ್ಕೆ ಮೊರೆಯನ್ನಿಡ ಹತ್ತಿದ. ಸಂಪಾದನೆಗಾಗಿ ದೇವಲೋಕವರನ್ನು ಒಲಿಸಿಕೊಳ್ಳಲು ಎಂಥ ನೀಚಕೃತಿ ಯನ್ನಾದರೂ ಮಾಡಲು ಸಿದ್ಧನಾದ, ಧರ್ಮದ ಹೆಸರಿನಲ್ಲಿ ಆಗುವ ಈ ಅತ್ಯಾಚಾರವನ್ನು ಖಂಡಿಸಿ, ದೇವಲೋಕ ಮರ್ತ್ಯಲೋಕ ಬೇರುಂಟೇ? ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರು. ಇಲ್ಲಿ ಸಲ್ಲದವರು. ಅಲ್ಲಿಯೂ ಸಲ್ಲರು. ಆಚಾರವೇ ಸ್ವರ್ಗ ಅನಾಚಾರವೇ ನರಕ ಎಂದು ಹೇಳಿದರು

ಇದರಿಂದ ಎಷ್ಟೋ ಜನರ ಮನಸ್ಸು ಮಾರ್ಪಟ್ಟಿತು. ಬದಲಾವಣೆ ಯಾಗಿ ಬೆಳಕಿಗೆ ಬಂದಿತು. "ನಿಷ್ಕಪಟಿಯಾಗು" ಎಂದು ಹೇಳಿದರು. ಕೇವಲ ಮನುಷ್ಯನ ಧ್ಯೇಯ, ಅವನ ಆಶೆ, ಹಣದ ಮೇಲೆ. ಗಂಡಹೆಂಡಿರ ಹೃದಯೊ ದಾದರೆ ಮಗು ಹುಟ್ಟಿ ಮಗುವಿನ ಮೇಲೆ ಪ್ರೀತಿಯಾಗುವಂತೆ ಸಮಾಜದಲ್ಲಿಯು ಜನರ ಹೃದಯಗಳು ಒಂದಾದರೆ ಹೊಸ ಸಮಾಜವು ನಿರ್ಮಾಣವಾಗಿ ಪ್ರೀತಿಗೆ ಪಾತ್ರವಾಗುತ್ತದೆ. "ಹೃದಯೊಲುಮೆಯ ಕಣ್ಣಾದು ಮುಳುಗಲು ಲೋಕಕೆ ಬೆಳಕಿಲ್ಲ" ಎಂದು ಕುವೆಂಪುರವರೂ ಇದೇ ರೀತಿಯಾಗಿ ಹೇಳಿದ್ದಾರೆ. ನಮಗೆ ವಿನಯಬೇಕು, ವಿನಯದಿಂದ ಸ್ನೇಹ ಸೌಹಾರ್ದಗಳು ಬೆಳೆಯುತ್ತವೆ. ಅದರಿಂದ ಹೃದಯಗಳು ನಿಷ್ಕಲ್ಮಷವಾಗುತ್ತವೆ. ಅಂದೇ ಅಂತರಂಗದ ಶುದ್ಧಿ ಬಹಿರಂಗ ಶುದ್ಧಿ ಯಾಗುತ್ತದೆ. ಶಿವನೊಲಿಯುವ.

**ಕ್ರಾಂತಿಪುರುಷ —**

ಕರ್ನಾಟಕದಲ್ಲಿ ದ್ವಿಜರು ಸತ್ಯವನ್ನು ಕುಗ್ಗಿಸಿದರು. ಅಸ್ಪೃಶ್ಯರನ್ನು ಉದ್ಧರಿಸಿ ಹೊಸ ಸಮಾಜದ ಸೂತ್ರಧಾರನಾದ ಅಂದಿನಿಂದ ಕರ್ನಾಟಕದಲ್ಲಿ ಬ್ರಾಹ್ಮಣ ವೀರಶೈವರೆಂಬ ಜಂಗಡಗಳಾದವು. ಸೊಕ್ಕಿನ ಮೇಲ್ತರಗತಿಯ ಜನರಿಗೆ ಎಷ್ಟು ಹೇಳಿದರೂ ಬುದ್ಧಿ ಬರಲಿಲ್ಲ. ಇನ್ನೂ ಹಾಗೇ ತಮ್ಮ ವರ್ತನೆಯನ್ನು ಪಾಲಿಸುತ್ತಲಿದ್ದಾರೆ. ಜನರಿಗೆ — "ಎಲೇ ಕೋಗಿಲೇ ನಿನಗೇತಕೆ ಕುಲದ ಹೆಮ್ಮೆ? ಕಾಗೆಯ ಗೂಡಿನೊಳು ಬಾಳಿಬದುಕಿದಿ. ಅದರಂತೆ ಎಲೇ ಬ್ರಾಹ್ಮಣ, ನಿಮಗೇಕೆ ಈ ಕುಲದ ಹೆಮ್ಮೆ? ಶೂದ್ರರಿಂದ ಅನ್ನಪಡೆದು ಅವರಿಂದ ಸೇವೆಸಂಪಾದಿಸಿ ಅವರಿಂದಲೇ ನಿಮ್ಮ ಬಾಳು ಬದುಕು. ಏಕಿಂತು ಈ ಸೊಕ್ಕು?" ಎಂದು ಕುವೆಂಪುರವರು ಕೇಳಿದ್ದಾರೆ. ಬಸವಣ್ಣನವರ ವಚನವನ್ನು ಅಭ್ಯಾಸ ಮಾಡಿದರೆ ಬಸವಣ್ಣನವರ ಕಾರ್ಯಕ್ಷೇತ್ರವನ್ನು ಪರಿಶೀಲಿಸಿದರೆ ಬಸವಣ್ಣನವರು ಸಮಾಜದ ಕ್ರಾಂತಿ ಪುರುಷರೆಂದು ನಮಗೆ ತೋರುತ್ತದೆ.

**ಬಸವಜಯಂತಿ —**

ಬಸವಜಯಂತಿಯನ್ನು ಆಚರಿಸುವ ಉದ್ದೇಶವನ್ನು ನಾವು ಚೆನ್ನಾಗಿ ಅರಿತುಕೊಳ್ಳಬೇಕಾಗಿದೆ. ಕೇವಲ ಬಸವನ ಮೂರ್ತಿ ತೊಟ್ಟಿಲಲ್ಲಿ ಹಾಕಿ ತೂಗಿ ದಿನಾಚರಣೆ ಮಾಡಿದರೆ ಅದು ಜಯಂತಿಯಾಗಲಿಲ್ಲ. ಬಸವನ ದಿವ್ಯ ಸಂದೇಶವನ್ನು ತಾಯಿತಂದೆಗಳಿಗೆ ಮಗುವನ್ನು ತೊಟ್ಟಿಲಲ್ಲಿ ಹಾಕಿ ಜೋಪಾನ ಮಾಡಿದ ಮೇಲೆ ಮಗುವಿನಿಂದ ತಾವು ಮುಪ್ಪಿನ ಕಾಲದಲ್ಲಿ ಸುಖವಾಗಿ ಬಾಳುವ ಉದ್ದೇಶವಿರುವಂತೆ ಸಂದೇಶವನ್ನು ತೊಟ್ಟಿಲಲಿ

ಹಾಕಿ ಅವುಗಳನ್ನು ಜೋಪಾನಮಾಡಿ ಅವುಗಳಿಂದ ಉಪಯೋಗ ಪಡೆದು ಕೊಂಡು ಮುಕ್ತಿಯ ಮಾರ್ಗವನ್ನು ಅನುಸರಿಸುವದೇ ಜಯಂತಿ. ಬಸವಣ್ಣನವರು ಎಂಟೋ ವಚನಗಳನ್ನು ಸಾರಿದ್ದಾರೆ. ಅವು ಇಂದಿಗೂ ಇವೆ ಆ ವಚನಗಳು ತ್ರಿಕಾಲದವರೆಗೂ ಇರುವದರಲ್ಲಿ ಸಂದೇಹವಿಲ್ಲ. ಎಂದೆಂದಿಗೂ ಜನಜೀವಕೆ ಅವು ಅನ್ವಯಿಸುತ್ತವೆ! ಸಹಕಾರಿಯಾಗುತ್ತವೆ.

**ನವಯುಗ —**

ಇಂದಿನ ನವಯುಗ ಬಹುಮುಂದಾಗಿದೆ. ಪಾಶ್ಚಾತ್ಯರ ಗಾಳಿಯಿಂದ ಬುದ್ಧಿ ಮುಂಕಾಗಿದೆ, ಶಿಕ್ಷಣ ಸಂಪಾದನೆ ಕೆಚ್ಚಾಗಿ ಇಂದಿನ ಶಿಕ್ಷಣದಿಂದ ಯಾವ ಉದ್ದಾರವೂ ಇಲ್ಲ. ಪಾಶ್ಚಿಮಾತ್ಯರ ಆಡಂಬರದಿಂದ ನಮ್ಮದನ್ನು ನಾವು ಮರೆತಿದ್ದೇವೆ. ಕ್ಷಣಸುಖಕ್ಕಾಗಿ ಪಾಶ್ಚಿಮಾತ್ಯರ ಪಾನಕ್ಕೆ ಬಾಯ್ದೆರೆದು, ಅಜರಾಮರವಾಗಿ ಉಳಿಯುವ ಸಚ್ಚಿದಾನಂದವನ್ನು ಕೊಡುವ ಅಮೃತ ವಚನವನ್ನು ಮರೆತು ಬಿಟ್ಟಿದ್ದೇವೆ. ನವಯುಗ ಲೀಲೆಯ ಬಗೆಗೆ 'ಕರೆಯುತಿದೆ. ಯುಗವಾಗಿ ಈ ಕವಿತೆಯನ್ನು ಕುವೆಂಪುರವರು ಹೇಳಿದ್ದಾರೆ. ಅದನ್ನು ಕೆಳಗೆ ಕೊಡುವೆ.

ವಿಶ್ವದ ಸಾಹಿತ್ಯದಲ್ಲಿಯೇ ಶರಣರ ವಚನಸಾಹಿತ್ಯವು ಒಂದು ವಿಶಿಷ್ಟ ಸ್ಥಾನ ಗಳಿಸಿದೆ. ಈ ಶರಣರ ವಚನಗಳೇ ಸಮಾಜ ಸೇವೆಯು, ಸಮಾಜೋದ್ಧಾರದ ಸೂತ್ರಗಳು. ಸೂತ್ರಧಾರಿಯಾದ ಬಸವಣ್ಣನವರ ಸಂದೇಶವು ಆತ್ಮ ಗೀತೆಯಾಗಿದೆ. ಜೀವ ಜ್ಯೋತಿಯಾಗಿದೆ. ಈ ಜ್ಯೋತಿ ಹೋದ ಹೋದಲ್ಲೆಲ್ಲಾ ಬೆಳಕು ಬೀರುವವರಲ್ಲಿ ಸಂದೇಹವಿಲ್ಲ. ಈ ಗೀತ ಹೆಂದಾಡುವಲ್ಲಿ ಕಲುಷಿತ ಆತ್ಮ ಪುಷ್ಪವೇದಿಕೆಯ ಮೇಲೆ ನಲಿದಾಡಿಸುವದರಲ್ಲಿ ಸಂಶಯವಿಲ್ಲ. ಬಸವಣ್ಣನವರ ದೃಷ್ಟಿ ಹಗಲಿನ ಕಣ್ಣಿದ್ದಂತೆ. ಹಗಲಿನ ಕಣ್ಣು ರವಿಲೋಕಕೆ ಬೆಳಕನ್ನೀಯುವಂತೆ ಬಸವಣ್ಣನವರು ಪ್ರಜ್ವಲಿತ ಪ್ರಕಾಶವನ್ನು ಬೀರಿದ್ದಾರೆ.

**"ಕರೆಯುತಿದೆ ಕುವೆಂಪು ಯುಗವಾಣಿ"**

"ಸಂಪತ್ತಿದೆ; ವಿದ್ವತ್ತಿದೆ;  
ಕೈಸೇರಿದೆ ವಿಜ್ಞಾನ  
'ವಿಷಯಾಗ್ನಿಗೆ ಸುಖದಾಸೆಯ  
ಕಲ್ಪಿಸೆಯ ಪಾನ!

## ಶಿವಾನುಭವ

ನೊಣಮೀಸೆಯ ಹುಳುಹೆಜ್ಜೆಯ
ಎಣಿಸುವ ಬಿಜ್ಜೆಯ ಬಲ್ಲೆ;
ತನ್ನಾತ್ಮವ ತಾನರಿಯುವ
ಸಾಧನೆಯೊಂದನು ಬಲ್ಲೆ!

ಅನ್ವೇಷಣೆ! ಅನ್ವೇಷಣೆ!
ಮುಗಿಸಲು ಪುರುಸೊತ್ತಿಲ್ಲ!
ತಿಳಿದೂ ತಿಳಿದೂ ತಿಳಿದೂ
ಕಡೆಗೇನೂ ಗೊತ್ತಿಲ್ಲ.

ಇಹವಿಲ್ಲದೆ ಪರವಿಲ್ಲದೆ
ಸೋತ್ತಾಗಿಹ ಶೋಚ್ಯರಿಗೆ,
ನಡತೆಗೆ ಸ್ಮೃತಿ, ಚಿಂತೆಗೆ ಶ್ರುತಿ
ದೇವರೆಗತಿ ಪ್ರಾಚ್ಯರಿಗೆ!

ಯುಗಚಕ್ರವ ಮುನ್ನೂಂಕಲು
ಇದೆ ಗುರುದೇವನ ಶಕ್ತಿ;
ನಮಗಿಂದಿಗೆ ಬೇಕಾದುದು
ಉದ್ಧಾರದ ಆಸಕ್ತಿ;

ಬಾ ಬೇಗನೆ, ರವಿದೇವನೆ,
ನವಶತಮಾನದ ಧೂತ!
ಹೊಸಬಾಳಿಗೆ ತಳಿರಾಗಿಸು,
ನವಯುಗ ಚೈತ್ರದ ಚೇತ!

ದನಿಗೈಯಲಿ ಜಗದೆದೆಯಲಿ
ಖಗಕುಲ ನವಸಂಗೀತ
ಹೊರಕೊಮ್ಮಲಿ ಸಂಮಥನದಿ
ಕವಿಗಾನದ ನವನೀತ!



## ಮಗುವು - ಮಾಯೆ!



ಎಳೆಯ ಮಗುವು ಎಳೆಯ ಬಾಳು
ಏನು ಮಾಯದಾಟವೊ!
ಅಳಿಯದಂಥ ಪ್ರೇಮ ಬಳುವ-
ಳಿನ ದೈವದಾಟವೊ!!

ಮುಗ್ಧ ಮಗುವು ಶುದ್ಧ ಭಾವ
ಮುಗ್ಧದೇವನಾಕೃತಿ;
ಶಬ್ದಗಿಬ್ದ ವೇನು ಇಲ್ಲ
ಮುದ್ದುತೊದಲು ನಾದವು

ಮುದ್ದ ಮುಗ್ಧ ಮಗುವಿನಲ್ಲಿ
ಕುಟಿಲ ಮಾಯೆ ತುಂಬಿದೆ;
"ಮಾಯೆಯಲ್ಲಿ ಮಗುವು ಬೆಳೆದು
ಮಾಯೆಯಾಗಿ ಬಿಡುತಿದೆ!"

## ಆತ್ಮ ಮತ್ತು ಶರೀರ



ಮೂಡಣ ಪಡುವಣ ಏಳಿನ ಬೀಳಿನ
ಬಾಳಿನ ಅಂತೆಯ ನೋಡಣ್ಣ;
ಅಂತವೆ ಇಲ್ಲದ ಜ್ಞಾನಿನ ಜೀವನ
ಮಾನವನಂತೆಯ ನೋಡಣ್ಣ

ಹುಟ್ಟಿದ ರವಿತಾ ಮುಳಿಗಿಪಶರವಲಿ
ಹುಟ್ಟಿದ ಮನುಜನು ಸಾಯುವನಣ್ಣಾ
ಹುಟ್ಟಿನ ಕಾಲಕೆ ಹುರುಪಿನಲಿರುವದು
ಮುಂಜಾವಿನಲಿ ಬೆಳಗಣ್ಣಾ

"ಆತ್ಮವೆಂಬುದು ನಿಂತಲೆ ನಿಂತಿಹ
ಸೂರ್ಯನಂತೆಯೆ ನೋಡಣ್ಣ;
ಶರೀರವೆಂಬುದು ಪೃಥವಿಯ ತೆರದಲಿ
ಬಿದ್ದು ಏಳ್ವುದು ನೋಡಣ್ಣ"

## "ಈಶ್ವರನ ಕಂಡೆ"



ಸಂಜೆಯ ಸಮಯದಿ
ಬಾಗಿಲ ಹೊರಗಡೆ
ನಾನದು ನಿಂತಾಗ
ಅರಳಿದ ಗುಲಾಬಿಯು
ಪರಿಮಳ ಸೂಸುತ
ನನ್ನನು ಕರೆದಾಗ
ನಿಸರ್ಗದಲ್ಲಿಯ ರಸನೇ ಇದರೊಳು
ತುಂಬಿ ನಿಂತಾಗ—
ನನ್ನಯ ಮನವದು ಹರುಷದಿ ಆಗ
ಉಕ್ಕಿ ಬಂದಾಗ-
ನನ್ನಯ ಮನಕೆ ಶಾಂತಿಯ ನೀಡಿವೆ
ನೀನದು ಅಂದಾಗ—
ನಗುವುತಲಂದಿತು ನಿನ್ನಯಶಾಂತಿಯೆ
ನನ್ನಯ ಶಾಂತಿಯು; ನೀನೂ ನನ್ನಾಂಗ
"ನಶ್ವರ ದೇಹಗ
ಳೆರಡೂ ನಮ್ಮವು
ಈಶ್ವರ ನೊಬ್ಬನೆ
ತಮ್ಮಿಬ್ಬರೊಳು" ಎಂದದು ಅಂದಾಗ
ನಿನ್ನಯ ಪರಿಮಳ
ನನ್ನಯ ಅನುಭವ
ಗಳೆರಡರ ಮಿಲನವೆ
ಹಾ-ಸೀಶ್ವರನೆಂದೆ ಸಂಜೆಯು ಆದಾಗ

---

# ಲಿಂಗ



ಲಿಂಗವಂತ ಧರ್ಮದಲ್ಲಿ
ಲಿಂಗವೆಂಬುದೊಂದು ಶ್ರೇಷ್ಠ
ಅಂಗ ಅಂಗವೆಂದೆಲ್ಲ
ಲಿಂಗ ಲಿಂಗ ಲಿಂಗವಿಂದ
    ತುಂಬಿತುಂಬಿ ತುಳುಕಲಿ!
ಮೋಹವೆಂಬು ದನ್ನೆಗೆದ್ದ
ಮಹಾದೇವಿ ಅಕ್ಕನಂದು
ಮನದೊಳಿಟ್ಟ ಲಿಂಗವಿಂದು
    ಎನ್ನ ಮನವ ತುಂಬಲಿ
ಸತ್ಯ ಮತ್ತು ಅಹಿಂಸೆ
ತತ್ವವನ್ನು ನಮಗೆ ಎಂದೊ
ಇತ್ತ ಬಸವಲಿಂಗವೇ-
    ನನ್ನ ಮನವ ಬೆಳಗಲಿ!
ಬಂಧು ಭಾವ ವರಳುವಂತ
ಜಾತಿ ಭಾವ ಸರಿಯುವಂತೆ
ನೀತಿವಂತ ಬಸವಲಿಂಗ
    ನನ್ನ ನನಸದಾಗಲಿ!

ನಿಂ. ಬ. ಸಾವಳಗಿ.

ಬೆಳಗಾಂವ



# ಆಧ್ಯಾತ್ಮಿಕ ವಚನಗಳು

oo—[ ಶ್ರೀ ರೇವಣಸಿದ್ಧಪ್ಪ ಶೀಲವಂತ. ಹುನಗುಂದ ]—oo

—ooo—

ಸಪ್ತಾಶ್ವಗಳು ಹೂಡಿದ ಹೊನ್ನ ರಥದಲ್ಲಿ ಕುಳಿತು ಎದೆಸೆಟೆಸಿಕೊಂಡು ಹೋಗುವ ಅಂಣಗಳಿರಾ! ಮುಂದೆ ಕೆರೆ, ಹಳ್ಳ, ಹೊಳೆಗಳು ತುಂಬಿ ಭೋರ್ಗರೆಯುತ್ತಿರುವವು ನೋಡಯ್ಯಾ। ಅವರಾಚೆಗೆ ಸಾಲಾಗಿ ನಿಂತಿರುವ ಮೇರು ಪರ್ವತಗಳು ಝುಂಕರಿಸುತ್ತಿರುವವು ನೋಡಯ್ಯಾ। ಅದರಾಚೆಗೆ ಸಪ್ತಸಾಗರಗಳು ಹೊರಸೂಸಿ ನಿಮ್ಮನ್ನು ನೋಡಿ ಚಪ್ಪಾಳೆ ಇಕ್ಕಿ ಗಹಗಹಿಸಿ ನಗುತ್ತಿರುವವು ನೋಡಯ್ಯಾ। ಇವೆಲ್ಲವನು ದಾಟಬೇಕಾದರೆ "ಶಿವ" ಮಂತ್ರವೊಂದೇ ಮಹಾದಾರಿ ನೋಡಯ್ಯಾ! ಅದರಾಚೆಯಲ್ಲಿರುವುದೇ ಕೈಲಾಸನಗರ ನೋಡಯ್ಯಾ। ಅದರಲ್ಲಿ ಪ್ರಕಾಶಿಸುತ್ತಿರುವ ನಿತ್ಯ ನಿರಂಜನ ಪರಮಗುರು ಕೋಟೆಕಲ್ಲ ಶ್ರೀ ಹೊಳೆಹುಚ್ಚೇಶ್ವರ ಲಿಂಗವನ್ನು ಮನಮುಟ್ಟಿ ಪೂಜಿಸಿ ಧನ್ಯರಾಗಿರಯ್ಯಾ ॥

೨ ಬಡವರಾರೆಂಬುದು ಬಲ್ಲರೆ ಹೇಳಿರೋ? ಅರಿಯದಿರ್ದೊಡೆ ಕೇಳಿರೋ ಸತ್ಯವಿಲ್ಲದವನೇ ಬಡವನಯ್ಯಾ। ದಯವಿಲ್ಲದವನೇ ಬಡವನಯ್ಯಾ, ಅಹಿಂಸೆಯನ್ನು ಆಚರಿಸದೇ ಇರುವವನೇ ಬಡವನಯ್ಯಾ। ಇಷ್ಟೇ ಅಲ್ಲ, ತನ್ನ ತಾನರಿಯದವನೇ ಬಡವನಯ್ಯಾ! ದೇವಾ ಶಿವಶರಣರು ನಿಮ್ಮ ರಾಜದರ್ಬಾರದಲ್ಲಿ ಸಕಲತತ್ವಗಳಿಂದ ಮೆರೆದು ಸುಖಪಡುತ್ತಿರುವವರೇ ನಿಜವಾದ ಶ್ರೀಮಂತರು ನೋಡಾ ಕೋಟೆಕಲ್ಲ ಶ್ರೀ ಹೊಳೆಹುಚ್ಚೇಶ್ವರಾ।

೩ ಪಂಚೇಂದ್ರಿಯಂಗಳು ಎನ್ನವೆಂದರೆ ಶ್ರೀಗುರುವು ನಗುವನಯ್ಯಾ! ಮನವು ಎನ್ನದೆಂದರೆ ಲಿಂಗ ನಗುವದಯ್ಯಾ! ಅಂದೆನೆಂದರೆ ಜಂಗಮ ನಗುವನಯ್ಯಾ। ಅರಿವೆಯು ಆಚೆಯಲ್ಲಿರುವ ನಿಮಗೆ, ನಾನೆಂದರೆ ನಗುವ ನಮ್ಮ ಕೋಟೆಕಲ್ಲ ಶ್ರೀಹೊಳೆಹುಚ್ಚೇಶ್ವರಾ॥

೪ ಅರಿದೆನೆಂದರೆ ಅರವತ್ತು ಗಾವುದ ನೋಡಯ್ಯಾ. ಮುಟ್ಟಿದೆನೆಂದರೆ ಮೂವತ್ತು ಗಾವುದ ನೋಡಯ್ಯಾ! ಅರಿ ಮುಟ್ಟಿನಾಚೆಯಲ್ಲಿರುವುದೇ ಪರಂಜ್ಯೋತಿಕಾಣಯ್ಯಾ! ಆ ಜ್ಯೋತಿಯಲ್ಲಿ ಜ್ಯೋತಿ ಅಡಗಿದಮೇಲೆ ಭಿನ್ನ ಮಾಡಲುಂಟೇನಯ್ಯಾ ಕೋಟೆಕಲ್ಲ ಶ್ರೀ ಹೊಳೆಹುಚ್ಚೇಶ್ವರಾ॥

ಅನಂತ ಜನ್ಮಗಳಲ್ಲಿ ಕೋಟ್ಯಾನುಕೋಟಿ ಚೀಲ ಧಾನ್ಯವ ನುಂಡರೂ ಹಸಿವು ಅಡಗಲಿಲ್ಲ ನೋಡಯ್ಯಾ! ಸಪ್ತಸಾಗರದಷ್ಟು ನೀರಕುಡಿದರೂ ತೃಷೆ ಅಡಗಲಿಲ್ಲ ನೋಡಯ್ಯಾ! ದೇವಾ ನಿಮ್ಮ ಪರಿಸಾಹಿತಿಯ ಒಂದೆಗಳಿಗೆಯುಂಡು ಧನ್ಯನಾದೆ ನೋಡಯ್ಯಾ ಕೋಟಿಕಲ್ಲ ಶ್ರೀಹೊಳೆ ಹುಚ್ಚೇಶ್ವರಾ॥

---

# ಪ್ರಾರ್ಥನೆ

## (ಭಜನೆ)

೦—[ಲೇಖಕ — ಶ್ರೀ ರೇವಣಸಿದ್ಧಪ್ಪ ಶೀಲವಂತ. ಹುನಗುಂದ]—೦

೦—೦—೦

ಜಗತ್ತಿನ ಯಾವದೇ ಮತಧರ್ಮದವರಾಗಲಿ ಭಜನೆಗೆ ಬಹುಪ್ರಾಮುಖ್ಯತೆಯನ್ನು ಕೊಟ್ಟಿರುತ್ತಾರೆ. ಅಂತೆಯೇ ಭಜನೆಯು ಮನುಷ್ಯನಷ್ಟೇ ಪ್ರಾಚೀನವಾಗಿದೆ. ಲೋಕದಲ್ಲಿ ಯಾರಿಗಾದರೂ ಸಾವು ಶಾಶ್ವತವಾಗಿದ್ದರೂ ಸಹ, ಅದು ನಾನೆಂದು ಅರಿತು ಕೊಳ್ಳುವದು ಪ್ರತಿಯೊಬ್ಬ ಮಾನವನ ಮುಖ್ಯ ಕರ್ತವ್ಯವಾಗಿದೆ. ಆದ್ದರಿಂದ ಅದು ಗುರುವಿನಮುಖವಾಗಿರಬೇಕು. ಯಾಕೆಂದರೆ

ಜನರು ಮುನಿದರೆ ನೃಪರು ಕಾಯುವರು ತನ್ನವರು।
ಮುನಿಯಲ್ಕೆ ಶಂಕರನು ಕಾಯ್ವನಾ ಶಂಕರನು
ಮುನಿದ ಕಾಲಕ್ಕೆ ಗುರುವು ಕಾಪಾಡುವನು ಗುರುವುಮುನಿಯಲ್ಕೆ ಕಾವರಿಲ್ಲ।
ಎನುತ ಸಚ್ಛಾಸ್ತ್ರಗಳ್ ಘೋಷಿಸಲ್ಕದು ಕೇಳಿ।
ವಿನಯದಿಂ ನಿನ್ನ ಚರಣಕ್ಕಾನು ಪೊಡಮಡುವೆ।
ನನವರತ ಭೋ ಗುರುವೆ ನಿಜಸೌಖ್ಯವೆನಗಿತ್ತು ಕರುಣದಿ ಪರಿಪಾಲಿಸು

ಎಂಬ ಶರಣರ ವಚನದ ತಾತ್ಪರ್ಯವೇನೆಂದರೆ:— ಹೇ ಗುರುನಾಥನೇ! ಜನರು ಮುನಿದ ಕಾಲದಲ್ಲಿ ಪ್ರಭುವಿನ ಮೊರೆಬಿದ್ದರೆ ಆ ಪ್ರಭು ರಕ್ಷಿಸುವನು. ಅಂತಹ ಪ್ರಭುಮುನಿದ ಕಾಲಲ್ಲಿ ಪರಮೇಶ್ವರನ ಮೊರೆಬಿದ್ದರೆ ಪ್ರಭು (ಅರಸು) ರಕ್ಷಿಸುವಂತೆ ಆ ಪರಮೇಶ್ವರನು ರಕ್ಷಿಸುತ್ತಾನೆ. ಅಂತಪ್ಪ ಪರಮೇಶ್ವರನು ಮುನಿದ ಕಾಲದಲ್ಲಿ ಶ್ರೀ ಗುರುವಿನ ಮೊರೆಬಿದ್ದರೆ ಆ ಗುರುವು ಕೈಬಿಡದೇ ಕಾಪಾಡುತ್ತಾನೆ. (ಆ ಹರಮುನಿದರೆ ಗುರುಕಾ

ಯುವನೆಂಬ ಹಿರಿಯರ ಉಕ್ತಿಯೊಂದಿರುತ್ತದೆ. ಹರಮುನಿದರೆ ಅವನು ದೇಹಕರಣಾದಿಗಳಿಗೆ ಉಪಹತಿಯನ್ನುಂಟು ಮಾಡುತ್ತಾನಾಗಲಿ, ನಿತ್ಯ ನಿರ್ಮಲ ನಿರ್ವಿಕಾರ ನಿಜಾನಂದ ರೂಪವಾದ ನಿನ್ನ ಸ್ವರೂಪಕ್ಕೆ ಎಂದಿಗೂ ಉಪಹತಿಯನ್ನುಂಟು ಮಾಡಲಾರನು, ಎಂದು ಮೊರೆಬಿದ್ದ ಶಿಷ್ಯನಿಗೆ ಬೋಧಿಸಿ ಉದ್ಧರಿಸುವ ಶಕ್ತಿಯು ಶ್ರೀಗುರುವಿನಲ್ಲಿರುವದರಿಂದ ಹಿರಿಯರ ಉಕ್ತಿಯು ಯಥಾರ್ಥವಾದುದ.) ಗುರುಮುನಿದರೆ ಕಾಪಾಡುವ ನಾಥರು ಮತ್ತಾರು ಇರುವದಿಲ್ಲ, ಎಂಬುದಾಗಿ ಶಾಸ್ತ್ರಗಳು ಘೋಷಿಸುತ್ತಿರುವದರಿಂದ, ಅದು ತಿಳಿದು ನಾನು ಶ್ರದ್ಧಾ ಭಕ್ತಿಯಿಂದ ನಿನ್ನಪಾದಾರವಿಂದಕ್ಕೆ ನಮಸ್ಕರಿಸುತ್ತೇನೆ. ನೈಜವಾದ ಮುಕ್ತಿ ಸುಖವನ್ನಿತ್ತು ಕರುಣಿಸು ಎಂಬರ್ಥವಾಗುತ್ತದೆ. ಈ ವಿಷಯವಾಗಿ ಶ್ರೀ ಮಹಾನುಭಾವರಾದ ಬಸವಣ್ಣನವರು, ಪ್ರಭುದೇವರು, ಚನ್ನಬಸವ, ಸಿದ್ಧರಾಮ, ಶ್ರೀ ಅಕ್ಕಮಹಾದೇವಿ ಮುಂತಾದ ಯಾವತ್ತೂ ಶಿವಶರಣ ಶರಣೆಯರು ಗುರುವಿನ ಬಗ್ಗೆ ಮನವಾರೆ ಹೊಗಳಿದ್ದಾರಲ್ಲದೇ "ನ ಗುರೋರಧಿಕಂ" ಎಂಬುದನ್ನು ಜಗತ್ತಿಗೇ ಘಂಟಾ ಘೋಷವಾಗಿ ಸಾರಿದ್ದಾರೆ. ಅದಕ್ಕಾಗಿ ನಾವು ಯಾವ ವಿಷಯವನ್ನೇ ಅರಿಯಲಿ ಅದು ಗುರುಮುಖವಾಗಿಯೇ ಇರಬೇಕು. ಅಂದರೆ ಮುಕ್ತಿಗೆ ವಿಘ್ನತ್ರಯಗಳನ್ನು ನಿವೃತ್ತಿಗೊಳಿಸಿ ನೈಜವಾದ ಚಿರ ಸೌಖ್ಯವನ್ನು ಕೊಡುತ್ತಾನೆ. ಆದ್ದರಿಂದ ಪ್ರತಿಯೊಂದು ಸಮಾಜದವರು ಪ್ರತಿಯೊಂದು ದಿವಸಕ್ಕೊಮ್ಮೆಯಾದರೂ ಪ್ರಾರ್ಥನೆ ಅವಶ್ಯ.

ಇಂದಿನ ಬೌದ್ಧಿಕ ಯುಗದಲ್ಲಿ ಆಧ್ಯಾತ್ಮಿಕವೇ ಮನುಷ್ಯನ ಸಕಲ ಸಂಕಷ್ಟಗಳಿಗೆ ಪರಿಹಾರೋಪಾಯವೆಂದು ತಿಳಿಯುವದು ಬಹು ಅವಶ್ಯ. ಮಾನವನು ಪರಿಪೂರ್ಣನಲ್ಲ; ಅವನ ಆತ್ಮ ವಸ್ತುವಿನ ಉತ್ಕ್ರಾಂತಿಪಥದಲ್ಲಿ ಒಂದು ಹಂತ ಮಾತ್ರ. ಅವನ ಮನಸ್ಸು "ಅತಿಮಾನಸ" ವಾಗಿ ಅವನು "ಅತಿಮಾನವ" ನಾಗಿ ಪರಿವರ್ತನೆ ಹೊಂದಬೇಕಾಗಿದೆ. ಅದೇ ಭವಿತವ್ಯ, ಈ ಭವಿತವ್ಯದತ್ತ ಅರಿತು ಮುನ್ನಡೆಯಬೇಕಾದರೆ ಮನಃ ಪ್ರಮಾಣವನ್ನು ಮೀರಿನಿಂತ "ಋತು"ವನ್ನು ಭೂಮಿಗಿಳಿಸಿ ತರುವುದವಶ್ಯ. ಅದಕ್ಕಾಗಿ ದುಡಿಯುವದು ಪ್ರತಿಯೊಬ್ಬ ಮಾನವರ ಮುಖ್ಯ ಕರ್ತವ್ಯವಾದ್ದರಿಂದ ಇದನ್ನು ಮನಸಾ ಸಾಧಿಸಬೇಕಾದರೆ ದೇವರಲ್ಲಿ ನಿಶ್ಚಲಮನಸ್ಸಿನಿಂದ ಮೊರೆ ಇಡಬೇಕು. ಅರ್ಥಾತ್ ಪ್ರಾರ್ಥನೆ ಸಲ್ಲಿಸಬೇಕು. ನಾವು

ಯಾವಾಗಲೂ ನಿಷ್ಕಾಮದಿಂದ ದೇವರನ್ನು ಅನನ್ಯರೀತಿಯಿಂದ ಭಜಿಸ ಬೇಕು. ಇಂಥ ಪ್ರಾರ್ಥನೆಯ ಶಕ್ತಿಯಿಂದಲೇ ಶ್ರೀಮಹಾತ್ಮಾ ಗಾಂಧೀ ಜಿಯವರು ಜಗತ್ತಿಗೆ ಮಾರ್ಗದರ್ಶಕರಾದದಲ್ಲದೇ ಮಹಾತ್ಮರೆಂದು ಮೆರೆದು ಕೀರ್ತಿಶಾಲಿಗಳಾದರು (ಪ್ರಾರ್ಥನೆ) ಭಜನೆಯನ್ನು ಪ್ರತಿಯೊಂದು ಸಮಾ ಜದವರು ಪ್ರತಿದಿವಸ ಅವಶ್ಯ ಮಾಡಲೇಬೇಕು. ಅದು ಮಾನವನ ಮುಖ್ಯ ಕರ್ತವ್ಯ. ಭಜನೆಯನ್ನು ಊರಹೊರಗೆ ಪ್ರಶಾಂತ ಸ್ಥಳ, ಸಾಧುಸತ್ಪು ರುಷರಸ್ಥಳ, ಅಥವಾ ಮಠ, ಮಾರ್ಗ್ಯ, ಗುಡಿಮುಂತಾದ ಸುಣ್ಯ ದೇವಾ ಲಯಗಳಲ್ಲಿ ಭಜನೆಗೆ ಒಳ್ಳೇ ಮಹತ್ವದ ಸ್ಥಳಗಳಾಗಿವೆ. ಯಾಕಂದರೆ ಅಂತ ರಾತ್ಮನನ್ನು ಒಲಿಸಲಿಕ್ಕೆ ಮೇಲಿನ ಎಲ್ಲ ಸ್ಥಳಗಳು ಬಹಳಯೋಗ್ಯವಾದ ವುಗಳು. ಅಂಥಸ್ಥಾನಗಳಲ್ಲಿ ಮನಸ್ಸು ಚಂಚಲವಾಗದೆ ನಿಶ್ಚಲವಾಗಿ ಏಕ ಮುಖವಾಗಿ ನಿಲ್ಲುತ್ತದೆ. ಭಜನೆ (ಪ್ರಾರ್ಥನೆ) ಯನ್ನು ಮೈಮರೆತು ದೇವ ರನ್ನು ಅನನ್ಯ ಭಕ್ತಿಯಿಂದ ಪ್ರಾರ್ಥಿಸಬೇಕು. ಅದಕ್ಕೇನೆ ದೇವನೊಲಿ ಯುವನು. ಜಗತ್ತಿನ ಸರ್ವಮಾನವ ಪ್ರಾಣಿಗೂ ಪ್ರಾರ್ಥನೆಯು ಅತೀವ ಪ್ರಾಮುಖ್ಯ. ಪ್ರಾರ್ಥನೆ ಎಂಬುದು ಮನುಷ್ಯನಷ್ಟೇ ಪ್ರಾಚೀನವಾದುದು. ಮನುಷ್ಯನು ನಿರಾಶನಾದಾಗ ನಿರುತ್ಸಾಹನಾದಾಗ ಪ್ರಾರ್ಥನೆಯಿಂದ, ಅಪೂರ್ವಶಕ್ತಿಯನ್ನು ಪಡೆದು ಮುನ್ನುಗ್ಗುತ್ತಿದ್ದಾನೆ. ಇಂಥ ಶಕ್ತಿಯುಳ್ಳ ಮನುಷ್ಯರಿಗೆ ವಿಜ್ಞಾನಿ (ವಿಜ್ಞಾನಮಯ ಶರೀರ) ಎಂದು ಅನ್ನುತ್ತಾರೆ. ಮನೋ ಮಯ ಶರೀರಾಂತರ ವಿರುವ ಕಾರಣ ಆತ್ಮನೇ ಪರಮಾತ್ಮ ನಾಗಿದ್ದಾನೆ. ಯಾವ ಪೂರ್ವೋಕ್ತ ಶ್ರುತಿಪಾದಿತವಾದ ಆತ್ಮನೇ ಅನ್ನರಸಮಯವಾದ ಶರೀರ, ಮತ್ತು ಪ್ರಾಣಮಯ ಶರೀರದ ಅಂತರ್ಯಾಮಿ ಇರುತ್ತಾನೆ. ಪ್ರಥಮ ಶ್ರುತಿಪಾದಿತವಾದ ಮನೋಮಯ ಶರೀರಕ್ಕಿಂತಲೂ ಸೂಕ್ಷ್ಮವಾದ ಕಾರಣ ಅದರ ಅಂತರಸ್ಥಿತವಾದ ಯಾವ ಆತ್ಮನುಂಟೋ ಅವನು ಅನ್ಯನಾಗಿ ದ್ದಾನೆ. ಅವನೇ ವಿಜ್ಞಾನಮಯನಿರುತ್ತಾನೆ. ಅರ್ಥಾತ್ ಬುದ್ಧಿ ಎಂಬ ಗುಹೆಯಲ್ಲಿ ನಿವಾಸಮಾಡುವ ಮತ್ತು ಅದರಲ್ಲಿ ತದಾಕಾರನಾಗಿರುವ ಜೀವಾ ತ್ಮನಿಂದ ಈ ಮನೋಮಯ ಶರೀರವು ಪೂರ್ಣವಾಗಿದೆ. ಅಂದರೆ;— ಅವನು ಈ ಮನೋಮಯ ಶರೀರದಲ್ಲಿ ಸರ್ವತ್ರ ವ್ಯಾಪಕನಾಗಿದ್ದಾನೆ. ಮತ್ತು ಮನೋಮಯವು ತನಗಿಂತಲೂ ಮೊದಲಿನ ಪ್ರಾಣಮಯ ಮತ್ತು ಅನ್ನಮಯದಿಂದ ವ್ಯಾಪ್ತವಾಗಿದೆ. ಅಂತ: ಈ ವಿಜ್ಞಾನಮಯ ಜೀವಾತ್ಮನು ಸರ್ವ ಶರೀರಗಳಲ್ಲಿ ವ್ಯಾಪ್ತನಾಗಿರುವನೆಂದು ಪರಮಾತ್ಮನ ವಾಕ್ಯವಿದೆ.

ಸರ್ವತ್ರಾವಸ್ಥಿತವಾದ ಆಕಾಶವು ಕೂಡಾ ಅಸಂಗಸ್ವಭಾವದಿಂದಲೂ ಹಾಗು ಯಾವದರೊಡನೆ ಲಿಪ್ತವಾಗದೆಯೂ ಹೇಗಿರುವದೋ ಹಾಗೆ ಸರ್ವ ದೇಹ ಸ್ಥಿತನಾದಾತ್ಮನೂ ಕೂಡ ಅಸಂಗಸ್ವಭಾವನಾಗಿರುವದರಿಂದ ಯಾವ ವಿಷಯಗಳಿಂದಲೂ ಲಿಪ್ತನಾಗುವದಿಲ್ಲೆಂದು ಹೇಳಿದಕಾರಣ ಈ ವಿಜ್ಞಾನ ಮಯನಾತ್ಮನೂ ಕೂಡಾ ನಿಜವಾಗಿಯೂ ಪುರುಷಾಕಾರವೇ ಆಗಿರುತ್ತಾನೆ. ಆ ಮನೋಮಯನು ಪುರುಷನಲ್ಲಿ ವ್ಯಾಪ್ತನಾಗಿರುವದರಿಂದಲೇ ಈ ಪುರುಷಾಕಾರವೆಂದು ಹೇಳಬೇಕಾಗಿದೆ. ಆ ವಿಜ್ಞಾನಮಯ ಅಂಗಗಳನ್ನು ಪಕ್ಷಿಯರೂಪದಲ್ಲಿ ಕಲ್ಪಿಸೋಣ. ಬುದ್ಧಿಯ ವೃತ್ತಿರೂಪ ನಿಶ್ಚಯವಾದ ಯಾವ ಶ್ರದ್ಧೆಯುಂಟೋ ಅದು ವಿಜ್ಞಾನಮಯಾತ್ಮ ಪಕ್ಷಿಯ ಶರೀರದಲ್ಲಿ ಪ್ರಧಾನ ರೂಪವಾದ ಶಿರವಾಗಿದೆ. ಏಕೆಂದ ; — ಈ ದೃಢವಾದ ವಿಶ್ವಾಸವೇ ಪ್ರತ್ಯೇಕ ವಿಷಯದಲ್ಲಿ ಉನ್ನತಿಯ ಕಾರಣವಾಗಿರುವದರಿಂದ ಪರಮಾತ್ಮನ ಪ್ರಾಪ್ತಿಯಲ್ಲಿ ಸರ್ವಕ್ಕಿಂತಲೂ ಪ್ರಥಮ ಹಾಗೂ ಸರ್ವಕ್ಕಿಂತಲೂ ಅಧಿಕಾವಶ್ಯಕವು ಇದಕ್ಕಿರುವದರಿಂದ ಇದು ಶಿರವೆಂದು ಹೇಳಿದೆ. ಸದಾಚಾರ ನಿಶ್ಚಯವೇ ಬಲಗಡೆಯ ರೆಕ್ಕೆಯಾಗಿಯೂ, ಸತ್ಯ ಭಾಷಣವೇ ಎಡಗಡೆಯ ರೆಕ್ಕೆಯಾಗಿಯೂ ಧ್ಯಾನ ದ್ವಾರ ಪರಮಾತ್ಮನೊಡನೆ ಸಂಯುಕ್ತನಾಗಿರುವುದೇ ವಿಜ್ಞಾನಮಯವೆಂಬ ಪಕ್ಷಿಯ ಶರೀರದ ಮಧ್ಯಭಾಗವಾಗಿಯೂ ಮತ್ತು "ಮಹಃ" ನಾಮದಿಂದ ಪ್ರಸಿದ್ಧವಾದ (ಭೂಃ ಭುವಃ, 'ಸ್ವಃ' 'ಮಹಃ" ವೆಂಬೀ ಚತುರ್ವಿಧ ವ್ಯಾಹೃತಿಗಳಲ್ಲಿ " ಮಹಃ" ಎಂಬುದನ್ನು ಬ್ರಹ್ಮ ಸ್ವರೂಪವೆಂದು ಹೇಳಿರುವದರಿಂದ ಅದು ಬ್ರಹ್ಮದ ನಾಮವಾಗಿರುತ್ತೆ) ಇದನ್ನೇ ಪರಮಾತ್ಮನ ಪುಚ್ಛಾರ್ಥ ಆಧಾರವೆಂದು ಹೇಳಲ್ಪಟ್ಟಿದೆ. ಏಕೆಂದರೆ ಪರಮಾತ್ಮನೇ ಜೀವಾತ್ಮನ ಪರಮಾಶ್ರಯನಾಗಿದ್ದಾನೆ. ಆದ್ದರಿಂದ ಪ್ರಾರ್ಥನೆ ಸಕಾಮ ಅಂದರೆ ಐಹಿಕಲಾಭಗಳನ್ನು ಪಡೆಯುವ ಆಶೆಯಿಂದಾಗಲೀ, ಅಥವಾ ನಿಷ್ಕಾಮ ಅಂದರೆ ಕೇವಲ ಪರಮಾತ್ಮನ ಪ್ರೀತಿಗಾಗಲೀ ಇರಬಹುದು. ಇವೆರಡೂ ಬಗೆಯ ಪ್ರಾರ್ಥನೆಗಳ ಆವಶ್ಯಕತೆ, ಅವುಗಳಿಂದ ಪಡೆಯಬಹುದಾದ ಬಲ ಮತ್ತು ಆನಂದ ಇವನ್ನು ಆಧ್ಯಾತ್ಮಿಕ ಜೀವಿಯಾದವರು ಮಾತ್ರ ಅನುಭವಿಸುತ್ತಾರೆ. ಆದ ಕಾರಣ ಪ್ರತಿದಿನ ಯಾವದೇ ಸಮಾಜದವರಾಗಲಿ ತಮ್ಮ ತಮ್ಮ ಪ್ರಶಾಂತ ಸ್ಥಳದಲ್ಲಿ ಪರಮಾತ್ಮನಿಗೆ ಪ್ರಾರ್ಥನೆಯನ್ನು ನಿಷ್ಕಾಮ ಮನಸ್ಸಿನಿಂದ ಸಲ್ಲಿಸುತ್ತಾ ಹೋದರೆ, ಆ ದಯಾಘನನು ಸಕಲ ಸಂಪತ್ತುಗಳನ್ನು ದೊರಕಿಸಿ ಕೊಡುವನಲ್ಲದೇ ಕೊನೆಗೆ ಚಿರಶಾಂತಿ (ಮುಕ್ತಿ)ಯನ್ನು ಕೊಡುವನು.

# ಆದಿ ಭಾರತ.

[ಲೇಖಕರು:- ಶ್ರೀಯುತ ಭೀ. ಶ್ರೀ. ಕುಲಕರ್ಣಿ ವಿಜಾಪುರ.]

ನಮ್ಮ ಜನ್ಮಭೂಮಿಯಾದ ಭರತಖಂಡವು ಒಂದಾನೊಂದು ಕಾಲದಲ್ಲಿ ಯಾವ ಸ್ಥಿತಿಯಲ್ಲಿದ್ದಿತು ಮತ್ತು ಈಗ್ಗೆ ಯಾವ ಸ್ಥಿತಿಯಲ್ಲಿದೆ ಎಂಬುದನ್ನು ನಾವೆಲ್ಲರೂ ತಿಳಿದುಕೊಳ್ಳಬೇಕಾಗಿರುವ ಒಂದು ಮುಖ್ಯ ವಿಷಯವಾಗಿದೆ. ಒಂದಾನೊಂದು ಕಾಲದಲ್ಲಿ ನಮ್ಮ ದೇಶವು ಜಗತ್ತಿನಲ್ಲಿಯೇ ಉಚ್ಚಮಟ್ಟದ ಪದವಿಯನ್ನು ಹೊಂದಿದ್ದು, ಜಗತ್ತಿನ ಇತರ ದೇಶಗಳಿಂದ ನಮ್ಮ ಈ ಭರತಖಂಡಕ್ಕೆ ಅನೇಕ ಜನ ಪರದೇಶಿಗರು ಆಗಮಿಸಿ ನಮ್ಮ ದೇಶದ ಸಾಂಪತ್ತಿಕ ಹಾಗೂ ಸಾಂಸ್ಕೃತಿಕ ಉಚ್ಚಮಟ್ಟವನ್ನು ತುಂಬಾ ಹೊಗಳಿ, ಭರತಖಂಡವೆಂಬುದು ಭೂಲೋಕದ ಸ್ವರ್ಗವೆಂದು ತಮ್ಮ ವರ್ಣನೆಯಲ್ಲಿ ವರ್ಣಿಸಿದ್ದುಂಟು. ಆದರೆ ಇಂದು ನಾವು ಆ ಭೂಲೋಕದ ಸ್ವರ್ಗಸ್ಥಾನವಾದ ಭರತಖಂಡವನ್ನು ಭೂಲೋಕದ ನರಕಸ್ಥಾನವನ್ನಾಗಿ ಮಾಡಿದುದು ನಮಗೆ ತಿಳಿಯದಂತಾಗಿದೆ. ನಮ್ಮ ದೇಶವು ಈಗ್ಗೆ ಸರ್ವತರದಿಂದಲೂ ಅತೀ ಹೀನಾವಸ್ಥೆಗೆ ಒಳಪಟ್ಟಿದೆ. ಇದು ನಮ್ಮ ಭಾರತೀಯರ ದೋಷವೇ ಎಂದರಿಯಬಹುದು.

ನಮ್ಮ ದೇಶದಲ್ಲಿ ಒಕ್ಕಟ್ಟು ಎಂಬ ಭಾವನೆಯೇ ಅಳಿದಿದೆ. ಕೇವಲ ಆಡಂಬರಿಗಳಾಗಿ ನಾವು ಈ ಪುಣ್ಯಭೂಮಿಯಲ್ಲಿ ಜೀವಿಸುತ್ತಿರುವದು ನಾಚಿಕೆಗೇಡುತನವೇ ಸರಿ. ಆಡಂಬರದಿಂದ ನಮ್ಮ ದೇಶವು ಹೀನತೆಗೊಳಪಟ್ಟಿದೆ. ಚಹ, ಬೀಡಿ, ಸಿಗಾರೇಟ, ಮುಂತಾದ ಶರೀರನಾಶಕ ಪದಾರ್ಥಗಳನ್ನು ಸೇವಿಸಿ, ಇಂದು ನಮ್ಮ ಭಾರತೀಯರು ಅಶಕ್ತತೆಗೊಳಗಾಗಿ ಚೈತನ್ಯಮಯ ಜೀವನವನ್ನು ಹಾಳುಮಾಡಿಕೊಂಡಿರುವರು. ಚೈತನ್ಯವು ಅಳಿದರೆ ಮನುಷ್ಯನು ಜೀವದಿಂದ ಇದ್ದಂತಲ್ಲ, ಶವದ ಸಮಾನ. ಚೈತನ್ಯವೇ ಜೀವನದ ಜ್ಯೋತಿಯೆಂಬುದು ಅರಿತು ಜೀವಿಸಬೇಕು. ಚೈತನ್ಯವನ್ನು ಹಾಳುಮಾಡಿಕೊಳ್ಳುವ ಸೇವನವೆಂದರೆ ಚಹ, ಕಾಫಿ, ಸಿಗಾರೇಟ ಮುಂತಾದವುಗಳು. ಇವು ನಿಜವಾಗಿಯೂ ಆತ್ಮಹತ್ಯದ ಒಂದು ಅಂಶವಾಗಿವೆ. ಆತ್ಮಹತ್ಯವು ಮಹಾ ಪಾಪವಲ್ಲವೇ ? ಹಾಗಾದರೆ ಈ ಶರೀರನಾಶಕ ಪದಾರ್ಥ

ಗಳ ಸೇವನೆಯೂ ಪಾಪಕರವೇ ಸರಿ. ಆತ್ಮಹತ್ಯದಿಂದ ಬೇಗ ಜೀವಹೋದರೆ, ಈ ಶರೀರನಾಶಕಪದಾರ್ಥಗಳಿಂದ ಹಲವುಕಾಲ ವೇಳೆ ಲಭಿಸುವದು. ಆದರೆ ಇವುಗಳೂ ಆತ್ಮಹತ್ಯದ ಸಾಧನಗಳೇ ಸರಿ. ಇಂಥ ಸೇವನೆಯಿಂದ ದೂರೀದ ಹೊರತು ದೇಶದೇಳ್ಗೆಯಾಗದು. ನಮ್ಮ ಮೊದಲಿನ ಕಾಲದ ಇತಿಹಾಸವನ್ನು ಓದಿದರೆ ಮೈಮೇಲಿನ ರೋಮಾಂಚನಗಳೇಳುವಂಥವು ಕಥೆಗಳನ್ನು ಈಗಿನ ನಮ್ಮ ಪೀಳಿಗೆಗಳು ಕೇಳಿದರೆ ತುಚ್ಛೀಕರಿಸದೇ ಇರರು. ಇದಕ್ಕೆ ಪ್ರಶ್ನಿಸಲು, ನೀವೇನು ಹಿಂದಿನ ಜನ್ಮದಲ್ಲಿ ನೋಡಿ ಬಂದಿರುವಿರೋ ಎಂದು ಹಿರಿಯರನ್ನು ಪ್ರಶ್ನಿಸಿ ಹೀಯಾಳಿಸುವದುಂಟು. ಇದಕ್ಕೆ ಉತ್ತರಿಸಲು ಇತಿಹಾಸಗಳಿವೆ ಎಂದರೆ ಅದಕ್ಕೂ ಉತ್ತರಿಸಲು ವಿದ್ಯೆಕಲಿತಂಥ ಅಜ್ಞಾನದ ಸುಜ್ಞಾನಿಗಳುಂಟು. ಕೈಯಲ್ಲಿ ಬರೆಯುವ ಸಾಧನಗಳಿದ್ದಮೇಲೆ ವರ್ಣನೆಗೇನು ಕಡಿಮೆ. ದೇವರು ಕೊಟ್ಟ ಬುದ್ಧಿಯನ್ನುಪಯೋಗಿಸಿ ಏನನ್ನಾದರೂ ತಮ್ಮ ಆತ್ಮಪೌರುಷವನ್ನು ಬರೆದಿರಬಹುದೆಂದು ತೆಗಳುವದುಂಟು. ಹೀಗಾಗಿ ಹಿಂದಿನ ಇತಿಹಾಸ, ಪುರಾಣ, ಮಹಾಭಾರತ ಮುಂತಾದ ಗ್ರಂಥಗಳಿಗೆ ಇಂದು ಬೆಲೆಯಿಲ್ಲದಂತಾಗಿ ಕೇವಲ ಅನ್ಯರ ತೆಗಳಿಕೆ ಮುಂತಾದ ಹರಟೆಯಲ್ಲಿ ಕಾಲಹರಣಮಾಡುವದುಂಟು. ಆದರೆ ವೇಳೆಯ ಮಹತ್ವವರಿಯರು. ಇಂದು ಜಗತ್ತು ವೇಳೆಯೆಂಬ ಶೇಷನ ಮೇಲೆ ನಿಂತಿದೆ. ಇದನ್ನರಿತು ನಾವು ಆ ಜಗದಾಧಾರವಾದ ವೇಳೆಗೆ ಮಹತ್ವವೀಯದೆ ಜೀವಿಸುತ್ತಿದ್ದುದೂ ದೇಶಹೀನತೆಯ ಒಂದು ಅಂಗವಾಗಿದೆ. ನಮ್ಮ ದೇಶದ ವೇಳೆಯ ಅಲಕ್ಷತೆಯು ಬೇಗನೇ ತಿಳಿದುಬರುವದು. ಇಂದು ನಮ್ಮಲ್ಲಿ ಸುಶಿಕ್ಷಿತರಿದ್ದೂ ಅಶಿಕ್ಷಿತರಿದ್ದಂತೆಯೇ ಸರಿ. ಎಲ್ಲಿಯಾದರೂ ಕಾರ್ಯಕ್ರಮವಿದ್ದಲ್ಲಿ ಸಾಯಂಕಾಲ ೬ ಗಂಟೆಗೆ ಎಂದು ಜಾಹೀರಪಡಿಸಿದ್ದರೆ ಅದು ರಾತ್ರಿ ೮ ಗಂಟೆಗೇ ತೀವ್ರ ಪ್ರಾರಂಭವಾಗುವದುಂಟು. ಇಲ್ಲದಿದ್ದರೆ ಮುಂದೆ ೧೦-೧೨ ಗಂಟೆಗಂಟೆಗಂತೂ ಪ್ರಾರಂಭವಾದರಾಯಿತು. ಇಂಥ ಕರ್ತೃತ್ವಶಾಲಿಗಳಾಗಿದ್ದಾರೆ. ಇವರಂತೆ ಇನ್ನೂ ಅನೇಕ ಉದಾಹರಣೆಗಳನ್ನು ಪಡೆಯಬಹುದು. ಇವೆಲ್ಲವುಗಳು ನಮ್ಮ ಹೀನತೆಯ ಮುಖ್ಯ ಅಂಗಗಳೆಂದೇ ತಿಳಿಯಬಹುದು.

ದುಶ್ಚಟಗಳು ಈಗ್ಗೆ ೧೦೦ಕ್ಕೆ ೯೯ ಜನರಲ್ಲಿ ಒಡಮೂಡಿವೆ. ಎಲ್ಲಿ ನೋಡಿದಲ್ಲಿ ಬಾಯಿಯಿಂದ ಹೊಗೆವಾಸನೆ ಹೊರಡಿಸುವ ಜನರಾಗಿದ್ದಾರೆ.

ಪೇಟೆಯಲ್ಲಿ ಹೋದೊಡನೆ ಎಣ್ಣೆಯ ಕಮರು ವಾಸನೆ ಮನುಷ್ಯನನ್ನು ಸುತ್ತುವರಿದು ಆತನನ್ನು ಚಹ ಫಲಾಹಾರದ ಅಂಗಡಿಗಳಿಗೆ ಕರೆದೊಯ್ಯುತ್ತಿದೆ. ಮನೆಯಲ್ಲಿ ಹೆಂಡಿರು ಮಕ್ಕಳು ತುತ್ತು ರೊಟ್ಟಿಗೆ ಅಭಾವವಾಗಿದ್ದರೆ ಪೇಟೆಯಲ್ಲಿ ಪುರುಷರು ತಿರುಕರಂತೆ ಫಲಾಹಾರದ ಅಂಗಡಿಗಳಲ್ಲಿ ಜಾಡ್ಯವನ್ನು ತರಿಸುವಂತಹ ಮಲಿತ ಎಣ್ಣೆಯಲ್ಲಿ ಕರಿದ ಫಲಾಹಾರವನ್ನು ಸೇವಿಸುವರು. ಇದರಿಂದ ಹಣವಲ್ಲದೆ ಗುಣವೂ ಮತ್ತು ಶರೀರವೂ ನಾಶವಾಗುತ್ತವೆ. ಇದೆಲ್ಲ ವಿಚಾರಿಸದಿರುವ ನಾವು ಮನುಷ್ಯತ್ವಕ್ಕೆ ಸಮಾನರೇ ಅಲ್ಲ.

ಭಾರತವು ಸ್ವತಂತ್ರವಾಗಿ ೬-೭ ವರ್ಷಗಳಾದರೂ ಇನ್ನೂ ವರೆಗೆ ಒಂದಂಶದಷ್ಟು ಸಹ ನಾವು ಸುಧಾರಣೆಯಲ್ಲಿ ತಂದಿಲ್ಲ. ಹಾಳು ಹರಟೆಗಳಂತೂ ಮಿತಿಮೀರಿವೆ. ಸ್ವಾರ್ಥಬುದ್ಧಿಯಂತೂ ತುಂಬಿ ತುಳುಕುತ್ತಿದೆ. ಎಲ್ಲರ ಹೃದಯದಲ್ಲಿ ಹೀಗಿರಲು ದೇಶದ ಊರ್ಜಿತ ಸ್ಥಿತಿ ಎಲ್ಲಿ ? ನಮ್ಮ ಪಾದದಮೇಲೆ ನಾವೇ ಕಲ್ಲುಬಂಡೆಯನ್ನೆಸೆದುಕೊಂಡು ನೋವಾಯಿತೆಂದು ಹೇಳಿಕೊಂಡಂತಾಗುವದು. ನಮ್ಮ ಸಂಸ್ಕೃತಿಯಂತು ಅಳಿದು ಹೋಗಿದೆ. ಹಳ್ಳಿಗಳಲ್ಲಿ ಮಾತ್ರ ಅಲ್ಪಮಟ್ಟಿಗೆ ಉಳಿದಿವೆ. ಆದರೆ ಪಟ್ಟಣಗಳಲ್ಲಿಯ ಆಡಂಬರದ ಭೂತಗಳು ಹಳ್ಳಿಗಳಲ್ಲಿ ಹೊಕ್ಕರೆ ನಮ್ಮ ಸಂಸ್ಕೃತಿಯು ಸಂಪೂರ್ಣ ನಾಶಹೊಂದುವದರಲ್ಲಿ ಸಂದೇಹವಿಲ್ಲ. ಹಳ್ಳಿಗರಿಲ್ಲರೂ ಪಟ್ಟಣವಾಸಕ್ಕೆ ಮೆಚ್ಚಿ, ಹೊಲಮನೆಗಳನ್ನು ರೈತರಿಗೆ ಸಾಗಿಸಲು ಹಚ್ಚಿ ಪಟ್ಟಣದ ಸುವಾಸನೆಯ ಹೊಗೆವಾಸನೆಗೋ ಇಲ್ಲವೆ ಸಿನೇಮಾ ನಾಟಕದ ರುಚಿಗಾಗಿಯೋ ಇಲ್ಲವೆ ಮೋಟಾರು ಟಾಂಗೆಗಳಲ್ಲಿ ಹೆಂಡದಿರೊಂದಿಗೆ ಪೇಟೆಯಲ್ಲಿ ಮೆರೆಯಲೋಸುಗವೋ ಬಂದು, ಪಟ್ಟಣಗಲ್ಲಿ ತುತ್ತು ರೊಟ್ಟಿಗೆ ಅಭಾವವಾಗಿ, ಆಡಂಬರಕ್ಕೆ ಮೆಚ್ಚಿ, ಹೊಲಮನೆಗಳ ಅಲ್ಪ ಕಾಳುಕಡಿ ಮತ್ತು ಪಟ್ಟಣದಲ್ಲಿ ದೊರೆಯುವಂಥ ಕೂಲಿಯ ಸಂಬಳದಮೇಲೋ ಜೀವನವನ್ನು ಸಾಗಿಸುತ್ತಿರುವರು. ಹಳ್ಳಿಗಳಲ್ಲಿಯ ಹೊಲಮನೆಗಳ ಆವೇ ಅವರಿಗಿರುವದಿಲ್ಲ. ಬೆಳೆಗಳ ಯೋಗ್ಯತೆ ಆಯೋಗ್ಯತೆಯನ್ನು ತಕ್ಕಮಟ್ಟಿಗೇ ಅರಿತವರಾಗಿದ್ದಾರೆ. ಹೀಗಾಗಿ ರೈತರು ಲಕ್ಷಗೊಡದೇ ಬಂದಷ್ಟರಲ್ಲಿಯೇ ಹೊಲದೊಡೆಯನಿಗೆ ಧಾನ್ಯಗಳನ್ನು ಕೊಟ್ಟರೆ ಕೊಡಬಹುದು. ಇಲ್ಲದಿದ್ದರೆ ಬೆಳೆಗಳು ಸುಮಾರಾಗಿ ಬೆಳೆ ಬರಲಿಲ್ಲವೆಂದು ತಿಳಿಸಿ, ತಾವೇ ಬಳಸಿಕೊಳ್ಳಬಹುದು. ಹೀಗಾಗಿ ರೈತರಲ್ಲಿಯೂ ಬೆಳೆ ಬೆಳೆದು ನಮ್ಮ ಹೊಲದೊಡೆಯರ ಪ್ರೀತಿಗೆ ಪಾತ್ರರಾಗಬೇಕೆಂಬ ಭಾವನೆಯೂ ವಿರಳವಾಗಿದೆ. ಏಕೆಂದರೆ, ಹೇಗಾದರೂ ನಮಗೆ

ವರ್ಷಕ್ಕೆ ಸಾಲುವಷ್ಟು ಧಾನ್ಯ ಬಂದೇ ಬರುವದು. ಹೆರವರಿಗಾಗಿ ನಾವೇಕೆ ಪರಿಶ್ರಮಪಟ್ಟು ದುಡಿಯಬೇಕೆಂದು ವೈಗಳ್ಳರಾಗಿ ದುಡಿಯಹತ್ತಿದರೆ, ಬೆಳೆ ಬೆಳೆಯಿರಿ, ಸ್ವಾವಲಂಬಿಗಳಾಗಿರಿ ಎಂದು ವರ್ತಮಾನಪತ್ರಗಳಲ್ಲಿ ಜಾಹೀರ ಪಡಿಸಿದರೆ ಹಾಸ್ಯಾಸ್ಪದವೇ ಸರಿ. ರೈತರಂತೂ ಸ್ವಾವಲಂಬಿಗಳಾಗಿದ್ದಾರೆ. ಆದರೆ ಪಟ್ಟಣದಲ್ಲಿ ಮಾತ್ರ ಹೊಲಮನೆಗಳಿದ್ದ ಉದ್ಯೋಗಸ್ಥರು ಆನಂದ ದಿಂದ ಕಾಲಕಳೆಯುತ್ತಿರಲು ಅವರಾದರೂ ಸ್ವಾವಲಂಬಿಗಳೇ ಸರಿ. ಇನ್ನು ಉಳಿದವರೆಂದರೆ ಹೊಲಮನೆಗಳಿಲ್ಲದ ಬಡವರು. ಬಡವರಿಗಾಗಿ ಸರಕಾರವು ಯಾವ ಉಪಾಯವನ್ನೂ ಕೈಕೊಂಡಿಲ್ಲ. ಯಾವದಾದರೊಂದು ನೌಕರಿ ಸ್ವೀಕರಿಸಬೇಕಾದರೆ *Deposit* ಹಣ ಬೇಕೆಂಬ ಕಾಯಿದೆಪ್ರಕಾರ ಬಡವ ರಿಗೆ ಹಣವೆಲ್ಲಿಂದ ದೊರೆಯಬೇಕು ? ಹೀಗಾಗಿ ಉದ್ಯೋಗಗಳು ಸಿರಿವಂತ ರಿಗಾಗಿಯೇ ಅವಲಂಬಿಸಿವೆ. ಹೀಗೆಯೂ ಕೇಳಬಹುದು, ಮೊದಲಿನ ಕಾಲ ದಲ್ಲಿ ನೌಕರಿಯ ಅಭಾವವಿದ್ದಿಲ್ಲವೇಕೆಂದು. ಇದನ್ನೂ ವಿಚಾರಿಸುವಾ. ಮೊದಲಿನ ನಮ್ಮ ಶ್ರೀಮಂತ ಜನ ನೌಕರಿಯೆಂದರೆ ಅತಿ ಹೀನವೆಂದೂ, ಅದನ್ನು ಕೈಕೊಂಡರೆ ನಮ್ಮ ವರ್ಚಸ್ಸು ಕಡಿಮೆಯಾಗುವದೆಂದೂ ತಿಳಿದು, ನೌಕರಿ ಮಸ್ತಿರೆ ಉದ್ಯೋಗಗಳನ್ನು ಸ್ವೀಕರಿಸದೇ ಹಳ್ಳಿಗಳಲ್ಲಿ ತಮ್ಮ ಹೊಲಮನೆಗಳನ್ನು ಸಾಗಿಸಿಕೊಂಡು ಸುಖದಿಂದ ಜೀವಿಸುತ್ತಿದ್ದರು. ಆದರೆ ಅವರಿಂದು ಹೀಗೆ ನೌಕರಿಯನ್ನವಲಂಬಿಸಲು ಕಾರಣವೇನೆಂದರೆ, ಮೇಲೆ ತಿಳಿಸಿದಂತೆ ಆಡಂಬರವೆಂಬ ಭೂತವು ಆವರಿಸಿ, ಆಡಂಬರಕ್ಕಾಗಿ ಹಣ ಸಾಲದೇ ನಾಚಿಕೆಯೆಂಬ ಅರಿವನ್ನೇ ಹೋಗಲಾಡಿಸಿ, ಇಂಥ ನೌಕರಿಗಾಗಿ ಸ್ಪಳವಿತ್ತಿದೆ. ಇನ್ನು ವಿಚಾರಿಸಬಹುದು, ಪಟ್ಟಣಗಳಲ್ಲಿಯ ಸಿನೇಮಾ, ನಾಟಕ ಮುಂತಾದ ಮನರಂಜನೆಯನ್ನು ತೆಗೆದುಹಾಕಲ್ಪಡಬೇಕೆಂದೂ, ಹಾಗೆ ಮಾಡಿದಲ್ಲಿ ನಮ್ಮ ಭರತಖಂಡವು ಮೊದಲಿನಂತೆ ಊರ್ಜಿತಾವಸ್ಥೆಗೆ ಬರುವದೆಂದು ತಿಳಿಯಬಹುದು. ಆದರೆ ಇದು ಶುದ್ಧ ತಪ್ಪು ತಿಳುವಳಿಕೆ. ಪಟ್ಟಣಗಳು ಮತ್ತು ಮನರಂಜನೆಗಳು ಏಕೆ ನಿರ್ಮಿತವಾದುವೆಂದರೆ ಕೇವಲ ಬಡವರಿಗಾಗಿ ಎಂದು ಹೇಳಬಹುದು. ಏಕೆಂದರೆ, ದುಡಿಯಲೋಸುಗ ದುಡಿಮೆಯ ಸ್ಥಳಗಳನ್ನು ಹುಡುಕುತ್ತಾ, ಬಡಜನರು ಕಾರಖಾನೆ ಮುಂತಾದ ಔದ್ಯೋಗಿಕ ಸ್ಥಳಗಳಿಗೆ ಬಂದು ನೆಲಿಸಿ, ಪಟ್ಟಣಗಳಾಗಿವೆ, ಹೊರತು ಅಲ್ಪಸಂಖ್ಯಾಕರಾದ ಶ್ರೀಮಂತರಿಂದಲ್ಲ. ಆದರೆ ಇಂದು ಪಟ್ಟಣಗಳಲ್ಲಿ ಸಿರಿವಂತಜನರು ಆಗಮಿಸಲು ಕಾರಣವೇನೆಂದರೆ, ಬಡಜನರು ಔದ್ಯೋಗಿಕ

ಸ್ಥಳಗಳಿಗೆ ಬಂದೊಡನೆ ಹಣವಿಲ್ಲದ ಅವರಿಗೆ ಮನೆಮಾರುಗಳೆಲ್ಲಿ? ಇಂಥ ಸುಸಂಧಿಯನ್ನು ತಿಳಿದು ಸಿರಿವಂತರು ಪಟ್ಟಣಗಳಲ್ಲಿ ಆಗಮಿಸಿ, ಬಡಜನರ ಹಿತಕ್ಕಾಗಿ ಎಂಬುವಂತೆ ಮನೆಮಾರುಗಳನ್ನು ಕಟ್ಟಿಸಿ, ಬಾಡಿಗೆಯಿಂದ ಬಡವರಿಗೆ ಮನೆಯೊಪ್ಪಿಸಿ, ಬಾಡಿಗೆಯ ಹಣದಿಂದ ಜೀವಿಸಹತ್ತಿದರು. ಮುಂದೆ ದುಡ್ಡಿನ ಲೋಭವು ಹೆಚ್ಚಾಗಿ ಮತ್ತು ಬಡವರಿಗಾಗಿ ಸಾಕಷ್ಟು ಮನೆಮಾರುಗಳಾದೊಡನೆ ಬೇರೆ ವಿಚಾರಗಳಾವರಿಸಿ, ದುಡಿದು ದಣಿದಂಥ ಬಡವನಿಗೆ ಮತ್ತೆ ಏನು ಬೇಕಾಗಬಹುದೆಂದು ವಿಚಾರಿಸಿ, ದುಡಿಯುವ ಮಾನವನಿಗೆ ವಿಶ್ರಾಂತಿ ಬೇಕಲ್ಲವೇ? ಇದನ್ನು ಸ್ವಾಭಾವಿಕವಾಗಿ ತಿಳಿದುಕೊಳ್ಳಬಹುದು. ಇದನ್ನು ತಿಳಿದು ಸಿರಿವಂತ ಜನ ತಮ್ಮ ಹೊಲಮನೆಗಳನ್ನು ಮಾರಿ, ಬಂದ ಹಣದಿಂದ ಸಿನೇಮಾ ಮುಂತಾದ ಮನರಂಜನೆಗಳನ್ನು ನಿರ್ಮಿಸಿ, ಹಣ ದೋಚಿಕೊಳ್ಳುತ್ತಿರುವರು. ಆದರೆ ಇದು ಅವರ ತಪ್ಪಲ್ಲ. ಧನಲೋಭವು ಸಂಸಾರಸ್ಥರಿಗೆಲ್ಲರಿಗೂ ಇರುವದು ಸ್ವಾಭಾವಿಕ. ಅದರಲ್ಲಿ ಸುಶಿಕ್ಷಿತ ಜನ ತಿಳುವಳಿಕೆಯಿಲ್ಲದ ಅಶಿಕ್ಷಿತರಂತೆ ವರ್ತಿಸುವದುಂಟು. ಅದು ಹೇಗೆಂದರೆ, ಸುಶಿಕ್ಷಿತ ಬಹುಜನ ಪರದೇಶಿಗರಂತೆ ಆಡಂಬರದ ಉಡುಪು ತೊಡಪುಗಳೊಂದಿಗೆ ಕೈ ಹೊಲಸಾಗದಂತೆ ಶುದ್ಧ ಬಿಳುಪಾದ ಹಾಳೆಗಳ ಮೇಲೆ ಬರೆಯುವ ನೌಕರಿಯನ್ನು ಹುಡುಕುತ್ತ, ನೌಕರಿಗಾಗಿ ಸ್ಥಳವಿಲ್ಲದಿರಲು ಯಾವದಾದರೊಂದು ಆಫೀಸಿನೆದುರು ಕುಳಿತು, ಉಪವಾಸವನ್ನು ಕೈಕೊಂಡರೆ ಅವರು ನಿಜವಾಗಿ ಹೇಡಿಗಳೇ ಸರಿ. ದುಡಿಯುವವು ಜನತೆಯಲ್ಲಿ ಆಡಂಬರದಿಂದ ಮೆರೆದಾಡುವದಕ್ಕಲ್ಲ, ಹೊಟ್ಟೆಗಾಗಿ ಮಾತ್ರ. ಆಡಂಬರವು ನಮ್ಮ ದೇಶಸ್ಥರಿಗೆ ಯೋಗ್ಯವಲ್ಲ. ಏಕೆಂದರೆ ನಾವು ಶಾಕಾಹಾರಿಗಳು. ಒಕ್ಕಲುತನವೇ ನಮ್ಮ ಮುಖ್ಯ ಉದ್ಯೋಗ. ಉಳಿದ ಮಾಂಸಾಹಾರಿ ದೇಶಿಗರಂತೆ ವರ್ತಿಸುವದು ತಪ್ಪು. ಹೊಟ್ಟೆಹೊರೆದುಕೊಳ್ಳುವದಕ್ಕಾಗಿ ದುಡಿಮೆ ಅಂದಮೇಲೆ ಯಾವದಾದರೊಂದು ದುಡಿತವನ್ನು ಕೈಕೊಂಡರಾಯಿತು. ಆದರೆ ಇಲ್ಲಿ ಮತ್ತೊಂದು ವ್ಯತ್ಯಾಸವು ಕಂಡುಬರುವದು. ಅದಾವದೆಂದರೆ, ಸರಕಾರಿ ನೌಕರಿಗಳಿಗಿದ್ದ ಮಾನ್ಯತೆ, ವಿರಾಮ, ಸೌಲಭ್ಯಗಳು ಇತರ ಉದ್ಯೋಗಗಳಲ್ಲಿಲ್ಲ. ಮೇಲಾಗಿ ದುಡಿತಕ್ಕೆ ತಕ್ಕ ಫಲವಿಲ್ಲ. ಹೀಗಾಗಿ ಜನತೆಯು ಒಲವು ಆ ಮೆತ್ತನ್ನ ಗಾದಿಯನ್ನು ಹಾಸಿದ ಖುರ್ಚಿ, ಟೇಬಲ್ ಮೇಲೆ ಸುವಾಸನೆಯ ಊದಬತ್ತಿ. ನುಣುಪಾದ ಶುಭ್ರ ಕಾಗದ, ಇವೆಲ್ಲವುಗಳಲ್ಲದೆ ಇವರಿಗೆ ಪರಿಶ್ರಮವಾಗಬಾರದೆಂದು ವಾಯುದೇವನನ್ನೇ

ಸಂಖ್ಯಾವತಾರದಲ್ಲಿ ಅವರಿಗೊಲಿಸಿದಮೇಲೆ ಇನ್ನಿತರ ಖಾಸಗಿ ನೌಕರರು ಬಿಸಿಲಿನಿಂದ ಬೆಂದು, ರಕ್ತವನ್ನು ಸುರಿಸಿ, ಕೈ ಮೈಗಳನ್ನು ಮಲಿನ ಮಾಡಿಕೊಂಡು, ಜನರಲ್ಲಿ ಅತಿ ಹೀನನೆಂದೆನಿಸಿಕೊಳ್ಳಲು ಅರ್ಹರಾಗುವರೇ? ಇದಕ್ಕೆ ಒಂದೇ ಒಂದು ಉದಾಹರಣೆ ಕೊಡಬಹುದು. ಅದಾವದೆಂದರೆ, ಒಂದು ಪಾತ್ರೆಯಲ್ಲಿ ವಿಷವೂ, ಇನ್ನೊಂದು ಪಾತ್ರೆಯಲ್ಲಿ ಅಮೃತವೂ ಉಂಟು. ಅದರಲ್ಲಿ ಯಾವುದು ಸ್ವೀಕರಿಸುವಿರೆಂದು ಕೇಳಿದಾಗ ಯಾರಾದರೂ ವಿಷ ಸ್ವೀಕರಿಸಬಹುದೇ ? ಹಾಗೆ ಸರಕಾರಿ ನೌಕರಿಗಳು ಅಮೃತ ಸಮಾನವೂ, ಖಾಸಗಿ ನೌಕರಿಗಳು ವಿಷವಸಮಾನವೂ ಆಗಿವೆ. ವಿಷದ ಸಮಾನವಾದ ಇತರ ಖಾಸಗಿ ನೌಕರಿಗಳನ್ನು ಮಾಡುವವರೆಂದರೆ ಕೇವಲ ಅಶಿಕ್ಷಿತರು ಮಾತ್ರ. ಆದರೆ ಈಗ್ಗೆ ಎಲ್ಲರೂ ಆ ಅಮೃತಸಮಾನವಾದ ಸರಕಾರಿ ನೌಕರಿ ಪಡೆಯಲೋಸುಗ ಶಿಕ್ಷಣ ಕಲಿಯುವರು, ಹಾಗೂ ಅಶಿಕ್ಷಿತರಾದ ಪಾಲಕರು ತಮ್ಮ ಮಕ್ಕಳನ್ನು ತಮ್ಮಂತೆ ದುಃಖಸೆಳೆತದಲ್ಲಿ ಸಿಲುಕಿಸಬಾರದೆಂದು ಕೂಲಿಯಿಂದ ಬಂದಹಣದಿಂದ ಮಕ್ಕಳಿಗೆ ವಿದ್ಯಾಭ್ಯಾಸ ಕಲಿಸಿ, ಕೊನೆಗೆ ನಿರಾಶರಾಗುವರು. ಸುಶಿಕ್ಷಿತರಾದ ಜನರು ಇತರ ಉದ್ಯೋಗ ಕೈಕೊಳ್ಳದೇ ನಿರುದ್ಯೋಗಿಗಳಾಗಿರುವರು. ಹೀಗಾಗಿ ಕೆಲವೇ ವರ್ಷಗಳಲ್ಲಿ ಒಕ್ಕಲುತನವು ಸಂಪೂರ್ಣನಾಶಹೊಂದಿ ಹುಲ್ಲುಬೀಜಗಳೇ ಆಹಾರ ಧಾನ್ಯವೆಂದು ಸೇವಿಸುವ ಪ್ರಸಂಗ ಬರಬಹುದು. ಇದು ಶಾಶ್ವತ. ಇದನ್ನರಿತು ಸರಕಾರವು ಯೋಗ್ಯ ಕ್ರಮವನ್ನು ಕೈಕೊಳ್ಳುವದು ಉತ್ತಮ. ಅದಾವುದೆಂದರೆ, ಯಾವ ಉತ್ಪನ್ನವಿಲ್ಲದ ಬಡವರಿಗೆ ಸ್ಥಳವಿತ್ತಲ್ಲಿ ಮಾತ್ರ ರಾಜ್ಯದಾಡಳಿತವೂ ಸುರಕ್ಷಿತವಾಗಿ ಸಾಗುವದು. ಏಕೆಂದರೆ, ಬಡಜನರೇ ಹೆಚ್ಚು ಜ್ಞಾನಿಗಳು. ಹೀಗೆ ಸರಕಾರವು ಈ ಕಾರ್ಯ ಕೈಕೊಂಡಲ್ಲಿ ನಿರುದ್ಯೋಗತನವೂ, ಆಹಾರಸಮಸ್ಯೆಯೂ ಪೂರ್ಣ ಫಲಕಾರಿಯಾಗುವದರಲ್ಲಿ ಯಾವ ಸಂಶಯವೂ ಇಲ್ಲ. ಅಮೇಲೆ ಸಿರಿವಂತರು ತಾವಾಗಿಯೇ ತಮ್ಮ ಬೀಡಾರವಾದ ಹಳ್ಳಿಗಳಿಗೆ ತೆರಳಿ ಒಕ್ಕಲುತನ ವ್ಯವಸಾಯ ಹಾಗು ಪಟ್ಟಣಗಳಲ್ಲಿ ಉದ್ಯೋಗ,ವ್ಯವಸಾಯಗಳನ್ನು ಕೈಕೊಂಡು ತರತರದ ಸಂಶೋಧನೆಗಳನ್ನು ಶೋಧಿಸಬಹುದು. ಆದರೆ ಈ ದುಶ್ಚಟಗಳನ್ನು ಹಾಗೂ ಆಡಂಬರದ ವೇಷಭೂಷಣಗಳನ್ನು ತ್ಯಜಿಸಿ, ಸ್ವದೇಶಾಭಿಮಾನಿಗಳಾದರೆ ಮಾತ್ರ ಆದಿಭಾರತ ಅರುಣೋದಯವು ಮೇಳಿ ಉದಯವಾಗುವದರಲ್ಲಿ ಸಂದೇಹವಿಲ್ಲ.

---

# ಕೊಳೂರು ಕೊಡಗೂಸು.

( ಲೇಖಕರು:- ಶ್ರೀಯುತ ಎಸ್. ಎಮ್. ಜಾಡರ, ಧಾರವಾಡ. )



ಕೋಳೂರು ಎಂಬುದೊಂದು ಚಿಕ್ಕ ಹಳ್ಳಿ. ಅಲ್ಲಿ ಲಿಂಗವಂತರ ಒಂದು ಸಾಮಾನ್ಯ ಸಿರಿವಂತಿಕೆಯ ಮಾನವಂತರ ಮನೆ. ಈ ಮನೆಯ ಯಜಮಾನ ಸಾದಾ ಮನುಷ್ಯ. ಸತತೋದ್ಯೋಗಿ, ಅಲ್ಲದೆ ಲಿಂಗ ಪೂಜೆಯಲ್ಲಿ ವೈನುರೆತು, ದೇವ ದೇವನ ಸಂಕೀರ್ತನೆಯನ್ನು ಮಾಡಿ ಪೂಜೆಯನ್ನು ಮುಗಿಸುವವ. ಅಲ್ಲದೆ ಸ್ವತಃ ತನ್ನ ಲಿಂಗಪೂಜೆಯು ಮುಗಿದಕೂಡಲೆ ಕಾಯ್ದ ಹಾಲನ್ನು ಈಶ್ವರದೇವರಿಗೆ ನೈವೇದ್ಯಕೊಡುವದು ಇವನ ವಾಡಿಕೆಯಾಗಿತ್ತು. ಹೀಗೆ ಅವನು ದಿನಾಲು ನೈವೇದ್ಯತೋರಿಸಿ ಅವನ್ನು ಕುಡಿದುಬರುವದೊಂದು ಅವನ ಮತ್ತೊಂದು. ವಾಡಿಕೆ. ನಂತರ ಮಗಳೊಂದಿಗೆ ನಗುತ್ತ ಕಲೆಯುತ್ತ ಊಟಮಾಡುತ್ತಿದ್ದ. ಅವನ ಮಗ ಳಾದರೂ ೧೧ ವರುಷದ ಚಿಕ್ಕ ಹುಡುಗಿ. ತಾಯಿಯಿಲ್ಲದ ಮಗಳು. ಹೀಗಾಗಿ ತಂದೆಯು ಮಾತನ್ನು ತಿರುವಿಹಾಕದೆ ಅವನ ಕಣ್ಮಣಿಯಂತೆ ಇದ್ದಳು. ಇದರಿಂದ ಅವನು ಅವಳನ್ನು ಕಂಡಾಗಲೆಲ್ಲ ಅವಳನ್ನು ಎತ್ತಿ ಮುದ್ದಾಡುತ್ತಿದ್ದ.

ಹೀಗಿರುವಾಗ ಅವನು ಒಮ್ಮೆ ಸನಿಯದ ಜಾತ್ರೆಯೊಂದಕ್ಕೆ ಹೋಗು ವದನ್ನು ನಿರ್ಧರಿಸಿದ. ಅವನು ಶಿವಭಕ್ತನಾದ್ದರಿಂದ ಸಾಧು ಸತ್ಪುರುಷರು ಎಂದರೆ ಬಿದ್ದುಸಾಯುತ್ತಿದ್ದ. ಮತ್ತು ಇನ್ನೊಂದು ಅವನ ಕಲ್ಪನೆ ಯೇನೆಂದರೆ ಇಂಥ ಧಾರ್ಮಿಕ ವಿಷಯದ ಬಗ್ಗೆ ಲಕ್ಷ ಪೂರೈಸುವದರಿಂದ ಮನುಷ್ಯನ ಬುದ್ಧಿಯು ನೀರೊಳಗೆ ಬಿದ್ದ ಎಣ್ಣೆಯ ಹನಿಯಂತೆ ಆಗು ವದು ಎಂಬುದು ಅವನ ಮತ್ತೊಂದು ಕಲ್ಪನೆ. ಆ ಜಾತ್ರೆಯ ಸಲುವಾಗಿ ಅವನು ಹೊರಟೇಬಿಟ್ಟ. ಹೋಗುವ ಮುನ್ನ ಮಗಳಿಗೆ ಚನ್ನಾಗಿ ಬಾಗಿಲ ಇಕ್ಕಿಕೋ. ಅಲ್ಲಲ್ಲಿ ತಿರುಗಾಡಬೇಡ. ದೇವರಿಗೆ ಹಾಲನ್ನು ನೈವೇದ್ಯ ಹಿಡಿಯುವದಕ್ಕೆ ಮರೆಯಬೇಡ. ಮತ್ತು ಆಕಳ ಬಗ್ಗೆ ಕಾಳಜಿ ತಕ್ಕೋ. ಬೇಗನೇ ಆಕಳನ್ನು ಕರೆದುಕೋ ಎಂದು ಮುಂತಾಗಿ ಮಗಳಿಗೆ ತಿಳಿಸಿ ಹೇಳಿದ. ಮತ್ತು ಬರುವಾಗ ನಿನಗೆ ಆಟಿಗೆ ಸಾಮಾನುಗಳನ್ನು ತರುವೆ

ಎಂದು ಹೇಳಿ ಹೊರಟ. ಮಗಳಾದರೂ ತಂದೆಯ ಮಾತಿಗೆ ಒಪ್ಪಿಕೊಂಡಳು.

ಆಮೇಲೆ ಅವಳು ಎಲ್ಲ ವ್ಯವಸ್ಥೆಯನ್ನು ಮಾಡಿ ಮುಗಿಸಿದಳು. ಹೋಗುವಾಗ ತಂದೆಯು ಲಿಂಗಪೂಜೆಯನ್ನು ಮಾಡಿಕೊಂಡು, ದೇವರಿಗೆ ನೈವೇದ್ಯ ಸಮರ್ಪಿಸಿ ಹೋಗಿದ್ದ. ಆದ್ದರಿಂದ ಅವಳು ಅಂದು ದೇವರಿಗೆ ಹಾಲು ಕೊಡುವದೇನು ಅಗತ್ಯವಿದ್ದಿಲ್ಲ. ಇನ್ನುಳಿದ ಎಲ್ಲ ವ್ಯವಸ್ಥೆಯನ್ನು ಮುಗಿಸಿ, ಬೇಗನೇ ಊಟಮಾಡಿ, ದೇವರನ್ನು ನೆನೆದು ಮಲಗಿದಳು. ಮತ್ತು ನಸುಕಿನಲ್ಲಿಯೇ ಎದ್ದು, ಪ್ರಾತರ್ವಿಧಿಗಳನ್ನು ತೀರಿಸಿಕೊಂಡು, ನೀರು ತಂದು, ಆಗ ನ್ನು ಕರೆದುಕೊಂಡು, ನಂತರ ಅದನ್ನು ಕಾಯು ವವನಿಗೆ ಎಚ್ಚರಿಸಿ ತಾನು ದೇವರ ಪೂಜೆಯಲ್ಲಿ ಮಗ್ನಳಾದಳು. ನಂತರ ಪೂಜೆಯು ಮುಗಿದೊಡನೆಯೇ ದೇವರಿಗೆ ನಮಸ್ಕರಿಸಿ ಈಶ್ವರ ಗುಡಿಗೆ ನೈವಿದ್ಯ ಕೊಡಲು ಗುಡಿಗೆ ಹೋದಳು. ಮತ್ತು ಇಂದು ತಂದೆಯು ಇಲ್ಲ. ಜಾತ್ರೆಗೆ ಹೋಗಿರುವನು. ಆದ್ದರಿಂದ ಬೇಗನೆ ಕುಡಿದುಬಿಡು ಎಂದಳು. ಪಾಪ, ಅವಳಿಗೇನು ಗೊತ್ತು? ತಂದೆಯು ಹಾಲನ್ನು ನೈವೇದ್ಯ ಹಿಡಿದು ಅಲ್ಲಿಯೇ ಕುಡಿದುಬಿಡುವನೆಂಬುದು.

ಅವಳು ನಿಂತೇನಿಂತಳು ದೇವನು ಹಾಲು ಕುಡಿಯಲಿಲ್ಲ. ಆಗ ಅವಳು ದೇವಾ ಹೀಗೆಕೆ ಮಾಡುವಿ? ತಂದೆಯಿಲ್ಲವೆಯೋ, ಅಥವಾ ಹಾಲು ಆರಿದೆಯೆಂದೋ, ಹೊತ್ತಿದೆಯೆಂದೊ, ಸುಡುವದೆಂದೋ ಮತ್ತೆ ಏನಾದರೂ ಆಗಿದೆಯೆಂದೋ? ಏನುದೇವಾ ಹೀಗೆಕೆ ಮಾಡುವಿ? ಸಣ್ಣ ಹುಡುಗಿಯೆಂದೋ ದೇವಾ ಹೇಳು. ಮತ್ತೆ ನಿಂತಳು ಏನೂ ಆಗಲಿಲ್ಲ. ಆಗ ಅವಳು ಸಕ್ಕರಿ ಬೆರಸಿದರೆ ಕುಡಿಯುವಿಯಾ, ಹಾಲಲ್ಲಿ ನೀರು ಬೆರಸಿರುವೆನೆಂದು ತಿಳಿದು ಕುಡಿಯಲೊಲ್ಲೆಯಾ? ಮತ್ತು ಎಷ್ಟೋ ಬೇಡಿಕೊಂಡಳು. ಪ್ರಯೋಜನವಾಗಲಿಲ್ಲ. ಆಗ ಅವಳು ಮನದಲ್ಲಿಯೇ ದೇವನಿಗೆ ದೃಷ್ಟಿಯಾಗಿರುವದನ್ನು ಮರೆತೆ. ಅದಕ್ಕೇನೆ, ಅವನು ಇಲ್ಲಿಯವರೆಗೆ ಕುಡಿಯಲಿಲ್ಲ ಎಂದವಳೇ ಮರಿಗೆ ನಿಂತಳು. ಅವಳು ಬಲ್ಲಳೇ ಕಲ್ಲುಮೂರ್ತಿಯು ಹಾಲು ಕುಡಿಯಬಾರದೆಂದು ನಿಂತು ಬೇಸರವಾಯಿತು. ಕಡೆಗೆ ಅದೆಷ್ಟೋ ರೀತಿಯಿಂದ ಹೇಳಿಕೊಂಡರೂ ಪ್ರಯೋಜನವಾಗಲಿಲ್ಲ. ಕಡೆಗೆ ಅವಳು ಗಂಭೀರ ಭಾವದಿಂದ ದೇವಾ, ನೀನು ಹಾಲು ಕುಡಿಯದಿದ್ದರೆ ನಾನು ನಿನ್ನಡಿಯಲ್ಲಿಯೇ ತಲೆಹೊಡೆದುಕೊಂಡು

ಸಾಯುವೆ ಎಂದವಳೇ ತಲೆಯನ್ನು ಮೂರ್ತಿಯ ಪಾದಕ್ಕೆ ಹೊಡೆದುಬಿಟ್ಟಳು. ಅಚ್ಚ ಭಕ್ತಿವಾನನ ಪುತ್ರಿಯಾದ ಅವಳಭಕ್ತಿಗೆ ಆ ದೇವನು ಮೆಚ್ಚಿ "ಕುಡಿವೇಅವ್ವಾ ತಡಯಾಕೆ ಬಡಿದಾಡುವೆ ಎಂದಂತಾಯಿತು. ಮೇಲೆನೋಡುತ್ತಾಳೆ ನಿಜವಾಗಿ ಕಲ್ಲುಮೂರ್ತಿಯಲ್ಲಿಯೇ ಉದ್ಭವಿಸಿ ಅವಳನ್ನು ಎತ್ತಿ ಹಿಡಿದು ನಂತರ ಹಾಲನ್ನು ಕುಡಿದುಬಿಟ್ಟ. ಆಗ ಅವಳಾನಂದಕ್ಕೆ ಪಾರವಿಲ್ಲದಾಯಿತು. ಕೂಡಲೇಅವಳು ಪರಮಾತ್ಮನನ್ನು ಹೊಗಳುತ್ತ ಮನೆ ಸೇರಿದಳು. ಆವಾಗ ತಂದೆಬಂದು ಬಿಟ್ಟಿದ್ದ. ಆಗ ಅವನು ತಾಯಿ ಹಾಲು ಎಲ್ಲ ಕುಡಿದು ಬಂದಿಯೇ ಎಂದು ಸಲುಗೆಯಿಂದ ಕೇಳಿದ ಆಗವಳು ಆನಂದದಿಂದ ದೇವರು ಕುಡಿದುಬಿಟ್ಟ ಆಗ ಅವನು ಸ್ವಲ್ಪಸಿಟ್ಟಿಗೆದ್ದ "ಏನು ದೇವನ ಕುಡಿದನೇ"

ಹೌದಪ್ಪಾ. ಯಾಕೆ ಹೀಗೆ ಅನುಮಾನದಿಂದ ಸಿಟ್ಟಿಗೇಳುವಿರಿ? ಆಗ ಅವನಿಗೆ ಪೂರ್ಣಸಿಟ್ಟುಬಂದು ತಲೆಯುಕೆಟ್ಟಿದಿಯೆ? ಕಲ್ಲುಮೂರ್ತಿಯು ಹಾಲು ಕುಡಿಯುವದುಂಟೆ ?

ಇಲ್ಲವಪ್ಪಾ ನಿಜವಾಗಿ ಕುಡಿದುಬಿಟ್ಟ. ನೀನು ಹೀಗೆ ದಿನಾಲು ಕುಡಿಸಿದ ನಂತರ ತಿರುಗಬರುತ್ತಿದ್ದಿ. ಹಾಗೆಯೇ ನಾನುಸಹ ಅವನಿಗೆ ಕುಡಿಸಿದೆ.

ಏನು ನಾನು ದಿನಾಲು ಕುಡಿಸಿಬರುವೆನೆಂದು ತಿಳಿದಿರುವೆಯಾ ? ಇಲ್ಲಾ. ನಾನು ಅಲ್ಲಿಯೇ ಕುಡಿದುಬರುತ್ತಿದ್ದೆ. ನೀನು ನಿಜವಾಗಿಯೂ ಯಾವನಿಗೋ ಅಥವಾ ಯಾರಿಗೋ ಕೊಟ್ಟಿರುವಿ. ನಿಜವನ್ನು ಬೊಗಳು. ಇಲ್ಲವಾದರೆ ಕೊಲ್ಲುವೆ ನೋಡು.

ಏನು ಅಪ್ಪಾ ಹೀಗೇಕೆ ನುಡಿಯುವಿ ? ವಿಚಾರಮಾಡದೆ ಬೈಯ್ಯ ಬೇಡಪ್ಪಾ ತಂದೆ. ಇಲ್ಲ! ಇಲ್ಲ! ನೀನು ನಿಜವಾಗಿಯೂ ನೀಚಳು. ಮನೆಯ ಮಾನವನ್ನು ಹಾಳುಮಾಡುವಳು ನೀನೇ. ತಾಯಿ ಯಿಲ್ಲದ ಹುಡುಗಿ ಎಂದು ಸಲುಗೆಕೊಟ್ಟರೆ ನೀನು ನನ್ನನ್ನೇ ಎಚ್ಚರಿಸಲು ಬಂದಿರುವೆಯಾ ! ಅದೇನೋ? ಅನ್ನುವರಲ್ಲ – "ಸಲುಗೆಯ ಕೊಟ್ಟ ನಾಯಿ ತಲೆಗೆ ಏರಿತು" ಅಂತು ಹಾಗಾಯಿತು ನೀ ಮಾಡಿಟ್ಟದ್ದು. ಹೂಂ. ಏನೆನ್ನುವೆ.

ತಂದೆಯೇ ನಾನು ನಿಜವಾಗಿಯೂ ಸುಳ್ಳುಹೇಳುವದಿಲ್ಲವಪ್ಪಾ. ಒಂದುವೇಳೆ ನಿನಗೆ ನಾ ಹೇಳಿದ್ದರಲ್ಲಿ ನಂಬಗೆಬಾರದೇ ಹೋದರೆ ದೇವನನ್ನೇ ದೇವನಿಂದಲೇ ಹೇಳಿಸಿಕೊಡುವೆ ನಡೆ ಬೇಕಾದರೆ.

ನಡೆ ನೀನು ವ್ಯಭಿಚಾರಿಣಿ. ಸಣ್ಣವಳಿಂದು ಬಿಟ್ಟೆ ಪರಿಣಾಮ. ಅವಳು ಮಾತನಾಡದೆ ದೇವರ ಗುಡಿಗೆ ಬಂದು, ಭಕ್ತಿಯಿಂದ ದೇವರಿಗೆ ನಮಸ್ಕರಿಸಿ, ದೇವಾ ಹೇಳು. ನಿನ್ನಿಂದಾದರೂ ಇವನು ಮಾರ್ಗ ಹಿಡಿಯಲಿ. ಹಾ; ಹಾ;... ಕಲ್ಲುದೇವನಿಂದ ಮಾರ್ಗಹಿಡಿಯಲಿ ಹೇಳು ನೋಡುವಾ. ತೋರಿಸು ಬೇಗ. ಅವನು ಮುಕ್ಕೊಮ್ಮೆ ಬೊಬ್ಬಿಟ್ಟುಕೊಂಡ.

ದೇವಾ ಎಂಥ ಸಮಯದಲ್ಲಿ ಕಾಡುವೆ. ಬೇಗನೇ ನಮ್ಮ ತಂದೆಗೆ ನಡೆದೆಲ್ಲ ವಿಷಯ ಹೇಳು.

ಹೇಳೋ ಕಲ್ಲುಮೂರ್ತಿಯಾದ ಈಶ್ವರನೇ. ಸತ್ಯಾಸತ್ಯ ನೋಡುವೆ ಬೇಗನೇ. ಇಂಥ ನೀಚಳಿಗೆ ದರ್ಶನ ಕೊಟ್ಟು ನಿನ್ನ ಪಾಪ ತೊಳೆದು ಕೊಳ್ಳಯ್ಯಾ. ಹೂಂ. ನಿನ್ನ ಆ ದೇವನೆಲ್ಲಿ ?

ದೇವಾ ಸಮಯದಲ್ಲಿ ನನಗೊಬ್ಬಳಿಗೆ ಬಯ್ಯುವನು. ಅಲ್ಲದೆ ನಿನಗೂ ಸಹ ನನ್ನ ಈ ತಂದೆಯು ಬಯ್ಯುತ್ತಿರುವನು ನೋಡು. ಎಲ್ಲ ವಿಚಾರ ವನ್ನು ವಿವರಿಸಿ ಹೇಳು ಎಂದಳು.

ಅತ್ತ ತಂದೆಯು ತೋರಿಸು ಎಂದು ಒತ್ತಾಯಪಡಿಸುವದಲ್ಲದೆ ಬಯ್ಯುವನು. ಇತ್ತ ದೇವರ ದರ್ಶನವಿಲ್ಲದೆ ಅಬಲೆಯಾದ ಅವಳು ದೇವಾ ನೀ ದರ್ಶನ ಕೊಡದಿದ್ದರೆ ನಿನ್ನಡಿಯೇ ನನಗಾಧಾರ ಎಂದವಳೇ ಈಶ ಮೂರ್ತಿಗೆ ಹಣೆಯನ್ನು ಕುಕ್ಕತೊಡಗಿದಳು. ದೇವನು ಅಂಥ ಕರುಣಾ ಕರ ಪ್ರಸಂಗ ತಡೆಯದೇ ಭಕ್ತಳಿಗೆ ಮಾರ್ಗ ತೋರಿಸಲು ಒಮ್ಮೆಲೇ ಪ್ರತ್ಯಕ್ಷವಾಗಿ ಅವಳನ್ನು ಎತ್ತಿಹಿಡಿದು, ತಾಯಿ ನಿನ್ನ ಭಕ್ತಿಯು ಅಚಲ ವಾದುದು. ನೀನು ನಿಜವಾಗಿಯೂ ಕಲಿಯುಗದ ಪಾರ್ವತಿದೇವಿ. ನೀನು ಸಾಮಾನ್ಯಳಲ್ಲ ಎಂದವನೇ ಅವಳನ್ನು ನುಂಗಿಬಿಟ್ಟ. ಅವಳ ತಂದೆಯು ಬಹುಪರಿಯಿಂದ ಬೇಡಿಕೊಂಡಿದ್ದರಿಂದ ಕಡೆಗೆ ದೇವನು ಅವಳ ಕೂದಲು ಗಳು ಎಲ್ಲವೂ ಹೊರಗೆ ಕಾಣುವತನಕ ಬಿಟ್ಟು ಇನ್ನುಳಿದ ಎಲ್ಲ ಭಾಗ ವನ್ನು ನುಂಗಿಬಿಟ್ಟ. ಮತ್ತು ಅವಳ ತಂದೆಗೆ ದೇವನು ಮೋಕ್ಷಪದವಿ ಯನ್ನು ಕೊಟ್ಟನು. ನೋಡಿವಿರಾ ಭಕ್ತಿಯ ಭಾವವನ್ನು. ಶುದ್ಧಭಕ್ತಿಯು ಕೊನೆಗಾಣಿಸಿನದೇ ಎಂದು ಹೇಳಲು ಎಲ್ಲರಿಗೂ ಆನಂದವೆನಿಸುವದರಲ್ಲಿ ಸಂಶಯವಿಲ್ಲ. ಕೋಳೂರದಲ್ಲಿ ಇಂದಿಗೂ ಸಹ ಈಶ್ವರದೇವರ ಬಾಯಿ ಯಲ್ಲಿ ಕೊಡಗೂಸಿನ ಕೇಶಗಳು ಕಾಣುವದನ್ನು ನೋಡಬಹುದು.

---

# ಸಕಲಾಗಮ ಶಿಖಾಮಣಿ ವಚನ.

೧. ಶ್ರೀಮನ್ನಿರಾಳ ನಿರಂಜನ ನಿರಾಮಯ ನಿರಾಮಯಾತೀತ ಪರಮ ಪರಮಾನಂದ ಪರಮಾತ್ಮ ಪರಮೇಶ ಪರಾತ್ಪರ ಬ್ರಹ್ಮ ಪರಮ ತೇಜೋಮಯ ಅಗಣಿತ ಅಗೋಚರ ಅಪ್ರಮೇಯ ಅಖಂಡ ಪರಿಪೂರ್ಣ ಚೈತನ್ಯನಪ್ಪ ಸಕಳ ನಿಃಕಳಾತೀತನಾಗಿಹ ಅಖಂಡ ಜ್ಯೋತಿರ್ಮಯ ಲಿಂಗ ತಾನೇ ತನ್ನ ಲೀಲಾವಿನೋದಕ್ಕೆ ಅಪ್ರಮಾಣ ಕೂಡಲಸಂಗಯ್ಯನಾಗಿ ಬಿಜಯಂಗೆಯ್ದು ಅಪ್ರಮಾಣ ದೇವರ ಅಂತರಂಗ ಬಹಿರಂಗ ಸರ್ವಾಂಗವೆಲ್ಲನಿಂಬುಗೊಂಡು ಸ್ಥೂಲ ಸೂಕ್ಷ್ಮ ಕಾರಣ ನಡೆನುಡಿ ಚೈತನ್ಯವೆಲ್ಲ ತಾನೆ ಯಂತ್ರವಾಹಕನಾಗಿ ಆಡಿಸುತ್ತಿರ್ದನು ನೋಡಾ, ನಮ್ಮ ಅಪ್ರಮಾಣ ಕೂಡಲಸಂಗಮದೇವಾ.

೨. ಪರಾಪರವಾಗಿಹ ಪರಬ್ರಹ್ಮ ಲೋಕಾದಿ ಲೋಕಂಗಳನು ಸೃಜಿಸಬೇಕೆಂದು, ನೆನಹು ಮಾತ್ರದಲ್ಲಿಯೆ ಆ ಪರಾಪರವಾಗಿಹ ಪರಬ್ರಹ್ಮದಲ್ಲಿ ಪರ ಉತ್ಪತ್ತ್ಯವಾಯಿತ್ತು. ಆ ಪರದಲ್ಲಿ ಶಿವನುತ್ಪತ್ತ್ಯನಾದನು. ಆ ಶಿವನಲ್ಲಿ ಶಕ್ತಿ ಉತ್ಪತ್ಯವಾದಳು. ಆ ಶಕ್ತಿಯಲ್ಲಿ ಬಿಂದು ಉತ್ಪತ್ಯವಾಯಿತ್ತು. ಆ ಬಿಂದುವಿನಲ್ಲಿ ನಾದ ಉತ್ಪತ್ಯವಾಯಿತ್ತು. ಆ ನಾದದಲ್ಲಿ ಸದಾಶಿವನುತ್ಪತ್ಯನಾದನು. ಆ ಸದಾಶಿವನ ಗೋಪ್ಯ ವಕ್ತ್ರದಲ್ಲಿ ಆತ್ಮನುತ್ಪತ್ಯನಾದನು. ಆ ಸದಾಶಿವನ ಈಶಾನ್ಯ ವಕ್ತ್ರದಲ್ಲಿ ಆಕಾಶ ಉತ್ಪತ್ಯವಾಯಿತ್ತು. ಆ ಸದಾಶಿವನ ತತ್ಪುರುಷವಕ್ತ್ರದಲ್ಲಿ ವಾಯು ಉತ್ಪತ್ಯವಾಯಿತ್ತು. ಆ ಸದಾಶಿವನ ಅಘೋರವಕ್ತ್ರದಲ್ಲಿ ಅಗ್ನಿ ಉತ್ಪತ್ಯವಾಯಿತ್ತು. ಆ ಸದಾಶಿವನ ವಾಮದೇವ ವಕ್ತ್ರದಲ್ಲಿ ಅಪ್ಪು ಉತ್ಪತ್ಯವಾಯಿತ್ತು. ಆ ಸದಾಶಿವನ ಸದ್ಯೋಜಾತ ವಕ್ತ್ರದಲ್ಲಿ ಪೃಥ್ವಿ ಉತ್ಪತ್ಯವಾಯಿತ್ತು. ಆ ಸದಾಶಿವನ ಹೃದಯದಲ್ಲಿ ಚಂದ್ರ ಉತ್ಪತ್ಯವಾಯಿತ್ತು. ಆ ಸದಾಶಿವನ ಚಕ್ಷುವಿನಲ್ಲಿ ಸೂರ್ಯ ಉತ್ಪತ್ಯವಾಯಿತ್ತು. ಆ ಸದಾಶಿವನು ಆಕಾಶಕ್ಕೆ ಅಧಿದೇವತೆಯಾಗಿಹನು. ಆ ಸದಾಶಿವನಲ್ಲಿ ಮಹೇಶ್ವರನುತ್ಪತ್ಯನಾಗಿ ವಾಯುವಿಗೆ ಅಧಿದೇವತೆಯಾಗಿಹನು. ಆ ಮಹೇಶ್ವರನಲ್ಲಿ ರುದ್ರನುತ್ಪತ್ಯನಾಗಿ, ಅಗ್ನಿಗೆ ಅಧಿದೇವತೆಯಾಗಿಹನು. ಆ ರುದ್ರನಲ್ಲಿ ವಿಷ್ಣು ಉತ್ಪತ್ಯ

ನಾಗಿ ಅಪ್ಪುವಿಗೆ ಅಧಿದೇವತೆಯಾಗಿಹನು. ಆ ವಿಷ್ಣುವಿನಲ್ಲಿ ಬ್ರಹ್ಮನುತ್ಪತ್ಯನಾಗಿ, ಪೃಥ್ವಿಗೆ ಅಧಿದೇವತೆಯಾಗಿಹನು. ಆ ಬ್ರಹ್ಮನಲ್ಲಿ ಸರ್ವ ಜೀವಂಗಳುತ್ಪತ್ಯವಾಯಿತ್ತು ನೋಡಾ, ಅಪ್ರಮಾಣ ಕೂಡಲಸಂಗಮ ದೇವಾ.

೩. ಇನ್ನು ಪಿಂಡದುತ್ಪತ್ತಿ ಅದೆಂತೆಂದಡೆ:- ಆ ಪೃಥ್ವಿಯಲ್ಲಿ ಅನ್ನ ಉತ್ಪತ್ಯವಾಯಿತ್ತು. ಆ ಅನ್ನದಲ್ಲಿ ರಸ ಉತ್ಪತ್ಯವಾಯಿತ್ತು. ಆ ರಸದಲ್ಲಿ ರುಧಿರ ಉತ್ಪತ್ಯವಾಯಿತ್ತು. ಆ ರುಧಿರದಲ್ಲಿ ಮಾಂಸ ಉತ್ಪತ್ಯವಾಯಿತ್ತು. ಆ ಮಾಂಸದಲ್ಲಿ ಮೇಧಸ್ಸು ಉತ್ಪತ್ಯವಾಯಿತ್ತು. ಆ ಮೇಧಸ್ಸಿನಲ್ಲಿ ಅಸ್ಥಿ ಉತ್ಪತ್ಯವಾಯಿತ್ತು. ಆ ಅಸ್ಥಿಯಲ್ಲಿ ಮಜ್ಜ ಉತ್ಪತ್ಯವಾಯಿತು. ಆ ಮಜ್ಜೆಯಲ್ಲಿ ಶುಕ್ಲ ಉತ್ಪತ್ಯವಾಯಿತ್ತು ನೋಡಾ. ಅಪ್ರಮಾಣ ಕೂಡಲಸಂಗಮ ದೇವ.

೪. ಇನ್ನು ಸ್ತ್ರೀಯರಿಂದ ಜನನವಾಗುವ ಶಿಶುಗಳ ಭೇದಮಂ ಪೇಳ್ವೆನದೆಂತೆಂದಡೆ, ಸ್ತ್ರೀಗೆ ರಜಸ್ವವೆಯಾದ ತೃತೀಯ ದಿನಕ್ಕೆ ಗರ್ಭವಾಗಿ, ಹುಟ್ಟಿದ ಮಗನು ಕಳ್ಳನಹನು. ಚತುರ್ದಿನಕ್ಕೆ ಪಾಪಿಯಹನು, ಪಂಚಮ ದಿನಕ್ಕೆ ಬುದ್ಧಿವಂತನಹನು. ಷಷ್ಟಮದಿನಕ್ಕೆ ವ್ರತಗೇಡಿಯಹನು. ಸಪ್ತಮ ದಿನಕ್ಕೆ ದಯಾಪರನಹನು, ಅಷ್ಟಮ ದಿನಕ್ಕೆ ದರಿದ್ರನಹನು, ನವಮ ದಿನಕ್ಕೆ ಧನಿಕನಹನು, ದಶಮ ದಿನಕ್ಕೆ ಕಾಮಿಯಹನು, ಏಕಾದಶ ದಿನಕ್ಕೆ ವ್ಯಾಧಿ ಪೀಡಿತನಹನು, ದ್ವಾದಶ ದಿನಕ್ಕೆ ಪಂಡಿತನಹನು, ತ್ರಯೋದಶ ದಿನಕ್ಕೆ ಅವಿವೇಕಿಯಹನು, ಚತುರ್ದಶ ದಿನಕ್ಕೆ ಭೋಗಿಯಹನು, ಪಂಚ ದಶದಿನಕ್ಕೆ ರಾಜನಹನು, ಷೋಡಶ ದಿನಕ್ಕೆ ಶಿವಯೋಗಿಯಹನು ನೋಡಾ, ಅಪ್ರಮಾಣ ಕೂಡಲಸಂಗಮದೇವ.

೫. ಇನ್ನು ಸ್ತ್ರೀಪುರುಷರ ಕೂಟದ ಸ್ವರಭೇದವದೆಂತೆಂದಡೆ, ಸ್ತ್ರೀ ಪುರುಷರಿಬ್ಬರಿಗೆ ಅಪಾನವಾಯು ಇದಿರಾದರೆ ಮಕ್ಕಳಿಬ್ಬರು ಪುಟ್ಟುವರು. ಪುರುಷಂಗೆ ಶಶಿ, ಸ್ತ್ರೀಗೆ ರವಿಸ್ವರವಾದರೆ ಸ್ತ್ರೀ ಪುಟ್ಟುವಳು. ಸ್ತ್ರೀಪುರುಷರಿಬ್ಬರಿಗೆಯೂ ಸ್ವರಸಂಚಲವಿಲ್ಲದಿದ್ದರೆ ಗರ್ಭವುಂಟು. ಸ್ತ್ರೀಪುರುಷರಿಬ್ಬರಿಗೆಯೂ ಸ್ವರಸಂಚಲವಾದರೆ ಗರ್ಭವಿಲ್ಲ. ಪುರುಷರಿಗೆ ಅಗ್ನಿಸ್ವರ ವಿಶೇಷವಾದರೆ ಬಂಜೆಯಹಳು ನೋಡಾ, ಅಪ್ರಮಾಣ ಕೂಡಲಸಂಗಮದೇವ.

೬. ಇನ್ನು ಕಾಲ ಭೇದಂಗಳು ಅದೆಂತೆಂದಡೆ:– ಪ್ರಥಮ ಕಾಲದಲ್ಲಿ ಪುಟ್ಟಿದ ಮಗ ಕೋಪಿಯುಹನು, ದ್ವಿತೀಯ ಕಾಲದಲ್ಲಿ ಪುಟ್ಟಿದ ಮಗ ಪಾಪಕರ್ಮ ಮಿಶ್ರವಾಗಿಹನು, ತೃತೀಯ ಕಾಲದಲ್ಲಿ ಪುಟ್ಟಿದ ಮಗನು ಪಾಪಿಯುಹನು, ಅಸ್ತಮಯವಾದ ಆರು ಗಳಿಗೆಗೆ ಪುಟ್ಟಿದ ಮಗ ಜ್ಞಾನಿಯುಹನು, ಮಧ್ಯರಾತ್ರಿಯಲ್ಲಿ ಪುಟ್ಟಿದ ಮಗ ಶಾಂತಿದಾಂತಿ ಸಮತೆಯುಳ್ಳ ಪುರುಷನಹನು, ಬೆಳಗಾಗುವ ಜಾವದಲ್ಲಿ ಪುಟ್ಟಿದ ಮಗ ಪರಮ ಶಿವಯೋಗಿಯಹನು ನೋಡಾ, ಅಪ್ರಮಾಣ ಕೂಡಲಸಂಗಮದೇವ.

೭. ಇನ್ನು ವರ್ಣಭೇದವದೆಂತೆಂದಡೆ:–ಸ್ತ್ರೀಪುರುಷರಿಬ್ಬರ ಸಂಯೋಗ ಕಾಲದಲ್ಲಿ ಪೃಥ್ವಿ ಸ್ವರವಾದರೆ ಹುಟ್ಟಿದ ಮಗ ಪೀತವರ್ಣನಹನು. ಅಪ್ಪು ಸ್ವರವಾದರೆ ಶ್ವೇತವರ್ಣನಹನು. ಅಗ್ನಿ ಸ್ವರವಾದರೆ ರಕ್ತವರ್ಣನಹನು. ವಾಯು ಸ್ವರವಾದರೆ ಕೃಷ್ಣವರ್ಣನಹನು. ಆಕಾಶ ಸ್ವರವಾದರೆ ಧೂಮ್ರವರ್ಣನಹನು ನೋಡಾ, ಅಪ್ರಮಾಣ ಕೂಡಲಸಂಗಮದೇವ.

೮. ಇನ್ನು ಆಯುಷ್ಯಂಗಳ ಭೇದವದೆಂತೆಂದಡೆ:– ಸ್ತ್ರೀಪುರುಷರಿಬ್ಬರಿಗೆ ಸ್ವರ ಐದು ಗಳಿಗೆ ನಡೆದರೆ ಆಯುಷ್ಯ ನೂರು ವರುಷ, ನಾಲ್ಕುಗಳಿಗೆ ನಡೆದರೆ ಆಯುಷ್ಯ ಎಂಭತ್ತು ವರುಷ, ಮೂರು ಗಳಿಗೆ ನಡೆದರೆ ಆಯುಷ್ಯ ಅರುವತ್ತು ವರುಷ, ಎರಡು ಗಳಿಗೆ ನಡೆದರೆ ಆಯುಷ್ಯ ನಾಲ್ವತ್ತು ವರುಷ, ಒಂದು ಗಳಿಗೆ ನಡೆದರೆ ಆಯುಷ್ಯ ಇಪ್ಪತ್ತು ವರುಷ, ಅಂಗಳಿಗೆ ನಡೆದರೆ ಆಯುಷ್ಯ ಹತ್ತು ವರುಷ, ಕಾಲುಗಳಿಗೆ ನಡೆದರೆ ಆಯುಷ್ಯ ಐದು ವರುಷ, ಇಂತೀ ಕ್ರಮದಿಂದ ನೋಡಿಕೊಂಬುದು ಅಪ್ರಮಾಣ ಕೂಡಲಸಂಗಮದೇವ.

೯. ಇನ್ನು ಆ ಶುಕ್ಲ ಸ್ತ್ರೀಪುರುಷರ ಸಂಯೋಗದಿಂದ ಮಾರುತ ನೂಂಕಲು ಹುಲ್ಲ ಮೇಲಣ ಹನಿಯ ಅರ್ಧ ಮಾತ್ರ ಆ ಸ್ತ್ರೀಯ ಶೋಣಿತದಲ್ಲಿ ಬಿದ್ದು ಆ ಶುಕ್ಲಶೋಣಿತ ಬಲಿದು, ಜೀವನಾಗಿ ಭೂತಂಗಳ ಕೂಡಿಕೊಂಡು ಕರ್ಮವಶದಿಂದ ಪಿಂಡವಹುದು. ಇದಕ್ಕೆ ಶ್ರುತಿ:— "ಆಯುಃ ಕರ್ಮಂಚ ವಿತ್ತಂಚ । ವಿದ್ಯಾನಿಧನ ಮೇವಚ । ಪಂಚೈತಾನಿ ಮಿಲಿತಾನಿ । ಗರ್ಭಸ್ಥಸ್ಯೈರವದೇಹಿನಃ" ಇಂತೆಂದುದಾಗಿ, ಈ ಪಂಚಾಕ್ಷರವ ನಿಟಿಲತಟದಲ್ಲಿ ಬರೆವನು. ಆ ಶುಕ್ಲಶೋಣಿತಂಗಳು ಕೂಡಿ ಬೀಜವಹುದು, ಪುರುಷವೀರ್ಯ ಘನವಾದರೆ ಗಂಡು ಮಗ ಹುಟ್ಟುವನು. ಸ್ತ್ರೀವೀರ್ಯ ಘನವಾದರೆ ಹೆಣ್ಣು

ಮಗಳು ಹುಟ್ಟುವಳು. ಸಮವಾದರೆ ನಪುಂಸಕ ಹುಟ್ಟುವದು. ಮಾತಾ ಪಿತರ ಮಲತ್ರಯದಲ್ಲಿ ಪಿಂಡರೂಪವಹುದು ನೋಡಾ, ಅಪ್ರಮಾಣ ಕೂಡಲ ಸಂಗಮದೇವ.

೧೦. ಸ್ತ್ರೀಗೆ ಗರ್ಭವಾದ ಮೂರು ದಿನಕ್ಕೆ ಹಾಲಿಗೆ ಹೆಪ್ಪುಕೊಟ್ಟ ಹಾಗೆ ಕದಡಿಕೊಂಡಿಹುದು. ಐದುದಿನಕ್ಕೆ ಸುರಹೊನ್ನೆಯ ಮೊಗ್ಗೆಯ ಪ್ರಮಾಣ ಕೆಂಪಾಗಿಹುದು ನೋದಾ, ಅಪ್ರಮಾಣ ಕೂಡಲಸಂಗಮದೇವ.

೧೧. ಹದಿನೈದುದಿನಕ್ಕೆ ಬುದ್ಬುದಾಕಾರವಾಗಿಹುದು. ಏಕಮಾಸಕ್ಕೆ ಕುಕ್ಕುಟಾಂಡ ಸ್ವರೂಪವಾಗಿ ಶಿರ ಉತ್ಪತ್ಯವಹುದು. ದ್ವಿತೀಯ ಮಾಸಕ್ಕೆ ಬಾಹುಗಳು ಹುಟ್ಟುವವು. ತೃತೀಯ ಮಾಸಕ್ಕೆ ಉದರ ಪುಟ್ಟುವದು. ಚತುರ್ಥ ಮಾಸಕ್ಕೆ ಸರ್ವಾಂಗ ಪುಟ್ಟುವದು ನೋಡಾ, ಅಪ್ರಮಾಣ ಕೂಡಲ ಸಂಗಮದೇವ.

೧೨. ಪಂಚಮಾಸಕ್ಕೆ ರೋಮಂಗಳು ಪುಟ್ಟುವವು ಷಣ್ಮಾಸಕೆಕ ಅಸ್ಥಿ ಪುಟ್ಟುವದು. ಸಪ್ತಮಾಸಕ್ಕೆ ಜೀವಕಳೆ ಸಂಪೂರ್ಣವಹುದು. ಅಷ್ಟಮಾ ಸಕ್ಕೆ ಪೂರ್ವಜನ್ಮವನರಿವನು. ।। ಶ್ರುತಿ ।। ಮೃತಸ್ಯ ಹಂ। ಪುನರ್ಜಾತೋ ಜಾತಸ್ಯ ಹಂ ಪುನಾಮ್ಮೃತಃ । ನಾನಾಯೋನಿ ಸಹಸ್ರಾಣಿ । ಕೃತ್ವಾಚ್ಚೈವಂತ್ರ ಮಾಯಯೊ । ಎಂದುದಾಗಿ ಅಪ್ರಮಾಣ ಕೂಡಲಸಂಗಮದೇವ.

೧೩. ಈಶ್ವರನು ಮಾಯಾವಶವ ತೋರಿ, ಬೋಧಿಸಲೊಡನೆ ನವಮಾಸತುಂಬಿ ಎಪ್ಪತ್ತೆರಡು ಸಾವಿರದರುನೂರು ಶ್ವಾಸಂಗಳು ಮೂರು ಮಂಡಲಗಳು ಆರು ದ್ವಾರಗಳು ಮೂವತ್ತೆರಡು ಲಕ್ಷಣಂಗಳು ಐವತ್ತೆರಡಕ್ಷ ರಂಗಳು ಅರುವತ್ತುನಾಲ್ಕು ಕಲೆ ಜ್ಞಾನಂಗಳು ತೊಂಭತ್ತಾರು ತತ್ವಂಗಳು ಕೂಡಿ ದೇಹವಾಗಿ ಪ್ರಸೂತಿಕಾಲ ವಾಯುವಶದಿಂದ ಜನಿಸಿಯು ಜಠರಮಂ ಪೊರಮಡವನು. ಪೊರಮಡುವದರೊಳಗಾಗಿ ಆದಿಮಾಯೆಯೆಂಬ ಗಾಳಿ ಬೀಸಿ ಒಡಲು ಮಲಿನವಾಗಿ ನೆನೆದುದೆಲ್ಲವ ಮರೆದುದು. ಮುನ್ನಮಾಡಿದ ಕರ್ಮಫಲದಿಂದ ಇಂತಾಯಿತ್ತು ನೋಡಾ ಅಪ್ರಮಾಣ ಕೂಡಲಸಂಗಮ ದೇವಾ.

೧೪. ಸುಕರ್ಮದಿಂದ ದೇವತಾಯೋನಿಯಲ್ಲಿ ಜನಿಸುವನು. ದುಷ್ಕರ್ಮ ದಿಂದ ಎಂಬತ್ತು ನಾಲ್ಕುಲಕ್ಷ ಜೀವರಾಶಿಗಳ ಕ್ರೂರಯೋನಿಗಳಲ್ಲಿ ಜನಿಸು

ವನು. ಇಂತೀ ಸುಕರ್ಮ ದುಷ್ಕರ್ಮ ಎರಡರ ಮಿಶ್ರದಿಂದ ಮನುಜಯೋನಿಯಲ್ಲಿ ಜನಿಸುವನು. ಇಂತಪ್ಪ ಸುಕರ್ಮ ದುಷ್ಕರ್ಮ ಫಲಂಗಳನು ಪೂರ್ವಕರ್ಮವಶದಿಂದುಂಬನು ನೋಡಾ, ಅಪ್ರಮಾಣ ಕೂಡಲಸಂಗಮದೇವಾ.

೧೫. ಸ್ಥೂಲಕಾಯ ಶರೀರ ಶುಕ್ಲ ಶೋಣಿತದಿಂದ ಎರಡು ಕೈ, ಎರಡು ಕಾಲು, ಬ್ರಹ್ಮಗ್ರಂಥಿಯೇಳು, ವಿಷ್ಣುಗ್ರಂಥಿಯೇಳು, ರುದ್ರಗ್ರಂಥಿಯೇಳು, ಈ ಮೂರೇಳಿಪ್ಪತ್ತೊಂದು ಗ್ರಂಥಿಯುಳ್ಳ ಕಂಕಾಳದಂಡವು ಆ ಕಂಕಾಳದಂಡದ ದ್ವಾರದಲ್ಲಿ ಷೋಡಶಕಲೆಯುಳ್ಳ ವೀಣಾದಂಡವು, ಮೂರು ಗೇಣು ಎಲವು, ಮೂರು ಗೇಣು ಮಾಂಸವು, ಮೂವತ್ತೆರಡು ಪಕ್ಕದೆಲುವು, ನಾಲ್ಕು ಗೇಣು ಗಾತ್ರವು, ಎಂಟುಗೇಣುದ್ದವು, ಹದಿನಾಲ್ಕು ಬಾಗಿಲುಳ್ಳದಾಗಿ ರಸ, ರುಧಿರ, ಮಾಂಸ, ಮೇಧಸ್ಸು, ಅಸ್ಥಿ, ಮಜ್ಜಾ, ಶುಕ್ಲ ಎಂಬ ಸಪ್ತಧಾತುಗಳಿಂದ ದೇಹವಾಗಿ ಬೆಳೆಯಿತ್ತು ನೋಡಾ, ಅಪ್ರಮಾಣ ಕೂಡಲಸಂಗಮದೇವಾ.

೧೬. ದೇಹವಾಗಿ ಬೆಳೆದು, ಅಧ್ಯಾತ್ಮಿಕ, ಆಧಿದೈವಿಕ, ಆಧಿಭೌತಿಕ ಎಂಬ ತಾಪತ್ರಯಂಗಳಿಂದ ನೊಂದು ಬೆಂದು ಪುಣ್ಯಪಾಪವಶದಿಂದ ಜೀವನಾಗಿ, ಅಂಡಜ ಸ್ವೇದಜ ಉದ್ಭಿಜ ಜರಾಯುಜ ಎಂಬ ಚೌರ್ಯಾಂಶಿ ಲಕ್ಷ ಜೀವಜಂತುಗಳ ಯೋನಿಯಲ್ಲಿ ಬಂದು ಹುಟ್ಟದ ಯೋನಿ ಇಲ್ಲ ಮೆಟ್ಟದ ಭೂಮಿ ಇಲ್ಲ, ಉಣ್ಣದ ಆಹಾರವಿಲ್ಲ, ಕಾಣದ ಸುಖದುಃಖವಿಲ್ಲ. ||ಶ್ರುತಿ|| ನಾನಾಯೋನಿ ಸಹಸ್ರಾಣಿ! ಗತ್ವಾ ಚೈವಂ ತು ಮಾಯಯೊ ಆಹಾರಂ ವಿವಿಧಂಭುಕ್ತ್ವಾ । ಪೀತ್ವಾಚ ವಿವಿಧ ಸ್ತನಾನ್ || ಎಂದುದಾಗಿ ಅಪ್ರಮಾಣ ಕೂಡಲಸಂಗಮದೇವ.

೧೭. ಇಂತಪ್ಪ ನಾನಾ ಯೋನಿ ಸುಖದುಃಖಗಳನುಂಡು, ಅಂತ್ಯಕ್ಕೆ ನರನಾಗಿ ಬಂದು, ಪೂರ್ವ ಜನ್ಮ ಸುಕೃತಫಲದಿಂದ ಮಹಾಪುರುಷರಂ ಸಾರ್ದು, ನರಗೋಚರಂ ಮಾಡೆ, ಸ್ವರ್ಗಾದಿ ಭೋಗಂಗಳನು ಮೇಲಣ ಮುಕ್ತಿಯ ಪದವನು, ಪಡೆವ ತೆರನಾವುದೆಂದು ವಿಚಾರಿಸಿ, ಸಕಲ ವೇದಾಗಮ ಶಾಸ್ತ್ರ ಪುರಾಣಂಗಳ ಹೇಳಿದವರಿಂದಲೂ ಹೇಳಿದುದ ಕೇಳಿದವರಿಂದಲೂ ಕೇಳಿ ಅರಿದು, ಮತ್ತಂ ತೊಂಬತ್ತಾರು ತತ್ವಂಗಳನು ಕೇಳಿ ಆ ತೊಂಬತ್ತಾರು ತತ್ವಂಗಳಲ್ಲಿ ಮೂವತ್ತಾರು ತತ್ವದ ಭೇದವನು ತಿಳಿದು, ಎಪ್ಪತ್ತೆರಡು ಸಾವಿರ

ನಾಡಿಯೊಳು, ಮೂವತ್ತೆರಡು ಸಾವಿರ ನಾಡಿಯ ಭೇದವನು, ಮೂವತ್ತೆರಡು ಸಾವಿರ ನಾಡಿಯೊಳು ಚತುರ್ದಶ ನಾಡಿಯ ಭೇದವನು, ಚತುರ್ದಶ ನಾಡಿಯೊಳು ತ್ರಿನಾಡಿಯ ಭೇದವನು, ಚತುರ್ದಶ ವಾಯುವನು ಚತುರ್ದಶ ವಾಯುವಿನೊಳು, ಪಂಚವಾಯುವಿನ ಭೇದವನ , ಪಂಚ ವಾಯುವಿನೊಳು, ದ್ವಿವಾಯುವಿನ ಭೇದವನು, ಷಡುಚಕ್ರವನು, ಅಂತಃಕರಣ ಚತುಷ್ಟಯವನು, ಮಂಡಲತ್ರಯದ ಭೇದವನು ಕೇಳಿ ಅರಿದ ನೋಡಾ, ಅಪ್ರಮಾಣ ಕೂಡಲ ಸಂಗಮದೇವಾ.

೧೮. ಇನ್ನು ನಾಡಿ ಧಾರಣೆ ಅದೆಂತೆಂದಡೆ:- ಎಪ್ಪತ್ತೆರಡು ಸಾವಿರ ನಾಡಿಗಳೊಳು, ಮೂವತ್ತೆರಡು ನಾಡಿಯೆ ಮುಖ್ಯವಾಗಿಹವು. ಆ ಮೂವತ್ತೆರಡು ನಾಡಿಯೊಳು, ಚತುರ್ದಶ ನಾಡಿಯೆ ಪ್ರಧಾನ ನಾಡಿಗಳಿಹವು. ಆ ಚತುರ್ದಶ ನಾಡಿಗಳೊಳು, ಮೂರು ನಾಡಿಯೆ ಮುಖ್ಯ. ಆ ಮೂರು ನಾಡಿಗಳೊಳು ಒಂದು ನಾಡಿಯೆ ಮುಖ್ಯ ಆ ಒಂದು ನಾಡಿಯನು ಯೋಗಿಗಳು ಬ್ರಹ್ಮನಾಡಿಯೆಂದು ಹೇಳುವರು ನೊಡಾ, ಅಪ್ರಮಾಣ ಕೂಡಲಸಂಗಮದೇವಾ.

೧೯. ಆ ಒಂದು ನಾಡಿಯೇ ಮೂಲಾಧಾರ ಮೊದಲಾಗಿ, ಬ್ರಹ್ಮರಂಧ್ರ ಕಡೆಯಾಗಿ ನೆಲವಿನ ಹಾಂಗೆ ಕೆಳಗು ಮೇಲು ಬಂಧಿಸಿಕೊಂಡಿಹುದು ನೋಡಾ, ಅಪ್ರಮಾಣ ಕೂಡಲಸಂಗಮದೇವಾ.

೨೦. ಕಾಲು, ಕೈ, ನಡವುಗಳೆಲ್ಲವನು ತಾವರೆ ನೂಲಿನಹಾಂಗೆ ಎಂಭತ್ತುನಾಲ್ಕು ಸಾವಿರ ಸಂಧಿಗಳ ಬಂಧಿಸಿಕೊಂಡಿಹುದು ನೋಡಾ, ಅಪ್ರಮಾಣ ಕೂಡಲಸಂಗಮದೇವಾ.

೨೧. ಸೂರ್ಯನ ಕಿರಣಂಗಳ ಹೇಗೆ ಸರ್ವಾಂಗವೆಲ್ಲವನು ಭೇದಿಸಿಕೊಂಡಿಹವು, ಹಾಗೆ ಆಧಾರ ಚಕ್ರಂಗಳಾರನು ಹಾಯ್ದು, ಬ್ರಹ್ಮರಂಧ್ರವ ಮುಟ್ಟಿ, ನಾದ ಬಿಂದುಗಳಿಗೆ ಆಶ್ರಯವಾಗಿಹುದು ನೋಡಾ, ಅಪ್ರಮಾಣ ಕೂಡಲಸಂಗಮದೇವಾ.

೨೨. ಅಗ್ನಿಮಂಡಲ, ಆದಿತ್ಯ ಮಂಡಲ, ಚಂದ್ರಮಂಡಲ ಎಂಬ ಮಂಡಲತ್ರಯಂಗಳ ಹಾಯ್ದು, ಬ್ರಹ್ಮಚಕ್ರ, ಶಿಖಾಚಕ್ರವ ಹಾಯ್ದು, ಆ ಪಶ್ಚಿಮ ಚಕ್ರವ ಮುಟ್ಟಿ, ಏಕನಾಡಿಯಾಗಿಹುದು ನೋಡಾ, ಅಪ್ರಮಾಣ ಕೂಡಲಸಂಗಮದೇವಾ.

ಸಂಪುಟ ೨೮  ಸಂಚಿಕೆ

# ಶಿವಾನುಭವ



.: ಸಂಪಾದಕರು :.

ಫ. ಗು. ಹಳಕಟ್ಟಿ,

ಬಿ. ಏ. ಎಲ್. ಎಲ್. ಬಿ.



ವಾ. ಚ. ೫-೧೨-೦] **ವಿಜಾಪೂರ** [ಅಕ್ಟೋಬರ ೧೯೫೪



# ವಿಷಯಾನುಕ್ರಮಣಿಕೆ.







# ಶಿವಾನುಭವ




| ವರ್ಷ ೨೮ | ಅಕ್ಟೋಬರ ೧೯[illegible] | ಸಂಚಿಕೆ ೧೦ |
|---|---|---|


## "ವೀರಶೈವ ಮತ್ತು ಷಟ್ಸ್ಥಲಬ್ರಹ್ಮಿಯ ವೈಶಿಷ್ಟ್ಯ"


( ಲೇಖಕ — ವಿದ್ವಾನ. ಕೆ. ಎಂ. ರಾಜಶೇಖರಯ್ಯನವರು,
ಸಂಸ್ಕೃತೋಪಾಧ್ಯಾಯರು. ಪ್ರೌಢಶಾಲಾ. ಚಿಕ್ಕಬಳ್ಳಾಪುರ)




೧ ಸಚ್ಚಿದಾನಂದ ಸ್ವರೂಪಾಯ ಸದಸದ್ವ್ಯಕ್ತಿ ಹೇತವೇ
ನಮಃಶಿವಾಯ ಸಾಂಬಾಯ ಸಗಣಾಯ ಸ್ವಯಂಭುವೇ
ಸಿ. ಶಿ. ರ. ೨ ರ.

೨ ಅವಾಚ್ಯಾತ್ಮ ಸ್ವರೂಪಾಯ ಶಿವಭಾವ ಪ್ರದಾಯಿನೇ
ನಮಃಸದ್ಗುರುನಾಥಾಯ ಷಟ್ಸ್ಥಲ ಬ್ರಹ್ಮಮೂರ್ತಯೇ
ಅನುಭವ ಸೂತ್ರ ೮.

೩ ಸದಾಶಿವ ಮುಖಾಶೇಷ ತತ್ವಮೌಕ್ತಿಕ ಶುಕ್ತಿಕಾಂ
ವಂದೇಮಾಹೇಶ್ವರೀಂ ಶಕ್ತಿಂ ಮಹಾಮಾಯಾದಿರೂಪಿಣೀಂ

ಪ್ರಥಮತಃ ಪ್ರಮಥವರ್ಯನು ಸರ್ವಜ್ಞ. ಶಿವ ರುದ್ರ ಮಹಾದೇವ ಮುಂತಾದ ಶುಭನಾಮ ಧೇಯಸಹಿತವಾದ ಮಂಗಳಮೂರ್ತಿಯು. ಅದರಲ್ಲಿ ಸೃಷ್ಟಿಗಿಂತಲೂ ಮೊದಲು ಚೇತನಾಚೇತನಾತ್ಮಕವಾದ ಜಗತ್ತು ಕರ್ಮಜ್ಞಾನೇಂದ್ರಿಯಗಳಿಗೆ ಅಗೋಚರವಾಗಿ ಲೀನವಾಗಿತ್ತು. ಆ ಪ್ರಪಂಚವನ್ನು ಪರಮಾತ್ಮನು ಪ್ರಕಾಶಿಸಲ್ಪಡುವುದು ಸೂಕ್ತವೆಂದು ಆಲೋಚಿಸಿದನು. ಅಂತೆಯೇ ಅಪ್ರಾಕೃತ ಸ್ವರೂಪವನ್ನೈದಿದನು. ಸೃಷ್ಟಿಸಮ

ಯಯಲ್ಲಿ ಅವಿನಾಭಾವದಿಂದಿದ್ದ ಶಕ್ತಿಯು ಆತನ ಸ್ವರೂಪವನ್ನೇ ಧರಿಸಿತ್ತು. ಮುಂದೆ ಜಗತ್ತನ್ನು ಸೃಷ್ಟಿಸುವ ಅಭಿಪ್ರಾಯದಿಂದ ಚತುರ್ಮುಖ ಬ್ರಹ್ಮನನ್ನು ಸೃಷ್ಟಿಸಿದನು. ಆತನಿಗೆ ಸೃಷ್ಟಿವಿಧಾನವನ್ನು ವಿವರಿಸಿದನು. ಆದರೂ ಮಾಯಾ ಪರಿವೃತನಾಗಿ ಸೃಷ್ಟಿಕಾರ್ಯವನ್ನರಿಯದೆ ಪುನ ಪರಮೇಶ್ವರನನ್ನು :—

ನಮಸ್ತೇ ದೇವದೇವೇಶ ನಮಸ್ತೇ ಕರುಣಾಕರ
ಅಸ್ಮದಾದಿ ಜಗಜ್ಜಾಲ ನಿರ್ಮಾಣ ವಿಧಿಸುಕ್ರಮ॥
ಉಪಾಯಂ ವದಮೇ ಶಂಭೋಜಗತ್ಸೃಷ್ಟೌ ಜಗತ್ಪತೇ
ಸರ್ವಜ್ಞಃ ಸರ್ವಶಕ್ತಿಸ್ತ್ವಂ ಸರ್ವ ಕರ್ತಾ ಸನಾತನಃ॥
ಇತಿಸಂಪ್ರಾರ್ಥಿತಃ ಶಂಭುರ್ಬ್ರಹ್ಮಣಾ ವಿಶ್ವನಾಯಕಃ।
ಉಪಾಯಮುವದತ್ತಸ್ಮೈ ಲೋಕ ಸೃಷ್ಟಿಪ್ರವರ್ತಕಂ॥

ಜಗತ್ಸೃಷ್ಟಿ ವಿಷಯವನ್ನು ಬೋಧಿಸಬೇಕೆಂದು ಪ್ರಾರ್ಥಿಸಲು ಬೋಧಿಸಿದರು. ಪುನಃ ಮತ್ತೊಮ್ಮೆ ಅಸಮರ್ಥನಾಗಿ ಪ್ರಾರ್ಥಿಸಿದನು. ಆಗ ಪರಮಾತ್ಮನೇ ಆತನಿಗೆ ಆ ಕಾರ್ಯದಲ್ಲಿ ಮಾರ್ಗದರ್ಶಕನಾದನು. ಫಲಿತಾಂಶವೇ ಈ ಪ್ರಪಂಚದ ಉತ್ಪತ್ತಿ. ಪ್ರಮಥರು ಅನಂತರ ಬ್ರಹ್ಮ ಈ ರೀತಿಯಾಗಿ ಸಕಲಜೀವ ರಾಶಿಗಳು "ಆತ್ಮನಃ ಆಕಾಶಃ ಸಂಭೂತಃ। ಆಕಾಶಾದ್ವಾಯುಃ। ವಾಯೋರಗ್ನಿಃ। ಅಗ್ನೇರಾಪಃ। ಅದ್ಭ್ಯಃ ಪೃಥಿವೀ। ಪೃಥಿವ್ಯಾ ಓಷಧಯಃ। ಓಷದೀಭ್ಯೋಽನ್ನಂ। ಅನ್ನಾತ್ಪುರುಷಃ। ಸ ವಾಏಷ ಪುರುಷೋ ಅನ್ನ ರಸಮಯಃ। ಅನ್ನಾದ್ವೈಪ್ರಜಾಃ ಪ್ರಜಾಯಂತೇ ಅನ್ನೇನೈವಜಾತಾನಿ ಜೀವಂತಿ॥ ತೈತ್ತಿರೀಯೋಪನಿಷತ್ ದ್ವಿತೀಯಪ್ರಶ್ನ

ಋಷಿವಾಣಿಯು ಸೃಷ್ಟಿ ಕ್ರಮವನ್ನೆ ವಿವರಿಸುತ್ತದೆ.

(೧) ಮಹಾಕರ್ತನು ತನ್ನಶಕ್ತಿಯ ವಿನೋದಕ್ಕೆ ಜಗವ ನಿರ್ಮಿಸಿದ. ಅನಂತ ಲೋಕಗಳನ್ನು ಚಂದ್ರ, ಸೂರ್ಯ, ನಕ್ಷತ್ರ, ಸಿಡಿಲು, ಮಿಂಚುಗಳನ್ನು, ಕಾಲಕರ್ಮ ಪ್ರಲಯಂಗಳನ್ನು, ಹೆಣ್ಣು, ಗಂಡು, ಜಾತಿ, ವಿಜಾತಿಗಳಿಂದ ನರ, ಸುರ, ತಿರ್ಯಗ್ಜಾತಿ ಸ್ಥಲಭೋಗ, ಆಯುಷ್ಯ ನಿದ್ರೆ' ಮೊದಲಾದ ಸಮಸ್ತ ಪ್ರಪಂಚಗಳನ್ನು ಎಂಭತ್ತು ನಾಲ್ಕುಲಕ್ಷ ಜೀವರಾಶಿಗಳನ್ನು ಹುಟ್ಟಿಸಿದ ತನ್ನವಿನೋದಕ್ಕೆ ಯಂತ್ರವಾಹಕನು ಮಾಡಿದ ಕಟ್ಟಣೆಯದಾರಿಗೂ ತಿಳಿಯಬಾರದು ನೋಡ. ಸರ್ವ ಆತ್ಮರು

ಮಲಪಾಶದಿಂದ ಬಂಧಿಸಿಕೊಂಬ ಪಶುಗಳಾದರು. ಈ ಪಶುಪತಿಯಾದ ನಮ್ಮ ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರನು.

(೨) ತನ್ನಲ್ಲಿ ಅನಂತಕೋಟಿ ಬ್ರಹ್ಮರುತ್ಪತ್ತಿ ಸ್ಥಿತಿ| ಲಯನೋಡ ತನ್ನಲ್ಲಿ ಅನಂತಕೋಟಿ ವಿಷ್ಣಾದಿಗಳುತ್ಪತ್ತಿ ಸ್ಥಿತಿಲಯ ನೋಡ. ತನ್ನಲ್ಲಿ ಅನಂತಕೋಟಿ ದೇವತೆಗಳ ಉತ್ಪತ್ತಿ ಸ್ಥಿತಿಲಯ ನೋಡ. ಅಖಂಡಿತ ತಾನೇ ಅಪ್ರಮೇಯ ಅಗಣಿತ ಅಗಮ್ಯ ಅಗೋಚರ ನೋಡ ಅಪ್ರಮಾಣ ಕೂಡಲಸಂಗಮದೇವ.

(೩) ಶರಧಿಯ ಮೇಲೆ ಧರೆ ಕರಗದಂತಿರಿಸಿದೆ. ಅಂಬರಕ್ಕೆ ಗದ್ದುಗೆ ಬೋದುಗೆ ಇಲ್ಲದಂತಿರಿಸಿದೆ. ಎಲೆ ಮೃಡನೆ ನೀನಲ್ಲದೆ ಉಳಿದ ದೈವಂಗಳಿಗಹುದೇ ರಾಮನಾಥ ?

ಸೃಷ್ಟಿಯನ್ನು ಏಕಾಂಶದಿಂದ ಸೃಜಿಸಿ ತಾನು ಮಾತ್ರ ಅಲಿಪ್ತನೂ ಅನಂತನೂ ಆದನು.

ಓಂ ಪೂರ್ಣಮದ: ಪೂರ್ಣಮಿದಂ
ಪೂರ್ಣಾತ್ಪೂರ್ಣ ಮುದಚ್ಯತೇ॥
ಪೂರ್ಣಸ್ಯ ಪೂರ್ಣಮಾದಾಯ
ಪೂರ್ಣಮೇವಾಶಿಷ್ಯತೇ|। ಶಾಂತಿಮಂತ್ರಃ

ಹೀಗೆ ಸರ್ವಶಕ್ತಿಯು ತನ್ನ ವಿನೋದಕ್ಕಾಗಿ ಪ್ರಪಂಚದನ್ನು ಸೃಷ್ಟಿಸಿತು. ಸೃಷ್ಟಿಯಲ್ಲಿ ಅನಂತಜೀವರಾಶಿಗಳು, ಇರುವೆ ಆನೆಗಳೇ ಚಿಕ್ಕ ದೊಡ್ಡ ಪ್ರಾಣಿಗಳು, ಅವುಗೆಳಲ್ಲಿ ಮನುಷ್ಯ ಜನ್ಮ ಶ್ರೇಷ್ಠವೆಂತಲೂ ಸರ್ವರಿಗೂ ತಿಳಿದುದೇ ಆಹಾರ ನಿದ್ರಾಭಯ ಮೈಥುನಂಚ ಸಾಮಾನ್ಯ ಮೇತತ್ಪಶುಭಿರ್ನರಾಣಾಂ ಧರ್ಮೋಹಿತೇಷಾಮಧಿಕೋ ವಿಶೇಷೋ ಧರ್ಮೇಣ ಹೀನಾ ಪಶುಭಿ: ಸಮಾನಾಃ

ಆಹಾರ, ನಿದ್ರೆ, ಭಯ, ಮೈಥುನ ಇತ್ಯಾದಿಗಳು ಪಶುಗಳಿಗೂ ಮನುಷ್ಯನಿಗೂ ಸಮ. ಆದರೆ ಧರ್ಮದಲ್ಲಿ ಮಾತ್ರ ಮನುಷ್ಯ ಮುಂದುವರಿದಿದ್ದಾನೆ.

ಯತೋ ಅಭ್ಯುದಯ ನಿಶ್ರೇಯದ: ಸಿದ್ಧಿ: ಸಧರ್ಮ:॥ ಇಹಪರಗಳಲ್ಲಿ ಏಳಿಗೆಯು ಮೋಕ್ಷವೂ ಲಭಿಸುವದೇ ಧರ್ಮದಿಂದ. ಪ್ರಾಣಿ ಮತ್ತು ಮನುಷ್ಯರ ವ್ಯವಹಾರದಲ್ಲಿ ವ್ಯತ್ಯಾಸ ವಿರುವುದು ಲೋಕಪ್ರಸಿದ್ಧವಾದುದು

ಯುಕ್ತಾಯುಕ್ತವಿವೇಚನಾಪರ ಮನುಷ್ಯ ತದ್ಭಿನ್ನವಾದುದೇ ಪ್ರಾಣಿಗಳ ವ್ಯವಹಾರ. ಆದುದರಿಂದ ಧರ್ಮ ಮನುಷ್ಯನಿಗೆ ಸದ್ಗತಿನೀಡುವುದು. ಸದ್ಗತಿಯೇ ಸ್ವರ್ಗ ಪ್ರಾಪ್ತಿಗೆ ನಿದಾನ ಕಾರಣ. ಹಾಗೆಯೇ ದಾನ ಉಪಕಾರ ನ್ಯಾಯ ಸದಾಚಾರ ಸಚ್ಛೀಲ ಮುಂತಾದ ಆಚರಣೆಯಿಂದ ಸ್ವರ್ಗವೂ ಅದರಿಂದ ಪುಣ್ಯವೂ ಅನ್ಯಥಾ ಪಾಪವೂ ತನ್ಮೂಲಕ ನರಕವೂ ಪ್ರಾಪ್ತವಾಗುವುದು. ಶ್ರುತಿ ಸಮ್ಮತ. ಹಾಗೆಯೇ ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ। ಹೇಗಾದರೂ ಆಗಲಿ, ಸ್ವರ್ಗವೇ ಪರಮ ಪದವೀ ಎಂಬುದು ಹಲವರ ಮತ. ಈ ವಿಷಯದಲ್ಲಿ ವೀರಶೈವರ ಅಭಿಪ್ರಾಯ. ಆ ಮತದ ವೈಶಿಷ್ಟ್ಯ. ಮತದ ಮುಖ್ಯ ತನ್ನ ವಿಶಾರದನಾದ ಷಟ್ಸ್ಥಲಬ್ರಹ್ಮಿಯ ವೈಶಿಷ್ಟ್ಯವೇನೆಂಬುದರನ್ನು ವಿಚಾರಮಾಡಲಾಗುವುದು.

## ವೀರಶೈವ

ವಿಶಬ್ದೇನೋಚ್ಯತೆ ವಿದ್ಯಾ ಶಿವಜೀವೈಕ್ಯಬೋಧಿನೀ ರಸ್ಯಾಂರಮಂತೆಯೇಶೈವಾ ವೀರಶೈವಾ ವೀರಶೈವಾಸ್ತುತೇಮತಾಃ:

"ವೀರಶೈವ" ಪದದ ರೂಪ ನಿಷ್ಪತ್ತಿ ವಿಶಿಷ್ಟವಾದುದು. ಅಷ್ಟೇ ತಾತ್ವಿಕವಾದುದು. "ವಿ" ಎಂದರೆ ಶಿವಜೀವರ ಸಾಮರಸ್ಯಬೋಧಕವಾದ ವಿದ್ಯೆ. "ರ" ಎಂದರೇ ಅವಿದ್ಯೆಯಲ್ಲಿ ರಮಿಸುವರು. ಆನಂದ ಪಡತಕ್ಕವರು. "ಶೈವಾ:" ಶಿವಸ್ಯ ಇಮೇ ಶೈವಾ: ತಸ್ಯೇದಮಿತ್ಯರ್ಣ ಸೂತ್ರ ಶಿವನ ಸಂಬಂಧಿಕರು. ಶಿವನೇ ಮೋಕ್ಷದಾಯಕನೆಂದು ನಂಬಿರತಕ್ಕವರು. ವಿ. ರ ಎಂಬಲ್ಲಿ ದೀಕ್ಷವು ಅನ್ಯೇಷಾಮಪಿ ದೃಶ್ಯತೆ ೬—೩—೧೩೭ ಎಂಬಪಾಣಿನಿ ಸೂತ್ರದಿಂದ ಬಂದು ವೀರಶೈವ ಎಂಬಪದವು ನಿಷ್ಪತ್ತಿಯಾಗುವದು. ವೀರಶೈವ ಪದದ ನಿಷ್ಪತ್ತಿಯಿಂದ ವೀರಶೈವ ಮತದ ವೈಶಿಷ್ಟ್ಯ ಮನಗಂಡಂತಾದರೂ ಮತ್ತೆ ಕೆಲವು ಉದಾಹರಣೆ ಕೊಡುವುದು ಸೂಕ್ತ

ವೇದಾಂತ ಜನ್ಯಂ ಯಜ್ಞಾನಂ ವಿದ್ಯೇತಿ ಪರಿಕೀರ್ತತೆ ವಿದ್ಯಾಯಾಂರಮತೇಯಃಸ: ವೀರ ಇತ್ಯಭಿಧೀಯತೆ

ವಿದ್ಯಾಯಾಂ ಶಿವರೂಪಾಯಾಂ ರಮಂತೇಯೇ ವಿಶೇಷತಃ ತಸ್ಮಾದೇತೆ ಮಹಾಭಾಗಾಃ ವೀರಶೈವಾ ಇತಿ ಸ್ಮೃತಾ:

ಸಿ. ಶಿ. ಪರಿಚ್ಛೇದ ಪುಟ ೪೨

ವಿಶಬ್ದೋವಾ ವಿಕಲ್ಪಾರ್ಥೋ ರಶಬ್ದೋ ರಹಿತಾರ್ಥಕಃ| ವಿಕಲ್ಪ ರಹಿತಂ ಶೈವಂ ವೀರಶೈವಂ ಪ್ರಚಕ್ಷತೇ| ವಿರೋಧಾರ್ಥೋ ವಿಶಬ್ದಸ್ಸ್ಯಾತ್ ರಶಬ್ದೋ ರಹಿತಾರ್ಥಕಃ| ವಿರೋಧ ರಹಿತಂ ಶೈವಂ ವೀರಶೈವಂ ವಿದುರ್ಬುಧಾಃ| ತತ್ರ ವ್ರತಸ್ಯ ವಾಕ್ಯೋಕ್ತಂ ಲಿಂಗಧಾರಣ ವೈಭವೇ ಲಿಂಗಾಂಗಸಾಮರಸ್ಯೇಚ ಫಲಂ ಮೋಕ್ಷಂ ಪ್ರಚಕ್ಷತೇ

ಶಿವಜೀವೈಕ್ಯ ಬೋಧಿಕೆ ವಿದ್ಯೆಯಲ್ಲಿ ವಿಕಲ್ಪರಹಿತವೂ ವಿರೋಧ ರಹಿತವೂ ಆದ ಶಿವಭಕ್ತಿಯಿಂದ ಕೂಡಿ ಲಿಂಗದಾರಣ ಲಿಂಗ ಪೂಜೆಯಮೂಲಕ ಲಿಂಗಾಂಗ ಸಾಮರಸ್ಯವೆಂಬ ಮೋಕ್ಷರೂಪೇ ಫಲಾಕಾಂಕ್ಷಿಗಳೇ ಅವರೇ ವೀರಶೈವರೆಂದು ಭಾವ.

## ವೀರಶೈವ ಲಕ್ಷಣ

ಮತ್ತವೂ ಪರಮೇಶ್ವರ ನಿರ್ಮಿತವಾದ ಜಗತ್ತಿನಲ್ಲಿ ವೀರಶೈವ ಚರಮಶರೀರಿ ಸರ್ವೋತ್ತಮವ್ರತೀ| ಅಪ್ರತಿಮ ಹತ ಶಿವವ್ರತನು। ಲೋಕ ಪಾವನನೆಂದು ಸಮಸ್ತ ಜನರಿಂಕೊಂಡಾಡಲ್ಪಟ್ಟ ಸಮಸ್ತ ಶೈವರೊಳಗೆ ಪರಿನಿಷ್ಠನಾಗಿ ಇತರಶೈವರಂತೆ ಕ್ರಿಯಾ ಬಾಹುಲ್ಯದಿಂದ ಅಲ್ಪ ಫಲವಂಪಡೆಯದೆ ಅಲ್ಪ ಕ್ರಿಯೆಯಿಂದ ಅನಲ್ಪಫಲವಪಡೆವಾತನಾಗಿ ಶಿವದೀಕ್ಷೆಯಾದಮೇಲೆ ಸ್ನಾನಭೋಜನ ನಿದ್ರಾಜಾಗರಣ ಮಲ ಮೂತ್ರವಿಸರ್ಜನ ಕಾಲಂಗಳಲ್ಲಿ ಅಶುಚಿಯ ಭಾವನೆಯಂತೊರೆದು ಸದಾಲಿಂಗಾಂಗಾನುಬಂಧಿಯಾಗಿ ಲಿಂಗಭೋಗೋಪ ಭೋಗಿಯಾಗಿ ತನ್ನಿಷ್ಟಲಿಂಗದಲ್ಲಿ ಆವಾಹನ ವಿಸರ್ಜನ ಕ್ರಿಯಂಗಳನು ಮಾಡದಾತನಾಗಿ ತ್ರಿಕಾಲ ಲಿಂಗಾರ್ಚನಾ ಸಕ್ತನಾಗಿ ಲಿಂಗಲೋಪಂಗಳಲ್ಲಿ ಪ್ರಾಣತ್ಯಾಗವಲ್ಲದೆ ಬೇರೊಂದು ಪ್ರಾಯಶ್ಚಿತ್ತವಿಲ್ಲದಾತನಾಗಿ. ಗುರುನಿಂದೆ. ಶಿವನಿಂದೆ ಶಿವಕಥಾನಿಂದೆ ಶೈವನಿಂದೆ. ಪ್ರಮಥನಿಂದೆ ಜಂಗಮನಿಂದೆ. ಶಿವಪಾದೋದಕನಿಂದೆ. ಶಿವನಿರ್ಮಾಲ್ಯನಿಂದೆಗಳಂಸೈರಿಸದೆ ಕೇಳದ ಕಿವಿಗಳಿಗೆ ಪ್ರಾಯಶ್ಚಿತ್ತವಂ ಮಾಡಿಕೊಂಡು. ನುಡಿದನಾಲಿಗೆಯಂ ಸೀಳುವಾತನಾಗಿ, ಸರ್ವಮುಂ ಶೈವಮೆಂಬುದುಳಿಯೆ: ಬೇರೆಯೆಂದೊಡೆ ವಿಷ್ಣ್ವಾದಿ ದೇವತೆಗಳಂ ತೃಣೀಕರಿಸಿ ಲೆಕ್ಕಿಸದಾತನಾಗಿ ಬಾಹ್ಯದಲ್ಲಿ ಲಿಂಗಲಾಂಛನವಿಲ್ಲದ ಭವಿಗಳೊಡನೆ ದಯೆಯಂ ಪಡೆದಾತನಾಗಿ, ಶೈವಚಿಹ್ನೆಯೇ ಇಲ್ಲದ ಪಾಪಿಷ್ಠರಂ ಶಿಕ್ಷಿಸಲಿಚ್ಛೆಯುಳ್ಳಾತನಾಗಿ ಶಿವಧರ್ಮಾದಿ ವೃದ್ಧಿಗೋ

ಸುಗ ತನ್ನ ತನುಮನದನಂಗಳಂ ಸೂರೆಗೊಡುವಾತನಾಗಿ ಅನೃತ ಅಸ್ಥಿರ ವಾಕ್ಯ ವಚನ ಪಙ್ಕ್ತಿಭೇದ ಉದಾಸೀನತೆ ನಿರ್ದಯವೆಂಬ ಆರುದೋಷ ಗಳಿಂದ ಆರು ತೆರನಾದ ಭವಿಗಳಾಗ ದಾತನಾಗಿ, ವೀರಶೈವ ಮಾಹೇ ಶ್ವರರಂ ಕಾಣುತ್ತಲೇ ಪ್ರತ್ಯುತ್ಥಾನ ಅಭ್ಯುದ್ಗಮನ ಅವರ ಸಂಗಡ ತಿರು ಗಾಡ ಪ್ರಿಯವಾಕ್ ಆಸನ ಅನ್ನಪಾನಾದಿಗಳಂ ಸಮರ್ಪಿಸುವುದೆಂಬ ಮುಕ್ತಿಸೋಪಾನ ಸಪ್ತಕ ಕ್ರಮಯುಕ್ತನಾಗಿ ಶಿವಧರ್ಮವಿರುದ್ಧವಾದುದೆ ಲ್ಲವಂ ಸರ್ವಾತ್ಮನಾವರ್ಜಿಸುವವನಾಗಿ ಜಾತಿಸೂತಕ ಜನನಸೂತಕವೆಂಬ ಪಂಚಸೂತಕಗಳನಳಿದಾತನಾಗಿ ಲಿಂಗಾಚಾರ ಸದಾಚಾರ ಭಕ್ತ್ಯಾಚಾರ ಶಿವಾಚಾರ ಗಣಾಚಾರವೆಂಬ ಪಂಚಾಚಾರ ನಿಷ್ಠನಾಗಿ ದಾಸತ್ವ ವೀರ ದಾಸತ್ವ ಭೃತ್ಯತ್ವ ವೀರಭೃತ್ಯತ್ವ ಸಮಯಾಚಾರತ್ವ ಸಕಲಾವಸ್ಥಾ ತ್ವಂಗಳೆಂಬ ಷಡ್ವಿಧ ಸದ್ಗುಣತ್ವಯುಕ್ತನಾಗಿ, ದೇಶಕಾಲ ಕಲ್ಪಿತಲೌಕಿಕಾ ಚಾರಗಳಿಂ ಸ್ವತಂತ್ರ ಶೀಲನಾಗಿ ಶಿವಾತ್ಮರ್ಗೆ ಭೇದಭ್ರಾಂತಿತೋರದಾ ನಾಗಿ ಜೀವಲಿಂಗಮಂ ಶಿವಲಿಂಗದೊಳೈಕ್ಯ ಗೊಳಿಸಿ ಮೆರೆವಾತನಾಗಿ ವೀರ ಶೈವ ಧರ್ಮಂಗಳಿಂ ಕೃತಕೃತ್ಯನಾಗಿ ಲಿಂಗಾಂಗಸಂಗಾದ್ವೈತ ಭಾವನೆಯಿಂ ಭಯವರ್ಜಿತನಾಗಿ, ಹರ್ಷ ವಿಷಾದಂಗಳಿಗೆರಗದಾತನಾಗಿ, ಶಾಂಭವ ವಿದ್ಯೆ ಯಲ್ಲಿ ಶೈವನಪ್ಪುದರಿಂ ತತ್‌ಸಂಜ್ಞೆಯುಳ್ಳಾತನಾಗಿ ಜಗತ್ಪೂಜ್ಯ ನಪ್ಪಾ ತನೇ ವೀರಶೈವನಪ್ಪಂ

ವಿವೇಕ ಚಿಂತಾಮಣಿ ೧೧೦

ನಿಜಗುಣ ಶಿವಯೋಗಿ ವಿರಚಿತ

ಮಹಾಶಿವಯೋಗಿಯ ಅಮೃವಾಣಿಯಿಂದ ವೀರಶೈವ ಮತದ ವೈಶಿಷ್ಟ್ಯ ಮನವರಿಕೆಯಾದಂತಾಯಿತಲ್ಲವೆ!

ಸಿದ್ಧಿಯುಂಟಾಗಬೇಕಾದರೆ ಸಾಧನೆ ಅಗತ್ಯ. ಅದು ಸಾಧಕನ ಅಧೀನವಾದದು. ಮಹಾತ್ಮರ ಅಮೃತವಾಣಿ ಅದಕ್ಕೆ ದಾರಿ. "ಸ್ವಾಮಿ ಭೃತ್ಯ ಸಂಬಂಧಕ್ಕೆ ಪಥವಾವುದೆಂದಡೆ ದಿಟವ ನುಡಿಯುವುದು. ನುಡಿ ದಂತೆ ನಡೆವುದು. ನುಡಿದು ಹುಸಿವ ನಡೆದು ತಪ್ಪುವ ಪ್ರಪಂಚಿಯ ನೊಲ್ಲ ನಮ್ಮ ಕೂಡಲಸಂಗಮದೇವ" ನುಡಿ ನಡೆಯೊಂದಾಗಬೇಕು ಅಂದೇ ಲಿಂಗಾಂಗ ಸಾಮರಸ್ಯ ಗುರೂಪದೇಶ ಸಾಧಕನ ಸಾಧನೆ ಅದ ರಿಂದ ವೀರಶೈವ ಮತದ ಮುಖ್ಯ ತಿರುಳಾದ ಶಿವದೀಕ್ಷಾ ಅಷ್ಟಾ ವರಣ ಪಂಚಾಚಾರ ಷಟ್ಸ್ಥಲ ಲಿಂಗಾಂಗ ಸಾಮರಸ್ಯ ರೂಪೀಮೋಕ್ಷ

ಇವುಗಳ ಸ್ವರೂಪವನ್ನು ಅರಿತು ಆಚರಿಸಬೇಕು. ಮತೀಯ ಅಥವಾ ಧಾರ್ಮಿಕ ವಿಚಾರಗಳು ಆಚರಣೆಗೆ ಬೇಗ ನಿಲುಕುವಂತವಲ್ಲ. ಇದೆಲ್ಲಕ್ಕು ಮನಸ್ಸೇ ಮುಖ್ಯ. ಅದು ಕಪಿಯಂತೆ ಚಂಚಲವಾದುದು. ಕೊಂಬೆಯ ಮೇಲಣ ಮರ್ಕಟನಂತೆ ಲಂಘಿಸುವುದೆನ್ನ ಮನ. ನಿಂದಲ್ಲಿ ನಿಲ್ಲಲೀಯ ದೆನ್ನಮನ. ಹೊಂದಲ್ಲಿ ಹೊಂದಲೀಯ ದೆನ್ನಮನ. ಕೂಡಲಸಂಗಮದೇವ ನಿಮ್ಮ ಪಾದಕಮಲದಲ್ಲಿ ಭ್ರಮರನಾಗಿರಿಸು ನಿಮ್ಮಧರ್ಮ

ಅಲ್ಲದೆ ಚಂಚಲಂಹಿ ಮನ: ಕೃಷ್ಣ ಪ್ರಮಾಥಿಬಲ ವದ್ದೃಢಂ| ತಸ್ಯಾಹಂನಿಗ್ರಹಂ ಮನ್ಯೇ ವಾಯೋರಿವಸುದುಷ್ಕರಂ|| ಗೀತೆಯ ಈ ಅರ್ಜುನಶಂಕೆಗೆ ಭಗವಂತನ ಸಮಾಧಾನ. "ಅಸಂಶಯಂ ಮಹಾಬಾಹೋ ಮನೋದುರ್ನಿಗ್ರಹಂ ಚಲಂ| ಅಭ್ಯಾಸೇನ ತುಕೌಂತೇಯ ವೈರಾಗ್ಯೇಣ ಚಗೃಹ್ಯತೆ" ಎಂದು ಮತ್ತು ಮನ ಏವ ಮನಷ್ಯಾಣಾಂ ಕಾರಣಂ ಬಂಧಮೋಕ್ಷಯೋ ಬಂಧಾಯ ವಿಷಯಾಸಕ್ತಂ ಮುಕ್ತ್ಯೈನಿರ್ವಿಷಯಂ ಸ್ಮೃತಂ ಇತ್ಯಾದಿ ಮನಸ್ಸಿನ ಚಾಂಚಲ್ಯವನ್ನು ಅದರ ನಿಗ್ರಹವನ್ನು ಬಹು ವಿಧವಾಗಿ ಬಹಳ ಅನುಭವಿಗಳು ವಿವರಿಸಿದ್ದಾರೆ. ಆಚರಣೆಯಿಂದ ಸರ್ವವೂ ಸಾಧ್ಯವೆಂಬುದನ್ನು ಮರೆಯಬಾರದು. ಲೌಕಿಕ ಉದಾಹರಣೆ ಪ್ರಕಾರ ರೋಗಿಗೆ ಔಷಧಿ ಕಹಿ. ರೋಗಕ್ಕೆ ಸಿಹಿ. ರೋಗ ವಾಸಿಯಾಗುವುದು. ಮಹಾತ್ಮರ ಅಮೃತವಾಣಿಯು ಹಾಗೆಯೇ ಆದ್ಯರ ವಚನ ಪರುಷ ಕಂಡಯ್ಯ ಸದಾಶಿವನೆಂಬ ಲಿಂಗವ ನೆರೆ ನಂಬುವುದು. ನಂಬಲೊಡನೆ ವಿಜಯಕಂಡಣ್ಣ ಅಧರಕ್ಕೆ ಕಹಿ. ಉದರಕ್ಕೆ ಸಿಹಿ. ಕೂಡಲಸಂಗನ ಶರಣರ ವಚನ ಬೇವಸವಿದಂತೆ. ಅಲ್ಲವೆ ಹಾಗೆಯೇ ವೀರಶೈವ ಮುಖ್ಯ ತತ್ವಗಳಾದ ಶಿವದೀಕ್ಷಾ ಅಷ್ಟಾವರಣ ಪಂಚಾಚಾರ ಷಟ್ಸ್ಥಲ ಲಿಂಗಾಂಗ ಸಾಮರಸ್ಯ ರೂಪೀಮೋಕ್ಷ ಇವುಗಳ ವಿಷಯವಾಗಿ ವಿವರಣೆ ಕೊಡುತ್ತ ಮುಂದುವರೆದರೆ ಪ್ರತ್ಯೇಕವಾಗಿ ಅದೇ ಒಂದು ಲೇಖನವಾದೀತು. ಕೇವಲ ಅವುಗಳ ಸ್ವರೂಪದ ಬಗ್ಗೆ ಭಾವನಾಚಿತ್ರಮಾತ್ರ* ಕೊಡಲಾಗುವದು.

***ಭಾವನಾಚಿತ್ರ**

ಜಿಜ್ಞಾಸುವಾದ ಅಂಗವು (ಜೀವ) ಲಿಂಗವನ್ನು ಕೂಡಬೇಕಾದರೆ (ಬ್ರಹ್ಮೈಕ್ಯ) ಶಿವದೀಕ್ಷೆಯೆಂಬ ಪವಿತ್ರ ಸರೋವರದಲ್ಲಿ ಸ್ನಾನಮಾಡಿ ಆಣವ ಕಾರ್ಮಿಕ ಮತ್ತು ಮಾಯಾಮಲಗಳನ್ನು ನೀಗಿ ವೇಧಾ, ಮನು,

ಕ್ರಿಯೆಗಳೆಂಬ ದೀಕ್ಷಾತ್ರಯದಿಂದ ಪವಿತ್ರನಾಗಿ ಇಷ್ಟ, ಪ್ರಾಣ, ಭಾವ ಗಳೆಂಬ ಲಿಂಗತ್ರಯವನ್ನು ಸ್ಥೂಲ ಸೂಕ್ಷ್ಮ ಕಾರಣ ಶರೀರತ್ರಯದಲ್ಲಿ ಧರಿಸಿಕೊಂಡು ಶ್ರೀಗುರುವಿನ ಆಶೀರ್ವಾದವೆಂಬ ಯೋಗ್ಯತಾಪತ್ರಸಹಿತ ವಾಗಿ (*Certificate*) ಗುರು, ಲಿಂಗ, ಜಂಗಮ, ಪಾದೋದಕ, ಪ್ರಸಾದ, ಭಸ್ಮ, ರುದ್ರಾಕ್ಷಿ, ಮಂತ್ರಗಳೆಂಬ ಅಷ್ಟಾವರಣ ನಾಮಕ ಕೋಟೆಯಲ್ಲಿ ಅನುಭವಿಗಳ ಮತವಿಡಿದು ಹೊಕ್ಕು ಲಿಂಗಾಚಾರ, ಸದಾಚಾರ, ಭೃತ್ಯಾ ಚಾರ, ಗಣಾಚಾರವೆಂಬ ಪಂಚಾಚಾರಾತ್ಮಕ ರಾಜಮಾರ್ಗದಲ್ಲಿ ನಡೆದು ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ ಮತ್ತು ಐಕ್ಯ ಎಂಬ ಸೋಪಾನಗಳನ್ನು ಹತ್ತಿ ಲಿಂಗಾಂಗ ಸಾಮರಸ್ಯವೆಂಬ ದ್ವಾರವನ್ನು ಹೊಕ್ಕು ಮೋಕ್ಷನಾಮಕ ಸ್ಥಾನವನ್ನು ಸೇರಿ ಶಾಂತಿಸಾಮ್ರಾಜ್ಯದಲ್ಲಿರ ಬೇಕು. ಚಿತ್ರದಿಂದ ವೀರಶೈವ ಸ್ವರೂಪ ಮನಗಂಡಂತಾಯಿತು. ಮುಂದೆ ಷಟ್‌ಸ್ಥಲ ಬ್ರಹ್ಮಿಯ ಸ್ವರೂಪ.

## ಷಟ್ಸ್ಥಲಬ್ರಹ್ಮಿಯು.

ಷಟ್ಸ್ಥಲಶಾಸ್ತ್ರ, ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ, ಈ ಆರು ಸೋಪಾನಗಳು ಲಿಂಗಾಂಗಸಾಮರಸ್ಯಕ್ಕೆ ಮುಖ್ಯ ವೀರ ಶೈವ ಸಿದ್ಧಾಂತದಲ್ಲಿ ಪರಬ್ರಹ್ಮ ಅಥವಾ ಪರಶಿವನಿಗೆ ಸ್ಥಲವೆಂಬು ಹೆಸರು.

ಸ್ಥೀಯತೇ ಲೀಯತೇ ಯತ್ರ
ಜಗದೇತಚ್ಚರಾಚರಂ ।
ತದ್ಬ್ರಹ್ಮ ಸ್ಥಲಮಿತ್ಯುಕ್ತಂ
ಸ್ಥಲತತ್ವ ವಿಶಾರದೈಃ ॥

ಚರಾಚರಾತ್ಮಕವಾದ ಈ ಪ್ರಪಂಚವು ಯಾವುದರಲ್ಲಿ ಉತ್ಪತ್ತಿ ಮತ್ತು ಲಯವನ್ನು ಹೊಂದುವುದೋ ಅದು ಪರಬ್ರಹ್ಮ ಪ್ರಪಂಚದ ಉತ್ಪತ್ತಿ, ಲಯ, ಪರಮಾತ್ಮನಿಂದಲೇ ಅಥವಾ ಉತ್ಪತ್ತಿ, ಲಯಗಳಿಗೆ ಆಧಾರನ್ನೂ ಪರಬ್ರಹ್ಮನೇ. ಆತನಿಗೆ ಸ್ಥಲವೆಂದು ಹೆಸರು. ಅಂದಮೇಲೆ ಆ ಸ್ಥಲ ದಲ್ಲಿ ಪರಮಾತ್ಮನಲ್ಲಿ ಸಾಮರಸ್ಯವನ್ನು ಪಡೆಯಲು ಸಾಧನ. ಈ ಆರು ಸೋಪಾನಗಳು. ಅವುಗಳಲ್ಲಿ ನಿಷ್ಣಾತನೇ ಷಟ್ಸ್ಥಲ ಬ್ರಹ್ಮಿ. ಈತನೇ ಷಟ್ಸ್ಥಲ ಚಕ್ರವರ್ತಿ. ಷಟ್ಸ್ಥಲಶಾಸ್ತ್ರ ವಿಶಾರದ. ಪರಮಪೂಜ್ಯ.

"ಆತ್ಮ ತತ್ವ ವಿಚಾರಜ್ಞಂ ವಿಮುಕ್ತ ವಿಷಯಭ್ರಮಂ
ಶಿವ ಸಿದ್ಧಾಂತ ತತ್ವಜ್ಞಂ ಛಿನ್ನ ಸಂದೇಹ ವಿಭ್ರಮಂ
ಸರ್ವ ತಂತ್ರ ಪ್ರಯೋಗಜ್ಞಂ ಧಾರ್ಮಿಕಂ ಸತ್ಯವಾದಿನಂ
ಕುಲಕ್ರಮಾಗತಾಚಾರಂ ದುರ್ಮಾರ್ಗಾಚಾರ ವರ್ಜಿತಂ
ಶಿವಧ್ಯಾನ ಪರಂ ಶಾಂತಂ, ಶಿವತತ್ವ ವಿವೇಕಿನಂ
ಭಸ್ಮೋದ್ಧೂಳನ ನಿಷ್ಣಾತಂ ಭಸ್ಮ ತತ್ವ ವಿವೇಕಿನಂ
ತ್ರಿಪುಂಡ್ರಧಾರಣೋತ್ಕಂಠಂ ಧೃತ ರುದ್ರಾಕ್ಷ ಮಾಲಿಕಂ
ಲಿಂಗಧಾರಣ ಸಂಯುಕ್ತಂ ಲಿಂಗ ಪೂಜಾ ಪರಾಯಣಂ
ಲಿಂಗಾಂಗ ಯೋಗ ತತ್ವಜ್ಞಂ ನಿರೂಢಾದ್ವೈತ ವಾಸನಂ
ಲಿಂಗಾಂಗ ಸ್ಥಲ ಭೇದಜ್ಞಂ ಶ್ರೀ ಗುರು ಶಿವವಾದಿನಂ"

ಸಿ. ಶಿ. ಪ. ೬. ಪುಟ ೬೪.

ಇದು ಗುರುಸ್ವರೂಪ. ಇದರಲ್ಲಿ ಗುರುವು ಜಗದ್ವಿಖ್ಯಾತವಾದ ಅರಿಷಡ್ವರ್ಗರಹಿತ ಆತ್ಮವಿಚಾರ ವಿಶಾರದ, ಶಿವಸಿದ್ಧಾಂತೀ, ಸಂದೇಹ ವಿದೂರ, ಧಾರ್ಮಿಕ ಸತ್ಯವಾದೀ, ಕುಲಕ್ರಮಾಗತಾಚಾರ ಪರಾಯಣ, ಶಾಂತ, ಶಿವತತ್ವ ವಿವೇಕೀ, ರುದ್ರಾಕ್ಷಮಾಲಾ ವಿಭೂಷಣ, ಲಿಂಗಧಾರೀ ಲಿಂಗ ಪೂಜಾಲೋಲ, ಲಿಂಗಾಂಗ ಸಮರಸವೇತ್ತಾ, ಮಂಗಳವಾದೀ ಎಂಬುದು ತಿಳಿದುಬರುತ್ತೆ. ಈ ವಿಶೇಷಣ ವಿಶಿಷ್ಟನಾದವನು ಕೇವಲ ಗುರುವೇ ಅಲ್ಲ. ಹರನೂ ಹೌದು. ಹರನಿಗೂ ಈ ಸ್ವರೂಪವುಂಟು. ಹರಗುರು ಸ್ವರೂಪ ಸಾಮರಸ್ಯ ವಿವರಣೆಯಿಂದ ಲೇಖನ ದೀರ್ಘವಾಗಬಹುದು. ಆದರೂ ಎರಡು ಮಾತು ಹೇಳುವುದು ಸೂಕ್ತವಲ್ಲವೆ?

೧ ಯೋ ಗುರುಃ ಸ ಶಿವಃ ಪ್ರೋಕ್ತೋಸಿ
ಯಃ ಶಿವಃ ಸ ಗುರುಃ ಸ್ಮೃತಃ ।
ನ ತಯೋರಂತರಂ ಕುರ್ಯಾತ್
ಜ್ಞಾನಾವಾಪ್ತ್ಯೈ ಮಹಾ ಮತಿಃ ॥

ಆ. ವಾ.

೨ ಶ್ರೋತ್ರಿಯಂ ಬ್ರಹ್ಮ ನಿಷ್ಠಂಚ
ಗುರುಂ ಗಚ್ಛೇತ್ ಪ್ರಿಯೇಣಚ
ಗುರುಸ್ತಸ್ಮೈ ಪರಾಂ ವಿದ್ಯಾಂ
ದದ್ಯಾಚ್ಚ ಸುರ ಪುಂಗವಾಃ॥

ಬ್ರಹ್ಮಗೀತಾ.

೩ ಯೋ ವಿದ್ಯಾ ಸಂತತಿ ಜ್ಞಾನ-
ಸಹಿತೋ ದೇಶಿಕೋ ಭವೇತ್ ।
ಸ್ಯೋ ನಾಯಾಸೇನ ಸಂಸಾರಾತ್-
ನೃಣಾ ಮುಕ್ತ್ವಾರಕೋ ಜವೇತ್ ॥

ಪೂ. ಸಂಹಿತಾ.

೪ ದೇಶಿಕಂ ದೇವ ದೇವೇಶಂ
ಶಿವಂ ವಿದ್ಯಾದ್ವಿಚಕ್ಷಣಃ
ತದಿಷ್ಟಂ ಸರ್ವ ಯತ್ನೇನ
ಪ್ರಕುರ್ಯಾತ್ಸರ್ವದಾದರಾತ್ ॥
೫ ಗುರುದೇವ ಹರ ಸಾಕ್ಷಾತ್-
ನಾನ್ಯ ಇತ್ಯಬ್ರವೀತ್ ಶೃತಿಃ ॥

ಬ್ರಹ್ಮೋಪನಿಷತ್

೬ ಗುರುಮೂರ್ತಿ ಶಿವಃ ಸಾಕ್ಷಾತ್
ನಾನ್ಯಥಾಚಸುರೇಶ್ವರ ।
ವರ್ತತೆ ಪಾದಯುಗ್ಮೇಶು
ತ್ರೈಲೋಕ್ಯಂ ಸಚರಾಚರಂ ॥
೭ ಸ ಏವ ವಂದ್ಯಃ ಪರಿಪೂಜನೀಯಃ
ಸ ಏವ ಮಾತಾ ಜಗತಾಂ ಪಿತಾಚ ।
ಸ ಏವ ಬಂಧುಃ ಸ ಗುರುಃ ಶಿವಃ ಸ್ಯಾತ್
ಜ್ಞಾನಾಮೃತಂ ಯಃ ಪರಮಂ ಪ್ರದದ್ಯಾತ್ ॥

೮ ಅಗಾಧ ಸಂಶಯಾಂಬೋಧಿ-
ತಾರಕಾನುಗ್ರಹ ಪ್ರದಃ।
ಪರಮಜ್ಞಾನ ರೂಪತ್ವಾತ್-
ಗುರುದೇವ ಪರಶ್ಶಿವಃ ॥

ವೀರಶೈವಾನಂದ ಚಂ. ೨೭

೯ ತದ್ವಿಜ್ಞಾನಾರ್ಥಂ ಸಗುರು ಮೇವಾಭಿಗಚ್ಛೇತ್ ಸಮಿತ್ಪಾಣಿಃ
ಶ್ರೋತ್ರಿಯಂ ಬ್ರಹ್ಮನಿಷ್ಠಂ ಸತ್ಸಂಪ್ರದಾಯಸ್ಥಂ ಶ್ರದ್ಧಾ

ವಂತಂ ಸತ್ಕುಲಭವಂ ಶ್ರೋತ್ರಿಯಂ ಶಾಸ್ತ್ರ ವಾತ್ಸಲ್ಯಂ
ಗುಣವಂ ತಮ ಕುಟಿಲಂ ಸದ್ಗುರುವಮಾಸಾದ್ಯ
ಮುಂಡಕ ನಾರದಾದಿ ಉಪನಿಷತ್

ಈ ಆಧಾರಗಳಿಂದ ಶಿವನೇ ಗುರು. ಗುರುವೇ ಶಿವನು. ಅವರಲ್ಲಿ ಭೇದಭಾವ ಸಾಧುವಲ್ಲ. ಜಗದಣ್ಣ ಬಸವಣ್ಣನ ಅಮೃತ ವಾಣಿಯೇ ವಾಣಿ.

ಮಡಿಕೆಯ ಮಾಡುವರೆ ಮಣ್ಣೇ ಮೊದಲು ।
ತೊಡಿಗೆಯ ಮಾಡುವರೆ ಹೊನ್ನೇ ಮೊದಲು ।
ಶಿವಪಥವನರಿವಡೆ ಗುರುಪಥವೇ ಮೊದಲು ।
ಕೂಡಲಸಂಗಮದೇವರನರಿವಡೆ ಶರಣರ ಸಂಗವೆ
ಮೊದಲು

ಈ ವಾಣಿಯಲ್ಲಿ ಮಡಿಕೆಗೆ ಮಣ್ಣು, ಆಭರಣಕ್ಕೆ ಹೊನ್ನು, ಶಿವ ಪಥಕ್ಕೆ ಗುರುಪಥ, ಕೂಡಲಸಂಗಮನ ಅರಿವಿಗೆ ಶರಣರು ಹೇಗೆ ಕಾರಣರು ಎಂಬುದನ್ನು ದೃಷ್ಟಾಂತದ ಮೂಲಕ ವಿವರಿಸಿದ್ದಾರೆ. ಈ ವಾಣಿ ಜನ ಸಾಮಾನ್ಯಕ್ಕೂ ಅರ್ಥವಾಗುವುದು. ಸುಲಲಿತವಾದ ಕನ್ನಡ ಭಾಷೆಯಲ್ಲಿ ಭಾಷಾಭಿವೃದ್ಧಿ, ಜನತಾ ಜ್ಞಾನಾಭಿವೃದ್ಧಿ ಇಷ್ಟೇ ಅಲ್ಲ, ಸಾಹಿತ್ಯಾಭಿ ವೃದ್ಧಿಯ ದೃಷ್ಟಿಯಿಂದ ಅಲಂಕಾರಿಕವಾಗಿ ತಾತ್ವಿಕವಾಗಿ ಮಾರ್ಮಿಕವಾಗಿ ಉಪದೇಶಮಾಡಿದ್ದಾರೆ. ಇಂಥ ವಾಣಿ ಆಣಿಯ ಮುತ್ತುಗಳು ಅನಂತ.

ಶ್ರೀ ಗುರುವೆ, ಮಹಾ ಗುರುವೆ, ಶಾಂತಿ ಕಲಾ ಗುರು ಶಿವಾತ್ಮ ವಿದ್ಯಾ ಗುರುವೆ ಪುರಾ ಗುರುವೆ, ವಿಶ್ವ ಜಗದ್ಗುರುವೆ, ವಿಶುದ್ಧ ಚೇಷ್ಟಾ ಗುರುವೇ, ಸುಧೀಗುರುವೆ, ಭಕ್ತಿ ಯಶೋ ಗುರುವೇ; ಪ್ರಸಾದ ತೇಜೋ ಗುರುವೇ, ಕೃಪಾಗುರುವೇ, ಮದ್ಗುರುವೇ, ಗುರುವೇ ಶಿವಾಧವಾ.

ಮಗ್ಗೆ ಮಾಯಿದೇವ ಕೃತ
ಶತಕತ್ರಯ **ಶಿವಾಧವ ಶತಕ.**

ಶಿವಯೋಗಿ ಶರೀರೇತು
ನಿತ್ಯಂ ಸನ್ನಿಹಿತಃ ಶಿವಃ
ಯೋಗೀಂದ್ರ ಪೂಜನಾತ್ತಸ್ಮಾತ್
ಸಾಕ್ಷಾತ್ಸಂಪೂಜಿತಃ ಶಿವಃ

ನಂದಿಕೇಶ್ವರ ಶಿವಾಚಾರ್ಯ ರಚಿತಲಿಂಗ ಧಾರಣ ಚಂದ್ರಿಕೆಯಿಂದ ಒಂದು ಮಾತನ್ನು ಉದ್ಧರಿಸಿ ಲೇಖನವನ್ನು ವಿರಮಿಸುವೆನು.

ಕ್ರಿಮಿಕೀಟಪತಂಗೇ ಭ್ಯಃ
ಪಶವಃ ಪ್ರಜ್ಞಯಾಧಿಕಾಃ
ಪಶುಭ್ಯೋsಪಿ ನರಾಃ ಶ್ರೇಷ್ಠಾ:
ತೇಷು ಶ್ರೇಷ್ಠಾದ್ವಿಜಾತಯಃ ॥೧॥

ದ್ವಿಜಾತಿಷ್ವಕಾವಿಪಾಧ್ರಿ:
ವಿಪ್ರೇಷುಕೃತ ಬುದ್ಧಯಃ ॥
ಕೃತಬುದ್ಧಿಷುಕರ್ತಾರಃ
ತೇಭ್ಯ: ಸನ್ಯಾಸಿನ್ಯೋಧಿಕಾಃ ॥೨॥

ತೇಭ್ಯೋ ವಿಜ್ಞಾನಿನಃ ಶ್ರೇಷ್ಠಾಃ
ತೇಷು ಶಂಕರ ಪೂಜಕಾ: ॥
ತೇಷು ಶ್ರೇಷ್ಠಾ ಮಹಾ ಭಾಗ
ಮಮಲಿಂಗಾಂಗಸಂಗಿನ: ॥೩॥

ಲಿಂಗಾಂಗ ಸಂಗಿಷ್ವಧಿಕಃ
ಷಟ್ಸ್ಥಲ ಜ್ಞಾನವಾನ್‌ಮವಾನ್ ।
ತಸ್ಮಾದಪ್ಯಧಿಕೋ ನಾಸ್ತಿ
ತ್ರಿಷುಲೋಕೇಷು ಸರ್ವದಾ ॥೪॥

ಸಂವಂದ್ಯಃ ಸರ್ವದಾ ಪೂಜ್ಯ:
ಸಂಸಾರ ವಿಜಿಗೀಷುಭಿಃ ।
ಬಹುನೋಕ್ತೇನಕಿಂವತ್ಸ
ಸ ಏವಾಹಂ ನ ಸಂಶಯಃ ॥೫॥

ಈ ಮಾತಿನಲ್ಲಿ ಉತ್ತರೋತ್ತರ ಔತ್ಕೃಷ್ಟ್ಯವನ್ನು ಕಾಣುವುದು ಸೂಕ್ತ. ಅಂದರೆ ಕ್ರಿಮಿಗಿಂತ ಕೀಟ, ಪತಂಗ, ಪಶು, ನರ, ದ್ವಿಜಾತಿ ವಿಪ್ರ ಕೃತಬುದ್ಧಿ ಕರ್ತಾ ಸನ್ಯಾಸೀ ವಿಜ್ಞಾನಿ ಶಿವಭಕ್ತರು ಲಿಂಗಾಂಗೀ. ಷಟ್ಸ್ಥಲಜ್ಞಾನೀ "ಉತ್ತರೋತ್ತರ ಮುತ್ಕರ್ಷ: ಸಾರ ಇತ್ಯಭಿಧೀಯತೇ ಎಂದಹಾಗೆ ಎಲ್ಲರಿಗಿಂತಲೂ ಷಟ್ಸ್ಥಲಬ್ರಹ್ಮಿಯೇ ಅಧಿಕ

ಆತನಿಗಿಂತ ಮೂರುಲೋಕಗಳಲ್ಲೂ ಅಧಿಕನಿಲ್ಲ. ಷಣ್ಮುಖನಿಗೆ ಪರಮೇಶ್ವರನು ಉಪದೇಶಿಸಿದ್ದು ಅಮೃತವಾಣಿಯಿರಬಹುದಲ್ಲವೆ! ವತ್ಸ! ಎಂಬುದಾಗಿ ಸಂಬೋಧಿಸಿ ಹೆಚ್ಚಿಗೆ ಹೇಳಬೇಕಾದ್ದಿಲ್ಲ. ಆತನೇ ನಾನು ಅಲ್ಲದೆ ಆತನ ಶರೀರದಲ್ಲಿ ನಾನು ಸದಾ ನೆಲಸಿರುವೆನು. "ಈಶ್ವರಃ ಸರ್ವಭೂತಾನಾಂ ಹೃದ್ದೇಶೆ ಅರ್ಜುನತಿಷ್ಠತಿ" ಈ ಮಾತು ಅದಕ್ಕೆ ಪೋಷಕವಾಗಿದೆಯಲ್ಲವೆ?

ಪರಮಾತ್ಮನೇ ಆ ರೀತಿಯಾಗಿ ಭಕ್ತರ ಅನುಗ್ರಹಕ್ಕಾಗಿ ಗುರು ರೂಪವನ್ನುಧರಿಸಿ ಭಕ್ತರ ಸಕಲ ಇಷ್ಟಾರ್ಥಗಳನ್ನು ನೆರವೇರಿಸುತ್ತ ಅವರಿಂದ ಕೈಂಕರ್ಯವನ್ನು ಸ್ವೀಕರಿಸುತ್ತ ಭಕ್ತಪರಾಧೀನನೆಂದು ಮೆರೆಯುತ್ತಿರುವನು. ಆತನೇ ಷಟ್ಸ್ಥಲಬ್ರಹ್ಮ ಮತ್ತು ಆತನು ಅವತರಿಸಿರುವ ಸ್ಥಲ ವೀರಶೈವ ಮತ. ಇವೆರಡರ ವೈಶಿಷ್ಟ್ಯವು ಸಾಮಾನ್ಯತಃ ವಾಚಕರಿಗೆ ಅರಿವಾದರೆ ಶ್ರಮಸಾರ್ಥಕವಾದಂತೆ.



# ಶಿವಾನುಭವ ಸಂಘಟನೆ

(ಲೇಖಕರು:— ಶ್ರೀ ಶಿವಾನಂದ ಸ್ವಾಮಿಗಳು ಗವಿಮಠ, ತೆಗ್ಗಿಹಳ್ಳಿ ತಾ. ಇಂಡಿ)



ಇದರ ಬಗ್ಗೆ ಸಂಪಾದಕರು ಅಗಸ್ಟ ಸಂಚಿಕೆಯಲ್ಲಿ ಬರೆದಿದ್ದಾರೆ. ಆದರೂ ಅವರ ಅಭಿಪ್ರಾಯಕ್ಕೆ ಸಹೃದಯದಿಂದ ಅನುಮೋದಿಸುವದು ನಮ್ಮ ಕರ್ತವ್ಯವಾಗಿದೆ ಎಂದೆನಿಸಿ ಇದನ್ನು ಬರೆಯಲಿಕ್ಕೆ ಕೈ ಹಾಕಿದ್ದೇವೆ. ಜೂನ ತಿಂಗಳ ಸಂಚಿಕೆಯಲ್ಲಿ ನಮ್ಮ ಸಂಪಾದಕರಿಗೆ "ವಚನ ಶಾಸ್ತ್ರಪ್ರಪಿತಾಮಹ" ಎಂದು ಹೆಸರು ಒಬ್ಬರು ಕೊಟ್ಟಿದ್ದು ಸಮಂಜಸವಾಗಿದೆ. ೮೦೦ ವರ್ಷಗಳ ಹಿಂದೆ ತಮ್ಮ ಮಹಾ ಶರಣರು ತಪಸ್ಪ್ರಭಾವದಿಂದ ವೇದಕ್ಕೂ ಅಧಿಕವಾದ ವಚನ ವಾಙ್ಮಯವನ್ನು ಕನ್ನಡ ನಾಡಿನ ಶ್ರೇಷ್ಠತೆಯನ್ನು ವ್ಯಕ್ತಗೊಳಿಸಲೋಸುಗ ಬರೆದು ಹಾಡಿ ಹೋದರು. ಕೆಲ ಕಾಲದನಂತರ ಅದು ಮೂಲೆ ಗುಂಪಾಗಿ ಎಲ್ಲೋ ಹೇಳ ಹೆಸರಿಲ್ಲದೆ ಬಿದ್ದು ಬಿಟ್ಟಿತ್ತು. ಏನೋ ಕನ್ನಡಿಗರ ಸುದೈವಕ್ಕೆ ರಾವಬಹಾದ್ದೂರ ಹಳಕಟ್ಟಿಯವರು ಈಗಿನ ಸಾಧಾರಣೆಯ ಕಾಲದಲ್ಲಿ ಅವುಗಳನ್ನು ಶೋಧಿಸಿ ಪದ್ಧತಿಯ ಪ್ರಕಾರ ಜೋಡಿಸಿ ಮುದ್ರಿಸಿ ಪುಸ್ತಕ ರೂಪದಿಂದ ಪ್ರಸಿದ್ಧಿಸಿದರು. ಅದು ಪುನಃ ಕನ್ನಡ ನಾಡಿನಲ್ಲಿ ದಿವ್ಯವಾದ ವಚನ ಸಾಹಿತ್ಯವು ಬೆಳಗಲಿಕ್ಕೆ ಹತ್ತಿ ಈಗ ಹಳ್ಳಿಹಳ್ಳಿಗಳಲ್ಲಿ ಮನೆಮನೆಗಳಲ್ಲಿ ಪಟ್ಟಣಗಳಲ್ಲಿ ಅವುಗಳನ್ನೇ ಹೆಚ್ಚಾಗಿ ಬಳಸುತ್ತ ನಡೆದಿದ್ದಾರೆ. ಈ ಸೇವೆಯಲ್ಲಿ ಅವರು ಈಗ ಸಮಗ್ರ ತಮ್ಮ ೩೦ ವರ್ಷ ಆಯುಷ್ಯವನ್ನು ಸವಿಸಿದ್ದಾರೆ. ಇದಕ್ಕೆ ಅವರು ಯಾರ ನೆರವನ್ನು ಕೇಳಲಿಲ್ಲ. ತಮ್ಮ ವಕೀಲ ವೃತ್ತಿಯನ್ನು ತ್ಯಾಗಮಾಡಿ ಕೀರ್ತಿ, ಹೆಸರು, ಜಯಜಯಕಾರಗಳಿಗೆ ಆಶಿಸದೆ ಸಾವಧಾನದಿಂದ ಈಗಿನ ಗದ್ದಲಗಳಿಂದ ದೂರ ಸರಿದು ಈ ಮಹಾಕಾರ್ಯವನ್ನು ಮಾಡುತ್ತ ತಮ್ಮ ತನು ಮನ ಧನಗಳನ್ನೆಲ್ಲ ಅದಕ್ಕಾಗಿ ಸವಿಸುತ್ತಿರುವರು. ಅವರು ನಿಜವಾಗಿ ಈ ಕಾರ್ಯಮಾಡಿ ದಣಿದಿದ್ದರೂ ಯಾರೂ ಅವರ ಕಡೆಗೆ ಲಕ್ಷಹಾಕಿಲ್ಲ. ನಮ್ಮಂಥ ಬಡ ಸನ್ಯಾಸಿಗಳು ಅವರಿಗೆ ಏನು ಸಹಾಯ ಮಾಡಬಲ್ಲೆವು? ಆದರೆ ಅನೇಕ ಶ್ರೀಮಂತರೂ ಅನೇಕ ಶಿರಿವಂತ ಮಠಾಧಿಕಾರಿಗಳೂ ವಿರಕ್ತರೂ ಪಟ್ಟದ ದೇವರು ಮೊದಲಾದವರು ನಿಜವಾಗಿ ಈ

ಕಾರ್ಯಕ್ಕೆ ತನು ಮನ ಧನಗಳನ್ನು ಅರ್ಪಿಸುವದು ಅತ್ಯವಶ್ಯವು. ಈ ವೀರ ಶೈವರ ಜ್ಞಾನ ಭಾಂಡಾರ ವೆನಿಸಿದ ವಚನ ಸಾಹಿತ್ಯವನ್ನು ನಮ್ಮ ಧಾರ್ಮಿಕ ಗುರುಗಳೆನಿಸಿಕೊಳ್ಳುವವರೇ ಈ ಕಾರ್ಯಗಳನ್ನು ಮೊದಲೇ ಮಾಡಿ ಬೇಕಾಗಿತ್ತು ಯಾರೂ ಈ ಕಾರ್ಯವನ್ನು ಮಾಡದಿದ್ದುದನ್ನು ಕಂಡು ಧರ್ಮಾ ಭಿಮಾನಿಗಳಾದ ಈ ಸಂಪಾದಕರು ಭಕ್ತ ವರ್ಗದವರೆನಿಸಿದರೂ ಮಾಡಿ ತೋರಿಸಿದರು. ಇವರಿಗೆ ನಾವು ಏಕೆ ಗುರುವರ್ಗದವರು ಗುರುಗಳು ಎಂದು ಎನ್ನಬಾರದು? ಈಗ ಅವರು ಮುಪ್ಪಿನವರಾಗಿದ್ದಾರೆ. ಆದಗೂ ಅವರು ಮುಂದೆಈ ಕಾರ್ಯವು ಹೇಗೆ ಇನ್ನು ಹೆಚ್ಚೆಚ್ಚು ವ್ಯವಸ್ಥಿತವಾಗಿ ಕನ್ನಡಿಗರ ಪೂರ್ಣ ಉಸಿರಾಗುವಂತೆ ಮಾಡಬೇಕೆಂದು ಮನಸ್ಸುಳ್ಳವ ರಾಗಿದ್ದಾರೆ. ಅಲ್ಲದೆ ವೀರಶೈವರಿಗೆ ಸಂಬಂಧಪಟ್ಟ ಇನ್ನೂ ಅನೇಕ ಗ್ರಂಥ ಗಳು ಪ್ರಕಾಶಕ್ಕೆ ಬರಬೇಕಾಗಿವೆ ಎಂತೆ. ಈ ಎಲ್ಲ ಕಾರ್ಯಗಳು ವಯ ಸ್ಸಾದ ಅವರ ಮೇಲೆ ಹಾಕುವದೆಂದರೆ ಸರಿ ಎನಿಸಲಾರದು. ಅದಕ್ಕೆ ಎಲ್ಲ ಕನ್ನಡಿಗರೂ ಅದರಲ್ಲಿ ವೀರಶೈವರು ಅದರಲ್ಲಿ ಹೆಚ್ಚಾಗಿ ಗುರುವರ್ಗ ವೆನಿಸಿಕೊಳ್ಳುವವರು ಈ ಅವರ ಕಾರ್ಯಕ್ಕೆ ತನು ಮನ ಧನಗಳಿಂದ ನೆರವನ್ನು ಈಯ ಬೇಕಾಗಿ ನಾವು ಕೋರುತ್ತೇವೆ. ಅಂದರೆ ನಮ್ಮ ಹಿಂದಿನ ಶರಣರ ಸಾಹಿತ್ಯವು ಉಳಿದು ಬಾಳಿ ಬೆಳೆದು ನಾಡಿನಲ್ಲಿ ಕೀರ್ತಿ ಜ್ಞಾನ ನೀತಿ ಧರ್ಮಗಳನ್ನು ನೀಡುತ್ತ ಪ್ರಕಾಶ ಮಾನವಾಗಿ ಜೀವಿಸುವದರಲ್ಲಿ ಸಂದೇಹವಿಲ್ಲ.

ಕಾರಣ ಎಲ್ಲ ಕನ್ನಡಿಗರು ಮುಕ್ತಹಸ್ತದಿಂದ ಅವರಿಗೆ ಧನಸಹಾಯ ವನ್ನು ನೀಡಿ ನಿಧಿಯನ್ನು ಸಂಗ್ರಹಿಸಿ ಕೊಡಬೇಕು. ನಾವು ಉಪಯೋಗ ವಿಲ್ಲದವರಿಗೆ ಅನೇಕ ನಿಧಿಯನ್ನು ಸಂಗ್ರಹಿಸಿದ್ದೇವೆ. ಇದು ಯಾವಾಗಲೂ ಉಳಿಯ ಬೇಕಾದ ಸಾಹಿತ್ಯ ಇದು ಮುಂದಿನ ನಮ್ಮ ಪೀಳಿಗೆಗೂ ಉದ್ಧಾರ ಮಾಡುವ ಸಾಹಿತ್ಯ, ಇದಕ್ಕಾಗಿ ಹೆಚ್ಚಾಗಿ ಕೂಡಿಸಿ ಒಂದು ಯೋಗ್ಯ ಅಭಿಮಾನಿಗಳ ಕಮೀಟಿಯನ್ನು ಸ್ಥಾಪಿಸಿ ವಚನ ಸಾಹಿತ್ಯವು ನಾಡಿನ ತುಂಬೆಲ್ಲ ಇನ್ನೂ ಹೆಚ್ಚಾಗಿ ಪ್ರಚಾರವಾಗುವಂತೆ ಒಳ್ಳೇ ಸುಸಂಘಟಿತ ವಾಗಿ ಕಾರ್ಯವನ್ನು ಕೈಕೊಳ್ಳುವದು ಯೋಗ್ಯವೆಂದು ನನ್ನ ಅಭಿಪ್ರಾಯ. ಅದಕ್ಕಾಗಿ ಎಲ್ಲ ಸ್ವಾಮಿಗಳು ಶ್ರೀಮಂತರು ಸುಶಿಕ್ಷಿತರು ಅಧಿಕಾರಿಗಳು ಶಿಕ್ಷಕರು ಮುಂದೆ ಬಂದು ಈ ಕಾರ್ಯವನ್ನು ಕೈಕೊಳ್ಳಬೇಕೆಂದು ವಿನಂತಿಸು ವೆನು. ಈ ಕಾರ್ಯಗಳನ್ನು ನಮ್ಮ ಸಂಪಾದಕರು ಸದಾ ಮಾಡುತ್ತಿದ್ದುದ

ರಿಂದ ಒಬ್ಬ ಲೇಖಕರು ಇವರಿಗೆ ವಚನ ಪ್ರಪಿತಾಮಹ ಎಂದು ಬಿರುದು ಕೊಟ್ಟಿದ್ದು ಬಹು ಯೋಗ್ಯವೆಂದೇ ಹೇಳಬೇಕಾಗಿದೆ. ಅದರಂತೆ ತಾವೂ ಈ ಕಾರ್ಯವನ್ನು ಮಾಡಿ ಇಂಥ ಹೆಸರು ಪಡೆದು ಕೀರ್ತಿ ಶಾಲಿಗಳಾಗಬೇಕೆಂದು ಈ ಲೇಖಕನ ಹಂಬಲವದೆ.

---

# ಉಪಾಧ್ಯಾಯರೂ, ಸಾಹಿತ್ಯಸೇವೆಯೂ

( ಲೇಖಕರು:- ಶ್ರೀ. ಮ. ಮಲ್ಲಪ್ಪ ಜ್ಞಾನಮಂದಿರ ಹಲಗೂರು. )



*The teachers are the masters of the future* (*Surendranath Banergee.*)

*Literature is fundamentally an expression of life through the medium of language (Hudson.)*

ವಿಶ್ವದಲ್ಲಿ ಉಪಾಧ್ಯಾಯರಿಗೂ ಒಂದು ಸ್ಥಾನವಿದೆ. ಭಾವೀ ಜನಾಂಗವನ್ನು ತಯಾರು ಮಾಡುವ ಗುರುತರ ಜವಾಬದ್ದಾರಿಯು ಉಪಾಧ್ಯಾಯರಿಗೆ ಸೇರಿದೆ. ಒಂದು ದೇಶದ ಉನ್ನತ್ಯಾವನತಿಯು ಇವರ ಮೇಲೆ ಬಿದ್ದಿದೆ. ಒಂದು ಕಡೆ ವಿದ್ಯಾರ್ಥಿಗಳಿಗೆ ಪಾಠ ಹೇಳುವುದು ಮತ್ತೊಂದು ಕಡೆ ಸ್ವಂತ ವ್ಯಾಸಂಗ ಮಾಡುವದು ಇವರ ಕೆಲಸವಾಗಿದೆ. ಜನ ಜೀವನದ ಪ್ರತಿಬಿಂಬವು ಸಾಹಿತ್ಯವಾಗಿದೆ. ಸಾಹಿತ್ಯವು ಎಂದರೆ ಸವಿನುಡಿಯ ರಾಶಿಯು, ಸುಭಾಷಿತ ಭಾಂಡಾರವು. ಮಾನವ ಕುಲದ ಬಾಳ್ಮೆಯ ರಸಾಯನವು, ನಾಡಿನ ಸೌಭಾಗ್ಯದ ಪ್ರಸಾದವು ಸಾಹಿತ್ಯವು ಆಗಿದೆ. ಶರಧಿಯು ರನ್ನಗಳ ಗಣಿಯಾಗಿರುವಂತೆಯೇ ಸಾಹಿತ್ಯವು ಜ್ಞಾನದ ಗಣಿಯು. ಆತ್ಮಜ್ಞಾನ, ಧರ್ಮ, ನೀತಿಸಾರ, ಕಾಮ ಮೋಕ್ಷಕ್ಕೆ ಸಾಧನೆಯು ಸಾಹಿತ್ಯವು. ಸಾಹಿತ್ಯವು ಸಾವರಿಸಿಕೊಳ್ಳದಿದ್ದರೆ ಷಡ್ರಸವಿಲ್ಲದ ಅಡಿಗೆಯಂತೆ ಬಾಳು, ಅರುಚಿಯು. ಸಮಾಜದ ಸ್ಥಿತಿಗತಿಯನ್ನು ಸಾಹಿತ್ಯವು ಪ್ರತಿಬಿಂಬಿಸುವುದು ಎಂದು ಸ್ವಾಮಿ ವಿವೇಕಾನಂದರು ನುಡಿ

ದಿದ್ದಾರೆ. ಸಾಹಿತ್ಯದ ಸೇವೆಯು ಮಾನವನ ಹಕ್ಕು ಎಂಬುದನ್ನು ಸರ್ವರೂ ಅರಿತುಕೊಳ್ಳಲಿ. ಸಾಹಿತ್ಯ ಜೀವಿಗಳಾಗುವುದು ಮಾನವನ ಧರ್ಮವು. ಸಾಹಿತ್ಯ ಸೇವೆಗೆ ಹೊರಡುವವರು ಪರಮಾರ್ಥದ ರಮಾನ್ನವನ್ನು ಸವಿದು ನೋಡಿರಬೇಕು. ಗಾಳಿಯನ್ನು ಉಂಡು ಧರ್ಮಕ್ಕಾಗಿ ಉಳಿಯುವುದು ಸೇವೆಯ ಶಲಾಕವಾಗಿದೆ. ಸಾಹಿತ್ಯಸೇವೆಯೂ ಕೂಡ ಒಂದು ಬಗೆಯ ದೇಶಸೇವೆ. ದೇಶಸೇವೆಯೇ ದೇವರ ಸೇವೆ. "ದೇವರ ರಾಜ್ಯವು ಮಕ್ಕಳ ರಾಜ್ಯವು. ಮಗುವಿನ ಭಾವನೆಯಿಲ್ಲದವನಿಗೆ ದೇವರ ರಾಜ್ಯವಿಲ್ಲ" ಎಂದು ಏಸು ಕ್ರಿಸ್ತನು ಹೇಳಿರುವದನ್ನು ನೋಡಿದರೆ ಮಕ್ಕಳ ಸೇವೆಯನ್ನು ಮಾಡುತ್ತಿರುವ ಉಪಾಧ್ಯಾಯರೂ ಸಹ ದೇವರ ಸೇವೆಯನ್ನು ಮಾಡುತ್ತಿರುವುದು ಗೋಚರವಾಗುತ್ತಿದೆ. ದೇಶಸೇವೆಯನ್ನು ಉಪಾಧ್ಯಾಯರು ಗುಪ್ತರೀತಿಯಲ್ಲಿ ಮಾಡುತ್ತಿರುವುದು ಇವರ ಕರ್ತವ್ಯಪರಾಯಣತೆಯಲ್ಲಿ ಅಡಕವಾಗಿದೆ. ಭಾಷಾಸೇವೆಯೆಂಬುದು ಅಳಿಲುಶಕ್ತಿ ಸುದಾಮನ ಭಕ್ತಿಯಹಾಗೆ. ಸಾಹಿತ್ಯ ಕ್ಷೇತ್ರದಲ್ಲಿ ಇದು ಒಂದು ತರದ ಆಶ್ರಮ ಧರ್ಮ, ಕರ್ತವ್ಯ ಕರ್ಮ, ವೀರತಪಸ್ಸು. ಈ ಕಾರ್ಯಭಾರವು ಸಾಹಿತ್ಯ ದೇವಿಯ ಸಂತಾನಕ್ಕೆ ಸೇರಿದೆ. ತಾಯ್ನುಡಿಯ ಅಭಿಮಾನವನ್ನು ಅರಳಿಸುವುದು ಎಲ್ಲರಲ್ಲಿಯೂ ಸಾಗಬೇಕು.

ಕನ್ನಡವು ಒಂದು ಜೀವಭಾಷೆಯು, ರಸವಾಹಿನಿಭಾಷೆಯು. ಪತ್ರಿಕಾ ಬೇಸಾಯ, ಗ್ರಂಥರಚನೆ ಉಪನ್ಯಾಸ ಪುರಾತನ ಗ್ರಂಥಗಳ ಪರಿಶೋಧನೆ ಓಲೆಗರಿಯಿಂದ ಪ್ರತಿ ಎತ್ತುವುದು ಇತ್ಯಾದಿ ಬಗೆಗಳಿಂದ ಸಾಹಿತ್ಯ ಸೇವೆ ಮಾಡುವುದು. ಪ್ರೊಫೆಸರೊಬ್ಬರು ತಮ್ಮ ವೃತ್ತಿಯನ್ನು ಬಿಟ್ಟು ಪತ್ರಿಕಾ ಬೇಸಾಯವನ್ನು ಕೈಗೊಂಡು ಸಾಹಿತ್ಯೋದ್ಯಾನ ವನವನ್ನು ಮನೋರಂಜಕವಾಗಿ ಮಾಡಿದರು. ಮಾಧ್ಯಮಿಕ ಶಾಲೋಪಾಧ್ಯಾಯರೊಬ್ಬರು ತಮ್ಮ ಹುದ್ದೆಗೆ ತಿಲಾಂಜಲಿಯನ್ನಿತ್ತು ಸ್ವತಂತ್ರವಾಗಿ ಸಾಹಿತ್ಯ ಪ್ರಚಾರ ಕಾರ್ಯವನ್ನು ಕೈಗೊಂಡರು. ಪ್ರಾಥಮಿಕ ಶಾಲಾ ಮಾಸ್ತರೊಬ್ಬರು ತಮ್ಮ ವೃತ್ತಿಯನ್ನು ತ್ಯಜಿಸಿ ಸಾಹಿತ್ಯ ಸಂಶೋಧನೆ ಮತ್ತು ಗ್ರಂಥರಚನಾದಿ ಕಾರ್ಯಗಳನ್ನು ಕೈಗೊಂಡುದರ ಜೊತೆಗೆ ಕನ್ನಡಮ್ಮನ ಮೂರ್ತಿಸ್ವರೂಪ ಸ್ಥಾಪನೆಗೆ ಹಲವಾರು ಬಗೆಯಲ್ಲಿ ದುಡಿಯುತ್ತಿರುವರು. ಕೇವಲ ನಾಲ್ಕುಗೋಡೆಗಳ ಮಧ್ಯದಲ್ಲಿ ಐದುಗಂಟೆಗಳ ಕಾಲ ನಡೆಯುವ ಬೋಧೆಯು ಮಾತ್ರವೇ ತಮ್ಮ ಕರ್ತವ್ಯವೆಂದುಕೊಂಡು

ತಟಸ್ಥರಾಗಿ ನಿಲ್ಲದೆ, ಗ್ರಂಥರಚನೆಯ ಮೂಲಕ ಜನಾಂಗಕ್ಕೆ ಜ್ಞಾನಾಂಜನವನ್ನು ಹಚ್ಚಿ, ಸಾಹಿತ್ಯಸೇವೆ ಮಾಡಿದವರು ಇಂದು ಇಲ್ಲವೆಇಲ್ಲ. ನವೀನ ಕನ್ನಡ ಸಾಹಿತ್ಯಾಚಾರ್ಯರಾದ ಶ್ರೀಯವರು ಉಪಾಧ್ಯಾಯ ವರ್ಗಕ್ಕೆ ಸೇರಿದವರು ಎಂಬುದು ವಿದಿತ ಗೋಚರವಾದರೆ ಕನ್ನಡ ಸಾಹಿತ್ಯಕ್ಕೆ ಕೀರ್ತಿ ಕಿರೀಟವನ್ನಿಟ್ಟು ಅಲಂಕರಿಸಿದವರು ಉಪಾಧ್ಯಾಯರೇ ಎಂಬುದು ಗೊತ್ತಾಗುತ್ತದೆ. ಕನ್ನಡನಾಡಿನ ಪತ್ರಿಕೆಗಳಾದ ಪ್ರಬುದ್ಧ ಕರ್ನಾಟಕ, ವಿದ್ಯಾದಾಯಿನಿ, ಸುಬೋಧಾದಿ ಪತ್ರಿಕೆಗಳು ಉಪಾಧ್ಯಾಯ ವೃಂದದ ಕೈವಾಡದಿಂದಲೇ ನಡೆಯುತ್ತಿವೆ. ಜಗದ್ವಿಖ್ಯಾತರಾದ H G ವೆಲ್ಸರವರೂ ಸಹ ಅಧ್ಯಾಪಕರಾಗಿದ್ದುದು ಸಕಲರಿಗೂ ತಿಳಿದರೆ ಅವರ ಸಾಹಿತ್ಯಸೃಷ್ಟಿಯಿಂದ ಜನತೆಗೆ ಮಹದುಪಕಾರವಾಗಿ ಯಶೋಕಿರೀಟ ಧಾರಣೆ ಮಾಡಿರುವುದೇ ಇಡೀ ಉಪಾಧ್ಯಾಯ ವರ್ಗಕ್ಕೆ ಹಿರಿಹಿಗ್ಗು ಹಾಗೂ ಮಹತ್ತಾದ ಮನ್ನಣೆಯು ಬರುತ್ತದೆ.

ನಗರ ಮತ್ತು ಹಳ್ಳಿಗಳಲ್ಲಿರುವ ಉಪಾಧ್ಯಾಯರು ತಾಯ್ನುಡಿಯ ಉಪಾಸನೆಯನ್ನು ಮಾಡಲು ಅವಕಾಶವಿದೆ. ಕನ್ನಡಿಗರಿಗೆ ಕನ್ನಡದಿಂದಲೇ ಮುಕ್ತಿಯಾಗಬೇಕೆಂಬ ಅಂಶವನ್ನು ನೆನಪಿನಲ್ಲಿಟ್ಟುಕೊಂಡು ಕನ್ನಡದ ಪ್ರಗತಿಗೆ ಮುನ್ನುಗ್ಗಬೇಕು. ಕನ್ನಡ ಸಂಗೀತ, ಕನ್ನಡ ಚಲನ ಚಿತ್ರ, ಕನ್ನಡನಾಟಕಗಳಿಗೆ ಪ್ರೋತ್ಸಾಹವನ್ನು ಕೊಡಬೇಕು. ಜೀವನದಲ್ಲಿ ಬಳಸುವ ಭಾಷೆಯು ರಸಗನ್ನಡ ವಾಗಬೇಕು. ಕನ್ನಡ ಗ್ರಂಥಕಾರರಿಗೆ ಪ್ರೋತ್ಸಾಹಕೊಡಬೇಕು. ಅಂಗ್ಲೇಯ ಭಾಷೆಯ ಅಗ್ಗದ ಎಂಟು ಆಣೆಯ ಪುಸ್ತಕಕ್ಕೆ ಗಮನಕೊಡದೆ ಅಗ್ಗಾಗಿ ಸಿಕ್ಕುವ ಒಂದು ರೂಪಾಯಿಯ ಕನ್ನಡ ಪುಸ್ತಕವನ್ನೆ ಕೊಂಡುಕೊಳ್ಳುವದಲ್ಲದೆ, ಪ್ರೋತ್ಸಾಹವನ್ನೂ ಕೊಡಬೇಕು. ಬೋಧನೆಯಲ್ಲಿ ಕನ್ನಡ ಕವಿಗಳ ಶ್ರೇಷ್ಠೋಕ್ತಿಯನ್ನು ಉಪಯೋಗಿಸಬೇಕೇ ಹೊರತು ಪರಭಾಷೆಯಲ್ಲಿ ಶ್ರೇಷ್ಠೋಕ್ತಿಯನ್ನು ಉಪಯೋಗಿಸುವುದೂ ಬೇಡ. ಅಲ್ಲಲ್ಲಿ ಕನ್ನಡ ಕೂಟಗಳನ್ನು ಏರ್ಪಡಿಸಿ ಅವುಗಳ ಆಶ್ರಯದಲ್ಲಿ ಪತ್ರಿಕೆಗಳನ್ನು ಹೊರಡಿಸಿ ಅದರ ಮೂಲಕ ಕನ್ನಡತಾಯಿಗೆ ಅಳಿಲು ಸೇವೆಯನ್ನಾಗಲೀ ಇಲ್ಲವೇ ಅಂಜನೇಯ ಸೇವೆಯನ್ನಾಗಲೀ ಅರ್ಪಿಸಲು ಅವಕಾಶವಿದೆ. ಮಾಧ್ಯಮಿಕ ಶಾಲೆಯಲ್ಲಿಯೂ ಪ್ರೌಢಪಾಠಶಾಲೆಯಲ್ಲಿಯೂ ವಿಶ್ವವಿದ್ಯಾನಿಲಯದಲ್ಲಿಯೂ ಕನ್ನಡ ತಾಯಿಯ ಸೇವೆಯನ್ನು ಮಾಡಲು ಪತ್ರಿಕೆಗಳನ್ನೇ ಕೆಲವು ಕಡೆ ಸಾಧನವನ್ನಾಗಿ

ಮಾಡಿಕೊಂಡಿರುವರು. ಮನೆಮಾತು. ಬೀದಿಮಾತು ಕನ್ನಡವಾಗುವಂತೆ ಯತ್ನಿಸಬೇಕು. ಕಿರಿಯರಿಗೂ ಸಾಹಿತ್ಯ ದೇವಿಯ ಅರ್ಚನೆ ಆರಾಧನೆಗೆ ಅವಕಾಶವನ್ನು ಕಲ್ಪಿಸಿಕೊಡುವದು ಹಿರಿಯರ ಕರ್ತವ್ಯ ಎಂಬುದನ್ನು ಅರಿತುಕೊಂಡು ಅದಕ್ಕೆ ಅವಕಾಶವನ್ನು ಮಾಡಿಕೊಡಬೇಕು. ಕನ್ನಡ ಉದ್ಯಾನವನವನ್ನು ಸೊಂಪಾಗಿ, ರಮ್ಯವಾಗಿ ಬೆಳೆಸಿದವರು ಬೆಳೆಸುತ್ತಿರುವರು ಉಪಾಧ್ಯಾಯರೇ ಆಗಿರುವರು.

ನಮ್ಮನಾಡು ಹಳ್ಳಿಗಳ ಬೀಡು, ಗ್ರಾಮಗಳ ನಿಧಿಯು. ಅತಏವ ಹಳ್ಳಿಯ ಉದ್ಧಾರವೇ ನಾಡಿನ ಉದ್ಧಾರವು. ಗ್ರಾಮದ ಸರಸ್ವತಿಯು ಉಪಾಧ್ಯಾಯನು. ಉಪಾಧ್ಯಾಯರ ಜೀವನದ ಪ್ರತಿಬಿಂಬವೇ ಗ್ರಾಮ ಜೀವನದ ಪ್ರತಿಬಿಂಬವು. ದೇಶದ ಇತಿಹಾಸ ಮಂದಿರವನ್ನು ದಿವ್ಯವಾಗಿ ಭವ್ಯವಾಗಿ ಕಟ್ಟಲು ಹಳ್ಳಿಯ ಉಪಾಧ್ಯಾಯರಿಗೆ ಅವಕಾಶವಿದೆ. ಪರಭಾಷೆಯ ಮೋಹಕ್ಕೆ ಉಪಾಧ್ಯಾಯರು ಬೀಳದೆಯೂ ಶಾಲಾಮಕ್ಕಳು ಮತ್ತು ಗ್ರಾಮವಾಸಿಗಳು ಪರಭಾಷಾ ಮೋಹಬಲೆಗೆ ಬೀಳದಂತೆ ಏರ್ಪಾಡು ಆಗಬೇಕು. ಪುಣ್ಯಭೂಮಿಯಲ್ಲಿ ಉದಯಿಸಿದ ದಿವ್ಯ ಭಾಷೆಯು ಕನ್ನಡವು ಎಂಬುದನ್ನು ಗ್ರಾಮವಾಸಿಗಳಿಗೆ ಮಂದಟ್ಟು ಮಾಡಿಸಬೇಕು. ತ್ರಿಮತಾಚಾರ್ಯರು ಉದಯಿಸಿ, ಜ್ಯೋತಿಪ್ರಕಾಶವಾಗಿ ಹೊಳೆದು ಹೋಗಲು ಆಸರೆಯನ್ನು ನೀಡಿದ ನಾಡು ಕನ್ನಡ ನಾಡು ಎಂಬುದು ಅವರಿಗೆ ಅರುಹಾಗಬೇಕು. ಶಾಲಾಮಕ್ಕಳು ಮುಂದೆ ಶಕ್ತಿವಂತರಾಗಿ, ಧೀಮಂತರಾಗಿ ನಿಲ್ಲುವಂತೆ ಶಿಕ್ಷಣವನ್ನು ಕೊಡಬೇಕು. ಕನ್ನಡ ನಾಡಿನ ಕನ್ನಡಿಗರ ಕನ್ನಡ ಭಾಷೆಯ ಕನ್ನಡ ತಾಯಿಯ ಮೇಲೆ ಮಕ್ಕಳ ಅಭಿಮಾನ ಅಕ್ಕರತೆಯು ಉಂಟಾಗಲು ಸನ್ನಿವೇಶವನ್ನು ಬೇರೂರಿಸಬೇಕು. ಕನ್ನಡ ಪ್ರಗತಿಯನ್ನು ವಿಶಾಲ ದೃಷ್ಟಿಯಿಂದ ನೋಡುವಂತಾಗಬೇಕು. ಭಜನಾಮಂದಿರ, ಸಂಸ್ಕೃತಿ ಪ್ರಸಾರ, ಸಮಿತಿ ಇತ್ಯಾದಿಗಳಲ್ಲಿ ಕನ್ನಡ ಸಾಹಿತ್ಯಬೆಳೆವಣಿಗೆಗೆ ಹಾದಿ ಹಾಕಿ ಕೊಡಬೇಕು. ಜಾತಿಭೇದವಿಲ್ಲದೆ, ಲಿಂಗಭೇದವಿಲ್ಲದೆ ದೇವೀರಥೋತ್ಸವವನ್ನು ಎಲ್ಲರೂ ಏಕೀಭಾವನೆಯಿಂದ ನಡೆಯಿಸಲು ವ್ಯವಸ್ಥಿತ ತಳಹದಿಯನ್ನು ಹಾಕಬೇಕು.

ಒಂದು ನಾಡಿನ ಉನ್ನತ್ಯಾವನತಿ, ಕೀರ್ತಿ ಅಪಕೀರ್ತಿ, ಕೀಳು ಮೇಲುಗಳು ಅಲ್ಲಿನ ರಾಷ್ಟ್ರಶಿಲ್ಪಿಗಳಾದ ಸಾಹಿತಿಗಳ ಮೇಲೆ ಹೆಚ್ಚಿಗೆ ಅವಲಂಬಿಸಿರುತ್ತದೆ. ನಾಡಿನ ಅನಂತ ಮುಖವನ್ನು ಅನಂತ ನೋಟದಿಂದ ನೋಡಿದ

ವೀಕ್ಷಕನು ಸಾಹಿತಿಯು. ಸಾಹಿತಿಯು ನಂದುವ ನಂದಾ ದೀವಿಗೆಗೆ ಎಣ್ಣೆಯನ್ನು ಎರೆದು ಜೀವಧಾರಣ ಮಾಡಿಸಬಲ್ಲನು.

ನಿರಾಶಾ ವಾತಾವರಣದಲ್ಲಿ ಜ್ಯೋತಿಯನ್ನು ಬೆಳಗಿಸುವ ಪ್ರದೀಪ್ತ ಕನು ಸಾಹಿತಿಯು. ಇದಕ್ಕೆ ಇತಿಹಾಸವೇ ನಿದರ್ಶನವಾಗಿದೆ. 'ಸ್ವರಾಜ್ಯವೇ ನನ್ನ ಅಜನ್ಮಸಿದ್ಧ ಹಕ್ಕು' ಎಂದು ಸಾರಿದ ತಿಲಕರ 'ಕೇಸರಿ'ಯು ಸಾಹಿತ್ಯ ಸೌರಭವೇ ಸಾಕಾಗಿದೆ. 'ಯಂಗ್ ಇಂಡಿಯಾ, ಹರಿಜನ'ದ ಮೂಲಕ ಸಾಹಿತ್ಯದ ಕಸ್ತೂರಿಯನ್ನು ಕೊಟ್ಟ ಗಾಂಧೀಜಿಯವರು ಇಂದು ಎಲ್ಲರ ಮನದಲ್ಲಿ ಹೊಳೆದಾಡುತ್ತಿರುವುದು ಸಾಹಿತ್ಯದ ಬೆಲೆಯನ್ನು ತಿಳಿಸುವುದು. ಮಾನವ ಬಾಳಿನ ಗುರಿಯು ಸೇವೆಯು. ಸಾಹಿತಿಯ ಉಸಿರು ಸೇವೆಯಂತೆ! ಉಪಾಧ್ಯಾಯನ ಬದುಕು ಬಾಳು ಸೇವೆಗಾಗಿ ಮುಡುಪಾಗಿದೆಯಂತೆ! ಹೃದಯಂಗಮವಾಗಿ ತಿಳುವಳಿಕೆ ಕೊಡುವವನು ಉಪಾಧ್ಯಾಯನಾಗಿದ್ದಾನೆ. ನಿಚ್ಚ ತಿಳಿವಿನ ಭಂಡಾರವು ಸಾಹಿತ್ಯವು. ಈ ಭಂಡಾರವನ್ನು ಉಪಯೋಗಿಸಿಕೊಂಡೇ ಉಪಾಧ್ಯಾಯನು ಕರ್ತವ್ಯನಿರತನಾಗಬೇಕು.

ಸಾಹಿತ್ಯದ ರನ್ನ ಮಣಿ ಮಾಲೆಯಲ್ಲಿ ಜನಪದ ಸಾಹಿತ್ಯವು ಒಂದು ರನ್ನವು. ಅರುಣೋದಯ ಸಮಯದಲ್ಲಿ ಮಧ್ಯಾಹ್ನದ ವೇಳೆಯಲ್ಲಿ ಸಂಧ್ಯಾಕಾಲದಲ್ಲಿ, ಮನೆಯ ಮೂಲೆಯಲ್ಲಿ, ಹೊಲಗದ್ದೆಗಳಲ್ಲಿ ಮನೆಯ ಮುಂಭಾಗದಲ್ಲಿ, ಕೆರೆಭಾವಿಗಳ ಹತ್ತಿರದಲ್ಲಿ ರಾಗಿಯ ಕಲ್ಲನ್ನು ಹಿಡಿದು ತಿರುಗುತ್ತಿರುವರು, ಕಳೆ ಕೀಳುತ್ತಿರುವರು, ನೀರನ್ನು ಸೇದುತ್ತ ಹೆಂಗಸರು ಹಾಡುತ್ತಿರುವುದನ್ನು ಅಲ್ಲಲ್ಲಿ ಕೇಳುತ್ತೇವೆ. ಇಂತಹ ಉತ್ಕೃಷ್ಟ ಸಾಹಿತ್ಯ ಸಂಗ್ರಹಮಾಡಿ, ಅದನ್ನು ಪ್ರಕಟಿಸಿ ಪುಣ್ಯಭಾಗಿಗಳಾಗುವದು ಗ್ರಾಮೋಪಾಧ್ಯಾಯರ ಆದ್ಯ ಕರ್ತವ್ಯವಾಗಿರುತ್ತದೆ. ಇದು ಸುಲಭವಾಗಿ ಸಾಗಲು ದಾರಿಯಿರುತ್ತದೆ. ಮೂಲೆಯಲ್ಲಿ ಬಿದ್ದು ಗೆದ್ದಲು ತಿನ್ನುತ್ತಿರುವ ಓಲೆಯ ಗ್ರಂಥಗಳನ್ನೂ, ಪುರಾತನ ಪುಸ್ತಕಗಳನ್ನೂ ಉದ್ಧಾರಮಾಡಿ ಪ್ರಕಾಶಕ್ಕೆ ತರುವ ಉನ್ನತ ಕಾರ್ಯವು ಹಳ್ಳಿಯ ಉಪಾಧ್ಯಾಯರಿಗೇ ಸೇರಿದೆ. ಶಿಲಾಶಾಸನಗಳಲ್ಲಿಯೂ, ತಾಮ್ರ ಅಥವಾ ಇನ್ನಿತರ ಲೋಹಶಾಸನದಲ್ಲಿಯೂ ಇರುವುದನ್ನು ಪ್ರಕಟಿಸುವ ಶ್ರೇಷ್ಠ ಕಾರ್ಯವು ಇವರ ಪಾಲಿಗೆ ಬಿದ್ದಿದೆ. ಪ್ರಾಚೀನ ಹಾಗೂ ಅರ್ವಾಚೀನ ಕಾವ್ಯಗಳನ್ನೂ ಓದಿಸಿ ವಾಚನ ಕಲಾಭಿರುಚಿಯನ್ನು ಗ್ರಾಮವಾಸಿಗಳಲ್ಲಿ ಬೇರೂರುವಂತೆ ಮಾಡುವುದು ನಾಡಹಬ್ಬ.

ಸುಗ್ಗಿಯ ಹಬ್ಬಗಳಲ್ಲಿ ಶಾಲಾ ಮಕ್ಕಳೂ, ಗ್ರಾಮವಾಸಿಗಳೂ ಭಾಗ ವಹಿಸಿ ಕನ್ನಡದ ಗತವೈಭವದಲ್ಲಿ ಕಾಲ ಕಳೆದು, ಆ ಗತವೈಭವಕ್ಕಿಂತಲೂ ಮಿಗಿಲಾದ ಗತವೈಭವವನ್ನು ಪುನಃ ಮೆರೆಯಿಸಲು ಟೊಂಕ ಕಟ್ಟಿ ನಿಲ್ಲು ವಂತೆ ಮಾಡಬೇಕು. ಸ್ಥಳ ಪುರಾಣಗಳನ್ನೂ, ಸ್ಥಳದ ಇತಿಹಾಸವನ್ನೂ ಆಯಾಯ ಗ್ರಾಮದ ಹಿರಿಯರಿಂದ ತಿಳಿದು ಅವುಗಳನ್ನು ಬೆಳಕಿಗೆ ಬರು ವಂತೆ ಮಾಡಬೇಕು. ಉಪಾಧ್ಯಾಯರು ತಮ್ಮ ಕೈದೀಪಗಳನ್ನು ಸಾಹಿತ್ಯಾ ನಲದಿಂದ ಹೊತ್ತಿಸಿಬಿಟ್ಟರೆ, ಪ್ರತಿಯೊಂದು ಹಳ್ಳಿಯ ಶಾಲೆ ಒಂದು ಪರಿ ಷನ್ಮಂದಿರ. ಅಲ್ಲಿಯ ಬಾಲಕರ ಸಭೆಯು ಸಣ್ಣ ಸಾಹಿತ್ಯ ಕೂಟವು. ಗ್ರಾಮ ಶಾಲೆಯ ಕೈ ಬರಹದ ಕನ್ನಡ ಪತ್ರಿಕೆ ಚಿಕ್ಕದೊಂದು ಸಾಹಿತ್ಯ ಪರಿಷತ್ಪ ತ್ರಿಕೆ. ಕನ್ನಡ ಭಾಷೆಯ ಪ್ರಸಾರಕ್ಕೂ, ಜನಜೀವನದ ಸಂಸ್ಕಾರಕ್ಕೂ, ಸಾಹಿತ್ಯ ನಿರ್ಮಾಣಕ್ಕೂ ಗ್ರಾಮದಲ್ಲಿನ ಶಿಕ್ಷಣವೇ ಶಾಶ್ವತವಾದ ತಳ ಹದಿಯು. ಈ ತಳಹದಿಯನ್ನು ಕಟ್ಟತಕ್ಕ ಶಿಲ್ಪಿಗಳು ಗ್ರಾಮದ ತರುಣ ಉಪಾಧ್ಯಾಯರು. ಗ್ರಾಮೋಪಾಧ್ಯಾಯರನ್ನು ತಮ್ಮ ಕಾರ್ಯ ಸಾಧನೆ ಗಾಗಿ ಸಾಹಿತಿಗಳೂ ಸಾಹಿತ್ಯಾಭಿಮಾನಿಗಳೂ ಎಳೆದುಕೊಂಡಾಗ ಮಾತ್ರ ತಮ್ಮ ಧ್ಯೇಯ ಸಿದ್ಧಿಯಾದೀತು! ಸಾಹಿತ್ಯ ಸಮ್ಮೇಳನದ, ಸಾಹಿತ್ಯ ಪರಿ ಷತ್ತಿನ ಉದ್ದೇಶಗಳನ್ನು ಗ್ರಾಮೋಪಾಧ್ಯಾಯರಿಗೆ ಮೊಟ್ಟ ಮೊದಲು ತಿಳಿಸಬೇಕು. ಅನಂತರ ಯೋಗ್ಯ ಪ್ರೋತ್ಸಾಹ ಸಹಾಸದಿಂದ, ತಕ್ಕ ಯತ್ನ ದಿಂದ ಸಾಹಿತ್ಯದೇವಿಯ ಗುರಿಯು ಸಿದ್ಧಿಸೀತು!

# ಅವತಾರ

ಂ(ಲೇಖಕರು— ಶ್ರೀ ಸ್ವಾಮಿ ಶಿವಾನಂದರು ಗವಿಮಠ, ತೆಗ್ಗಿಹಳ್ಳಿ)ಂ



ಯದಾಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ।
ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಂ॥
ಪರಿತ್ರಾಣಾಯ ಸಾಧೂನಾಂ ವಿನಾಶಾಯಚ ದುಷ್ಕೃತಾಂ।
ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇಯುಗೇ॥

“ಧರ್ಮಕ್ಕೆ ಅಳಿಗಾಲ ಬಂದು ಅಧರ್ಮಕ್ಕೆ ಬೆಳೆಗಾಲ ಬಂದಾಗ ಅಧರ್ಮವನ್ನು ಕಿತ್ತೊಗೆದು, ಧರ್ಮವನ್ನು ಸ್ಥಾಪಿಸಲೋಸುಗ. ಮೇಲಿಂದ ಮೇಲೆ ನಾನು ಹೀಗೆ ನನ್ನನ್ನು ಹೊರಗೆ ಕಾಣಿಸಿ ಕೊಳ್ಳು ತ್ತೇನೆ. ಯಾಕಂದರೆ ಸಾಧುಗಳ ರಕ್ಷಣೆಗೆ ದುಷ್ಟರ ಸಂಹಾರಕ್ಕೆ ಮತ್ತು ಧರ್ಮಸ್ಥಾಪನೆಗೆ ನಾನು ಮೇಲಿಂದಮೇಲೆ ಹೀಗೆ ಹುಟ್ಟುತ್ತಿರುವೆನು.” ಈ ಪ್ರಕಾರ ಪರಮಾತ್ಮನು ವಚನಕೊಟ್ಟಿರುವನು. ಇದರ ಮೇಲಿಂದ ನೋಡಲಾಗಿ ಭಾರತದ ಮೇಲೆ ಆತನ ಪ್ರೀತಿ ಎಷ್ಟೆಂದು ಸಹಜ ವ್ಯಕ್ತ ವಾಗುವದು. ಈ ಪ್ರಪಂಚವನ್ನೇ ನಿರ್ಮಿಸಿ ಅದರಲ್ಲಿ ಎಷ್ಟೋ ಖಂಡಗ ಳನ್ನೂ ಅನೇಕ ದೇಶಗಳನ್ನೂ ಸೃಜಿಸಿದನು. ಆದರೆ ಈ ಎಲ್ಲ ದೇಶಗ ಳಲ್ಲಿ ಭರತ ಖಂಡವನ್ನೊಂದನ್ನೇ ಯೋಗ ಭೂಮಿಯನ್ನಾಗಿ ಪುಣ್ಯಭೂಮಿ ಯನ್ನಾಗಿ ತ್ಯಾಗ ಭೂಮಿಯನ್ನಾಗಿ ಮಾಡಿದನು. ಉಳಿದ ಯಾವತ್ತೂ ಖಂಡಗಳಲ್ಲಿಯ ದೇಶಗಳನ್ನೆಲ್ಲ ಬರೇ ಭೋಗಭೂಮಿಗಳನ್ನಾಗಿ ಮಾಡಿ ದ್ದಾನೆ. ಅದಕ್ಕಾಗಿ ಉಳಿದ ಎಲ್ಲದೇಶಗಳಲ್ಲಿ ಅತಿಭೋಗಕ್ಕಾಗಿ ಬೇಕಾ ಗುವ ಶಾಸ್ತ್ರೀಯ ಸಂಶೋಧನಗಳನ್ನೇ ಹೆಚ್ಚೆಚ್ಚಾಗಿ ಮಾಡುತ್ತ ವಿಷಯ ಸುಖ, ಐಹಿಕಸುಖ, ಶರೀರಸುಖಗಳನ್ನು ಹೊಂದಲು ಅತೀವ ಹೆಣಗು ತ್ತಿರುವರು. ಇದಕ್ಕಾಗಿ ಅನ್ಯದೇಶಗಳನ್ನು ತಮ್ಮ ಅಂಕಿತದಲ್ಲಿ ಇಟ್ಟುಕೊ ಳ್ಳಲು ತರತರದ ಬಾಂಬುಗಳಿಂದ ಅಸಂಖ್ಯಪ್ರಾಣಗಳ್ನು ತಕ್ಕೊಳ್ಳುತ್ತಲೇ ಇರುವರು. ಮೊದಲಿನಿಂದಲೂ ಭರತಖಂಡವು ಮಾತ್ರ ಇದಕ್ಕೆ ಆಶಿಸದೆ ಪಾರಮಾರ್ಥದ ಸುಖ ಆತ್ಮಸುಖ ಆಧ್ಯಾತ್ಮಸುಖಗಳನ್ನೇ ಸದಾ ಹುಡುಕು

ತ್ತಿರುವದು. ಯಾಕಂದರೆ ತ್ಯಾಗ ಧರ್ಮ ಸತ್ಯ ಅಹಿಂಸೆ ಅಧ್ಯಾತ್ಮ, ಪರ ಸೇವೆ, ದಾನ, ಯೋಗ ಮೊದಲಾದವುಗಳೇ ಹಿಂದುಸ್ಥಾನದ ಬೆನ್ನೆಲಬು ಗಳು. ಅಥವಾ ಸಂಗೀತ ಇಂಪಾದ ಗಾಯನವು ರಾಜ್ಯಕಾರಣ ಶಾಸ್ತ್ರೀಯ ಸಂಶೋಧನೆ ಐಹಿಕ ವಿಷಯಸುಖಗಳೇ ಆಗಿವೆ. ಹೀಗಂತಲೇ ಅನೇಕ ರಾಜ್ಯಗಳು ಉದಯಿಸಿ ಹೇಳ ಹೆಸರಿಲ್ಲದೆ ಅಳಿದು ಹೋಗಿವೆ. ಈಗ ಹೊಸ ನಾಗರೀಕತೆಯಿಂದ ಮೆರೆಯುವ ದೇಶಗಳೆಲ್ಲ ನೂರಿನ್ನೂರು ವರ್ಷ ಗಳ ಹಿಂದೆ ಕಾಡಸ್ಥಿತಿಯಲ್ಲಿ ಬತ್ತಲೆ ತಿರುಗುತ್ತಿದ್ದವು. ಆದರೆಹಿಂದೂ ಧರ್ಮ ಹಿಂದುಸ್ಥಾನ ಉಚ್ಚ ಸಂಸ್ಕೃತಿಗಳು ವೇದಾಂತ ಧರ್ಮ ತತ್ವ, ಶಾಸ್ತ್ರ ಇವು ಕೋಟಿಕೋಟಿ ವರ್ಷಗಳಿಂದ ಬಾಳಿ ಉಳಿದು ಬಂದಿವೆ. ನಮ್ಮ ಭರತ ಖಂಡದ ಮೇಲೆ ಅನೇಕರು ಅನೇಕ ಪ್ರಕಾರ ಕ್ರೂರ ದಾಳಿ ಮಾಡಿ ಗೆದ್ದರು. ತಮ್ಮ ಸಂಸ್ಕೃತಿಯನ್ನು ಜೋರು ಜುಲುಮೆಯಿಂದ ಹೇರಿದರೂ, ತಮ್ಮ ಭಾಷೆಯನ್ನು ನಮ್ಮಲ್ಲಿ ಪ್ರಚಾರ ಮಾಡಿದರೂ ತಮ್ಮ ಧರ್ಮವನ್ನು ಒತ್ತಾಯದಿಂದ ಪ್ರಚಾರ ಮಾಡಿದರೂ ನಮ್ಮನ್ನು ಪಾರ ತಂತ್ರ್ಯದಲ್ಲಿ ಬಿಗಿದರೂ, ನಮ್ಮವರು ಅವರದೆಲ್ಲವನ್ನು ಅರಗಿಸಿ ಕರಗಿಸಿ ಕೊಂಡು ತನ್ನ ತನವನ್ನು ಬಿಡದೆ ಹಿಂದೂ, ಹಿಂದೂಧರ್ಮ, ಹಿಂದೂದೇಶ ವೇದಾಂತ, ತತ್ವ ಸಂಸ್ಕೃತಿ, ಮೊದಲಾದವುಗಳನ್ನು ಕಳೆದು ಕೊಳ್ಳದೆ, ತಲೆ ಯೆತ್ತಿ ಅನೇಕ ಕಾಲಕಾಲಗಳಿಂದಲೂ ಹಾಗೇ ಮೆರೆಯುತ್ತಿರುವದು. ಯಾಕಂದರೆ ಪರಮಾತ್ಮನೇ ಇದನ್ನು ಯೋಗಭೂಮಿ, ಪುಣ್ಯಭೂಮಿ ಎಂದು ಮೊದಲೇ ಆರಿಸಿಕೊಂಡಿದ್ದಾನೆ. ಇದರ ಇಂಗಿತ ಇಂಪಾದ ಗಾಯನ ಅಥವಾ ಬೆನ್ನೆಲುಬು ಅಧ್ಯಾತ್ಮವೇ ಇರುವದು. ಕಾರಣ ಇದರ ರಕ್ಷಣಾರ್ಥವಾಗಿ ಈ ಲೇಖದ ಆರಂಭದಲ್ಲಿ ಹೇಳಿದಂತೆ ಭಗವಂತನು ನಮ್ಮ ದೇಶ, ಧರ್ಮ, ಸಂಸ್ಕೃತಿ, ಆಚಾರ, ವಿಚಾರ, ಶೀಲ, ನೀತಿ, ತ್ಯಾಗ ವೈರಾಗ್ಯ ಭಕ್ತಿ ಜ್ಞಾನ ವೇದ ಉಪನಿಷತ್ತು, ಪುರಾಣ, ಮೊದಲಾದವುಗಳ ರಕ್ಷ ಣಾರ್ಥವಾಗಿ ಮೇಲಿಂದ ಮೇಲೆ ಅವತರಿಸುವದುಂಟು.

ಪರಮಾತ್ಮನಿಗೆ ದಶಾವತಾರಗಳನ್ನು ಕಲ್ಪಿಸುವದು ಶುದ್ಧ ತಪ್ಪು. ಅವನ ಅವತಾರಕ್ಕೆ ಆದಿ ಅಂತ್ಯಗಳಿಲ್ಲ. ಅಸಂಖ್ಯ ಅವತಾರಗಳುಂಟು. ಅಲ್ಲದೆ ಎಲ್ಲ ಪ್ರಕಾರದ ಪ್ರಾಣಿ ಕೋಟಿಯಲ್ಲಿ ಅವತರಿಸಿದ್ದುಂಟು. ಮಚ್ಛ, ಕೂರ್ಮ, ಮೊಸಳೆ, ಸೂಕರ, ಮಂಗ, ಪಕ್ಷಿ, ಎತ್ತು, ಆಕಳು, ಕರಡಿ, ಮೊದಲಾದ ಪಶುಪಕ್ಷಿಗಳಲ್ಲಿ ಅವತರಿಸಿದ್ದಾನೆ. ಇನ್ನು ಮನುಷ್ಯ ಕೋಟಿಯಲ್ಲಿಯು

ಬಹುತರ ಎಲ್ಲ ಜಾತಿಯವರಲ್ಲಿ ಅವತರಿಸಿದ್ದಾನೆ. ಹೆಣ್ಣಾಗಿ ಗಂಡಾಗಿ ಅವತರಿಸಿದ್ದಾನೆ. ಅರಸನಿಂದ ತಿರುಕುನವರೆಗೂ ಎಲ್ಲರಲ್ಲಿಯೂ ಅವತರಿಸಿದ್ದಾನೆ. ಆಯಾ ಕಾಲದ ಪರಿಸ್ಥಿಗೆ ತಕ್ಕಂತೆ ಶಕ್ತಿ ಸಾಮರ್ಥ್ಯಗಳೊಂದಿಗೆ ಅವತರಿಸಿ ಆ ಪರಿಸ್ಥಿತಿಯನ್ನು ಸುಧಾರಿಸಿ ಜಾಗ್ರತಗೊಳಿಸಿ ಅನೇಕ ಲೀಲೆ ಮಾಡಿ, ಮಹಿಮೆ ತೋರಿ ಭಕ್ತಿಜ್ಞಾನ ವೈರಾಗ್ಯ ಮೊಲಾದವುಗಳನ್ನು ಪ್ರಚಾರಮಾಡಿ ಹೋಗಿದ್ದಾನೆ. ಅಲ್ಲದೆ ಭರತಖಂಡದ ಎಲ್ಲ ಪ್ರಾಂಗಳಲ್ಲಿಯೂ ಸರತಿಯಂತೆ ಅವತರಿಸಿದ್ದಾದರೂ ಕಂಡುಬರುವದು.

ಮಹಾತ್ಮಾ ಬಸವಣ್ಣನವರು ಅಸಂಖ್ಯ ಅನುಯಾಯಿಗಳಾದ ಶರಣ ಶರಣೆಯರು ೮೦೦ ವರ್ಷಗಳ ಹಿಂದೆ ನಮ್ಮ ಕನ್ನಡ ನಾಡಿನಲ್ಲಿ ಅವತರಿಸಿ ಧರ್ಮ, ಭಾಷೆ, ಆಚಾರ ವಿಚಾರಗಳಲ್ಲಿ ಮಹಾಕ್ರಾಂತಿಯನ್ನುಂಟು ಮಾಡಿದರು. ಜಾತಿಯನ್ನಳಿದು ನೀತಿಯನ್ನು ಬೆಳಗಿದರು. ಪ್ರತಿಯೊಂದು ಕುಲದಲ್ಲಿ ಆಗ ಶರಣರು ಜನಿಸಿದ್ದರು. ಭಕ್ತಿ ಜ್ಞಾನ ನಿಷ್ಕಾಮ ಕರ್ಮ ಮೊದಲಾದವುಗಳನ್ನು ಪ್ರಚಾರಮಾಡಿ ಧರ್ಮದಲ್ಲಿ ಒಳ್ಳೇ ಜಾಗ್ರತೆಯನ್ನುಂಟು ಮಾಡಿದರು. ವಚನ ಸಾಹಿತ್ಯವೆಂಬ ದಿವ್ಯರತ್ನವನ್ನು ಕನ್ನಡ ನಾಡಿಗೆ ದಾನಮಾಡಿ ಭಾಷೆಯಲ್ಲಿಯೂ ಕ್ರಾಂತಿ ಮಾಡಿದರು. ಬಿಹಾರದಲ್ಲಿ ಎರಡು ಸಾವಿರ ವರ್ಷಗಳ ಪೂರ್ವದಲ್ಲಿ ಬುದ್ಧ, ಅವನ ಅನುಯಾಯಿಗಳು ಅವತರಿಸಿ ಹಿಂಸಾಮಯವಾದ ಧರ್ಮವನ್ನೂ ಅಹಿಂಸಾಮಯವಾಗಿ ಮಾರ್ಪಡಿಸಿ ಜಾತಿಗಳನ್ನೆಲ್ಲ ಒಂದುಗೂಡಿಸಿ ಹೋದರು.

ಸೌರಾಷ್ಟ್ರದಲ್ಲಿ ನಾಲ್ಕು ಸಾವಿರ ವರ್ಷಗಳ ಪೂರ್ವದಲ್ಲಿ ಶ್ರೀಕೃಷ್ಣ ಅನುಯಾಯಿಗಳಾದ ಸ್ತ್ರೀಪುರುಷರು ಪಾಂಡವರ ಕಾಲಕ್ಕೆ ಅವತರಿಸಿ ದುಷ್ಟರನ್ನು ಶಿಕ್ಷಿಸಿ ಶಿಷ್ಟರನ್ನು ಪರಿಪಾಲಿಸಿ ಬಗವದ್ಗೀತೆಯನ್ನು ಜಗತ್ತಿಗೆ ನೀಡಿ ಧರ್ಮವನ್ನು ಉಳಿಸಿ ಅನೇಕ ಲೀಲೆ ಪವಾಡುಗಳನ್ನುಮಾಡಿ ಭಕ್ತವತ್ಸಲನೆನಿಸಿಹೋದನು.

ಸಂಯುಕ್ತ ಪ್ರಾಂತದಲ್ಲಿ ಎರಡು ಸಾವಿರ ವರ್ಷಗಳ ಪೂರ್ವದಲ್ಲಿ ಶ್ರೀರಾಮನು ಅವತರಿಸಿ ಆದರ್ಶ ಸಂಸಾರವನ್ನು ಬಂಧು ಪ್ರೀತಿಯನ್ನು ವಚನ ಪಾಲನೆಯನ್ನು ಪ್ರಜೆಗಳನ್ನು ಮಕ್ಕಳಂತೆ ಪಾಲಿಸುವದನ್ನು ತೋರಿಸಿ ಧರ್ಮದಲ್ಲಿ ಒಳ್ಳೇ ಜಾಗ್ರತೆಯನ್ನುಮಾಡಿ ಹೋದನು.

ಮಹಾರಾಷ್ಟ್ರದಲ್ಲಿ ಪಾಂಡುರಂಗನ ಭಕ್ತರಾದ ಸಂತರು ಅವತರಿಸಿ ಶಿವಾಜಿಗೆ ರಾಜ್ಯ ಸ್ಥಾಪಿಸಲು ನೆರವಾಗಿ ಧರ್ಮದಲ್ಲಿ ಒಳ್ಳೇ ಜಾಗ್ರತೆಮಾಡಿ ಅಭಂಗ ಸಾಹಿತ್ಯವನ್ನು ಬರೆದು ಹಾಡಿ ಪ್ರಚಾರಮಾಡಿ ಪಂಡರಪೂರನ್ನು ದೊಡ್ಡ ಕ್ಷೇತ್ರವನ್ನಾಗಿ ಮಾಡಿಹೋದರು.

ಕನ್ನಡ ನಾಡಿನಲ್ಲಿ ಎರಡನೇಸಲ ದಾಸರು ಅವತರಿಸಿ ಪರಮಾತ್ಮನ ಬಗ್ಗೆ ಭಕ್ತಿ ಜ್ಞಾನ ವೈರಾಗ್ಯ ತ್ಯಾಗಗಳ ಕೀರ್ತನಗಳನ್ನು ರಚಿಸಿ ಹಾಡಿ ಹಾಡಿ ಪ್ರಚಾರಮಾಡಿದರು. ಕನ್ನಡನಾಡಿಗೆ ದಾಸ ಸಾಹಿತ್ಯವು ಎರಡನೇ ದೇಣಿಗಿಯಾಯಿತು.

ಓಡಿಸಾಪ್ರಾಂತದಲ್ಲಿ ಚೈತನ್ಯ ಅವನ ಅನುಯಾಯಿಗಳು ಅವತರಿಸಿ ನೃತ್ಯದ ಸಂಕೀರ್ತನ ಭಕ್ತಿಯನ್ನೂ ತ್ಯಾಗ ವೈರಾಗ್ಯಗಳನ್ನೂ ಪ್ರಚಾರ ಮಾಡಿ ಧರ್ಮದಲ್ಲಿ ಜಾಗ್ರತೆಯನ್ನುಂಟುಮಾಡಿ ಹೋದರು.

ಬಂಗಾಲದಲ್ಲಿ ಶ್ರೀರಾಮಕೃಷ್ಣ ಪರಮಹಂಸರು ಮತ್ತು ವಿವೇಕಾನಂದ ಮೊದಲಾದ ದೇಶಭಕ್ತ ವೀರ ಸನ್ಯಾಸಿ ಶಿಷ್ಯರು ಅವತರಿಸಿ ನಾಶಮಾಡು ತ್ತಿರುವ ಹಿಂದು ಧರ್ಮ ವೇದಾಂತ ತತ್ವಶಾಸ್ತ್ರ ಮೊದಲಾದವುಗಳನ್ನು ಬೆಳಸಿ ಉಳಿಸಿ ಹಿಂದುಧರ್ಮ ಹಿಂದುದೇಶ ಇವು ಜಗತ್ತಿನಲ್ಲಿಯೇ ಶ್ರೇಷ್ಠ ವೆಂದು ಕೀರ್ತಿವೆತ್ತುವಂತೆ ಮಾಡಿದರು. ಭಕ್ತಿ ಜ್ಞಾನ ವೈರಾಗ್ಯ ತ್ಯಾಗ ಸೇವೆ ದೇಶ ಧರ್ಮ ರಾಷ್ಟ್ರಧರ್ಮ ವಿಶ್ವಧರ್ಮಗಳನ್ನೂ ಇಡೀ ಜಗತ್ತಿನಲ್ಲಿ ಪ್ರಚಾರಮಾಡುವ ಮಹಾಸಂಸ್ಥೆಯಾಗಿರುವದು. ಕಠಿಣ ವೇದಾಂತವನ್ನು ಒಳ್ಳೇ ಸರಳ ಸರಸ ಮಾಡಿದ ಸಾಹಿತ್ಯವನ್ನು ರಚಿಸಿದರು. ಇವರೇ ಈಗ ದೊರೆತ ಭಾರತದ ಸ್ವಾತಂತ್ರ್ಯಕ್ಕೆ ನಾಂದೀ ಹಾಕಿದವರು.

ಪಂಜಾಬದಲ್ಲಿ ಗುರುನಾನಕ ಗುರುಗೋವಿಂದ ಮತ್ತು ಅವರ ಅನು ಯಾಯಿಗಳು ಜನಿಸಿ ಪರಮತದವರಿಂದ ಉಳಿದುಕೊಳ್ಳಲು ಹೊಸವೀರ ಧರ್ಮವನ್ನೇ ಸಂಸ್ಥಾಪಿಸಿದರು. ಮೊನ್ನೆ ಮೊನ್ನೆಯೂ ಕೂಡ ಶ್ರೀರಾಮ ತೀರ್ಥರು ಇಲ್ಲಿಯೇ ಜನಿಸಿ ಒಳ್ಳೇ ಸರಸ ಶೈಲಿಯಲ್ಲಿ ವೇದಾಂತ ಪ್ರಚಾರ ಮಾಡಿ ಧರ್ಮದಲ್ಲಿ ಜಾಗ್ರತಮಾಡಿದರು ಪರದೇಶಗಳಿಗೂ ಕೂಡ ಭಾರತದ ವೇದಾಂತವನ್ನು ಬೋಧಿಸಿಬಂದರು.

ಪಾಂಡಿಚೇರಿಯಲ್ಲಿ ಶ್ರೀಅರವಿಂದ ಹಾಗೂ ಅವನ ಶಿಷ್ಯರು ಧರ್ಮ ಪ್ರಚಾರ ಮಾಡುವ ಸಂಸ್ಥೆಯಾಗಿದೆ.

ಹಿಮಾಲಯದಲ್ಲಿ ಶ್ರೀ ಶಿವಾನಂದ ಸರಸ್ವತಿಗಳವರು ಧರ್ಮಪ್ರಚಾರ ಮಾಡುತ್ತಿರುವರು. ಜಗತ್ತಿನ ಬಹುತರ ಬಹಳ ದೇಶಗಳಲ್ಲಿ ಇವರ ಶಾಲೆಗಳುಂಟಾಗಿವೆ.

ಮಹಾತ್ಮಾ ಗಾಂಧಿ ಹಾಗೂ ಅನುಯಾಯಿಗಳು ಅವತರಿಸಿ ಹಿಂದು ಸ್ಥಾನಕ್ಕೆ ಸತ್ಯ ಅಹಿಂಸಾ ಅಸ್ಪೃಶ್ಯತಾ ನಿವಾರಣೆಗಾಗಿ ಖಾದಿ ಮೊದಲಾದ ಮಾರ್ಗದಿಂದಲೇ ಸ್ವಾತಂತ್ರ್ಯವನ್ನು ತಂದುಕೊಟ್ಟರು. ಈಗ ಅವರೇ ಅಧಿಕಾರಾರೂಢರಾಗಿ ದೇಶವನ್ನು ಸುಸ್ಥಿತಿಗೆ ತರುವದಕ್ಕೆ ಹೆಣಗುತ್ತಿದ್ದಾರೆ.

ಡಾ. ಅಂಬೇಡಕರರು ಜನಿಸಿ ಹಿಂದಿನಕಾಲದ ಮನುಋಷಿ ಎನಿಸಿ, ಹಿಂದು ಕಾಯದೆಯನ್ನು ಹೊಸದಾಗಿ ಬರೆದರು ಈಗ ಅದರಂತೆ ದೇಶದ ಕಾರಭಾರವು ನಡೆದಿದೆ. ಅವರು ದೀನದಲಿತರ ಉದ್ಧಾರಕ್ಕೆ ಯತ್ನಿಸವರು.

ಇನ್ನೂ ಅನೇಕ ಸನ್ಯಾಸಿಗಳೂ, ತ್ಯಾಗಿಗಳೂ, ಜ್ಞಾನಿಗಳೂ, ಭಕ್ತರೂ, ಮುಕ್ತರೂ, ಸಾಧುಸಂತರೂ, ಯೋಗಿಗಳೂ, ಗುರುಗಳೂ, ಋಷಿಗಳೂ, ಮುನಿಗಳೂ, ಮಹಾತ್ಮರೂ, ಜೀವನ್ಮುಕ್ತರೂ ಅವತರಿಸಿ ದೇಶಕಲ್ಯಾಣವನ್ನು ಮಾಡುತ್ತಿರುವದು ಅನಾದಿಕಾಲದಿಂದ ನಡೆದುಬಂದ ಮಾತಾಗಿದೆ. ಈ ದೇಶದಲ್ಲಿ ಇಂಥವರು ಅವತರಿಸಿದಷ್ಟು ಪರದೇಶಗಳಲ್ಲಿ ಜನಿಸಿಲ್ಲೆಂದು ಇತಿಹಾಸ ಪುರಾಣ ಚರಿತೆಗಳಿಂದ ಕಂಡುಬರುವದು. ಪರದೇಶಗಳಲ್ಲಿ ಶಾಸ್ತ್ರೀಯ ಸಂಶೋಧಕರು ರಾಜಕಾರಣ ಪಟುಗಳು ಹೆಚ್ಚಾಗಿಜನಿಸಿದ್ದು ಕಂಡುಬರುವದು. ಪರದೇಶಗಳಲ್ಲಿ ಶ್ರೀಮಂತರಿಗೆ ರಾಜರಿಗೆ ಶಾಸ್ತ್ರೀಯ ಸಂಶೋಧಕರಿಗೆ, ಪಂಡಿತರಿಗೆ ಕವಿಗಳಿಗೆ, ರಾಜಕಾರಣಿಗಳಿಗೆ, ಹೆಚ್ಚೆಚ್ಚು ಮನ್ನಣೆ ಸ್ಥಾನಗಳನ್ನು ಕೊಟ್ಟಂತೆ ನಮ್ಮ ಭರತಖಂಡದಲ್ಲಿ ಯೋಗ್ಯ ಸನ್ಯಾಸಿ ತ್ಯಾಗಿ ಯೋಗಿ ಋಷಿಜ್ಞಾನಿ ಪರಸೇವಕ ಮೊದಲಾದವರಿಗೆ ದೇವರೆಂದು ಪೂಜಿಸುವರು. ಗುರುಗಳೆಂದು ಭಯಭಕ್ತಿಯಿಂದ ನಡೆದುಕೊಳ್ಳುವರು. ರಾಜಾಧಿರಾಜರೂ ಕೂಡ ಇಂಥವರ ಪಾದಗಳ ಮೇಲೆ ಶಿರಸಾಷ್ಟಾಂಗ ಹಾಕುವರು. ಯಾಕಂದರೆ ದೇಶದ ಸರ್ವಸುಖ ಧರ್ಮ ಸತ್ಯ ಸಂಪತ್ತು, ಮಳೆ, ಬೆಳೆ, ಶಾಂತಿ, ಜನನ ಮರಣ ಸಮಾಧಾನ, ಕೀರ್ತಿ, ಜಯ ಸ್ವಾತಂತ್ರ ಮೊದಲಾದವುಗಳೆಲ್ಲ ಇಂಥ ತ್ಯಾಗಿ ಸನ್ಯಾಸಿಗಳಾದ ಅವತಾರಿಕರ ಮೇಲೆ ಅವಲಂಬಿಸಿರುವವೆಂದು ಧಾರಳವಾಗಿ ಹೇಳಬಹುದು. ಅದಕ್ಕಂತಲೇ ರಾಮ, ಪಾಂಡವ ಮೊದ

ಲಾದವರ ಕಾಲಕ್ಕೆ ಇಂಥ ಯೋಗಿ ತ್ಯಾಗಿ ಸನ್ಯಾಸಿ ಋಷಿಗಳಿಗೆ ರಾಜಾಶ್ರಯವಿತ್ತು. ಅವರಿಗೆ ಅವರ ಆಶ್ರಮಕ್ಕೆ ಬೇಕಾಗುವ ವಸ್ತು ಒಡವೆಗಳನ್ನು ರಾಜರೂ ಪ್ರಜರೂ ಕೂಡಿಯೇ ಕೊಡುತ್ತಿದ್ದರು. ಆದರಿಂದ ಅವರು ಹೆಚ್ಚೆಚ್ಚಾಗಿ ತಪಗೈದು ಕುಳಿತಲ್ಲಿಯೇ ದೇಶಕಲ್ಯಾಣವನ್ನು ಮಾಡುತ್ತಿದ್ದರು. ಪ್ರತಿಯೊಬ್ಬ ರಾಜನಿಗೆ ರಾಜಗುರುಗಳು ರಾಜಸನ್ಯಾಸಿಗಳ ನೆರವಿತ್ತೆಂದು ತೋರುವದು. ವಿಜಯನಗರಕ್ಕೆ ವಿದ್ಯರಾಣ್ಯರು, ಶಿವಾಜಿಗೆ ತುಕಾರಾಮ, ಜ್ಞಾನದೇವ, ರಾಮದಾಸರು, ರಾಮನಿಗೆ ವಸಿಷ್ಠ, ವಾಲ್ಮೀಕಿ ಪಾಂಡವರಿಗೆ ಶ್ರೀಕೃಷ್ಣ, ಅಶೋಕನಿಗೆ ಭೌದ್ಧ ಯತಿಗಳು ನೆರವಾದದು ಕಂಡು ಬರುವದು. ೧೯೪೭ರಲ್ಲಿ ಹಿಂದುಸ್ಥಾನಕ್ಕೆ ಸ್ವರಾಜ್ಯ ತಂದುಕೊಡಲಿಕ್ಕೆ ಗಾಂಧಿ, ವಿವೇಕಾನಂದ ಘೋಸ ಮೊದಲಾದ ಸನ್ಯಾಸಿಗಳೇ ಕಾರಣರಾದರು. ಭಾರತದಲ್ಲಿ ಪ್ರತಿಯೊಂದು ನಮ್ಮ ಕಾರ್ಯಕ್ಕೆ ನಮ್ಮ ಉದ್ಧಾರಕ್ಕೆ ನಮ್ಮ ಯೋಗ ಕ್ಷೇಮಕ್ಕೆ ತ್ಯಾಗಿಯೋಗಿ ಸನ್ಯಾಸಿಗಳಾದ ಅವತಾರಿಗಳೇ ಕಾರಣರೆಂದು ಧಾರಳವಾಗಿ ಹೇಳಬಹುದು.

ಈ ಪ್ರಕಾರ ಪರಮಾತ್ಮನು ಸದಾ ಧರ್ಮ ಜಾಗ್ರತೆಗಾಗಿ ದೇಶಕಲ್ಯಾಣಕ್ಕಾಗಿ ಒಂದಿಲ್ಲೊಂದು ರೀತಿಯಿಂದ ಒಂದಿಲ್ಲೊಂದು ಪ್ರಾಂತದಲ್ಲಿ ಒಂದಿಲ್ಲೊಂದು ಜಾತಿಯಲ್ಲಿ ಅವತರಿಸುತ್ತಲೇ ಇರುವನು. ಆ ಎಲ್ಲರ ಶಕ್ತಿಯು ಒಬ್ಬನೇ ಪರಮಾತ್ಮನಿಂದ ಬಂದರುವದು. ದೇಶಕಾಲ ಪರಿಸ್ಥಿತಿಗನುಗುಣವಾಗಿ ಅವನ ಶಕ್ತಿ, ಕಾರ್ಯ, ಲೀಲೆ, ಪವಾಡ, ಮಹಿಮೆ, ಉಪದೇಶ ಕಾವ್ಯಬರಹ ಮೊದಲಾದವುಗಳಿರುವವು. ಆದರೂ ಅವರೆಲ್ಲರೂ ಒಂದೇಸರಿ. ದೇವರು ಒಬ್ಬನಾದರೂ ಸಾವಿರ ರೂಪಗಳೂ ಸಾವಿರ ನಾಮಗಳೂ ಇರುವಂತೆ ಅವತಾರಿಗಳು ಅಸಂಖ್ಯವಾದರೂ ಅವರ ನಾಮರೂಪ ಜಾತಿಗಳು ಹಲವಾದರೂ ಅವರೆಲ್ಲರೂ ಒಂದೇಸರಿ. ಒಬ್ಬ ಪರಮಾತ್ಮನ ಒಂದೇ ಶಕ್ತಿಯೇ ಹೌದು. ಭರತಖಂಡದಲ್ಲಿ ಅರ್ಥಾತ್ ಈ ಪುಣ್ಯ ಭೂಮಿಯಲ್ಲಿ ಯೋಗ ಭೂಮಿಯಲ್ಲಿ ವಿಷಯ ಸುಖಗಳನ್ನು ಭೋಗಿಸುವ ಬಗ್ಗೆ ಯಾರೂ ಹೆಚ್ಚಿನ ಶೋಧ ಮಾಡದೆ ಸದಾ ಪರಮಾತ್ಮನ ಹೆಚ್ಚೆಚ್ಚಾದ ಶೋಧನೆಯಲ್ಲಿಯೇ ಇಡೀ ತನು ಮನ ಧನ ಆಯುಷ್ಯವನ್ನೆಲ್ಲ ಕಳೆಯುತ್ತಿರುವರು. ಅದಕ್ಕಾಗಿಯೇ ಸಂಸಾರ, ಅಧಿಕಾರ, ರಾಜ್ಯವನ್ನೂ ಕೂಡ ತ್ಯಾಗಮಾಡಿದ್ದಾರೆ. ಇಂಥ ಅವತಾರಿಗಳೇ ದೇಶಕ್ಕೆ ಮಾರ್ಗದರ್ಶಕರಾಗಿದ್ದಾರೆ. ಆಗುತ್ತಲೂ ಇರುವರು.

ಅವತಾರ ವೆಂದರೆ ವಿಶೇಷ ಶಕ್ತಿಪಡೆದು ಜನಿಸಿದವರು ದುಷ್ಟರ ವಧೆಗೆ ಶಿಷ್ಟರ ರಕ್ಷಣೆಗೆ ಧರ್ಮ, ನೀತಿ ಭಕ್ತಿಗಳ ಸ್ಥಾಪನೆಗೆ ಆಯಾ ಕಾಲಕ್ಕೆ ತಕ್ಕಂತೆ ತಕ್ಕಷ್ಟು ಶಕ್ತಿ ಸಾಮರ್ಥ್ಯದೊಂದಿಗೆ ಜನಿಸಿದವರು. ಬಹಳ ಜನ ಶಿಷ್ಯರು ಬಯಸಿ ಬೇಡಿಕೊಂಡದ್ದರಿಂದ ಬಹಳ ಶಕ್ತಿಯೊಂದಿಗೆ ಜನಿಸಿದ ವ್ಯಕ್ತಿಗಳಿಗೆ ಅವತಾರವೆನ್ನುವರು. ಉದಾಹರಣೆಗಾಗಿ ಪಾಂಡವರ ಕಾಲಕ್ಕೆ ಅನೇಕ ದುಷ್ಟ ಅರಸರು ( ರಾಕ್ಷಸರು ) ಜನರಿಗೆ ಬಹುಪೀಡೆ ಮಾಡುತ್ತಿದ್ದರು. ಆ ಪೀಡೆ ಹೊಂದಿ ಮರಗುವವರು ಮನದಲ್ಲಿಯೇ ಅತಿಯಾಗಿ ಆ ದುಷ್ಟರನ್ನು ಶಪಿಸಿದರು. ಆ ಎಲ್ಲ ಶಾಪಗಳು ಒಟ್ಟುಗೂಡಿ ಒಂದು ಶಪಸಿದವರ ಇಚ್ಛಾಶಕ್ತಿಯಾಗಿ ಶ್ರೀ ಕೃಷ್ಣನೆಂಬ ಅಭಿಧಾನದಿಂದ ಅವತರಿಸಿದನು. ಇವನಿಂದ ಕಂಸಾದಿಗಳು ಹತವಾಯಿತಲ್ಲದೆ ದುರ್ಯೋಧನಾದಿ ದುಷ್ಟರ ವಧೆಯೂ ಆಯಿತು. ಆಗ ದೇಶಕ್ಕೆ ಸುಖಶಾಂತಿ ಧರ್ಮನೀತಿಗಳು ಲಭಿಸಿದವು. ಇದೆ ಅವತಾರದ ಗುಟ್ಟು. ಅವತಾರವೆಂದರೆ ಬಹಳ ಜನರು ಬಯಸಿ ಬೇಡಿಕೊಂಡದ್ದರಿಂದ ಜನಿಸಿದಂಥಾ ಸಾರ್ವಜನಿಕ ಮನುಷ್ಯ. ಇವನು ಅನ್ಯರಂತೆ ಬರೇಸಂಸಾರ ವಿಷಯ ಸ್ವಾರ್ಥಗಳಲ್ಲಿ ಬೀಳುವದು ಹೇಗೆ? ಇದು ಶಕ್ಯವಿಲ್ಲ. ಇವನು ಸರ್ವಜನರ ಹಿತಕ್ಕಾಗಿ ಸರ್ವಜನರ ಬೇಡಿಕೆಯಿಂದ ವಿಶೇಷ ಶಕ್ತಿಯೊಂದಿಗೆ ಜನಿಸಿದ ಸಾರ್ವಜನಿಕನು.

ಅವತಾರಿಕರೆಲ್ಲರೂ ಕಾರ್ಯಕ್ಷೇತ್ರಕ್ಕೆ ಇಳದೇ ಕಾರ್ಯ ಮಾಡುತ್ತಾರೆಂದು ಹೇಳಲಿಕ್ಕಾಗುವದಿಲ್ಲ. ಕೆಲವರು ಗುಹೆಯಲ್ಲಿಯಾಗಲಿ ಇಲ್ಲವೆ ಜನಜಂಗುಳಿಯಿಂದ ದೂರಸರಿದು ಏಕಾಂತವಾಸ ವನವಾಸದಲ್ಲಿ ಮೌನವಾಗಿ ತಪಿಸುತ್ತ ಅನ್ಯರಾರಿಗೂ ಗೋಚರಿಸದೆ ಸದಾ ತಮ್ಮ ಸಾಧನೆಯಲ್ಲಿ ನಿಮಗ್ನರಾಗುವರು. ಇವರೂ ಕೂಡ ಸೂಕ್ಷ್ಮವಾಗಿ ದೇಶದ ಕಿಲ್ಬಿಷಯುಗಳನ್ನು ತೊಳೆದು ದೇಶ ಕಲ್ಯಾಣವನ್ನು ಮಾಡುತ್ತಿರುವರು. ಗೌತಮಬುದ್ಧನು ಹಳ್ಳಿ ಪಟ್ಟಣಗಳಿಗೆ ತಿರುಗಿ ಉಪದೇಶ ಮಾಡಿ ಸೇವೆಗೈಯ್ಯುತ್ತಿದ್ದರೆ ಅವನ ಐದು ಜನ ಶಿಷ್ಯರು ಗವಿಯಿಂದ ಹೊರಗೆಬರದೆ ಇದ್ದರೂಕೂಡ ಹೆಚ್ಚಿಗೆ ದೇಶಸೇವೆ ಗೈಯುತ್ತಿದ್ದರೆಂದು ಹೇಳಲಾಗಿದೆ. ಆದ್ದರಿಂದ *A man in the cave is more than a man on the stage.* ಎಂದು ಇಂಗ್ಲೀಷದಲ್ಲಿ ಒಂದು ಗಾದೆ ಇದೆ. ರಂಗಭೂಮಿಯ ತಾಪಸಿ ಸೇವಕನಿಗಿಂತ ಗವಿಗುಹೆಗಳಲ್ಲಿ ಕುಳಿತ ಸೇವಕ

ತಪಸಿಯೇ ಹೆಚ್ಚಿನವನೆಂದು ಅದರ ಅಭಿಪ್ರಾಯ ಅದಕ್ಕಾಗಿ ಎಷ್ಟೋ ಋಷಿಗಳು ತ್ಯಾಗಿಗಳು ಸಿದ್ಧಪುರುಷರು ಸನ್ಯಾಸಿಗಳು ಏನೊಂದು ಹೆಸರಿಲ್ಲದೆ ಕೀರ್ತಿಗಾಸಿಸದೆ ಇದ್ದುಇಲ್ಲದಂತೆ ಅರಣ್ಯದಲ್ಲಿಯೇ ಯಾರಿಗೂ ಗುರುತಿಲ್ಲದೆ ದೇಹಬಿಟ್ಟರು. *They come silentely. They live silently They go silenetly.* ಅವರು ಗುಪ್ತವಾಗಿ ಜನಿಸಿ ಗುಪ್ತವಾಗಿ ಬಾಳಿ ಗುಪ್ತವಾಗಿ ದೇಹಬಿಟ್ಟು ಹೋಗುವರು. ಪಶು ಪಕ್ಷಿಗಳು ಅವರ ದೇಹವನ್ನು ತಿಂದು ಬಿಟ್ಟಿರುವವು. ಇಂಥ ಗುಪ್ತಅವತಾರಿಗಳು ಹಿಮಾಲಯದಲ್ಲಿ ಹೇರಳವೆಂದು ಹೇಳುವರು. ಇವರು ತಮ್ಮ ತಪೋಬಲಗಳಿಂದ ದೇಶಕಲ್ಯಾಣವನ್ನು ಸೂಕ್ಷ್ಮವಾಗಿ ಮಾಡುತ್ತಿರುವರು. ಇವರು ಪ್ರಪಂಚದ ಗದ್ದಲದಿಂದ ದೂರಸರಿದು ಅದ್ಭುತ ಶೋಧಗಳನ್ನಾಗಲಿ, ಗ್ರಂಥಗಳನ್ನಾಗಲಿ ಔಷಧವನ್ನಾಗಲಿ, ತತ್ವಗಳನ್ನಾಗಲಿ ದೇಶದ ಕಲ್ಯಾಣಕ್ಕಾಗಿ ಶೋಧಮಾಡಿ ಹೇಳಹೆಸರಿಲ್ಲದೆ ಹೊರಟುಹೋದ ಅವತಾರಿಗಳೂ ಕೂಡ ಹಲವರಿದ್ದಾರೆ.

ಇಂಥ ತ್ಯಾಗಿಗಳ, ಶರಣರ, ಸನ್ಯಾಸಿಗಳ ಯೋಗಿಗಳ ಚರಿತೆಗಳನ್ನು ತಿಳಿಯುವದು ಬಹುಬಿಗಿಯಾಗಿದೆ. ಅವರ ಇರುವಿಕೆ ಅವರ ವೇಷಭೂಷಣ ಅವರ ರೀತಿ ನೀತಿಗಳು ಅತಿಭಿನ್ನವಾಗಿ ಅತಿವಿಚಿತ್ರವಾಗಿ ಬೇರೆ ಬೇರೆಯಾಗಿ ಇರುವದು ಕಂಡುಬರುವದು. ಒಬ್ಬನು ದಿಗಂಬರನಾಗಿದ್ದರೆ ಇನ್ನೊಬ್ಬರು ರಾಜಪೋಷಾಕದಲ್ಲಿ. ಒಬ್ಬನು ಬಹಳ ಮಾತಾಡುತ್ತಿದ್ದರೆ, ಇನ್ನೊಬ್ಬನು ಮೌನಿಯಾಗಿರುವನು. ಒಬ್ಬನು ಕೆಟ್ಟ ಶಬ್ದಗಳನ್ನೂ ಬೈಗಳನ್ನೂ ಉಪಯೋಗಿಸುತ್ತಿದ್ದರೆ ಇನ್ನೊಬ್ಬನು ಒಳ್ಳೇ ಮೃದು ವಚನಗಳನ್ನು ಉಪಯೋಗಿಸುವನು. ಒಬ್ಬನು ಬೋಳು ತಲೆಯವನಿದ್ದರೆ ಇನ್ನೊಬ್ಬನು ಜಟಾಭೂಷಿತನಿರುವನು. ಒಬ್ಬನು ಗಡ್ಡ ಕೋಲುಗೇನ್ನು ಧರಿಸಿದ್ದರೆ, ಇನ್ನೊಬ್ಬನು ಕ್ರಾಪು ಶೂಟುಗಳನ್ನು ಧರಿಸುವನು. ಒಬ್ಬನು ಕೌಪಿನ ಧರಿಸಿದ್ದರೆ ಇನ್ನೊಬ್ಬನು ಹರಕು ಚಿಂದಿಗಳನ್ನು ಧರಿಸುವನು. ಒಬ್ಬನು ಫಲಾಹಾರ ಮಾಡುತ್ತಿದ್ದರೆ ಇನ್ನೊಬ್ಬನು ನಿರಾಹಾರ, ಮತ್ತೊಬ್ಬನು ಮೃಷ್ಟಾನ್ನ ಭೋಜನ. ಒಬ್ಬನು ಲೀಲೆ ಮಹಿಮೆ ಪವಾಡುಗಳನ್ನು ತೋರಿದರೆ, ಮತ್ತೊಬ್ಬನು ಅರಿಯದವನಂತೆ ವರ್ತಿಸುವನು ಒಬ್ಬನು ಸದಾ ಚರಿಸುತ್ತಿದ್ದರೆ, ಮತ್ತೊಬ್ಬನು ತನ್ನ ಸ್ಥಾನಬಿಟ್ಟು ಕದಲುವದಿಲ್ಲ. ಒಬ್ಬನು

ಮುಳ್ಳಿನ ಮೇಲೆ ಕೂಡ್ರುತ್ತಿದ್ದರೆ, ಇನ್ನೊಬ್ಬನು ಚರ್ಮದ ಮೇಲೆ ಕೂಡ್ರುವನೂ ಒಬ್ಬನು ಬರಿಗಾಲಿನಿಂದ ತಿರುಗುತ್ತಿದ್ದರೆ, ಮತ್ತೊಬ್ಬರು ಆನೆ ಮೋಟಾರ ರಥ ಪಲ್ಲಕ್ಕಿ ಮೇಣೆಗಳಲ್ಲಿ ಮೆರೆಯುವರು. ಒಬ್ಬನು ಸದಾ ಹೊಲಸಿನಲ್ಲಿ ವಾಸಿಸುತ್ತಿದ್ದರೆ, ಇನ್ನೊಬ್ಬನು ಅಂದ ಚಂದವಾದ ಶುದ್ಧ ಹವೆಯುಳ್ಳ ಮೆಲ್ಮಾಡಿಯಲ್ಲಿ ಇರುವನು. ಒಬ್ಬನು ಬರೀ ಕಟಕ ರೊಟ್ಟಿ ತಿನ್ನುತ್ತಿದ್ದರೆ, ಇನ್ನೊಬ್ಬನು ಒಳ್ಳೇ ಬಿಸಿ ಮೃದು ಅನ್ನವನ್ನು ಉಣ್ಣುವನು. ಒಬ್ಬನಿಗೆ ಏನು ಚಟಗಳೇ ಇರುವದಿಲ್ಲ, ಇನ್ನೊಬ್ಬನಿಗೆ ಎಲ್ಲ ಚಟಗಳೂ ಇರುವವು. ಒಬ್ಬನು ಕ್ಯಾವಿ ರುದ್ರಾಕ್ಷಿಗಳನ್ನು ಧರಿಸಿದ್ದರೆ ಇನ್ನೊಬ್ಬನು ಕಂಠಿಗೋಪ ರೇಶಮಿಯ ಬಟ್ಟೆಗಳನ್ನು ಧರಿಸುವನು. ಕರವತ ಕಟ್ಟೆ ಧೋತರ ಉಟ್ಟು, ಕೋಟುಹಾಕಿ ತಲೆಗೆ ಜರದ ಪಟಕೆ ಸುತ್ತುವದು. ಈ ಇವರ ಬಾಹ್ಯ ಆಚಾರ ವಿಚಾರಗಳಿಂದ ಯಾರು ಯೋಗ್ಯರು ಯಾರು ಅಯೋಗ್ಯರು ಎಂಬದು ತಿಳಿಯದೆ ಅನೇಕರು ಎಲ್ಲರೂ ಸನ್ಯಾಸಿಗಳೇ ಎಂದು ಮೋಸಹೋದ ಅನೇಕ ಕಥೆಗಳುಂಟು. ಯಾರು ಅವತಾರಿಕರು ಯಾರು ಸೋಗಿನವರು ಎಂದು ತಿಳಿಯಲಿಕ್ಕೆ ಒಂದು ಮಾರ್ಗವಿದೆ. Simple living and High Thinking ಸಾದಾ ಜೀವನವಿದ್ದು ಮಹಾ ಉದಾತ್ತ ವಿಚಾರಗಳನ್ನು ನಿಷ್ಕಾಮವಾಗಿ ದೇಶ ಕಲ್ಯಾಣ ಮಾಡುತ್ತಿದ್ದರೆ ಅವರೇ ಹೆಚ್ಚಿನವರೆಂದು ಹೇಳಲಿಕ್ಕೆ ಅಡ್ಡಿ ಇಲ್ಲ. ಈಗಿನ ಕಾಲದಲ್ಲಿ ಸಹಜ ಅನಾಯಾಸ ಹೆಣ್ಣನ್ನು ದೊರಕಿಸಲಿಕ್ಕೆ ಧನವನ್ನು ಕೂಡಿಸಲಿಕ್ಕೆ ಸನ್ಯಾಸಿಗಳ ಸೋಗನ್ನು ಹಾಕಿ ಮೋಸಮಾಡುವವರ ಸಂಖ್ಯೆಯೇ ಹೆಚ್ಚಾಗಿದೆ ಚೀಟಿ ಕಟ್ಟುವದು, ಮಂತ್ರಿಸುವದು, ಯಂತ್ರ ಕಟ್ಟುವದು, ಬೂದಿಹಚ್ಚುವದು, ಮಕ್ಕಳಕೊಡುವದು ನೆಲದಲ್ಲಿಯ ಧನವನ್ನು ತೆಗೆದು ಕೊಡುವದು. ತಾಯಿತಮಾಡುವದು ಹೆಣ್ಣಿಗೆ ಮೆಚ್ಚುಮಾಡುವದು ಇಂಥ ಹೀನ ಕೆಲಸಗಳನ್ನು ಸನ್ಯಾಸಿಗಳು ಮಾಡಿ ಹೊನ್ನು ಹೆಣ್ಣು ಮಣ್ಣನ್ನು ದೊರಕಿಸಿ ಒಳ್ಳೇ ಐಷ ಆರಾಮದಿಂದ ಕಾಲ ಕಳೆಯುವರು ಇವರು ದೇಶ ಸೇವಕರಲ್ಲ. ಇವರು ಸನ್ಯಾಸಿಗಳಲ್ಲಿ ಅವತಾರಿಕರಲ್ಲ ಅವರನ್ನು ನಂಬಬಾರದು ಈಗ ಜನರು ಇಂಥದಕ್ಕೇ ಬಹಳ ಮೆಚ್ಚುವರು. ಇವೇ ಕೆಲಸಗಳು ಅವರಿಗೆ ಈಗ ಬೇಕಾಗಿವೆ. ಯಾರಿಗೂ ದೇವರು ಧರ್ಮ, ಜ್ಞಾನ, ನೀತಿ ವೇದಾಂತ ಬೇಕಾಗಿಲ್ಲ. ಇದರಿಂದ ದೇಶವು ಮತ್ತಷ್ಟು ಹೀನಾವಸ್ಥೆಗೆ ಹೋಗುವದು ಅದಕ್ಕೆ ಇವುಗಳ ಬಗ್ಗೆ ಎಲ್ಲರೂ ಜಾಗ್ರತರಾಗಿ ಇರಬೇಕು.

ಮೇಲೆ ವಿವರಿಸಿದ ಗುಪ್ತ ಅವತಾರಿಗಳ ವಿವರಣೆಯಂತೆ ಜನಿಸಿ ಬಾಳಿಬೆಳೆದು ಉಳಿದು ಹೋದ ನಮ್ಮ ಮಠದ ಮೂಲ ಪುರುಷರಾದ ಶ್ರೀ ಸಿದ್ಧಲಿಂಗ ದೇವರು ಒಬ್ಬರಾಗಿದ್ದಾರೆ. ಅವರ ಲೀಲೆ, ಮಹಿಮೆ, ಪವಾಡ, ಸಿದ್ಧಿ, ಸಾಧನ, ಜನನ; ಮರಣ, ಮೊದಲಾದವುಗಳೆಲ್ಲ ಬಲು ವಿಚಿತ್ರವಾಗಿಯೇ ಇರುವವು. ಅವರ ಚರಿತ್ರೆಯು ಮೇಲಿಂದ ಇವರೂ ಅವತಾರಿಗಳೇ ಹೌದೆಂದು ಅನಿಸದೆ ಇರಲಾರದು. ಮುಂದೆ ಸಾಧಿಸಿದರೆ ಅವರ ಸಂಕ್ಷೇಪ ಚರಿತೆಯನ್ನು ವಿವರಿಸುವೆನು. ಇವರು ಮಹಾ ಶಿವಶರಣರು ಷಟ್ಸ್ಥಲಗಳನ್ನು ದಾಟಿದವರು. ವೀರಶೈವರಲ್ಲಿ ಇಂಥ ಶರಣರು ಅಧುನಿಕ ಕಾಲದಲ್ಲಿ ಜನಿಸುವದು ಬಹು ವಿರಳ. ಅವರ ಪುಣ್ಯ ಚರಿತೆಯನ್ನು ಶಿವಾನುಭವದ ವಾಚಕರಿಗೆ ಒದಗಿಸಿ ಕೊಡಬೇಕೆಂದು ಬಲವಾದ ಆಶೆಇದೆ. ಇವರ ಚರಿತೆ ಇಲ್ಲಿಯತನಕ ಗುಪ್ತವಾಗಿಯೇ ಇತ್ತು. ನಿನ್ನಿಂದ ಈಗ ಅದು ಪ್ರಕಾಶಕ್ಕೆ ಬರುತ್ತಲಿದೆ, ಬಂದಿದೆ. ಮುಂದಿನ ನನ್ನ ಲೇಖಗಳಲ್ಲಿ ಅವರ ಚರಿತೆಯನ್ನು ದಯವಿಟ್ಟು ಅವಲೋಕಿಸಿರಿ.

ಓಂ ಶಾಂತಿ: ಓಂ ಶಾಂತಿಃ ಓಂ ಶಾಂತಿಃ

---

# ಪತಿವ್ರತೆ

( ಲೇಖಕಿ:— ಶ್ರೀ ಗೋದುತಾಯಿ ಗವಿಮಠ ತೆಗ್ಗಿಹಳ್ಳಿ ತಾ. ಇಂಡಿ )

ಪಾತಿವೃತ್ಯವು ಸ್ತ್ರೀಯರಿಗೆ ಒಂದು ಸಂಜೀವಿನಿಯಂತೆ ಇರುವದು. ಭಾರತದಲ್ಲಿ ಅನೇಕ ಶಿವಶರಣೆಯರು ಸಂತರು ಪತಿವ್ರತೆಯರು ತಮ್ಮ ಮಹಿಮೆಯಿಂದ ಅನೇಕ ಅದ್ಭುತ ಕಾರ್ಯಗಳನ್ನು ಮಾಡಿದ್ದಾರೆ. ಪತಿ ಎಂದರೆ ಗಂಡನು ವ್ರತಾ ಅಂದರೆ ನೇಮ ಪತಿವ್ರತೆ ಎಂದರೆ ಗಂಡನ ನೇಮದಲ್ಲಿರುವದು. ಗಂಡನೆಂದರೆ ವಿಷಯದ ಗಂಡನು ಅಲ್ಲ. ಮಹಾದೇವಿಯಕ್ಕನು ಹೇಳಿದಂತೆ "ಸಾವಿಲ್ಲದ ಕೇಡಿಲ್ಲದ ರೂಹಿಲ್ಲದ ಚಲುವಾಂಗಾನೊಲಿದೆ ಎಲೆ ಅವ್ವಾ ತೇನು ಕೇಳಾ ತಾಯಿ. ಭವವಿಲ್ಲದ ನಿರ್ಭಯ ಚಲುವಂಗೊಲಿದೆ ನಾನು ಕುಲಸೀಮೆ ಇಲ್ಲದ ನಿಸ್ಸೀಮ ಚಲುವಂಗೆ ನಾನೊಲಿದೆ. ಇದು ಕಾರಣ ಚನ್ನಮಲ್ಲಿಕಾರ್ಜುನ ಚಲುವ ಗಂಡು ನೆನಗೆ ಈ ಸಾವು ಕೆಡುವ ಗಂಡರನೊಯ್ದು ಒಲೆಯೊಳಗಿಕ್ಕು" ಎಂದು ಅಕ್ಕನು ಹೇಳದಂತೆ ಎಲ್ಲರ ಗಂಡನು ಹೊರಗೆ ಇಲ್ಲ ತಮ್ಮೊಳಗೆ ಇದ್ದಾನೆ" ಎಲ್ಲರ ಗಂಡರ ಪರಿಯಂತಲ್ಲ ಸುಳಿಯಲಿಲ್ಲ ಸುಳಿದು ಶೃಂಗಾರವ ಮಾಡಲಿಲ್ಲ. ತನ್ನೊಳಗೆ ಎನ್ನ ಬಚ್ಚಿಟ್ಟನಲ್ಲ ಎಂದು ಶ್ರೀ ಬಸವಣ್ಣನವರು ಹಾಡಿದ್ದಾರೆ. ಇದರ ಮೇಲಿಂದ ನೋಡಲಾಗಿ ಎಲ್ಲರ ನಿಜವಾದಗಂಡನು ಒಳಗೇ ಇದ್ದಾನೆ. ಅದರ ಗುರ್ತಿಗಾಗಿಯೇ ಸ್ತ್ರೀಯರು ಹೊರಗಿನ ಗಂಡನನ್ನು ಲಗ್ನವಾಗುವರು. ಈ ಗಂಡನ್ನಾದರೂ ಹೆಂಡತಿಯು ವಿಷಯದಿಂದ ದೂರಿಕರಿಸಲಿಕ್ಕೆ ಸದಾ ಎತ್ನಿಸಬೇಕು. ಗಂಡನನ್ನು ವಿಷಯದಲ್ಲಿ ದೂಡಿ ತಾನು ವಿಷಯ ಕೂಪದಲ್ಲಿ ಕೂಳಿತು ಹಾಳಾದರೆ ಎಂದೂ ಪತಿವ್ರತೆಯಾಗಲಾರರು. ಇದೆಲ್ಲ ನಿರ್ವಿಷಯದ ಸತಿಪತಿಗಳಿದ್ದರೆ ಬಹು ಹೆಚ್ಚಿನ ಸ್ಥಿತಿಯು ಪ್ರಾಪ್ತವಾಗುವದರಲ್ಲಿ ಸಂದೇಹವಿಲ್ಲ. ಶ್ರೀ ರಾಮಕೃಷ್ಣ ಪರಮಹಂಸರು ಮತ್ತು ಅವರ ಪತ್ನಿ ಶ್ರೀ ಶಾರದಾಮಾತೆಯವರು ನಿರ್ವಿಷಯ್ಯಗಳಿದ್ದುದರಿಂದ ಅಘಟಿತ ಘಟನೆ ಮಾಡುವ ಸಾಮರ್ಥ್ಯಶಾಲಿಗಳಾಗಿ ಮಹಾಪತಿವ್ರತೆ ಎನಿಸಿಕೊಂಡು ಹೋದರು. ಮಹಾತ್ಮಾ ಗಾಂಧಿಯವರು ಒಮ್ಮೆ ಹೊಸರಿತ್ತಿ ಆಶ್ರಮದಲ್ಲಿ ಒಂದು ಲಗ್ನದ ಸಮಯಕ್ಕೆ ಸತಿಪತಿಗಳಿಬ್ಬರಿಗೂ ಇದೇ ತರದಉಪದೇಶವನ್ನು ಮಾಡಿದ್ದಾರೆ. ಸತಿ ಎಂದರೆ ಪತಿಗೆ ದಾರಿಯಲ್ಲಿ ಜೊತೆಗಾರ್ತಿ ಗೆಳತಿ. ಒಬ್ಬರಿಗೊಬ್ಬರು ಜೋಡಿಯಾಗಿ

ಸಾಹಕರಾಗಿ ದಾರಿನಡಿಯುವದು, ಹೊರತು ಒಬ್ಬರು ಇನ್ನೊಬ್ಬರ ವಿಷಯು ವನ್ನು ತೃಪ್ತಿಪಡಿಸುವದಕ್ಕೆ ಈ ಲಗ್ನವಿರುವದಿಲ್ಲೆಂದು ನಿರ್ವಿಷಯದ ಬಗ್ಗೆ ಒಳ್ಳೇ ಸರಸಾಗಿ ಹೇಳಿದ್ದಾರೆ.

ಪಾತಿವ್ರತ್ಯವು ಒಂದು ಮಹಾದೊಡ್ಡ ತಪವು. ಅದರಿಂದ ಬೇಕಾದಂಥ ಅದ್ಭುತಕಾರ್ಯಗಳನ್ನು ಮಾಡುವ ಶಕ್ತಿ, ಅನೇಕ ಕಷ್ಟಗಳನ್ನು ಎದುರಿಸುವ ಸಾಮರ್ಥ್ಯ ಬರುವದು. ಅದಕ್ಕಂತಲೇ ಎಷ್ಟೋ ತಾಯಂದಿರರು ತಮಗೆ ಒದಗಿದ ಕಠಿಣ ಪ್ರಸಂಗಗಳಿಂದ ಕಷ್ಟಗಳಿಂದ ಸಹಜ ಪಾರಾಗಿದ್ದಾರೆ. ರಾಮಾಯಣ ಕಾಲಕ್ಕೆ ಸೀತಾದೇವಿಯು ತನ್ನ ಪಾತಿವ್ರತ್ಯ ಬಲದಿಂದಲೇ ರಾವಣನ ಮಹಾಬಲೆಯಿಂದ ಪಾರಾದಳು. ಪಾಂಡವರ ಪತ್ನಿದ್ರೌಪತಿಯು ಅನೇಕ ವನವಾಸವಾಗಿ ಕೌರವರಿಂದ ಒದಗಿದ ಅಪಮಾನದ ಕಾಲಕ್ಕೆ ಪರಮಾತ್ಮನು ಆಕೆಯ ಪಾತಿವ್ರತ್ಯದ ದರ್ಮಕ್ಕಾಗಿ ಅಕ್ಷಯ ವಸ್ತ್ರಗಳನ್ನು ಕೊಟ್ಟು ಕಾಪಾಡಿದನು. ಸಾವಿತ್ರಿಯು ಪಾತಿವ್ರತ್ಯದ ಬಲದಿಂದಲೇ ಯಮನನ್ನು ಸೋಲಿಸಿ ಸತ್ತ ಗಂಡನನ್ನು ಬದುಕಿಸಿದಳು. ಅನುಸೂಯಾ ದೇವಿಯು ಪಾತಿವ್ರತ್ಯದ ಬಲದಿಂದಲೇ ಬ್ರಹ್ಮ ವಿಷ್ಣು ಮಹೇಶ್ವರರನ್ನು ಮೂರು ಕೂಸುಗಳನ್ನಾಗಿ ಮಾಡಿದ್ದಾಳೆ. ಇದರಂತೇ ಇನ್ನೂ ಅನೇಕ ಮಹಾಪತಿವ್ರತೆಯರ ಚರಿತೆಗಳು ಇರುವವು. ಅಕ್ಕ ಮಹಾದೇವಿಯಂಥ ಪತಿವ್ರತೆ ಇನ್ನೊಬ್ಬರಿಲ್ಲ. ಆತ್ಮ ಸಾಕ್ಷಾತ್ಕಾರ ಮಾಡಿಕೊಂಡವರೇ ಪತಿವ್ರತೆಯರು. ಅವರೇ ಮುತ್ತೈದಿಯರು. ಐದು ಮುತ್ತುಗಳನ್ನು ಧರಿಸಿದವರು. ಅಂದರೆ ಐದು ಇಂದ್ರಿಯಗಳನ್ನು ಮುತ್ತಿನಂತೆ ಚೊಕ್ಕ ಚೆನ್ನವಾಗಿ ಇರಿಸಿಕೊಂಡವರು. ನಾಲಿಗೆ, ಕಣ್ಣು, ಕಿವಿ, ಜನನೇಂದ್ರಿಯ, ಚರ್ಮಗಳನ್ನು ವಿಷಯಗಳಿಂದ ತುಂಬಿ, ತುಂಬಿ, ಹೊಲಸ್ಸು ಮಾಡಿಕೊಂಡವರಲ್ಲ. ಇವುಗಳನ್ನೆಲ್ಲ ಒಳ್ಳೇ ನಿರ್ವಿಷಯಿಗಳನ್ನಾಗಿ ಮಾಡಿಕೊಂಡವರೇ ಮುತ್ತೈದಿಯರು. ಮಂಗಳ ಸೂತ್ರವನ್ನು ಕಟ್ಟಿಕೊಂಡಾಕ್ಷಣಕ್ಕೆ ಯಾರೂ ಮುತ್ತೈದಿಯರಾಗಲಾರರು. ಇದು ಬರೇ ವ್ಯವಹಾರಿಕ ಮುತ್ತೈದಿ ವ್ಯವಹಾರಿಕ ಪತಿವ್ರತೆ ಎನಿಸುವದು.

ಮೇಲೆ ವಿವರಿಸಿದ ಶ್ರೀ ಬಸವಣ್ಣನವರ ಮತ್ತು ಅಕ್ಕ ಮಹಾದೇವಿಯ ವಚನಗಳಂತೆ ಎಲ್ಲರ ಗಂಡನು ಒಳಗೇ ಇರುವನು ಹೊರತು ಹೊರಗಲ್ಲವೆನ್ನುವದು ಸುಸ್ಪಷ್ಟವಿದೆ. ಅದಕ್ಕಾಗಿಯೇ "ಒಳಗಿನ ಗಂಡನವ್ವಾ ಹೊರಿ

ಗಿನ ಮಿಂಡನವ್ವಾ. ಎರಡನು ನಡಿಸಲು ಬಾರದಯ್ಯ! ಲೌಕಿಕ ಪಾರಮಾರ್ಥ ವೆಂಬೆರಡು ನಡಿಸಲು ಬಾರದಯ್ಯ. ಚನ್ನಮಲ್ಲಿಕಾರ್ಜುನಯ್ಯ ಬಿಲ್ಲು ಬೆಳವಲಕಾಯಿ ಒಂದಾಗಿ ಹಿಡಿಯಲು ಬಾರದಯ್ಯ" ಎಂದು ಅಕ್ಕನೇ ಹಾಡಿದ್ದಾಳೆ. ಇದರ ಮೇಲಿಂದ ಪತಿವ್ರತೆ ಎಂದರೆ ಯಾರು, ಮುತ್ತೈದಿ ಎಂದರೆ ಯಾರು ಎಂದು ಸ್ಪಷ್ಟವಾಗಿ ಹೊಳೆಯದೆ ಇರಲಾರದು.

ಮೀರಾಬಾಯಿಯು ವಿಷಯದ ಗಂಡನನ್ನೇ ತೊರೆದು ದೇಗುಲದಲ್ಲಿ ನೆಲಿಸಿ ಭಿಕ್ಷಾನ್ನದಿಂದ ಜೀವಿಸಬೇಕಾಯಿತು. ಆಕೆಯು ಶ್ರೀ ಕೃಷ್ಣನೇ ತನ್ನ ಗಂಡನೆಂದು ನೆರೆನಂಬಿ ಸಾಧನಗಳನ್ನು ಮಾಡಿ ಮಧುರ ಭಾವದಿಂದ ಅವನನ್ನು ಕಂಡಿದ್ದಾಳೆ. ಈಕೆ ಗಂಡನನ್ನು ಬಿಟ್ಟರೂ ಗೈಯಾಳಿ ಎನಿಸಿ ಕೊಳ್ಳದೆ, ಮಹಾಪತಿವ್ರತೆ ಎನಿಸಿಕೊಂಡಳಲ್ಲವೆ? ಅದರಂತೆ ಅಕ್ಕ ಮಹಾದೇವಿಯು ವಿಷಯದ ಕಾಮುಕ ಕೌಶಿಕನನ್ನು ಬಿಟ್ಟು ಮಲ್ಲಿಕಾರ್ಜು ನನನ್ನೇ ತನ್ನಗಂಡನೆಂದು ಅರಣ್ಯವಾಸಿಯಾಗಿ ಗಡ್ಡೆ ಗೆಣಸುತಿಂದು ಸಾಧನ ಮಾಡಿ ಮಹಾಪತಿವ್ರತೆ ಎನಿಸಿಕೊಂಡಳಲ್ಲವೆ? ಇಂಥವರೇ ಹೆಚ್ಚಿನ ಮುತ್ತೈದಿಯರೇ ಸರಿ. ಇಂಥವರ ಸೇವೆ ನಾಮಸ್ಮರಣೆ ಮೊದಲಾದವು ಗಳನ್ನು ಮಾಡಿದರೆ ಪಾವನರಾಗುವರು.

ಋಷಿಗಳ ಹೆಂಡರೆಲ್ಲ ಇದೇ ತರದ ನಿಷ್ಕಾಮ ಜೀವನವನ್ನು ಸಾಗಿಸಿ ಮಹಾ ಪತಿವ್ರತೆಎನಿಕೊಂಡರು. ಲೋಪಾಮುದ್ರೆ, ಸುಮತಿ, ಸುರಭಿ, ಪುಷ್ಪವೇಣಿ, ಸುಮುಖದೇವಿ, ಪ್ರಭಾವತಿ, ಗಾರ್ಗೆಯಿ, ಅರುಂಧತಿ, ಗಾಯತ್ರಿ ಮೊದಲಾದವರೂ ಪ್ರಸಿದ್ಧ ಪತಿವ್ರತೆಯರೇ ಇದ್ದರು. ಇವರೆಲ್ಲ ಮೇಲೆ ವಿವರಿಸಿದಂತೆ ಋಷಿಗಳ ಕೂಡ ಗೆಳತಿಯರಂತೆ ಇದ್ದರು ಶರಣರ ಹೆಂಡರೆಲ್ಲ ನಿಷ್ಕಾಮುವಾಗಿ ತಮ್ಮ ಜೀವನವನ್ನು ಒಳ್ಳೇ ಸಾದಾ ರೀತಿ ಯಿಂದ ಸಾದಾ ಉದ್ಯೋಗದಿಂದ ಸಾಗಿಸಿ ಮಹಾ ಪತಿವೃತೆಯರೆನಿಸಿದರು. ಗಂಗಾಂಬಿಕೆ, ನೀಲಾಂಬಿಕೆ, ಲಿಂಬೆಕ್ಕ ರೆಮ್ಮವ್ವ, ಮುಕ್ತಾಯಕ್ಕ ಮಹಾ ದೇವಿ, ಕಾಳವ್ವೆ, ಗೊಗ್ಗವ್ವೆ, ಸತ್ಯಕ್ಕ, ನೀಲಲೋಚನೆ, ಮೊದಲಾದ ಅನೇಕ ಶಿವಶರಣೆಯರು ತಮ್ಮ ನಿಷ್ಕಾಮ ಜೀವನದಿಂದ ಇದ್ದು, ಸದಾ ಭಕ್ತಿಜ್ಞಾನಗಳನ್ನು ಗೈದು ಅದ್ಭುತಕಾರ್ಯಗಳನ್ನು ಮಾಡಿದರು. ಮತ್ತು ಅತ್ಯುತ್ತಮವಾದ ಸರಸಾದ ವಚನಗಳನ್ನು ರಚಿಸಿದರು. ಇವರೆಲ್ಲರೂ ಶಿವಾನುಭವ ಮಂಟಪಕ್ಕೆ ಹೋಗಿ ತಮ್ಮ ಅನುಭವಗಳನ್ನು ವಚನಗಳ ಮುಖಾಂತರ ತಿಳಿಸುತ್ತಿದ್ದರು.

ಹೇಮರಡ್ಡಿ ಮಲ್ಲಮ್ಮನು ಮಹಾ ಪತಿವ್ರತೆ ಎನಿಸಿದಳು. ಆಕೆಗೆ ಹುಚ್ಚ ಗಂಡನಿದ್ದನು. ಅತ್ತಿಗೆ ನೆಗೆಯಣ್ಣಿಯರು ಅತಿ ಕಾಡಿ ಅಡವಿಗೆ ಅಟ್ಟಿದರು ಶೀಲ ಬಿಡದೆ ದನ ಕಾಯುತ್ತ ಸದಾ ಮಲ್ಲಿಕಾರ್ಜುನನನ್ನು ಧ್ಯಾನಿಸಿದಳು ಆಕೆಗೆ ಮಲ್ಲಿಕಾರ್ಜುನನು ದರ್ಶನಕೊಟ್ಟನು. ತನ್ನ ಪಾತಿವ್ರತ್ಯದಿಂದ ರಡ್ಡೀ ಕುಲಕ್ಕೆ ಶಿರಿತನವನ್ನು ತಂದು ಕೊಟ್ಟಳು. ಹುಚ್ಚಗಂಡನನ್ನು ಸುಜ್ಞಾನಿಯನ್ನಾಗಿ ಮಾಡಿದಳು. ಮನೆಯವರ ರೋಗ ನಿವಾರಿಸಿದಳು. ಹೋದ ಸಂಪತ್ತನ್ನು ಪುನಃ ಪಡೆದಳು. ಎಲ್ಲರೂ ಆಕೆಗೆ ದಾಸಾನುದಾಸರಾದರು. ಇದೆಲ್ಲ ಪತಿವ್ರತೆಯ ಮಹಿಮೆ. ಈಕೆಯೂ ಕೂಡಾ ಗಂಡನ ಕೂಡ ಸಂಸಾರ ಮಾಡಿಲ್ಲ.

ಇದರಂತೆ ಸಖುಬಾಯಿ, ಜನಾಬಾಯಿ, ಮುಕ್ತಾಬಾಯಿ ಮೊದಲಾದ ವರೂ ವಿಷಯದ ಗಂಡನೊಡನೆ ಸಂಸಾರ ಸಾಗಿದರೆ ಮಹಾ ಪತಿವ್ರತೆಯರಾಗಿ ಹೋಗಿದ್ದಾರೆ. ಇವರೆಲ್ಲರೂ ಅದ್ಭುತ ಕಾರ್ಯಗಳನ್ನು ಮಾಡಿದ್ದಾರೆ. ಸ್ತ್ರೀಯರಲ್ಲಿ ಧರ್ಮ ಜಾಗ್ರತೆಯನ್ನು ಗೈದಿದ್ದಾರೆ. ನೀತಿ ಶೀಲಗಳನ್ನು ಬೆಳಿಸಲು ಹೆಣಗಿದ್ದಾರೆ. ಆದರೂ ಸಂಸಾರದಲ್ಲಿಯೂ ಇವರಲ್ಲಿ ಕೆಲವರು ಇದ್ದರು. ಪೂರ್ವಭಾಗದಲ್ಲಿ ಕೆಲವರು ಅಲ್ಪಸ್ವಲ್ಪ ಸಂಸಾರಮಾಡಿ ಒಂದೆರಡು ಮಕ್ಕಳನ್ನು ಕೂಡ ಪಡೆದಿದ್ದಾರೆ. ತಿಳಿದ ಮೇಲೆ ಉತ್ತರ ಭಾಗದಲ್ಲಿ ಸಂಸಾರದ ವಿಷಯವನ್ನು ತ್ಯಾಗಮಾಡಿ ಗಂಡನೊಡನೆ ಬರೇ ಗೆಳತಿಯಂತೆ ಜೀವನ ಸಾಗಿಸಿದ್ದಾರೆ. ಆಗ ಗಂಡ ಹೆಂಡರಿಬ್ಬರೂ ನಿಷ್ಕಾಮಿಗಳಾಗಿ ಜಗದಲ್ಲಿ ಜೀವಿಸಿದ್ದಾರೆ. ಬಹುತರ ಎಲ್ಲ ಶರಣ ಶರಣೆಯರು ಎಲ್ಲ ಸಂತ ಜನರು ಎಲ್ಲ ಋಷಿಗಳು ಈ ಪ್ರಕಾರ ಸಂಸಾರ ಸಾಗಿಸಿದ್ದು ಕಂಡು ಬರುತ್ತದೆ ಶ್ರೀ ರಾಮಚಂದ್ರನು ಸೀತಾದೇವಿಯೊಡನೆ ಇಡೀ ಆಯುಷ್ಯದಲ್ಲಿ ಒಂದೇದಿನ ಸಂಸಾರ ಮಾಡಿದ್ದು ಕಂಡು ಬರುವದು. ಅದಕ್ಕಾಗಿಂತಲೇ ಇಂಥ ತಪಸ್ವಿಗಳ ಹೊಟ್ಟೆಯಿಂದ ಬಹು ವೀರರಾದ ಲವ ಕುಶರು ಜನಿಸಿದರು. ತ್ಯಾಗ ವೈರಾಗ್ಯಗಳೇ ನಮ್ಮ ಧರ್ಮದ ತಳಹದಿಗಳು. ಜಗತ್ತು ಸುಸೂತ್ರವಾಗಿ ಸಾಗಬೇಕೆಂಬ ಸದುದ್ದೇಶದಿಂದ ಅತಿ ಸ್ವಲ್ಪ ಸಂಸಾರವನ್ನು ಪೂರ್ವಭಾಗದಲ್ಲಿ ಮಾಡುವದೇ ಇರುವದು ಹೊರತು ಈಗಿನಂತೆ ಸದಾ ಅದರಲ್ಲಿಯೇ ಮುಳುಗುವದಲ್ಲ. ಇದರಿಂದ ಯಾವ ದಿವ್ಯ ಶಕ್ತಿಗಳು ಕೈ ಸೇರುವದಿಲ್ಲ. ಅದಕ್ಕಾಗಿ ತ್ಯಾಗವೇ ಸುಖ, ಭೋಗವೇ ದುಃಖ ವೆಂದು ಗಾದೆ ಇದೆ.

ಮಹಾ ಪತಿವೃತೆಯರ ನಿಜವಾದ ಚರಿತೆಯನ್ನು ಅಭ್ಯಸಿಸಿದರೆ ಈ ಮೇಲಿನ ವಿವರಣೆಯಂತೆ ಇದ್ದವರೇ ಹೆಚ್ಚೆಚ್ಚಾಗಿ ಪ್ರಸಿದ್ಧಿಗೆ ಬಂದ್ದದ್ದು ಗೊತ್ತಾಗುವದು. ಅವರವರ ತ್ಯಾಗದ ಮೇಲೆ ಪವರಿಗೆ ಶಕ್ತಿ ಬರುವದು.

ಭಾರತ ದೇಶಕ್ಕೆ ಇಂಥ ಪತಿವ್ರತೆಯರ ಅವಶ್ಯಕತೆಯು ಬಹಳೇ ಇದೆ ಅಂದರೆ ನಿಜವಾದ ಭಾರತದ ಉದ್ಧಾರವಾಗುವದು. ಈಗ ಪಾಶ್ಚಿಮಾತ್ಯರ ಪ್ರಭಾವದಿಂದ ನಮ್ಮ ಸ್ತ್ರೀಯರಲ್ಲಿ ಅವರ ಆಚಾರ ವಿಚಾರ ಪೋಷಾಕ ಚಯನಿಗಳು ಬಂದು ಸೇರಿವೆ. ಹೀಗಾಗಿ ಈಗಿನ ಕಾಲದಲ್ಲಿ ಆದರ್ಶ ಹಿಂದು ಮಾತೆಯರು ಸಿಗುವದು ಬಹು ಕಠಿಣವಾಗಿದೆ. ಎಲ್ಲರೂ ಬರೇ ಶೃಂಗಾರಕ್ಕೆ ಬಲಿ ಹೋಗಿದ್ದಾರೆ. ಐಷ ಆರಾಮದಲ್ಲಿ ವಿಲಾಸದಲ್ಲಿ ಕಾಲ ಕಳೆಯುವರು, ಒಬ್ಬರನ್ನು ಕಂಡು ಒಬ್ಬರು ಹೀಗೆ ಮಾಡಹತ್ತಿದ್ದರಿಂದ ಹಳ್ಳಿಗಳಲ್ಲಿಯೂ ಕೂಡ ಪಟ್ಟಣದ ಸ್ಥಿತಿಯೇ ಬಂದಿದೆ. ಒಳಗಿನ ಗಂಡನನ್ನೇ ಮರೆತಿದ್ದಾರೆ ಬರೇ ಹೊರಗಿನ ವನಪು ವೈಯಾರಕ್ಕಾಗಿಯೇ ತಮ್ಮ ಎಲ್ಲ ಸಾಮರ್ಥ್ಯಗಳನ್ನು ಕಳೆಯುತ್ತಿರುವರು. ಈ ಪಾಶ್ಚಿಮಾತ್ಯ ಪದ್ಧತಿಯನ್ನು ಭಾರತ ಮಹಿಳೆಯರು ಎಷ್ಟು ತೀವ್ರ ಬಿಡುವರೋ ಅಷ್ಟು ತೀವ್ರ ದೇಶೋದ್ಧಾರವೂ ಕೂಡ ಆಗುವದು.

ಎಲ್ಲ ನನ್ನ ಅಕ್ಕ ತಂಗಿಯರೇ ಆದರ್ಶ ತ್ಯಾಗ ವೀರಮಾತೆಯರಾಗಿರಿ. ವಿಷಯಕ್ಕೆ ಹರಿಯದಿರಿ. ಶೃಂಗಾರಕ್ಕೆ ಒನಪು ವೈಯಾರಕ್ಕೆ ಮೆಚ್ಚದಿರ್ರಿ. ಹೊರಗಿನ ಗಂಡನೇ ತಮ್ಮ ಅಂತರಂಗದ ಆತ್ಮನ ಕುರುಹು ಎಂದು ಅವನ ಸೇವೆಯನ್ನು ಗೈದು ಸ್ವಲ್ಪ ದಿನಗಳಲ್ಲಿ ನಿರ್ವಿಷಯಕ್ಕೆ ಅವನನ್ನು ತಂದು ನೀವೂ ನಿರ್ವಿಷಯಿಗಳಾಗಿ ಬಲಶಾಲಿಗಳಾಗಿ ಮಹಾ ಪತಿವ್ರತೆಯರಾಗಿರಿ ಎಂದು ವಿನಂತಿಸಿ ನನ್ನ ಲೇಖಣಿಯನ್ನು ಕೆಳಗಿಡುವೆನು.

ಓಂ ಶಾಂತಿಃ ಓಂ ಶಾಂತಿಃ ಓಂ ಶಾತಿಃ

---

# ಅಮರಗಣಂಗಳ ಅರಿವು.

( ಲೇಖಕ :- ಶ್ರೀ ಸಿ. ನಾ. ಮಹಾಂತಣ್ಣವರ ಮು. ಹೊಸೂರ )

ವಿಜ್ಞಾನ ಶಾಸ್ತ್ರ ಸಂಬಂಧ ವಿಚಾರಿಸಿದರೆ ಕಾಲಕಾಲಕ್ಕೆ ಪದಾರ್ಥ ವಿಜ್ಞಾನ ಶಾಸ್ತ್ರವು ವಿಕಾಸ ಹೊಂದುತ್ತ ಇಂದಿನ ಸುಧಾರಿಸಿದ ರಾಷ್ಟ್ರಗಳ ವ್ಯವಹಾರದಲ್ಲಿ ತನ್ನ ಸೇವೆಯನ್ನು ಸಲ್ಲಿಸುತ್ತಿರುವದು ಕಂಡು ಬರುತ್ತದೆಂಬದು ವಿದ್ಯುಚ್ಛಕ್ತಿಯ ದೀಪ, ಆ ಶಕ್ತಿ ತತ್ವದ ಉಪಯೋಗದಿಂದ ಅನೇಕ ತರದ ಎಂಜಿನಗಳ ಚಲನ, ಇನ್ನಿತರ ಎಷ್ಟೋ ಸಣ್ಣ ಕೆಲಸಗಳಲ್ಲಿ ಅದರ ಉಪಯೋಗ, ಇದರಂತೆ ಸ್ಟೇಶನರಿ ಅಂಗಡಿಯಲ್ಲಿಯ ವಿಧ ವಿಧ ಸಾಮಾನುಗಳ ಅಸ್ತಿತ್ವವು, ವಿಜ್ಞಾನದ ವಿಷಯಗಳೇ ಆಗಿವೆ. ಇದರಂತೆ ನಾದಾತ್ಮಕ ಶಕ್ತಿಯ ಬಗ್ಗೆ ಮನವೆಂದರೆ ರೇಡಿಯೋ ತಾರಾಯಂತ್ರ, ಫೋನ, ಫೋನೋಗ್ರಾಫ, ತಂತೀವಾದ್ಯ, ಚರ್ಮವಾದ್ಯ, ಜಲವಾದ್ಯಗಳು ಬಳಿಕೆಯಲ್ಲಿ ಬಂದಿವೆ. ನ್ಯೂಟನನ ಸಪ್ತವರ್ಣದ ಶೋಧ ಆರ್ಕಮಿಡಿಸನ ಸಿದ್ಧಾಂತ, ಗ್ಯಾಲಿಲಿಯೋನ ದೂರದರ್ಶಕಯಂತ್ರ, ತಾಮಸ ಎಡಿಸನ್‌ನ ಫೋನೋಗ್ರಾಫ, ತಂತಿಯಿಲ್ಲದ ವಿದ್ಯುತ್ ಸಂದೇಶ, ಸಿನೇಮಾ, ಮಾತಾಡುವ ಸಿನೇಮಾ, ಮಾರ್ಕೋನಿಯ ತಂತಿಯಿಲ್ಲದ ತಾರಾಯಂತ್ರದ ಶೋಧ, ಅಂಡಮಾರಿಯಾಂಪಿಯರನ ವಿದ್ಯುತ್ಪ್ರವಾಹವನ್ನು ಅಳೆಯುವ ಮಾಯಕಲ್ ಪ್ಯಾಡೆಶನ ಉದ್ರೇಕವಾದ ವಿದ್ಯುತ್ಪ್ರವಾಹದ ಶೋಧಗಳಂತೆ ಪರಲೋಕ ಪರಾಯಣರೂ ಮಹಾಜ್ಞಾನಿಗಳೂ ಆದ ಬುದ್ಧ, ಕ್ರಿಸ್ತ, ಮಹಮ್ಮದಪೈಗಂಬರ ವ್ಯಾಸ ವಸಿಷ್ಠ ವಾಸುದೇವ ಅಗಸ್ತ್ಯ ಶಂಕರಾಚಾರ್ಯ ಮಾಧ್ವರಂತೆ ಪಂಚಾಚಾರ್ಯರ ಆಚಾರಕ್ರಿಯೆಗಳೂ ಬಸವನ ಭಕ್ತಿಯೂ ಚನ್ನಬಸವನ ಜ್ಞಾನವೂ ಪ್ರಭುದೇವರ ವೈರಾಗ್ಯವೂ ಷಟ್‌ಸ್ಥಲ ಜ್ಞಾನಕ್ಕೆ ಅನುವಾಗಿರುವವು. ಈ ಅನುವನ್ನು ಅನುಸರಿಸಿ ಮೇಲು ಮಂದಿರಕ್ಕೆ ಹೋದವರೇ ಅಮರಗಣಂಗಳು. ಈ ಗಣವರರ ಪಂಚ ಪರುಷಗಳೂ ಪವಾಡಗಳೂ ಆದ ಇವೆಲ್ಲವುಗಳ ಅಘಟನಾ ಘಟನೆಯ ಸಾಮರ್ಥ್ಯದ ಅರಿವು ಆಗುವದು ಸಜ್ಜೀವಿಗಳಿಗೆ ಅತ್ಯವಶ್ಯವು. ಇನ್ನಿತರ ಜೀವಿಗಳಿಗೆ ಅಸಾಧ್ಯವು. ಇದನ್ನು ಮನದಂದು ಶ್ರೀ ಪ್ರಭುದೇವರು ತಮ್ಮ ಮಂತ್ರಗೋಪ್ಯದಲ್ಲಿ "ಖೇಚರತ್ವದ ನೆಲೆಯ ಭೂಚರರು ಬಲ್ಲರೆ। ವಾಚಳ

ಕರ ಮಾತಿಗಿದು ಸಲ್ಲದು॥ ಆಚಾರದನು ಭಾವ ಭಕ್ತಿನೆಲೆಗೊಂಡವಗೆ, ಗೋಚರಿಸುವದಾ ಮಹಾ ಪರಮಪದವು " ಎಂದು ನಿರ್ಧರಿಸಿದ್ದಾರೆ.

ಗುರುವಿನ ಕರಕಮಲದಲ್ಲಿ ಹುಟ್ಟಿದುದೇ ಆದಿ, ಗುರುಲಿಂಗ ಜಂಗಮದ ಪ್ರಸಾದ ಕೊಂಬುದೆ ಮಧ್ಯ, ಜಂಗಮದಲ್ಲಿ ಲಯವಾದುದೇ ಅವಸಾನ. ಎಂದು ಎಲ್ಲ ಗಣಂಗಳು ಕರುಣಿಸಿ ಎನಗೆ ಮರ್ತ್ಯಲೋಕಕ್ಕೆ ಹೋಗಿ, ಭಕ್ತಗಣಂಗಳ ಕೈಲಿ ಹೋಯಿಸಿಕೊಂಡು, ಬೈಸಿಕೊಂಡು, ಬುದ್ಧಿಕಲಿಸಿ ಕೊಂಡು ಅವರ ಒಕ್ಕುಮಿಕ್ಕ ಪ್ರಸಾದವ ಹಾರೈಸಿಕೊಂಡು, ಅವರ ನೆರೆ ಮನೆ ಹೊರಮನೆಯಲ್ಲಿರ್ದು ಅವರ ಕರುಣ ಪ್ರಸಾದವ ಕೊಂಡು ಬಾ ಯೆಂದು ಆಜ್ಞೆಯನಿತ್ತೊಡೆ, ಇಂತೆಂಬ ಭೇದವನರಿಯದೆ ಅರುಹಿದನಾಗಿ, ಗಣದಾಸಿವೀರಣ್ಣನೆಂಬ ನಾಮವಾಂತು ಎನ್ನ ಮನದ ಘನವೆ ಸತ್ಯಣ್ಣ, ಆ ಸತ್ಯಣ್ಣನ ಮನೆಯ ಬಂಟನಯ್ಯಾ ನಮ್ಮ ನೂತನ ಗಣಂಗಳು ಸಲಹಿ ಸಾಕಿ ಸಲಹಿದರಯ್ಯಾ, ಅವರಸಂಶಯವಿಸಲಯ್ಯಾ, ಅವರು ಮಹಾದೇವ ನಲ್ಲದೆ ಬೇರುಂಟೆ ? ಅವರ ಮನೆಯ ದಾಸಿಯದಾಸನು, ಅವರ ಹೊಲವಡಿಗನು ನಾನು, ನೂತನ ಗಣಂಗಳೆಲ್ಲರು ಎನ್ನ ಇಷ್ಟಲಿಂಗದೊಳಗೆ ತೋರಿದ ನಮ್ಮ ಶಾಂತ ಕೂಡಲಸಂಗಮದೇವಾ ॥ ತಮಂಧಾಕಾರದ ಮೋಡವಿಲ್ಲದ ನಿರ್ಮಲವಾದ ಆಕಾಶದಂತೆ, ಎಲೆಯಿಲ್ಲದ ವೃಕ್ಷದಂತೆ, ರೆಕ್ಕೆ ಇಲ್ಲದ ಪಕ್ಷಿಯಂತೆ, ಗಾಳಿಯಿಲ್ಲದ ದೀಪದಂತೆ, ನೊರೆ ತೆರೆ ಬುದ್ಬುದಾಕಾರ ವಿಲ್ಲದ ಸಮುದ್ರದಂತೆ ಇರುವದೇ ಸಹಜಜ್ಞಾನ, ಹೀಗೆಂದು ತೋರಿದಾತ ನಮ್ಮ ಶಾಂತಕೂಡಲಸಂಗಮದೇವಾ ॥

ಓಂಕಾರ ನಾದವು ಪಿಂಡಬ್ರಹ್ಮಾಂಡವ ತುಂಬಿಕೊಂಡಿರುವದು, ಅದು ಮಹಾಜ್ಞಾನಿಗಳಿಗೆ ಪ್ರತ್ಯಕ್ಷವಾಗಿರ್ಪದು, ಆ ನಾದವಿಲ್ಲದಿರ್ದೊಡೆ ನಿರ್ಜೀವಿಗಳು ಹೇಗೆ ನುಡಿಯುವವು ? ನಿರ್ಜೀವಿಗಳಾವವೆಂದರೆ— ಕುಡು ವಿಡಿದಶಬ್ದ, ಚರ್ಮವಾದ್ಯ, ಭೇರಿ, ತಮ್ಮಟೆ, ಸಮ್ಮಾಳ, ಡೊಳ್ಳು ಮತ್ತು ಲೋಹವಿಡಿದ ಶಬ್ದ, ತಾಳ, ಕಂಸಾಳ, ಘಂಟೆ, ಕಾಳೆ, ಕರ್ನಿ, ನಪೂರಿ, ಸ್ವನಾಯ, ಮತ್ತಂ, ತಂತಿವಿಡಿದ ಶಬ್ದ, ಕಿನ್ನರಿ, ವೀಣೆ, ಕಾಮಾಕ್ಷಿ, ತಂಬೂರಿ, ರುದ್ರವೇಣಿ, ಮತ್ತಂ, ಆಕಾಶನೊಳಗೆ ಶಬ್ದವನಿಕ್ಕಿದರೆ ಪ್ರತಿ ಶಬ್ದ ಕೊಡುವದು ಮತ್ತಂ ದೇಗುಲದೊಳಗೆ ನುಡಿದರೆ ಹಾಗೆ ನುಡಿವದು. ಇಂತು ಪರಿಪೂರ್ಣವಸ್ತು ಇಲ್ಲದಿರ್ದೊಡೆ ಈ ನಿರ್ಜೀವಿಗಳು ಹೇಗೆ ನುಡಿ

ವವು? ಈ ನಾದ ಶಬ್ದವು ಅವ ಘಟದೊಳಗೆ ಹೊಕ್ಕು ಆ ಘಟದ ಶಬ್ದ ಕೊಡು ತ್ತಿಹುದು ಆ ಘಟದ ಗುಣವೆಂದು ತಿಳಿದು ನಮ್ಮ ಗಣಂಗಳು ಆಘಟದ ಗುಣಂಗಳ ಬಿಟ್ಟು ಪಿಂಡ ಬ್ರಹ್ಮಾಂಡದೊಳಗೆ ಇಪ್ಪ ಪರಿಪೂರ್ಣ ವಸ್ತು ವಿನೊಳಗೆ ಬೆರೆದು, ಎನ್ನೊಳಗರುಹಿದಾತ ನಮ್ಮ ಶಾಂತಕೂಡಲಸಂಗಮ ದೇವಾ ||

ಲೀಲಾಕಾರ ಪರವಸ್ತು ತನ್ನ ಲೀಲಾ ವಿನೋದಕ್ಕಾಗಿ, ಎರಡು ಮುಖದಿಂದೆ ಎರಡು ಸೃಷ್ಟಿಯ ಮಾಡಿದನು. ಅವರೊಳಗೆ ಒಂದು ಊರ್ಧ್ವ ಸೃಷ್ಟಿ ಒಂದು ಅಧೋಸೃಷ್ಟಿ ಅಧೋ ಸೃಷ್ಟಿ ಅವುದೆಂದೊಡೆ — ಅಂಡಜ, ಪಿಂಡಜ, ಜರಾಯುಜ, ಉದ್ಭಿಜ. ಈ ನಾಲ್ಕುಕೂಡಿ, ಎಂಭತ್ತುನಾಲ್ಕು ಲಕ್ಷ ಜೀವರಾಶಿಗಳ ಮಾಡಿದನು. ಇವರಿಗೆ ಸ್ವರ್ಗ ನರಕ, ಇಹ ಪರ, ಪುಣ್ಯ ಪಾಪ, ಧರ್ಮ ಕರ್ಮ, ಹುಸಿ ಖರೆ, ಸತ್ಯ ಅಸತ್ಯ, ಜ್ಞಾನ ಅಜ್ಞಾನ ಹೆಣ್ಣು ಗಂಡು, ಹಿರಿದು ಕಿರಿದು, ಉತ್ಪತ್ತಿ ಸ್ಥಿತಿ ಲಯಕ್ಕಧಿಕಾರಿಂಗಳು ಬ್ರಹ್ಮ ವಿಷ್ಣು ರುದ್ರರ ಮಾಡಿಟ್ಟರು. ಇನ್ನು ಊರ್ಧ್ವ ಸೃಷ್ಟಿ ಹೇಗೆಂದಡೆ— ಅಸಂಖ್ಯಾತ ಮಹಾಪ್ರಮಥಗಣಂಗಳು. ಇವರಿಗೆ ಸ್ವರ್ಗ ನರಕ, ಇಹಪರ ವಿಲ್ಲ. ಪುಣ್ಯ ಪಾಪಗಳಿಲ್ಲ, ಧರ್ಮ ಕರ್ಮ, ಹುಸಿ ಖರೆ, ಸತ್ಯಾಸತ್ಯ ಗಳಿಲ್ಲ. ಜ್ಞಾನ ಅಜ್ಞಾನ, ಹೆಣ್ಣು ಗಂಡು, ಹಿರಿದು ಕಿರಿದುಗಳಿಲ್ಲ. ಉತ್ಪತ್ತಿ ಸ್ಥಿತಿಲಯಕ್ಕೆ ಕರ್ತರಾದ ಬ್ರಹ್ಮ ವಿಷ್ಣು ರುದ್ರರು ಇಲ್ಲ. ಅವರಿಗೆ ಆ ನಿರಾಕಾರ ವಸ್ತುತಾನೇ ಗುರಲಿಂಗ ಜಂಗಮವಾಗಿ, ಗುರುವಿನಲ್ಲಿ ಉತ್ಪತ್ತಿ ಲಿಂಗದಲ್ಲಿ ಸ್ಥಿತಿ, ಜಂಗಮದಲ್ಲಿ ನಿಜೈಕ್ಯವಮಾಡಿ, ಆ ಪರಶಿವ ಮೂರ್ತಿ ತಾನೇ ತನ್ನ ವಿನೋದಕ್ಕೆ ಆಟವಾಡಬೇಕಾಗಿ, ಮಹದಾಕಾಶವ ಮಂಟಪ ದಲ್ಲಿ ಮಾಡಿ, ಆಕಾಶವ ಪರದೆಯಕಟ್ಟಿ, ಅಸಂಖ್ಯಾತ ಮಹಾ ಪ್ರಮಥ ಗಣಂಗಳ ಮೂರ್ತವ ಮಾಡಿಸಿ, ಎಂಭತ್ತು ನಾಲ್ಕು ಲಕ್ಷಜೀವರಾಶಿ ಗಳಿಗೆ ಇಹ, ಪರ, ವಾಂಛೆಯೆಂಬ ಸೂತ್ರವಮಾಡಿ ತಮ್ಮಕೈಯಲ್ಲಿ ಪಿಡಿದು ಚಿತ್ರ ವಿಚಿತ್ರದ ಆಟವಾಡಿಸುವದಕ್ಕೆ ಲೆಕ್ಕವಿಲ್ಲ, ಅದ ಹೇಳುವದಕ್ಕೆಅಸಾಧ್ಯ. ಆ ಪ್ರಮಥಗಣಂಗಳು ನೋಡಿ, ಆ ಬೊಂಬೆಗಳೇನಾಡ್ಯಾವು? ಸೂತ್ರಿಕ ಆಡಿಸಿದ ಹಾಗೆ ಆಡುವವು. ಆ ಬೊಂಬೆಗೆ ಸೂತ್ರ ಶಿವನಲ್ಲದೆ ಇಲ್ಲ. ಆ ಬೊಂಬೆಯೊಳಗೆ ಶಿವನಿದ್ದರೆ. ಆಡಿಸುವದು ಹೇಗೆ? ತನ್ನ ಕೈಯಲ್ಲಿ ಸೂತ್ರವಿಡಿದು ಆಡಿಸುವನಲ್ಲದೆ, ಇವೆಲ್ಲ ಅನಿತ್ಯವೆಂದು ತಿಳಿದು, ಆ ಪ್ರಮ

ಥಗಣಂಗಳು ತಮ್ಮ ಲಿಂಗದಲ್ಲಿ ನಿಜವೋಕ್ಷಿಗಳಾಗಿ ಶಾಂಭವಪುರಕ್ಕೆ ಹೋದ ಭೇದವ ಎನ್ನೊಳಗರುಹಿದಾತ ನಮ್ಮ ಶಾಂತ ಕೂಡಲಸಂಗಮ ದೇವಾ ॥

ಲಿಂಗವೇ ನಿಮ್ಮ ನೆನೆವ ಮನಕ್ಕೆ ಹೊನ್ನು ತೋರಿ, ನಿಮ್ಮ ನೋಡುವ ನೋಟಕ್ಕೆ ಹೆಣ್ಣುತೋರಿ ನಿಮ್ಮ ಪೂಜಿಸುವ ಕೈಗೆ ಮಣ್ಣುತೋರಿ, ಮತ್ತೆ ಗಣಂಗಳು ಸಾಕ್ಷಿಯಾಗಿದ್ದುದ ತಿಳಿದು, ಅವರಿಗೆ ಅಂಜಿ ಮನದ ಕೊನೆಯಲ್ಲಿ ಮಂತ್ರರೂಪವಾಗಿ ನಿಂದ ಕಾರಣ ಹೊನ್ನಿನ ನೆನವು ಕೆಟ್ಟಿತ್ತು, ನೋಟಕ್ಕೆ ರೂಪುರೇಖಾವಿಲಾಸ. ವಿಭ್ರಮ, ಕಳೆಲಾವಣ್ಯ ಸ್ವರೂಪವಾದ ಪರಶಿವ ಮೂರ್ತಿಯ ಮುದ್ದು ಮುಖದ ತುಟಿಯಲ್ಲಿ ಹುಟ್ಟಿದ ಓಂಕಾರ ನಾದಾಮೃತವ ಚುಂಬನವ ಮಾಡಲಿಕ್ಕೆ ಹೆಣ್ಣ ನೋಡುವ ನೋಟ ಕೆಟ್ಟಿತ್ತು. ಕರಕಮಲವೆ ಗದ್ದುಗೆಯಾದ ಕಾರಣದಿಂದ ಮಣ್ಣಿನ ಧಾವತಿ ಬಿಟ್ಟು ಹೋಯಿತ್ತು. ಇಂತು ಮಾಡಿದಿರಿ ಲಿಂಗವೆ. ಮತ್ತೆ ನಿಮಗೆ ಬೇಡಿದರೆ ಹೆಣ್ಣು ಹೊನ್ನು ಮಣ್ಣು ಅಷ್ಟೈಶ್ವರ್ಯ, ರಾಜಪದಸ್ಥಿತಿ ಚತುರ್ವಿಧ ಪದವಿಯ ಕೊಡುವಿರಿ. ಇವೆಲ್ಲ ಅಲ್ಪಸುಖ, ತಾಮಸಕ್ಕೆ ಇಕ್ಕುವವು. ಮತ್ತೆ ನಮ್ಮ ಗಣಂಗಳ ಮನೆಯಲ್ಲಿ ಕೇಡಿಲ್ಲದಂಥ ನಿತ್ಯವಾದ ಐಶ್ವರ್ಯಗಳು, ನಿಧಿನಿಧಾನವುಂಟು. ಅದಕ್ಕೆ ನೀವು ನಾವು ಕೂಡಿ ಬೇಡಿಕೊಂಬುವ ಬನ್ನಿರಿ. ಅವರು ಎಲ್ಲಿ ಐದಾರೆಂದರೆ ಏಳುಪ್ಪರಗೆಯೊಳಗಿಪ್ಪರು. ಅವರು ಆರಾರೆಂದರೆ ಪಶ್ಚಿಮ ಚಕ್ರದ ನಿರಂಜನ ಜಂಗಮವು, ಗುರುಹಿರಿಯರು, ಅಸಂಖ್ಯಾತ ಪ್ರಮಥಗಣಂಗಳು, ಏಳುನೂರೆಪ್ಪತ್ತು ಅಮರಗಣಂಗಳು ಸಹವಾಗಿಪ್ಪರು. ಅವರ ಮಧ್ಯದಲಿ ನೀವೇ ನಾವಾಗಿ ಬೇಡಿಕೊಂಬೆವು. ಬೇಡಿಕೊಂಡ ಮೇಲೆ ಅವರು ಕೊಟ್ಟ ವಸ್ತುವ ಹೇಳುವೆವು. ಕೇಳಿ ಲಿಂಗವೆ, ಜೀವಾತ್ಮ, ಅಂತರಾತ್ಮ, ಪರಮಾತ್ಮ ತ್ರಯವು, ಹೇಮಾದ್ರಿ ರಜತಾದ್ರಿ ಮಂದರಾದ್ರಿಯೆಂಬ ಮೇರುವುಗಳ ಸಜ್ಜೆಯ ಮಾಡಿ, ವಾಯುವೆ ಶಿವದಾರ, ತಯತ್ರಯವೆ ವಸ್ತ್ರ; ಇವ ನಿಮಗೆ ಕೊಟ್ಟರು, ಮತ್ತೆ ನಮಗೆ ಪರಸ್ತ್ರೀಯರಪ್ಪದ ಹಾಗೆ, ನಿಷ್ಕಾಮವೆಂಬ ಉಡುವಣಿಯಮಾಡಿ ಕಟ್ಟಿನಲ್ಲಿಟ್ಟರು. ಕುಶಬ್ದವ ಕೇಳದ ಹಾಗೆ ಬಲದ ಕರ್ಣದಲ್ಲಿ ಷಡಕ್ಷರವಂಟಿಯ ಮಾಡಿಟ್ಟರು ಭಕ್ತಗಣಂಗಳ ನಿಂದೆಯ ಕೇಳದ ಹಾಗೆ ಎಡದ ಕರ್ಣದಲ್ಲಿ ಪಂಚಾಕ್ಷರವನೊಂಟಿ ಮಾಡಿಟ್ಟರು. ಪಂಚಾಂಗುಲಿಗೆ ಪಂಚಾಕ್ಷರ ಐದುಂಗುರ ಮಾಡಿಟ್ಟರು.

ಹಾಗೆ ಬಲದ ಕರ್ಣದಲ್ಲಿ ಷಡಕ್ಷರವಂಟಿಯ ಮಾಡಿಟ್ಟರು ಭಕ್ತಗಣಂಗಳ ಸಿಂದೆಯ ಕೇಳದ ಹಾಗೆ ಎಡದ ಕರ್ಣದಲ್ಲಿ ಪಂಚಾಕ್ಷರವನೊಂಟಿ ಮಾಡಿಟ್ಟರು. ಪಂಚಾಂಗುಲಿಗೆ ಪಂಚಾಕ್ಷರ ಐದುಂಗುರ ಮಾಡಿಟ್ಟರು. ನೂರಾಯೆಂಟು ಹರಗಣ ಮಾಲೆಯ ಕೊರಳಲ್ಲಿ ಹಾಕಿದರು, ಯಾವ ಆಪತ್ತಿಗೆ ಅಂಜಬೇಡವೆಂದು ವಿಭೂತಿ ಧೂಳನವ, ಧಾರಣವ ಜೋಡಂಗಿಯ ಮಾಡಿ ತೊಡಸಿದರು, ಗಣಂಗಳು ಹೋದ ಹಾದಿಯನು ಮುಂಡಾಸವ ಮಾಡಿ ತಲೆಗೆ ಸುತ್ತಿದರು, ಯಾವಕಂಟಕ ಬಾರದಹಾಗೆ ಗಣಂಗಳ ಪಾದಧೂಳಿಯ ಶಲ್ಲೆಯಮಾಡಿ ಹೊಚ್ಚಿದರು, ಭಕ್ತಿಯೆಂಬ ನಿಧಾನವ ಕೊಟ್ಟು ಭಾವದಿ ಬೈಚಿಟ್ಟುಕೊಳ್ಳಿರಿಯೆಂದು ಅರುಹಿ, ಅಷ್ಟಾವರಣವೆ ನಿಧಿನಿಧಾನವೆಂದು ಹೇಳಿದರು, ಇವೆಲ್ಲ ವಸ್ತುವ ನಿಮ್ಮ ನೋಡಿಕೊಟ್ಟರಲ್ಲದೆ ನಿಮ್ಮ ದಾಸಿಯೆಂದು ಅದಕ್ಕೆ ನಿರ್ವ್ಯಾಢವೆಯ ನಿಮಗೆ ಒಪ್ಪಿಸಿಯೆಂದು ಅರುಹಿದರು ನಮ್ಮ ಶಾಂತಕೂಡಲಸಂಗಮದೇವಾ ॥

ಈ ಮಹಿಮರು ಒಡಮೂಡಿಸಿದ ಸಂಗತಿಗಳ ಮೇಲಿಂದ ದೀಕ್ಷಾತ್ರಯಂಗಳ ಅವಶ್ಯವೂ ಗುರುಲಿಂಗ ಜಂಗಮ ಭಕ್ತಿಯೂ ಪಾದೋದಕ ಪ್ರಸಾದಗಳಲ್ಲಿ ನಿಷ್ಠೆಯೂ ರುದ್ರಾಕ್ಷಿ ಮಾಲೆಯ ಮಹತ್ವವೂ ಮಂತ್ರಾರ್ಥ್ಯವರ್ಣಾರ್ಥ್ಯಪದಾರ್ಥ್ಯಗಳ ಅರಿವೂ, ವಿಭೂತಿ ಸ್ನಾನ ಧೂಳನ ಧಾರಣಗಳ ಕಾರಣವೂ ಶಿವಾನುಭಾವಿಗಳಿಗೆ ಹೊಳೆದು ಹೃದಯಾಕಾಶ ನಿಳಯದಲ್ಲಿ ಉಳಿಯಲೆಂದು ಹಾರೈಸಿ, ವಿಜಯಪುರವೇ ಕಲ್ಯಾಣವೆಂಬದನ್ನಷ್ಟು ಮನದಟ್ಟು ಮಾಡದೆ ಇರೆನು.

## ಕಲ್ಯಾಣ

॥ಕಂದ॥ ಕಲ್ಯಾಣಂ ವಿಜಯಪುರಂ। ಕಲ್ಯಾಣಂ ಸಾರ್ವಜನಿಕ
ಶಿಕ್ಷಣದಿಂದ ॥
ಕಲ್ಯಾಣಂ ಸತ್ಕೃತಿಯಿಂ। ಕಲ್ಯಾಣಂ ಶಿವಪುರಾಣ
ಸದ್ಗೋಷ್ಠಿಗಳಿಂ ॥೧॥
ಕಲ್ಯಾಣಂ ಕಾಯಕದಿಂ। ಕಲ್ಯಾಣಂ ಶಿವಶರಣವಚನಸಾರಗಳಿಂ॥
ಕಲ್ಯಾಣಂ ಶರಣರ್ಗಂ। ಕಲ್ಯಾಣಂ ಪ್ರಭು ಬಸವರ
ಸಂಪಾದನೆಗಂ ॥೨॥
ಪರಮಾರಾಧ್ಯರ ಪಾದಂ । ಚರಮೂರ್ತಿ ಚರಣಧೂಳಿ
ದುರಿತವನಳಿಗುಂ ॥

ಶರಣರ ಕರುಣಾರಸದಿಂ। ವರ ಸುಜ್ಞಾನೋದಯಾಬ್ಜ
ವಿಕಸಿತಮಕ್ಕುಂ ॥೩॥
ಅಮರ ಗಣಂಗಳ ಪೂಜೆಗೆ। ಸಮರಸ ಭಾವಂ ಸಮನಿಸೆ
ಲಿಂಗಾನಂದಂ ॥
ಚಮಕಿಪ ಪಾದವ ಪಿಡಿದಿರೆ। ಸಮುಚಿತಸುಸ್ಪರ್ಶನಸುಖವೆ
ಪರಮಾನಂದಂ ॥೪॥
ನಮನದ ಪರಿತಿಳಿಬೇಕೈ । ನಮನಂ ಗುರುದರ್ಶನದೊಳು
ದೀರ್ಘದ್ದಂಡಂ ॥
ನಮನಂ ಕರದಿಂಲಿಂಗಕೆ । ನಮನಂ ಶಿರಮುಟ್ಟಿಸಗಲು
ಜಂಗಮಕೆಂದರ್ ॥೫॥

## ಶಿವಾನುಭಾವಿಗಳಿಗೆ

### ವಿಜಯದಶಮಿಯ ಸುವರ್ಣಾರ್ಪಣ.

॥ಕಂದ॥ ಪ್ರೇಮಂ ಪರತರ ಶಿವನೊಳ್ । ಪ್ರೇಮಂ ಸತ್ಕಾಯಕ
ಸಮಯಾಚಾರದೊಳಂ ॥
ಪ್ರೇಮಂ ಸದ್ಭಕ್ತರೊಳಂ । ಪ್ರೇಮಂ ವರ್ಧಿಸಲಿ
ವಿಜಯ ದಶಮಿಶಮಿಯಿಂ ॥೧॥
ಭವಸಾಗರಮುದಾಂಟಲು । ಶಿವ ಸಂಸ್ಕಾರದ ಹಡಗವ ನಡೆಸಲು
ಕಲಿಯೈ ॥
ಶಿವಶರಣರ ನಡೆನುಡಿಯಿಂ। ಭವಬೀಜಂ ಸುಟ್ಟು, ಹುಟ್ಟ
ಹೋಗ್ವದು ಸತ್ಯಂ ॥೨॥
ನವವಿಧ ಭಕ್ತಿಯ ಬೆಳಗಂ। ನವಲಿಂಗಾಂಗದಸಕೀಲ ಸುಜ್ಞಾನಗಳಿಂ॥
ತವೆ ಥಳಥಳಿಸುತಮಿರುತಿರೆ। ಭವಬಂಧನ ಹರಿದುಹೋಗಿ
ನಿಜಸುಖಮಕ್ಕುಂ ॥ ೩ ॥
ಭಕ್ತಿಯು ಮುಕ್ತಿಯ ನೆಲೆವನೆ । ಶಕ್ತಿಯು ಯಿಹಪರ ಸುಖಕ್ಕೆ
ಸಾಧನಮೆಂದುಂ ॥
ಶಕ್ತಿಯು ಸತ್ಕ್ರಿಯೆಗೂಡಲ್। ಯುಕ್ತಂ ಸುಜ್ಞಾನ ಸಾರ
ಸದ್ಭಕ್ತಂ ತಾಂ ॥೪॥

ನುಣ್ಣಿತ್ತ್ರಾದೀ ಹೃದಯದ। ಕಣ್ಣಿನ ಕಣ್ಣಿಂ ನಿರೀಕಿಸೆ
ಜಗದಾಂತರದೊಳ್ ॥
ಬಿಣ್ಣಪರಾರೀ ಮಹಿಮೆಯು | ತಣ್ಣಿತ್ತ್ರಾದೀ ಜಡಗಿನ ಬೆಳಗುವ
ಪರಿಯಂ ||೬||
ಶಿವ ಪೂಜಾ ಸತ್ಕ್ರಿಯೆ-ಯೊಳ್। ಶವಿದಿಹ ಕರಮನದೊಡೆಯನ
ನಿಟ್ಟಿಸಿ ನೋಡೈ ॥
ಪಡೆಯದ ಸುಖಮದು ದೊರೆಯಲು | ಯಮೆಯಿಕ್ಕದ ದೃಷ್ಟಿಭಾವ
ಬಲಿಯಲು ಬೇಕೈ ||
ಆಸನಮಾಧಾರದೊಳಂ। ಶ್ವಾಸನ ಶಿವಲಿಂಗ
ಪೂಜೆ ಪೂರ್ಣರತಿಯೊಳ್ ||
ಸೂಸುವ ಮನದೃಕ್ಕ್ರಿಯೆ ಯೊಳ್ । ಭಾಸಿಸೆ ಶಿವಯೋಗ ಸಮಾಧಿ
ಸಂಜನಿಸುವದೈ ॥ ೭||
ಸತ್ಕ್ರಿಯೆಯಿಂ ಸುಜ್ಞಾನಂ। ಚಿತ್ಕ್ರಿಯೆಯಿಂ ಚಿನ್ಮಯ ಚಿದಮೃತ
ಚಿಲ್ಲಿಂಗಂ ॥
ಉತ್ಕ್ರಮಿಸಲ್ ದಶಮಾಯುಂ। ನಿಷ್ಕ್ರಿಯೆ ನಿರ್ಗುಣ ನಿರೂಪು ತಾನೇ
ತಾನೈ ||೮||
ಶರಣಂ ಸತ್ಕ್ರಿಯೆ ಲೋಲಂ; ಶರಣಂ ಷಟ್‌ಸ್ಥಲ ನಿವಾಸ ನಿರುಪಮ
ಶೀಲಂ ||
ಶರಣಂ ಮುಕ್ತಿಯ ಮೂಲಂ। ಶರಣಂ ಲಿಂಗಾಂಗ ಸಾಮರಸ್ಯ
ಸಕೀಲಂ ||೯||
ಗುರುಚರ ಜಂಗಮ ಭಕ್ತರ | ಶರಣ ಗಣಂಗಳಡಿದಾವರೆಗಳಂ
ಪಿಡಿದುಂ ॥
ಪರಮಾನಂದದೆ ನಮಿಪೆಂ। ಪರಚಿಚ್ಛಕ್ತಿಯ ದಶದಲ ದಶಮಿಯ
ಶಮೆಯಿಂ || ೧೦ ||

---

# ಶ್ರೀ ಗುರುದೇವನ ಅನುಭವಾಮೃತ

(ಲೇಖಕ:- ಶ್ರೀ ಸ್ವಾಮಿ ಶಿವಾನಂದರು ಗವಿಮಠ, ತೆಗ್ಗಿಹಳ್ಳಿ. ತಾ|| ಇಂಡಿ)



೧

ಈ ಮಣ್ಣಿನ ಗಡಿಗೆ ಒಳಗೂ ಹೊರಗೂ ಹೊಲಸಾಗಿದೆ. ನವ ಛಿದ್ರಗಳಿಂದ ಸದಾ ಸೋರುವದು. ಮೊದಲು ಎಲ್ಲ ಛಿದ್ರಗಳನ್ನು ಮುಚ್ಚು. ಸೋರುವದು ಬಂದಾಗಲಿ. ಅಂದರೆ ಅಡಿಗೆ ಮಾಡಲಿಕ್ಕೆ ಯೋಗ್ಯವಾಗುವದು. ಅಡಿಗೆ ಮಾಡುವ ಮೊದಲು ನಿತ್ಯ ಒಳಹೊರಗು ಹಸನಾಗಿ ತೊಳೆ. ಅಂದರೆ ಮಾಡಿದ ಅಡಿಗೆಯು ಕೆಡುವದಿಲ್ಲ. ಹಳಸುವದಿಲ್ಲ. ಹುಳಿಯಾಗುವದಿಲ್ಲ. ಇದರಲ್ಲಿ ಹೊಲಸು ಅಪವಿತ್ರ ಅಡಿಗೆಯನ್ನು ಎಂದೂ ಮಾಡಬೇಡ. ಒಳ್ಳೇ ಪವಿತ್ರ ಉತ್ತಮ ಅಡಿಗೆಯನ್ನೇ ಸದಾ ಮಾಡು. ಅಡಿಗೆ ಮಾಡಿ ಮೇಲೆ ಮುಚ್ಚಳ ಮುಚ್ಚು. ಇಲ್ಲವಾದರೆ ಧೂಳು ಕಸಕಡ್ಡಿ, ಹುಳಹುಪ್ಪಡಿ, ನೊಣ ಮೊದಲಾದವುಗಳು ಬಿದ್ದು ಅಡಿಗೆ ಕೆಡುವದು. ಊಟಕ್ಕೆ ಯೋಗ್ಯವಾಗುವದಿಲ್ಲ. ಪರಮಾತ್ಮನು ಇಂಥ ಅಡಿಗೆಯನ್ನು ಮುಟ್ಟುವದಿಲ್ಲ. ಇದರಲ್ಲಿ ಅನಂತ ಕಾಲ ಅಡಿಗೆಮಾಡಿದರೆ ಚಿಂತೆಇಲ್ಲ. ಆದರೆ ನೀನು ಮಾಡುವ ಒಳ್ಳೇ ಉತ್ತಮ ಅಡಿಗೆಯನ್ನು ಜಗವೆಲ್ಲ ಉಂಡು ನಲಿಯಲೆಂದು ಮಾತ್ರ ಬೇಡು.

೨

ಇದು ಪರಮಾತ್ಮನ ತೇರು. ಈ ತೇರು ಸಾಗಿ ಏಸು ದಿವಸಗಳಾದರೂ ಇನ್ನೂ ಪಾದಗಟ್ಟೆಯನ್ನೇ ಸೇರಲಿಲ್ಲ. ಅತ್ತಕಡೆ ಕೆಲವರು ಇತ್ತಕಡೆ ಕೆಲವರು ತಾಳುಮೇಳಿಲ್ಲದೆ ಜಗ್ಗಿದರೆ ತೇರು ಹೇಗೆ ಸಾಗಬೇಕು? ಈ ತೇರು ಹಿಂದೆ ಮುಂದೆ ಸರಿದಾಡುವದರಿಂದ ಸ್ಥಾನ ಬಿಟ್ಟು ಮುಂದೆ ಸಾಗಲೇ ಇಲ್ಲ. ಹೀಗಾದರೆ ದೂರದ ಪಾದಗಟ್ಟೆಯನ್ನೆಂದು

ಸೇರಬೇಕು ? ಅತ್ತ ಜಗ್ಗುವ ಆಸುರೀ ಶಕ್ತಿಯುವರನ್ನು ಸರಿಸು. ಅವರನ್ನು ತೇರಿನ ಸಮೀಪಕ್ಕೆ ಸಹ ಬರಗೊಡಬೇಡ. ಅವರ ಹಗ್ಗಗಳನ್ನೆಲ್ಲ ಹರಿದು ಹಾಕು. ಅಂದರೆ ದೈವೀ ಶಕ್ತಿಯುವರು ತೇರನ್ನು ಎಳೆದು ಪಾದಗಟ್ಟೆಗೆ ಮುಟ್ಟಿಸುವರು. ಆದರೆ ದಾರಿಯನ್ನು ಮಾತ್ರ ಒಳ್ಳೇ ಚೊಕ್ಕಟವಾಗಿರಿಸು. ಧರಿ, ಕಂದರ, ಹಳ್ಳ, ಹರಿ, ಕೊರಕಲು, ಕಲ್ಲು, ಮುಳ್ಳು, ಹುದುಲು, ರಾಡಿಗಳ ಬಗ್ಗೆ ಸದಾ ಜಾಗ್ರತವಾಗಿರು. ಇಲ್ಲವಾದರೆ ತೇರು ಒಗ್ಗಾಲಿಯಾಗುವ ಸಂಭವ ಬಹಳ. ಹುದುಲು ಬಿದ್ದರೆ ತೀರಿತು. ತೆಗೆಯುಲಿಕ್ಕೆ ೮೦ ಲಕ್ಷ ಜನ್ಮ ಬೇಕು. ತೇರು ಸರಿಯಾಗಿ ಸಾಗಿ ಪಾದುಗಟ್ಟೆ ಮುಟ್ಟಲಿ. ಅಂದರೆ ಜಾತ್ರೆಯನ್ನು ಮುಗಿಸಿಕೊಂಡು ಜನವು ತಮ್ಮ ತಮ್ಮ ಊರುಗಳಿಗೆ ಹೋಗುವರು.

೩

ನಿನ್ನ ನೌಕೆ ಎತ್ತ ಸಾಗಿತು ನಿನಗೆ ತಿಳಿಯಲಿಲ್ಲ. ಇದರಲ್ಲಿ ಹೋಕಾಯಂತ್ರವನ್ನೂ ಇರಿಸಿಲ್ಲ. ಪಟಸ್ಥಂಬಗಳು ಹರಿದಿವೆ. ನೌಕೆಯಲ್ಲಿ ಛಿದ್ರಗಳು ಬಿದ್ದುದರಿಂದ ಸದಾ ನೀರು ಒಳಸೇರುತ್ತಿರುವದು. ಹೀಗೆ ದಿಕ್ಕುಗಾಣದೆ ಒಳ್ಳೇ ತ್ರಾಸಿನಿಂದ ಗತಿಸುತ್ತ ನಡೆದರೆ ದಂಡೆಗೆ ಹೇಗೆ ಮುಟ್ಟಬೇಕು ? ಇದರಲ್ಲಿ ಒಂದು ಒಳ್ಳೇ ಹೋಕಾಯಂತ್ರವನ್ನು ಇರಿಸು. ಪಟಸ್ಥಂಬಗಳನ್ನು ಸರಿಪಡಿಸು. ನೌಕೆಯಲ್ಲಿಯ ಛಿದ್ರಗಳನ್ನು ಮೊದಲು ಚನ್ನಾಗಿ ಮುಚ್ಚು. ನೀರು ಬರುವದು ಕಟ್ಟಾಗಲಿ. ಅಂದರೆ ನೌಕೆ ದಿಕ್ಕು ತಪ್ಪದೆ ತನ್ನ ಗುರಿಯ ಕಡೆಗೆ ಸಾಗಿ ದಂಡೆ ಕಾಣುವದು. ಈ ಮಹಾ ಹೊಳೆಯು ಬಹುವಾಗಿ ತುಂಬಿ ಸೂಸಿ ಒಳ್ಳೇ ವೇಗವಾಗಿ ಭರಗುಡುತ್ತ ಹರಿಯುತ್ತಿದೆ. ಸೆಳೆತಕ್ಕೆ ನೌಕೆ ಸಿಕ್ಕೀತು ? ತಿರುಗಣಿಗೆ ಸಿಕ್ಕು ನೌಕೆ ಬುಡಮೇಲಾಗಿ ಒಡೆದು ಚೂರು ಚೂರಾದೀತು? ಜೋಕೆ ! ಅನೇಕ ಜನ್ಮ ಗತಿಸಿದರೂ ಈ ನೌಕೆಯನ್ನು ಸರಿಪಡಿಸಿ ಯೋಗ್ಯದಿಕ್ಕಿಗೆ ಸಾಗಿಸುವದು ಬಹು ಕಠಿಣ. ಬಂಡೆಗಲ್ಲಿಗೆ ಅಪ್ಪಳಿಸಿದರೆ ತೀರಿತು, ಒಡೆದು ಚೂರಾಗುವದು. ಕಾರಣ ದಾರಿಯಲ್ಲಿಯ ಕೆಂಪು ನಿಶಾನೆ, ಕೆಂಪು ದೀಪಗಳನ್ನು ನೋಡಿ ನಿನ್ನ ನೌಕೆಯನ್ನು ಸಾಗಿಸು. ಅಂದರೆ ಯೋಗ್ಯ ದಾರಿ ನಡೆದು ದಂಡೆ ಕಾಣುವದು.

೪

ನಿನ್ನ ಮನೆಯು ಹೊರಗೆ ನೋಟಕ್ಕೆ ಅಂದಕಂಡರು. ಒಳಗಿನ ದೇವರ ಕೋಣೆ, ಅಡಿಗೆಯ ಮನೆ, ವಿಚಾರದ ಕೋಣೆ, ಮಲಮೂತ್ರಗಳ ಕೋಣೆ, ಜನನದ ಕೋಣೆ, ಆಚಾರಕೋಣೆ. ಪಡಸಾಲಿ, ಬೆಳಕಿನ ಕೋಣೆ, ಧ್ವನಿಯ ಕೋಣೆ, ವಾಸನೆ ಕೋಣೆ, ಮೊದಲಾದವುಗಳು ಬಹು ದಿನಗಳಿಂದ ಬಲು ಹೊಲಸಾಗಿವೆ. ಕಸಗೂಡಿಸಿಲ್ಲ. ದೀಪಹಚ್ಚಿಲ್ಲ. ಗಾಳಿಯಾಡಿಲ್ಲ. ಇಲಿ ಹೆಗ್ಗಣಗಳು ಎಲ್ಲಕಡೆಗೂ ಹೋರು ಮಾಡಿಕೊಂಡಿವೆ. ಹಾವು ಚೇಳುಗಳು ಮಾನೆಮಾಡಿಕೊಂಡಿವೆ. ಗುಂಗಾಡು ಚಿಕ್ಕಾಡುಗಳಿಗೆ ಲೆಕ್ಕವಿಲ್ಲ. ಮನೆಯು ಎಲ್ಲ ರೀತಿಯಿಂದ ಹೊಲಸಾದ್ದರಿಂದ ಪರಮಾತ್ಮನು ಅಲ್ಲಿಂದ ಹೊರಗೆ ಹೋಗಿದ್ದಾನೆ. ಈ ಮನೆಯು ಪರಮಾತ್ಮನದೆಂಬ ಅರಿವೆ ಇಲ್ಲ. ನಿನ್ನ ಮನೆ ಎಂಬ ಭ್ರಮೆಯಿಂದ ಇದನ್ನು ಬಹುವಾಗಿ ಹಾಳು ಮಾಡಿದಿ. ಇದು ನಿನ್ನದಲ್ಲ. ಸರ್ವರೀತಿಯಿಂದ ಈ ಮನೆಯನ್ನು ಚನ್ನಾಗಿ ಝುಳ ಝುಳವಾಗಿರಿಸು. ಅಂದರೆ ಪರಮಾತ್ಮನ ವಾಸಕ್ಕೆ ಯೋಗ್ಯವಾಗುವದು. ಎಲ್ಲ ಕೋಣೆಗಳಲ್ಲಿ ಕೆಲಸವು ತಾನೇ ಸುಗಮವಾಗಿ ಸಾಗುವದು. ಬಾಗಿಲುಗಳಲ್ಲಿ ಕಳ್ಳಕಾಕರು ಸುಳಿಯದಂತೆ ಬಲವಾದ ಕಾವಲಿರಿಸು. ಇಲ್ಲವಾದರೆ ಒಳಗಿನ ಧನ ಸಂಪತ್ತಿಯನ್ನೆಲ್ಲ ದೋಚಿಕೊಂಡು ಮೊದಲಿನಂತೆ ಅವರೇ ಸೇರಿಕೊಂಡು ಒಡೆತನ ನಡಿಸುವರು. ಕಾರಣ ಬಲು ಚಿಂತೆಯಿಂದ ಕಾವಲು ಮಾಡು ಅಂದರಾಯಿತು.

೫

ನಿನ್ನ ಈ ಮಜ್ಜಿಗೆ ಗಡಿಗೆಯು ಎಷ್ಟು ಹೊಲಸಾಗಿದೆ? ಇದರ ಛಿದ್ರಗಳಿಂದ ನಿತ್ಯ ಸೋರಿಹೋಗುವದರಿಂದ ಮಜ್ಜಿಗೆ ಮಾಡಲಿಕ್ಕೆ ಬರುವದಿಲ್ಲ. ಬೆಣ್ಣೆ ಹೊರಡುವದಿಲ್ಲ. ಗಡಿಗೆಯನ್ನು ಒಳಗೂ ಹೊರಗೂ ತೊಳೆ. ಕಡಗೋಲನ್ನು ಬಹು ಚನ್ನಾಗಿ ಸ್ವಚ್ಛ ಮಾಡು. ಗಡಿಗೆಯನ್ನು ಸರಿಯಾಗಿ ಇಡು. ಅದರಲ್ಲಿ ಆ ಕಡಗೋಲನ್ನು ಒಳ್ಳೇ ನೀಟಾಗಿ ಇಡು. ಇದಕ್ಕೆ ಇಪ್ಪತ್ತೆರಡು ಮೊಳ ಹೆಗ್ಗವನ್ನು ಸುತ್ತು. ನಿನ್ನವರಾದ ಗುಣಿಗಳ ಹಾಗೂ ದುರ್ಗುಣಗಳ ನೆರವಿನಿಂದ ಸಾಗರವನ್ನು ಕಡೆ. ಅಂದರೆ

ಒಳ್ಳೇ ಶುಭ್ರ ಬೆಳ್ಳಗಿನ ಬೆಣ್ಣೆ ಹೊರಡುವದು. ಅದನ್ನು ಪರಮಾತ್ಮನಿಗೆ ನೈವೇದ್ಯ ಮಾಡು. ಪ್ರಸಾದವೆಂದು ಗುಣಿಗಳು ಅದನ್ನು ಸವೆದು ಅಮರ ರಾಗಲಿ ದುರ್ಗುಣಿಗಳಿಗೆ ಬರೇ ಹುಳಿ ಮಜ್ಜಿಗೆ ಕೊಡು. ಕುಡಿದು ಸಾಯಲಿ.

೫

ದೇವನ ಊರು ಬಹುದೂರ ಎತ್ತರದಲ್ಲಿ ಇರುವದು. ಏಸುಕಾಲ ನಡೆದರೂ ಮುಗಿಯದ ದಾರಿ. ನಡುವೆ, ಕೋಟಿ ಕೊತ್ತಳಗಳೂ, ಧರಿ ಕಂದರಗಳೂ, ನಿಬಿಡವಾದ ಅರಣ್ಯಗಳೂ, ಕಾಡಮಿಕಗಳೂ, ಹಿಂಸ್ರ ಪಶುಗಳೂ, ಹಳ್ಳ, ಹೊಳಿ, ಧರಿ, ರಾಡಿ ಹುದುಲುಗಳೂ, ಮೊದಲಾದ ಅಡ್ಡಿಆತಂಕ ಮಾಡುವಂಥವುಗಳು ತುಂಬಿಕೊಂಡಿವೆ. ದಾರೀ ನಡೆದು ನಡೆದು ಕಾಲುಗಳು ಬಲು ನೋಯುವವು. ಇದು ಬಹು ಕಠಿಣ ದಾರಿ. ದಾರಿಯಲ್ಲಿ ಆರು ಬುರ್ಜುಗಳುಂಟು. ಅವುಗಳನ್ನು ಏರಿ ದಾಟಿ ಹೋದಾಗ ಮುಂದೆ ಸಾವಿರ ಕೊಳ್ಳದಲ್ಲಿ ದೇವರ ಊರು ಅದೆ. ಇವುಗಳನ್ನೆಲ್ಲ ದಾಟುವದು ಘನಘೋರ ಕಷ್ಟ. ನಡೆಯುವಾಗ ದಾರಿಯಲ್ಲಿ ಏನಾ ದರೂ ಸಂಭವಿಸಿದರೆ ಪುನಃ ಹೊರಟ ಸ್ಥಳಕ್ಕೆ ಬರಬೇಕಾಗುವದು. ಹೀಗೆ ನೀನು ಅಸಂಖ್ಯ ಸಲ ಹೊರಟಸ್ಥಳಕ್ಕೆ ಬಂದಿರುವಿ. ಸುಧಾರಿಸಿ ಕೊಂಡು ದಾರಿ ನಡೆಯಲಿಕ್ಕೆ ಅನೇಕ ಜನ್ಮಗಳು ಬೇಕು. ದಾರಿಯಲ್ಲಿ ಮಳಿ, ಗಾಳಿ, ಬಿಸಿಲು, ಛಳಿ ತಾಕಲು ದಣಿವೆಯಿಂದ ನಿದ್ರೆ ಹೋದರೆ ತೀರಿತು ಎಲ್ಲವನ್ನು ಕಳಕೊಳ್ಳುವಿ. ಅದಕ್ಕೆ ಆಸರಿಕೆ ಬೇಸರಿಕೆ ದಣಿವೆ ಗೊಳಗಾಗದೆ ಸಾಗುತ್ತಿರು. ಹೇಗಾದರೂ ಮಾಡಿ ಸಾವಿರ ಕೊಳ್ಳದಲ್ಲಿಯು ದೇವನ ಊರನ್ನು ಸೇರು. ನಡೆದು ಹೋದವರು ಬಲು ಸುಲಭ ಬಹು ಸಮೀಪವೆಂದು ಹೇಳುವರು. ದೃಢಸಂಕಲ್ಪಮಾಡಿ ಏಕ ಲಕ್ಷ್ಯ ಏಕ ಚಿತ್ತದಿಂದ ಹಿಂಜರಿಯದೆ ಒಂದೇಸವನೆ ಸಾಗಿದರೆ ಸಾವಿರಕೊಳ್ಳವನ್ನು ಸೇರುವಿ. ಆಗ ನಿನ್ನ ಆನಂದ ಸುಖಗಳಿಗೆ ಎಣೆಇಲ್ಲ.

೭

ನಿನ್ನ ಮನೆಯಲ್ಲಿ ಈ ಪಣತಿ ಬಹು ದಿನಗಳಿಂದ ಕುಡಿ ಕೂತು, ಹೊಲಸ ಎಣ್ಣೆಯ ಮೂಲಕ ಅತಿ ಜಿಣಿಮಿಣಿ ಉರಿಯುವದರಿಂದ

ಮನೆಯಲ್ಲಿ ಏನೂ ಬೆಳಕು ಇಲ್ಲ, ಇನ್ನು ಹೀಗೆ ಮಾಡದೆ, ಒಳ್ಳೇ ಎಣ್ಣೆ ಹಾಕು, ಉತ್ತಮ ಬತ್ತಿಯನ್ನು ಹಚ್ಚು, ಮೇಲೆ ಮೇಲೆ ಕುಡಿ ಕಡಿದು ಬತ್ತಿ ಚ್ಯಾಚು. ದೀಪ ಆರಗೊಡಬೇಡ. ಗಾಳಿಗೆ ದೀಪ ಇಡಬೇಡ ಆರುವದು. ಮುಸುಕಲಿಯಲ್ಲಿ ಇಡದೆ ಶುದ್ಧ ಹವೆ ಬರುವಲ್ಲಿ ಇಡು. ಮಳೆಯಲ್ಲಿ ದೀಪವನ್ನಂತೂ ತರಬೇಡ. ಬಹುಬೇಗ ಆರುವದು. ನಿನ್ನ ದೀಪದ ಬೆಳಕು ಅನ್ಯರಿಗೂ ಉಪಯೋಗವಾಗಲಿ. ಅವರೂ ಅದರಿಂದ ತಮ್ಮ ಮನೆಗೆ ಬೆಳಕು ಮಾಡಿಕೊಳ್ಳಲಿ. ನಿನ್ನ ಈ ದೀಪವನ್ನು ಅಯೋಗ್ಯ ಹೊಲಸು ಕೆಲಸಗಳಿಗೆ ಉಪಯೋಗಿಸಬೇಡ. ಬಲು ಜೋಕೆ.

ಗಿದರೆ ಐಕ್ಯರಲ್ಲ. ಸತ್ತಂಥ ಮನುಷ್ಯನು 'ನಾನು ಸತ್ತಿದ್ದೇನೆ' ಎಂದು ಹೇಳುವದು ಎಷ್ಟು ಅಸಂಗತವಾದದ್ದೋ ಅಷ್ಟೇ ಲಿಂಗೈಕ್ಯನಾದವನು 'ನಾನು ಲಿಂಗದೊಳಗೆ ಬೆರೆದೆ' ನೆಂದು ಹೇಳುವದು ಅಸಂಗತವಾದದ್ದು.

ಶಿವಶರಣರು ಲಿಂಗೈಕ್ಯದ ರೀತಿಯನ್ನು ಹೇಳುವಲ್ಲಿ ಉಪಮೆಗಳಿಂದ ತಿಳಿಸುವದುಂಟು. ನೀರಿನಲ್ಲಿ ಲವಣ ಬೆರೆದಂತೆಯೂ ಕ್ಷೀರದಲ್ಲಿ ಸವಿಯು ಕೂಡಿದಂತೆಯೂ ದೀಪದಲ್ಲಿ ಜ್ಯೋತಿಯು ಅಡಗಿರುವಂತೆಯೂ ಅಂಗನು ಲಿಂಗದಲ್ಲಿ ಬೆರೆಯುವನೆಂದು ಅವರು ಹೇಳುವದುಂಟು.

ಐಕ್ಯನಾದರೆ ಬಯಲು ಬಯಲಾಗಿರಬೇಕು. ಈ ಬಗ್ಗೆ ಬಸವೇಶ್ವರನು ಹೇಳುವದು ಹೇಗೆಂದರೆ, ಕ್ಷೀರದೊಳಗೆ ಬೆಣ್ಣೆಯು ಅಡಗಿದಂತೆ, ತಿಲದೊಳಗಣ ತೈಲವು ಅಡಗಿದಂತೆ, ಮನವು ಲಿಂಗದಲ್ಲಿ ಲೀಯವಾಗುವದೆಂದು ಹೇಳುತ್ತಾನೆ. ಇದೇ ಐಕ್ಯಸ್ಥಲವು. ಲಿಂಗೈಕ್ಯನಿಗೆ ಪುನರ್ಜನ್ಮವೆಂಬುದು ಇರಲಾರದು.

ಈ ಪ್ರಕಾರ ಆರು ಸ್ಥಲಗಳ ಆಚರಣೆಗಳ ಮೂಲಕ ಮನುಷ್ಯನು ಹೇಗೆ ತನ್ನಲ್ಲಿ ವಿಕಾಸವನ್ನು ಉಂಟುಮಾಡಬೇಕೆಂಬುದರ ಬಗ್ಗೆ ಅಮರಗಣಾಧೀಶ್ವರರ ವಿಚಾರಗಳಿರುತ್ತವೆ.

### ೩೬ ಸ್ಥಲಗಳು

ಆರು ಸ್ಥಲಗಳ ಪರಿಣಾಮಗಳು ಮೇಲೆ ವಿವರಿಸಿದಂತೆ ಇದ್ದರೂ ಶಿವಾನುಭವಿಯು ಆರು ಸ್ಥಲಗಳ ಆಚರಣೆಗಳನ್ನಷ್ಟೇ ಅಲ್ಲ, ಮೂವತ್ತಾರು ಮತ್ತು ಇನ್ನೂರುಹದಿನಾರು ಸ್ಥಲಗಳೆಂದು ಬೇರೆ ಇದ್ದು ಅವುಗಳ ಅನುಭವವನ್ನೂ ಕೂಡ ಶಿವಾನುಭವಿಯು ತನ್ನಲ್ಲುಂಟುಮಾಡಿಕೊಳ್ಳತಕ್ಕದ್ದು. ಅವುಗಳ ವಿಸ್ತಾರವಾದ ವಿವೇಚನೆಯು ವಚನಶಾಸ್ತ್ರದಲ್ಲಿ ಬರುವದುಂಟು. ಅವುಗಳನ್ನೆಲ್ಲ ಇಲ್ಲಿ ಸ್ಥಳಾಭಾವದ ಮೂಲಕ ವಿವರಿಸುವದು ಶಕ್ಯವಿಲ್ಲ. ಆರು ಸ್ಥಲಗಳ ಸಹಾಯದಿಂದ ಸ್ಥೂಲ ಶರೀರದ ಪ್ರಗತಿಯೂ ಮೂವತ್ತಾರು ಸ್ಥಲಗಳ ಮೂಲಕ ಸೂಕ್ಷ್ಮ ಶರೀರದ ಪ್ರಗತಿಯೂ ಇನ್ನೂರು ಹದಿನಾರು ಸ್ಥಲಗಳ ಮೂಲಕ ಕಾರಣ ಶರೀರದ ಪ್ರಗತಿಯೂ ಶಿವಾನುಭವಿಯಲ್ಲಿ ಉಂಟಾಗುವವು. ಭಕ್ತನ ಭಕ್ತ, ಭಕ್ತನ ಮಹೇಶ, ಹೀಗೆ ಪ್ರತಿಯೊಂದು ಸ್ಥಲದಲ್ಲಿ ಆರಾರಂತೆ ಎಲ್ಲವೂ ಕೂಡಿ ಮೂವತ್ತಾರು ಸ್ಥಲಗಳು ಆಗುವವು. ಈ ಸ್ಥಲಗಳು ಸೂಕ್ಷ್ಮ ಶರೀರಕ್ಕೆ ಸಂಬಂಧ ಪಟ್ಟವು ಇರುತ್ತವೆ.

ಭಕ್ತನ ಭಕ್ತನ ಭಕ್ತ, ಭಕ್ತನ ಭಕ್ತನ ಮಹೇಶ ಹೀಗೆ ಮೂವತ್ತಾರು ಸ್ಥಲಗಳಲ್ಲಿಯ ಪ್ರತಿಯೊಂದು ಸ್ಥಲಕ್ಕೆ ಆರಾರು ಸ್ಥಲಗಳಂತೆ ೩೬ ಸ್ಥಲಗಳಿಗೆ ಒಟ್ಟು ಇನ್ನೂರು ಹದಿನಾರು ಸ್ಥಲಗಳಾಗುತ್ತವೆ.

ಈ ಪ್ರಕಾರ ಮೊದಲಿನ ಮೂರು ಸ್ಥಲಗಳು ಪೂರ್ಣ ವಿಕಾಸವನ್ನು ಇನ್ನೂರು ಹದಿನಾರು ಸ್ಥಲಗಳಲ್ಲಿ ಹೊಂದಿದ ಬಳಿಕ ಈ ಎಲ್ಲ ಸ್ಥಲಗಳ ಅನುಭವಗಳಲ್ಲಿ ನಿವೃತ್ತಿಯುಂಟಾಗ ಹತ್ತುತ್ತದೆ. ಈ ನಿವೃತ್ತಿಯ ಮೂಲಕ ಕಡೆಯ ಇನ್ನೂರು ಹದಿನಾರು ಸ್ಥಲಗಳು ಮೂವತ್ತಾರು ಸ್ಥಲಗಳಲ್ಲಿ, ಮೂವತ್ತಾರು ಸ್ಥಲಗಳು ಆರುಸ್ಥಲಗಳಲ್ಲಿ, ಆರುಸ್ಥಲಗಳು ಮೂರು ಸ್ಥಲಗಳಲ್ಲಿ, ಅಡಗುವವು. ಈ ಮೂರು ಸ್ಥಲಗಳು ಇಷ್ಟ ಪ್ರಾಣ ಭಾವಲಿಂಗಗಳು ಇರುತ್ತವೆ. ಮುಂದೆ ಈ ಮೂರು ಸ್ಥಲಗಳು ಅಂಗಲಿಂಗವೆಂಬ ಎರಡು ಸ್ಥಲಗಳಲ್ಲಿ, ಈ ಎರಡು ಸ್ಥಲಗಳು ಒಂದೇ ಒಂದು ಲಿಂಗ ಎಂದರೆ ಪರಶಿವ ಅಥವಾ ಪರಬ್ರಹ್ಮದಲ್ಲಿ ಅಡಗುವವು. ಹೀಗಾದ ಬಳಿಕ ಮನುಷ್ಯನಲ್ಲಿ ಪೂರ್ಣತೆಯು ಉಂಟಾಗುತ್ತದೆ. ಇದೇ ಲಿಂಗಾಂಗ ಸಾಮರಸ್ಯವೆನ್ನಿಸಿಕೊಳ್ಳುತ್ತದೆ.

ಅಮರಗಣಾಧೀಶ್ವರರು ಈ ಪ್ರಕಾರ ಆತ್ಮ ಪ್ರಗತಿಯ ಬಗ್ಗೆ ದೀರ್ಘವಾದ ವಿಚಾರಗಳನ್ನು ಮಾಡಿ ಮೇಲೆ ಕಾಣಿಸಿದ ತತ್ವಗಳನ್ನು ತಮ್ಮ ವಚನಶಾಸ್ತ್ರದಲ್ಲಿ ಪ್ರತಿಪಾದಿಸುತ್ತ ಬಂದಿದ್ದಾರೆ. ಅವುಗಳನ್ನೇ ನಾವು ಇಲ್ಲಿ ಉಲ್ಲೇಖಮಾಡಿದ್ದೇವೆ. ಆತ್ಮ ವಿಕಾಸ ವಿಷಯದ ಬಗ್ಗೆ ಅಮರಗಣಾಧೀಶ್ವರರಷ್ಟು ಆಳವಾದ ವಿಚಾರ ಮಾಡಿದ ಇತರ ಮತಸ್ಥರು ಬಹು ಸ್ವಲ್ಪ ಜನರು ಇದ್ದಾರೆ. ಇವರ ಗ್ರಂಥಗಳಲ್ಲಿ ಈ ವಿಷಯ ವಿವೇಚನೆಯು ಬಹು ಕಡಿಮೆ ಇರುತ್ತದೆ. ಅವರೂ ಇತರ ಮತಸ್ಥರೂ ಉಚ್ಚತಾತ್ವಿಕ ವಿಚಾರಗಳನ್ನು ಮಾಡುತ್ತಿರಬಹುದು. ಆದರೆ ಅಮರಗಣಾಧೀಶ್ವರರಂತೆ ಅವರು ಇಂಥ ವಿಚಾರಗಳನ್ನು ಪ್ರಯೋಗದಲ್ಲಿ ತರುವಬಗ್ಗೆ ಹೆಚ್ಚು ವಿಚಾರ ಮಾಡಿದುದು ಅವರ ಗ್ರಂಥಗಳಲ್ಲಿ ಕಂಡು ಬರುವದಿಲ್ಲ.

## ಅಷ್ಟಾವರಣಗಳು

ಪ್ರತಿಯೊಂದು ಧರ್ಮದಲ್ಲಿ ಜ್ಞಾನ ಮತ್ತು ಕ್ರಿಯೆ ಎಂಬ ಎರಡು ಭಾಗಗಳಿದ್ದು ಅವುಗಳ ವಿಷಯವಾಗಿ ಆಯಾ ಧರ್ಮದವರು ವಿಶೇಷ ವಿಚಾರ ಮಾಡಿರುತ್ತಾರೆ. ಅವರಂತೆ ಅಮರಗಣಾಧೀಶ್ವರರು ನಾವು ಈ ವರೆಗೆ ಹೇಳಿದ

ಪ್ರಕಾರ ಷಟ್‌ಸ್ಥಲ ಸಿದ್ಧಾಂತದಲ್ಲಿ ಕ್ರಿಯೆಗಳು ಅಥವಾ ಆಚಾರಗಳು ಈ ವಿಷಯವಾಗಿ ಹೆಚ್ಚು ವಿವೇಚನೆ ಮಾಡಿದ್ದು ಕಂಡು ಬರುತ್ತದೆ. ಅವರು ವಿವರಿಸುವ ಕ್ರಿಯೆಗಳು ಅಷ್ಟಾವರಣಗಳಲ್ಲಿ ಅಡಕವಾಗಿರುತ್ತವೆ. ಇತರ ಸಮಾಜದವರು ಅನೇಕ ಬಗೆಯ ನಿತ್ಯ ನೈಮಿತ್ತಿಕ ಕರ್ಮಗಳನ್ನೂ ಯಜ್ಞ ಯಾಗಾದಿಗಳನ್ನು ದೇವಾಲಯಗಳಲ್ಲಿ ಪೂಜಾದಿ ಕಾರ್ಯಗಳನ್ನೂ ಜಪತಪಗಳನ್ನೂ ರಚಿಸಿಕೊಂಡು ಅವುಗಳನ್ನು ಅನುಸರಿಸುತ್ತಾರೆ. ಆದರೆ ಅಮರಗಣಾಧೀಶ್ವರರು ಇವುಗಳ ಬದಲಾಗಿ ತಮ್ಮದೇ ಆದ ಅಷ್ಟಾವರಣಗಳನ್ನೂ ಪಂಚಾಚಾರಗಳನ್ನೂ ಏಕೋತ್ತರ ಶತಸ್ಥಲಗಳನ್ನೂ ನಿರ್ಮಾಣ ಮಾಡಿಕೊಂಡು ಅವುಗಳನ್ನು ಆಚರಿಸುತ್ತಾರೆ. ಈ ವಿಷಯಗಳ ಬಗ್ಗೆ ಅವರು ಮಾಡಿದ ಗಂಭೀರ ಮತ್ತು ನಿಗೂಢ ವಿಚಾರಗಳು ಅಮರ್ಗಣಾಧೀಶ್ವರವೇ ಇರುತ್ತವೆ. ಅವು ಇತರ ಮತಾನುಯಾಯಿಗಳ ಅನುಕರಣವಿರುವದಿಲ್ಲ.

ಅಷ್ಟಾವರಣಗಳ ಮೂಲಕ ಮನುಷ್ಯನ ಸ್ಥೂಲ ಸೂಕ್ಷ್ಮ ಕಾರಣ ಶರೀರಗಳಲ್ಲಿ ದೃಢವಾದ ಪರಿಣಾಮಗಳಾಗುತ್ತವೆ. ಅಷ್ಟಾವರಣಗಳಲ್ಲಿ ಐದು ವರ್ಗಗಳಿರುತ್ತವೆ. ಅವು ಯಾವವೆಂದರೆ, ಕ್ರಿಯಾಷ್ಟಾವರಣ, ಬಹಿರಂಗಾಷ್ಟಾವರಣ, ಅಂತರಂಗಾಷ್ಟಾವರಣ, ಸುಜ್ಞಾನಾಷ್ಟಾವರಣ, ಐಕ್ಯಾಷ್ಟಾವರಣ ಎಂದು ಇರುತ್ತವೆ. ಈ ಆವರಣಗಳ ಮೂಲಕ ಅಂತರಂಗ ಮತ್ತು ಬಹಿರಂಗ ಶರೀರಗಳಲ್ಲಿ ಪ್ರಗತಿಯುಂಟಾಗಿ ಭಕ್ತನಲ್ಲಿರುವ ಎಲ್ಲತರದ ಶಕ್ತಿಗಳು ವಿಕಾಸಹೊಂದುತ್ತವೆ. ಅವುಗಳನ್ನೆಲ್ಲ ಇಲ್ಲಿ ವಿವರಿಸುವದು ಈ ಲೇಖದಲ್ಲಿ ಶಕ್ಯವಿರುವದಿಲ್ಲಾದ್ದರಿಂದ, ಅವುಗಳನ್ನು ನಾವು ನಾಮಮಾತ್ರ ನಿರ್ದೇಶ ಮಾಡಿದ್ದೇವೆ. ಅವುಗಳಿಗೆ ಕೊಟ್ಟ ಹೆಸರುಗಳ ಮೇಲಿಂದ ವಾಚಕರು ಅವುಗಳು ಯಾವ ಯಾವ ವಿಷಯಗಳ ಮೇಲೆ ಪರಿಣಾಮ ಮಾಡುತ್ತವೆಂಬುದನ್ನು ಊಹಿಸಬಹುದಾಗಿದೆ. ಮುಖ್ಯವಾಗಿ ಗುರು ಲಿಂಗ ಜಂಗಮ ಪಾದೋದಕ ಪ್ರಸಾದ ವಿಭೂತಿ ರುದ್ರಾಕ್ಷಿ ಇವು ವಾಡಿಕೆಯಾಗಿ ಎಲ್ಲರಿಗೂ ಗೊತ್ತಿದ್ದ ಆವರಣಗಳಿರುತ್ತವೆ. ಇವುಗಳ ಸಹಾಯದಿಂದ ಉಳಿದ ಮೇಲ್ತರಗತಿಯ ಆವರಣಗಳನ್ನು ಶಿವಾನುಭವಿಯು ಸಾಧಿಸತಕ್ಕದ್ದು.

ಈ ಎಂಟು ಆವರಣಗಳಲ್ಲಿ ಗುರುಲಿಂಗ ಜಂಗಮಗಳು ಸ್ಥೂಲ ಸೂಕ್ಷ್ಮ ಕಾರಣ ಶರೀರಗಳ ಮೇಲೆ ಅನುಕ್ರಮವಾಗಿ ಪರಿಣಾಮ ಮಾಡುತ್ತವೆ. ಇವುಗಳಿಂದ ಇಷ್ಟ ಪ್ರಾಣ ಭಾವ ಲಿಂಗಗಳು ಚೈತನ್ಯಹೊಂದುತ್ತವೆ.

ಪಾದೋದಕ ಪ್ರಸಾದಗಳು ಆಯಾ ಲಿಂಗಗಳಿಗೂ ತನ್ನ ಶರೀರಕ್ಕೂ ಸಂಬಂಧ ವನ್ನುಂಟುಮಾಡುತ್ತವೆ. ಮಂತ್ರವು ಮನುಷ್ಯನಲ್ಲಿ ಮಾನಸಿಕ ಉಚ್ಚತಮ ಸ್ಥಿತಿಯನ್ನು ತಂದುಕೊಡುತ್ತದೆ. ರುದ್ರಾಕ್ಷಿಯು ಮಂತ್ರಜಪಕ್ಕೆ ಅವಶ್ಯವಾ ದುದು ಇರುತ್ತದೆ. ವಿಭೂತಿಯು ಮನುಷ್ಯನಲ್ಲಿ ಉಂಟಾದ ಶ್ರೇಷ್ಠತಮ ಉಚ್ಚಸ್ಥಿತಿಯ ಬೆಳಗನ್ನು ತೋರಿಸುತ್ತದೆ. ಹೀಗೆ ಈ ಅಷ್ಟಾವರಣಗಳ ಪರಿ ಣಾಮಗಳು ಇರುತ್ತವೆ.

## ಪಂಚಾಚಾರ.

ಲಿಂಗಾಚಾರ, ಸದಾಚಾರ, ಶಿವಾಚಾರ, ಭೃತ್ಯಾಚಾರ, ಗಣಾಚಾರ, ಇವುಗಳೇ ಪಂಚಾಚಾರಗಳಾಗಿವೆ. ಈ ಪಂಚಾಚಾರಗಳು ತಮಗೆ ಪ್ರಾಣವು ಎಂದು ವೀರಶೈವರು ತಿಳಿದುಕೊಂಡು ವರ್ತಿಸಬೇಕೆಂದು ಅವರಲ್ಲಿ ಆದೇಶಗ ಳಿರುತ್ತವೆ. ಇವುಗಳ ವಿವರಣೆಯು ಏನೆಂದರೆ— ಇಷ್ಟಲಿಂಗವಲ್ಲದೆ ಅನ್ಯ ದೇವರ ಪೂಜೆ ಇಲ್ಲದಿರುವದೇ ಲಿಂಗಾಚಾರವಾಗಿದೆ. ಎಲ್ಲ ಜನರು ಹೌದೆ ನ್ನುವಂತೆ ನಡೆದುಕೊಳ್ಳುವದೇ ಸದಾಚಾರವು. ಶಿವಭಕ್ತರಲ್ಲಿ ಜಾತಿಭೇದ ವನ್ನು ಎಣಿಸದಿರುವದೇ ಶಿವಾಚಾರವು. ಶಿವಶರಣರೇ ಹಿರಿಯರಾಗಿ ತಾನೇ ಕಿರಿಯನಾಗಿ ಭಯಭಕ್ತಿಯಿಂದ ಆಚರಿಸುವದೇ ಭೃತ್ಯಾಚಾರವು. ಶಿವನಿಂದ ಕರನ್ನೂ ಶಿವಧರ್ಮ ದೂಷಕರನ್ನೂ ಶಾಸನ ಮಾಡುವದೇ ಗಣಾಚಾರವು. ಈ ಪ್ರಕಾರ ಈ ಪಂಚಾಚಾರಗಳ ಲಕ್ಷಣಗಳಿರುತ್ತವೆ.

## ಲಿಂಗಾಚಾರ.

ವೀರಶೈವರಿಗೆ ಇಷ್ಟಲಿಂಗವೇ ದೇವರು, ಅನ್ಯದೇವರನ್ನು ಅವರು ಸರ್ವಥಾ ಪೂಜಿಸತಕ್ಕದ್ದಲ್ಲೆಂದು ಆದೇಶಗಳಿವೆ. ಒಬ್ಬೊಬ್ಬರು ಒಂದೊಂದು ದೇವರನ್ನು ಪೂಜಿಸಹತ್ತಿದರೆ, ನನ್ನ ದೇವರು ಹೆಚ್ಚು, ನಿನ್ನ ದೇವರು ಹೆಚ್ಚೆಂಬ ಬಗ್ಗೆ ಕಲಹಗಳು ಹುಟ್ಟಿ ಸಮಾಜದಲ್ಲಿ ಒಂದು ದೊಡ್ಡ ಗೊಂದಲವೇ ಏಳ ಬಹುದು. ಆದರೆ ಒಂದೇ ದೇವರನ್ನು ಎಲ್ಲರೂ ಪೂಜಿಸುವದರಿಂದ ಇಂಥ ಭಿನ್ನಭಾವನೆಗೆ ಆಸ್ಪದವಿಲ್ಲದೆ ಎಲ್ಲರೂ ಐಕ್ಯಹೊಂದಲು ಅವಕಾಶ ದೊರೆ ಯುತ್ತದೆ. ಪತಿವ್ರತೆಯಾದ ಸ್ತ್ರೀಯಳಿಗೆ ಒಬ್ಬನೇ ಗಂಡನಿರುವಂತೆ ನಿಷ್ಠಾ ಪರನಾದ ವೀರಶೈವನಿಗೆ ಲಿಂಗ ಒಂದೇ ದೈವವಾಗಿದೆ.

## ಸದಾಚಾರ.

ಲೋಕ ವ್ಯವಹಾರದಲ್ಲಿ ಹೌದೆನಿಸಿಕೊಂಡು ಹೋಗಬೇಕಾದರೆ ಮನುಷ್ಯನು ಸುಸ್ವಭಾವವುಳ್ಳವನಾಗಿರಬೇಕಾಗುತ್ತದೆ. ಪಾಪ ಕೃತ್ಯಗಳಿಂದ ದೂರಾಗಿರುವದೇ ಸದಾಚಾರವು. ಉದಾಹರಣಾರ್ಥವಾಗಿ ಅಪಾನಪೇಯ, ಅಭಕ್ಷ್ಯ ಭಕ್ಷಣ, ಕೊಲೆಪಾತಕ, ಚೋರತನ, ಪರನಿಂದೆ, ಮುಂತಾದ ಕೃತಿಗಳು ನಿಂದ್ಯವಾದವುಗಳೆಂದು ಎಲ್ಲ ಮತದವರು ಒಪ್ಪಿಕೊಳ್ಳುತ್ತಾರೆ. ಸಮಾಜದಲ್ಲಿ ಇಂಥ ಅನಾಹುತಗಳು ದಿನಾಲು ನಡೆಯುಹತ್ತಿದರೆ ಶಾಂತತೆ ಸುರಕ್ಷತೆಗಳು ಉಳಿಯವು. ಪಾಶವಿಕ ಮತ್ತು ರಾಕ್ಷಸೀ ವೃತ್ತಿಗಳಿಗೆ ಹೆಚ್ಚು ಒಲವುಂಟಾಗುವದು. ಇದರಿಂದ ಸಮಾಜದ ಅಧೋಗತಿಗೆ ವಿಲಂಬವಾಗಲಾರದು. ಕಾನೂನುಗಳ ಮೂಲಕ ಸರಕಾರವು ಇಂಥ ದುಷ್ಟ ಕಾರ್ಯಗಳನ್ನು ನಿರ್ಬಂಧಿಸುವದುಂಟು. ಹಾಗೆಯೇ ಸಮಾಜವಾದರೂ ಇಂಥ ಕಾರ್ಯಗಳನ್ನು ನಡೆಯುಬಾರದೆಂದು ಶಾಸ್ತ್ರಗಳನ್ನು ಉಂಟುಮಾಡಿರುತ್ತದೆ. ಅವುಗಳಂತೆ ನಡೆಯುವದೇ ಸದಾಚಾರವೆನಿಸಿಕೊಳ್ಳುತ್ತದೆ.

## ಶಿವಾಚಾರ.

ವೀರಶೈವರಲ್ಲಿ ಜಾತಿಭೇದಗಳಿಲ್ಲ. ಹೀಗೆ ವರ್ತಿಸುವದೇ ಶಿವಾಚಾರವು. ಅವರಿಗೆ ಶಿವನೇ ತಂದೆಯು, ಪಾರ್ವತಿಯೇ ತಾಯಿಯು, ಶಿವಭಕ್ತರೇ ಬಂಧುಗಳು, ಶಿವಕುಲವೇ ಶ್ರೇಷ್ಠ ಕುಲವು, ಎಂದು ಆಗಮಗಳಲ್ಲಿ ಕಟ್ಟಳೆಗಳಿರುತ್ತವೆ. ಆದರೆ ಮನೆಗೊಂದು ಜಾತಿ, ಮಠಕ್ಕೊಂದು ಜಾತಿ, ತಲೆಗೊಂದು ಜಾತಿಯಾದರೆ ಸಮಾಜದಲ್ಲಿ ಐಕ್ಯತೆ ಹೇಗೆ ಉಳಿಯುಬೇಕು ? ಪರಸ್ಪರ ಪ್ರೇಮವು ಹೇಗೆ ಬೆಳೆಯಬೇಕು ? ಸಮಾಜದಲ್ಲಿ ಒಳಪಂಗಡಗಳು ಹೆಚ್ಚುತ್ತಹೋದಂತೆ ಅದರಲ್ಲಿ ಒಡಕು ಅಧಿಕವಾಗುತ್ತ ಹೋಗುತ್ತದೆ. ಹೀಗೆ ಶಿವಾಚಾರವು ಸಮಾಜದ ಗೌರವಕ್ಕೂ ದೃಢತೆಗೂ ಮೂಲಾಧಾರವಾಗಿದೆ.

ಈ ಶಿವಾಚಾರದ ತಿರುಳನ್ನು ಶಿವಶರಣ ಶ್ರೇಷ್ಠರಾದ ಬಸವಣ್ಣನವರು ಹನ್ನೆರಡನೇ ಶತಮಾನದಲ್ಲಿ ಆಚರಿಸಿ, ಸಮಾಜದ ಗೌರವವನ್ನು ಬೆಳೆಯಿಸಿದ್ದಾರೆ. ಆದರೆ ಈಗ ಭಾರತದಲ್ಲಿ ಪಂಗಡಗಳ ಪ್ರಾಬಲ್ಯವು ಬಹು ಹೆಚ್ಚಾಗಿ ಅನೈಕ್ಯತೆಯು ಬೆಳೆಯುಹತ್ತಿದೆ. ಆದರೆ ಸಮಾಜದಲ್ಲಿ ಪ್ರೇಮ ಐಕ್ಯತೆಗಳನ್ನು ನೆಲೆಗೊಳಿಸುವದಕ್ಕಾಗಿ ಶಿವಾಚಾರವನ್ನು ಬೆಳಿಸುವದು ಅವಶ್ಯವೆಂಬುದನ್ನು ನಾವು ಈ ಕಾಲಕ್ಕೆ ಲಕ್ಷಿಸುವದು ಬಹು ಅವಶ್ಯವಾಗಿದೆ.

## ಭೃತ್ಯಾಚಾರ.

" ಎನಗಿಂತ ಕಿರಿಯರಾರಿಲ್ಲ. ಶಿವಭಕ್ತರಿಗಿಂತ ಹಿರಿಯರಾರಿಲ್ಲ " ಎಂದು ಬಸವಣ್ಣನವರು ಹೇಳಿರುತ್ತಾರೆ. ಇದೇ ಭೃತ್ಯಾಚಾರದ ರಹಸ್ಯವಾಗಿದೆ. ತಾನು ಎಲ್ಲರಿಗಿಂತಲೂ ಹೆಚ್ಚಿನವನೆಂದು ಹೇಳಿಕೊಳ್ಳುವ ವ್ಯಕ್ತಿಯಷ್ಟು ಕೀಳ ಪ್ರಾಣಿಯು ಮತ್ತೊಂದಿಲ್ಲ. ಮಹನೀಯರಾದವರು ಯಾವಾಗಲೂ ತಾವು ಕಡಿಮೆ ಎಂದೇ ಹೇಳಿಕೊಂಡಿದ್ದಾರೆ. ಅಂತೆಯೇ ಅವರು ಇವತ್ತಿಗೂ ಪ್ರಕಾಶಮಾನರಾಗಿ ಬೆಳಗುತ್ತಿದ್ದಾರೆ. ದಾಸಾನುದಾಸರಾಗಿ ಮಾನಾಪಮಾನ ಗಳನ್ನು ಸಹಿಸಿಕೊಂಡು ಹಗಲಿರುಳು ಸಮಾಜಸೇವಾ ಕಾರ್ಯಗಳಲ್ಲಿ ನಿರತ ರಾದ ವಿಭೂತಿಗಳೇ ಭೃತ್ಯಾಚಾರವುಳ್ಳವರು. ಇವರು ಸಮಾಜ ಸೇವಕ ರಾಗಿ ಯಾವಾಗಲೂ ಸಮಾಜ ಸೇವೆಯ ಕೆಲಸವನ್ನು ಮಾಡುತ್ತಾರೆ. ನಿಜ ವಾದ ಯೋಗ್ಯತೆಯು ಪೂರ್ವಜರಿಂದಾಗಲಿ ದುಡ್ಡು ಸುರಿಸುವದರಿಂದಾಗಲಿ ಅಥವಾ ಒಬ್ಬರನ್ನು ಸುಮ್ಮನೇ ಮೇಲಕ್ಕೆತ್ತಿ ಕೂಡ್ರಿಸುವದರಿಂದಾಗಲಿ ಬರ ಲಾರದು. ಯಾವನು ತನ್ನ ಸಮಾಜದ ಸೇವೆಯನ್ನು ಪರಿಶುದ್ಧಾಂತಃಕರಣ ದಿಂದ ಅವಿಶ್ರಾಂತ ಪರಿಶ್ರಮದಿಂದ ವಹಿಸುತ್ತಾನೋ ಅವನಲ್ಲಿಯೇ ನಿಜವಾದ ಯೋಗ್ಯತೆಯು ಇರುತ್ತದೆ. ಇವು ಭೃತ್ಯಾಚಾರದ ಶ್ರೇಷ್ಠ ಉದಾಹರಣೆ ಗಳು ಆಗಿರುತ್ತವೆ.

## ಗಣಾಚಾರ

ಕೆಲವೊಂದು ಸಮಾಜವು ಏಳಿಗೆಹೊಂದಬೇಕಾದರೆ ಅದು ಬಹಳ ಮೆತ್ತಗಾಗಿದ್ದರೆ, ಅಥವಾ ವಿನಮ್ರವಾಗಿದ್ದರೆ ಪ್ರಯೋಜನವಿಲ್ಲ. ಇದರ ದುರು ಪಯೋಗವನ್ನು ದುಷ್ಟರು ಮಾಡಿಕೊಳ್ಳುವರು. ದುರ್ಬಲರನ್ನು ರಕ್ಷಿಸುವದ ರಕಿಂತಲೂ ಅವರನ್ನು ಘಾತಮಾಡುವ ಪ್ರವೃತ್ತಿಯು ಸಮಾಜದಲ್ಲಿ ಹೆಚ್ಚು ಸೌಮ್ಯ ಸಮಾಜವು ಇದ್ದದ್ದಾದರೆ ದುಷ್ಟರು ಅದರ ದುರುಪಯೋಗ ಮಾಡಿ ಕೊಳ್ಳುವರು ಮತ್ತು ಇಂಥ ಸಮಾಜದ ಅಪಹಾಸ್ಯ ಮತ್ತು ನಿಂದೆಗಳನ್ನಾ ಡುವರು. ದುಷ್ಟ ನಿಗ್ರಹ ಮತ್ತು ಶಿಷ್ಟ ಪರಿಪಾಲನೆ ಈ ಗುಣಗಳು ಗಣಾ ಚಾರದಲ್ಲಿ ಸಮಾವೇಶವಾಗುತ್ತವೆ.

ಪಂಚಾಚಾರಗಳು ವ್ಯಕ್ತಿಮಾತ್ರವಲ್ಲದೆ ಸಮಾಜ ಮತ್ತು ದೇಶಕ್ಕೂ ಕೂಡ ಅನ್ವಯಿಸುತ್ತವೆ. ಈ ಐದು ಗುಣಗಳಿಂದ ಸಮಾಜವು ಬಲಪಡು

ತ್ತದೆ. ಮತ್ತು ದೇಶವು ಉನ್ನತ ಸ್ಥಿತಿಯನ್ನು ಹೊಂದುತ್ತಿದೆ. ಅಮರಗಣಾಧೀಶ್ವರರು ತಮ್ಮ ವಚನಗಳಲ್ಲಿ ಪಂಚಾಚಾರಗಳೇ ಪ್ರಾಣವೆಂದು ಹೇಳುವದು ಯಥಾರ್ಥವಾಗಿರುತ್ತದೆ.

## ನೂರೊಂದು ಸ್ಥಲಗಳು

ಜೀವನು ಲಿಂಗವಾಗಬೇಕಾದರೆ ಅವನು ನೂರೊಂದು ಸೋಪಾನಗಳನ್ನು ಅಥವಾ ಏಕೋತ್ತರ ಶತಸ್ಥಲಗಳನ್ನು ದಾಟಿಹೋದರೆ ಇದು ಸುಲಭವೆಂದು ವಚನಕಾರರು ತಮ್ಮ ವಚನಗಳಲ್ಲಿ ಹೇಳಿದ್ದಾರೆ. ಅವರು ಮೊದಲು ಅಂಗಸ್ಥಳ, ಲಿಂಗಸ್ಥಳಗಳೆಂಬೆರಡು ಪ್ರಾಮುಖ್ಯ ಭೇದಗಳನ್ನು ಕಲ್ಪಿಸಿ ಅವುಗಳಲ್ಲಿ ಪ್ರತ್ಯೇಕವಾಗಿ ಭಕ್ತಮಹೇಶ ಪ್ರಸಾದಿ ಪ್ರಾಣಲಿಂಗಿ ಶರಣ ಐಕ್ಯವೆಂಬ ಆರು ಅಂತರ್ಭಾಗಗಳನ್ನು ಮಾಡಿ ಇವುಗಳಲ್ಲಿ ಕೆಳಗೆ ಕಾಣಿಸಿದಂತೆ ನೂರು ಒಂದು ಸ್ಥಲಗಳನ್ನು ಮಾಡಿದ್ದಾರೆ. ಅವು ಯಾವವೆಂದರೆ:—

| | | | |
|---|---|---|---|
| ಅಂಗಸ್ಥಲ | ೪೪ | ಲಿಂಗಸ್ಥಲ | ೫೭ |
| ಭಕ್ತ | ೧೫ | ಭಕ್ತ | ೯ |
| ಮಹೇಶ | ೯ | ಮಹೇಶ | ೯ |
| ಪ್ರಸಾದಿ | ೭ | ಪ್ರಸಾದಿ | ೯ |
| ಪ್ರಾಣಲಿಂಗಿ | ೫ | ಪ್ರಾಣಲಿಂಗಿ | ೯ |
| ಶರಣ | ೪ | ಶರಣ | ೧೨ |
| ಐಕ್ಯ | ೪ | ಐಕ್ಯ | ೯ |

ಈ ಸ್ಥಲಗಳಲ್ಲಿ ವೀರಶೈವಾಚಾರಗಳಲ್ಲಿ ಯಾವಯಾವವು ಯಾವ ಸ್ಥಲಕ್ಕೆ ಸಂಬಂಧ ಪಡುತ್ತವೆಂಬುದನ್ನು ನಾವು ತಿಳಿಯಬೇಕು. ಈ ವರೆಗೆ ನಾವು ವಿವರಿಸಿದ ಸ್ಥಲಗಳು ತಾತ್ವಿಕವಾದವುಗಳು. ಆದರೆ ಈ ಸ್ಥಲಗಳು ಆಚಾರಕ್ಕೆ ಸಂಬಂಧಿಸಿರುತ್ತವೆ. ಈ ಸ್ಥಲಗಳಲ್ಲಿ ಯಾವ ಯಾವ ಆಚಾರಗಳು ಯಾವ ಯಾವಸ್ಥಲಕ್ಕೆ ಸಂಬಂಧಿಸಿರುತ್ತವೆಂಬುದನ್ನು ಗುರುತಿಸತಕ್ಕದ್ದು. ೧೦೧ ಸ್ಥಲಗಳು ಕ್ರಿಯೆಗಳ ಮರ್ಮವನ್ನೂ ಅವುಗಳ ಪರಿಣಾಮಗಳನ್ನೂ ತಿಳಿಸುತ್ತವೆ.

ಈ ಚಿಕ್ಕ ಲೇಖದಲ್ಲಿ ಈ ವಿಷಯವನ್ನು ತಿಳಿಸುವದು ಅಶಕ್ಯವಾದದ್ದು. ವಾಚಕರು ಮೂಲ ಗ್ರಂಥಗಳನ್ನೇ ನೋಡಬೇಕು. ಈ ಅಂಗಲಿಂಗ ಸ್ಥಲಗಳಲ್ಲಿ

ಆತ್ಮ ವಿಕಾಸವನ್ನು ಮಾಡಿಕೊಂಡು ಜ್ಞಾನದ ತುರೀಯಾವಸ್ಥೆಗೇರಿ ಲಿಂಗಾನಂದ ಪರವಶನಾಗಿ ಹೇಗಿರಬೇಕೆಂಬುದರ ಬಗ್ಗೆ ವಿವರಣೆಗಳು ಇರುತ್ತವೆ. ಈ ವಿಷಯುವನ್ನು ನಾವು ಹೆಚ್ಚಿಗೆ ವಿಸ್ತಾರಪಡಿಸದೆ ಷಟ್‌ಸ್ಥಲಶಾಸ್ತ್ರದ ಭಾಗವು ಇದಾಗಿದೆಂದು ಹೇಳಿ ಇದು ವಾಚಕರಿಂದ ಲಕ್ಷಿಸಲ್ಪಡತಕ್ಕ ವಿಷಯವೆಂದು ಹೇಳಬಯಸುತ್ತೇವೆ.

## ವೀರಶೈವ ಧರ್ಮದಲ್ಲಿ ವಿಶ್ವಧರ್ಮದ ಲಕ್ಷಣಗಳು

**ನಾನಾತ್ವದಲ್ಲಿ ಏಕತ್ವವು:—** ಮನುಷ್ಯನಲ್ಲಿ ಮತ್ತು ಬಾಹ್ಯ ಸೃಷ್ಟಿಯಲ್ಲಿ ನಾನಾತ್ವವು ಕಂಡು ಬರುತ್ತದೆ. ಈ ವಿವಿಧತೆಯನ್ನು ಲಕ್ಷಿಸದೆ ಅದರಲ್ಲಿ ಸಾಮಾನ್ಯವಾದುದು ಏನಾದರೂ ಇದೆಯೋ ಹೇಗೆ ಎಂಬುದನ್ನು ಎಲ್ಲರ ಲಕ್ಷಕ್ಕೆ ತಂದು ಎಲ್ಲ ಸಮಾಜದವರು ಒಂದೇ ಧ್ಯೇಯ ಉಳ್ಳವರಾಗಿ ಆಚರಿಸುವದು ಬಹು ಮಹತ್ವದ್ದಾಗಿರುತ್ತದೆ. ಈ ಕಾರ್ಯವನ್ನು ಅಮರಗಣಾಧೀಶ್ವರರು ಜರುಗಿಸಿರುವದರಿಂದ ಅವರ ವಿಚಾರಗಳಲ್ಲಿ ವಿಶ್ವಧರ್ಮದ ಹೆಗ್ಗುರುತುಗಳು ಕಂಡು ಬರುತ್ತವೆ. ಒಬ್ಬ ವಚನಕಾರನು ಪರಮಾತ್ಮನ ವಿಷಯವಾಗಿ ಅನ್ನುವದೇನಂದರೆ—

ಮಣಿಗಳ ಸೂತ್ರದಂತೆ ತ್ರಿನಯನ ನೀನಿಪ್ಪೆಯಯ್ಯಾ. ಎಣಿಸುವಡೆ ತನು ಭಿನ್ನ. ಆತ್ಮನೊಬ್ಬನೇ. ಅನುರೇಣು ಮಧ್ಯದಲ್ಲಿ ಗುಣಭರಿತ ನೀನೆಂದು ಮಣಿವುತಿಪ್ಪೆನಯ್ಯಾ ರಾಮನಾಥಾ (ದೇವರದಾಸಿಮಯ್ಯ)

ಅಮರಗಣಾಧೀಶ್ವರರು ಈ ತತ್ವದ ನಿಜತ್ವವನ್ನು ಬಹು ಪ್ರಾಮುಖ್ಯವಾಗಿ ಬೋಧಿಸುತ್ತಾರೆ. ಈ ವಿಷಯವನ್ನು ಕುರಿತು ಅಸಂಖ್ಯವಚನಗಳನ್ನು ಅವರು ನುಡಿದಿದ್ದಾರೆ. ಬಸವೇಶ್ವರನ ಕಾಲದಲ್ಲಿ ನಾಡಿನಲ್ಲಿ ಅನೇಕ ಶೈವ ವೈಷ್ಣವ ಪಂಗಡಗಳು ಉತ್ಪನ್ನವಾಗಿದ್ದವು ಇಂಥಕಾಲದಲ್ಲಿ ಅಮರಗಣಾಧೀಶ್ವರರು ಉದ್ಭವಿಸಿ ಪರಮಾತ್ಮನೊಬ್ಬನೇ ಇದ್ದಾನೆ, ಅವನು ಎಲ್ಲದರಲ್ಲಿಯೂ ಇದ್ದಾನೆ, ಎಂಬ ತತ್ವವನ್ನು ಧೈರ್ಯದಿಂದ ಸಾರಿ ಅದನ್ನು ಪ್ರಸಾರ ಮಾಡಿದರು. ಆದ್ದರಿಂದ ಅನೇಕ ಪಂಥಗಳು ವೀರಶೈವ ಧರ್ಮವನ್ನು ಸ್ವೀಕರಿಸಿದವು. ಇದರಿಂದ ಅವನ ಕಾಲದಲ್ಲಿ ಎಲ್ಲ ಸಮಾಜಗಳಲ್ಲಿ ಪರಸ್ಪರ ಪ್ರೀತಿ ಸೌಹಾರ್ದತೆಗಳು ಬೆಳೆದು ಕರ್ನಾಟಕವು ಬಹು ಬಲಾಢ್ಯ ದೇಶವಾಯಿತು.

**ಉತ್ಕ್ರಾಂತಿಯು ತತ್ವಗಳ ಅವಲಂಬನ:**— ಮನುಷ್ಯನು ತನ್ನ ಕ್ರಿಯೆಗಳ ಮೂಲಕ ಕೆಳಗಿನ ಸ್ಥಿತಿಯಿಂದ ಮೇಲಿನ ಸ್ಥಿತಿಗೆ ಮೆಲ್ಲಮೆಲ್ಲನೆ ಹೋಗಬೇಕೆಂದು ಮುಂಬರಿಯ ಹತ್ತಲು ಅದು ಉತ್ಕ್ರಾಂತಿ ಎಂದೆನಿಸುತ್ತದೆ. ಕೆಳಗಿನ ವಚನದಲ್ಲಿ ಬಸವೇಶ್ವರನು ಮನುಷ್ಯನ ಉತ್ಕ್ರಾಂತಿಯು ಹೇಗಿರುತ್ತದೆಂಬುದನ್ನು ಬಹು ಚನ್ನಾಗಿ ವಿವರಿಸಿದ್ದಾನೆ. ಅದು ಹೇಗೆಂದರೆ:- "ಭಕ್ತನೆನಿಸುವೆನಯ್ಯಾ ಮೆಲ್ಲಮೆಲ್ಲನೆ. ಯುಕ್ತನೆನಿಸುವೆನಯ್ಯಾ ಮೆಲ್ಲಮೆಲ್ಲನೆ. ಪಾರಿ ಶರಣನೆನಿಸುವೆನಯ್ಯಾ ಮೆಲ್ಲಮೆಲ್ಲನೆ. ಎಡಹುವ ಗುಳಿಗಳ ದಾಂಟಿ ಬರಬರ ಲಿಂಗೈಕ್ಯನೆನಿಸುವೆನಯ್ಯಾ. ಕೂಡಲಸಂಗಮದೇವಾ ನಿಮ್ಮಿಂದ ಅಧಿಕನೆನಿಸುವೆನಯ್ಯಾ."

ಯಾವ ಧರ್ಮದಲ್ಲಿ ಉತ್ಕ್ರಾಂತಿಯ ತತ್ವಗಳು ಇವೆಯೋ, ಅದು ವಿಶ್ವಧರ್ಮವಾಗಲಿಕ್ಕೆ ಅರ್ಹತೆಯುಳ್ಳದ್ದಾಗಿರುತ್ತದೆ.

**ಪರಮಾತ್ಮನಲ್ಲಿ ಸಾಮರಸ್ಯ:** ಪಾಶ್ಚಿಮಾತ್ಯ ತತ್ವಜ್ಞಾನಿಗಳು ದೃಶ್ಯ ವಸ್ತುವಿನಲ್ಲಿ ಪರವಸ್ತುವೆಂಬುದಿದೆ, ಎಂದು ಹೇಳಲು ಧೈರ್ಯ ಮಾಡುವದಿಲ್ಲ. ಮತ್ತು ಮನುಷ್ಯನು ಈ ಪರತತ್ವದಲ್ಲಿ ಪೂರ್ಣವಾಗಿ ಬೆರೆಯುತ್ತಾನೆಂತಲೂ ಅವರು ಹೇಳಲಾರರು. ಆದರೆ ಹಿಂದೂಸಮಾಜಗಳಲ್ಲಿ ಮೋಕ್ಷದ ವಿಚಾರಗಳು ಪರಮಾತ್ಮನಿಗೆ ಸಮೀಪವರ್ತಿಯಾಗುವದು ಅಥವಾ ಅವನಲ್ಲಿ ಕೂಡಿಹೋಗುವದು ಇರುತ್ತವೆ. ಈ ತತ್ವವು ವಿಶ್ವಧರ್ಮವನ್ನು ಉಂಟು ಮಾಡಲಿಕ್ಕೆ ಬಹು ಸಹಾಯಕಾರಿಯಾಗಿರುತ್ತದೆ. ಹಿಂದೂಧರ್ಮವು ಅದರಲ್ಲಿ ವಿಶೇಷವಾಗಿ ವೀರಶೈವ ಧರ್ಮವು ಈ ತತ್ವವನ್ನೇ ಸಾರುತ್ತದೆ.

**ವ್ಯಕ್ತಿ ನಿರ್ಮಿತ ಧರ್ಮವಿರಕೂಡದು:**—ವೀರಶೈವ ಧರ್ಮ ಸ್ಥಾಪನೆಗೆ ಯಾರೋ ಒಬ್ಬರು ಕಾರಣರೆಂದು ಅದರ ಇತಿಹಾಸವು ಹೇಳುವದಿಲ್ಲ. ಶೈವರು ಮೊದಲ್ಗೊಂಡು ಅನೇಕರ ಪ್ರಯತ್ನಗಳ ಮೂಲಕ ಅದು ಉತ್ಕ್ರಾಂತಿಯನ್ನು ಹೊಂದುತ್ತಲೇ ಬಂದಿದೆ. ಒಂದು ವೇಳೆ ಒಬ್ಬಾನೊಬ್ಬ ವ್ಯಕ್ತಿಯ ಮೂಲಕ ಧರ್ಮಸ್ಥಾಪನೆಯಾಯಿತೆಂದು ಹೇಳಿದಲ್ಲಿ ಅಂಥ ವ್ಯಕ್ತಿಯ ಕೆಲ ವಿಚಾರಗಳಲ್ಲಿ ತಪ್ಪುಗಳು ಸಿದ್ಧವಾದರೆ ಸಾಕು; ಆ ಧರ್ಮದ ಮಹತ್ವವೇ ಹೋಗಿಬಿಡುತ್ತದೆ. ಇದೇ ಪ್ರಕಾರ ವೀರಶೈವಧರ್ಮವು ಕಾಲಕಾಲಕ್ಕೆ

ಉದ್ಭವಿಸಿದ ಅಸಂಖ್ಯ ಮಹಾನುಭಾವರ ಪ್ರಯತ್ನಗಳ ಮೂಲಕ ಪ್ರವಾಹ ರೂಪವಾಗಿ ಪುರಾತನ ಕಾಲದಿಂದ ಈ ವರೆಗೂ ಹರಿಯುತ್ತ ಬಂದಿದೆ. ಇಂಥ ಧರ್ಮವು ವಿಶ್ವಧರ್ಮವಾಗಲು ಶಕ್ಯವಿರುತ್ತದೆ.

**ಧರ್ಮದಲ್ಲಿ ವ್ಯಾಪಕತೆಃ—** ಎಲ್ಲ ತರಗತಿಯ ಜನರಲ್ಲಿ ದೇವರ ಕಲ್ಪನೆಯು ಬಂದು ಅವರು ತಮ್ಮ ತಮ್ಮ ಯೋಗ್ಯತೆಯ ಪ್ರಕಾರ ಉತ್ಕ್ರಾಂತಿ ಯನ್ನು ಪಡೆಯುವಂತೆ ಅದರಲ್ಲಿ ವ್ಯವಸ್ಥೆ ಇರಬೇಕು. ಇಂಥದು ವಿಶ್ವ ಧರ್ಮವಾಗಲು ಯೋಗ್ಯತೆಯುಳ್ಳದಾಗುತ್ತದೆ

**ಷಟ್‌ಸ್ಥಲದ ಮಹತ್ವಃ—** ಸಮಾಜದಲ್ಲಿ ಕೆಲವರು ಭಕ್ತಿಮಾರ್ಗಕ್ಕೆ ಒಲಿದವರುಂಟು. ಬೇರೆ ಕೆಲವರು ಜ್ಞಾನಮಾರ್ಗಕ್ಕೆ, ಇನ್ನುಳಿದವರು ಕರ್ಮ ಮಾರ್ಗಕ್ಕೆ, ಹೀಗೆ ಅನೇಕ ಮಾರ್ಗಗಳಿಗೆ ಒಲಿದವರಿರುತ್ತಾರೆ. ಆದರೆ ಈ ಎಲ್ಲ ಮಾರ್ಗಗಳು ವೀರಶೈವ ಧರ್ಮದಲ್ಲಿ ಸಮಾವೇಶವಾಗಿರುತ್ತವೆ. ಅದರಲ್ಲಿ ಕ್ರಿಯೆ, ಜ್ಞಾನ, ಭಕ್ತಿ, ಇವುಗಳ ತತ್ವಗಳು ಅಡಕವಾಗಿರುತ್ತವೆ. ಈ ಬಗೆಯ ರಚನೆಯು ಯಾವ ಧರ್ಮದಲ್ಲಿ ಇದೆಯೋ ಅದು ವಿಶ್ವ ಧರ್ಮ ವಾಗಲು ಅರ್ಹವಾಗುತ್ತದೆ. ಬಸವೇಶ್ವರರ ಕಾಲದಲ್ಲಿ ಈ ಎಲ್ಲ ತತ್ವಗ ಳುಳ್ಳ ವೀರಶೈವ ಧರ್ಮವು ಇಡೀ ದೇಶದಲ್ಲಿ ಪ್ರಸಾರವಾಯಿತು. ಆಗ ಮಹತ್ವವಾದ ಅನೇಕ ಮತಗಳ ಅನುಯಾಯಿಗಳು ವೀರಶೈವ ಧರ್ಮವನ್ನು ಸ್ವೀಕರಿಸಿದರು.

ವೀರಶೈವ ಧರ್ಮದಲ್ಲಿ ವಿಶ್ವಧರ್ಮದ ವಿಚಾರಗಳಿರುವದರಿಂದಲೇ ಇದು ಪ್ರಸಾರಹೊಂದುವದು ಶಕ್ಯವಾಯಿತು. ಅಮರಗಣಾಧೀಶ್ವರರು ವಿಶ್ವಧರ್ಮದ ಈ ತತ್ವಗಳನ್ನು ಅಂಗೀಕರಿಸಿ, ವಚನಗಳನ್ನು ರೂಪುಗೊಳಿಸಿದರು. ಇದರಿಂದ ಅವರ ಧರ್ಮಕ್ಕೆ ಒಂದು ವ್ಯಾಪಕವಾದ ಸ್ವರೂಪವು ಪ್ರಾಪ್ತವಾಯಿತು. ಅಮರಗಣಂಗಳ ಧರ್ಮವು ವಿಶ್ವಧರ್ಮವೆಂದು ಹೇಳಲು ಯಾವ ಪ್ರತ್ಯವಾ ಯವೂ ಇರಲಾರದು.

## ಜಾತಿಭೇದ.

ವಿಶ್ವ ಬಂಧುತ್ವ ವಿಚಾರಗಳಿದ್ದಲ್ಲಿ ಜಾತಿಭೇದವು ಉಳಿಯಲಾರದು. ಜಾತಿಭೇದವು ವಿಶ್ವಬಂಧುತ್ವವನ್ನು ಪೂರ್ಣವಾಗಿ ಲೋಪಗೊಳಿಸುವದರಿಂದ ಈ ಎರಡೂ ವಿಚಾರಗಳು ಕೂಡಿ ನಿಲ್ಲಲಾರವು.

ಜಾತಿಭೇದವನ್ನು ನಿರಾಕರಿಸಬೇಕೆಂದು ಶಿವಶರಣರ ಉಕ್ತಿಗಳು ಅಸಂಖ್ಯಾತ ವಾಗಿವೆ. ಏಕೋತ್ತರ ಶತಸ್ಥಲದಲ್ಲಿ 'ಪೂರ್ವಾಶ್ರಯ ನಿರಸನ ಸ್ಥಲ' ವೆಂಬ ಒಂದು ಸ್ಥಲವಿರುತ್ತದೆ. ಒಬ್ಬ ಮನುಷ್ಯನು ಲಿಂಗಧಾರಿಯಾದ ಬಳಿಕ ಅವನು ಗುರುವಿನ ಕರಜಾತನೆಂದು ಹೇಳಲ್ಪಡುತ್ತಾನೆ. ಅಂದರೆ ಅವನು ಮೊದಲಿನ ಸ್ಥಿತಿಯನ್ನು ಬಿಟ್ಟು ಗುರುವಿನ ಮೂಲಕ ಹೊಸ ಜನ್ಮವನ್ನು ತಾಳಿದನೆಂದು ತಿಳಿಯಲಾಗುತ್ತದೆ. ಆದ್ದರಿಂದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಅಥವಾ ಮತ್ತಾವ ಜಾತಿಯವನೇ ಇರಲಿ, ಅವನು ಲಿಂಗಧಾರಣದಿಂದ ಅವನ ಪೂರ್ವಾಶ್ರಯವು ಅಳಿದು ಹೋಗುತ್ತದೆ. ಮತ್ತು ಈತನು ಲಿಂಗಧಾರಣೆ ಯಿಂದ ಪವಿತ್ರ ಶರೀರಿಯಾಗುವದರಿಂದ ಆತನನ್ನು ಶಿವನೆಂತಲೇ ಭಾವಿಸಬೇ ಕೆಂದು ವೀರಶೈವರಲ್ಲಿ ಸಿದ್ಧಾಂತವಿರುತ್ತದೆ.

ಅಮರಗಣಂಗಳ ವಚನಗಳನ್ನು ನಿರೀಕ್ಷಿಸಿದಲ್ಲಿ ಅವರು ಪ್ರಾಮುಖ್ಯ ವಾಗಿ ಎರಡೇ ಕುಲಗಳನ್ನು ಒಪ್ಪಿಕೊಂಡಿದ್ದು ಕಂಡುಬರುತ್ತದೆ. ಅವು (೧) ಶಿವಕುಲ (೨) ಭವಿಕುಲ. ಆದ್ದರಿಂದ ಮನುಷ್ಯರಲ್ಲಿ ಹೊಲೆ ಹದಿ ನೆಂಟು ಜಾತಿ ಕುಲಗಳೇಬುವಿಲ್ಲ. ಲಿಂಗಧಾರಿಗಳಾದ ಭಕ್ತರಲ್ಲಿಯಂತೂ ಉಚ್ಚ ನೀಚ ಕುಲಗಳೆಂಬ ಭೇದವನ್ನು ಎಣಿಸಲಿಕ್ಕೆ ಬರಲಾರದು. ಹೊಲೆಯಲ್ಲಿ ಹುಟ್ಟಿ ಕುಲವನಾರಿಸುವರೇ ? ಕರ್ಣದಲ್ಲಿ ಜನಿಸಿದವರುಂಟೇ ? ಎಂದು ಒಬ್ಬ ವಚನಕಾರನು ಸ್ಪಷ್ಟ ಶಬ್ದಗಳಿಂದ ನುಡಿಯುತ್ತಾನೆ. ಹೊಲೆಯರಾ ರೆಂಬ ಬಗ್ಗೆ ಅಂಬಿಗರಚೌಡಯ್ಯನು ಬಹು ಸ್ವಾರಸ್ಯಪೂರ್ಣವಾಗಿ ಹೇಳಿದ್ದಾನೆ. "ಹೊಲೆಯ ಹೊಲೆಯ ಎಂದೊಡೆ ಹೊಲೆಯರವರೆಂತಪ್ಪರಯ್ಯ ? ತಾಯಿತಂದೆ ಗಳಿಗೆ ಬೈದವನೇ ಹೊಲೆಯ" ಎಂದು ಮುಂತಾಗಿ ಅವನು ಹೇಳುತ್ತಾನೆ. ಆದ್ದರಿಂದ ಶಿವಕುಲದವರೆಲ್ಲ ಅನ್ನೋದಕ ಶರೀರಸಂಬಂಧಗಳನ್ನು ಪರಸ್ಪರ ಮಾಡಲಿಕ್ಕೆ ಯಾವ ಪ್ರತಿಬಂಧವೂ ಇರಲಾರದು. ಬಸವಣ್ಣನವರು ಡೋಹರ ಕಕ್ಕಯ್ಯನ ಎಕ್ಕ ಪ್ರಸಾದವನ್ನು ಸೇವಿಸುತ್ತಿದ್ದುದು ತಿಳಿದುಬರುತ್ತದೆ. ಅಮರ ಗಣಂಗಳ ಚರಿತ್ರೆಯಲ್ಲಿ ಇಂಥ ಅನೇಕ ಉದಾಹರಣೆಗಳು ಇರುತ್ತವೆ. ಇಂಥ ದಿವ್ಯ ತತ್ವಗಳು ಅಮರಗಣಂಗಳು ಯಾವಾಗಲೂ ಸಾರುತ್ತ ಬಂದಿದ್ದಾರೆ. ಆದರೆ ಈಚೆಗೆ ಅವುಗಳನ್ನು ವೀರಶೈವ ಸಮಾಜವು ಲಕ್ಷಿಸಿರುವದಿಲ್ಲ. ಅವರು ಈಗಲೂ ಕೂಡ ಬಸವಾದಿಪ್ರಮಥರ ಉಚ್ಚ ವಿಚಾರಗಳನ್ನು ಬಿಟ್ಟುಕೊಟ್ಟು ಜಾತಿವಿಶಿಷ್ಟ ಭೇದಗಳನ್ನು ತಮ್ಮ ತಮ್ಮಲ್ಲಿ ಕಲ್ಪಿಸಿಕೊಂಡು ಪರಸ್ಪರ ಹೋರಾಡು ತ್ತಿರುವದನ್ನು ನಾವು ನೋಡುತ್ತೇವೆ.

ಎಷ್ಟೋ ಋಷಿಗಳು ಕೀಳು ಕುಲದಲ್ಲಿ ಹುಟ್ಟಿದವರಾಗಿದ್ದರೂ ಸದ್ಗುಣ ಸದಾಚಾರಗಳ ಮೂಲಕ ಕುಲಜರೆಂದು ಎಣಿಸಲ್ಪಡುತ್ತ ಬಂದರು. ಬಸವಣ್ಣನವರು ತಮ್ಮ ಒಂದು ವಚನದಲ್ಲಿ "ವ್ಯಾಸ ಬೋಯಿತಿಯ ಮಗ, ಮಾರ್ಕಂಡೇಯ ಮಾತಂಗಿಯ ಮಗ, ಅಗಸ್ತ್ಯ ಕಬ್ಬಲಿಗ, ದುರ್ವಾಸ ಮಚ್ಚಿಗ, ಕೌಂಡಿಲ್ಯಋಷಿ ನಾಯಿದ ಕಾಣಿರೋ. ಅಂತ್ಯಜನಾದರೇನು ? ಸದಾಚಾರಿಯೇ ಕುಲಜನಯ್ಯ" ಎಂದು ಹೇಳಿದ್ದಾರೆ. ಈ ಪ್ರಕಾರ ಸದಾಚಾರಿಯೇ ಶ್ರೇಷ್ಠ ಕುಲದವನೆಂದು ಅಮರಗಣಾಧೀಶ್ವರರು ತಿಳಿಯುತ್ತಾರೆ. "ನಡೆನುಡಿ ಸಿದ್ಧಾಂತವಾದಲ್ಲಿ ಕುಲ ಹೊಲೆ ಇಲ್ಲ. ನುಡಿ ಲೇಸು, ನಡೆಯಧಮವಾದಲ್ಲಿ ಅದೇ ಬಿಡುಗಡೆ" ಎಂದು ಮಾದರ ಚನ್ನಯ್ಯನು ಹೇಳುತ್ತಾನೆ. "ಚಾಂಡಾಲನಾದರೆಯೂ ಶಿವಭಕ್ತನೇ ಕುಲಜನು. ಆತನೊಡನೆ ನುಡಿಗಡಣವ ಮಾಡಬೇಕೆಂದುದು ವೇದ. ಕುಲವ ನೋಡಲು ಬೇಡ. ಆತನೆಲ್ಲರಿಗಿಂತಲೂ ಹಿರಿಯನು" ಎಂದು ಇನ್ನೊಬ್ಬ ಶಿವಶರಣನ ಉಕ್ತಿ ಇದೆ. "ಕರ್ಮಜಾತನ ಕಳೆದು ಶ್ರೀ ಗುರುಲಿಂಗವು ಪುಣ್ಯಜಾತನ ಮಾಡಿದ ಬಳಿಕ ಶಿವಕುಲವಲ್ಲದೆ ಅನ್ಯಥಾ ಕುಲವುಂಟೇ ? ಶರಣರಿಗೆ ಆವ ಕುಲವಾದರೇನು ? ಲಿಂಗವಿದ್ದಾತನೇ ಕುಲಜನು" ಎಂದು ಇನ್ನೊಬ್ಬ ವಚನಕಾರನು ಹೇಳುತ್ತಾನೆ. ಶರಣರಲ್ಲಿ ಜಾತಿಸೂತಕವನ್ನು ಅರಸಬಾರದೆಂದು ಅಮರಗಣಾಧೀಶ್ವರರು ಯಾವಾಗಲೂ ಅಭಿಪ್ರಾಯಪಟ್ಟಿರುತ್ತಾರೆ. "ದಾಸೀಪುತ್ರನಾಗಲಿ, ವೇಶ್ಯಾಪುತ್ರನಾಗಲಿ ಶಿವದಿಕ್ಷೆಯಾದ ಬಳಿಕ ಸಾಕ್ಷಾತ್ ಶಿವನೆಂದು ವಂದಿಸಿ, ಪೂಜಿಸಿ, ಪಾದೋದಕ ಪ್ರಸಾದವ ಕೊಡುವದೇ ಯೋಗ್ಯ. ಹೀಗಲ್ಲದೆ ಇದನ್ನು ಉದಾಸೀನವ ಮಾಡಿಬಿಡುವವರಿಗೆ ಪಂಚ ಮಹಾ ಪಾತಕ ನರಕ ಕಾಣಾ ಕೂಡಲಸಂಗಮದೇವಾ" ಎಂದು ಬಸವಣ್ಣನವರು ಅನ್ನುತ್ತಾರೆ. ಅಮರಗಣಾಧೀಶ್ವರರು ತಮ್ಮತಮ್ಮಲ್ಲಿ ಯಾವ ಸಂಕೋಚವಿಲ್ಲದೆ ಪರಸ್ಪರ ಊಟೋಪಚಾರಗಳನ್ನೂ ಲಗ್ನಾದಿ ವ್ಯವಹಾರಗಳನ್ನೂ ನಡಿಸುತ್ತ ಬಂದಿದ್ದಾರೆ.

ಜಾತಿಭೇದದ ನಿರಾಕರಣೆಯ ವಿಷಯವಾಗಿ ಕೆಲವು ಉದಾಹರಣೆಗಳನ್ನು ಈ ಸ್ಥಳದಲ್ಲಿ ಕೊಡುವದು ಅವಶ್ಯವಾದ್ದರಿಂದ ಅವುಗಳನ್ನು ನಾವು ಇಲ್ಲಿ ಕೊಡುತ್ತೇವೆ. ಅನೇಕ ಶಿವಶರಣರು ಉತ್ತಮ ನಡೆನುಡಿಯುಳ್ಳ ಅಸ್ಪೃಶ್ಯರೊಡನೆ ಅನ್ನೋದಕ ವ್ಯವಹಾರಗಳನ್ನು ಮಾಡಿದ್ದಾರೆ. ಧಾರ್ಮಿಕ ತತ್ವಗಳನ್ನು ಅವರು ಸಮಾನಭಾವದಿಂದ ಯಾವಾಗಲೂ ಒಬ್ಬರಗೂಡೊಬ್ಬರು ಒಂದೇ ಸ್ಥಳದಲ್ಲಿ ಚರ್ಚಿಸುತ್ತ ಬಂದಿದ್ದಾರೆ. ಅವರು ಎಂದೂ ಅವು

ಗಳನ್ನು ಗೂಢವಾಗಿ ಇಟ್ಟಿಲ್ಲ. ಇಷ್ಟೇಅಲ್ಲ, ಅವರು ತಮ್ಮ ತಮ್ಮ ಮನೆತನಗಳಲ್ಲಿ ಪರಸ್ಪರ ಲಗ್ನ ವ್ಯವಹಾರಗಳನ್ನು ಸಹ ನಡೆಸಿದ್ದಾರೆ. ಉಚ್ಚ ವರ್ಣದ ಪುರಾಣಮತವಾದಿಗಳು ಇದಕ್ಕೋಸ್ಕರ ಖತಿಗೊಂಡರೂ ಅವರು ಅದನ್ನು ಲೆಕ್ಕಿಸದೆ ತಮ್ಮ ಶಿವಾನುಭವದ ಆಚರಣೆಯಂತೆ ನಡೆದಿದ್ದಾರೆ. ಭಾರತದ ಬೇರೆ ಸಮಾಜಗಳಲ್ಲಿ ಈ ಪ್ರಕಾರ ನಡೆದದ್ದರ ಉದಾಹರಣೆಗಳು ಕ್ವಚಿತ್ತಾಗಿ ದೊರಕುವವು.

ಉರಿಲಿಂಗಪೆದ್ದಿಯು ಅಸ್ಪೃಶ್ಯನಾಗಿದ್ದನು. ಅವನು ಗೋದಾವರೀ ತೀರದಲ್ಲಿದ್ದ ಒಂದು ಗ್ರಾಮದವನು. ಅವನು ಉರಿಲಿಂಗದೇವನೆಂಬ ಒಬ್ಬ ಗುರುವನ್ನು ಕಂಡು ಅವನ ಲಕ್ಷವನ್ನು ತನ್ನೆಡೆಗೆ ಎಳೆದುಕೊಂಡು ಅವನಿಂದ ತಾನು ಲಿಂಗಧಾರಣೆಯನ್ನು ಹೊಂದಿದನು. ಮುಂದೆ ಅವನು ಈ ಮಠದ ಗುರುವೆಂದು ನೇಮಿಸಲ್ಪಟ್ಟನು! ಅವನು ಮುಂದೆ ಧರ್ಮಗ್ರಂಥಗಳನ್ನು ಪರಿಶೀಲಿಸಿದವನಾಗಿ ಒಬ್ಬ ಶ್ರೇಷ್ಠ ತರಗತಿಯ ವಚನಕಾರನಾದನು.

ಉರಿಲಿಂಗಪೆದ್ದಿಯ ಹೆಂಡತಿಯ ಹೆಸರು ಕಾಳವ್ವೆ. ಅವಳು ವಿದ್ವಾಂಸಳಾಗಿ ತನ್ನ ಗಂಡನಂತೆ ವಚನಗಳನ್ನು ರಚಿಸಲು ಮುಂದಾದಳು.

ಕೆಂಭಾವಿ ಭೋಗಣ್ಣನು ಈಗ ಕಲಬುರ್ಗಿ ಜಿಲ್ಲೆಯಲ್ಲಿರುವ ಕೆಂಭಾವಿ ಗ್ರಾಮದವನು. ಅವನು ಬ್ರಾಹ್ಮಣನು. ಅವನು ವೀರಶೈವ ಧರ್ಮವನ್ನು ಪಾಲಿಸುವವನಾಗಿದ್ದನು. ಅವನು ತನ್ನ ಗ್ರಾಮದಲ್ಲಿಯ ಅಸ್ಪೃಶ್ಯರೊಡನೆ ಅನ್ನಪಾನಾದಿ ಭೋಜನಗಳನ್ನು ಬಹಿರಂಗವಾಗಿ ನೆರವೇರಿಸಹತ್ತಿದನು. ಅದಕ್ಕೆ ಬ್ರಾಹ್ಮಣರು ಅವನಿಗೆ ತೊಂದರೆ ಕೊಡಲಾಗಿ ಅವನು ಊರು ಬಿಟ್ಟು ಹೊರಟನು. ಆದರೆ ಆ ಗ್ರಾಮದಲ್ಲಿದ್ದ ದೈವತೆಗಳೆಲ್ಲ ಅವನನ್ನು ಹಿಂಬಾಲಿಸಿ ಹೋಗಹತ್ತಿದವು. ಆಗ ಜನರು ಭೀತಿಗೊಂಡು ಭೋಗಣ್ಣನನ್ನು ಆದರಿಸಿ ಅವನನ್ನು ತಿರುಗಿ ಕರೆದುಕೊಂಡು ಬಂದರು. ಮುಂದೆ ಅವನು ಗ್ರಾಮದಲ್ಲಿಯೇ ಇರತೊಡಗಿದನು.

ಇದೇ ಪ್ರಕಾರ ಸೂರಂಬೆ ಎಂಬ ಬ್ರಾಹ್ಮಣಿಯು ಅಸ್ಪೃಶ್ಯರೊಡನೆ ವರ್ತಿಸಹತ್ತಲು ಅರಸನು ಅವಳನ್ನು ದಂಡಿಸಲು ಪ್ರಯತ್ನಿಸಿದನು. ಆದರೆ ಅದು ಅವಳ ಮಹಿಮೆಯ ಮೂಲಕ ನಿಷ್ಫಲವಾಯಿತು. ಈಕೆಯು ಪಂಡಿತಾರಾಧ್ಯನ ಶಿಷ್ಯಳಾಗಿದ್ದಳು.

ಮಾದರ ಧೂಳಯ್ಯನು ಒಬ್ಬ ಅಸ್ಪೃಶ್ಯನು. ಆದರೆ ಅವನು ತನ್ನ ಉಳಿಯ ಮೊನೆಯಲ್ಲಿ ಪರಮಾತ್ಮನು ಕಾಣುವಂತೆ ಮಾಡಿದನು. ಈತನು ಉಚ್ಚ ತರಗತಿಯ ವಚನಕಾರನಾಗಿದ್ದಾನೆ.

ನಾವದಿಗೆಯ ಗುಡ್ಡವ್ವೆಯು ಅಸ್ಪೃಶ್ಯಳಾಗಿದ್ದಳು. ಗ್ರಾಮದಲ್ಲಿಯ ಬ್ರಾಹ್ಮಣರು ಅವಳಿಗೆ ಪೀಡಿಸಹತ್ತಿದರು. ಆದರೆ ಆಕೆಯು ಸೋಮನಾಥ ಲಿಂಗವನ್ನು ಗುಜರಾಥದಿಂದ ಗ್ರಾಮಕ್ಕೆ ತರುವೆನೆಂದು ಪ್ರತಿಜ್ಞೆಮಾಡಿ ಆ ಲಿಂಗವು ಈ ಗ್ರಾಮಕ್ಕೆ ಬರುವಂತೆ ಮಾಡಿದಳು.

ಮಾದರ ಚನ್ನಯ್ಯನು ಅಸ್ಪೃಶ್ಯನಾಗಿದ್ದನು. ಅವನ ಕೂಡ ದಿನಾಲು ಪರಮಾತ್ಮನು ಊಟಮಾಡುತ್ತಿದ್ದನೆಂದು ಮಹಾ ಕವಿ ಹರಿಹರನು ತನ್ನ ರಗಳೆಯಲ್ಲಿ ಹೇಳುತ್ತಾನೆ.

ಶಿವನಾಗಮಯ್ಯನೆಂಬ ಅಸ್ಪೃಶ್ಯನು ಕಲ್ಯಾಣ ಪಟ್ಟಣದಲ್ಲಿ ವಾಸಮಾಡುತ್ತಿದ್ದನು. ಬಸವೇಶ್ವರನು ಅವನನ್ನು ಕೂಡಿಕೊಂಡು ರಾಜ ದರ್ಬಾರಕ್ಕೆ ಬರುವನು. ಬಿಜ್ಜಳನು ಅಸ್ಪೃಶ್ಯನನ್ನು ಕೂಡಿಕೊಂಡು ಹೀಗೆ ದರ್ಬಾರಕ್ಕೆ ಬರದಿರಲು ತಿಳಿಸಲಾಗಿ ಶಿವಭಕ್ತರಲ್ಲಿ ಜಾತಿಭೇದವಿಲ್ಲೆಂದು ಬಸವೇಶ್ವರನು ವಾದಿಸಿದನು. ಆದಕ್ಕೆ ಬಿಜ್ಜಳನು ಅಸ್ಪೃಶ್ಯರ ರಕ್ತದಲ್ಲಿ ಹಾಲು ಇದೆಯೇ? ಅವರು ಎಂದೂ ಉಚ್ಚಕುಲದವರಾಗಲಾರರು ಎಂದು ನುಡಿಯಲಾಗಿ ಬಸವೇಶ್ವರನು ಶಿವನಾಗಮಯ್ಯನ ಬೆರಳುಗಳೊಳಗಿಂದ ಹಾಲು ಸುರಿಯುವಂತೆ ಮಾಡಿದನು.

ಶ್ರೀಪತಿ ಪಂಡಿತನು ಬ್ರಾಹ್ಮಣ ಕುಲದವನು. ಮತ್ತು ಬಹು ವಿದ್ವಾಂಸನು. ಅವನು ಒಂದು ಸಮಯದಲ್ಲಿ ಕೀಳ ಜಾತಿಯವರೊಡನೆ ಊಟ ಮಾಡುವ ಪ್ರಸಂಗವು ಬರಲಾಗಿ ಬ್ರಾಹ್ಮಣರು ಅವನನ್ನು ಸಮಾಜದಿಂದ ಬಹಿಷ್ಕರಿಸಿದರು. ಆದರೆ ಶ್ರೀಪತಿ ಪಂಡಿತನು ಇದಕ್ಕೆ ಎಷ್ಟು ಮಾತ್ರವು ಮಹತ್ವ ಕೊಡಲಿಲ್ಲ.

ಹೀಗೆ ಶಿವಶರಣರು ಜಾತಿಭೇದವನ್ನು ಬಹಿರಂಗವಾಗಿ ಈ ಕಾಲದಲ್ಲಿ ನಿರಾಕರಿಸಿದ್ದು ಕಂಡುಬರುತ್ತದೆ. ಇಷ್ಟೇ ಅಲ್ಲ, ಉಚ್ಚ ವರ್ಣದವರು ಅಸ್ಪೃಶ್ಯರೊಡನೆ ಲಗ್ನಾದಿ ವ್ಯವಹಾರಗಳನ್ನು ಸಹ ನಿರ್ವಹಿಸಿದ್ದರ ಉದಾಹರಣೆಗಳಿವೆ. ಹರಳಯ್ಯನು ಮಚ್ಚೆಗಾರನು. ಮಧುವರಸನು ಬ್ರಾಹ್ಮಣನು. ಆದರೆ ಅವರ ಮನೆತನಗಳಲ್ಲಿ ಪರಸ್ಪರ ಲಗ್ನ ವ್ಯವಹಾರಗಳು ನಡೆದವು. ಅದಕ್ಕೆ

ಬಿಜ್ಜಳನು ಅವರನ್ನು ಕೊಲ್ಲಿಸಲಾಗಿ ಶಿವಶರಣರೆಲ್ಲರು ಒಂದಾಗಿ ಬಿಜ್ಜಳನಿಗೆ ಪ್ರತೀಕಾರ ಮಾಡಲು ಸಿದ್ಧರಾದರು.

ಕಕ್ಕಯ್ಯನು ಢೋರರ ಕುಲದವನು. ಅವನು ಬಸವೇಶ್ವರನ ಕೂಡ ಬಿಜ್ಜಳನ ದರ್ಬಾರಿನಲ್ಲಿ ಇದ್ದುಕೊಂಡು ಬಸವೇಶ್ವರನಿಗೆ ಸಲಹೆಗಾರನಾಗಿರುತ್ತಿದ್ದನು. ಮುಂದೆ ಅವನು ಚನ್ನಬಸವನಗೂಡ ಯುದ್ಧಮಾಡುತ್ತ ಉಳವಿಯ ಕಡೆಗೆ ಹೋಗಲು ಸಿದ್ಧನಾದನು.

ಶ್ವಪಚಯ್ಯನು ಅಸ್ಪೃಶ್ಯನು. ಆದರೆ ಅವನು ಶ್ರೇಷ್ಠ ಶಿವಾನುಭವಿಯಾದ್ದರಿಂದ ಅವನ ಹೆಸರನ್ನು ಬಸವೇಶ್ವರನು ತನ್ನ ವಚನಗಳಲ್ಲಿ ಆಗಿಂದಾಗ್ಗೆ ತೆಗೆದುಕೊಂಡು ಸ್ತುತಿಸುತ್ತಾನೆ.

ಈ ಸಂಗತಿಗಳನ್ನು ನಾವು ನೋಡಲಾಗಿ ಬಸವೇಶ್ವರನ ಕಾಲದಲ್ಲಿ ಕರ್ನಾಟಕದಲ್ಲಿ ಒಂದು ಅದ್ಭುತವಾದ ಸಮಾಜಕ್ರಾಂತಿಯು ಆದದ್ದು ಕಂಡುಬರುತ್ತದೆ. ಈ ಕ್ರಾಂತಿಯುಂಟಾಗಲಿಕ್ಕೆ ಅಮರಗಣಾಧೀಶ್ವರರೇ ಕಾರಣರು. ಅವರು ಉಚ್ಚ ಧಾರ್ಮಿಕ ಭಾವನೆಗಳನ್ನು ಅಸ್ಪೃಶ್ಯ ಮೊದಲ್ಗೊಂಡು ಎಲ್ಲ ಜಾತಿಯವರಲ್ಲಿ ಹುಟ್ಟಿಸಿದರು. ಎಲ್ಲರೂ ಹೆಚ್ಚಿನ ತರಗತಿಯ ಶಿವಾನುಭಾವಿಗಳಾಗಿ ಲಿಂಗಧಾರಣೆಯನ್ನು ಹೊಂದಿದರು. ಇದರ ಪರಿಣಾಮವಾಗಿ ಅವರೆಲ್ಲರಲ್ಲಿ ವಿಶ್ವಬಂಧುತ್ವದ ವಿಚಾರಗಳು ತಲೆದೋರಿದವು. ಆಗ ಅವರಿಗೆ ನಡೆನುಡಿಗಳು ಮಹತ್ವದವೆಂದು ಎನಿಸಿತೇ ಹೊರ್ತು ಜಾತಿ ಕುಲಗೋತ್ರಗಳು ಮಹತ್ವದವೆಂದು ತೋಚಲಿಲ್ಲ. ಆಗ ಅವರು ತಮ್ಮ ಪೂರ್ವಾಶ್ರಯವನ್ನೆಲ್ಲ ಬಿಟ್ಟು ಕೊಟ್ಟು ಲಿಂಗಧಾರಕರಾಗಿ ಒಂದೇ ಒಂದು ವೀರಶೈವ ಧರ್ಮವನ್ನು ಪುರಸ್ಕರಿಸಹತ್ತಿದರು. ಈ ತರದ ಕ್ರಾಂತಿಯು ಭಾರತದಲ್ಲಿ ಮೊದಲು ಉಂಟಾದದ್ದು ಕರ್ನಾಟಕದಲ್ಲಿಯೇ ಎಂದು ಹೇಳಬಹುದು. ಈ ಮಹತ್ಕಾರ್ಯವನ್ನು ಜರುಗಿಸಿದವರು ಅಮರಗಣಾಧೀಶ್ವರರೇ ಇದ್ದಾರೆ.

## ಜಾತ್ಯತೀತ ಸಮಾಜ.

ಈ ವರೆಗೆ ನಾವು ಮಾಡಿದ ವಿವರಣೆಗಳ ಮೇಲಿಂದ ವೀರಶೈವ ಸಮಾಜವು ಒಂದು ಜಾತ್ಯತೀತ ಅಥವಾ '*Secular*' ಸಮಾಜವಿರುತ್ತದೆಂಬುದು ವಾಚಕರ ಲಕ್ಷಕ್ಕೆ ಕೂಡಲೆ ಬರದೆ ಇರದು. ಈಗಿನ ಕಾಲಕ್ಕಿನ ರಾಜ

ಕೀಯ ಪಟುಗಳು ಭಾರತವು ಜಾತ್ಯತೀತ ದೇಶವಾಗಿರಬೇಕೆಂಬ ಧ್ಯೇಯವು ಳ್ಳವರಾಗಿರುತ್ತಾರೆ. ಬಸವಾದಿ ಪ್ರಮಥರ ಕಾಲದಲ್ಲಿ ಅಂದರೆ ಸುಮಾರು ೮೦೦ ವರ್ಷಗಳ ಹಿಂದೆಯೇ ಅಮರಗಣಾಧೀಶ್ವರರು ಉತ್ಪನ್ನರಾಗಿ, ಅವರು ಜಾತ್ಯತೀತ ವೀರಶೈವ ಸಮಾಜವನ್ನು ಕಟ್ಟುವ ಪ್ರಯತ್ನ ಮಾಡಿದ್ದನ್ನು ನಾವು ಲಕ್ಷಿಸತಕ್ಕ ಸಂಗತಿಯಾಗಿದೆ. ಪಂಚಾಚಾರಗಳಲ್ಲಿ ಶಿವಾಚಾರವೆಂಬ ಆಚಾರವು ಮತ್ತು ಅಷ್ಟಾವರಣಗಳಲ್ಲಿ ಗುರುಲಿಂಗಜಂಗಮ ಇವುಗಳ ವ್ಯಾಖ್ಯೆ ಗಳನ್ನು ನೋಡಿದರೆ ನಾವು ವಿವರಿಸಿದ ಈ ಸಂಗತಿಯು ದೃಢಪಡುತ್ತದೆ. ಶಿವಾಚಾರದ ಅರ್ಥವು ಜಾತ್ಯತೀತವಾಗಿ ವರ್ತಿಸುವದೇ ಇರುತ್ತದೆ. ಗುರು ಲಿಂಗಜಂಗಮಗಳು ತನ್ನಲ್ಲಿರುವ ಸ್ಥೂಲ ಸೂಕ್ಷ್ಮ ಕಾರಣ ಶರೀರಗಳಿಗೆ ಅನು ಕ್ರಮವಾಗಿ ಸಂಬಂಧಪಡುವದರಿಂದ ಈ ಮೂರೂ ಆವರಣಗಳು ತನ್ನಲ್ಲಿಯೇ ಇರುತ್ತವೆಂಬುದು ಸ್ಪಷ್ಟವಾಗುತ್ತದೆ. ಆದ್ದರಿಂದ ತಾನೇ ಗುರುಲಿಂಗಜಂಗಮ ವಾಗಿರುವದು ಸ್ಪಷ್ಟವಾಗುತ್ತದೆ. ಈ ತತ್ವವನ್ನು ಅಮರಗಣಾಧೀಶ್ವರರು ಎಂಟುನೂರು ವರ್ಷಗಳ ಹಿಂದೆಯೇ ಪ್ರಚಾರದಲ್ಲಿ ತಂದಿರುತ್ತಾರೆ. ಆದ್ದ ರಿಂದ ವೀರಶೈವವು ಜಾತ್ಯತೀತ ಅಂದರೆ '*Secular*' ಸಮಾಜವಾಗಿರು ತ್ತದೆಂಬುದು ಸ್ಪಷ್ಟವಾಗುತ್ತದೆ. ಇದರಿಂದ ವೀರಶೈವರ ಧಾರ್ಮಿಕ ವರ್ಗ ದವರು ಯಾವ ಒಂದು ಪಂಗಡಕ್ಕೆ ಸಂಬಂಧಪಡುವದಿಲ್ಲ. ಅವರು ಜಾತಿವಾಚಕ ವರ್ಗವೆಂದು ಅಮರಗಣಾಧೀಶ್ವರರು ಎಲ್ಲಿಯೂ ಹೇಳಿರು ವದಿಲ್ಲ.

## ಕಾಯಕಗಳು.

ಅಮರಗಣಾಧೀಶ್ವರರು ಕಾಯಕಕ್ಕೆ ಒಂದು ಉಚ್ಚ ಸ್ಥಾನವನ್ನು ತಂದು ಕೊಟ್ಟಿದ್ದಾರೆ. ಅವರು ಮಾಡಿದ ಮಹತ್ವದ ಸುಧಾರಣೆಯು ಕಾರ್ಯಗಳಲ್ಲಿ ಇದೊಂದಾಗಿರುತ್ತದೆ. ಕಾಯಕ ಎಂದರೆ ಮನುಷ್ಯನು ಮಾಡುವ ಕೆಲ ವೊಂದು ಜೀವನದ ಉದ್ಯೋಗವಾಗಿರುತ್ತದೆ. ಪ್ರತಿಯೊಬ್ಬ ವೀರಶೈವನು ಕಾಯಕವನ್ನು ಮಾಡಲೇಬೇಕೆಂದು ಅಮರಗಣಾಧೀಶ್ವರರ ನಿಯಮವಿರುತ್ತದೆ. ಕೆಲವೊಬ್ಬ ವೀರಶೈವನು ಲಿಂಗಧಾರಣೆಯನ್ನು ಹೊಂದಿದ ಕೂಡಲೆ ಅವನು ಒಂದು ಉದ್ಯೋಗವನ್ನು ಮಾಡಬೇಕೆಂದು ಅವರ ಕಟ್ಟಳೆಯಿದೆ. ಈ ಕಟ್ಟ ಳೆಯನ್ನು ಅವರು ಈ ವರೆಗೆ ಯಾವಾಗಲೂ ಪಾಲಿಸುತ್ತ ಬಂದಿದ್ದಾರೆ. ಶಂಕರದಾಸಿಮಯ್ಯನು ತನ್ನ ಪೂರ್ವಾಶ್ರಯದಲ್ಲಿ ಗಂಗಾಧರಭಟ್ಟನೆಂಬ ಹೆಸ

ರಿನ ಬ್ರಾಹ್ಮಣನಾಗಿದ್ದನು. ಅವನು ಹಿಂದುಗಡೆ ಲಿಂಗಧಾರಣವನ್ನು ಹೊಂದಿದನು. ಆಗ ಅವನ ದೀಕ್ಷಾ ಗುರುವು ಅವನಿಗೆ ಹೊಲಿಗೆಯ ಕಾಯಕವನ್ನು ಮಾಡಿಕೊಂಡಿರಬೇಕೆಂದು ಆಜ್ಞೆಯನ್ನು ಮಾಡಿದನು. ಆಗ ಅವನು ಶಂಕರ ದಾಸಿಮಯ್ಯನೆಂಬ ಹೆಸರಿನಿಂದ ಮುಂದೆ ಈ ಕಾಯಕವನ್ನು ಮಾಡುತ್ತ ಬಂದನು. ಅದೇ ಪ್ರಕಾರ ದೇವರದಾಸಿಮಯ್ಯನು ನೇಗಿಯ ಕಾಯಕವನ್ನೂ ಒಕ್ಕಲು ಮುದ್ದಯ್ಯನು ಒಕ್ಕಲುತನವನ್ನೂ ಮಾಡುತ್ತ ಬಂದರು. ಹೀಗೆ ಅಮರಗಣಾಧೀಶ್ವರರು ಬೇರೆ ಬೇರೆ ಕಾಯಕಗಳನ್ನು ಮಾಡುತ್ತ ಬಂದದ್ದು ಅವರ ಚರಿತ್ರೆಗಳಿಂದ ತಿಳಿದು ಬರುತ್ತದೆ. ಈ ತತ್ವವು ಗುರುವರ್ಗದವರಿಗೂ ಕೂಡ ಅನ್ವಯವಾಗುತ್ತದೆ. ಈ ವರ್ಗದವರೂ ಕೂಡ ಕೆಲವೊಂದು ಕಾಯಕವನ್ನು ಮಾಡಲೇಬೇಕೆಂದು ಶಿವಶರಣರ ಉಕ್ತಿಗಳು ಇರುತ್ತವೆ. ಇದರಿಂದ ಉದ್ಯೋಗಗಳ ಮೂಲಕ ಕೆಲವೊಂದು ಸಮಾಜವು ಕಡಿಮೆೀತರದ್ದು ಮತ್ತು ಬೇರೊಂದು ಸಮಾಜವು ಹೆಚ್ಚಿನದು, ಎಂದು ಹೇಳಲಿಕ್ಕೆ ಬರಲಾರದು. ಇದು ಒಂದು ಮಹತ್ವದ ಕ್ರಾಂತಿಕಾರಕ ತತ್ವವು ಅವರದಾಗಿರುತ್ತದೆ. ಬೌದ್ಧ, ಜೈನ, ಮತ್ತು ಬ್ರಾಹ್ಮಣ ಸಮಾಜಗಳಲ್ಲಿ ಭಿಕ್ಷೆಯಿಂದ ಉಪಜೀವನ ಮಾಡುವದು ಬಹಳ ಹೆಚ್ಚಿನ ಉದ್ಯೋಗವೆಂಬ ತಿಳುವಳಿಕೆ ಇದೆ. ಭಿಕ್ಷುಕರಾಗಿರುವದು ಒಂದು ಅವಮಾನಕರವಾದ ಉದ್ಯೋಗವೆಂದು ಅವರು ಎಂದೂ ತಿಳಿದಿರುವದಿಲ್ಲ. ಆದರೆ ಅಮರಗಣಾಧೀಶ್ವರರು ಈ ತತ್ವವನ್ನು ಅಂಗೀಕರಿಸಿರುವದಿಲ್ಲ. ಅವರು ಹಾಕಿದ ಈ ಕಟ್ಟಳೆಯ ಮೂಲಕ ವೀರಶೈವ ಸಮಾಜವು ಉದ್ಯೋಗ ಕಲಾಕೌಶಲ್ಯಗಳಲ್ಲಿ ಮುಂದುವರೆದ ಸಮಾಜವಾಯಿತು. ಇದರಿಂದ ಕರ್ನಾಟಕ ದೇಶವು ಮೊದಲಿನ ಕಾಲದಲ್ಲಿ ಒಂದು ಶ್ರೀಮಂತ ದೇಶವಾಯಿತು. ಅಮರಗಣಾಧೀಶ್ವರರು ಯಾವ ರೀತಿಯಿಂದ ಕಾಯಕವನ್ನು ಜರಗಿಸಬೇಕೆಂಬುದರ ಬಗ್ಗೆ ಕೆಲವು ನಿಯಮಗಳನ್ನು ಹಾಕಿಕೊಟ್ಟಿದ್ದಾರೆ. ಇದರಿಂದ ಅವರಲ್ಲಿ ಕಾಯಕಗಳಿಗೆ ವ್ಯವಹಾರಿಕ ಸ್ವರೂಪವು ಹೋಗಿಬಿಟ್ಟಿರುತ್ತದೆ. ಕಾಯಕಗಳನ್ನು ಮಾಡುವಲ್ಲಿ ದಾಸೋಹ ಭಾವವಿರಬೇಕೆಂದು ಅವರು ಹೇಳಿದ್ದಾರೆ. ಅಂದರೆ ತಾವು ಮಾಡುವ ಜೀವನದ ಉದ್ಯೋಗಗಳನ್ನು ಪರಮಾತ್ಮನಿಗರ್ಪಿಸಿ, ಅವುಗಳನ್ನು ಮಾಡಬೇಕೆಂದು ಅವರು ಹೇಳಿದ್ದಾರೆ. ಮನುಷ್ಯನು ತನಗೆ ಬೇಕಾದಷ್ಟು ಸಂಪಾದಿಸಬೇಕು, ಹೀಗೆ ಸಂಪಾದಿಸುವ ಕಾರ್ಯದಲ್ಲಿ ಅವನು ಸನ್ಮಾರ್ಗದಿಂದ ನಡೆಯಬೇಕು. ತನ್ನ ಗರಜುಗಳಿಗೆ ಎಷ್ಟು ಬೇಕೋ ಅಷ್ಟನ್ನೇ ಅವನು ಗಳಿಸಿ ಅದನ್ನು ಶಿವಾರ್ಪಣ

ಬುದ್ಧಿಯಿಂದ ಉಪಯೋಗಿಸಿಕೊಳ್ಳಬೇಕು, ಮತ್ತು ಹೆಚ್ಚು ಉಳಿದರೆ ಅದನ್ನು ದಾಸೋಹ ಕಾರ್ಯಗಳಿಗೆ ಉಪಯೋಗಿಸಬೇಕು, ಎಂದು ನಿಯಮಗಳಿವೆ. ಇದರಿಂದ ಅಮರಗಣಾಧೀಶ್ವರರು ಉಪಯುಕ್ತ ಕಾರ್ಯಗಳನ್ನು ನಿರ್ವಹಿಸ ಲಿಕ್ಕೆ ಒಂದು ಉಪಯುಕ್ತ ಸಾಧನೆಯನ್ನು ಕಲ್ಪಿಸಿಕೊಂಡಿದ್ದು ಕಂಡು ಬರುತ್ತದೆ.

ಮೇಲೆ ಕಾಣಿಸಿದ ತತ್ವಗಳ ಮೂಲಕ ಅಮರಗಣಾಧೀಶ್ವರರು ಉಂಟು ಮಾಡಿದ ವೀರಶೈವ ಸಮಾಜವು ಒಂದು ಸ್ವಾವಲಂಬೀ ಸಮಾಜವಾಯಿತು. ಅದರಲ್ಲಿ ಕೃತ್ರಿಮ ಭೇದಭಾವಗಳು ನಷ್ಟವಾದವು. ಎಲ್ಲರೂ ಸಮಾನರೆಂಬ ಭಾವನೆಯು ಉದ್ಭವಿಸಿತು. ಇದರಿಂದ ಮಾತ್ಸರ್ಯ ಭಾವವು ಅದರಲ್ಲಿ ಕಡಿಮೆಯಾಯಿತು. ವೀರಶೈವನು ತನ್ನ ಗರಜುಗಳ ಪೂರ್ತೆ ಸಂಪಾದಿಸು ವವನಾದ್ದರಿಂದ ಸಮಾಜದಲ್ಲಿ ಶ್ರೀಮಂತ ಬಡವ ಎಂಬ ತಾರತಮ್ಯ ಭಾವವು ಹೊರಟು ಹೋಗಿಬಿಟ್ಟಿತು. ಸಂಪಾದನೆ ಮಾಡಿ ಸಂಗ್ರಹ ಮಾಡುವ ಲವ ಲವಿಕೆಯು ಕಡಿಮೆಯಾಯಿತು. ಎಲ್ಲರೂ ಸಮಾನಸ್ಕಂದರೆಂಬ ಭಾವವು ಬಲಿಯಿತು. ವೀರಶೈವರು ಜಾತಿಗಳನ್ನು ತಿರಸ್ಕರಿಸಿದ್ದರಿಂದ ನೀಚ ಜಾತಿ ಉಚ್ಚ ಜಾತಿ ಎಂದು ಭೇದ ಮಾಡುವದು ಕಡಿಮೆಯಾಯಿತು. ಹೀಗೆ ಈ ಕಾಲ ದಲ್ಲಿ ಆಶ್ಚರ್ಯಕರವಾದ ಪರಿಣಾಮಗಳಾದವು. ಇದರಿಂದ ಎಲ್ಲ ಸಮಾಜ ಗಳಲ್ಲಿ ವಿದ್ವಾಂಸರೂ ಸಾಧುಗಳೂ ಉದಯವಾದರು. ವಚನಕಾರರು ಕೆಲ ವೊಂದು ಸಮಾಜದಲ್ಲಿ ಮಾತ್ರ ಉಂಟಾಗದೆ ಎಲ್ಲ ಸಮಾಜಗಳಲ್ಲಿ ಉಂಟಾ ದರು. ಅಸ್ಪೃಶ್ಯ ಮೊದಲ್ಗೊಂಡು ಬ್ರಾಹ್ಮಣ ಸಮಾಜದ ವರೆಗೂ ಎಲ್ಲ ತರಗತಿಯ ಸಮಾಜಗಳಲ್ಲಿ ವಚನಕಾರರು ಉದ್ಭವಿಸಿದರು. ಎರಡೆಂಭತ್ತು ಕೋಟಿ ವಚನಗಳಾಗಿರುತ್ತವೆಂದು ಒಂದು ಪ್ರತೀತಿ ಇದೆ. ಆದರೆ ನಮಗೆ ಈಗ ದೊರಕಿದುದು ನೂರಿನ್ನೂರು ವಚನಕಾರರು ಮಾತ್ರ. ಆದ್ದರಿಂದ ನಮಗೆ ದೊರೆಯದೆ ಇದ್ದ ವಚನಕಾರರು ಇನ್ನೂ ಬಹುಜನರಿದ್ದಾರೆ. ಹೆಚ್ಚಿಗೆ ಸಂಶೋಧನೆ ಮಾಡಿದಲ್ಲಿ ಅವರು ಯಾರ್ಯಾರು ಮತ್ತು ಯಲ್ಲಿಯುವರು ಎಂಬುದು ಗೊತ್ತಾಗುವದು. ಈ ಪ್ರಕಾರ ಅಮರಗಣಾಧೀಶ್ವರರು ಒಂದು ಅದ್ಭುತ ಕ್ರಾಂತಿಯನ್ನು ಕರ್ನಾಟಕದಲ್ಲಿ ಮಾಡಿ ಹೋದರು

## ಬ್ರಾಹ್ಮಣ ವಿರೋಧೀ ಧರ್ಮವಲ್ಲ.

ಗಣಾಧೀಶ್ವರರು ಆಚರಣೆ ಮತ್ತು ನಡೆಗೆ ಮಹತ್ವಕೊಟ್ಟಿರುತ್ತಾರೆಯೇ ಹೊರ್ತು ಜಾತಿಗೆ ಮಹತ್ವ ಕೊಟ್ಟಿರುವದಿಲ್ಲ. ಅಸ್ಪೃಶ್ಯರಾಗಿದ್ದರೂ ಕೂಡ ಅವರು ಸದ್ಗುಣಿಗಳಾಗಿದ್ದರೆ ಅವರು ಉಚ್ಚಕುಲದವರೆಂದು ಇವರು ಭಾವಿಸುತ್ತ ಬಂದಿದ್ದಾರೆ. ವೀರಶೈವ ಸಮಾಜವು ಬ್ರಾಹ್ಮಣ ವಿರೋಧೀ ಸಮಾಜವೆಂದು ಬಹುಜನರು ತಿಳಿದಿರುತ್ತಾರೆ. ಆದರೆ ಇದು ತಪ್ಪು ತಿಳುವಳಿಕೆಯು. ಜನ್ಮಮಾತ್ರದಿಂದ ಗಣಾಧೀಶ್ವರರು ಯಾರನ್ನೂ ಹಳಿಯುವದಿಲ್ಲ. ಅಥವಾ ವಿರೋಧವನ್ನೂ ಬಳಿಸುವದಿಲ್ಲ. ಅಮರಗಣಾಧೀಶ್ವರರು ಪಾರಮಾರ್ಥಿಕ ಸಾಧನೆಗೋಸ್ಕರ ಶರಣ ಧರ್ಮವನ್ನು ಉಂಟುಮಾಡಿ ಅದನ್ನು ಪ್ರಸಾರ ಮಾಡುತ್ತ ಬಂದಿರುತ್ತಾರೆ. ಅವರು ಕೆಲವೊಂದು ಸಮಾಜವನ್ನು ಹಿಂದಕ್ಕೊತ್ತುವದಕ್ಕೋಸ್ಕರ ಪ್ರಯತ್ನಿಸಿರುವದಿಲ್ಲ. ಹೇಗೆ ಅನೇಕ ಸಮಾಜಗಳಲ್ಲಿ ವಚನಕಾರರು ಆಗಿರುವರೋ ಹಾಗೆಯೇ ಬ್ರಾಹ್ಮಣರಲ್ಲಿಯೂ ಕೂಡ ಆಗಿದ್ದಾರೆ. ಶ್ರೀ ಬಸವೇಶ್ವರನು ತಾನು ಸ್ವತಃ ಬ್ರಾಹ್ಮಣನಾಗಿದ್ದನು. ಅವನು ವೀರಶೈವ ಸಮಾಜಕ್ಕೆ ಮಾಡಿದ ಉಪಕಾರವು ಇಷ್ಟಿಷ್ಟು ಎಂದು ಹೇಳಲು ಬರಲಾರದು. ಅದು ಅಪಾರವಾಗಿದೆ. ಪಂಡಿತಾರಾಧ್ಯನು ಆಂಧ್ರದೇಶದಲ್ಲಿ ಉದಯವಾದನು. ಅವನು ಬ್ರಾಹ್ಮಣನು. ಆದರೆ ಅವನು ಆಂಧ್ರದೇಶದಲ್ಲೆಲ್ಲ ಶಿವಶರಣರ ಧರ್ಮವನ್ನು ಪ್ರಚಾರ ಮಾಡಿದನು. ಪಾಲ್ಕುರಿಕೆಯ ಸೋಮನಾಥ, ವೇಮನಾರಾಧ್ಯ ಇವರೂ ಬ್ರಾಹ್ಮಣರು. ಆದರೂ ಅವರು ವೀರಶೈವ ಮತಾವಲಂಬಿಗಳಾದರು. ಕೆಂಭಾವಿ ಭೋಗಣ್ಣ, ಮಧುವರಸ, ಗುಪ್ತ ಮಂಚಣ್ಣ, ಇವರೂ ಕೂಡ ಬ್ರಾಹ್ಮಣರು. ಅವರು ಆಡಳಿತೆಯಲ್ಲಿ ಉಚ್ಚ ಅಧಿಕಾರಿಗಳಾಗಿದ್ದರು. ಹಾಗೆಯೇ ಬಹುರೂಪಿ ಚೌಡಯ್ಯ, ಹರಿಹರ, ರಾಘವಾಂಕರು ಮೊದಲು ಬ್ರಾಹ್ಮಣರು. ಆದರೆ ಹಿಂದುಗಡೆ ವೀರಶೈವರಾದರು. ಇಂಥ ಉದಾಹರಣೆಗಳು ಅಸಂಖ್ಯಾತವಾಗಿವೆ. ಅಮರಗಣಾಧೀಶ್ವರರು ಕೆಲವೊಂದು ಸಮಾಜವನ್ನು ಹಿಂದಕ್ಕೊತ್ತುವ ಬುದ್ಧಿಯುಳ್ಳವರಾಗಿದ್ದರೆ ಹೀಗೆ ಉಚ್ಚವರ್ಣದವರು ವೀರಶೈವ ಸಮಾಜದಲ್ಲಿ ಸೇರದೆ ಅದನ್ನು ಬಿಟ್ಟು ದೂರ ಇರುತ್ತಿದ್ದರು. ಆದರೆ ಉಚ್ಚ ಅಧಿಕಾರಸ್ಥಾನದಲ್ಲಿದ್ದವರೂ ಧಾರ್ಮಿಕ ವರ್ಗದವರೂ ಬ್ರಾಹ್ಮಣರೂ ಸಹ ವೀರಶೈವ ಧರ್ಮವನ್ನು ಸ್ವೀಕರಿಸಿದ್ದರ ಮೇಲಿಂದ ಅಮರಗಣಾಧೀಶ್ವರರು ಪ್ರಚಾರಮಾಡಿದ ವೀರಶೈವ ಧರ್ಮವು

ಬ್ರಾಹ್ಮಣ ವಿರೋಧೀ ಧರ್ಮವಾಗಿತ್ತೆಂದು ತಿಳಿಯುವದು ತಪ್ಪು ತಿಳುವಳಿಕೆಯಾಗಿರುತ್ತದೆ.

## ಸ್ತ್ರೀ ಪುರುಷ ಭೇದವಿಲ್ಲ-

ಲಿಂಗಧಾರಣೆಯಾದ ಬಳಿಕ ಸ್ತ್ರೀ ಪುರುಷ ಎಂಬ ಭೇದವನ್ನು ಕಲ್ಪಿಸಕೂಡದೆಂದು ಅಮರಗಣಾಧೀಶ್ವರರ ಅಭಿಪ್ರಾಯವಿರುತ್ತದೆ. ಪುರುಷರಿಗೆ ಹೇಗೆ ಲಿಂಗಧಾರಣವಿರುತ್ತದೋ ಹಾಗೆಯೇ ಸ್ತ್ರೀಯರಿಗೂ ಲಿಂಗಧಾರಣೆಯು ಇರುತ್ತದೆ. ಹೀಗೆ ಲಿಂಗಧಾರಣೆಯಾದ ಬಳಿಕ ಲಿಂಗವನ್ನು ಹೊಂದಿದವರೆಲ್ಲರೂ ಸಮಾನ ಹಕ್ಕುಳ್ಳವರಾಗುವರು. ಆದ್ದರಿಂದ ಬ್ರಾಹ್ಮಣ ಸಮಾಜದವರಂತೆ ವೀರಶೈವ ಸ್ತ್ರೀಯಳು ತನ್ನ ಮೋಕ್ಷ ಸಾಧನೆಗೋಸ್ಕರ ತನ್ನ ಪತಿಯ ಆಚರಣೆಗಳ ಮೇಲೆ ಅವಲಂಬಿಸುವದು ಅನಾವಶ್ಯಕವು. ಹೇಗೆ ಪುರುಷನು ಷಟ್‌ಸ್ಥಲ ಜ್ಞಾನಿಯಾಗಿರತಕ್ಕದ್ದೋ ಹಾಗೆಯೇ ಸ್ತ್ರೀಯಳೂ ಕೂಡ ಷಟ್‌ಸ್ಥಲ ಸಂಪನ್ನಳಾಗತಕ್ಕದ್ದು. ಈ ತತ್ವವು ವೀರಶೈವರಲ್ಲಿ ಇದ್ದುದರಿಂದ ಅನೇಕ ಸ್ತ್ರೀಯರು ಜ್ಞಾನಸಂಪನ್ನರಾಗಿದ್ದುದು ಕಂಡುಬರುತ್ತದೆ. ಸ್ತ್ರೀಯರಲ್ಲಿ ಬಹು ಜನರು ವಚನಕಾರರೂ ಆಗಿದ್ದಾರೆ. ವಚನ ವಾಙ್ಮಯದಲ್ಲಿ ಮಹಾದೇವಿಯಕ್ಕ, ಲಿಂಗಮ್ಮ ಮುಂತಾದವರ ವಚನಗಳು ಪ್ರಸಿದ್ಧವಾಗಿರುತ್ತವೆ. ಕೆಲವು ಮಠಗಳಲ್ಲಿ ಸ್ತ್ರೀಯರು ಸಹ ಉಚ್ಚ ಅಧಿಕಾರಿಗಳಾಗಿದ್ದರ ಉದಾಹರಣೆಗಳು ಇರುತ್ತವೆ.

ವೀರಶೈವರಲ್ಲಿ ಲಗ್ನವಾಗುವದು ಅಥವಾ ಬಿಡುವದು ಅವರ ಇಷ್ಟವಾಗಿರುತ್ತದೆ. ಯಾರಾದರೂ ಸ್ತ್ರೀಯರಿರಲಿ ಅಥವಾ ಪುರುಷರಿರಲಿ ಲಗ್ನ ಮಾಡಿಕೊಳ್ಳಲು ಇಚ್ಛಿಯುವರಾಗಿದ್ದರೆ, ಅವರು ಹಾಗೆ ಮಾಡಬಹುದು. ಹಾಗೆ ಮಾಡಿದಲ್ಲಿ ಅವರ ಸ್ಥಾನಕ್ಕೆ ಯಾವ ಚ್ಯುತಿಯು ಉಂಟಾಗಲಾರದು. ಬಹುಜನ ಶಿವಶರಣರಲ್ಲಿ ಹಿಂದಿನ ಕಾಲದಲ್ಲಿ ಲಗ್ನವಾದವರು ಅನೇಕರಿದ್ದರು. ಬಸವೇಶ್ವರನು ವಿವಾಹಿತನಾಗಿದ್ದನು. ಅದರಂತೆಯೇ ದೇವರ ದಾಸಿಮಯ್ಯ, ರೇವಣಸಿದ್ಧ, ಪಂಡಿತಾರಾಧ್ಯ ಮೊದಲಾದವರು ವಿವಾಹಿತರಾಗಿದ್ದರು. ಇಂಥ ಅನೇಕ ಉದಾಹರಣೆಗಳು ಅಮರಗಣಾಧೀಶ್ವರರ ಚರಿತ್ರೆಗಳಲ್ಲಿ ಇರುತ್ತವೆ.

## ವೀರಶೈವರು ಅಹಿಂಸಾ ಧರ್ಮವನ್ನು ಪಾಲಿಸತಕ್ಕದ್ದು.

ಹೇಗೆ ಜೈನರು ಅಹಿಂಸಾ ಧರ್ಮವನ್ನು ಪಾಲಿಸುತ್ತಾರೋ ಹಾಗೆಯೇ ವೀರಶೈವರು ಅಹಿಂಸೆಯನ್ನು ಪಾಲಿಸತಕ್ಕದ್ದೆಂದು ಅವರಲ್ಲಿ ವಿಧಾನಗಳಿವೆ. ಈ ವಿಷಯವಾಗಿ ಅವರು ಜೈನರಂತೆಯೇ ಆಚರಿಸುತ್ತ ಬಂದಿದ್ದಾರೆ. ಆದ್ದರಿಂದ ಅವರು ಯಾವಾಗಲೂ ಶಾಕಾಹಾರಿಗಳಾಗಿದ್ದಾರೆ. ವೀರಶೈವರು ಚರ ಪ್ರಾಣಿ ಮತ್ತು ಅಚರ ಪ್ರಾಣಿ ಎಂದು ಎರಡು ವರ್ಗಗಳನ್ನು ಕಲ್ಪಿಸಿದ್ದಾರೆ. ಪಶುಪಕ್ಷ್ಯಾದಿಗಳು ಚರಪ್ರಾಣಿಗಳೆಂತಲೂ ವೃಕ್ಷಾದಿಗಳು ಅಚರ ಪ್ರಾಣಿಗಳೆಂತಲೂ ಅವರು ಎರಡು ವರ್ಗಗಳನ್ನು ಕಲ್ಪಿಸಿದ್ದಾರೆ. ಹೇಗೆ ಚರಪ್ರಾಣಿಗಳಿಗೆ ಚೈತನ್ಯವು ಇದ್ದು ಅವುಗಳಿಗೆ ನೋವುಗಳು ಉಂಟಾಗುತ್ತವೋ ಹಾಗೆಯೇ ಉದ್ಭಿಜ್ಜಾದಿಗಳಿಗೂ ಚೈತನ್ಯವಿದ್ದು ಅವಕ್ಕೂ ನೋವು ಉಂಟಾಗುವದೆಂದು ಅವರು ತಿಳಿದಿದ್ದಾರೆ. ದಸರಯ್ಯನೆಂಬ ಶಿವಶರಣನು ತನ್ನ ಲಿಂಗಪೂಜೆಯ ಸಲುವಾಗಿ ಗಿಡಗಳಲ್ಲಿದ್ದ ಹೂವುಗಳನ್ನು ಹರಿದರೆ ಅವುಗಳಿಗೆ ನೋವಾಗುವದೆಂದು ತಿಳಿದು ನೆಲದಮೇಲೆ ಉದುರಿ ಬಿದ್ದ ಹೂವುಗಳನ್ನೇ ಎತ್ತಿಕೊಂಡು ಬಂದು ತನ್ನ ಪೂಜಾದಿ ಕಾರ್ಯಗಳನ್ನು ನೆರವೇರಿಸುತ್ತಿದ್ದನು. ಅವನು ಗಿಡಗಳ ಟೊಂಗೆಗಳನ್ನು ಹೆಚ್ಚಿಗೆ ಬಗ್ಗಿಸಿದರೆ ಅಥವಾ ಅವುಗಳ ಎಲೆಗಳನ್ನು ಹರಿದರೆ ಅವುಗಳಿಗೆ ನೋವು ಆಗಿ ಅವು ಬಳಲುತ್ತವೆ, ಎಂದು ತಿಳಿದು ಅವುಗಳನ್ನು ಅವನು ಹಾಗೆ ಬಗ್ಗಿಸುತ್ತಿದ್ದಿಲ್ಲ. ಅಥವಾ ಹೂವುಗಳನ್ನು ಹರಿಯುತ್ತಿದ್ದಿಲ್ಲ. ಈ ಕಾರ್ಯಗಳನ್ನು ಅವನು ಮೆಲ್ಲಗೆ ಸಾವಧಾನವಾಗಿ ಮಾಡುವನು. ಇದರಿಂದ ಅವನು ವನಸ್ಪತಿಗಳು ತಮ್ಮ ತಮ್ಮಲ್ಲಿ ಮಾತಾಡುತ್ತಿದ್ದ ಭಾಷೆಯನ್ನು ತಿಳಿಯುವ ಸಾಮರ್ಥ್ಯವನ್ನು ಅವನು ಹೊಂದಿದ್ದನೆಂದು ವಚನಕಾರರು ತಿಳಿದಿದ್ದಾರೆ. ದಸರಯ್ಯನು ವಚನಕಾರನಾಗಿದ್ದಾನೆ. ಅವನ ಮುದ್ರಿಕೆಯು ದಸರೇಶ್ವರ ಲಿಂಗವೆಂದು ಇರುತ್ತದೆ. ಇದೇ ಮೇರೆಗೆ ಒಬ್ಬರ ಮನಸ್ಸಿಗೆ ಬಾಧೆಯಾಗುವಂತೆ ಅವರೊಡನೆ ಸಂಭಾಷಣೆ ಮಾಡುವದೂ ಕೂಡ ಹಿಂಸೆ ಎಂದು ಸಿದ್ಧರಾಮೇಶ್ವರನು ತಿಳಿದಿದ್ದಾನೆ. ಈ ವಿಷಯದ ಬಗ್ಗೆ ಅವನ ಅನೇಕ ಉಕ್ತಿಗಳಿರುತ್ತವೆ. ಈ ಪ್ರಕಾರ ಅಮರಗಣಾಧೀಶ್ವರರು ಅಹಿಂಸೆಯನ್ನು ಪಾಲಿಸುತ್ತಿದ್ದದರಿಂದ ಅವರು ಯಜ್ಞಗಳನ್ನು ಎಂದೂ ಮಾಡುತ್ತಿದ್ದಿಲ್ಲ. ಬಸವೇಶ್ವರನ ಕಾಲದಲ್ಲಿ ರಾಜರು ಯಜ್ಞಗಳನ್ನು ಮಾಡುವ ಪದ್ಧತಿಯನ್ನು ಸ್ವೀಕರಿಸಿದ್ದರು. ಇವುಗಳನ್ನು ಅವರು ಬಹು ಹೆಚ್ಚಾಗಿ ಪಾಲಿಸುತ್ತ ಬಂದರು. ಈ ರೀತಿಯನ್ನು ಅವನು ತನ್ನ ವಚನಗಳಲ್ಲಿ ಬಹು ಕಟುವಾಗಿ

ಟೀಕಿಸಿದ್ದಾನೆ. ಯಜ್ಞಗಳಲ್ಲಿ ಜನರು ಕುರಿ ಹೋತುಗಳನ್ನು ಬಲಿಕೊಡುವ ಸಾಂಪ್ರದಾಯವು ಮೊದಲು ಇದ್ದಿತು. ವಚನಕಾರರು ಇಂಥ ಪ್ರಾಣಿಗಳು ಸತ್ತಬಳಿಕ ಅವು ನಿಮ್ಮ ಪಾಪವನ್ನು ಎಂದಾದರು ಪರಿಹಾರ ಮಾಡಬಲ್ಲವೋ ಇಂಥ ಶಕ್ತಿಯು ಅವುಗಳಿಗೆ ಹೇಗೆ ಬರಬಹುದು, ಎಂದು ಪ್ರಶ್ನೆಮಾಡುತ್ತಾರೆ. ಆದ್ದರಿಂದ ಬಸವೇಶ್ವರನು "ದಯವಿಲ್ಲದ ಧರ್ಮವು ಅದಾವುದಯ್ಯ ? ದಯವೇ ಬೇಕು ಸಕಲ ಪ್ರಾಣಿಗಳೆಲ್ಲರಲ್ಲಿ" ಎಂದು ತನ್ನ ವಚನದಲ್ಲಿ ನುಡಿದಿದ್ದಾನೆ.

## ಜ್ಯೋತಿಷ್ಯವನ್ನು ಕೇಳಕೂಡದು.

ಜ್ಯೋತಿಷ್ಯವನ್ನು ಕೇಳಬಾರದೆಂದು ಅಮರಗಣಾಧೀಶ್ವರರ ಅಭಿಪ್ರಾಯ ವಿರುತ್ತದೆ. ಜೋತಿಷ್ಯವು ಗ್ರಹಗಳ ಗತಿಯನ್ನು ಅವಲಂಬಿಸಿ ಮುಂದಾಗುವ ದನ್ನು ಹೇಳುವ ಶಾಸ್ತ್ರವಾಗಿದೆ. ಸೂರ್ಯ, ಚಂದ್ರ ಮೊದಲಾದ ನವ ಗ್ರಹಗಳು ಮನುಷ್ಯನ ಮೇಲೆ ಪರಿಣಾಮ ಮಾಡುತ್ತವೆಂದು ತಿಳಿದು ಅವು ಗಳ ಬಲಾಬಲವನ್ನು ಜನರು ನೋಡುವದುಂಟು. ವೀರಶೈವರು ಲಿಂಗಧಾರಿ ಗಳಾಗಿದ್ದರಿಂದ ಅವರು ಲಿಂಗದ ಮೇಲೆ ಮಾತ್ರ ವಿಶ್ವಾಸವನ್ನಿಟ್ಟು ನಡೆಯ ತಕ್ಕದ್ದು. ಅವರು ಗ್ರಹಗಳ ಮೇಲೆ ವಿಶ್ವಾಸವನ್ನಿಟ್ಟು ನಡೆದರೆ ಅವರು ಲಿಂಗಭಕ್ತರಲ್ಲ, ಗ್ರಹ ಭಕ್ತರೆಂದು ಅಮರಗಣಾಧೀಶ್ವರು ಇವರನ್ನು ಟೀಕಿ ಸುವದುಂಟು. ವೀರಶೈವರು ತಮ್ಮ ಲಿಂಗದ ಮೇಲೆ ವಿಶ್ವಾಸವನ್ನಿಟ್ಟು ನಡೆ ದರೆ ಅವರಿಗೆ ಗ್ರಹಗಳು ಏನೂ ಮಾಡಲಾರವೆಂದು ವಚನಕಾರರು ಭಾವಿ ಸುತ್ತಾರೆ. ಆದರೆ ಗ್ರಹಗಳ ಗತಿಯನ್ನು ಅವಲಂಬಿಸಿ ಕಾರ್ಯ ಮಾಡು ವಂಥ ಜನರು ಭಾರತದಲ್ಲಿ ಅಸಂಖ್ಯಾತರಾಗಿದ್ದಾರೆ. ಇವರು ತಮ್ಮ ಕಾರ್ಯ ಮಾಡುವಲ್ಲಿ ಶುಭ ದಿವಸಗಳನ್ನು ನೋಡುತ್ತ ಇರುತ್ತಾರೆ. ಆದರೆ ಅವರಿಗೆ ಅಶುಭವಾಗುವದನ್ನು ಸಹ ನಾವು ಯಾವಾಗಲೂ ನೋಡುತ್ತೇವೆ. ಆದ್ದರಿಂದ ಗ್ರಹಬಲವನ್ನು ನೋಡುವದು ಪ್ರಯೋಜನವಲ್ಲವೆಂದು ಅಮರಗಣಾಧೀಶ್ವರರು ಹೇಳುತ್ತಬಂದಿದ್ದಾರೆ. ಅದೇ ಮೇರೆಗೆ ಶಕುನಗಳನ್ನು ಸಹ ನೋಡಬಾರ ದೆಂದು ಅವರ ಅಭಿಪ್ರಾಯವಿದೆ. ವೀರಶೈವರು ಲಿಂಗಭಕ್ತರಾಗಿ ಲಿಂಗಾರ್ಪಣ ಮಾಡಿ ತಮ್ಮ ಕ್ರಿಯೆಗಳನ್ನು ಮಾಡುತ್ತಿರಬೇಕೆಂದು ಅಮರಗಣಾಧೀಶ್ವರರು ಯಾವಾಗಲೂ ಬೋಧಿಸುತ್ತಾರೆ. ಮನುಷ್ಯನಿಗೆ ಸುಖದುಃಖಗಳು ಬರುವದು ತಪ್ಪಿದ್ದಲ್ಲ. ಅಂಥ ಕಾಲದಲ್ಲಿ ಲಿಂಗಭಕ್ತರು ತಮಗೆ ಯಾವ ಸ್ಥಿತಿಯು ಒದಗಿದರೂ ಸಮಾಧಾನವನ್ನು ತಾಳಿ ಬಂದ ಕಷ್ಟಗಳನ್ನು ಅಥವಾ ಸುಖ

ವನ್ನು ಲಿಂಗಾರ್ಪಣ ಭಾವದಿಂದ ಉಪಭೋಗಿಸತಕ್ಕದ್ದು. ವಚನಕಾರರು ಯಾವಾಗಲೂ ಇದೇ ತತ್ವವನ್ನು ಬೋಧಿಸುವದುಂಟು. ಇದು ಶ್ರೇಷ್ಠತರದ ಧಾರ್ಮಿಕ ನಡೆಯಾಗಿರುತ್ತದೆ. ಅಮರಗಣಾಧೀಶ್ವರರು ಇದನ್ನು ಪಾಲಿಸಬೇಕೆಂದು ಯಾವಾಗಲೂ ಬೋಧಿಸುತ್ತಾರೆ.

## ಶಿವಯೋಗ ಸಾಧನೆ.

ಅಮರಗಣಾಧೀಶ್ವರರು ಯೋಗ ಮಾರ್ಗವನ್ನು ನಿರಾಕರಿಸಿ ಷಟ್‌ಸ್ಥಲ ಮಾರ್ಗವನ್ನು ಎತ್ತಿ ಹಿಡಿದ ಪ್ರಸ್ತಾಪವು ಶೂನ್ಯಸಂಪಾದನೆ ಮೊದಲಾದ ವಚನ ಗ್ರಂಥಗಳಲ್ಲಿ ಯಾವಾಗಲೂ ಉಲ್ಲೇಖವಾಗುತ್ತದೆ. ಸಿದ್ಧರಾಮ ಮತ್ತು ಮಹಾದೇವಿಯಕ್ಕ ಇವರು ಯೋಗಮಾರ್ಗದಲ್ಲಿ ಬಹಳ ಮುಂದು ವರಿದವರಾಗಿದ್ದರು. ಅವರು ಶಿವಾನುಭವ ಮಂಟಪಕ್ಕೆ ಬಂದು ಯೋಗ ಮತ್ತು ಜ್ಞಾನ ಇವುಗಳಿಗಿಂತಲೂ ಅಧಿಕವಾದ ತ್ರಿಲಿಂಗಗಳ ಮಹತ್ವವನ್ನು ತಿಳಿದುಕೊಂಡು ಅವುಗಳ ಮೂಲಕ ಪರವಸ್ತುವನ್ನು ಹೇಗೆ ಸಾಧಿಸಬೇಕೆಂಬು ದನ್ನು ತಿಳಿದುಕೊಂಡು ತಮ್ಮ ಶಿವಾನುಭವ ವಿಚಾರಗಳನು ತಮ್ಮ ಉಕ್ತಿ ಗಳಲ್ಲಿ ವಿವರಿಸಿದ್ದಾರೆ. ಆಸನ ಪ್ರಾಣಾಯಾಮಾದಿಗಳಿಂದ ದೇಹಬಲ ಮತ್ತು ಆಯುರಾರೋಗ್ಯಗಳು ವರ್ಧಿಸಬಹುದು. ಆದರೆ ಎಲ್ಲಕ್ಕೂ ಮಹತ್ವವಾದ ಜೀವನ ಸೌಂದರ್ಯ, ಭಕ್ತಿ, ಅಧ್ಯಾತ್ಮ ಜ್ಞಾನ ಇವುಗಳು ಷಟ್‌ಸ್ಥಲಾಚರಣೆ ಗಳಿಂದ ದೊರಕಿಸಿ ಜೀವಿತವನ್ನು ಪರಿಪೂರ್ಣ ಮಾಡಿಕೊಳ್ಳಬೇಕೆಂದು ಅಮರ ಗಣಾಧೀಶ್ವರರು ತಮ್ಮ ವಚನಗ್ರಂಥಗಳಲ್ಲಿ ಹೇಳುತ್ತ ಬಂದಿದ್ದಾರೆ. ಆದರೆ ಇವುಗಳ ಕಡೆಗೆ ಜನತೆಯ ಲಕ್ಷವಿಲ್ಲ. ಅವುಗಳ ಮಹತ್ವವನ್ನು ಶಿವಾನು ಭವಿಗಳು ತಿಳಿದುಕೊಂಡು ಅವುಗಳನ್ನು ಎಲ್ಲ ಕಡೆಗೂ ಪ್ರಚಾರ ಮಾಡತ ಕ್ಕದ್ದು. ಇದು ವೀರಶೈವರ ಮುಖ್ಯ ಕರ್ತವ್ಯವಾಗಿರುತ್ತದೆ.

ಅಮರಗಣಾಧೀಶ್ವರರು ಷಟ್‌ಸ್ಥಲ ಮಾರ್ಗವನ್ನು ಅವಲಂಬಿಸಿ ಜನರು ತಮ್ಮ ಜೀವನವನ್ನು ಹೇಗೆ ಸಾಗಿಸಬೇಕೆಂಬುದನ್ನು ತಮ್ಮ ವಚನಶಾಸ್ತ್ರ ಗ್ರಂಥಗಳಲ್ಲಿ ಬಹಳ ಚೆನ್ನಾಗಿ ಹೇಳಿದ್ದಾರೆ. ಶರೀರವು ಒಂದು ಯಂತ್ರ ವಾಗಿದ್ದರೂ ಶರೀರಿಯು ಯಂತ್ರವಲ್ಲ. ಆತನಲ್ಲಿ ಜೀವಕಳೆಯಿದೆ. ಅವನಲ್ಲಿ ಮನಸ್ಸಿದೆ, ಆತ್ಮವಿದೆ, ಯಂತ್ರದಂತೆ ತನ್ನ ಶರೀರದ ಇಂದ್ರಿಯಗಳನ್ನು ಉಪ ಯೋಗಿಸುವದಷ್ಟೇ ಅವನ ಅಂತಿಮ ಧ್ಯೇಯವಲ್ಲ. ಯಂತ್ರದ ದುಡಿತದಿಂದ

ಉಂಟಾದ ಯಾಂತ್ರಿಕಾನಂದದಲ್ಲಿ ಸೊಬಗು ಸೌಂದರ್ಯವೆಂಬವುಗಳು ಏನೂ ಇಲ್ಲ. ಆ ಆನಂದವು ರಸಭರಿತವಾದುದಲ್ಲ. ಆಸನ ಪ್ರಾಣಾಯಾಮಾದಿಗಳಿಂದ ಸಮಾಧಿಸ್ಥಿತಿಗೇರಿ ಆನಂದ ಪಡೆದರೆ ಅದು ಬರೇ ಕಷ್ಟಕರವಾದ ಆನಂದವೇ ಹೊರ್ತು ಸುಖಕರವಾದ ಆನಂದವಲ್ಲ. ವ್ಯಾಯಾಮ ಮಾಡಿದ ಮನುಷ್ಯನ ಅವಯವಗಳು ಪುಷ್ಟಿಯುಳ್ಳವುಗಳಾಗಿರಬಹುದು. ಅವುಗಳನ್ನು ನೋಡಿ ಅವನು ಆನಂದಪಡಬಹುದು. ಆದರೆ ಆ ಆನಂದವು ತಾಮಸೀ ಆನಂದವಲ್ಲದೆ, ಸಾತ್ವಿಕ ಆನಂದವಾಗಲಾರದು. ಅದೇ ಮೇರೆಗೆ ಹಠಯೋಗ ಸಾಧನೆಯಿಂದ ಕಷ್ಟತರವಾದ ಸುಖವು ಮನುಷ್ಯನಿಗೆ ಲಭಿಸಿದರೂ ಅದು ಕಷ್ಟವೇ ಹೊರತು ನಿಜಸುಖವಲ್ಲ. ಇಂದ್ರಿಯಗಳನ್ನು ಬಲಾತ್ಕಾರದಿಂದ ನಿಗ್ರಹಿಸಿ ಪ್ರಾಣಾಯಾಮನ್ನು ಅಭ್ಯಾಸಿಸಿ, ಆಯುಷ್ಯವನ್ನು ಬೆಳಿಸಿಕೊಳ್ಳಬಹುದು, ರೋಗವನ್ನು ಕಳೆದುಕೊಳ್ಳಬಹುದು, ಮತ್ತು ದಿವ್ಯ ತೇಜಸ್ಸನ್ನು ಪಡೆಯುಬಹುದು. ಆದರೆ ಮನುಷ್ಯನ ಜೀವನ ಗುರಿಯು ಇಷ್ಟೇ ಅಲ್ಲ, ಚಿದಾನಂದವನ್ನು ಹೊಂದುವದೇ ಅವನ ಅಂತಿಮ ಧ್ಯೇಯವಾಗಿರಬೇಕು.

ಯೋಗಕ್ಕಿಂತಲೂ ಅಮರಗಣಾಧೀಶ್ವರರ ಮಾರ್ಗವು ತ್ರಿಲಿಂಗಗಳನ್ನು ಇದಿರಿಟ್ಟುಕೊಂಡು ಮುಂದುವರಿಯುವದೇ ಇರುತ್ತದೆ. ಯೋಗ ಮತ್ತು ಜ್ಞಾನಮಾರ್ಗಗಳಿಗಿಂತಲೂ ಈ ಮಾರ್ಗವು ಅಧಿಕವಾದುದೆಂಬುದರ ಬಗ್ಗೆ "ಶೂನ್ಯ ಸಂಪಾದನೆ" ಗ್ರಂಥದಲ್ಲಿ ಶ್ರೀ ಸಿದ್ಧರಾಮನ "ಗುರುಕರುಣ" ಎಂಬ ಭಾಗದಲ್ಲಿ ಬಹು ಸಯುಕ್ತಿಕವಾಗಿ ಗ್ರಂಥಕಾರನು ವಿವೇಚಿಸಿದ್ದಾನೆ. ಯೋಗ ಮಾರ್ಗವು ಅಲ್ಪ ಸಂಖ್ಯಾಕ ಜನರಿಗೆ ಬಹು ಪ್ರಯಾಸದಿಂದ ಸಾಧ್ಯವಾಗುವಂತಹದು. ಆದರೆ ಶಿವಶರಣರ ಮಾರ್ಗವು ಬಹುಜನರಿಗೆ ಸುಲಭ ಸಾಧ್ಯವಾಗುವಂತಹದು ಇರುತ್ತದೆ.

ಅಮರಗಣಾಧೀಶ್ವರರು ತ್ರಿಲಿಂಗಗಳ ತಳಹದಿಯಮೇಲೆ ತಮ್ಮ ಶಿವಯೋಗ ಸಾಮ್ರಾಜ್ಯವನ್ನು ಸ್ಥಾಪಿಸಿದ್ದಾರೆ. ತ್ರಿಲಿಂಗಗಳಲ್ಲಿ ಒಂದಾದ ಇಷ್ಟಲಿಂಗವೆಂಬುದೇ ಭಕ್ತಿ ಮತ್ತು ನೀತಿ ಇವುಗಳ ಕುರುಹಾಗಿದೆ. ಪ್ರಾಣಲಿಂಗವು ಯೋಗ ಮತ್ತು ಧ್ಯಾನ ಇವುಗಳ ದ್ಯೋತಕವು. ಭಾವಲಿಂಗವು ಜ್ಞಾನದ ತಿರುಳಾಗಿದೆ.

ಭಕ್ತಿ ಇಲ್ಲದ ಯೋಗವು ಯಂತ್ರದ ದುಡಿತದಂತೆ ನಿರಸವಾದುದು. ಅದರಂತೆ ಭಕ್ತಿಯಿಲ್ಲದ ಜ್ಞಾನವು ಮಾತಿನ ಬ್ರಹ್ಮವು ಮಾತ್ರ. ಆದರೆ

ಸಂಪುಟ ೨೮  ಸಂಚಿಕೆ ೧೧

# ಶಿವಾನುಭವ




-: ಸಂಪಾದಕರು :-

ಫ. ಗು. ಹಳಕಟ್ಟಿ,

ಬಿ. ಎ. ಎಲ್. ಎಲ್. ಬಿ.





[ಶಾ. ಶ. ೧೮೬೦] ವಿಜಾಪೂರ [ನವ್ಹೆಂಬರ ೧೯೩೮

# ವಿಷಯಾನುಕ್ರಮಣಿಕೆ





# ಶಿವಾನುಭವ

ವರ್ಷ ೨೮ | ನವ್ಹೆಂಬರ ೧೯೫೪ | ಸಂಚಿಕೆ ೧೧

## ಶ್ರೀ ಅರವಿಂದರ ಪೂರ್ಣ ಯೋಗ.

(ಲೇಖಕ:— ಶ್ರೀ. ಸಿಂಪಿ ಲಿಂಗಣ್ಣ-ಚಡಚಣ)

### ಪೂರ್ಣ ಯೋಗದ ಸ್ವರೂಪ

ಪ್ರಚಲಿತವಿದ್ದ ಪುರಾತನ ಯೋಗಗಳಲ್ಲಿ ಹಠಯೋಗ ರಾಜಯೋಗಗಳೂ, ಜ್ಞಾನ-ಕರ್ಮ-ಭಕ್ತಿಯೋಗಗಳೂ, ತಂತ್ರಯೋಗವೂ, ಮುಖ್ಯವಾಗಿವೆ. ಈ ಎಲ್ಲ ಯೋಗಗಳಿಗಿಂತ ಶ್ರೀ. ಅರವಿಂದರ ಪೂರ್ಣಯೋಗವು ಸರ್ವಾಂಶಗಳಿಂದ ಅದೆಂತು ಪೂರ್ಣವಾಗಿದೆಯೆಂಬುದನ್ನು ಅರಿತುಕೊಳ್ಳುವಾ.

ಹಠಯೋಗವು ಶರೀರವನ್ನೂ ಪ್ರಾಣವನ್ನೂ ಶುದ್ಧ ಹಾಗೂ ಸಿದ್ಧಗೊಳಿಸುವುದರಲ್ಲಿ ತನ್ನ ಸರ್ವ ಶಕ್ತಿಯನ್ನು ಪ್ರಯೋಗಿಸುತ್ತದೆ. ಆದರೆ ಅದು ಚಿತ್ತ-ಮನ-ಬುದ್ಧಿಗಳನ್ನು ವಿಕಾಸಗೊಳಿಸುವ ಯಾವ ಪ್ರಯತ್ನವನ್ನೂ ಮಾಡುವದಿಲ್ಲ. ವೇದಾಂತಿಯು ಪುರುಷನನ್ನು ಸ್ವೀಕರಿಸಿ ಶಕ್ತಿಯನ್ನು ಬಿಟ್ಟುಕೊಟ್ಟರೆ, ತಾಂತ್ರಿಕನು ಶಕ್ತಿಯನ್ನು ಸ್ವೀಕರಿಸಿ ಪುರುಷನನ್ನು ಬಿಟ್ಟುಕೊಡುತ್ತಾನೆ. ಆದರೆ ಶ್ರೀ. ಅರವಿಂದರ ಪೂರ್ಣಯೋಗವು ಜೀವನದ ಪ್ರತಿಯೊಂದು ಅಂಗವನ್ನು ವಿಕಾಸಗೊಳಿಸಿ ಅದನ್ನು ಪ್ರಭುವಿನ ಉಪಯುಕ್ತ ಪಾತ್ರವನ್ನಾಗಿ ಮಾಡುತ್ತದೆ ಈ ಯೋಗದಲ್ಲಿ ಹಠಯೋಗದ ಮುಖ್ಯಾಂಗವಾದ ಅಚೇತನ ಶರೀರದಲ್ಲಿ ಸಹ ಭಾಗವತ ಚೈತನ್ಯವನ್ನು ಇಳಿಸಿ, ಅದನ್ನು ಜರೆ-ವ್ಯಾಧಿ-ಮೃತ್ಯುಗಳ ಭಯ

ದಿಂದ ಮುಕ್ತಗೊಳಿಸುತ್ತದೆ. ಕಲ್ಲಿನಂಥ ಈ ಜಡಶರೀರವನ್ನು ಪರಮಾತ್ಮನದನ್ನಾಗಿ ಮಾಡುವುದಾಗಲಿ, ಅದರಲ್ಲಿ ಪರಮಾತ್ಮನ ದಿವ್ಯ ಚೈತನ್ಯವನ್ನು ಇಳಿಸಿ ನಿರಂತರವಾಗಿ ನಿಲ್ಲುವಂತೆ ಮಾಡುವುದಾಗಲಿ ಸಹಜದ ಮಾತಲ್ಲ. ಅದಕ್ಕೆ ಅಂತರಾತ್ಮನ ಅಭೀಪ್ಸೆಯೊಡನೆ ಶರೀರವನ್ನು ಸಂಯೋಗಿಸಬೇಕಾಗುತ್ತದೆ. ಅದರಿಂದ ಶರೀರವು ಸಹ ತನ್ನ ಸ್ವಭಾವವನ್ನು ಬಿಟ್ಟುಕೊಟ್ಟು ಶುದ್ಧವೂ ಉಪಯುಕ್ತವೂ ಆದ ಆಧಾರವಾಗಿ ಬಿಡುತ್ತದೆ.

ರಾಜಯೋಗಿಯು ಮನವನ್ನು ಶಾಂತಗೊಳಿಸಿ ಮೇಲಕ್ಕೆತ್ತರಿಸುತ್ತಾನಲ್ಲದೆ ಸಮಾಧಿ ಅವಸ್ಥೆಯಲ್ಲಿ ಮುಕ್ತಿಯ ವರೆಗೆ ತಲುಪಿಸುವ ಶಾಂತಿಯನ್ನು ಗಳಿಸುತ್ತಾನೆ. ಅವನು ನೈತಿಕತೆಯ ಮೇಲೆ ಬಹಳ ಬಲವನ್ನು ಪ್ರಯೋಗಿಸುತ್ತಾನೆ. ಆದರೆ ಪೂರ್ಣಯೋಗದ ಸಾಧಕನು ಅದರಲ್ಲಿ ಅಷ್ಟೊಂದು ಸಮಯವನ್ನು ಕಳೆಯದೆ ತನ್ನ ಪ್ರತಿಯೊಂದು ಪ್ರಯತ್ನವನ್ನು ತನ್ನೊಳಗೆ ಆಧ್ಯಾತ್ಮಿಕತೆಯ ವಿಕಾಸಕ್ಕಾಗಿ ತೊಡಗಿಸುತ್ತಾನೆ. ಮನಸ್ಸಿನ ಶಾಂತಿ, ಚಿತ್ತದ ಸ್ಥಿರತೆ, ಪ್ರಾಣದ ಏಕಾಗ್ರತೆ, ಹೃದಯದ ತನ್ಮಯತೆ, ಹಾಗೂ ಶರೀರದ ಸರ್ವ ವಿಕಾರಗಳಿಂದ ಬಿಡುಗಡೆ ಇವೇ ಪೂರ್ಣಯೋಗಕ್ಕೆ ಆಧಾರಭೂಮಿ. ಅಂಥ ಶುದ್ಧ, ಶಾಂತ, ನಿಶ್ಚಲ ಹಾಗೂ ನೀರವ ಆಧಾರದಲ್ಲಿಯೇ ಮೇಲಿನಿಂದ ಭಾಗವತ ಆನಂದ ಪ್ರೇಮಗಳು ಇಳಿದು ಬರುವದಕ್ಕೆ ಸಹಜವಾಗುವುದಲ್ಲದೆ ಅವು ಸ್ಥಿರವಾಗಿ ನಿಲ್ಲಬಲ್ಲವು. ಈ ಪ್ರಕಾರ ನಾವು ಇದರಲ್ಲಿ ರಾಜಯೋಗದ ಸುಂದರ ಸಮಾವೇಶವನ್ನು ಕಾಣುವೆವು.

ಕರ್ಮಯೋಗದ ಮೇಲೆ ಜೋರುಕೊಡುವಷ್ಟು ಇನ್ನಾವುದರ ಮೇಲೆಯೂ ಶ್ರೀ ಅರವಿಂದರು ಜೋರು ಕೊಡಲಾರರು. ವಾಸನಾ, ಅಹಂಕಾರ ಇವೆರಡೇ ಅಜ್ಞಾನದ ಹಣಿಯುದ ಗ್ರಂಥಿಗಳಾಗಿವೆ. ವಾಸನಾದಿಂದ ಮುಕ್ತನಾಗಿ, ಫಲಾಸಕ್ತಿಯಿಂದ ರಹಿತನಾಗಿ, ಅಹಂಭಾವದಿಂದ ಸರ್ವಥಾ ಶೂನ್ಯನಾಗಿ, ಪರಮಾತ್ಮನ ಕೈಯಂತ್ರವಾಗಿ, ಏಕಮಾತ್ರ ಪರಮಾತ್ಮನ ಸಲುವಾಗಿಯೇ ಪರಮಾತ್ಮ ಕಾರ್ಯವನ್ನು ಮಾಡುವುದು ಪೂರ್ಣಯೋಗದಲ್ಲಿ ಕರ್ಮಯೋಗವಾಗಿದೆ. ಅಹಂಭಾವದಿಂದ ಬಿಡುಗಡೆ ಹೊಂದುವ ಸಲುವಾಗಿಯೂ, ಏಕಮಾತ್ರ ಪರಮಾತ್ಮನ ಸಲುವಾಗಿಯೂ

ಮಾಡಲಾಗದ ಕರ್ಮವು ಯಜ್ಞರೂಪವೆನಿಸಲಾರದು. ಅದು ನಮ್ಮ ಶುದ್ಧಿಯನ್ನು ಮಾಡಲಾರದು.

ಭಕ್ತಿಯೇ ಪರಮಾತ್ಮನನ್ನು ವಿವಶಗೊಳಿಸಬಲ್ಲುದಲ್ಲದೆ, ಪರಮಾತ್ಮನನ್ನು ಸಮೀಪಗೊಳಿಸುವ ಸಾಮರ್ಥ್ಯವು ಅದರಲ್ಲಿಯೇ ಅದೆ. ಪೂರ್ಣ ಯೋಗದ ಸಾಧಕನು ಜೀವನದ ಪ್ರತಿಯೊಂದು ಕಾರ್ಯವನ್ನು ಸಂತೋಷಪೂರ್ವಕವಾಗಿ, ಪರಮಾತ್ಮನ ಸಲುವಾಗಿ ಮಾಡುತ್ತಾನೆ. ಅವನು ಒಂದು ನಿಮಿಷ ಸಹ ಪರಮಾತ್ಮನ ಸ್ಮರಣೆಯಿಂದ ದೂರನಾಗುವದಿಲ್ಲ. ಅವನಿಗೆ ಪರಮಾತ್ಮನ ಹೊರತು ಇನ್ನಾವ ವಸ್ತುವೂ ತನ್ನದಾಗಿ ಉಳಿಯಲಾರದು. ಅವನು ಜಗತ್ತಿನಲ್ಲಿ ಇರುವುದು ಸಹ ಪರಮಾತ್ಮನ ಸಲುವಾಗಿಯೇ. ಅವನ ಸಾಧನಕ್ಕೆ ಗುರಿಯು ನಿರ್ವಾಣ ಇಲ್ಲವೆ ಮುಕ್ತಿಯನ್ನು ಪಡೆಯುವುದು ಅಲ್ಲ. ಮಹತ್ತರ ಶಕ್ತಿಯನ್ನು ದೊರಕಿಸುವುದೂ ಅಲ್ಲ, ಆದರೆ ಪರಮಾತ್ಮನ ಇಚ್ಛಾ ಪೂರ್ತಿಯೇ ಆತನ ಜೀವನೋದ್ದೇಶವಾಗಿರುತ್ತದೆ. ಹೀಗೆ ಪೂರ್ಣಯೋಗದಲ್ಲಿ ಭಕ್ತಿಯೋಗವೂ ಸಂಪೂರ್ಣ ಹಾಸುಹೊಕ್ಕಾಗಿರುತ್ತದೆ.

ಇನ್ನು ಜ್ಞಾನಯೋಗದ ಸಮಾವೇಶವು ಪೂರ್ಣಯೋಗದಲ್ಲಿ ಹೇಗೆ ಆಗುವದೆಂದರೆ, ಮೊದಲು ನಾವು ಅಂತರಾತ್ಮನನ್ನು ಎಚ್ಚರಿಸಿ ಅವನನ್ನು ಅಜ್ಞಾನ ಸುಷುಪ್ತಿಗಳಿಂದ ಎತ್ತಿ ಸಮ್ಮುಖಗೊಳಿಸುವ ಪ್ರಾಣಾವಧಿ ಪ್ರಯತ್ನವನ್ನು ಮಾಡಬೇಕಾಗುತ್ತದೆ. ಸಾಧನದಿಂದ ಕಾಮನೆ, ವಾಸನೆ ಮೊದಲಾದವುಗಳ ಗಂಟು ಕತ್ತರಿಸಿ ಹೋದಂತೆ ಅಂತರಾತ್ಮನು ವಿರಸನಗೊಳ್ಳುವುದಕ್ಕೆ ಸುಸಂಧಿಯುಂಟಾಗುತ್ತದೆ. ಅವನು ಪ್ರಕಟವಾಗುತ್ತ ಬಂದಂತೆ ಅವನ ಬೆಳಕಿನಿಂದ ಅಡೆತಡೆಗಳು ಕರಗುವದಲ್ಲದೆ ಅವನು, ಮನಸ್ಸಿನ ಮೇಲೆಯೂ, ಪ್ರಾಣದ ಮೇಲೆಯೂ ತನ್ನ ಪ್ರಭುತ್ವವನ್ನು ಸ್ಥಾಪಿಸುವದಕ್ಕೆ ತೊಡಗುತ್ತಾನೆ. ಹೀಗೆ ಹೃದಯ ಸಿಂಹಾಸನದ ಮೇಲೆ ಕೆಳಪ್ರಕೃತಿಯ ಬದಲು, ಆತ್ಮನ ಅಧಿಕಾರವು ದೃಢವಾಗುವದು. ಆಗ ಅವನು ಮೆಲ್ಲಮೆಲ್ಲನೆ ಚೈತನ್ಯವನ್ನು ಪ್ರಾಪ್ತಮಾಡಿಕೊಳ್ಳಹತ್ತುವನು. ನಾನು ಎಲ್ಲಿದ್ದೇನೆ, ನನ್ನ ಸಾಧನವು ಎತ್ತಸಾಗಿದೆ, ಯಾವ ಕರ್ಮವು ಭಗವದನುಕೂಲವಾಗಿದೆ, ಯಾವುದು ಪರಮಾತ್ಮಪ್ರೇರಿತವಾಗಿ ಬಂದಿದೆ, ಯಾವುದನ್ನು ಓಡಿಸಿ, ಯಾವುದನ್ನು ತನ್ನೊಳಗೆ ಬರಮಾಡಿಕೊಳ್ಳಬೇಕು— ಮೊದಲಾದ ಸಂಗತಿಗಳನ್ನು ತೋರಿಸಿ ಕೊಡುವುದರಲ್ಲಿ ಪ್ರಸ್ಫುಟಿತ ಅಂತ

ರಾತ್ಮನು ಸಾಕಷ್ಟು ಸಹಾಯ ಮಾಡುತ್ತಾನೆ. ಶ್ರೀಅರವಿಂದರು ಒಂದು ಕಡೆ ಹೇಳಿದ್ದೇನೆಂದರೆ — "ನೀವು ಮನ ಪ್ರಾಣಗಳನ್ನು ವಶದಲ್ಲಿ ತಂದು ಕೊಂಡು, ಅನುಭವಭಾಂಡಾರವನ್ನು ತುಂಬಿಕೊಂಡು ಶಾರೀರಿಕ ಸಿದ್ಧಿಗಳಿಂದ ಜನರನ್ನು ಚಕಿತಗೊಳಿಸಬಲ್ಲಿರಾದರೂ ಅಂತರಾತ್ಮನಿಗೆ ಸಾಧನದ ಮುಖ್ಯಾಂಗವನ್ನು ಮಾಡಿಕೊಳ್ಳುವ ಸುಸಂಧಿಯನ್ನು ಕೊಡದಿದ್ದರೆ, ವಾಸ್ತವದಲ್ಲಿ ಅದಾವುದೂ ಮಹತ್ವಪೂರ್ಣವಾದಂತಾಗಲಿಲ್ಲ. ಪೂರ್ಣ ಯೋಗದಲ್ಲಿ ಜ್ಞಾನವೆಂದರೆ, ವ್ಯಕ್ತಿಗತ ಈಶ್ವರನಾಗಿ ಮನುಷ್ಯನ ಹೃದಯದಲ್ಲಿ ಕುಳಿತ ವಿಶ್ವೇಶ್ವರನ ಪೂರ್ಣಾಧಿಕಾರವನ್ನು ಜೀವನದ ಪ್ರತಿಯೊಂದು ಅಂಗವಲ್ಲಿ ಸ್ಥಾಪಿತಗೊಳಿಸುವುದು.

ಇನ್ನು ಇದರಲ್ಲಿ ತಂತ್ರದ ಸ್ವರೂಪವನ್ನು ನೋಡುವಾ. ಶಕ್ತಿಯಾದರೂ ಶ್ರೀ. ಅರವಿಂದರ ಯೋಗದಲ್ಲಿ ಪ್ರಾಣವೇ ಆಗಿದೆ. ತಾಂತ್ರಿಕನು ತಂತ್ರಮಂತ್ರಗಳ ಸಾಧನದಿಂದ ಶಕ್ತಿಯನ್ನು ಎಚ್ಚರಿಸುತ್ತಾನೆ. ಆದರೆ ಪೂರ್ಣಯೋಗವು ಏನನ್ನು ಗೃಹಿತವೆಂದು ಸ್ವೀಕರಿಸಿ ಸಾಗುತ್ತದೆಯೆಂದರೆ — ಶಕ್ತಿಯು ಪ್ರತಿಯೊಬ್ಬ ಮನುಷ್ಯನ ಮೇಗಡೆ ನೆಲೆಸಿರುತ್ತದೆ. ದಯಾಮಯಿಯಾದ ತಾಯಿಯು ಅದನ್ನು ಶುದ್ಧ ಹಾಗೂ ಸಿದ್ಧಗೊಳಿಸಿ ಪ್ರಭುವಿನ ಒಂದು ಸುಂದರವಾದ ಯಂತ್ರವಾಗಿಸಲು ಇಚ್ಛಿಸುತ್ತಾಳೆ. ಆದರೆ ಮನುಷ್ಯನು ಅದನ್ನು ಅಂಧಕಾರದಿಂದ ಹೊರಬೀಳಿಸಲು ಅವಳಿಗೆ ಅವಕಾಶ ಕೊಡುವದಿಲ್ಲ. ಅದ್ದರಿಂದ ಈ ಯೋಗದ ಸಾಧನದಲ್ಲಿ ಶಕ್ತಿಯು ಸರ್ವಪ್ರಧಾನವಾಗಿದೆಯಲ್ಲದೆ, ಶಕ್ತಿಗೆ ಶರಣಾಗತನಾಗುವುದು ಈ ಯೋಗದ ಮುಖ್ಯಾಂಗವಾಗಿದೆ. ಈ ಯೋಗದಲ್ಲಿ ತನ್ನನ್ನು ಸಂಪೂರ್ಣವಾಗಿ ತಾಯಿಯ ಚರಣಗಳಲ್ಲಿ ಸಮರ್ಪಿಸಿ ಬಿಟ್ಟು, ಸಾಧನದ ಸರ್ವಭಾರವನ್ನು ಆಕೆಯ ಕೈಯ್ಯಲ್ಲಿ ಒಪ್ಪಿಸಿ ಸಾಧಕನು ನಿಶ್ಚಿಂತನಾಗಿ ಬಿಡುವನು. ಯಾರಿಗೆ ಮಾತೆಯ ಚರಣಗಳಲ್ಲಿ ಭಕ್ತಿಯುಂಟಾಗದೆ, ಯಾರು ತಾಯಿಯ ಕೃಪೆಯನ್ನು ಪ್ರಾಪ್ತ ಮಾಡಿಕೊಳ್ಳುವುದಕ್ಕೆ ಯೋಗ್ಯವಾಗುವದಿಲ್ಲವೋ ಯಾರು ತಾಯಚರಣಗಳಲ್ಲಿ ತನ್ನನ್ನು ಸರ್ವಾರ್ಪಣ ಮಾಡಲು ಸಿದ್ಧರಾಗುವದಿಲ್ಲವೋ, ಯಾರು ಮಾತೃಪ್ರೇಮದ ಬಣ್ಣದಲ್ಲಿ ಬಣ್ಣಗೊಳ್ಳಲು ತಮ್ಮನ್ನು ಸಮರ್ಥರನ್ನಾಗಿ ಮಾಡಿಕೊಳ್ಳುವದಿಲ್ಲವೋ ಅವರು ಸುಖವಾಗಿ ಈ ಯೋಗದ ದಾರಿಯಲ್ಲಿ ಸಾಗಲಾರರು. ಹಾಗೂ ಅವರು ತಮ್ಮ ಬಲದಿಂದ ಪ್ರಕೃತಿಯ ದುರ್ಭೇದ್ಯವಾದ

ಮಾಯೆಯನ್ನು ಭೇದಿಸಿ ಅದರ ದಿವ್ಯ ಜ್ಯೋತಿಯ ಮಂದಾಕಿನಿಯನ್ನು ತನ್ನ ಸತ್ತೆಯ ಮೇಲೆ ಹರಿಯಿಸಿಕೊಳ್ಳಲಾರರು. ಮಾತೆಯ ಚರಣಗಳಲ್ಲಿ ದೃಢವಿಶ್ವಾಸವನ್ನಿಟ್ಟು ಆಕೆಯ ಶಕ್ತಿಯನ್ನು ಸಂಪೂರ್ಣ ಅವಲಂಬಿಸಿದವರು ವಿಜಯಯಾತ್ರೆಯ ವರದಾನವನ್ನು ಪಡೆಯುವರು. ಅವರು ಅಸೀಮಧೈರ್ಯದಿಂದಲೂ ಉತ್ಕಟವಾದ ತತ್ಪರತೆ-ಏಕಾಗ್ರತೆಗಳಿಂದಲೂ ಒಮ್ಮೆ ವೇಗವಾಗಿ, ಇನ್ನೊಮ್ಮೆ ಮಂದವಾಗಿ ಸಾಗಿ ದಾರಿಯನ್ನು ಮುಗಿಸುವರು. ಭಯವನ್ನೂ ನಿರಾಶೆಯನ್ನೂ ಅವರು ತಮ್ಮ ಬಳಿಗೆ ಎಷ್ಟೂ ಸುಳಿಯಗೊಡಲಾರರು. ಯಾರಿಗೆ ಮಾತೆಯ ಪ್ರಸಾದದ ಒಂದು ಕಣವೇ ಆಗಲಿ ಪ್ರಾಪ್ತವಾಗಿದೆಯೋ ಅವನನ್ನು ಜಗತ್ತಿನೊಳಗಿನ ಯಾವ ಬಾಧೆಯು ತಡೆಯ ಬಲ್ಲದು? ತಾಯಿಯು ನಮಗೆ ನೆರವಾಗುವುದಕ್ಕೂ, ನಮ್ಮ ಕೂಗನ್ನು ಕೇಳುವುದಕ್ಕೂ, ನಮ್ಮ ಸಂಕಟದಲ್ಲಿ ತನ್ನ ದಿವ್ಯ ಬೆಳಕನ್ನು ತೋರಿಸುವುದಕ್ಕೂ ಯಾವಾಗಲೂ ಸಿದ್ಧಳಾಗಿರುತ್ತಾಳೆ. ಆದರೆ ಆಕೆಯ ಚರಣಗಳನ್ನು ಗಟ್ಟಿಯಾಗಿ ಹಿಡಕೊಳ್ಳುವ ಆವಶ್ಯಕತೆಯಿರುತ್ತದೆ. ಯಾರು ಅವಳನ್ನು ತನ್ನ ಹೃದಯ ಮಂದಿರದಲ್ಲಿ ಕುಳ್ಳಿರಿಸಿ ಅವಳ ಪೂಜಾರಿಯಾಗಿ ಬಿಟ್ಟರೋ ಅವರು ಒಂದುದಿನ ನಿಶ್ಚಯವಾಗಿಯೂ ಈ ಮಾನವೀಯಸ್ತರದಿಂದ ಏರಿಹೋಗಿ ದಿವ್ಯಸ್ತರದಲ್ಲಿ ನೆಲಸುವರು.

## ಪೂರ್ಣಯೋಗದ ಸಾಧನ.

ಶ್ರೀ ಅರವಿಂದರ ಪೂರ್ಣಯೋಗವು ಇಷ್ಟೊಂದು ವಿಶಾಲವೂ ವ್ಯಾಪಕವೂ ಆಗಿದ್ದರೂ ಆದರಲ್ಲಿ ಸನ್ಯಾಸವಾದಾದಿಗಳ ಕಠಿಣವಾದ ಬಾಹ್ಯನಿಯಮಗಳ ಹಾಗೂ ಕಠೋರವಾದ ಶಾರೀರಿಕ ತಪಸ್ಸುಗಳ ಉಪಾಯಗಳಿಗೆ ಸ್ಥಾನಕೊಡಲಾಗಿಲ್ಲ. ಬಾಹ್ಯನಿಯಮಗಳು ಅವೆಷ್ಟೇ ಉದಾರವಾಗಿದ್ದರೂ ಅವು ಆತ್ಮನಿಗೆ ಒಂದು ಬಂಧನದಂತೆಯೇ ಆಗಿ ಬಿಡುತ್ತವೆ. ಮಾನಸಿಕ ನಿಯಮಗಳನ್ನು ಅನುಸರಿಸುವದರಿಂದ ತನ್ನ ಕ್ಷುಲ್ಲಕವಾದ ಅಹಮಾತ್ಮಕ ಶಕ್ತಿಯಿಂದ ಮನುಷ್ಯನು ದೀರ್ಘಕಾಲಾವಧಿಯಲ್ಲಿಯೂ ಮಾಡಲಿಕ್ಕಾಗದವುಗಳನ್ನು ಅವನು ಸಹಜವಾಗಿ ಗಳಿಸಿಕೊಂಡುಬಿಡುತ್ತಾನೆ. ಎಲ್ಲಕ್ಕೂ ಮೊದಲು ಆತ್ಮಸಮರ್ಪಣದ ಸಂಕಲ್ಪವನ್ನು ಮಾಡುವುದು, ಎಂದರೆ ಪೂರ್ಣ ಭಾವದಿಂದ ತನ್ನನ್ನು ತಾನು ಪರಮಾತ್ಮನ ಸಂಕಲ್ಪವನ್ನು ಮಾಡುವದು. ನಮ್ಮ ಸಮರ್ಪಣದಲ್ಲಿ

ಯಥಾರ್ಥತೆಯು ಅಲ್ಪಪ್ರಮಾಣದಲ್ಲಿದ್ದರೂ ಸಕಾಲಕ್ಕೆ ತಾನಾಗಿಯೇ ನಮ್ಮ ಮುಂದಿನ ಹೆಜ್ಜೆಯನ್ನು ಯಾವ ಕಡೆಗೆ ಇಡಬೇಕು, ಏನು ಮಾಡಬೇಕು, ಹೇಗೆ ಮಾಡಬೇಕು ಎಂಬುದರ ಪ್ರೇರಣೆಯುಂಟಾಗಿಬಿಡುವದು.

ಅಭೀಪ್ಸೆ ಹಾಗೂ ಆತ್ಮೋದ್ಘಾಟನೆಗಳಿಂದ ಪೂರ್ಣ ಯೋಗದ ಸಾಧನವು ಆರಂಭವಾಗುವದು. ಆತ್ಮೋದ್ಘಾಟನವೆಂದರೆ— ಆಧಾರದ ಬೇರೆ ಬೇರೆ ಸ್ತರಗಳನ್ನು ಭಾಗವತ ಶಕ್ತಿ ಜ್ಯೋತಿಗಳ ಕಡೆಗೆ ತೆರೆದಿಡುವುದು. ಅದರಿಂದ ಆ ಶಕ್ತಿಯು ನಮ್ಮೊಳಗೆ ತನ್ನ ಕಾರ್ಯವನ್ನು ಮಾಡತೊಡಗುವದು. ಯಾವ ಪ್ರಕಾರ ಆಶೆ ಆಕಾಂಕ್ಷೆಗಳ ಲೇಶವೂ ಇಲ್ಲದಿರುವುದೇ ಶುದ್ಧವಾದ ಅಭೀಪ್ಸೆ. ಅಭೀಪ್ಸೆಯೂ ಆಕಾಂಕ್ಷೆಯೂ ಬೇರೆಬೇರೆಯಾಗಿವೆ, ಒಂದೇ ಅಲ್ಲ. ಆಕಾಂಕ್ಷೆಗೆ ಪ್ರಾಣದ ಸಂಬಂಧವಿರುತ್ತದೆ. ಅಭೀಪ್ಸೆಗೆ ನೇರವಾದ ಅಂತರಾತ್ಮನ ಸಂಬಂಧವಿರುತ್ತದೆ. ಆಕಾಂಕ್ಷೆಯು ಬೇಡಿಕೆಗಳನ್ನು ಒಳಗೊಂಡಿರುವದರಿಂದ ಮನುಷ್ಯನು ಅವುಗಳಿಗೆ ವಶನಾಗಿ ಪರಮಾತ್ಮನ ಮೇಲೆ ಅವುಗಳನ್ನು ಹೇರಲಿಚ್ಛಿಸುತ್ತಾನೆ. ಅವು ಸಿಗದಿದ್ದರೆ ಸಿಂಹಾಸನಗಿ ಅಳುತ್ತಾನೆ, ಕರೆಯುತ್ತಾನೆ. ಅಲ್ಲದೆ ಸಾಧನವನ್ನು ಸಹ ಬಿಟ್ಟುಕೊಡುತ್ತಾನೆ. ಆಕಾಂಕ್ಷೆಯು ಬೆಂಕಿಯ ಮೇಲೆ ಸುಟ್ಟು ಬೂದಿಯಾಗುತ್ತದೆ. ಅಭೀಪ್ಸೆಯು ಪ್ರಜ್ವಲಿಸುತ್ತದೆ. ಯಾರಲ್ಲಿ ನಿಜವಾದ ಅಭೀಪ್ಸೆಯು ಜಾಗ್ರತವಾಗಿರುತ್ತದೆಯೋ ಅವನು ಯಾವ ಬೇಡಿಕೆಯನ್ನೂ ಮುಂದೊಡ್ಡದೆ ಯಾವಾಗಲೂ ಪುಲಕಿತನಾಗಿ "ನಿನ್ನ ಇಚ್ಛೆಯೇ ನನ್ನಲ್ಲಿ ಚಿಗುರಲಿ, ಹೂ ಬಿಡಲಿ" ಎಂದು ಮೊರೆಯುತ್ತಾನೆ.

ಕೆಳಗಿನಿಂದ ನಮ್ಮ ಕೂಗು ಹೊರಟರೆ ಮೇಲಿನಿಂದ ಭಗವತೀ ಮಾತೆಯ ಪ್ರಸಾದ ಇಳಿಯುವದು. ಸೀಮಾಬದ್ಧವಾದ ಜೀವವು ತನ್ನ ತಪಸ್ಸಿನಿಂದ ಅಸೀಮನನ್ನು ಪಡೆಯುವದು ಅಸಂಭವ. ಪರಮಾತ್ಮಪ್ರಾಪ್ತಿಯೇ ನಮ್ಮ ಗುರಿಯಲ್ಲ. ಭಗವದನುಭೂತಿಯ ಸಂಪತ್ತನ್ನು ಹೊರಗೆ ಪ್ರಕಟಗೊಳಿಸುವುದು ಅಂದರೆ, ಶರೀರ - ಪ್ರಾಣ - ಮನಗಳ ಗದ್ದುಗೆಯ ಮೇಲೆ ಆತ್ಮನ ಸೌಂದರ್ಯ, ಸತ್ಯ ಹಾಗೂ ಶಕ್ತಿ ಇವುಗಳ ಮೂರ್ತಿಯನ್ನು ಪ್ರತಿಷ್ಠಿತಗೊಳಿಸುವುದು.

ಶ್ರೀ ಅರವಿಂದರ ಅಭಿಪ್ರಾಯದಲ್ಲಿ ಶಕ್ತಿಯು ಅಖಿಲ ವಿಶ್ವದ ಸೃಷ್ಟಿಗೆ ಕಾರಣವಷ್ಟೇ ಅಲ್ಲ, ಮೂಲ ಸ್ರೋತವಷ್ಟೇ ಅಲ್ಲ, ಅವಳು ಪರಮ

ಚೈತನ್ಯಮಯಿಯೂ ಚಿತ್ ಸ್ವರೂಪಗಳೂ ಆಗಿದ್ದಾಳೆ. ಪರಮಾತ್ಮನು ವಿಶ್ವಾತೀತನೂ ವಿಶ್ವ ವ್ಯಾಪಿಯೂ ಆಗಿರುವಂತೆ ಆದ್ಯಾಶಕ್ತಿಯು ಸಹ ವಿಶ್ವಾತೀತಳೂ, ವಿಶ್ವವ್ಯಾಪಿನಿಯೂ ಆದ ಮಾತೆಯಾಗಿದ್ದಾಳೆ. ಜಡಪ್ರಕೃತಿಯೆಂಬುದು ಆ ಆದ್ಯಾಶಕ್ತಿಯ ದೇ ಒಂದು ಆತ್ಯಂತಿಕ ಬಾಹ್ಯಪ್ರಕಟನೆಯಾಗಿದೆ. ಸತ್ಯದ ಆನಂದದ ಆ ದೇವಿಯು ಮೇಲಿನಿಂದಲೇ ಆಧಿಪತ್ಯವನ್ನು ನಡೆಸದೆ ಮನುಷ್ಯನ ತೀರ ಸನಿಹಕ್ಕೆ ಬರುತ್ತಾಳೆ. ಹಾಗೂ ನಮ್ಮನ್ನು ಪೂರ್ಣತೆಯ ಕಡೆಗೆ ಕರೆದೊಯ್ಯುವದಕ್ಕಾಗಿಯೂ ಸರ್ವಾಂಗಸುಂದರರನ್ನಾಗಿ ಮಾಡುವದಕ್ಕಾಗಿಯೂ ಅನಂತ ಕಾಲದ ವರೆಗೆ ಪರಿಶ್ರಮಪಡುವುದಕ್ಕೆ ಸಿದ್ಧಳಾಗಿರುತ್ತಾಳೆ. ಆದ್ದರಿಂದ ಆವಳ ಕೃಪೆಗೆ ನಾವು ತಕ್ಕವರಾಗಬೇಕಾಗುವದು

ಆತ್ಮಸಮರ್ಪಣವೇ ಭಾಗವತ ಪ್ರಸಾದವನ್ನು ಪ್ರಾಪ್ತಮಾಡಿಕೊಳ್ಳುವುದಕ್ಕೆ ಸಹಜವೂ ಸುಗಮವೂ ಆದ ಉಪಾಯವಾಗಿದೆ. ಯಾರು ಎಲ್ಲವನ್ನು ಕೊಡಬಲ್ಲರೋ ಅವರೇ ಎಲ್ಲವನ್ನು ಪಡೆಯಬಲ್ಲರು. ಪೂರ್ಣ ಸಮರ್ಪಣವು ತೀರ ಕಠಿಣವಾಗಿರುತ್ತದೆ. ನಮ್ಮ ಪ್ರತಿಯೊಂದು ಅಂಗ, ಮನ, ಬುದ್ಧಿ, ಪ್ರಾಣ, ಶರೀರ ಹಾಗೂ ಜೀವನದ ಸಮಸ್ತ ಕರ್ಮ, ವಾಸನಾ, ಕಾಮನಾ, ಸಂಕಲ್ಪ, ವಿಚಾರ, ಸ್ವಭಾವ, ಪ್ರಯತ್ನ, ವೃತ್ತಿಗಳು ಮೊದಲಾದ ನಮ್ಮಲ್ಲಿದ್ದವುಗಳನ್ನೆಲ್ಲ ಯಾವ ಮೂಲೆಯಲ್ಲಿ ಯಾವುದೂ ಅಡಗಿಕೊಂಡಿರಲು ಅವಕಾಶ ಕೊಡದಿರುವದೇ ಸಂಪೂರ್ಣ ರೂಪದಲ್ಲಿ ಸಮರ್ಪಿಸುವುದಾಗಿದೆ. ನಮ್ಮೊಳಗಿನ ಅಂಧಕಾರವನ್ನೂ, ಅಡಗಿ ಕುಳಿತವುಗಳನ್ನು ಪರಮಾತ್ಮನ ಪ್ರಕಾಶದಲ್ಲಿ ಒಂದೊಂದಾಗಿ ತಂದು ಸಮರ್ಪಿಸಬೇಕಾಗುವದು. ಆತ್ಮಸಮರ್ಪಣದ ಈ ಭಾವವು ಅಪೂರ್ಣ ರೂಪದಲ್ಲಿ ಸ್ಥಾಪಿತವಾಗಿಬಿಟ್ಟರೂ ಯೌಗಿಕ ಕ್ರಿಯೆಯ ಇನ್ಯಾವ ಅವಶ್ಯಕತೆಯೂ ಉಳಿಯುವದಿಲ್ಲವೆಂದು ಶ್ರೀ ಅರವಿಂದರು ಹೇಳುತಾರೆ.

ಕೆಳಗಿನ ಪ್ರಕೃತಿಯು ಸಕ್ರಿಯವಾಗಿರುವ ವರೆಗೆ ದೈವೀಶಕ್ತಿಯು ಅಬಾಧಿತವಾಗಿ ನಮ್ಮೊಳಗೆ ತನ್ನ ಕಾರ್ಯ ಮಾಡಲಾರದು. ದೈವೀ ಶಕ್ತಿಯು ಕಾರ್ಯ ಮಾಡತೊಡಗುವ ವರೆಗೆ ವೈಯಕ್ತಿಕ ಪ್ರಯತ್ನದ ಅವಶ್ಯಕತೆ ಉಳಿಯುವದು. ಆ ಅವಶ್ಯಕತೆಯಿರುವ ವರೆಗೆ ನಮ್ಮ ಮನ, ಪ್ರಾಣ ಹಾಗೂ ಶರೀರಗಳ ಬಾಗಿಲು ತೆರೆಯುವದಿಲ್ಲ. ಬಾಗಿಲು ತೆರೆಯದಿದ್ದರೆ ಆ ಶಕ್ತಿಯನ್ನು ಸಂತೋಷದಿಂದ ಗ್ರಹಿಸುವುದಕ್ಕೂ ಅದನ್ನು

ಸ್ವಾಗತಿಸುವದಕ್ಕೂ ಶಕ್ಯವಿಲ್ಲ. ಆದರೆ ನಮ್ಮ ಮನಪ್ರಾಣಗಳು ಸಿದ್ಧವಾಗದಿರುವಾಗ, ವೈಯಕ್ತಿಕ ಪ್ರಯತ್ನದ ಫಲವಾಗಿ ಯಾವುದೊಂದು ಉಚ್ಚಶಕ್ತಿಯು ಸ್ಥಾಪಿತವಾಗಲಾರದು.

ಮೊದಲಿಗೆ ಆ ಶಕ್ತಿಯನ್ನು ಗ್ರಹಣ ಮಾಡುವ ಸಲುವಾಗಿ ನಮ್ಮ ಅಂಗಗಳನ್ನು ಸಿದ್ಧಗೊಳಿಸಬೇಕಾಗುತ್ತದೆ. ನಮ್ಮ ಮನ ಹೃದಯಗಳಲ್ಲಿ ಪದಾರ್ಪಣ ಮಾಡಿದ ಮೇಲೆಯೆ ನಾವು ಯಾವುದೊಂದು ಗುಪ್ತ ಶಕ್ತಿಯ ಸಹಾಯವನ್ನು ಪಡೆಯ ತೊಡಗುವೆವು. ತೆರೆಯ ಹಿಂದಿನಿಂದ ಯಾವುದೋ ಗುಪ್ತ ಹಸ್ತವು ನಮ್ಮನ್ನು ಒಂದು ನಿರ್ದಿಷ್ಟ ದಿಶೆಯ ಕಡೆಗೆ ತಕ್ಕೊಂಡು ನಡೆದಿದೆ ಎಂದು ಕಂಡುಬರತೊಡಗುವದು. ನಾವು ಎರಡನೇ ಅವಸ್ಥೆಯನ್ನು ತಲಿಪಿದಾಗ ಆ ಶಕ್ತಿಯು ನಮ್ಮೊಳಗೆ ಆಟವಾಡಹತ್ತುವದು. ಆಗಲೇ ನಮ್ಮ ಆತ್ಮಸಮರ್ಪಣವು ಪೂರ್ಣವಾಗಿ ಬಿಡುತ್ತದೆ. ಇದು ಮಾನವೀ ದೈವೀಕ್ರಿಯೆಗಳ ನಡುವಿನ ಅವಸ್ಥೆಯಾಗಿದೆ. ಪ್ರಥಮಾ ಅವಸ್ಥೆ ಎಲ್ಲಿಗೆ ಮುಗಿಯಿತು. ಎರಡನೇದರ ಆರಂಭವೆಲ್ಲಿ -- ಎಂಬುದನ್ನು ನಿಶ್ಚಿತವಾಗಿ ಹೇಳಲಿಕ್ಕಾಗದು. ಮೂರನೇ ಅವಸ್ಥೆಯಲ್ಲಿ ಯಾವ ತರದ ಪ್ರಯತ್ನವೂ ಇರುವದಿಲ್ಲ. ಯಾವ ವಿಧಿನಿಯಮಗಳಾಗಲಿ, ಕಟ್ಟುನಿಟ್ಟುಗಳ ಸಾಧನವಾಗಲಿ ಇರುವದಿಲ್ಲ. ನಮ್ಮ ತಪಸ್ಸು-ಪ್ರಯತ್ನಗಳ ಸ್ಥಾನವನ್ನು ಸಂಪೂರ್ಣವಾಗಿ ಪರಮಾ ಶಕ್ತಿಯು ಗ್ರಹಿಸಿ ಬಿಟ್ಟಿರುತ್ತದೆ. ನಮ್ಮ ಆಧಾರವು ಪರಿವರ್ತನೆಗಾಗಿ ಸಿದ್ಧವಾಗಿ ಬಿಟ್ಟದ್ದೇ ಅದರ ಸ್ಪಷ್ಟವಾದ ಚಿಹ್ನವಾಗಿ ಬಿಡುತ್ತದೆ.

ನಾವು ಇಚ್ಛಿಸಿದಂತೆ ಆ ಭಾಗವತ ಶಕ್ತಿಯನ್ನು ಉಪಯೋಗಿಸುವುದಕ್ಕೆ ಅಧಿಕಾರ ನಡೆಸಲಾರೆವೆಂಬುದನ್ನು ಲಕ್ಷ್ಯದಲ್ಲಿಡತಕ್ಕದ್ದು. ಆ ಶಕ್ತಿಯು ಸಂಪೂರ್ಣ ಕಾರ್ಯವನ್ನು ಮಾತೆಯ ಇಚ್ಛೆನುಸಾರವಾಗಿ ಮಾಡುವದು. ಆ ಶಕ್ತಿಯು ನಮ್ಮೊಳಗೆ ಅಬಾಧಿತವಾಗಿ ಕಾರ್ಯ ಮಾಡಲು ನಾವು ಅವಕಾಶ ಕೊಟ್ಟರೆ ನಮ್ಮ ಸಾಧನವು ಅದೆಷ್ಟು ಶೀಘ್ರಗತಿಯಿಂದ ಸಾಗುವದೆಂದರೆ- ನಾವೇ ಸ್ವಂತ ಚಕಿತರಾಗುವೆವು. ಆ ಶಕ್ತಿಯ ಕಣ್ಣುತಪ್ಪಿಸಿ ಯಾವ ಸೂಕ್ಷ್ಮಾತಿಸೂಕ್ಷ್ಮ ಈ ಭಾಗವೂ ಉಳಿಯಲಾರದು. ಅದು ತೆಗೆದೊಗೆಯಬೇಕಾದುದನ್ನು ತೆಗೆದೊಗೆದು, ಶುದ್ಧಗೊಳಿಸಬೇಕಾದುದನ್ನು ಶುದ್ಧಗೊಳಿಸಿ ಸೇರಿಸಬೇಕಾದುದನ್ನು ಸೇರಿಸುತ್ತದೆ.

ಯೋಗಿಗಳು ಯಾವಾಗಲೂ ಎಚ್ಚತ್ತಿರಬೇಕೆಂದು ಹೇಳುತ್ತಾರೆ. ಎಚ್ಚತ್ತವರು ಏಟು ತಿನ್ನುವದಿಲ್ಲ. ಗುಡ್ಡಾಂತರಕ್ಕೀಡಾಗುವದಿಲ್ಲ. ಏನು ಮಾಡಿದರೂ ಸಚೇತನರಾಗಿ ಮಾಡುವರು. ಯೋಗಯುಕ್ತರಾಗಿ ಮಾಡುವರು. ಇದೇ ಪೂರ್ಣ ಯೋಗದ ಮೂಲ ಮಂತ್ರ.

ನಾವು ಯಾವ ಕೆಲಸವನ್ನೇ ಮಾಡುತ್ತಿರಲಿ, ಆವಾಗ ಅದನು ಏಕೆ ಮಾಡುತ್ತಿದ್ದೇವೆ, ಅದನ್ನು ಮಾಡುವುದಕ್ಕೆ ನಮಗೆ ಯಾರು ಪ್ರೇರಿಸಿದ್ದಾರೆ ಎಂಬುದನ್ನು ನಾವು ವಿಚಾರಿಸತಕ್ಕದ್ದು. ಸಾಮಾನ್ಯ ಮನುಷ್ಯರು ತೀರ ಕಡಿಮೆ ಅಂಶದಲ್ಲಿ ಸ್ವತಂತ್ರರೂ ಸಚೇತನರೂ ಆಗಿರುತ್ತಾರೆ. ಯಂತ್ರದಂತೆ ವಿವಶರಾಗಿ ಕೆಲಸ ಮಾಡುತ್ತಾರೆ. ಅಲ್ಲದೆ ಅಹಂಕಾರ ವಶದಿಂದ ತಾವೇ ಆ ಕೆಲಸಕ್ಕೆ ಪ್ರೇರಕರೆಂದೂ ಪ್ರಭುಗಳೆಂದೂ ಭಾವಿಸುತ್ತಾರೆ. ಅದೊಂದು ಭ್ರಮೆ. ಆ ಭ್ರಮೆಯಿಂದ ತಪ್ಪಿಸಿಕೊಳ್ಳಬೇಕಾದರೆ ನಾವು ಸಚೇತನರಾಗಿ ನಮ್ಮನ್ನು ನಾವು ತಿಳಕೊಂಡು ನಮ್ಮ ಮೇಲೆ ನಾವು ಪ್ರಭುತ್ವಗಳಿಸಬೇಕು! ನಮ್ಮನ್ನು ನಾವು ತಿಳಕೊಳ್ಳುವದೆಂದರೆ ನಾವು ಮಾಡುತ್ತಿರುವ ಕಾರ್ಯವನ್ನು ಏಕೆ, ಹೇಗೆ ಮಾಡುತ್ತಿದ್ದೇವೆ— ಎಂಬುದನ್ನು ತಿಳಿಯಬೇಕು. ನಮ್ಮ ಮೇಲೆ ನಮ್ಮ ಪ್ರಭುತ್ವಗಳಿಸುವದೆಂದರೆ ನಾವು ಯಾವ ಕಾರ್ಯ ಮಾಡಬೇಕೆಂದು ನಿಶ್ಚಯಿಸುವೆವೋ ಅದನ್ನೇ ಮಾಡುವುದು. ಯಾವ ಶಕ್ತಿಯೂ ನಮ್ಮನ್ನು ವಿಚಲಿತಗೊಳಿಸಬಾರದು. ನಮಗೆ ಬೇಡವಾದುದನ್ನು ಮಾಡುವುದಕ್ಕೆ ಯಾರೂ ಬಲುಮೆ ಮಾಡಬಾರದು.

ಮನಸವನ್ನು ಉಚ್ಚಚೇತನದಲ್ಲಿ ಲೀನಗೊಳಿಸಬೇಕು. ಆದರೆ ಆ ದಿವ್ಯ ಚೇತನೆ, ದಿವ್ಯ ಶಾಂತಿ, ದಿವ್ಯ ಆನಂದಗಳನ್ನು ಇಳಿಸಿಕೊಳ್ಳುವುದಾಗಲಿ, ಅದನ್ನು ಮನ ಪ್ರಾಣ ಶರೀರಗಳಲ್ಲಿ ನೆಲೆಗೊಳಿಸುವುದಾಗಲಿ ಸುಲಭವಲ್ಲ. ಹಾಗೂ ಸರ್ವಾಂಗೀಣ ಸಮರ್ಪಣವೂ ಸುಲಭವಲ್ಲ. ಮನವು ತನ್ನ ಹಳೆಯ ವಿಚಾರ, ಚಿತ್ತವು ತನ್ನ ಹಳೆಯ ಭಾವನೆ, ಪ್ರಾಣವು ತನ್ನ ರೂಢಿಯ ವಾಸನಾ, ಶರೀರವು ತನ್ನ ಜಡತೆ—ಮೊದಲಾದವುಗಳನ್ನು ಬಿಡುವುದಕ್ಕೆ ಸುಲಭವಾಗಿ ಒಪ್ಪಲಾರವು. ಅವು ತಮ್ಮ ಅಭ್ಯಾಸವನ್ನು ಉಳಿಸಿಕೊಳ್ಳುವುದಕ್ಕೆ ಜೀವದ ಹಂಗುದೊರೆದು ಕಾದುವವು. ಮಹಾ ಪ್ರಯಾಸದಿಂದ ಅವುಗಳನ್ನು ಹೊರದೂಡಿದರೂ ತಿರುಗಿ

ದಾಳಿ ಮಾಡಿ ಎರಗುವವು. ಅದಕ್ಕಾಗಿ ಕ್ರಿಸ್ತದೇವರು, ಸೈತಾನನನು ಪರಿಪೂರ್ಣವಾಗಿ ಹೊರದೂಡಬೇಕೆಂದು ಹೇಳುತ್ತಿದ್ದರು. ನಿಮ್ಮಲ್ಲಿ ಒಂದಿಷ್ಟೇ ಅಂಧಕಾರ ಉಳಿದು, ಸೈತಾನವು ಒಳಸೇರುವುದಕ್ಕೆ ಒಂದಾನೊಂದು ಛಿದ್ರವು ಸಿಕ್ಕರೆ ಅದು ತನ್ನ ಸಲುವಾಗಿಯೂ, ತನ್ನ ಏಳು ಜನ ಸಂಗಡಿಗರ ಸಲುವಾಗಿಯೂ ವೀರಶೋಚನೀಯವಾಗುವಂತೆ ಮಾಡಿ ಬಿಡುವುದು. ಸಂಪೂರ್ಣ ಸಮರ್ಪಣ ಮಾಡುವುದರಲ್ಲಿ ಸಾಧಕನು ತಪ್ಪುತ್ತಿರುವ ವರೆಗೆ ಅವನು ಈ ಹೋರಾಟ ನಡಿಸಲೇಬೇಕಾಗುತ್ತದೆ. ಹೋರಾಡಿ ಹೋರಾಡಿ ಆತನು ಗಾಬರಿಯಾಗಿ ಹೋರಾಟ ಮುಗಿಯುವ ಲಕ್ಷಣವನ್ನೇ ಕಾಣುವದಿಲ್ಲ. ಆದರೆ ನಾವು ವಾಸ್ತವಿಕವಾಗಿ ಗಾಬರಿಯಾಗತಕ್ಕದ್ದಲ್ಲ. ಕಾಗೆಯನ್ನು ಗಿಳಿ ಮಾಡಿದಂತೆ, ದಾನವನನ್ನು ದೇವತೆ ಮಾಡುವ ಮಹಾ ಕಾರ್ಯವು ನಮ್ಮೊಳಗೆ ನಡೆದಿರುತ್ತದೆ. ಆ ಕಾರ್ಯಕ್ಕೆ ಸಮಯ ಕಳೆಯುತ್ತಿರುವುದನ್ನು ಕಂಡು ನಾವು ಹತಾಶಯರಾಗತಕ್ಕದ್ದಲ್ಲ ಈ ಯೋಗದ ಮೂಲ ಸಿದ್ಧಾಂತವಾದ ಆತ್ಮಸಮರ್ಪಣವನ್ನು ಗಟ್ಟಿಯಾಗಿ ಹಿಡಕೊಳ್ಳತಕ್ಕದ್ದು. ಶ್ರೀ ತಾಯಿಯವರನ್ನು ಬಿಡತಕ್ಕದ್ದಲ್ಲ. ನಮ್ಮ ಹೆಜ್ಜೆ ಮುಂದುವರಿಯಲಿ, ಹಿಂಜರಿಯಲಿ ಇಲ್ಲವೆ ನಿಂತಲ್ಲಿಯೇ ನಿಂತಿರಲಿ ಆದರೆ ನಾವು ತಡವರಿಸದೆ ಯಾವಾಗಲೂ ಹರುಷದಿಂದ ಗಟ್ಟಿಗೊಂಡು ಸಾಧಕದಲ್ಲಿ ತೊಡಗಬೇಕೆಂದು ಶರಣಾಗತಿಯು ನಮ್ಮನ್ನು ಕೇಳುತ್ತದೆ.

ಯೋಗ್ಯರಾಗಿರಿ, ಕಾಲಿನಿಂದ ತಲೆಯ ವರೆಗೆ ಪ್ರಾಮಾಣಿಕರಾಗಿರಿ ಎಂದು ಹೇಳಲಾಗುತ್ತದೆ. ಬರಿಯ ಬಾಯಿಂದ ಪ್ರಾಮಾಣಿಕರಾದರೆ ಮುಗಿಯುವದಿಲ್ಲ. ಪ್ರಾಮಾಣಿಕರಾಗುವದೆಂದರೆ— ನಮ್ಮ ಮನದ ಪ್ರತಿಯೊಂದು ಭಾಗ, ಪ್ರಾಣದ ಪ್ರತಿಯೊಂದು ಎಳೆ, ಶರೀರದ ಲಿಂಗ ಪ್ರತ್ಯಂಗ ಇವು ಸೂರ್ಯಮುಖಿ ಎಂಬ ಹೂವು ಸೂರ್ಯನ ಕಡೆಗೆ ಯಾವಾಗಲೂ ಮುಖಮಾಡಿಕೊಂಡಿರುವಂತೆ ಏಕಮಾತ್ರ ಪರಮಾತ್ಮನ ಕಡೆಗೆ ಮುಖಮರಳಿಸಿಕೊಂಡಿರತಕ್ಕದ್ದು. ಪರಮಾತ್ಮನ ಹೊರತು ಇನ್ನಾರ ಪ್ರಭುತ್ವವನ್ನೂ ಒಪ್ಪಬಾರದು. ನಮ್ಮ ಸರ್ವಸತ್ತೆಯ ವೀಣೆಯು ಇಂದು ಏಕಸ್ವರದಲ್ಲಿ ಝೇಂಕರಿಸಿಬಿಟ್ಟರೆ, ನಮ್ಮ ಕೊಡವು ಅಮೃತದಿಂದ ತುಂಬಿಬಿಟ್ಟಹಾಗೆ. ನಮ್ಮ ಮನೆಯು ದೈವೀಭವದಿಂದ ತುಂಬಿಬಿಟ್ಟಹಾಗೆ.

ಯೋಗಿ ಅಂದರೆ ಯಾರು ? ತನ್ನೊಳಗಿನ ಸುಪ್ತ ಶಕ್ತಿಗಳನ್ನು ಎಚ್ಚರಿಸಿದವನು. ಪರಮಾತ್ಮನೊಡನೆ ಏಕತ್ವವನ್ನು ಪಡೆದವನು. ಆದರೆ ಯೋಗಿಯೆಂದಕೂಡಲೇ ಪರ್ಣಕುಟಿ ನಿವಾಸಿಯೂ, ಕಪನಿಧಾರಿಯೂ, ಭಿಕ್ಷಾನ್ನಜೀವಿಯೂ ಆದವನ ಚಿತ್ರವನ್ನು ಕಲ್ಪಿಸುತ್ತೇವೆ. ಪ್ರಚಲಿತ ಮತದಂತೆ ಆಧ್ಯಾತ್ಮಿಕದ ಅಂತಿಮಾವಸ್ಥೆಯೆಂದರೆ ಇದೇ ಆಗಿದೆ. ಧನ ಧಾನ್ಯ ಗೃಹಸಂಪತ್ತಿಗಳನ್ನು ನಾವು ಅದೆಷ್ಟು ಜೋಕೆಯಿಂದ ಕಾಪಾಡುವೆವೋ ಅಷ್ಟೇ ತೀವ್ರವಾಗಿ ಅವುಗಳಿಗೆ ಎಳ್ಳು ನೀರು ಬಿಡುವುದು ಒಳ್ಳೆಯದು. ಅವೆಲ್ಲವೂ ಸಾಧನ ಪಥದಲ್ಲಿ ಮುಳ್ಳು ಕಲ್ಲುಗಳು. ಅವುಗಳಿಂದ ದೂರವಾದಷ್ಟು ಒಳ್ಳೆಯದು. ಆದರೆ ಅರವಿಂದರು ಹೇಳುತ್ತಾರೆ-ಧನವು ಸ್ವಯಂ ಅನರ್ಥಕಾರಿ ಅಲ್ಲ. ಅಸುರರಿಂದ ನಿಯಂತ್ರಿತನಾಗಿರುವ ವ್ಯಕ್ತಿಯ ಕೈಯೊಳಗಿನ ಧನದ ದುರ್ವ್ಯವಹಾರವೇ ಅನರ್ಥಕ್ಕೆ ಕಾರಣ. ಧನವನ್ನು ಆತ್ಮೋನ್ನತಿಗಾಗಿ ವ್ಯಯಗೊಳಿಸುವವರೆಷ್ಟು ಜನ ಇಂದು ಸಿಕ್ಕುತ್ತಾರೆ ? ಜಗತ್ತಿನಲ್ಲಿ ಪರಮಾತ್ಮನ ಉದ್ದೇಶವನ್ನು ಪೂರ್ತಿಗೊಳಿಸುವ ಸಲುವಾಗಿ ಅದು ವ್ಯಯವಾಗುತ್ತಿದೆಯೇ ? ತಾವು ಗಳಿಸಿದ ಧನವನ್ನು ಪರಮಾತ್ಮನ ಸೇವೆಯಲ್ಲಿ ತೊಡಗಿಸುವುದು ತಮ್ಮ ಕರ್ತವ್ಯವೆಂದು ತಿಳಿದವರು ತೀರ ವಿರಳ. ಆ ಧನಕ್ಕೆ ತಾವೇ ಒಡೆಯರೆಂದು ಅವರ ತಿಳುವಳಿಕೆ. ಆದರೆ ಆ ಧನವು ಅವರನ್ನು ತನ್ನ ಜೀತದಾಳು ಮಾಡಿ ಅವರ ಮೇಲೆ ಅದೆಂಥ ಅಧಿಕಾರ ಸ್ಥಾಪಿಸಿದೆ ಯೆಂಬುದು ಅವರಿಗೆ ತಿಳಿಯದು. ಅವರು ಧನವನ್ನು ಆಳುವದಕ್ಕಿಂತ ಹೆಚ್ಚಾಗಿ ಧನವೇ ಅವರನ್ನಾಳುತ್ತದೆ. ಆತ್ಮೋನ್ನತಿಗೆ ಸಹಾಯವಾಗಬಲ್ಲ ಧನವು ಅಸುರ-ಸೇವೆಯಲ್ಲಿಯೂ, ಅಹಂಕಾರ ಸೇವೆಯಲ್ಲಿಯೂ ವ್ಯಯವಾಗಿ, ವಾಸನಾ ಉಪಾಸನೆಯಲ್ಲಿ ಹಾಳಾಗಿ, ಅವರ ಸಾಧನ ಮಾರ್ಗದಲ್ಲಿ ಪ್ರಚಂಡ ಬಾಧೆಯಾಗಿ ಕೋಟ್ಯವಧಿ ಜನರಿಗೆ ಉಪಕರಿಸಬಲ್ಲ ಧನವು ಗತಯುದ್ಧದಲ್ಲಿ ಮಾನವ ಸಂಹಾರಕ್ಕೆ ತೊಡಗಿತು. ಹೀಗೆ ದೋಷ ಧನದ್ದಲ್ಲ; ವ್ಯಕ್ತಿಯದು.

ದೈವೀ ಸಂಪತ್ತನ್ನು ನಾವು ಜಡದೊಳಗೆ ಇಳಿಸಿಕೊಂಡು ಇಹ ಜೀವನವನ್ನು ಸಮೃದ್ಧಗೊಳಿಸಬೇಕಾದರೆ ನಾವು ಕಾರ್ಯ ಮಾಡಬೇಕಾಗುವದು. ಕಾರ್ಯಕ್ಕಾಗಿ ಧನವೂ ಬೇಕು, ಶಕ್ತಿಯೂ ಬೇಕು. ರಾಜ ರಾಜೇಶ್ವರರ ಐಶ್ವರ್ಯದಲ್ಲಿಯೂ ನಮ್ಮ ಮನವು ನೀರೊಳಗಿನ

ಬೆಣ್ಣೆ ಮುದ್ದಿಯಂತೆ ನಿರ್ಲಿಪ್ತವಾಗಿ ಯೋಗಯುಕ್ತವಾಗಿರಬೇಕು ಬಡ ತನದ ಬವಣೆಯಲ್ಲಿ ಸಿಕ್ಕರೂ ಹಿಮಗಿರಿಯಂತೆ ಅಚಲರೂ, ಸಮುದ್ರ ದಂತೆ ಪ್ರಶಾಂತರೂ ಆಗಿ ಆತ್ಮಾನಂದದಿಂದ ತುಂಬಿದವರಾಗಿರಬೇಕು.

ಪರಮಾತ್ಮನ ಕರ್ಮಿಯೂ ಅವನ ಕೈಯೊಳಗಿನ ವಿಶ್ವಸ್ತ ಯಂತ್ರವೂ ಆಗಬೇಕೆಂದು ಅಪೇಕ್ಷಿಸುವ ಸಾಧಕನು ಧನ-ಐಶ್ವರ್ಯಗಳನ್ನು ತನ್ನ ಲಾಲಸೆಯನ್ನು ಪೂರ್ತಿಗೊಳಿಸುವ ಸಲುವಾಗಿ ಉಪಯೋಗಿಸನೆ, ಭೂಮಿಯ ಮೇಲೆ ದೇವರಾಜ್ಯವನ್ನು ಸ್ಥಾಪಿಸುವ ಸಲುವಾಗಿ ಉಪಯೋಗಿಸತಕ್ಕದ್ದು. ಅಸುರರ ಮುಷ್ಟಿಯೊಳಗಿಂದ ಧನಬಲವನ್ನು ಬಿಡಿಸಿಕೊಂಡು ಪರಮಾತ್ಮನ ಕೈಯ್ಯಲ್ಲಿ ಯಾವ ಕರಾರೂ ಇಲ್ಲದೆ ಒಪ್ಪಿಸಬಲ್ಲವನ ಅಂತಃಕರಣವು ತನ್ನಿಂದ ತಾನೆ ಶುದ್ಧವಾಗುತ್ತ ಹೋಗುವದು. ಅವನ ಕರ್ಮ, ಗಳಿಸುವ ಶಕ್ತಿ, ಧನ ಈ ಮೂರರ ಮಹಾ ಸುಂದರ ಸಮರ್ಪಣ ನಾಗತೊಡಗುವದು.

ಸಾಧನದಲ್ಲಿ ಪ್ರವೇಶಿಸುವದಕ್ಕೆ ಸಹಜವೂ ಸುಲಭವೂ ಆದ ಉಪಾಯವು ಕರ್ಮಕ್ಕಿಂತ ಮಿಗಿಲಾದುದು ಬೇರೊಂದಿಲ್ಲ. ಕರ್ಮದಿಂದ ಸಾಧನ ಮಾಡಿದ ಬಳಿಕ ಸಾಧಕನಿಗೆ ಆತ್ಮನಿವೇದನ ಮಾಡಲು ಒಂದು ವಿಶಾಲವೂ, ವಿಸ್ತೃತವೂ ಆದ ಕ್ಷೇತ್ರವು ಸಿಕ್ಕುಬಿಡುತ್ತದೆ. ಕರ್ಮಸಮರ್ಪಣಕ್ಕೆ ತೀರ ಉತ್ತಮವಾದ ತಳಹದಿಯೆಂದರೆ, ಕರ್ಮವನ್ನು ನಾವು ಮಾಡುತ್ತಿರದೆ ತಾಯಿ ಮಾಡುತ್ತಿದ್ದಾಳೆಂಬ ಅನುಭವ ತಳೆಯುವುದು. ಆದರೆ ರಾಜಸಿಕ-ಸಾತ್ವಿಕ ಅಹಂಕಾರ ಭಾವದಿಂದ ಕರ್ಮ ಮಾಡುವವನು ಸಹ, ಈಶ್ವರನೇ ತನ್ನಿಂದ ಕರ್ಮ ಮಾಡಿಸುತ್ತಿದ್ದಾನೆಂದು ತಿಳಕೊಳ್ಳುವದುಂಟು. ಅಹಂಭಾವದಿಂದ ಮಾಡುವ ಕೆಲಸವು ತಿಳಿಗೇಡಿ ಜಗತ್ತಿಗೆ ಅದೆಷ್ಟು ಒಳ್ಳೆಯದಾಗಿದ್ದರೂ ಯೋಗಸಾಧಕನಿಗೆ ಉಪಯೋಗವಿಲ್ಲ.

ನಮ್ಮ ಮನವು ತನ್ನ ಕ್ರಿಯೆಯ ಫಲವನ್ನು ಕೂಡಲೇ ಕಾಣಬೇಕೆನ್ನುತ್ತದೆ. ತಡವಾದರೆ ನಿರಾಶೆ ಆವರಿಸುತ್ತದೆ. ಅಹಂಕಾರದಿಂದ ಪಾರಾಗಲು ನಮಗೆ, ಫಲಾಸಕ್ತಿಯಿಲ್ಲದೆ ಕರ್ಮ ಮಾಡುವುದಕ್ಕೆ ಆದೇಶವಾಗಿದೆ. ಎರಡನೇ ಮೆಟ್ಟಲಿನಲ್ಲಿ ನಾವು ಡ್ರೈವ್ಹರನ ಕೈಯಂತ್ರದಂತೆ ಕರ್ಮ ಮಾಡಲು ಕಲಿಯುತ್ತೇವೆ. ಮೂರನೇ ಅವಸ್ಥೆಯೆಂದರೆ–

ಸರ್ವಾಂಗೀಣ ಸಮರ್ಪಣದಿಂದ ಸಾಧಕನು ದಿವ್ಯಚೇತನದಲ್ಲಿ ಜಾಗ್ರತನಾದಾಗ, ಅವನ ಮನ ಹೃದಯಗಳಷ್ಟೇ ಅಲ್ಲ, ಶರೀರವು ಸಹ ಭಾಗವತ ಶಕ್ತಿಯಿಂದ ಪರಿಚಾಲಿತಗೊಳ್ಳುತ್ತಿದೆಯೆಂದೂ, ಅವು ಕಾಯಿಯ ಒಂದೊಂದು ಕಂಗಗಳಾಗಿ ಬಿಟ್ಟಿರುವವೆಂದೂ ಅನುಭವವುಂಟಾಗುತ್ತದೆ. ಹೀಗೆ ನಿಷ್ಕಾಮ ಕರ್ಮದಿಂದ ದಿನದಿನವೂ ದಿವ್ಯಚೇತನ, ದಿವ್ಯಶಾಂತಿ ಮೊದಲಾದವುಗಳು ನಮ್ಮೊಳಗೆ ಸಮೃದ್ಧವಾಗುತ್ತ ಅಂತರಾತ್ಮನಲ್ಲಿ ಹೊಸ ಜನ್ಮಪಡೆದುದನ್ನು ಕಾಣುತ್ತೇವೆ.

ಧ್ಯಾನದ ಪ್ರಚಲಿತ ರಾಜಮಾರ್ಗಗಳು ಎರಡು. ಒಂದು ಅಂತರ್ಗಮನ, ಇನ್ನೊಂದು ಊರ್ಧ್ವಗಮನ, ಅಂತಃಕರಣದ ಆಳದಲ್ಲಿ ಇಳಿಯುವುದು ಇಲ್ಲವೆ ಮನದ ಮುಗಿಲಲ್ಲಿ ನೆರೆಯುವುದು. ನಮ್ಮ ಹೃದ್ಗುಡೆಯಲ್ಲಿ ಮಲಗಿದ ಸಿಂಹವು ಎಚ್ಚತ್ತು ಗರ್ಜಿಸುತ್ತ ಹೊರಗೆ ಬಂದಾಗ ನಮ್ಮೊಳಗಿನ ಹಿಂಸ್ರ ಜಂತುಗಳ ಕೋಲಾಹಲವು ತಾನಾಗಿಯೇ ಶಾಂತವಾಗಿ ಬರುತ್ತದೆ. ಆಳವಾದ ಅಂತಸ್ಥಲದಲ್ಲಿ ಪ್ರವೇಶಿಸಲು ಕೆಲವು ಕುರುಹುಗಳುಂಟು. ನಾನು ಒಳಗೊಳಗೆ ಇಳಿಯುತ್ತಿದ್ದೇನೆ. ನನ್ನ ಕೈಕಾಲು ಶೂನ್ಯವಾಗುತ್ತಲಿವೆ. ನಾನು ಕಲ್ಲಿನಂತೆ ಸ್ಥಿರವಾಗುತ್ತಿದ್ದೇನೆ. ನನ್ನಲ್ಲಿ ಅಲುಗಾಡುವುದಕ್ಕೆ ಇಚ್ಛೆಯುಳಿದಿಲ್ಲ. ಶರೀರವು ಶಾಂತವೂ ನಿಷ್ಪಂದವೂ ಆಗುತ್ತ ತನ್ನಿಂದ ತಾನೆ ಸುಖಾಸನವುಂಟಾಗಿ ಬಿಡುವದು.

ತೆರೆಯ ಹಿಂದೆ ತೆರೆ ಹುಟ್ಟಿ ಹಗುರಾಗಿ ಸಹಸ್ರಾರವನ್ನು ತಲುಪುವದಕ್ಕೆ ಹೋಗುತ್ತವೆ. ಹೊರಮಗ್ಗಲು ಕಲ್ಲಿನಂತೆ ಕುಳಿತಿದ್ದರೂ ಒಳಗೆ ತೀರ ಎಚ್ಚತ್ತಿರುವೆವು. ನಮ್ಮ ಸಂಪೂರ್ಣ ಕೇಳಚೇತನವು ಮೇಗಡೆಗೆ ನೆಗೆದೇಳುವುದಕ್ಕೆ ಆರೋಹಣವೆಂದೂ, ಮೇಲಿನ ದಿವ್ಯ ಚೇತನದ ಗಂಗಾಧಾರೆಯು ಇಳಿದುಬರುವುದಕ್ಕೆ ಅವರೋಹಣವೆಂದೂ ಹೇಳುತ್ತಾರೆ. ದೈವೀ ಸಂಪತ್ತು ಪೂರ್ಣ ಯೋಗದಿಂದ ಮೇಲಿನಿಂದ ಜಿಗಿದುಬರುವಾಗ ಬೆಳಕಿನ ಕಡಲೇ ತೂರಿಬರುವಂತೆಯೂ, ಹಿಗ್ಗಿನ ತೆರೆಗಳು ಏಳುವಂತೆಯೂ ತೋರಿಬರುವದಲ್ಲದೆ ನಾವು ಶಾಂತಿಯ ಸಮುದ್ರದಲ್ಲಿ ಮುಳುಗೇಳುತ್ತಿರುವಂತೆ ತಿಳಿಯುವದು. ನಮ್ಮ ಚೇತನವು ಮೇಗಡೆಗೆ ಏರುತ್ತಿರುವಾಗ ಕಣ್ಣಿನ ಮುಂದೆ ತೆರೆದು ತರುವಾಯ ತೆರೆಯು ಮೆರೆಯ ತೊಡಗಿ ಹೊಸ ಹೊಸ ಸ್ತರಗಳು ತೆರೆಯ ತೊಡಗುವವು. ಆಗ ನಾವು ಶರೀರದ ಕೀಲಿಸಿದ ಪಿಂಜರದಿಂದ ಹೊರಬಿದ್ದು

ಮುಕ್ತ ಗಗನದಲ್ಲಿ ಕಟ್ಟು ಬಿಚ್ಚಿದ ಹಕ್ಕಿಯಂತೆ ಹಾರಾಡುತ್ತಿರುವೆನೆಂದು ಒಮ್ಮೆ ತೋರಿದರೆ, ಸರ್ವಪ್ರಕಾರದ ಬೇಲಿಗಳು ಮುರಿದುಹೋಗಿ ನಾವು ಅಸೀಮ ಆಕಾರದೊಡನೆ ಒಂದುಗೂಡಿ ಹೋಗಿರುವಂತೆ ಇನ್ನೊಮ್ಮೆ ತೋರುವದು. ನಾವು ಬೇರೆ ಒಂದು ಬಗೆಯ ಅಲೌಕಿಕ ಲೋಕದಲ್ಲಿ ಅಡ್ಡಾಡುವಂತೆ ಮತ್ತೊಮ್ಮೆ ಅನಿಸುವದು. ಈ ಅನುಭವಗಳೇ ನಮಗೆ ವಿಶ್ವಚೇತನದ ವರೆಗಿನ ರಸಾಸ್ವಾದನ ಮಾಡಿಸುವವು.

ಪೂರ್ಣ ಯೋಗದಲ್ಲಿ ಆಂತರಿಕ ಸತ್ತೆಯು ಹೊರಗೆಬರುವುದೂ, ಬಾಹ್ಯ ಚೇತನವು ಒಳಗೆ ಹೋಗುವದೂ ಆವಶ್ಯಕ. ಆ ಎರಡರ ನಡುವಿನ ಕಬ್ಬಿಣ ಗೋಡೆಯೂ ಕುಸಿಯುತ್ತಲೇ, ಯೋಗದಲ್ಲಿ ಮೊದಲು ಅದಾವುದು ಅಸಾಧ್ಯವೂ ಅಸಂಭವವೂ ಎನಿಸುತ್ತಿದ್ದಿತೋ ಅದೀಗ ನಮ್ಮ ಕೈಯಳವಿನಲ್ಲದೆಯೆಂದು ಅನಿಸುವದು. ನಮ್ಮೊಳಗಿನ ನಿಜವಾದ ಯೋಗಿಯು ಹೊರಗೆ ಬಂದು, ಸಾಧನದಲ್ಲಿ ಪ್ರಮುಖ ಭಾಗ ವಹಿಸಿದಾಗ ನಾವು ವಿಜಯಯಾತ್ರೆಯ ವರವನ್ನು ಪಡೆದುಬಿಡುತ್ತೇವೆ.

### ಪೂರ್ಣಯೋಗದ ಪರಿಣಾಮ

ಶ್ರೀ ಅರವಿಂದರು ತಮ್ಮ ಅಸೀಮವಾದ ಪುರುಷಾರ್ಥದಿಂದಲೂ ದೀರ್ಘವಾದ ತಪಸ್ಸಿನಿಂದಲೂ ಅದಾವ ಮೆಟ್ಟಲಿಗೇರಿದರೋ ಅದನ್ನು ಜನರು ಬುದ್ಧಿಯಿಂದ ಕಲ್ಪಿಸಲೂ ಆವರು ಅಷ್ಟೊಂದು ಎತ್ತರಕ್ಕೆ ಏರಿದರೂ, ಅಷ್ಟೊಂದು ಶಕ್ತಿಯನ್ನು ಸಂಪಾದಿಸಿದರೂ ಅವರು ತಮ್ಮನ್ನು ಮಾನವ ಮೆಟ್ಟಲಿನಲ್ಲಿ ಇರಿಸಿದ್ದು ತುಂಬ ಅಗಾಧವಾಗಿದೆ. ಜಗತ್ತಿನ ಮೂಲೆಮೂಲೆಗಳಿಂದ ಶೋಕ, ಸಂತಾಪ, ದುಃಖ ದ್ವಂದ್ವಗಳನ್ನು ದೂರಗೊಳಿಸುವ ಸಲುವಾಗಿ ಅದೊಂದು ಅಪೂರ್ವ ತ್ಯಾಗವಾಗಿದೆ. ಪ್ರತಿಯೊಂದು ಧರ್ಮವು ಕೆಲವರನ್ನು ಮೇಲಕ್ಕೇರಿಸಿದೆ; ಪರಮಾತ್ಮನನ್ನು ದೊರಕಿಸಿಕೊಟ್ಟಿದೆ. ಆದರೆ ಮಾನವ ಸಮಾಜವನ್ನೇ ಮೇಲಕ್ಕೆತ್ತುವ ಹಾಗೂ ಪರಮಾತ್ಮನುಯ ಮಾಡುವ ಪ್ರಯತ್ನವು ಈ ವರೆಗೂ ಆಗಿಲ್ಲ ಈ ಯೋಗದಿಂದ ಅವರ ಉದ್ದೇಶವಾಗಲಿ ಉದ್ಯೋಗವಾಗಲಿ ಮನುಷ್ಯಜಾತಿಯ ದುಃಖವನ್ನು ದೂರಗೊಳಿಸುವುದಿಷ್ಟೇ ಆಗಿರದೆ ಮನುಷ್ಯನಲ್ಲಿ ಅಡಗಿರುವ ಮನ, ಪ್ರಾಣ, ಶರೀರಗಳನ್ನು ಸಂಪೂರ್ಣವಾಗಿ ಅರಳಿಸಿ, ಅವುಗಳನ್ನು ಪರಿವರ್ತಿಸಿ ರೂಪಾಂತರಿಸಿ ಮನುಷ್ಯಜೀವನವನ್ನು ದಿವ್ಯ

ಗೊಳಿಸುವುದೂ ಮೂರ್ತಗೊಳಿಸುವುದೂ ಆಗಿದೆ. ಪೂರ್ಣಯೋಗದ ಧ್ಯೇಯವು ಕೇವಲ ಒಂದಾನೊಂದು ಅಂಗವಿಶೇಷವನ್ನಷ್ಟೇ ಅಲ್ಲ. ಅಂಗ ಪ್ರತ್ಯಂಗಗಳನ್ನು ಮೇಲಿನ ದಿವ್ಯ ಚೇತನ, ದಿವ್ಯ ಶಾಂತಿ, ದಿವ್ಯ ಜ್ಯೋತಿ, ದಿವ್ಯಾನಂದಗಳನ್ನು ಅವನ ಆಧಾರದಲ್ಲಿ ತರುವುದಿರುತ್ತದೆ. ಪರಮಾತ್ಮನು ಸ್ವತಃ ತನ್ನ ಪೂರ್ಣ ಐಶ್ವರ್ಯಗಳೊಡನೆ ಮಾನವೀ ಮಂದಿರದಲ್ಲಿ ಬಂದು ವಿರಾಜಮಾನನಾಗುವುದಿರುತ್ತದೆ. ಅದರಿಂದ ಅವನ ಸರ್ವ ಆಲುಗಾಟಗಳು, ಸರ್ವ ಕ್ರಮಗಳು ಪರಮಾತ್ಮಮಯವಾಗ ತೊಡಗುವವು. ಅವನು ಸರ್ವದಲ್ಲಿದ್ದು ಬೇರೆಯಾಗಿಯೂ, ಸರ್ವದಿಂದ ಬೇರೆಯಾಗಿದ್ದೂ ಸರ್ವದಲ್ಲಿ ಇರತೊಡಗುವವು. ಪರಮಾತ್ಮನು ಏಕದಲ್ಲಿದ್ದಾನೆ; ವಿಶ್ವದಾಚೆಯಲ್ಲಿಯೂ ಇದ್ದಾನೆ. ಅವನೇ ಈ ಶರೀರದಿಂದ ಇದೇ ಪಾರ್ಥಿವ ಜಗತ್ತಿನಲ್ಲಿರಬಲ್ಲನು. ಇದೇ ಪೂರ್ಣಯೋಗದ ಹಿರದೊಡ್ಡ ವಿಶೇಷತೆ. ಇದು ಎಂದಾದರೂ ಶಕ್ಯವೇ ಎನ್ನುವ ಪ್ರಶ್ನೆ ಯೇಳಬಹುದು.

ಜಡಜಗತ್ತಿನಿಂದ ಉದ್ಭಿಜ ಜಗತ್ತಿನ ಆವಿರ್ಭಾವವಾದಂತೆ, ಬಳಿಕ ಅಂಡಜ, ಗರ್ಭಜ ಜಾತಿ ಉತ್ಪನ್ನವಾಯಿತು. ಗರ್ಭಜ ಜಾತಿಯಲ್ಲಿ ಮೊದಲು ಪಶುಗಳ ಜನ್ಮವೂ ಜಡದಿಂದ ಮಾನಸದ ವಿಕಾಸವಾಗಿ ಮನುಷ್ಯ ಜಾತಿಯೂ ಉತ್ಪನ್ನವಾದವು. ಈಗ ಮನೋಮಯ ಕೋಶದ ತರುವಾಯ ವಿಜ್ಞಾನವು ಜಡಜಗತ್ತಿನಲ್ಲಿ ಅವತೀರ್ಣವಾಗುವುದು ಯುಕ್ತಿಯುಕ್ತವಷ್ಟೇ ಅಲ್ಲ. ಅನಿವಾರ್ಯವೂ ಸುಸಾಧ್ಯವೂ ಆದ ಸಂಗತಿಯೆಂದು ಗೊತ್ತಾದಬಳಿಕ ಸಹ ಅದು ಕೇವಲ ಸಂಭವವಷ್ಟೇ ಅಲ್ಲ. ಸುನಿಶ್ಚಿತವೂ ಆಗಿದೆ. ಇಂದಿನ ವಿಕಾಸದಲ್ಲಿ ಮಾನವ, ಅತಿಮಾನವ ಇಲ್ಲವೆ ದೇವಮಾನವನಾಗಬಲ್ಲನೆಂಬುದು ಸಚ್ಚಿದಾನಂದವಿಂದ ನಿರ್ಧರವಾಗಿಬಿಟ್ಟಿದೆ. ಅದು ಆತ್ಮನೊಡನೆ, ಪ್ರಕೃತಿಯೊಡನೆ, ಪರಮಾತ್ಮನೊಡನೆ ಒಂದಾಗಿ ಹೋಗುವದು. ಹೀಗೆ ಪರಮಾತ್ಮನೊಡನೆ ಏಕತ್ವ ಪಡೆದು ಆ ಚೇತನದಲ್ಲಿ ಜೀವಿಸುವದೇ ಕ್ರಮವಿವರ್ತನದ ಸರ್ವೋಚ್ಚ ಅವಸ್ಥೆಯಾಗಿದೆ. ಆ ಕ್ರಮವಿಕಾಸದ ಆವಶ್ಯಕತೆಯೂ ಮನುಷ್ಯನಿಗಿದೆ.

ಈ ಅಸಾಧ್ಯವು ಸಾಧ್ಯವಾಗುವದಕ್ಕೆ ಅತಿಮಾನಸವು ಇಳಿದು ಬರಬೇಕು. ಆ ಲೋಕವು ಅತೃಪ್ತಿಯ ಆಭಾಸವಲ್ಲ. ಸುಳ್ಳಿನ ಸಂತೆಯಲ್ಲ. ರಾಗ ದ್ವೇಷಗಳ ಗುರುಕಿಯಲ್ಲ. ರೋಗ ಶೋಕಗಳ ನೆಲಲ್ಲ. ಮರೆವು

ಪುರುಳುಗಳ ಲವಲೇಶವಲ್ಲ. ಅಲ್ಲಿ ಸತ್ಯ ಸೂರ್ಯನು ಮುಳುಗಲಾರನು. ನಿತ್ಯಸುಖದ ಸುಳಿಗಾಳಿ ನಿಲ್ಲಲಾರದು ಅಮೃತದ ಸೆಲೆಯು ಬತ್ತದು. ಶಾಂತಿಯ ಝರಿಯು ಒಣಗದು. ಆತ್ಮನ ಆನಂದ ಪ್ರವಾಹವು ಎಂದೂ ಸಂಗಡಿಯದು. ಆ ಲೋಕವು ನಮ್ಮ ಕತ್ತಲೆಯ, ಅವಿದ್ಯೆ-ಅತೃಪ್ತಿಗಳ ಜಗತ್ತಿನ ಆಚೆಗಿದೆ. ಅದಕ್ಕಾಗಿ ಕ್ಷೇತ್ರ ಸಿದ್ಧವಾದಾಗಲೇ ಅದು ಇಳಿದು ಬರಲು ಸಾಧ್ಯ. ಆ ಕ್ಷೇತ್ರವನ್ನು ಅಣಿಗೊಳಿಸುವ ಕೆಲಸಕ್ಕಾಗಿಯೇ ಶ್ರೀ ಅರವಿಂದರು ತಮ್ಮ ಸರ್ವ ಶಕ್ತಿಯನ್ನು ತೊಡಗಿಸಿದರು.

ಇಂದಿಗೆ ಜಗತ್ತು ಮುಂದಿನ ಸಮುದ್ರದಲ್ಲಿ ಮುಳುಗಿ ಹೋಗಬೇಕು. ಇಲ್ಲವೆ ಇದೆಲ್ಲವನ್ನೂ ಪಾಟವನೋಡಿಯಂತೆ ಸರಿಗೊಳಿಸುವ ದೈವೀ ಪರಿವರ್ತನವಾಗಬೇಕು. ಇಂಥ ಯುಗಾಂತರ ಸಮಯಕ್ಕೆ ಪರಮಾತ್ಮನು ಸ್ವತಃ ಬಂದು ಇಲ್ಲವೆ ತನ್ನ ವಿಭೂತಿಯನ್ನು ಕಳಿಸಿಕೊಟ್ಟು ಜಗತ್ತಿನ ಕಲ್ಯಾಣ ಮಾಡಿದ್ದಾನೆ; ಈಗಲೂ ಮಾಡುವನು. ಜಗತ್ತನ್ನು ರಚಿಸಿದವನು ಅದನ್ನು ಅದೆಂತು ಮುಳುಗಗೊಡುವನು ?

ಆಂತರಿಕ ಪ್ರಭುತ್ವ ಪ್ರಾಪ್ತಿಯಾದಬಳಿಕೇ ನಾವು ಬಾಹ್ಯಪ್ರಭುತ್ವ ಪಡೆಯಬಲ್ಲೆವು. ಅಂತೆಯೇ ಒಳಗಿನಿಂದ ಪರಿವರ್ತನಗೊಳಿಸಲು ಅರವಿಂದರು ಇಚ್ಛಿಸುತ್ತಾರೆ. ಅದರಿಂದಲೇ ನಾವೆಲ್ಲ ಆತ್ಮನ ವಿಶಾಲತೆ-ಏಕತೆಗಳ ಸೂತ್ರದಲ್ಲಿ ಕಟ್ಟು ವಡೆಯಬಲ್ಲೆವು. ಮನುಷ್ಯ ಮನುಷ್ಯರಲ್ಲಿ, ಸಮಾಜ ಸಮಾಜಗಳಲ್ಲಿ, ದೇಶ ದೇಶಗಳಲ್ಲಿ ನಿಜವಾದ ಸದ್ಭಾವನೆ ಮಿತ್ರತ್ವ, ಸ್ವಾತಂತ್ರ್ಯ ಸಮಿತಿಗಳು ಸ್ಥಾಪಿಕಗೊಳ್ಳುವವು. ಭಾರತೀಯರ ಭಾರತ ವರ್ಷವೇ ಆರ್ಯ ಋಷಿಗಳ ಆರ್ಯಾವರ್ತವೇ ವಿಶ್ವಕ್ಕೆ ಈ ಶಿಕ್ಷಣ ಕೊಡಬಲ್ಲದು. ಸಕಾಲಕ್ಕೆ ಕೊಡಬಲ್ಲದು.

ಪೂರ್ಣಯೋಗದಿಂದ ಮಾನವನು ಅದೆಂತು ದೇವಮಾನವನಾಗಬಲ್ಲನೆಂಬ ಮಾತಿನಿಂದ ಶ್ರೀ ಅರವಿಂದರು ತೆಪ್ಪಗೆ ಕುಳ್ಳಿರಲಿಲ್ಲ. ತಮ್ಮ ಪ್ರಯೋಗಶಾಲೆಯಲ್ಲಿ ಮಾಡಿ ನೋಡಿಯೇ ಅವರು ಮಾತಾಡಿ ಜೀವನ ವ್ರತವೆಂದು ನಿಂತವರು. ಜೀವನದ ಯಾವ ವ್ಯಾವಹಾರಿಕ ಕರ್ಮವನ್ನು ತ್ಯಜಿಸಲಿಕ್ಕೂ ಅವರು ಹೇಳುವದಿಲ್ಲ. ಮಾನವ ಜೀವನದ ಸಲುವಾಗಿ ಅದೆಷ್ಟು ಬಗೆಯ ಕರ್ಮಗಳ ಅವಶ್ಯಕತೆಯುಂಟೋ ಆ ಎಲ್ಲವು

ಗಳಿಗೂ ಅವರಾಶ್ರಮದಲ್ಲಿ ಸ್ಥಾನವುಂಟು. ಅಲ್ಲಿ ದಾರ್ಶನಿಕರಿದ್ದಂತೆ ವೈಜ್ಞಾನಿಕರೂ ಇದ್ದಾರೆ. ವಕೀಲರಿದ್ದಂತೆ ವ್ಯಾಪಾರಿಗಳೂ ಇದ್ದಾರೆ. ಶಿಲ್ಪಿಗಳೂ ಸಂಪಾದಕರೂ ಇರುವರಲ್ಲದೆ ಕವಿಗಳೂ ಕೃಷಿಕರೂ ಇದ್ದಾರೆ. ಆದರೆ ಯಾರ ಕಾರ್ಯವೂ ಅವರ ಸ್ವಂತದ್ದಲ್ಲ. ಸರ್ವಕಾರ್ಯಗಳೂ ಪರಮಾತ್ಮನವು. ಆತನ ಸಲುವಾಗಿಯೇ ಅವೆ. ಎಲ್ಲವೂ ಯಜ್ಞರೂಪದಲ್ಲಿ ಆತನಿಗೇ ಅರ್ಪಣ ಕೊಡಲಾಗುತ್ತಿದೆ. ಎಲ್ಲರಿಗೂ ಉದ್ದೇಶ ಒಂದೇ ಆಗಿದೆ. ಆತ್ಮನಲ್ಲಿ ಜೀವನ ಗಳಿಸುವುದು. ತಂತಮ್ಮ ಕರ್ಮದಿಂದ ಪರಮಾತ್ಮನನ್ನು ಪಡೆಯುವುದು. ಪ್ರಕಟಗೊಳಿಸುವುದು. ವೈಯಕ್ತಿಕ ಲಾಭದಾಶೆಯಾಗಲಿ, ಪ್ರಯತ್ನವಾಗಲಿ ಯಾರ ಮನದಲ್ಲಿಯೂ ಇಲ್ಲ. ಬಾಹ್ಯ ಹಾಗೂ ಆಂತರಿಕ ಜಗತ್ತಿನ ಅಂಥ ಸುಂದರ ಸಾಮಂಜಸ್ಯವಾಗಲಿ, ಜಡಜಗತ್ತಿನ ಮೇಲೆ ಅಮೃತತತ್ವದ ಅಂಥ ಸುಂದರವಾದ ಪ್ರಸಾದ ಪ್ರತಿಷ್ಠೆಯಾಗಲಿ ಮಾನವ ಇತಿಹಾಸದಲ್ಲಿ ಯಾರೂ ನೋಡಿರಲಾರರು. ಎಲ್ಲರೂ ಒಂದೇ ಯೋಗಸಾಧನಲ್ಲಿ ನಿರತರಾಗಿದ್ದರೂ ಪ್ರತಿಯೊಬ್ಬರ ಉದ್ದೇಶವೂ ತಂತಮ್ಮ ಅಂತರ್ನಿಹಿತವಾದ ಶಕ್ತಿಯನ್ನು ಪರಿಮಾರ್ಜಿತ-ರೂಪಾಂತರಗೊಳಿಸಿ ದಿವ್ಯವಾಗಿಸವುದು. ಅಪರಾದಲ್ಲಿ ಪರಾವ, ಅಹಂದಲ್ಲಿ ಆತ್ಮನ ಸಾಮ್ರಾಜ್ಯವನ್ನು ಸ್ಥಾಪಿಸುವುದು. ಹೊರಗಿನಿಂದ ನೋಡಿದರೆ ಜಗತ್ತಿನ ಕರ್ಮಧರ್ಮಗಳು ಅವೇ ಉಳಿಯುವವು. ಆದರೆ ಒಳಗಿನಿಂದ ತೀರಬದಲಾಗಿ ಹೋಗುವವು. ಯೋಗದೊಡನೆ ಜೀವನದ ಮೇಳನವಿಲ್ಲವೆನ್ನುವ ಜಗತ್ತಿನ ಗ್ರಹಿಕೆಯು ಆದೆಷ್ಟು ತಳವಿಲ್ಲದ್ದೆಂಬುದನ್ನು ಸಮುಯವು ತೋರಿಸಿಕೊಡುವದು. ಜೀವನವನ್ನು ಕಳಕೊಳ್ಳದೆ ಪರಮಾತ್ಮನನ್ನು ಪಡೆಯುವುದೂ ಜಗತ್ತನ್ನು ಆತ್ಮಶಕ್ತಿಯಿಂದ ನಿರ್ಮಿಸುವುದೂ ಯುಗದ್ರಷ್ಟಾರರೂ ಯುಗಪ್ರವರ್ತಕರೂ ಆದ ಶ್ರೀಅರವಿಂದರ ಉತ್ತಮವಾದ ರಹಸ್ಯವಾಗಿದೆ.

ಯೋಗದಿಂದ ಮನುಷ್ಯನ ಸ್ವಾಭಾವಿಕಶಕ್ತಿಯು ತನ್ನ ಉನ್ನತಿ-ನಿಪುಣತೆಗಳನ್ನಷ್ಟೇ ಅಲ್ಲ, ತನ್ನ ವಿಕಾಸದ ತುಟ್ಟತುದಿಯನ್ನು ಗಳಿಸಿಕೊಳ್ಳಬಲ್ಲದೆಂದು ಅವರು ಹೇಳುತ್ತಾರೆ. ಅವರ ಪೂರ್ಣಯೋಗವು ಮಾನವಚೇತನವನ್ನು ವಿಕಸಿತ ಹಾಗೂ ವಿಸ್ತಾರಗೊಳಿಸಿ ಪರಮಾತ್ಮನೊಳಗೆ ಎತ್ತಿಕೊಂಡು ಹೋಗುವದು. ಅಲ್ಲದೆ ಅಲ್ಲಿಂದ ಅವುಗಳನ್ನು ದಿವ್ಯಭಾವಾಪನ್ನಗೊಳಿಸಿ ಕೆಳಗಿಳಿಸುವುದೂ ಇರುತ್ತದೆ. ಅದರಿಂದ ಜೀವ

ನವೆಲ್ಲವೂ ಯೋಗವಾಗಿ ಬಿಡುವದು. ಮಾನವ ಮಂದಿರದ ಒಂದೊಂದು ಕೋಣೆಯೂ ಆತ್ಮಜ್ಯೋತಿಯಿಂದ ಬೆಳಗುವದು. ಆಗ ಆತನ ಮನ, ಪ್ರಾಣ, ಶರೀರಗಳು ಅವನವಾಗಿ ಉಳಿಯದೆ, ಪರಮಾತ್ಮನವಾಗಿ ಬಿಡುವವು. ಅವನು ಜಗತ್ತನ್ನು ತನ್ನೊಳಗೆ, ತನ್ನನ್ನು ಜಗತ್ತಿನೊಳಗೆ, ಪರಮಾತ್ಮನನ್ನು ತನ್ನೊಳಗೆ ತನ್ನನ್ನು ಪರಮಾತ್ಮನೊಳಗೆ ಕಾಣತೊಡಗುವನು. ಅದು ಅವನಿಗೆ ಸಹಜಸ್ಥಿತಿ ಆಗುವದು. ಇದೇದಿವ್ಯಜೀವನಯುಗ ನಿರ್ಮಾತೃವಾದ ಶ್ರೀಅರವಿಂದರ ಪೂರ್ಣಯೋಗದ ಗುರಿ.

ಆ ದೈವೀ ಶಕ್ತಿ ಇಳಿಯುತ್ತಲೆ ಸ್ವರ್ಣಯುಗ ಬಂದು ಬಿಡುವದೆಂದು ಅವರು ಹೇಳುವದಿಲ್ಲ. ಮನುಷ್ಯರೆಲ್ಲರೂ ದೇವತೆಗಳಾಗಿ ಬಿಡುವರೆಂದೂ ಹೇಳುವದಿಲ್ಲ. ಇಂದು ಹೆಣದನೃತ್ಯ ಶಾಲೆಯಾಗಿರುವ ಮಾನವಹೃದಯವು ಶಿವಮಂದಿರವಾಗಿ ಬಿಡುವದೆಂದೂ ಅವರು ಹೇಳುವದಿಲ್ಲ. ಅಷ್ಟೊಂದು ಮಹಾಶಕ್ತಿಯ ಪ್ರಭಾವವು ಅವುಗಳನ್ನು ತಿದ್ದಿದರೆ ತೀರುವದಿಲ್ಲವೆಂದು ಅವರು ಹೇಳುತ್ತಾರೆ. ಅತಿಮಾನಸದ ಅವತರಣದ ತರುವಾಯ ಪರಮಾತ್ಮನ ಪ್ರಾಪ್ತಿಯು ಮೊದಲಿನಂತೆ ಕಠಿಣವಾಗುವದಿಲ್ಲವೆನ್ನುವುದು ನಿಶ್ಚಯ. ಮನುಷ್ಯನನ್ನು ಅಸತ್ಯದಿಂದ ಸತ್ಯದ ಕಡೆಗೂ, ಅಂಧವಿವಶತೆಯಿಂದ ಪ್ರಕಾಶದ ಕಡೆಗೂ ಸ್ವತಃ ಪ್ರೇರಿಸುವ ಒಂದು ದೃಷ್ಟಿಯೇ ತೆರೆದುಬಿಡುವದಲ್ಲದೆ, ಒಂದು ನವಯುಗದ ಸುವರ್ಣಪ್ರಭಾತವು ಪ್ರತ್ಯಕ್ಷವಾಗಿ ದೃಷ್ಟಿಗೋಚರವಾಗತೊಡಗುವದು.

ಪೂರ್ಣಯೋಗವು ಯಾವುದೋ ಅತಿ ದೂರದಲ್ಲಿರುವ ದೇವಲೋಕದ ಕಡೆಗೆ ಬೊಟ್ಟು ಮಾಡಿ ತೋರಿಸುವದಿಲ್ಲ. ದೇಶದೇಶಗಳದ್ರಷ್ಟಾರರು ಅನೇಕ ಯುಗಗಳಿಂದ ಸವಿಗನಸು ಕಾಣುತ್ತ ಬಂದಿರುವ ಮನುಷ್ಯನನ್ನು ಮಾನವೀಸ್ತರದಿಂದ ದೈವೀಸ್ತರಕ್ಕೆ ಎತ್ತಿ ತರುವುದೂ, ಪೃಥ್ವಿಯ ಮೇಲೆ ದೇವಜಾತಿಯನ್ನು ಉತ್ಪನ್ನಗೊಳಿಸುವುದೂ, ಸ್ವರ್ಗವನ್ನು ಭೂಮಿಯ ಮೇಲೆ ಇಳಿಸಿತರುವುದೂ ಅವರ ಉದ್ದೇಶವಾಗಿದೆ.

## ಪೂರ್ಣಯೋಗದ ಪ್ರಮುಖ ಪದ್ಧತಿ.

ಪರಮಾತ್ಮನೇ ಬೇಕೆಂದು ಯಾರಾದರೂ ಹೇಳಿದರೆ ಸ್ವತಃ ಪರಮಾತ್ಮನೇ ಅವರ ಹೃದಯವನ್ನು ಶುದ್ಧಗೊಳಿಸುವ ಹೊಣೆಯನ್ನು ತನ್ನ ಮೇಲೆ ತೆಗೆದುಕೊಳ್ಳುವನು. ಅವನ ಸಾಧನವನ್ನು ವಿಕಸಿತಗೊಳಿ

ಸುವನಲ್ಲದೆ, ಅವನಿಗೆ ಅವಶ್ಯಕವಾದ ಅನುಭವಗಳನ್ನು ಮಾಡಿಕೊಡು ವನು. ಯಾರಾದರೂ ಪರಮಾತ್ಮನ ಮೇಲೆ ವಿಶ್ವಾಸ-ಹಾಗೂ ಭರವಸೆ ಯಿಟ್ಟು ಆತ್ಮಸಮರ್ಪಣ ಮಾಡಲು ಸಿದ್ಧರಿದ್ದರೆ, ವಾಸ್ತವದಲ್ಲಿ ಹಾಗೆ ಆಗಬಲ್ಲದು, ಆಗುತ್ತಲೂ ಇದೆ. ಯಾಕಂದರೆ ಪರಮಾತ್ಮನು ಈ ಪ್ರಕಾರ ತನ್ನ ಮೇಲೆ ಹೊಣೆಹೊತ್ತುಕೊಳ್ಳುವುದೆಂದರೆ ಆ ಮನುಷ್ಯನು ಕೇವಲ ತನ್ನದೇ ಆದ ಪ್ರಯತ್ನವನ್ನು ಅವಲಂಬಿಸದೆ ಪರಮಾತ್ಮನ ಕೈಯಲ್ಲಿ ತನ್ನನ್ನು ತಾನು ಒಪ್ಪಿಸಿಕೊಡುತ್ತಾನೆ. ಈ ಪ್ರಕಾರ ಒಪ್ಪಿಸಿಕೊಡುವು ದೆಂದರೆ ಅವರು ಪರಮಾತ್ಮನ ಮೇಲೆ ವಿಶ್ವಾಸವನ್ನೂ ಭರವಸವನ್ನೂ ಇಡುತ್ತಾನಲ್ಲದೆ ಹೆಚ್ಚು ಹೆಚ್ಚು ಆತ್ಮದಾನ ಮಾಡುತ್ತಾನೆ. ವಾಸ್ತವಿಕ ವಾಗಿ ಸಾಧನಕ್ಕೆ ಅದೇ ಸಿದ್ಧಾಂತವಾಗಿದೆ. ಅದನ್ನು ಸ್ವತಃ ನಾನು ಅನುಸರಿಸಿದ್ದೆನು. ನಾನು ಅದೇತಕ್ಕೆ ಯೋಗವೆಂದು ಹೇಳುವೆನೋ ಅದರ ಪ್ರಮುಖ ಪದ್ಧತಿಯು ಇದೇ ಆಗಿದೆ. ಶ್ರೀರಾಮಕೃಷ್ಣರು ಯಾವುದಕ್ಕೆ ರೂಪಕದ ಭಾಷೆಯಲ್ಲಿ ಬೆಕ್ಕಿನ ಮರಿಯ ಪದ್ಧತಿಯೆಂದು ಹೇಳಿದ್ದರೋ ಅದರ ಅಭಿಪ್ರಾಯವೂ ಇದೇ ಆಗಿತ್ತೆಂದು ನನ್ನ ತಿಳುವಳಿ ಕೆಯಿದೆ. ಆದರೆ ಎಲ್ಲಜನರು ಒಮ್ಮೆಲೆ ಅದನ್ನು ಅನುಸರಿಸಲಾರರು. ಈ ಭಾವವನ್ನು ಪಡೆಯಲು ಕೆಲವೊಂದು ಸಮಯಬೇಕಾಗುತ್ತದೆ. ವಾಸ್ತವದಲ್ಲಿ ಯಾವಾಗ ಮನಪ್ರಾಣಗಳು ಶಾಂತವಾಗುವವೋ ಆವಾಗ ಈ ಭಾವವು ಮೆಲ್ಲಮೆಲ್ಲನೆ ಬೆಳೆಯುತ್ತದೆ.

ಆತ್ಮ ಸಮರ್ಪಣಕ್ಕೆ ನನ್ನ ಅರ್ಥವೇನಂದರೆ- ಇದೇ ಮನ ಪ್ರಾಣ ಗಳ ಆಂತರಿಕ ಸಮರ್ಪಣವಾಗಿದೆ. ಇದರಲ್ಲಿ ಸಮರ್ಪಣವೂ ನಿಶ್ಚಯ ವಾಗಿ ಒಳಗೊಂಡಿದೆ. ಯಾವುದು ಸಾಧನದ ಭಾವ ಹಾಗೂ ಆವಶ್ಯ ಕತೆಗಳಿಗೆ ವಿರೋಧವಾಗಿದೆಯೋ ಅವೆಲ್ಲವನ್ನೂ ತ್ಯಜಿಸುವುದು ಆತ್ಮಾ ರ್ಪಣ ಮಾಡುವವನು ನೇರವಾದ ಪದ್ಧತಿಯಿಂದ ಇಲ್ಲವೆ ಅವಸ್ಥೆಯನ್ನು ತಲುಪಿಬಿಟ್ಟಿದ್ದರೆ ಅಥವಾ ಹೃತ್‌ಪುರುಷನಿಂದ ಪರಮಾತ್ಮನ ಪಥಪ್ರದ ರ್ಶನವನ್ನು ಅನುಸರಿಸುವುದು, ಇಲ್ಲವೆ ಗುರುವಿನ ಮಾರ್ಗದರ್ಶನವನ್ನು ಅನುಸರಿಸಿನಡೆಯುವುದು ಇತ್ಯಾದಿ ದೀರ್ಘಕಾಲದ ಉಪವಾಸಕ್ಕೂ ಸಮ ರ್ಪಣಕ್ಕೂ ಆದಾವ ಸಂಬಂಧವೂ ಇಲ್ಲವೆಂದು ನಾನಿಲ್ಲಿ ಹೇಳಲಿಚ್ಛಿಸು ತ್ತೇನೆ. ಅದು ಅತ್ಯಂತ ಉಗ್ರವೂ, ನನ್ನ ಪಟ್ಟಿಗೆ ಕೊನೆಯ ಸೀಮೆ ತಲಪಿದ ಭಯಾನಕವಾದ ತಪಸ್ಸಿನ ಒಂದು ರೂಪವೂ ಆಗಿದೆ.

ಪರಮಾತ್ಮನ ಮೇಲಿನ ವಿಶ್ವಾಸಭರವಸಗಳು ಆಂತರಿಕಸಮರ್ಪಣದ ಸಾರತತ್ವವಾಗಿವೆ. ನಾನು ಪರಮಾತ್ಮನನ್ನು ಬೇಡುತ್ತೇನೆ. ಇನ್ನಾವ ವಸ್ತುವನ್ನೂ ಬೇಡುವದಿಲ್ಲ. ನಾನು ನನ್ನನ್ನು ಸಂಪೂರ್ಣವಾಗಿ ಪರಮಾತ್ಮನಿಗೇ ಕೊಟ್ಟುಬಿಡಲು ಇಚ್ಛಿಸುತ್ತೇನೆ. ಹಾಗು ನನ್ನ ಅಂತರಾತ್ಮನು ಪರಮಾತ್ಮನನ್ನು ಪಡೆಯುಬೇಕೆನ್ನುತ್ತಾನೆ. ಅದಕ್ಕಾಗಿ ನಾನು ನಿಶ್ಚಯಪೂರ್ವಕವಾಗಿ ಆತನನ್ನು ಕೂಡಿಕೊಳ್ಳುವೆನು. ಆತನನ್ನು ಪಡೆದುಕೊಳ್ಳುವೆನು. ನಾನು ಇನ್ನೇನು ಬೇಡುವದಿಲ್ಲ. ಅವನನ್ನೇ ಬೇಡುತ್ತೇನೆ ನನ್ನೊಳಗೆ ಆತನ ಕ್ರಿಯೆಗಳನ್ನು ಬೇಡುತ್ತೇನೆ. ಅವುನನ್ನನ್ನು ಆತನವರೆಗೆ ತಲುಪಿಸುತ್ತವೆ. ಆತನ ಕ್ರಿಯೆಗಳು ಗುಪ್ತರೂಪದಲ್ಲಿರಲಿ ಇಲ್ಲವೆ ಪ್ರಕಟರೂಪದಲ್ಲಿರಲಿ ತೆರೆಯು ಹಿಂದೆ ಇರಲಿ ಮುಂದೆ ಇರಲಿ. ಅದು ನನ್ನ ಹೊತ್ತಿಗೆ ನನ್ನ ಪದ್ಧತಿಯಿಂದ ಆಗಲೆಂದು ನನ್ನ ಹಟವಿಲ್ಲ. ನಾನು ಆತನ ಮೇಲೆ ವಿಶ್ವಾಸವಿಡುವೆನು. ಆತನ ಇಚ್ಛೆಯನ್ನು ಸ್ವೀಕರಿಸುವೆನು ನಿತ್ಯ ನಿರಂತರವಾಗಿ ಆತನ ಜ್ಯೋತಿ ಉಪಸ್ಥಿತಿ ಹಾಗೂ ಪ್ರಸನ್ನತೆಗಳ ಸಲುವಾಗಿ ಅಭೀಪ್ಸೆ ಪಡುವೆನು. ಸರ್ವಸಂಕಟಗಳನ್ನೂ ಗಂಡಾಂತರಗಳನ್ನೂ ದಾಟುವೆನು. ಅವನನ್ನೆ ಅವಲಂಬಿಸುವೆನು. ಆತನ ಆಶ್ರಯವನ್ನೆಂದೂ ಕಳಕೊಳ್ಳುವದಿಲ್ಲ. ನನ್ನ ಮನವು ಸ್ಥಿರವಾಗಿ ಬಿಡಲಿ. ಆತನನ್ನು ನಂಬಲಿ. ಹಾಗೂ ಆತನು ತನ್ನ ಬೆಳಕಿನ ಕಡೆಗೆ ತೆರೆದು ಕೊಡಲಿ. ನನ್ನ ಪ್ರಾಣವು ಸ್ಥಿರಗೊಳ್ಳಲಿ. ಆತನ ಕಡೆಗೇ ಮಾತ್ರ ಹೊರಳಲಿ. ಆತನು ತನ್ನ ಶಾಂತಿಆನಂದಗಳ ಕಡೆಗೆ ಉನ್ಮುಕ್ತ ಗೊಳಿಸಿಕೊಡಲಿ. ಎಲ್ಲವೂ ಆತನಿಗಾಗಿ ಸಾಗಲಿ. ಸ್ವತಃ ನಾನು ಆತನಿಗಾಗಿ ಇರಲಿ. ಬೇಕಾದುದಾಗಲಿ ನಾನು ಈ ಅಭಿಪ್ಸೆ ಹಾಗೂ ಆತ್ಮದಾನಗಳನ್ನು ಸ್ಥಿರವಾಗಿಡುವೆನು. ಇದು ಆಗಿಯೇ ತೀರುವದೆಂಬ ಪೂರ್ಣ ವಿಶ್ವಾಸವಿಟ್ಟುಕೊಳ್ಳುವೆನು." ಎಂದು ಸಾಧಕನ ಭಾವವಿರುತ್ತದೆ.

ನಮ್ಮೊಳಗೆ ಅವಶ್ಯವಾಗಿ ಬೆಳೆಯುತ್ತ ಹೋಗಬೇಕಾದ ಭಾವವು ಇದೇ ಆಗಿದೆ. ಯಾಕಂದರೆ ಈ ಭಾವವನ್ನು ನಿಸ್ಸಂದೇಹವಾಗಿ ಯಾರೂ ಒಮ್ಮೆಲೆ ಪೂರ್ಣಗೊಳಿಸಲಾರರು. ಮಾನಸಿಕ ಪ್ರಾಣಿಕ ಗತಿಗಳು ನಡುವೆ ಬಂದು ನಿಲ್ಲುತ್ತವೆ. ಆದರೆ ಇದಕ್ಕಾಗಿ ಯಾರಾದರೂ ಸಂಕಲ್ಪಿಸಿದ್ದಾದರೆ ಅವು ನಮ್ಮೊಳಗೆ ಬೆಳೆಯುತ್ತಲೇ ಇರುವವು. ಆ ತರುವಾಯದ ಪ್ರಮುಖ ಸಂಗತಿಯೇದರೆ ನಮಗೆ ಮಾರ್ಗದರ್ಶನ ದೊರಕಿದಾಗ (ನಮ್ಮ

ಸಲುವಾಗಿ ಪರಮಾತ್ಮನ ಆದೇಶವೇನೆಂಬ ಮಾತು ನಮ್ಮೆದುರಿಗೆ ಸ್ವಯಂ ಪ್ರಕಟವಾದಾಗ) ನಾವು ಅದನ್ನು ಪಾಲಿಸತಕ್ಕದ್ದು. ನಮ್ಮ ಮನ ಹಾಗೂ ಪ್ರಾಣಗಳ ಗತಿಗಳಿಗೆ ಅದರಲ್ಲಿ ಕೈಹಾಕಗೊಡಬಾರದು.

ಇದೊಂದೇ ಪದ್ಧತಿಯಿಂದೆಯೆಂದೂ ಇನ್ನೊಂದು ಪದ್ಧತಿಯಿಂದ ಸಾಧನವು ಆಗಲೇ ಕೂಡದೆಂದೂ ನಾನು ಹೇಳುವದಿಲ್ಲ. ಸಾಧನ ಪದ್ಧತಿಗಳು ಇನ್ನೂ ಎಷ್ಟೋ ಇವೆ. ಅವುಗಳಿಂದ ಮನುಷ್ಯನು ಪರಮಾತ್ಮನ ಬಳಿಗೆ ಹೋಗಬಲ್ಲನು. ಆದರೆ ನಾನು ತಿಳಿದಮಟ್ಟಿಗೆ ಇದೇ ಏಕಮಾತ್ರ ಉಪಾಯವಾಗಿದೆ. ಅದರಿಂದ ಪ್ರಕೃತಿಯು ಸಿದ್ಧತೆಯಾಗಿ ಬಿಡುವ ಮೊದಲೇ ಪರಮಾತ್ಮನು ಸಾಧನದ ಭಾರವನ್ನು ತನ್ನ ತಲೆಯಮೇಲೆ ತೆಗೆದುಕೊಂಡಿದ್ದಾನೆಂಬ ಮಾತು ಕಂಡುಬರುತ್ತದೆ. ಬೇರೆ ಬೇರೆ ಪದ್ಧತಿಗಳಲ್ಲಿ ಪರಮಾತ್ಮನ ಕ್ರಿಯೆಯು ಒಮ್ಮೊಮ್ಮೆ ಅನುಭವಕ್ಕೆ ಬರಬಲ್ಲದು. ಆದರೆ ಅವು ಹೆಚ್ಚಾಗಿ ತೆರೆಯ ಹಿಂದೆ ಇರುವವರೆಗೆ ಎಲ್ಲವೂ ಸಿದ್ಧವಾಗಿ ಬಿಡಲಾರವು. ಕೆಲವೊಂದು ಸಾಧನಗಳಲ್ಲಿ ಭಾಗವತ ಕ್ರಿಯೆಗಳ ಸ್ವೀಕಾರವನ್ನೂ ಮಾಡಲಾಗಿಲ್ಲ. ಎಲ್ಲವನ್ನೂ ತಪಸ್ಸಿನಿಂದಲೇ ಮಾಡಲಾಗುತ್ತಿದೆ. ಹೆಚ್ಚಾದ ಸಾಧನಗಳಲ್ಲಿ ಎರಡರ ಬೆರಕೆಯುಂಟಾಗುತ್ತದೆ. ತಪಸ್ಸು ಕೊನೆಯಲ್ಲಿ ನೇರವಾದ ಸಹಾಯವನ್ನೂ ಕಾಣದ ಕೈಯನ್ನೂ ಕರೆಯುತ್ತದೆ. ಪರಮಾತ್ಮನೇ ಎಲ್ಲವನ್ನೂ ಮಾಡುತ್ತಿದ್ದಾನೆಂಬ ಭಾವನೆ ಹಾಗೂ ಅನುಭವಗಳು ಆತ್ಮ ಸಮರ್ಪಣವನ್ನು ಆಶ್ರಯಿಸಿದ ಯೋಗದೊಡನೆಯೇ ಸಂಬಂಧವಿರಿಸಿ ಕೊಂಡಿರುತ್ತವೆ. ಆದರೆ ಅದಾವ ಪದ್ಧತಿಯನ್ನು ಅನುಸರಿಸಿದರೂ ಅದಾವ ಒಂದು ಮಾತು ಮಾಡಬೇಕಾಗುವದೆಂದರೆ ಏಕನಿಷ್ಠನಾಗಿರುವುದು, ಹಾಗೂ ಕೊನೆಯ ವರೆಗೆ ಪ್ರಯತ್ನಶೀಲನಾಗಿರುವುದು.

ಎಲ್ಲವನ್ನೂ ಪರಮಾತ್ಮನು ಮಾಡಬಲ್ಲನು. ಹೃದಯವನ್ನೂ ಸ್ವಭಾವವನ್ನೂ ಶುದ್ಧಗೊಳಿಸಬಲ್ಲನು. ಆಂತರಿಕಚೇತನವನ್ನು ಜಾಗ್ರತಗೊಳಿಸಬಲ್ಲನು. ತೆರೆಯನ್ನು ತೆಗೆಯಬಲ್ಲನು. ವಿಶ್ವಾಸ-ಭರವಸೆಗಳನ್ನಿಡುತ್ತ ಯಾರಾದರೂ ತನ್ನನ್ನು ತಾನ ಪರಮಾತ್ಮನ ಕೈಯಲ್ಲಿ ಒಪ್ಪಿಸಿಕೊಟ್ಟರೆ, ಇಲ್ಲವೆ ಯಾರಾದರೂ ಒಮ್ಮೆಲೆ ಹೀಗೆ ಸಂಪೂರ್ಣವಾಗಿ ಮಾಡಲು ಸಾಧ್ಯವಾಗದಿದ್ದರೆ ಆಗ ಸಹ ಅವನು ಅದೆಷ್ಟು ಹೆಚ್ಚು ಹಾಗೆ ಮಾಡುವನೋ ಅಷ್ಟೆ ಹೆಚ್ಚು ಅವನಿಗೆ ಒಳಗಿನ ಸಹಾಯವೂ ಮಾರ್ಗದರ್ಶ

ಸವೂ ಪ್ರಾಪ್ತವಾಗುತ್ತವೆ. ಸಂಧಿಗ್ಧ ಮನದ ಕ್ರಿಯೆಗಳು ಕಡಿಮೆಯಾಗಿ ವಿನಮ್ರತೆಯೂ ಸಮರ್ಪಣೇಚ್ಛೆಯೂ ಬೆಳೆಯುತ್ತಲಿದ್ದರೆ, ಆ ಆತ್ಮಸ ಮರ್ಪಣವಾಗುವ ಸಂಭವವು ಸಂಪೂರ್ಣವಾಗುತ್ತದೆ. ಆ ಸಮಯಕ್ಕೆ ಇನ್ನಾವ ಸಾಮರ್ಥ್ಯ ಹಾಗೂ ತಪಸ್ಸುಗಳ ಅವಶ್ಯಕತೆ ಉಳಿಯಲಾ ರವು. ಅದೇ ಅನಿವಾರ್ಯವಾಗಿದೆ. (ಶ್ರೀಅರವಿಂದರು)



## ಅಯ್ಯನವರ ಗೋಳಾಟ

(ಲೇ;— ಶ್ರೀ ಶಿವಾನಂದ ಸ್ವಾಮಿಗಳು ಗವಿಮಠ, ತೆಗ್ಗಿಹಳ್ಳಿ, ತಾ॥ ಇಂಡಿ)



ವೀರಶೈವ ಸಮಾಜದಲ್ಲಿ ಅನೇಕ ಒಳಪಂಗಡಗಳುಂಟು. ವೀರ ಶೈವರಲ್ಲಿ ಜಾತಿಗಳಿಲ್ಲೆಂದು ಹೆಸರಿಗೆ ಹೇಳುವರು. ಮಹಾ ಮಹಿಮರಾದ ಶರಣರ ಸಮತ್ವದ ಉದಾಹರಣೆಗಳನ್ನು ಮಾತ್ರ ಕೊಡುತ್ತಿರುವರು. ಆದರೆ ಜಾತಿಭೇದವನ್ನು ಯಾರೂ ಬಿಟ್ಟಂತೆ ತೋರುವದಿಲ್ಲ. ಇವೆಲ್ಲ ಜಾತಿಗಳು ಅವರವರ ಉದ್ಯೋಗದಿಂದಲೇ ಬಂದಿವೆ ಎಂದು ಪ್ರತಿಯೊ ಬ್ಬರಿಗೆ ಅನಿಸದಿರಲಾರದು. ವ್ಯಾಪಾರ ಮಾಡಿ ಬಣಜಿಗನಾದ, ಗಾಣ ನೆಕ್ಕಿ ಗಾಣಿಗನಾದ, ಬೀಸಿ ಮಡಿವಾಳನಾದ, ಕಾಸಿ ಕಂಬಾರನಾದ, ನೇದು ಜೇಡನಾದ, ತೋಟ ಮಾಡಿ ಮಾಲಗಾರನಾದ, ಗೊಂದಲ ಹಾಕಿ ಗೋಂಧಳಿ ಆದ, ಕುಂಭ ಮಾಡಿ ಕುಂಬಾರನಾದ, ಒಕ್ಕಲತನ ಮಾಡಿ ಒಕ್ಕಲಿಗನಾದ, ಮುಸುರಿ ತೊಳೆದು ತಳವಾರನಾದ, ಉಪ್ಪ ಮಾಡಿ ಉಪ್ಪಾರನಾದ ವೇದವನೋದಿ ಹಾರುವನಾದ, ಬೇಡಿಕೊಂಡು ಅಯ್ಯೋ ಎಂದು ಗೋಳಾಡಿ ಅಯ್ಯನಾದನೆಂದು ಹೇಳಬಹುದೆಂದು ಅನಿಸುವದು. ಇವರಲ್ಲಿ ಉದ್ಯೋಗ ಮಾಡಿ ಆರ್ಥಿಕ ಪರಿಸ್ಥಿತಿಯನ್ನು ಸಾಧಾರಣ ಸರಿ ಯಾಗಿ ಇಟ್ಟುಕೊಂಡವರು ಹೆಚ್ಚು. ಆದರೆ ನಮ್ಮ ಅಯ್ಯನವರ ಸ್ಥಿತಿ ಮಾತ್ರ ನಿಜವಾಗಿ ಶೋಚನೀಯವಾಗಿದೆ. ಯಾಕಂದರೆ ಇವರು ಸರಿ ಯಾಗಿ ಸರಿಯಾದ ಉದ್ಯೋಗ ಮಾಡುವದಿಲ್ಲ. ಬರೀ ಬೇಡಿಕೊಂಡು ಉದರಪೋಷಣೆ ಸಾಗಿಸುವದರಲ್ಲೇ ತೊಡಗಿರುವರು. ಬರೀ ಬೇಡಿಕೊಂಡರೆ

ಇವರಿಗೆ ಹೊಟ್ಟೆಬಟ್ಟೆಗೆ ಸಹ ಸಾಲುವದಿಲ್ಲ. ಹೀಗಾದ ಮೇಲೆ ಇವರ ಆರ್ಥಿಕ ಪರಿಸ್ಥಿತಿ ಹೇಗೆ ಸುಧಾರಿಸಬೇಕು? ಈ ಬೇಡಿಕೊಳ್ಳುವ ಪ್ರಕಾರವನ್ನು ಸ್ವಲ್ಪ ವಿವರಿಸುವೆನು.

ಮುಂಜಾನೆ ಎದ್ದು ಕೂಡಲೆ ಕೋರಾನ್ ಭಿಕ್ಷೆ ಬೇಡುವರು. ಕೆಲವರು ಸೈಪಾಕ ಬೇಡಿಕೊಳ್ಳುವರು. ಎಲ್ಲ ಜಾತಿಯ ಮನೆ ಮನೆ ತಿರುಗುವರು. ಕೆಲವರು ನೀಡುವರು, ಕೆಲವರು ಶಗಣಿಯಲ್ಲಿ ಕೈಹಾಕಿಕೊಂಡು ಕೂಡುವರು. ಕೆಲವರು ಜೋಳವಿಲ್ಲೆಂದು ಹೇಳುವರು. ಕೆಲವರು ಇನ್ನೂ ಬೀಸಿಲ್ಲವೆಂದು ಹೇಳುವರು. ಕೆಲವರು ಬಾಗಿಲವನ್ನೇ ಹಾಕಿಕೊಳ್ಳುವರು. ಇಷ್ಟೆಲ್ಲ ಮಾಡಿದರೂ ನಾಚಿ ಬಿಟ್ಟು ಬೇಡುವದನ್ನೇ ಬಿಡುವದಿಲ್ಲ. ಕೆಲವರು ಚಾಳಿಸಿದ ಬಳಿಕ ಉಳಿಯುವ ಗೊಳ್ಳನ್ನೇ ನೀಡುವರು. ಕೆಲವು ಶಿರಿವಂತರ ಮನೆಯಲ್ಲಿ ಚಿಕ್ಕ ಬಾಯಿಯುಳ್ಳ ಕಟ್ಟಿಗೆಯ ಚಿಕ್ಕ ಆಕಾರದ ಆಳವಾದ ಗಡಿಗೆಯಲ್ಲಿ ಸ್ವಲ್ಪ ಹಿಟ್ಟನ್ನು ಹಾಕಿ ಇಟ್ಟಿರುವರು. ತಾವೇ ಅದರಲ್ಲಿ ಮೂರೇ ಬೆರಳುಗಳಿಗೆ ಬರುವಷ್ಟು ಹಿಟ್ಟನ್ನು ಮಾತ್ರ ನೀಡಿಕೊಳ್ಳುವರು. ಅಷ್ಟರ ಸಲುವಾಗಿ ಆ ಮನೆಗೆ ಹೋಗುವರು. ಹೋಗದಿದ್ದರೆ ಅಯ್ಯನು ಬಹು ಸೊಕ್ಕಿಗೆ ಬಂದಿರುವನು ಎಂದು ಬೈಸಿಕೊಳ್ಳಬೇಕಾಗುವದು. ಹೀಗೆ ಮನೆ ಮನೆ ಆರು ತಾಸಿನ ತನಕ ತಿರುಗಿ ಹೋದಮೇಲೆ ಅಡಿಗೆ ಮಾಡುವರು. ಅದಕ್ಕೂ ಮೊದಲು ಅವರೆಲ್ಲರೂ ಚಹಾ ಕುಡಿದೇ ಬೇಡಿಕೊಳ್ಳಲು ಹೊರಡುವರು. ಮನೆಯಲ್ಲಿಯ ಹೆಂಡಿರು ಮಕ್ಕಳು ಸಹ ಚಹಾ ಕುಡಿದೇ ಕೂಡ್ರುವರು. ಹೀಗಾದರೆ ಇವರ ಸ್ಥಿತಿ ಹೇಗೆ ಸುಧಾರಿಸಬೇಕು? ಮನೆಯಲ್ಲಿ ಹಿರಿಯರಿಲ್ಲದಿದ್ದರೆ ಸಣ್ಣ ಹುಡುಗರೇ ಬೇಡಿಕೊಳ್ಳಲಿಕ್ಕೆ ಹೋಗುವರು; ಅದರಿಂದ ಅವರಿಗೆ ಶಿಕ್ಷಣ ದೊರೆಯದೆ ಬಹುಜನ ಅಯ್ಯಗಳು ಹೆಡ್ಡರಾಗಿದ್ದಾರೆ. ಆರ್ಥಿಕ ಸ್ಥಿತಿ ಚನ್ನಾಗಿಲ್ಲಾರದ್ದಕ್ಕಾಗಿ ಹೆಚ್ಚಿನ ಶಿಕ್ಷಣಕ್ಕೆ ಹೋಗುವದೂ ಬಹುತರ ಕಡಿಮೆ. ಕೆಲವರು ಮಾತ್ರ ವಾರದ ಮನೆಗಳನ್ನು ಹಚ್ಚಿಕೊಂಡು ಬೇಡಿಕೊಂಡು ಮಾತ್ರ ಕಲಿತು ನೌಕರಿ ಮಾಡುತ್ತಿರುವರು. ಆದರೂ ಅವರು ತಮ್ಮ ಸಂಸಾರ ಸಾಗಿಸುವದರಲ್ಲೇ ಅದೆಲ್ಲ ಖರ್ಚಾಗುವದು. ಹೀಗಾಗಿ ಯಾವ ಅಯ್ಯಗಳ ಆರ್ಥಿಕ ಪರಿಸ್ಥಿತಿ ಚನ್ನಾಗಿಲ್ಲ.

ಕೆಲವರು ಸಾರುವದನ್ನೂ, ಒಡಬ ಹೇಳುವದನ್ನೂ, ಮುಳ್ಳಾವಿಗೆ ಮೇಲೆ ನಿಂತು ಬೇಡುವದನ್ನೂ ಮಾಡುವರು. ಕೆಲವರು ಗಂಟೆಯ್ಯ ಕಾಯಕ ಮಾಡುವರು. ಕೆಲವರು ತೆಕ್ಕಿ ಕಾಯಕ ಮಾಡುವರು. ಕೆಲ

ವರು ಗದ್ದಿಗೆ ಹಾಕಿಕೊಂಡು ಇಂತಿಷ್ಟು ಕೊಟ್ಟರೆ ಏಳುವೆನೆಂದು ಉಪವಾಸ ಸಾಯುವರು. ಕೆಲವರು ಶಂಖನೂದಿ ಬೇಡಿಕೊಳ್ಳುವರು. ಕೆಲವರು ಪೂಜೇರಿಗಳಾಗಿ ಬೇಡುವರು. ಅಯ್ಯನವರಿಗೆ ಇವುಗಳ ಹೊರತು ಯಾವ ಉದ್ಯೋಗಗಳೇ ಇಲ್ಲ. ಅಂದಮೇಲೆ ಇವರ ಆರ್ಥಿಕ ಪರಿಸ್ಥಿತಿ ಹೇಗೆ ಸುಧಾರಿಸಬೇಕು ? ಈಗಿನ ಕಾಲದಲ್ಲಿ ಅಯ್ಯನವರು ಗುರುಗಳ ಹೆಚ್ಚಿನವರೆಂದು ಹಿಂದಿನ ಕಾಲದಂತೆ ಬೇಡಿಕೊಂಡೇ ಪ್ರತಿಷ್ಠೆ ಪಡೆವೆನೆಂದರೆ ಆಗದು. ಬಸವಣ್ಣನವರ ಉದಾಹರಣೆಗಳನ್ನು ಹೇಳಿ ಒಂದು ಲಕ್ಷ ತೊಂಭತ್ತಾರು ಸಾವಿರ ಗಣಂಗಳಿಗೆ ನಿತ್ಯ ಭೋಜನ ಮಾಡಿಸುತ್ತಿದ್ದನು. ಐಯ್ಯನವರಿಲ್ಲದೆ ಯಾರೂ ಎಂದೂ ಹಿಂದೆ ಒಂದು ತುತ್ತನ್ನು ಹಾಕುತ್ತಿದ್ದಿಲ್ಲ ಎಂದು ಹೇಳಿ ಊಟ ಹೊಡೆಯುವ ಕಾಲ ಇದಲ್ಲ. ಎಲ್ಲರೂ ಈಗ ಸುಧಾರಿಸಹತ್ತಿದ್ದಾರೆ. ಆದರೆ ಈ ನಮ್ಮ ಅಯ್ಯನವರು ಮಾತ್ರ ಇನ್ನೂ ಬೇಡಿಕೊಂಡು ತಿನ್ನುವದರಿಂದ ಮುಂದೆ ಹೋಗಲೇ ಇಲ್ಲ. ಹೀಗಾದರೆ ಇವರ ಆರ್ಥಿಕ ಪರಿಸ್ಥಿತಿ ಹೇಗೆ ಸುಧಾರಿಸಬೇಕು ? ಸಮಾಜದಲ್ಲಿ ಹೆಚ್ಚಿಗೆ ಹೇಗೆ ಮಾನಮನ್ನಣೆ ಹೊಂದಬೇಕು ವಿಚಾರಿಸಿರಿ.

ಇವರ ಮನೆಗಳು ದೊಡ್ಡವಿರುವದಿಲ್ಲ. ಬಹುತರ ಸಣ್ಣ ಮನೆಗಳೇ ಹೆಚ್ಚು. ಹಿರೇಮಠಕ್ಕೆ ಮಾತ್ರ ಬಹತರ ಕರೇಕಲ್ಲಿನ ದೊಡ್ಡ ಬಾಗಿಲು ಮಾತ್ರ ಇರುವದು. ಬಾಗಿಲ ನೋಡಿ ಮನೆ ದೊಡ್ಡದೆಂದು ಒಳಗೆ ಹೋದರೆ ತೀರಿಹೋಯಿತು. ಹಿಂದಿನದೆಲ್ಲ ಬಿದ್ದು ಮುಂದೆ ಮುಂದೆ ಬಂದು ವಾಸ ಮಾಡಿರುವರು. ಅಲ್ಪಸ್ವಲ್ಪ ಹೊಲಗಳಿದ್ದರೆ ಅವೆಲ್ಲ ಕರಿಕೆ ಹತ್ತಿ ಏನೂ ಬೆಳೆಯುವವೇ ಇಲ್ಲ. ಬೇಡಿಕೊಳ್ಳುವದರಲ್ಲೇ ಇವರ ಆಯುಷ್ಯ ಹಾಳಾದ ಮೇಲೆ ಹೊಲಕ್ಕೆ ಯಾರು ಹೋಗಬೇಕು ? ಅದನ್ನು ಯಾರು ಸ್ವಚ್ಛ ಮಾಡಬೇಕು ? ಇವರಿಗೆ ಬೇಡಿಕೊಳ್ಳುವದರಿಂದ ಹೊಟ್ಟೆಗೆ ಸಾಲದಾಗಲು ಕೆಲವರು ಚಹಾದ ಅಂಗಡಿಗಳನ್ನೂ ಖಾನಾವಳಿಗಳನ್ನೂ ಇಟ್ಟುಕೊಂಡಾಗಲಿ, ಅವುಗಳಲ್ಲಿ ನೌಕರಿ ಮಾಡಿಕೊಂಡಾಗಲೀ ಹೊಟ್ಟೆ ಸಾಗಿಸುವರು. ಗುರುವರ್ಗವೆನಿಸಿಕೊಳ್ಳುವವರು ಮಾಡುವ ಉದ್ಯೋಗಗಳೆಂದು ಅನ್ಯರು ಕೇಳಿದರೆ ನಗುವರು. ರಾತ್ರಿಯ ಕಾಲಕ್ಕೆ ಕಣಗಳಿಗೆ ಹೋಗಿ ಬೇಡಿಕೊಂಡು ತರುವರು. ಅದೆಲ್ಲ ತಂದದ್ದು ಬೀಡಿ ಚಹಾಗಳಿಗೇ ಹೋಗುವದು. ಕೆಲವರಂತೂ ಗಾಂಜಿ ದಾರೂ ಸಹ

ಹೊಡೆಯುವರು ಇವೆಲ್ಲ ಚಟಗಳು ಸರಿಯಾಗಿ ಉದ್ಯೋಗ ಮಾಡಲಾರದಕ್ಕಾಗಿ ಬಂದು ಸೇರಿಕೊಳ್ಳುವವು. ಉದ್ಯೋಗಿಯಾದವನನ್ನು ಯಾವ ದುಶ್ಚಟಗಳೂ ಬಂದು ಸೇರುವದಿಲ್ಲ. ಹಾಳಾಗುವದು ಉಳಿಯುವದು. ಅಲ್ಲದೆ ಉತ್ಪನ್ನವೂ ಹೆಚ್ಚಿಗೆ ಸಿಗುವದು. ಅಂದರೆ ಅವರ ಆರ್ಥಿಕ ಪರಿಸ್ಥಿತಿಯು ಸುಧಾರಿಸಿ ಅಯ್ಯೋ ಅಯ್ಯಾ ಎಂಬ ಗೋಳಾಟದಿಂದ ಸಹಜ ಪಾರಾಗಬಲ್ಲರು. ಈ ಬೇಡಿಕೊಳ್ಳುವ ಕೆಟ್ಟ ಚಟದಿಂದ ಮೊದಲು ದೂರ ಸರಿಯಬೇಕು. ಉದ್ಯೋಗ ಮಾಡಬೇಕು. ಉಚ್ಚ ಶಿಕ್ಷಣಪಡೆಯಬೇಕು. ಶಾಸ್ತ್ರಾಭ್ಯಾಸ ಮಾಡಿ ತ್ಯಾಗ ವೈರಾಗ್ಯ ಪಡೆದು ಗುರುತ್ವವನ್ನು ಪಡೆದು ಗುರುಗಳಾದರೆ ಮಾತ್ರ ಅವನ ಗೋಳಾಟ ಹೋಗುವದಲ್ಲವೆ ಯಾತರಿಂದಲೂ ಹೋಗುವದಿಲ್ಲ.

ಇನ್ನು ಕೆಲವರು ಚೀಟಿಕಟ್ಟುವದು ಹೊತ್ತಿಗೆ ಹೇಳುವವು, ರಮಲ ಹೇಳುವದು, ಯಂತ್ರ ತಾಯಿತ ಮಾಡುವದು, ಮೆಚ್ಚುಮುಷ್ಟು ಚೇಡಿನಗ್ಗೆರೆ ಮಾಡುವದು, ಭೂತ ಬಿಡಿಸುವದು. ಇಂಥ ಅನೇಕ ಹೀನ ಕೆಲಸಗಳನ್ನೂ ಮಾಡಿ ಹೊಟ್ಟೆ ಹೊರಕೊಳ್ಳುವರು. ಹೀಗಾದರೆ ಅಯ್ಯನವರು ಏನುಮಾಡಬೇಕು? ಏನು ಮಾಡಬಾರದೆಂಬುದನ್ನು ಅರಿಯದೆ ಹೊಟ್ಟೆ ಹೊಟ್ಟೆ ಬಟ್ಟೆ ಎಂದು ಗೋಳಾಡಿ ಗೋಡಿಗೆ ಹಾಯುತ್ತಿರುವರು. ಇವರಲ್ಲಿ ಯಾವ ತರಡ ಧಾರ್ಮಿಕ ಪ್ರವೃತ್ತಿ ಇಲ್ಲ. ಏನಾದರೂ ಮಾಡಿ ಹೇಗಾದರೂ ಮಾಡಿ ಹೊಟ್ಟೆ ಹೊರಕೊಳ್ಳಬೇಕೆಂದು ವಿಚಾರದ ಹೊರತು ಸರಿಯಾಗಿ ಉದ್ಯೋಗ ಮಾಡಿ ಧರ್ಮವೇತ್ತನಾಗಿ ಸಮಾಜದಲ್ಲಿ ಮಾನ ಪಡೆಯಬೇಕೆಂದು ಬಯಸುವದಿಲ್ಲ. ಯಾವ ಗುಣಗಳಿಲ್ಲದೆ ಗುರುಗಳೆನಿಸಿಕೊಳ್ಳಬಯಸಿ ನಿತ್ಯ ಅಪಮಾನವನ್ನು ಈ ಸಮಾಜದವರು ಹೊಂದುತ್ತಿರುವರು. ಇದರ ಅರಿವೆ ಅವರಿಗೆ ಇಲ್ಲವೇ ಇಲ್ಲ. ಹಿಂದಿನಂತೆ ಪಾದೋದಕ ಕೊಟ್ಟು ಮನೆಮನೆ ಉಂಡು ಅಯ್ಯನವರೆಂದು ಅನಿಸಿಕೊಂಡು ಹೋಗುವ ಕಾಲವಿದಲ್ಲ. ಲಮಾಣಿ, ಹರಿಜನ, ಹರಣಶಿಕಾರಿ ಗುಡ್ಡಗಾಡ ಕುರುಬ ಮೊದಲಾದವರು ಭರದಿಂದ ಸುಧಾರಿಸಿ ಮುಂದುವರಿದಿದ್ದಾರೆ. ಹೀಗಿದ್ದರೂ ನಮ್ಮ ಅಯ್ಯನವರೂ ಇನ್ನು ಹಳೇ ಕೌದಿಯನ್ನೇ ಹೊದ್ದುಕೊಂಡು ನಿದ್ರೆ ಮಾಡುತ್ತಿರುವದು ಬಹು ಶೋಚನೀಯಯವೇ ಸರಿ. ಇನ್ನು ನಿದ್ರೆಯಿಂದ ಎಚ್ಚತ್ತು ಸುಧಾರಿಸಬೇಕು. ಎಲ್ಲಯಾದರೂ ಸರಿ ಉದ್ಯೋಗ ಮಾಡಬೇಕು. ಒಕ್ಕಲತನ

ವ್ಯಾಪಾರ, ನೌಕರಿ ಮಾಡಬೇಕು. ಕಲೆಗಳನ್ನು ಕಲಿತು ಕಲಾವಂತರಾಗಬೇಕು. ಉಳಿದ ನಮ್ಮ ಸಮಾಜದವರು ಅವರ ಉದ್ಯೋಗಗಳಿಗೆ ಸರಿಯಾದ ನೆರವನ್ನು ನೀಡಿ ಅವರ ಆರ್ಥಿಕ ಪರಿಸ್ಥಿತಿ ಸುಧಾರಿಸುವಂತೆ ಯತ್ನ ಮಾಡಬೇಕು. ಕಾಯಕವೇ ಕೈಲಾಸವೆಂದುದರ ಅರ್ಥವನ್ನು ಸರಿಯಾಗಿ ಮಾಡಿಕೊಂಡು ನಡೆದರೆ ಸಮಾಜಕ್ಕೂ ದೇಶಕ್ಕೂ ಕಲ್ಯಾಣ. ಈ ಬೇಡಿಕೊಳ್ಳುವ ಯಾವ ವ್ಯಕ್ತಿಗಳನ್ನು ಎಂದೂ ಕೈಕೊಳ್ಳಬಾರದು. ತ್ಯಾಗಿ, ಯೋಗಿ, ಸನ್ಯಾಸಿಗಳಾದರೆ ಅಂಥ ಪ್ರಸಂಗ ಬಂದರೆ ಮಾತ್ರ ಬೇಡಿಕೊಳ್ಳಬಹುದು. ಅವರೂ ಕೂಡ ಕಾಯಕವನ್ನೇ ಮಾಡಿ ಸನ್ಯಾಸಿಗಳಾದರೆ ಬಹು ಸುಖವೇ ಸರಿ. ಧರ್ಮವು ಬೇಡಿಕೊಳ್ಳುವದು ಎಂದು ಇವರು ತಿಳಿದಂತೆ ತೋರುವದು. ಇದೆಂದೂ ಧರ್ಮವಲ್ಲ. ಅವರು ಧರ್ಮಾತ್ಮರೂ ಆಗುವದಿಲ್ಲ.

——o——

## ಶೋಧನೆ

ಬಗೆಬಗೆಯ ಲೀಲೆಯಲಿ ಬ್ರಹ್ಮಾಂಡ ತುಂಬಿರುವ
ಜಗದೀಶ ನಿನ್ನನ್ನು ನೋಡಲೆಂದು
ಹಗಲಿರುಳು ಹುಡುಕುತ್ತ ಮುಗಿಲಲ್ಲಿ ನೋಡುತ್ತ
ಹಂಬಲಿಸಿ ಅಲ್ಲಲ್ಲಿ ಅಲೆಯುತಿರುವೆ
ಕಾನನದಿ ನೋಡಿದೆನು ಕಾಂತಾರ ತಿರುಗಿದೆನು
ಆತುರದಿ ನಿನ್ನನ್ನು ಕಾಣಲೆಂದು
ಜಲದೊಳಗೆ ಮುಳುಗಿದೆನು ಎಲರಲ್ಲಿ ಹುಡುಕಿದೆನು
ಅಲರಲ್ಲಿ ನಿನ್ನನ್ನು ಶೋಧಿಸಿದೆನು
ಬನದಲ್ಲಿಸುತ್ತಿದೆನು ಬಾನಿನಲಿ ತಿರುಗಿದೆನು
ಘುಮುಹಿನು ನೀನೆಲ್ಲಿ ಅಡಗಿರುವೆಯೋ
ಅಲ್ಲಲ್ಲಿ ಹುಡುಕಿದೆನು ಬಲ್ಲವರ ಕೇಳಿದೆನು
ಎಲ್ಲರೂ ನಿನ್ನನ್ನು ಅರಿಯೆವೆನಲು
ಏಕಾಂತದೊಳು ಕುಳಿತು ಲೋಕೇಶ ಕಂಡೆನೈ
ಎನ್ನೊಳಗೆ ದೇವ ನೀನಿರುವೆಯಲ್ತೆ?
ಇಂತಿರಲು ಕಾಣದಿಹ ಪರಮಾತ್ಮನಿನ್ನಿಂದ
ಸೋಜಿಗವು ಜಗದಿ ಬೇರೊಂದು ಇಹುದೆ?

— ಶ್ರೀ ಆನಂದ ಕವಿಗಳು ಕುರುಗುಂದ

# ಆದರ್ಶ ಗೃಹಿಣಿ

(ಲೇಃ— ಶ್ರೀ ಗೋದಾತಾಯಿ ಗವಿವಾಡ ತೆಗ್ಗಿಹಳ್ಳಿ ತಾಲೂಕ ಇಂಡಿ)



ಹೆಣ್ಣುಮಕ್ಕಳು ಜನಿಸಿದ ಕೂಡಲೆ ಚಿಕ್ಕಂದಿನಲ್ಲೇ ಆದರ್ಶ ಗ್ರಹಿಣಿಯಾಗುವಂತೆ ತಕ್ಕಷ್ಟು ಶಿಕ್ಷಣವನ್ನು ಕೊಡಬೇಕು. ನೌಕರಿಗಾಗಿ ಯಾವ ಶಿಕ್ಷಣದ ಅವಶ್ಯಕತೆ ಇಲ್ಲ. ಹೆಣ್ಣುಮಕ್ಕಳಿಗೆ ನೀತಿಜ್ಞಾನ ಭಕ್ತಿ ತ್ಯಾಗದ ಪುಸ್ತಕಗಳನ್ನು ಓದಲಿಕ್ಕೆ ಕೊಡಬೇಕು. ಕಾದಂಬರಿಗಳನ್ನೆಂದೂ ಓದಗೊಡಬಾರದು. ಶ್ರಿಂಗಾರದ ಸಿನೇಮಾಗಳಿಗೆ ಕಳಿಸಬಾರದು ೧೫—೧೬ ವರ್ಷದ ತನಕ ಆದರ್ಶಗ್ರಹಿಣಿಯಾಗುವಂತೆ ತಾಯಿ ತಂದೆಗಳು ಯತ್ನಿಸಬೇಕು. ಸ್ವಚ್ಛತೆ ಅಡಿಗೆ ಹೊಲಿಗೆಗಳನ್ನು ತಕ್ಕಷ್ಟು ಕಲಿಸಬೇಕು. ಅವರು ತಮ್ಮ ಪತಿಯನ್ನು ತಾವೇ ಆರಿಸಿಕೊಳ್ಳುವಂತೆ ಪ್ರೋತ್ಸಾಹ ಕೊಡಬೇಕು. ಅವರು ಪತಿಯ ಮನೆಗೆ ಹೋಗುವ ಕಾಲಕ್ಕೆ ಅವರಿಗೆ ಪತಿವ್ರತೆಯ ಬಗ್ಗೆ ಸರಿಯಾಗಿ ತಿಳಿಸಿ ಹೇಳಬೇಕು ಅಲ್ಲಿ ಎಲ್ಲರೊಡನೆ ಹೇಗೆ ನಡೆಯಬೇಕೆಂಬುದನ್ನು ಸರಿಯಾಗಿ ತಿಳಿಸಬೇಕು ಆದರೆ ಕೆಲವು ಹೆಣ್ಣುಮಕ್ಕಳು ಗಂಡನಮನೆಗೆ ಹೋಗುವಾಗ ಅಳುತ್ತ ತನಗೆ ತೀವ್ರ ಕರೆಯಲಿಕ್ಕೆ ಬರುವಂತೆ ಹೇಳಿ ವಿಚಾರವಿಲ್ಲದೆ ಗೋಳಾಡುತ್ತಲೇ ಅತ್ತೆಯಮನೆಗೆ ಹೋಗುವರು. ಹೀಗಾಗಿ ಅವರು ತಾಯಿ ತಂದೆಯ ಮನೆಯನ್ನೇ ನೆನಿಸುವರು ಹೀಗಾದರೆ ಮುಂದೆ ಅವರು ಆದರ್ಶ ಗ್ರಹಿಣಿಯರು ಹೇಗೆ ಆಗುವರು? ಇಂಥವರು ಅಯೋಗ್ಯರೇಸರಿ. ಹೀಗೆ ಮಾಡದೆ ಪತಿಯೊಡನೆ ಭಕ್ತಿ ವಿನಯ ನಮ್ರತೆಯಿಂದ ಆತನ ಸೇವೆಯನ್ನು ಮಾಡಬೇಕು. ಗಂಡನೇ ದೇವರೆಂದು ಆತ್ಮನ ಕುರಹು ಎಂದು ನಿಷ್ಕಾಮವಾಗಿ ಸೇವೆಮಾಡಬೇಕು. ಗ್ರಹಿಣಿಯು ಮನೆತನಕ್ಕೆ ಕೀರ್ತಿಯಾಗುವಂತೆ ಸುಶಿಕ್ಷಿತಳೂ, ಸುಶೀಲಳೂ, ಕಾರ್ಯತತ್ಪರಳೂ, ಹಸನ್ಮುಖಿಯೂ, ಗುರುಹಿರಿಯರಲ್ಲಿ ವಿನಯದಿಂದ ನಡಕೊಳ್ಳುವವಳೂ, ಮನೆಯಲ್ಲಿ ಶಾಂತಿಕಾಂತಿಗಳನ್ನು ನೆಲಿಸುವವಳೂ ಆಗಿರಬೇಕು. ಆದಷ್ಟು ಧಾನ, ಧರ್ಮ, ಪರೋಪಕಾರ, ಸೇವೆ ದಯಾ, ದಾಕ್ಷಿಣ್ಯ, ಸಹನುಗಳುಳ್ಳ ಗುಣವತಿಯಾಗಿ ಪ್ರಪಂಚವನ್ನು ಸರಿಯಾಗಿ ಸಾಗಿಸಿದರೇನೇ ಗ್ರಹಲಕ್ಷ್ಮಿ ಎಂಬ ನಾಮವು ಸಾರ್ಥಕವಾಗುವದು. ಇದೆಲ್ಲಬಿಟ್ಟು ಸೋಮಾರಿಗಳಾಗಿ ಮುಂಜಾನೆ ಎದ್ದ ಕೂಡಲೇ ಮೊದಲು ಚಹಾಕುಡಿದೇ ಕೆಲಸಕ್ಕೆ ಶುರುವು

ಮಾಡುವರು. ಇದರಿಂದ ತಮ್ಮ ಮಕ್ಕಳೂ ತಾವೂ ಕೂಡಿಯೇ ಅಶಕ್ತರಾಗಿ ಬಹು ಹಾನಿಗೀಡಾಗುವರು. ಸಾತ್ವಿಕ ಆರೋಗ್ಯಕರ ಪುಷ್ಟಿಕರವಾದ ಆಹಾರವನ್ನು ಸೇವಿಸುವದರಿಂದ ನಿರೋಗಿಗಳಾಗಿ ಆಯುಷ್ಯವೃದ್ಧಿಯಾಗಿ ಗಟ್ಟಿಗರಾಗಿ ಸಂಸಾರದ ಭಾರವನ್ನು ಹೊತ್ತುಕೊಂಡು ಹೋಗಲಿಕ್ಕೆ ಸಮರ್ಥರಾಗುವರು. ಸತಿಪತಿಗಳಿಬ್ಬರು ಸಂಸಾರವೆಂಬ ರಥಕ್ಕೆ ಹೂಡಿದ ಕುದುರೆಗಳಂತೆ ಜೋಡಿಯಾಗಿ ಸುಖ ದುಃಖಗಳಲ್ಲಿ ಭಾಗಿಯಾಗಿ ನಡೆಯುವದೇ ಸತೀ ಧರ್ಮ. ಹೀಗೆ ಪತಿಗೆ ಅನುಕೂಲಳಾಗಿ ಎಲ್ಲ ಕಾರ್ಯಗಳಲ್ಲಿ ನೆರವಾಗಬೇಕು. "ಕಾರ್ಯೇಷು ಮಂತ್ರಿ ಕರಣೇಷು ದಾಸಿ| ಭೋಜನೇಷು ಮಾತಾ ಶಯನೇಷು ರಂಭಾ। ಧರ್ಮಾನುಕೂಲೆ ಕ್ಷಮಯಾ ಧರಿತ್ರಿ। ಷಾಡ್ಗುಣ್ಯಭಾರ್ಯಾ ಕುಲಮುದ್ಧರಂತಿ॥ ಎಂಬ ಸಂಸ್ಕೃತ ಪದ್ಯದಂತೆ ಪತಿಭಕ್ತಿ ಪರಾಯಣೆಯಾಗಿ ಇಂಥ ಹೆಚ್ಚಿನ ಗುಣಗಳಿಂದ ನಡೆದರೆ ಮನೆ ಸುಮಂಗಲೆಯಾಗಿ ಕೀರ್ತಿಶಾಲಿಯಾಗಿ ವಂಶೋದ್ಧಾರಕಳಾಗಿ ಗೃಹಲಕ್ಷ್ಮಿಯಾಗಿ ಆದರ್ಶಗೃಹಣಿ ಎನಿಸಿಕೊಳ್ಳುವದರಲ್ಲಿ ಸಂದೇಹವಿಲ್ಲ. "ಸತಿ ಪತಿಗಳೊಂದಭಕ್ತಿ ಹಿತವಾಗಿಪ್ಪುದು ಶಿವಂಗೆ" ಎಂಬ ಉಕ್ತಿಯಂತೆ ಗಂಡಹೆಂಡರಿಬ್ಬರೂ ಒಬ್ಬರಲ್ಲೊಬ್ಬರು ಸಮರಸವಾಗಿ ಸಂಸಾರ ಚಕ್ರವನ್ನು ತಿರುಗಿಸಬೇಕು ಅಂದರೆ ಎಲ್ಲವೂ ಒಳ್ಳೇ ಸುಲಭ ಸರಳ ಶಾಂತವಾಗಿ ಸಾಗುವದು. ಇಲ್ಲವಾದರೆ ಇಲ್ಲ.

ಎತ್ತು ಎರೆಗೆ ಕೋಣ ಕೆರೆಗೆ ಎಂಬಂತೆ ಸಂಸಾರದಲ್ಲಿ ಗಂಡ ಶಿವಲಿಂಗದೇವರಭಕ್ತ ಹೆಂಡತಿ ಮಾರಿ ಮಸಣಿಯ ಭಕ್ತೆ, ಗಂಡಕೊಂಬುವದು ಪಾದೋದಕ ಪ್ರಸಾದ ಹೆಂಡತಿಕೊಂಬುವದು ಸೆರೆ ಮಾಂಸ, ಭಾಂಡ ಭಾಜನ ಶುದ್ಧಿ ಇಲ್ಲದವರ ಭಕ್ತಿ ಹೆಂಡದ ಮಡಿಕೆಯ ಹೊರಗೆ ತೊಳೆದಂತೆ ಕೂಡಲ ಸಂಗಮದೇವಾ" ಹೀಗೆ ಇಜ್ಜೋಡಿ ಆದರೆ ಗಂಡಹೆಂಡರಲ್ಲಿ ತಾಳಮೇಳ ಇಲ್ಲದಿದ್ದರೆ, ಯಾವದು ತಾನೇ ನಡೆಯಬಲ್ಲದು? ಇಂಥ ಹೆಂಡತಿಯಿಂದ ಮನೆತನಕ್ಕೆ ಮಹಾಹಾನಿ. ಮನೆಯಲ್ಲಿ ಮಾರಿ, ಮಸಣಿ, ಬ್ರಹ್ಮರಾಕ್ಷಸ, ಹೊಕ್ಕಂತೆ ಆಗಿ ಮನೆಯ ಮಾನ ಮರ್ಯಾದೆಗಳೆಲ್ಲ ಹೋಗುವವು. ಹೀಗಾಗಿ ಪ್ರತಿಯೊಂದು ರೀತಿಯಿಂದ ಮನೆಯು ಒಳ್ಳೇ ಅವನತಿಯಾಗಿ ಹಾಳಾಗಿ ಹೋಗುವದು. "ಗಂಡನ ಮೇಲೆ ಸ್ನೇಹವಿಲ್ಲದ ಹೆಂಡತಿ ಲಿಂಗದಮೇಲೆ ನಿಷ್ಠೆ ಇಲ್ಲದ ಭಕ್ತ ಇದ್ದರೇನೋ ಶಿವಶಿವಾ! ಹೋದರೇನೋ ಶಿವಶಿವಾ! ಕೂಡಲಸಂಗಮ ದೇವಯ್ಯಾ ಊಡದ

ಆಸಿಗೆ ಉಣ್ಣದ ಕುರುವ ಬಿಟ್ಟಂತೆ ಎಂಬ ವಚನದಂತೆ ಪತಿಭಕ್ತಿ ಇಲ್ಲದ ಹೆಂಡತಿ ದೇವಭಕ್ತನಿಲ್ಲದ ಗಂಡ ಇವೆರಿಂದ ಏನೂ ಪ್ರಯೋಜನವಿಲ್ಲ. ಪತಿಭಕ್ತಿ ದೇವ ಭಕ್ತರಾದರೆ ಆ ಸಂಸಾರವು ಸುಖಮಯವಾಗುವದು. ಅವಳ ವಚನ ಬೆಲ್ಲದಂತೆ ಹೃದಯದಲ್ಲಿಪ್ಪುದು ನಂಜುಕಂಡಯ್ಯ! ಕಂಗಳಲೊಬ್ಬನ ಕರೆವಳು ಮನದಲೊಬ್ಬನ ನೆನೆವಳು. ಕೂಡಲಸಂಗಮದೇವ ಕೇಳಯ್ಯ ಮಾನಿಸಗಳ್ಳಿಯ ನಂಬಿರಯ್ಯ" ಈ ವಚನದಲ್ಲಿ ಹೇಳಿದಂತೆ ಸ್ತ್ರೀಯರ ನಡತೆಯು ಆದರೆ ಯಾತಕ್ಕೂ ಬರುವದಿಲ್ಲ. ಸ್ತ್ರೀಯರೆಂದರೆ ಗೃಹದೇವತೆ ಗೃಹಲಕ್ಷ್ಮಿ. ಇಂಥ ಪದವಿಗೇರಬೇಕಾದರೆ ಆಕೆಯು ಒಳ್ಳೇ ಪತಿವ್ರತೆಯಾಗಿರಬೇಕು. ಹೀಗಾಗದೆ ದುರಾಚಾರಕ್ಕೆ ದುರ್ನಡತೆಗೆ ಸ್ತ್ರೀಯು ಎಳೆದರೆ ಕೆಳಗಿನ ವಚನದಂತೆ ಆಕೆಯ ಪರಿಸ್ಥಿತಿಯಾಗುವದು. "ಹಾದರಕ್ಕೆ ಹೋದರೆ ಕಳ್ಳದನ್ನಾಯಿತ್ತು. ಹಾಳು ಗೋಡೆಗೆ ಹೋದರೆ ಚೇಳೂರಿತ್ತು. ಅಬ್ಬರವ ಕೇಳಿ ತಳವಾರನುಟ್ಟ ಸೀರೆಯ ಸುಲಿದ. ನಾಚಿಹೋದರೆ ಮನೆಯಗಂಡ ಬೆನ್ನಬಾರನೆತ್ತಿದ. ಅರಸು ಕೂಡಲಸಂಗಮದೇವಾ ದಂಡವಕೊಂಡ"

ಈ ವಚನದಂತೆ ಸ್ತ್ರೀಯರು ದುರಾಚಾರಕ್ಕೆ ಪ್ರಾರಂಭ ಮಾಡಿದರೆ ಏನೇನು ಹಣೆಯಬರಹವಾಗುವದೆಂದು ಒಳ್ಳೇ ಚನ್ನಾಗಿ ಹೇಳಿದ್ದಾರೆ. ಇಂಥ ಸ್ತ್ರೀಯರು ಹಾಳು ಗೋಡೆಗೆ ಹೋದರೂ ಅಲ್ಲಿ ಚೇಳು ಕಡಿಯುವದು ಸುದ್ದಿ ಕೇಳಿ ಕಾವಲುಗಾರ ಬಂದು ಅಪಮಾನ ಮಾಡಿ ಸೀರಿಯನ್ನು ಸೆಳೆಯುವನು. ಮಾನಗೇಡಿಯಾಗಿ ಮನೆಗೆ ಹೋಗಲು ಗಂಡನು ಮನಬಂದಂತೆ ಹೊಡೆದು ಘಾಯಗೊಳಿಸುವನು. ಇದನ್ನು ಕೇಳಿ ಊರ ಜನರು ಛೀ ಹಾಕುವರು. ಇಷ್ಟಾದರೂ ಈಕೆಯ ಪಾಪ ನಾಶವಾಗುವದಿಲ್ಲ. ಪರಮಾತ್ಮನು ಕೂಡ ಸಿಟ್ಟಾಗಿ ನರಕದಲ್ಲಿ ಹಾಕಿ ಗೋಳಾಡಿಸುವನು. ಇದೆಲ್ಲ ಒಂದೇ ಒಂದು ವಿಷಯಸುಖದ ಆಶೆಗಾಗಿ ಘಾಸಿಯಾಗಬೇಕಾಯಿತು. ಅದಕ್ಕೆ ಈ ತರದ ನಡತೆಯು ಸ್ತ್ರೀಯರಿಗೆ ಏನೂ ಉಪಯೋಗವಿಲ್ಲ.

ಈಗಿನ ಕೆಲವು ಕಲಿತು ಸುಧಾರಿಸಿದ ಸ್ತ್ರೀಯರು ಸಾಮಾನ್ಯವಾಗಿ ೭—೮ ಘಂಟೆಗೆ ಎದ್ದು ಚಹಾ ಉಪ್ಪಿಟ್ಟು ತಿಂದು ಮನೆಯ ಕೆಲಸಕ್ಕೆ ಪ್ರಾರಂಭ ಮಾಡುವರು. ಅದಕ್ಕೂ ಮೊದಲೇ ಗಂಡನು ಎದ್ದು ಕಸಗೂಡಿಸಿ ನೀರು ತಂದು ಕಾಸಿ ತನ್ನ ಸ್ನಾನ ತೀರಿಸಿಕೊಂಡು

ಅವರನ್ನು ಎಬ್ಬಿಸುವನು. ಹೆಣ್ಣುಮಕ್ಕಳಿಗೆ ಮನೆಕೆಲಸವೆಂದರೆ ತ್ರಾಸು. ಅದರಲ್ಲಿ ಅಡಿಗೆಮನೆಯು ಎಂದರೆ ಮತ್ತಷ್ಟು ಬೇಜಾರ. ಹಾಗೂ ಹೀಗೂ ೧-೨ ಘಂಟೆಗೆ ಊಟ ಮುಗಿಸುವರು. ಉಳಿದ ಸ್ವಲ್ಪ ಹೊತ್ತಿನಲ್ಲಿ ನಿದ್ರೆ, ಹರಟೆ, ಚಹಾ ಮುಗಿಸಿಕೊಂಡು ಇಳಿಹೊತ್ತಿನಲ್ಲಿ ಹೆರಳು ಸ್ನೋ ಪಾವುಡರ ಹಚ್ಚಿಕೊಂಡು ಫ್ಯಾಶನ್‌ದ ಉಡಿಗೆ ತೊಡಿಗೆ ಹಾಕಿಕೊಂಡು ಕೇರಮ್ ಇಸ್ಪೇಟು ಚದರಂಗ ಪಗಡಿ ಆಟಗಳಲ್ಲಿ ಆನಂದ ಹೊಂದಿ, ಸಾಯಂಕಾಲ ಸಮಯದಲ್ಲಿ ಶಿಂಗರಿಸಿಕೊಂಡು ರಾಜಬೀದಿಯುದ್ದಕ್ಕೂ ತಿರುಗಾಡಿ ಮನೆಗೆ ಬಂದು ಸುದ್ದಿಯ ಪತ್ರಿಕೆಗಳನ್ನು ಓದುವರು. ಊಟ ತೀರಿಸಿಕೊಂಡು ಸಿನೇಮಾ, ನಾಟಕ ಗೃಹಗಳಿಗೆ ಹೋಗುವರು. ಇವರು ಮನೆತನಕ್ಕಾಗಲೀ ದೇಶಕ್ಕಾಗಲೀ ಉಪಯುಕ್ತವಾಗುವಂಥ ಯಾವ ಕೆಲಸಗಳನ್ನೂ ಮಾಡುವದಿಲ್ಲ. ಬರೀ ಐಷ ಆರಾಮದಲ್ಲೇ ಕಾಲ ಕಳೆಯುವರು. ಹೀಗಾದರೆ ಅವರು ಎಂದೂ ಆದರ್ಶ ಗ್ರಹಿಣಿಯರಾಗುವದಿಲ್ಲ. ಇವೆಲ್ಲ ನಡತೆ ನಡಾವಳಿಗಳು ಪರದೇಶಗಳಿಂದ ಕಡ ತಂದವುಗಳು. ಭಾರತ ಮಹಿಳೆಯರಿಗೆ ಈ ತರದ ನಡತೆಗಳು ಶೋಭಿಸುವದಿಲ್ಲ. ಇದೆಲ್ಲ ನಾಲ್ಕೇ ದಿನ ನಡೆಯಬಲ್ಲದು.

ನಮ್ಮ ದೇಶದ ಸ್ತ್ರೀಯರೆಂದರೆ ಪ್ರತ್ಯಕ್ಷ ದೇವತೆಯರು. ಅವರಿಗೆ ದೇವಾದಿದೇವತೆಗಳೂ ಕೂಡ ಸರಿಬಾರರು. ಸ್ತ್ರೀಯರು ಯಾವ ನಡತೆಯವರಿದ್ದರೆ ಆದರ್ಶ ಗ್ರಹಿಣಿಯಾಗಬಲ್ಲಳೆಂಬ ಬಗ್ಗೆ ಒಬ್ಬ ಸುಭಾಷಿತಕಾರರು ಹೇಳಿರುವದೇನೆಂದರೆ—

"ಸಾಧ್ವೀ ಶೀಲವತೀ ದಯಾಸುವತೀ ದಾಕ್ಷಿಣ್ಯ ಲಜ್ಜಾವತೀ।
ತನ್ವೀ ವ್ಯಾಜ ಪರಾಙ್ಮುಖೀ ಸ್ಮಿತವತೀ ಮುಗ್ಧಾ ಪ್ರಿಯಾಲಾಪಿನೀ॥
ದೇವ ಬ್ರಾಹ್ಮಣ ಬಂಧು ಸಜ್ಜನ ರತಾಯಸ್ಯಾಸ್ತಿ ಭಾರ್ಯಾಗ್ರಹೆ
ತಸ್ಯಾರ್ಥಾರ್ಗಮ ಕಾಮ ಮೋಕ್ಷ ಫಲದ ಕುರ್ವಂತಿ ಪುಣ್ಯಂಕ್ರಿಯಾ॥

ಈ ಪ್ರಕಾರ ಮೇಲೆ ಹೇಳಿದ ಗುಣಗಳುಳ್ಳಂಥ ಸ್ತ್ರೀಯು ಆದರ್ಶ ಗ್ರಹಿಣಿಯಾಗಬಲ್ಲಳು. ಇಂಥವಳು ಧರ್ಮ, ಅರ್ಥ, ಕಾಮ, ಮೋಕ್ಷಗಳನ್ನು ಸಹಜ ಲಭಿಸಿ ಕೊಡುವದರಲ್ಲಿ ಸಂದೇಹವಿಲ್ಲ.

ಇಂಥ ಆದರ್ಶ ಗ್ರಹಿಣಿಯು ಯತಿಗಿಂತ ಅಧಿಕವೆಂಬ ಬಗ್ಗೆ ಮಹಾಭಾರತದಲ್ಲಿ ಒಂದು ಚಿಕ್ಕ ಕಥೆ ಬಂದಿದೆ. ಅದನ್ನು ವಿವರಿಸುವೆನು-ಒಮ್ಮೆ ಒಬ್ಬ ಆದರ್ಶ ಗ್ರಹಿಣಿಯ ಮನೆಗೆ ಒಬ್ಬ ಯತಿಯು ಬಂದು

ಭಿಕ್ಷೆ ಬೇಡಿದನು. ಆಕೆ ಆಗ ತನ್ನ ಅಜಾರಿ ಗಂಡನನ್ನು ಉಪಚರಿಸುತ್ತಿದ್ದಳು. ಕಾರಣ ಯತಿಗೆ ಸ್ವಲ್ಪ ತಡೆಯಬೇಕೆಂದು ವಿನಂತಿಸಿದಳು. ಆಗ ಅವನು ಕೋಪದಿಂದ ಶಾಪ ಕೊಡುವೆನೆಂದು ನುಡಿದನು. ಇದನ್ನು ಕೇಳಿ ಆ ಗೃಹಿಣಿ ನೀವು ಹತ್ತು ವರ್ಷ ತಪಗೈದು ಇಂದು ಮುಂಜಾನೆ ಕಲಲಕ ಸಪ್ಪಳ ಮಾಡಿದ ಗುಬ್ಬಿಯನ್ನು ಶಾಪದಿಂದ ಕೊಂದದ್ದರಿಂದ ನಿಮಗೆ ಅಹಂಕಾರ ಬಂದು ಹೀಗೆ ನುಡಿಯುವಿರಿ. ಆದರೂ ನಿಮ್ಮ ಶಾಪವು ಇಲ್ಲಿ ನಡೆಯದು. ಶಾಂತರಾಗಿರಿ ಎಂದು ಪ್ರತಿ ಉತ್ತರವನ್ನು ಕೊಟ್ಟಳು. ಕೂಡಲೇ ಅವನ ಅಹಂಕಾರವೆಲ್ಲ ನಾಶವಾಗಿ ವಿನಯದಿಂದ ಆಕೆಗೆ "ನಾನು ಅಡವಿಯಲ್ಲಿ ಗುಬ್ಬೀ ಕೊಂದದ್ದು ತಮಗೆ ಹೇಗೆ ತಿಳಿಯಿತೆಂದು ಕೇಳಿದನು." ಅದಕ್ಕೆ ಆ ಗೃಹಿಣಿಯು ಪತಿವ್ರತಾ ಧರ್ಮದ ಮಹಿಮೆಯನ್ನೂ ತತ್ವಗಳನ್ನೂ ಅತ್ಯಂತವಾಗಿ ತಿಳಿಸಿ ಹೇಳಿದಳು. "ಅವು ಗಳಂತೆ ನಡೆದದ್ದರಿಂದ ಇದೆಲ್ಲ ನನಗೆ ಸಾಧಿಸಿದೆ. ನಾನೇನು ಅಡವಿಗೆ ಹೋಗಿ ತಪ ವಗೈರೆ ಏನೂ ಮಾಡಿಲ್ಲ" ಎಂದು ತನ್ನ ಅನುಭವವನ್ನು ಹೇಳಿದಳು. ನಾರಿಯ ಮಹತ್ವವನ್ನು ಸರ್ವಜ್ಞನು ಈ ಪ್ರಕಾರ ಬಣ್ಣಿಸಿರುವನು. "ನಾರಿ ಪರರುಪಕಾರಿ ನಾರಿ ಸ್ವರ್ಗಕೆ ದಾರಿ । ನಾರಿ ಸಕಲರಿಗೆ ಹಿತಕಾರಿ ಮುನಿದರೆ । ನಾರಿಯೇ ಮಾರಿ ಸರ್ವಜ್ಞ" ನಾರಿ ಒಲಿದರೆ ಸರ್ವ ರೀತಿಯಿಂದ ಹಿತಕಾರಿಯಾಗುವಳು. ಮುನಿದರೆ ಮನೆತನಕ್ಕೆ ಮಹಾ ಮಾರಿಯಾಗಿ ಹಾಳು ಮಾಡುವಳು. "ಬೆಚ್ಚನಾ ಮನೆಯಾಗಿ ವೆಚ್ಚಕ್ಕೆ ಹೊನ್ನಾಗಿ। ಇಚ್ಛೆಯನರಿತ ನಡೆವ ಸತಿಯಾದರೆ ಸ್ವರ್ಗಕೆ। ಕಿಚ್ಚು ಹಚ್ಚೆಂದ ಸರ್ವಜ್ಞ" ಈ ಪ್ರಕಾರ ಸ್ತ್ರೀಯರ ಮಹತ್ವವಿರುವದು. ಅದಕ್ಕೆ ಮೇಲೆ ಹೇಳಿದಂತೆ ಆದರ್ಶ ಗೃಹಿಣಿಯರಾಗಿ ಮನೆತನಕ್ಕೆ ಕೀರ್ತಿಯನ್ನು ದೇಶಕ್ಕೆ ಕಲ್ಯಾಣವನ್ನು ಮಾಡಬೇಕೆಂದು ಈ ಲೇಖಕಿಯ ವಿನಂತಿ.

---

# "ಜೀವವೊಂದನಂತ ವಾಹಿನೀ"



ಜೀವ ಕೋಟಿಗಳ ಕೋಟಲೆಗಳಿಹವಿಲ್ಲಿ।
ಭೀಮಸಂಭ್ರಮದ ತೀವ್ರ ಲಹರಿಯಿಹುದು॥
ಸಾವು ನೋವುಗಳ ಭೇದ ಬಾಧೆಗಳಿಹವು
ಜೀವ ಕುದಿವರಿಯುವ ಶೋಕವಿಹುದು ॥೧॥

ಗರುವ ಗಾಂಭೀರ್ಯಗಳು ಮೆರೆವ ಒಯ್ಯಾರಗಳು।
ಪರಿಪರಿಯ ಸೌಂದರ್ಯ ವೌದಾರ್ಯವಿಹುದು॥
ಮರೆಸಿ ಮೋಹದೊಳಿಳಿಪ ಲಾಸ್ಯಜಾಲಗಳಿಹವು।
ಉರುತರದ ರುಚಿಗಮನ ಮಂದಹಾಸಗಳು ॥೨॥

ಇದರಾಳ ಕಂಡವರಿಲ್ಲ ಮೂಲವರಿತವರಿಲ್ಲ
ನೀಲ ಹೃದಯವ ಪೊಕ್ಕು ಪುಡುಕಿದವರಿಲ್ಲ॥
ಮೇಲೆ ಭೋರ್ಗರೆಯುತುರುಳಿರಭಸದೆ ಬರ್ಪ।
ಮಾಲೆಯಲೆಗಳ ಜೀವಶೋಧಿಸಿದರಿಲ್ಲ ॥೩॥

ಆವ ಸಾಗರಕೆಲ್ಲಿ ಪೋಗಿ ಸೇರುವದೋ।
ಆವ ಕಡೆ ಧುಮ್ಮಿಕ್ಕುತೆಲ್ಲಿ ಸುಳಿಯುವುದೋ॥
ಆವ ದೋಣಿಯನೆಳೆದು ತಡಿಗೆ ನೂಂಕುವುದೋ।
ಆವ ನಾವಿಕನಿದನು ದಾಂಟಲರಿದಿಹನೋ ॥೪॥

ಜೀವವೊಂದನಂತ ವಾಹಿನೀ
ವಿಶ್ವಪಾತ್ರದೊಳು ಹರಿದು ಪಾರುವೀ॥

ಪಿ. ಜಿ. ಅಂಗಡಿ.
(ಸಂಗೊಳ್ಳಿ)



ವೀರಶೈವರ ಯೋಗವು ನಿಜವಾದ ಶಿವಯೋಗವು. ಶಿವಯೋಗದಲ್ಲಿ ಇಷ್ಟ ಲಿಂಗದಲ್ಲಿ ಮೊದಲು ಸಮರಸ ಭಾವವನ್ನು ಹೊಂದಬೇಕು. ಮುಂದೆ ಈ ಇಷ್ಟಲಿಂಗದಿಂದ ಪ್ರಾಣಲಿಂಗವನ್ನು ಈ ಉಭಯ ಲಿಂಗಗಳಿಂದ ಭಾವ ಲಿಂಗವನ್ನು ಕ್ರಮೇಣ ಹೊಂದಬೇಕು. ಇದು ವಚನಕಾರರ ಶಿವಯೋಗ ವಾಗಿದೆ. ಅದ್ದರಿಂದ ಅವರು ತ್ರಿಲಿಂಗಗಳನ್ನು ನಿರ್ದೇಶಿಸಿ ಶಿವಯೋಗ ವನ್ನು ಹೊಗಳಿ ಅಷ್ಟಾಂಗಯೋಗವನ್ನು ತೆಗಳುತ್ತಾರೆ.

ಅಮರಗಣಾಧೀಶ್ವರರು ಹಠಯೋಗಿಗಳಲ್ಲ, ಅವರು ಶಿವಯೋಗಿಗಳು. ಹಠಯೋಗವು ಈಗಿನ ಡ್ರಿಲ್ಲಿನ ಮಾದರಿಯದಾಗಿರುತ್ತದೆ. ಬೆನ್ನುಹುರಿಯು ಮಣಿಯೋಣ, ಎದೆಯು ಮುದುಡೋಣ ಮುಂತಾದವುಗಳು ಸಂಭವಿಸಬಾ ರದೆಂದು ಡ್ರಿಲ್ ಶಿಕ್ಷಕರು ವಿದ್ಯಾರ್ಥಿಗಳಿಗೆ ಸೆಟೆಸಿ ನಿಲ್ಲುವದಕ್ಕೂ ಕುಳ್ಳಿರುವದಕ್ಕೂ ಕಲಿಸುತ್ತಾರೆ. ಈ ಮಾದರಿಯ ವ್ಯಾಯಾಮ ಪಾಠಗಳನ್ನು ಹಠಯೋಗದ ಆಸನಗಳಿಗೆ ಹೋಲಿಸಬಹುದು. ಅವರು ಉಸುರಾಡಿಸುವ ವ್ಯಾಯಾಮವನ್ನು ಮಾಡಿಸುತ್ತಾರೆ. ಇದನ್ನು ಪ್ರಾಣಾಯಾಮಕ್ಕೆ ಹೋಲಿಸ ಬಹುದು. ಒಟ್ಟಿನಮೇಲೆ ಹಠಯೋಗವು ಡ್ರಿಲ್ಲಿನಂತೆ ಇಂದ್ರಿಯಗಳನ್ನು ಒಂದು ವ್ಯವಸ್ಥಿತ ಸ್ವರೂಪದಲ್ಲಿಟ್ಟುಕೊಳ್ಳುವ ಒಂದು ಸಾಧನವು ಎಂದು ಹೇಳಬಹುದು. ಆದರೆ ವೀರಶೈವರಿಗೆ ಈ ಪ್ರಕಾರದ ಸಾಧನವೇನೂ ಮುಖ್ಯ ವಲ್ಲ. ಅದು ಗೌಣವು. ಗೌಣವಾದುದನ್ನು ಬಿಟ್ಟರೆ ನಡಿಯುತ್ತದೆ. ಆದರೆ ಮುಖ್ಯವಾದುದನ್ನು ಬಿಟ್ಟರೆ ನಡೆಯಲಾರದು. ಹಾಗಾದರೆ ವೀರಶೈವರಲ್ಲಿ ಮುಖ್ಯವಾದುದು ಯಾವುದು ?

ವೀರಶೈವರು ಇಷ್ಟಲಿಂಗವನ್ನು ಪೂಜೆಮಾಡುವಾಗ, ಆಸನಹಾಕುತ್ತಾರೆ, ಶ್ವಾಸ ಬಿಗಿಹಿಡಿಯುತ್ತಾರೆ, ಏಕಾಗ್ರತೆಯಿಂದ ಲಿಂಗ ನಿರೀಕ್ಷಣೆ ಮಾಡುತ್ತಾರೆ. ಇದರಿಂದ ಅದು ಯೋಗವಲ್ಲವೇ, ಎಂದು ಕೆಲವರು ಕೇಳಬಹುದು. ಆದರೆ ನಿಜಸ್ಥಿತಿಯು ಬೇರೆ ಇದೆ. ವೀರಶೈವರಲ್ಲಿ ಕಣ್ಣು ಅರಳುವದು ಮುಖ್ಯ ವಲ್ಲ. ಹೃದಯ ಅರಳಬೇಕು. ಅಂತಃಕರಣ ಕರಗಬೇಕು, ಪರಮಾತ್ಮನಲ್ಲಿ ತಲ್ಲೀನತೆ ಪರವಶತೆ ಅಥವಾ ಸಮರಸಭಾವವನ್ನು ಹೊಂದಿ ಸುಖಿಸಬೇಕು. ಇದೇ ಶಿವಯೋಗವು. ಇದೇ ಮುಖ್ಯವಾದುದು.

ಆಸನ ಏಕಾಗ್ರ ದೃಷ್ಟಿಗಳು ಒಂದು ವೇಳೆ ಲಿಂಗದಲ್ಲಿ ಈ ತರಹದ ಭಾವನೆಯನ್ನು ಹುಟ್ಟಿಸಲು ಸಹಾಯಕಾರಿಗಳಾಗುತ್ತಿದ್ದರೆ ಅವು ನಮಗೆ ಬೇಕು.

ಆದರೆ ಲಿಂಗಕ್ಕೆ ಪತ್ರಿಪುಷ್ಪಗಳನ್ನು ಏರಿಸುವದಷ್ಟೇ ಆಚರಣೆಯ ಮುಖ್ಯ ಭಾಗವಲ್ಲ. ಆ ಪತ್ರಿಪುಷ್ಪಗಳಿಂದ ಭಾವವು ಅರಳಿ ನಲಿದಾಡುವಂತಾಗಬೇಕು. ಅದೇ ಮುಖ್ಯ ಆಚರಣೆಯು.

ಹಠಯೋಗವು ಬಾಹ್ಯ ಇಂದ್ರಿಯಗಳ ಸಹಾಯದಿಂದ ಸಿದ್ಧಿಗಳನ್ನು ಪಡೆಯುವ ಒಂದು ಶಾಸ್ತ್ರೀಯ ಕ್ರಮವಾಗಿದೆ. ಆದರೆ ಶಿವಯೋಗವು ಅಂತ ರಂಗವನ್ನು ಉಕ್ಕಿಸುತ್ತದೆ. ಅದರ ಕ್ರಿಯೆಗಳಲ್ಲಿ ಸೌಂದರ್ಯ ಸ್ವಾರಸ್ಯವು ತುಂಬಿ ತುಳುಕುತ್ತವೆ.

ಪ್ರಾಣಲಿಂಗಾನುಸಂಧಾನವು ಈ ತರದ ಯೋಗಾಭ್ಯಾಸವಾಗಿದೆ. ಆದರೆ ಹಠಯೋಗವು ಮನುಷ್ಯನ ನಾಭಿಯ ಕೆಳಗೆ ಮೂಲಾಧಾರ ಚಕ್ರದಲ್ಲಿ ಸರ್ಪ ದಂತೆ ಸುತ್ತಿಕೊಂಡು ಕುಳಿತಿರುವ ಕುಂಡಲಿನಿ ಶಕ್ತಿಯನ್ನು ಆಸನ ಪ್ರಾಣಾ ಯಾಮಾದಿಗಳಿಂದ ಹೊಡೆದೆಬ್ಬಿಸಿ ಅದನ್ನು ಷಟ್‌ಚಕ್ರಗಳೊಳಗಿಂದ ಹಾಯಿಸಿ ಶಿರಸ್ಸಿನಲ್ಲಿರುವ ಸಹಸ್ರದಳ ಕಮಲಕ್ಕೆ ಏರಿಸಿ, ಸಮಾಧಿ ಸ್ಥಿತಿಯನ್ನು ಪಡೆಯ ಬೇಕಾಗುತ್ತದೆ. ಇದೇ ಅದರ ಉದ್ದೇಶವಾಗಿರುತ್ತದೆ.

ಪ್ರಾಣಲಿಂಗಾನುಸಂಧಾನವು ಇಂಥ ಕಷ್ಟಕರವಾದ ಹಠವನ್ನೇನು ಸಾಧಿಸ ಲಿಕ್ಕೆ ಹೋಗುವದಿಲ್ಲ. ಇಷ್ಟಲಿಂಗದ ಮೂಲಕ ಮಾಟ, ನೋಟ, ಕೂಟ, ಭಕ್ತಿ ಇವುಗಳ ಸಹಾಯದಿಂದ ಮನವೆಲ್ಲ ಲಿಂಗದಲ್ಲಿ ತಲ್ಲೀನ ಮಾಡುವದೇ ಪ್ರಾಣಲಿಂಗಾನುಸಂಧಾನವು.

ಪ್ರಾಸ ಭರಿತವಾದ ಕಾವ್ಯವನ್ನೋದುವಾಗ ಸಹೃದಯನೊಬ್ಬನು ಆ ರಸವು ತನ್ನ ಅಂತರಂಗವನ್ನು ಮುಟ್ಟಲು ತನ್ನನ್ನು ತಾನು ಹೇಗೆ ಮರೆತು ಜ್ಞಾನಾಸಕ್ತನಾಗುತ್ತಾನೋ, ಹಾಗೆ ಸಾಕಾರವಾದ ಇಷ್ಟಲಿಂಗದಲ್ಲಿ ಭಕ್ತಿ ಯನ್ನು ಅಳವಡಿಸಿದಲ್ಲಿ ಪ್ರಾಣಲಿಂಗಿಯು ಅನಂತ ಲಹರಿಯಲ್ಲಿ ತೇಲಾಡ ಹತ್ತುತ್ತಾನೆ. ಇದೇ ಅವನ ಪ್ರಾಣಲಿಂಗಾನುಸಂಧಾನವು. ಇದು ಅನುಭಾವಿ ಗಳ ಸೊಗಸಿನ ಸವಿಯೂಟವಾಗಿರುತ್ತದೆ.

ಪ್ರಾಣಲಿಂಗಿಯ ಅನುಭಾವ ಭಕ್ತಿಯು ಷಟ್‌ಸ್ಥಲಗಳಲ್ಲಿ ಹೇಳಲ್ಪ ಡುವ ಷಡ್ವಿಧ ಭಕ್ತಿಗಳಲ್ಲಿ ಒಂದಾಗಿದೆ. ಈ ಭಕ್ತಿಯ ಸಹಾಯದಿಂದ ಪ್ರಾಣವೇ ಲಿಂಗ, ಲಿಂಗವೇ ಪ್ರಾಣವೆಂಬ ಅನುಭಾವವು ಉಂಟಾಗುತ್ತದೆ. ಈ ಪ್ರಾಣಲಿಂಗ ಸ್ಥಿತಿಯು ರೇಚಕ, ಪೂರಕ, ಕುಂಭಕ ಇತ್ಯಾದಿಗಳಿಂದ ಉಂಟಾ

ಗಿರುವದಿಲ್ಲ. ಆದರೆ ಅನುಕ್ರಮವಾಗಿ ಷಡ್ವಿಧಭಕ್ತಿಗಳಿಗೆ ಸಂಬಂಧಪಟ್ಟ ಅನುಭಾವಭಕ್ತಿಗೆ ಸಂಬಂಧಿಸುತ್ತದೆ. ಇದು ಹಠಯೋಗಕ್ಕೆ ಸಂಬಂಧಿಸಿರುವದಿಲ್ಲ. ಹೀಗೆ ತಿಳಿಯುವದು ತಪ್ಪು ಗ್ರಹಿಕೆಯಾಗಿದೆ.

ಶೂನ್ಯಸಂಪಾದನೆಯಲ್ಲಿಯ ಸಿದ್ಧರಾಮನ ಸಂಪಾದನೆಯಲ್ಲಿ ಸಿದ್ಧರಾಮಯ್ಯ ದೇವರು ತನಗೆ ಯೋಗಾಭ್ಯಾಸದಿಂದ ಪ್ರಾಣಲಿಂಗದ ಅರಿವು ಆಗಿರುತ್ತದೆ ಎಂದು ಹೇಳಲಾಗಿ, ಅಲ್ಲಮಪ್ರಭುಗಳು ಉತ್ತರಕೊಟ್ಟದ್ದೇನಂದರೆ:— 'ಶೂನ್ಯಕ್ಕೆ ತಲೆವಾ ನಿಕ್ಕದಿರೋ, ವಸ್ತು ಭ್ರೂಮಧ್ಯದಲುಂಟೆಂದು ಭ್ರಮಿಸದಿರೋ. ವಸ್ತು ಬ್ರಹ್ಮರಂಧ್ರದಲ್ಲುಂಟೆಂದು ಹೊಲಬುಗೆಡದಿರೋ. ವಸ್ತುವಿನ ನಿಜವ ಕಾಂಬಡೆ ಎನ್ನ ಸದ್ಗುರು ಅನುಮಿಷದೇವರಂತೆ ನಿನ್ನ ಕರಸ್ಥಳದಲ್ಲಿ ಲಿಂಗವ ನಿಶ್ಚಯಿಸಿಕೊಂಡು ನಮ್ಮ ಗುಹೇಶ್ವರಲಿಂಗದಲ್ಲಿ ನಿಬ್ಬೆರಗಾಗೋ ಸಿದ್ಧರಾಮಯ್ಯ. ಅಂತರ್ಲಕ್ಷ್ಯಾನುಸಂಧಾನ ಜ್ಞಾನದಿಂದ ವಸ್ತುವ ಕಂಡಿಹೆನೆಂದರೆ ಸಾಧ್ಯವಾಗದು ನೋಡಾ."

ಆದುದರಿಂದ ವೀರಶೈವನಿಗೆ ಷಡ್ವಿಧಭಕ್ತಿಗಳೇ ಮುಖ್ಯವಲ್ಲದೆ ಹಠಯೋಗಸಾಧನಗಳೇನೂ ಮುಖ್ಯವಲ್ಲ.

ಅಮರಗಣಂಗಳ ಶಿವಯೋಗದ ಉದ್ದೇಶವು ಮನಸ್ಸಿನ ಪ್ರವೃತ್ತಿಗಳನ್ನು ಸದ್ವಿಷಯಗಳ ಕಡೆಗೆ ಹೊರಳಿಸುವದು ಇದೆ. ಅದು ಪಾತಂಜಲ ಯೋಗಶಾಸ್ತ್ರವು ಹೇಳುವಂತೆ ಚಿತ್ತವೃತ್ತಿನಿರೋಧವಲ್ಲ. ಅದು ಇಂದ್ರಿಯನಿಗ್ರಹವೂ ಅಲ್ಲ. ಮನಸ್ಸಿನ ಪ್ರವೃತ್ತಿಯನ್ನು ಬಲಾತ್ಕಾರದಿಂದ ಕುಗ್ಗಿಸಿ ಅದನ್ನು ಅಟಕಿನಲ್ಲಿಟ್ಟರೆ ಅದು ನಮ್ಮಮೇಲೆ ಒಂದಿಲ್ಲೊಂದು ದಿನ ಸೇಡು ತೀರಿಸಿಕೊಳ್ಳದೆ ಬಿಡುವದಿಲ್ಲ. ಆಸನ ಪ್ರಾಣಾಯಾಮಾದಿಗಳ ಸಹಾಯದಿಂದ ಹರಿದಾಡುವ ಮನಸ್ಸನ್ನು ತಡೆಯಲಿಕ್ಕೆ ಜನರು ಪ್ರಯತ್ನಿಸುವದುಂಟು. ಅವರು ತಪಸ್ಸು, ಆತ್ಮಸಂಯಮನ, ಮುಂತಾದ ನಾನಾತರದ ಕಷ್ಟಕರವಾದ ವ್ರತಗಳನ್ನಾಚರಿಸುತ್ತ ಮನಸ್ಸಿನ ಓಘವನ್ನು ತಡೆಯಲು ಪ್ರಯತ್ನಿಸುತ್ತಾರೆ. ಆದರೆ ಮನಸ್ಸು ಒಂದಿಲ್ಲೊಂದುದಿನ ತನ್ನ ಮೂಲ ಸ್ವಭಾವದಂತೆ ವಿಷಯಾದಿಗಳ ಕಡೆಗೆ ಹರಿದುಹೋಗಲೇಬೇಕು. ಇಂದ್ರಿಯ ಪ್ರವೃತ್ತಿಯನ್ನು ತಡೆಯುವದರಿಂದ ಮಾನವನಿಗೆ ನಿಜಸುಖವು ದೊರೆಯಲಾರದು. ಅದರಂತೆಯೇ ಇಂದ್ರಿಯಗಳನ್ನು ವಿಷಯಗಳ ಕಡೆಗೆ ಯಥೇಚ್ಛವಾಗಿ ಹರಿಯಬಿಟ್ಟರೂ ಪರಸುಖವು ದೊರೆಯಲಾರದು. ಅಮರಗಣಾಧೀಶ್ವರರ ಅಭಿಪ್ರಾಯದಂತೆ ಹೀಗಾಗದಂತೆ ಮಾಡಲು ಒಂದೇ ಒಂದು ಉಪಾಯವಿರುತ್ತದೆ.

ಅದು ಯಾವದೆಂದರೆ ಇಂದ್ರಿಯ ಪ್ರವೃತ್ತಿಯನ್ನು ಅಲ್ಲದ ವಿಷಯಗಳಕಡೆಗೆ ಹೋಗದಂತೆ ಸದ್ವಿಷಯಗಳ ಕಡೆಗೆ ಹರಿಯಗೊಡುವದೇ ಇದೆ. ಹೀಗೆ ಮಾಡಿದರೆ ಕಷ್ಟಕರವಾದ ಇಂದ್ರಿಯ ನಿಗ್ರಹ ಮಾಡಿದಂತಾಗಲಿಲ್ಲ. ಮನಸ್ಸನ್ನು ಕುಗ್ಗಿಸಿದಂತಾಗಲಿಲ್ಲ. ದುರ್ವಿಷಯಗಳ ಕಡೆಗೆ ಹರಿದು ಹೋಗುವ ಮನಸ್ಸನ್ನು ಸದ್ವಿಷಯಗಳ ಕಡೆ ಹೊರಳಿಸುವದೇ ಶಿವಯೋಗವು. ಹೀಗೆ ಮಾಡುವವರು ಶಿವಯೋಗಿಗಳು. ಆದ್ದರಿಂದ ಅನ್ನ ದ್ರವ್ಯಗಳನ್ನು ನಾವು ಸತ್ಕಾರ್ಯದಿಂದ ಗಳಿಸಿ ಸುಖಿಸಬೇಕು. ಹೀಗೆ ಮಾಡುವದು ಕಾಯಕವೇ ಕೈಲಾಸವಾದಂತೆ. ಶಿವಶರಣರು ಹಿಂದಿನಕಾಲದಲ್ಲಿ ಸ್ವಂತ ಪರಿಶ್ರಮದಿಂದ ದುಡಿದು ದುಡ್ಡುಗಳಿಸಿ ಉಂಡುಟ್ಟು ಸುಖಿಸುತ್ತಿದ್ದರು. ಸತ್ಕಾರ್ಯಕ್ಕೆ ದಾನಧರ್ಮ ಮಾಡುತ್ತಿದ್ದರು. ಶಿವಾರ್ಪಣ ಬುದ್ಧಿಯುಳ್ಳವರಾಗಿದ್ದರು. ಇದೇ ಶಿವಯೋಗವಾಗಿರುತ್ತದೆ.

### ಲಿಂಗಧಾರಿಯು ಸದಾ ಶುಚಿಯು. ಅವನು ಸೂತಕ ರಹಿತನು.

ಅಮರಗಣಾಧೀಶ್ವರರು ಅರ್ಥಾತ್ ವೀರಶೈವರು ಸರ್ವದಾ ಶುಚಿರ್ಭೂತರೆಂದು ತಿಳಿಯುವದು ಶಿವಾನುಭವದ ನಡೆಯಾಗಿರುತ್ತದೆ. ಅವರಿಗೆ ಮೈಲಿಗೆಯು ಉಂಟಾಗಲಾರದು. ಆದರೆ ಬಹುಜನರು ವೀರಶೈವರಲ್ಲಿ ಮಡಿಮೈಲಿಗೆಗಳನ್ನು ಪಾಲಿಸುವದು ಕಂಡುಬರುತ್ತಿದೆ. ಆದರೆ ಇದು ಕರ್ಮಠ ಜನರ ಅನುಕರಣವಿರುತ್ತದೆ. ಯಾರಾದರೂ ಹೊಲಸು ಬಟ್ಟೆ, ಅಸ್ವಚ್ಛ ಮನೆಗಳಲ್ಲಿ ಇದ್ದರೆ ಅದನ್ನು ಅವಶ್ಯವಾಗಿ ಎಲ್ಲರೂ ದೂರೀಕರಿಸಲೇಬೇಕು.ಆದರೆ ಸ್ವಚ್ಛತೆಯ ಹೆಸರಿನಮೇಲೆ ಕಾಲ್ಪನಿಕ ವಿಚಾರಗಳನ್ನು ಮುಂದಿಟ್ಟುಕೊಂಡು ಮೈಲಿಗೆ ಅಥವಾ ಸೂತಕಗಳನ್ನು ಜನರು ಕಲ್ಪಿಸುವದುಂಟು. ಇದನ್ನು ಅಮರಗಣಾಧೀಶ್ವರರು ಅಥವಾ ಶಿವಾನುಭವಿಗಳು ಒಪ್ಪಿಕೊಳ್ಳುವದಿಲ್ಲ. ಶರೀರ ವಸ್ತ್ರಾದಿಗಳನ್ನು ತೊಳೆದರೆ ಅವು ಹಸನಾಗುವವು. ಹೀಗೆ ಮಾಡುವದನ್ನು ಬಿಡಬೇಕೆಂದು ವೀರಶೈವರು ಅನ್ನುವದಿಲ್ಲ. ಸ್ವಚ್ಛತೆಯು ಅವಶ್ಯ ಬೇಕೇ ಬೇಕು. ಆದರೆ ಇದರೊಡನೆ ಆತ್ಮೋನ್ನತಿಗೆ ಕಾರಣವಾದ ಲಿಂಗಸಾಧನೆಗಳನ್ನು ವೀರಶೈವರು ದೃಢವಾಗಿ ನಂಬಿ ಒಳಗಿನ ಮತ್ತು ಹೊರಗಿನ ಶುಚಿತ್ವಗಳೆರಡನ್ನು ರಕ್ಷಿಸುವದು ವೀರಶೈವರಿಗೆ ಅವಶ್ಯವು. ವಸ್ತುಸ್ಥಿತಿಯು ಹೀಗಿರಲು ಇದನ್ನು ಲಕ್ಷಿಸನೆ ತಾವು ಪಕ್ಕಾ ಮಡಿಯವರು, ತಾವು ಸಾಮಾನ್ಯ ಮಡಿಯವರು ಎಂದು ತಿಳುವಳಿಕೆ ಮಾಡಿಕೊಂಡು ಸಂಶಯಗ್ರಸ್ತರಾಗಿ ಆಚರಿಸುತ್ತಾರೆ. ಈ ತರದ

ಪ್ರವೃತ್ತಿಯನ್ನು ಅಮರಗಣಾಧೀಶ್ವರರು ಯಾವಾಗಲೂ ನಿಷೇಧಿಸುವರು. ಅವರು ಜನನ ಸೂತಕ, ಜಾತಿ ಸೂತಕ, ಉಚ್ಛಿಷ್ಟ ಸೂತಕ ಎಂಬ ಸೂತಕಗಳನ್ನು ಮನ್ನಿಸುವದಿಲ್ಲ. ಅವರು ಕರ್ಮಮಾರ್ಗಿಗಳಲ್ಲ. ಅವರಿಗೆ ಜ್ಞಾನವೇ ಪ್ರಾಧಾನ್ಯವು. ಅವರು ಅಪ್ರಾಕೃತರು. ಅವರು ಲಿಂಗವೇ ಜ್ಞಾನದ ಕುರುಹೆಂದು ತಿಳಿಯುವರು.

ಆದ್ದರಿಂದ ಜ್ಞಾನಿಗಳಿಗೆ ಅದಾವ ದೋಷ ಮೈಲಿಗೆಗಳು ತಟ್ಟಲಾರವು. ಅವರು, ಇವನು ಅಸ್ಪೃಶ್ಯನು, ಬೇರೊಬ್ಬನು ಸ್ಪೃಶ್ಯನು, ಎಂಬ ಭೇದಭಾವವನ್ನು ಎಣಿಸುವದಿಲ್ಲ. ಈ ವಿವರಣೆಯಿಂದ ಲಿಂಗಿಗಳು ಅಸ್ವಚ್ಛ ಹೊಲಸುತನವನ್ನು ಸಮರ್ಥಿಸುತ್ತಾರೆಂದು ಅರ್ಥವಾಗುವದಿಲ್ಲ.

## ಮೂರ್ತಿ ಪೂಜೆ

ವೀರಶೈವರಲ್ಲಿ ಮೂರ್ತಿ ಪೂಜೆಯು ಇದೆಯೋ ಹೇಗೆ, ಇದ್ದರೆ ಎಷ್ಟರ ಮಟ್ಟಿಗೆ, ಎಂಬುದನ್ನು ತಿಳಿಯುವದು ಬಹು ಅವಶ್ಯವಿದೆ. ವೀರಶೈವರು ಇಷ್ಟಲಿಂಗವನ್ನು ಪೂಜಿಸುವದರಿಂದ ಅವರು ಮೂರ್ತಿಪೂಜಕರೆಂದು ಯಾರಾದರೂ ತಿಳಿಯಬಹುದು. ಆದರೆ ಶಿವಶರಣರು ತಮ್ಮ ವಚನಗಳಲ್ಲಿ ಮೂರ್ತಿಗಳನ್ನೂ ದೇವಾಲಯಗಳನ್ನೂ ಜರಿದದ್ದನ್ನು ನಾವು ಕಾಣುತ್ತೇವೆ.

ವಿಚಾರ ಮಾಡಿನೋಡಿದರೆ ಇಷ್ಟಲಿಂಗವೇನೋ ಮೂರ್ತಿಯೇ ಅಹುದು. ಹೀಗಿದ್ದು, ಅವರು ಮೂರ್ತಿಪೂಜೆಯನ್ನು ನಿರಾಕರಿಸಿದುದು ಏಕೆ? ಮೂರ್ತಿಪೂಜೆಯು ಜನರಲ್ಲಿ ಪವಿತ್ರತೆ, ಪರಿಶುದ್ಧತೆ ಇವುಗಳನ್ನುಂಟು ಮಾಡುತ್ತದೆಂದು ಹೇಳುವ ಸಾಂಪ್ರದಾಯವು ನಮ್ಮ ದೇಶದಲ್ಲುಂಟು. ಜನರಲ್ಲಿ ದೃಢವಾಗಿ ಬೇರೂರಿದ ಮೂರ್ತಿಪೂಜೆಯ ಕಲ್ಪನೆಯನ್ನು ಸಂಪೂರ್ಣವಾಗಿ ಕಿತ್ತೊಗೆಯಲಿಕ್ಕೆ ಶಕ್ಯವಿಲ್ಲ. ಆದ್ದರಿಂದ ಶಿವಶರಣರು ಈ ಕಲ್ಪನೆಯ ದಿಶೆಯನ್ನು ಮಾತ್ರ ಬೇರೆ ಕಡೆಗೆ ಹೊರಳಿಸಿದ್ದಾರೆ. ಮೂರ್ತಿ ಮುಂತಾದ ನಾನಾ ದೈವಗಳ ಕಡೆಗೆ ಮನಸ್ಸು ಹರಿದು ಹಂಚಿಹೋದರೆ ಸಾಮಾನ್ಯರ ಚಿತ್ತವು ಶಿಥಿಲವಾಗುತ್ತ ಹೋಗುತ್ತದೆ. ಆದ್ದರಿಂದ ಅದನ್ನು ಒತ್ತಟ್ಟಿಗೆ ಏಕಾಗ್ರಗೊಳಿಸಿದರೆ ಅದು ಸಬಲವಾಗುವದು. ಈ ಸದುದ್ದೇಶದಿಂದ ಇಷ್ಟಲಿಂಗದ ಹೊರತು ಅನ್ಯದೈವಗಳಿಗೆ ಎರಗಬಾರದೆಂದು ಅವರು ಒಂದು ಬಲವಾದ ನಿಯಮವನ್ನು ಹಾಕಿಬಿಟ್ಟರು. ಇಷ್ಟಲಿಂಗದಲ್ಲಿ ಏಕಾಗ್ರವಾದ ಮನಸ್ಸು ಸ್ಥಾವರಾದಿ ಅನೇಕ ಮೂರ್ತಿಗಳ ಕಡೆಗೆ ತಿರುಗಿಸಿದರೆ ಅದು ಶಿಥಿಲವಾದೀ

ತೆಂದು ಅವರು ಅನ್ಯಮೂರ್ತಿ ಪೂಜೆಯನ್ನು ನಿರಾಕರಿಸಿದ್ದಾರೆ. ಶಿವಶರಣರು ಸ್ಥಾವರಾದಿ ನಾನಾ ದೈವತೆಗಳನ್ನು ನಿರಾಕರಿಸಲು ಬೇರೆ ಕಾರಣಗಳುಂಟು. ಸ್ಥಾವರಾದಿ ದೈವಗಳಿಗೆ ಅಜ್ಞಾನಿ ಜನರು ಮೂಢನಂಬಿಗೆಯಿಂದ ನಡೆದು ಕೊಳ್ಳಲು ಆರಂಭಿಸುವರು. ಅವರು ದೇವರ ಹೆಸರಿನಿಂದ ಅನೇಕ ಅನಾಚಾರ ಅತ್ಯಾಚಾರಗಳನ್ನು ಮಾಡಹತ್ತುವರು. ದೇವರಿಗೆ ದೇವದಾಸಿಯರನ್ನು ಬಿಟ್ಟು ನರ್ತನ ಮಾಡಲಿಕ್ಕೆ ಅವರಿಗೆ ಹಚ್ಚುವರು. ದೇವರಿಗೆ ಕುರಿ ಕೋಣ ಕೋಳಿಗಳನ್ನು ಬಲಿ ಕೊಡುವರು. ದೇವರ ಹೆಸರಿನಿಂದ ಜಾತ್ರೆ ಮಹೋತ್ಸವಾದಿಗಳನ್ನು ಮಾಡಿಸಿ ಪೂಜಾರಿಗಳು ಅಜ್ಞ ಜನರಿಂದ ದುಡ್ಡು ಸುಲಿಯಹತ್ತುವರು. ದೇವಾಲಯಗಳಲ್ಲಿ ಆಟ, ತಮಾಶೆ, ವಿನೋದಗಳುಂಟಾಗುವವು. ಜನರಲ್ಲಿ ಅಪವಿತ್ರ ಭಾವನೆಗಳು ಹೆಚ್ಚುತ್ತ ಹೋಗುವವು. ಜನರು ಜಾತ್ರೆಗಳ ಸಲುವಾಗಿ ಹೇರಳ ಹಣವನ್ನು ವೆಚ್ಚ ಮಾಡುವರು. ಆದ್ದರಿಂದ ಶಿವಶರಣರು ಯಾತ್ರಿಕರನ್ನೂ ಸ್ಥಾವರ ದೈವಗಳನ್ನೂ ತೀರ್ಥಯಾತ್ರೆ ಮಾಡುವದನ್ನೂ ಯಥೇಚ್ಛವಾಗಿ ಖಂಡಿಸಿರುತ್ತಾರೆ.

ಆದರೆ ಇಷ್ಟಲಿಂಗ ಪೂಜೆಯು ಒಂದು ತರಹದ ಮೂರ್ತಿಪೂಜೆ ಎನಿಸಿದರೂ ಅದು ಇಂಥ ಅನರ್ಥಗಳಿಂದ ದೂರವಾಗಿರುವದರಿಂದ ಅದನ್ನು ಶಿವಶರಣರು ಪ್ರಚಾರದಲ್ಲಿ ತಂದರು. ಈ ಪೂಜೆಯಿಂದ ಸ್ಥಾವರಾದಿ ದೇಗುಲಗಳಲ್ಲಿರುವ ದೈವಗಳ ಮೇಲಿಂದ ಭಕ್ತಿಭಾವನೆಗಳು ಜನರಲ್ಲಿ ಬಹುಮಟ್ಟಿಗೆ ಕಡಿಮೆಯಾಗಹತ್ತಿದವು. ಎಷ್ಟೋ ಜನರು ಲಿಂಗಧಾರಿಗಳಾಗಿ ಅದರ ಮೂಲಕ ದೇಹಶುದ್ಧಿ ಪವಿತ್ರ ಆಚರಣೆಗಳನ್ನು ಇಟ್ಟುಕೊಳ್ಳಲು ಆರಂಭಿಸಿದರು. ಅಲ್ಲಮಪ್ರಭುಗಳು ಒಂದುಕಡೆಗೆ ಹೇಳಿದ್ದೇನೆಂದರೆ "ಕಲ್ಲ ದೇವರ ಮಾಡಿ, ಕಲ್ಲ ಮನೆಯ ಮಾಡಿ, ಆ ಕಲ್ಲ ಕಲ್ಲ ಮೇಲೆ ಕೆಡೆದರೆ ದೇವರೆತ್ತಹೋದರೋ?" ಎಂದು ಹೇಳುತ್ತಾರೆ. ಬೇರೊಂದು ಕಡೆಗೆ ಅವರು "ದೇಹವೇ ದೇಗುಲವಾಗಿರಲು ಬೇರೆ ಮತ್ತೆ ದೇಗುಲವೇಕಯ್ಯಾ" ಎಂದು ಪ್ರಶ್ನೆಮಾಡುತ್ತಾರೆ.

ಶಿವಶರಣರು ಈ ಪ್ರಕಾರ ಇಷ್ಟಲಿಂಗಕ್ಕೆ ಒಂದು ವಿಶಿಷ್ಟ ಸ್ಥಾನವನ್ನು ಕೊಟ್ಟಿದ್ದರಿಂದ ಇಷ್ಟಲಿಂಗ ಹೋದರೆ ಪ್ರಾಣ ಬಿಡಬೇಕೆಂದು ಹೇಳುವಂಥ ಅರಣ್ಯ ಪಂಡಿತರೂ ನಮ್ಮಲ್ಲಿ ಇದ್ದಾರೆ. ಹೀಗೆ ಮಾಡುವದು ಅನಾಚಾರ, ಆಚಾರದ ಅತಿರೇಕವು. ಇದು ಆತ್ಮಹತ್ಯವೆನಿಸುತ್ತದೆಂದು ವಚನಕಾರರು ವಚನಗಳಲ್ಲಿ ಹೇಳಿರುತ್ತಾರೆ.

ನಮ್ಮ ಹಿಂದಿನ ಕಾಲದ ಶಿವಶರಣರು ಇಷ್ಟಲಿಂಗವು ಉಪಾಸನಗೆ ಸಹಾಯ ವಾಗಬೇಕೆಂದು ಮನಸ್ಸಿನ ಏಕಾಗ್ರತೆಗಾಗಿ ಅದನ್ನು ಉಪಯೋಗಿಸುತ್ತಿದ್ದರು. ಆದರೆ ಬಾಹ್ಯ ಆಚರಣೆಗೆ ಅವರು ಮಹತ್ವ ಕೊಟ್ಟಿರುವದಿಲ್ಲ. ವ್ಯರ್ಥವಾಗಿ ಮನಸ್ಸಿನ ನಿರ್ಮಲತೆಯ ನೆವದಿಂದ ಹೇರಳ ಪತ್ರಿ ಪುಷ್ಪಗಳಿಂದ ಪೂಜೆ ಮಾಡುವಂಥ ಡಾಂಭಿಕರನ್ನು ಅವರು ಹಳಿದಿರುತ್ತಾರೆ. ಅವರು ಅಂತರಂಗ ಪರಿಶುದ್ಧತೆಗೆ ಬಹಳ ಮಹತ್ವಕೊಟ್ಟಿದ್ದಾರೆ. ಅವರ ವಚನಗಳನ್ನು ನೋಡಿ ದರೆ, ಅವರು ಹಳೆ ಮಾದರಿಯ ಸನಾತನ ಧರ್ಮವಾದಿಗಳಾಗಿರದೆ ಹೊಸ ಮಾದರಿಯ ಪಾಶ್ಚಾತ್ಯ ವಿಚಾರಗಳನ್ನು ನಾವು ನೋಡುತ್ತೇವೆ.

## ಪ್ರಸಾದ

ಅಮರಗಣಾಧೀಶ್ವರರು ತಮ್ಮ ನಡೆಯಲ್ಲಿ ಪ್ರಸಾದಕ್ಕೆ ಬಹು ಮಹ ತ್ವದ ಸ್ಥಾನವನ್ನಿತ್ತಿರುವರು. ಭಗದ್ಗೀತೆಯಲ್ಲಿ ಶ್ರೀಕೃಷ್ಣನು ತನಗರ್ಪಿಸಿ ಕಾರ್ಯಮಾಡುತ್ತಿರಬೇಕೆಂದು ಹೇಳಿದ್ದಾನೆ. ಆಧುನಿಕ ಕಾಲದ ಕಾರ್ಯ ಕರ್ತರು ಸಹ ಯಾವ ಉದ್ದೇಶವನ್ನಿಟ್ಟುಕೊಳ್ಳದೆ ನಿಃಸ್ವಾರ್ಥರಾಗಿ ಎಲ್ಲರೂ ತಮ್ಮ ಕಾರ್ಯಗಳನ್ನು ಮಾಡಬೇಕೆಂದು ಉಪದೇಶಿಸುತ್ತಾರೆ. ಹೀಗೆ ಅರ್ಪಣಭಾವದಿಂದ ವಸ್ತುಗಳನ್ನು ಅರ್ಪಿಸಿ ಯಾರು ಕಾರ್ಯ ಮಾಡುತ್ತಾರೋ ಅವರಿಗೆ ಈ ಭೋಗ್ಯ ವಸ್ತುಗಳು ಪ್ರಸಾದ ರೂಪವಾಗಿ ಪರಿಣಮಿಸುತ್ತವೆ.

ಇದೇ ಪ್ರಕಾರ ಮನುಷ್ಯನು ತನಗೆ ತಾಗಿದ ಭೋಗ್ಯ ವಸ್ತುಗಳನ್ನು ಆಯಾ ಇಂದ್ರಿಯಗಳಿಗೆ ಅರ್ಪಿಸಿ ಅವುಗಳ ಸುಖವನ್ನು ಹೊಂದಬೇಕೆಂದು ಅಮರಗಣಾಧೀಶ್ವರರು ತಮ್ಮ ವಚನಗಳಲ್ಲಿ ಹೇಳಿದ್ದಾರೆ. ಪ್ರತಿಯೊಂದು ಇಂದ್ರಿಯದಲ್ಲಿ ಇರುವ ಆಯಾ ಚಕ್ರಗಳಲ್ಲಿ ಆಚಾರಲಿಂಗಾದಿ ಷಡ್ಲಿಂಗ ಗಳು ನೆಲಸಿರುತ್ತವೆ. ಆ ಲಿಂಗಗಳಿಗೆ ಸಂಬಂಧಿಸಿದ ವಸ್ತುಗಳನ್ನು ನಿವೇದಿ ಸಿದಲ್ಲಿ ಅವು ಲಿಂಗಭೋಗಗಳೆಂದೆನಿಸಿಕೊಳ್ಳುತ್ತವೆ. ಹೀಗೆ ನಿವೇದಿಸಿದಲ್ಲಿ ಅವು ಹೃದಯ ಸಿಂಹಾಸನಾರೂಢವಾದ ಮಹಾಲಿಂಗನಿಗೆ ಅರ್ಪಿತವಾಗುತ್ತವೆ. ಆಗ ನಾ ಭೋಗಿಸುವೆನೆಂಬ ಭಾವವಳಿದು ಲಿಂಗತಾಭೋಗಿಸುವದೆಂಬ ಭಾವ ಬೆಳೆಯುತ್ತದೆ. ಇದಕ್ಕಾಗಿ ಕಾಯ ಮನಭಾವಗಳು ಲಿಂಗಾರ್ಪಿತವಾಗಿ ಅವು ಪ್ರಸಾದಮಯವಾಗುವವು. ಹೀಗಾದಲ್ಲಿ ಪ್ರಸಾದಿಯು ಮಹಾಲಿಂಗದಲ್ಲಿ ಸಾಮರಸ್ಯವನ್ನು ಹೊಂದುವನು.

ಪ್ರಸಾದದ ಮಹಿಮೆಯನ್ನು ಅಮರಗಣಾಧೀಶ್ವರರು ತಮ್ಮ ವಚನಗಳಲ್ಲಿ ಬಹಳ ಹೊಗಳಿದ್ದಾರೆ. ಉರಿಲಿಂಗಪೆದ್ದಿ ಎಂಬ ಗಣಾಧೀಶ್ವರನು ಹೇಳುವದೇನೆಂದರೆ—"ಗುರುಲಿಂಗ ಜಂಗಮದಿಂದ ಪಾದೋದಕ ಪ್ರಸಾದವಾಯಿತ್ತು. ಆ ಭಾವವೇ ಎನಗೆ ಮಹಾ ಪ್ರಸಾದವಾಗಿ ಎನಗೆ ಬೇರೆ ಪ್ರಸಾದವಿಲ್ಲ. ಅಗ್ನಿ ಮುಟ್ಟಲು ತೃಣವಗ್ನಿಯಪ್ಪುದು ತಪ್ಪದಯ್ಯ. ಗುರುಪ್ರಸಾದ ಅಂಗವ ಸೋಂಕಿದಲ್ಲಿ ಸರ್ವಾಂಗ ಗುರುವಪ್ಪುದು ತಪ್ಪದಯ್ಯ. ಲಿಂಗ ಪ್ರಸಾದ ಮನ ಸೋಂಕಿದಲ್ಲಿ ಮನ ಲಿಂಗವಪ್ಪುದು ತಪ್ಪದಯ್ಯ. ಜಂಗಮ ಪ್ರಸಾದ ಅರಿವ ಸೋಂಕಿನಲ್ಲಿ ಅಖಂಡಿತ ಪ್ರಸನ್ನ ಪ್ರಸಾದವಪ್ಪುದು ತಪ್ಪದಯ್ಯ. ಶಿವಶಿವಾ, ಪ್ರಸಾದದ ಮಹಿಮೆಯನೇನೆಂದುಪಮಿಸುವೆ ? ಪ್ರಸಾದವೇ ಗುರು. ಪ್ರಸಾದವೇ ಲಿಂಗ, ಪ್ರಸಾದವೇ ಜಂಗಮ, ಪ್ರಸಾದವೇ ಪರಾತ್ಪರ, ಪ್ರಸಾದವೇ ಪರಮಾನಂದ. ಇಂತಪ್ಪ ಪ್ರಸಾದವ ಕೊಂಡು ಬದುಕಿದೆನಯ್ಯ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ ಎಂದು ವರ್ಣಿಸಿದ್ದಾನೆ.

ಪ್ರಸಾದವು ಸದ್ಭಕ್ತನ ಸರ್ವಾಂಗವನ್ನೆಲ್ಲ ಆವರಿಸಿ ಪ್ರಸಾದಕಾಯವಾಗಬೇಕಾದರೆ ಚಿತ್‌ಪ್ರಸಾದದಲ್ಲಿ ಸರ್ವಾಂಗವನ್ನು ನಿವೇದಿಸಬೇಕು. ಆಗ್ಗೆ ಇದರ ಪ್ರಕೃತಿ ಸ್ವಭಾವವು ಹೋಗಿ ಕೇವಲ ಪ್ರಸಾದ ಸ್ವರೂಪವಾಗುತ್ತದೆ.

ಒಬ್ಬ ಗಣಾಧೀಶ್ವರನು ಹೇಳುವದೇನೆಂದರೆ—"ಪ್ರಸಾದವೆಂದರೆ ಪರಾತ್ಪರ ಚಿದ್ಘನ ವಸ್ತು, ಶಿಷ್ಯನ ಬ್ರಹ್ಮರಂಧ್ರದಲ್ಲಿ ಬೆಳಗುವ ಅಖಂಡ ಜ್ಯೋತಿ, ಪ್ರಸಾದವೆಂಬುದು ಪರಿಪೂರ್ಣ ಜ್ಞಾನಾಮೃತ, ಅದೇ ಶಿವನ ಚಿತ್ಕಳೆ. ಇಂತಪ್ಪ ಪ್ರಸಾದವು ಕಾಯ, ಮನ, ಭಾವಗಳಲ್ಲಿ ವ್ಯಾಪಿಸಿ, ಪ್ರಕೃತಿ ಸ್ವಭಾವ ಅಳಿದು ಪ್ರಸಾದಮಯವಾಗಿ ಬಯಲು ಬಯಲಲ್ಲಿ ಬೆರೆಸುವವನೇ ಶರಣನು." ಹೀಗೆ ಪ್ರಸಾದವನ್ನು ಅಮರಗಣಾಧೀಶ್ವರರು ವರ್ಣಿಸಿದ್ದಾರೆ.

ಬಹುಜನರು ಪಾದೋದಕ ಪ್ರಸಾದಗಳನ್ನು ಹಳಿಯುವದುಂಟು. ಆದರೆ ಮೇಲೆ ಹೇಳಿದ ಪಾದೋದಕ ಪ್ರಸಾದದ ತತ್ವವನ್ನು ತಿಳಿಯಬೇಕು.

## ಏಕಭುಕ್ತೋಪವಾಸಾದಿಗಳು

ಪ್ರಸಾದಿಯಾದವನು ಏಕಭುಕ್ತೋಪವಾಸಗಳನ್ನು ಆಚರಿಸಬಾರದೆಂದು ಅಮರಗಣಾಧೀಶ್ವರರು ತಮ್ಮ ವಚನಗಳಲ್ಲಿ ನಿರೂಪಿಸಿದ್ದಾರೆ. ಉರಿಲಿಂಗ ಪೆದ್ದಿ ಎಂಬ ಗಣಾಧೀಶ್ವರನು ಹೇಳುವದೇನೆಂದರೆ - "ಪ್ರಾಣಲಿಂಗ ಸಂಬಂಧಿ

ಯಾದ ಲಿಂಗವಂತನು ಏಕಭುಕ್ತೋಪವಾಸಂಗಳಂ ಮಾಡಲಾಗದು. ಅದೇನು ಕಾರಣವೆಂದರೆ— "ದೇವರಾರೋಗಣೆಯು ತಪ್ಪುವದಾಗಿ ಅಷ್ಟವಿಧಾರ್ಚನೆ, ಷೋಡಶೋಪಚಾರ ಕ್ರಿಯೆಗಳು ತಪ್ಪುವದಾಗಿ ಆಗಮ ಮಾರ್ಗ ತಪ್ಪುವದಾಗಿ" ಎಂದು ಮುಂತಾಗಿ ಹೇಳುತ್ತಾನೆ.

ಬಸವಣ್ಣನವರು ಸಹ ಹೇಳುವದೇನೆಂದರೆ—"ಸೋಮವಾರ ಮಂಗಳ ವಾರವೆಂದು ಮಾಡುವ ಭಕ್ತನ ಲಿಂಗಭಕ್ತಂಗೆಂತು ಸರಿ ಎಂಬೆನಯ್ಯ ? ದಿನ ಶ್ರೇಷ್ಠವೋ ? ಲಿಂಗ ಶ್ರೇಷ್ಠವೋ ? ದಿನವೆಂದು ಮಾಡುವ ದುರಾಚಾರಿಯ ಮುಖವ ನೋಡಲಾಗದು. ಆತ ದಿನವೇ ಘನವೆಂದು, ದಿನವೇ ದೈವವೆಂದು ಮಾಡುವನಾಗಿ ಆತ ದಿನಭಕ್ತನು. ಲಿಂಗಭಕ್ತನು ಲಿಂಗವೇ ಘನವೆಂದು, ಲಿಂಗವೇ ದೈವವೆಂದು ಮಾಡುವನಾಗಿ ಆತ ಲಿಂಗ ಭಕ್ತನು" ಎಂದು ಹೇಳು ತ್ತಾರೆ. ಇದೇ ರೀತಿಯಾಗಿ ಕಾಡ ಸಿದ್ಧೇಶ್ವರರೆಂಬ ಪುರಾತನರು ಹೇಳುವ ದೇನೆಂದರೆ:—"ದ್ವಾದಶ ಮಾಸದೊಳಗೆ ಶ್ರಾವಣ ಮಾಸದ ಫಲ ಪುಣ್ಯ ಮಹಾ ದೊಡ್ಡದೆಂದು ವೇದ, ಪುರಾಣ, ಶ್ರುತಿವಾಕ್ಯಂಗಳಿಂದ ಕೇಳಿ ಅಂತಪ್ಪ ಶ್ರಾವಣಮಾಸ ತಿಂಗಳ ದಿವಸ ಪರಿಯಂತರವಾಗಿ ನಿತ್ಯದಲ್ಲಿ ವ್ರತವ ನಾಚರಿಸುವವರ ಆಚರಣೆಯ ಪೇಳ್ವೆ. ಅದೆಂತೆಂದೊಡೆ, ಶ್ರಾವಣ ಮಾಸ ಪಾಡ್ಯ ದಿವಸ ಮೊದಲುಮಾಡಿ ನಿತ್ಯದಲ್ಲಿ ಒಬ್ಬ ಜಂಗಮದ ಪಾದವ ಪಿಡಿದು ಪತ್ರೆ, ಪುಷ್ಪ ನಿತ್ಯದಲ್ಲಿ ತಂದು ಪಾದ ಪೂಜೆಯ ಮಾಡಿ, ಪಾದೋದಕ ಪ್ರಸಾದವ ಕೊಂಡು ಆ ಜಂಗಮ ಸಹಿತ ಮೃಷ್ಟಾನ್ನ ಭೋಜನವ ಹಾ, ಹಾ ಎಂದು ಒಟ್ಟೈಸಿಕೊಂಡು ಒಡಲ ತುಂಬಿಕೊಂಡು ಮತ್ತೆ ಮರಳಿ ಸಾಯಂ ಕಾಲಕ್ಕೆ ಫಲಾಹಾರವೆಂದು ಮಾಡಿಸಿ ತಿಂದು ನಾವು ಶ್ರಾವಣಮಾಸ ಒಂದೊತ್ತು ಉಪವಾಸ ನಿತ್ಯದಲ್ಲಿ ಜಂಗಮದ ತೀರ್ಥ ಪ್ರಸಾದ ತಪ್ಪದೆ ಕೊಂಬ ವ್ರತವುಳ್ಳವರೆಂದು ತಮ್ಮ ಬಿಂಕದ ಮಾತು ಮೂಢಾತ್ಮರ ಮುಂದೆ ಬೀರುವರಯ್ಯ. ಇಂತಪ್ಪ ತಾಮಸ ಗುಣವುಳ್ಳ ಅಹಂಕಾರಿಗೆ ವೀರಮಾಹೇ ಶ್ವರರೆಂದಡೆ ಕಾಡಿನೊಳಗಾದ ಶಂಕರ ಪ್ರಿಯ ಚನ್ನ ಕದಂಬ ಲಿಂಗ ನಿರ್ಮಾಯ ಪ್ರಭುವು ಮೆಚ್ಚುವನೇ ? ಮೆಚ್ಚನಯ್ಯ, ನರಕದಲ್ಲಿಕ್ಕೇದ ನೋಡಾ.

## ಜ್ಯೋತಿಷ್ಯ

ಅಮರಗಣಾಧೀಶ್ವರರು ಜ್ಯೋತಿಷ್ಯವನ್ನು ನಂಬುವದಿಲ್ಲ. ವೀರಶೈವರು ಅದನ್ನು ನಂಬಬಾರದೆಂದು ಅವರ ಅಭಿಪ್ರಾಯವಿದೆ. ವೀರಶೈವನು ಲಿಂಗವ

ನೊಂದೇ ನಂಬತಕ್ಕದ್ದು. ಆದರೆ ಅವನು ಲಿಂಗವನ್ನು ನಂಬದೆ ನವಗ್ರಹ ಗಳನ್ನು ನಂಬಿ ಅವುಗಳ ಬಲಾಬಲವನ್ನು ನೋಡುವದು ಲಿಂಗ ಭಕ್ತಿಗೆ ಹಾನಿಯು. ಅವನು ಪರಮಾತ್ಮನಿಗರ್ಪಿಸಿ ತಾನು ಮಾಡತಕ್ಕ ಕಾರ್ಯ ಗಳನ್ನು ಮಾಡತಕ್ಕದ್ದು. ಆಗ ಅವನಿಗೆ ಲಾಭವಾಗಲಿ, ಹಾನಿಯಾಗಲಿ, ಶಿವಾರ್ಪಣವೆಂದು ಸಮಾಧಾನಿಯಾಗಿರಬೇಕು. ಆದ್ದರಿಂದ ಬಸವೇಶ್ವರನು ತನ್ನ ವಚನದಲ್ಲಿ ಅನ್ನುವದೇನೆಂದರೆ—"ಎಮ್ಮವರು ಬೆಸಗೊಂಡರೆ ಶುಭಲಗ್ನ ವೆನ್ನಿರಯ್ಯ. ರಾಶಿಕೂಟ ಋಣಾನುಸಂಬಂಧ ಉಂಟೆಂದು ಹೇಳಿರಯ್ಯ. ನಾಳಿನ ದಿನಕ್ಕೆ ಇಂದಿನ ದಿನವೇ ಲೇಸೆಂದು ಹೇಳಿರಯ್ಯ. ಕೂಡಲಸಂಗಮ ದೇವರ ಪೂಜಿಸಿದ ಫಲ ನಿಮ್ಮದಯ್ಯ."

ಇನ್ನೊಬ್ಬ ವಚನಕಾರನು ತನ್ನ ವಚನದಲ್ಲಿ ಇದೇ ತತ್ವವನ್ನು ಸಮ ರ್ಥಿಸಿದ್ದಾನೆ. ಅವನು ಅನ್ನುವದೇನೆಂದರೆ—" ತಿಥಿ ವಾರವೆಂದರಿಯೆನಯ್ಯ. ಲಗ್ನ ವಿಲಗ್ನವೆಂದರಿಯೆನಯ್ಯ. ಇದನರಿತು ಹದಿನಾರು ವಾರ, ಹದಿನೆಂಟು ಕುಲವೆಂದೆಂಬರು. ನಾವಿದನರಿಯೆನಯ್ಯ. ಇರುಳೊಂದು ವಾರ, ಹಗ ಲೊಂದು ವಾರ, ಭವಿಯೊಂದು ಕುಲ, ಭಕ್ತನೊಂದು ಕುಲ. ನಾವು ಬಲ್ಲುದು ಇದು ತಾನೆ ಬಸವ ಪ್ರಿಯ ಕೂಡಲ ಚನ್ನಸಂಗಮದೇವಾ.

ಮತ್ತೊಬ್ಬ ವಚನಕಾರನು ಇದೇ ತತ್ವವನ್ನು ಸಮರ್ಥಿಸುತ್ತ ನುಡಿದು ದೇನೆಂದರೆ—"ಶ್ರೀಮತು ಸಜ್ಜನ ಶುದ್ಧ ಶಿವಾಚಾರವಾಗಿ ಅಷ್ಟಾವರಣವೇ ಅಂಗವಾಗಿ, ಪಂಚಾಚಾರವೇ ಪ್ರಾಣವಾಗಿ ಬಸವೇಶ್ವರ ದೇವರ ಸಾಂಪ್ರದಾ ಯಕರೆಂದು ನುಡಿದು ನಡೆಯಬಲ್ಲರೆ ಭಕ್ತರೆಂಬೆ, ಪುರಾತನರೆಂಬೆ. ಈ ಶಿವಾ ಚಾರದ ಪಥವನರಿಯದೆ ಇರುಳು ಹಗಲು ಅನಂತ ಸೂತಕ ಪಾತಕಂಗ ಳೊಳಗೆ ಮುಳುಗಾಡಿ ಮತಿಗೆಟ್ಟು, ಪಂಚಾಂಗವ ಬೊಗಳುವ ಭ್ರಷ್ಟಮಾದಿಗರ ಮಾತು ಅಂತಿರಲಿ. ಪಂಚಾಂಗವ ಕೇಳಿದ ಪಂಚಪಾಂಡವರು ದೇಶಭ್ರಷ್ಟ ರಾದರೇಕೆ ? ಪಂಚಾಂಗವ ಕೇಳಿದ ಶ್ರೀರಾಮನ ಹೆಂಡತಿ ರಾವಣಗೆ ಸೆರೆ ಯಾದಳೇಕೆ ? ಕುರುಡ, ಕುಂಟ, ಹಲ್ಲು ಮುರುಕ ಗುರುತಲ್ಪಕನ ಬಲ ವನೇ ಕೇಳಲಾಗದು. ಗುರುವಿನಾಜ್ಞೆಯ ಮೀರಿ ಸತ್ತರೆ, ಹೊಲೆ, ಹಡೆದರೆ ಹೊಲೆ, ಮುಟ್ಟಾದರೆ ಹೊಲೆ ಎಂದು ಸಂಕಲ್ಪಿಸಿಕೊಂಬಿರಿ. ನಿಮ್ಮ ಮನೆ ಹೊಲೆಯಾದರೆ ನಿಮ್ಮ ಗುರುವು ಕೊಟ್ಟ ಇಷ್ಟಲಿಂಗವೇನಾಯಿತೋ ? ರುದ್ರಾಕ್ಷಿ ಏನಾಯಿತೋ ? ಮಂತ್ರವೇನಾಯಿತೋ ? ನೀವು ಭೂತ ಪ್ರಾಣಿ

ಗಳು. ಇದ ಕಂಡು ನಾಚದೆ ಮತ್ತೆ ಮತ್ತೆ ಶುಭಲಗ್ನವ ಕೇಳಿ ಮದುವೆಯಾದ ಅನಂತ ಜನರ ಹೆಂಡಿರು ಮುಂಡೆಯರಾಗಿ ಹೋದ ದೃಷ್ಟಾಂತವ ಕಂಡು ಪಂಚಾಂಗವ ಕೇಳಿದವರಿಗೆ ನಾಯಿ ಮೊಲವ ಹಂದಿ ಕಿತ್ತುಕೊಂಡು ತಿಂದಂತಾಯಿತ್ತು ಕಾಣಾ ನಿಸ್ಸಂಗ ನಿರಾಳ ಪ್ರಭುವೇ.

## ಸಕೀಲಗಳು

ಅಮರಗಣಾಧೀಶ್ವರರು ಅಷ್ಟಾವರಣ ಷಟ್‌ಸ್ಥಲಗಳಿಗೆ ಮಹತ್ವದ ಸ್ಥಾನವನ್ನು ಕೊಟ್ಟಿದ್ದಾರೆ. ಆದರೆ ಅವುಗಳ ನಿಜಸ್ಥಿತಿಯನ್ನು ಅರಿತವರ ಸಂಖ್ಯೆ ಬಹು ಕಡಿಮೆ. ಆದರೆ ಈಚೆಗೆ ಶಿಕ್ಷಣ ಕ್ರಮದಲ್ಲಿ ವಚನಶಾಸ್ತ್ರ ಗ್ರಂಥಗಳು ಸಮಾವೇಶವಾಗಹತ್ತಿವೆ. ಇದರಿಂದ ಅವರಿಗೆ ಮಸಕು ಮಸಕಾದ ಕಲ್ಪನೆಯು ಈ ವಿಷಯಗಳ ಬಗ್ಗೆ ಸ್ಥೂಲಮಾನದಿಂದ ಉಂಟಾಗಲು ಕಾರಣವಾಗಿವೆ. ಇವರಿಗೆ ಇನ್ನೂ ಸಕೀಲಗಳ ಜ್ಞಾನವು ಸಾಕಷ್ಟು ಉಂಟಾಗಿರುವದಿಲ್ಲ. ಇದನ್ನು ಕೆಳಗಿನ ಉದಾಹರಣೆಯಿಂದ ತಿಳಿಯಬಹುದು.

ಷಟ್‌ಸ್ಥಲವೆಂಬ ದಿವ್ಯವಾದ ಮಹಾ ಜ್ಞಾನವು ಒಂದು ಭವ್ಯವಾದ ಅಂತಸ್ತಿನ ಮಂದಿರವೆಂದು ಭಾವಿಸೋಣ. ಈ ಮಂದಿರದಲ್ಲಿ ಭಾಗ ವಿಭಾಗಗಳಿರುತ್ತಿದ್ದು ಅವೆಲ್ಲವುಗಳಲ್ಲಿ ವಿಧವಿಧದ ಪದಾರ್ಥಗಳು ತುಂಬಿರುವವೆಂದು ಭಾವಿಸಿರಿ. ಈ ಜ್ಞಾನಮಂದಿರದಲ್ಲಿ ಅನೇಕ ಕೋಣೆಗಳಿದ್ದು ಅವುಗಳಲ್ಲಿ ಬಗೆಬಗೆಯ ಜ್ಞಾನವು ಸಂಗ್ರಹಿತವಾಗಿದೆ. ಈ ಕೋಣೆಗಳಿಗೆ ಸಕೀಲಗಳೆನ್ನುವರು. ಸಕೀಲ ರೂಪ ಪ್ರತಿಯೊಂದು ಕೋಣೆಗಳಲ್ಲಿ ಹೊಕ್ಕು ಅಲ್ಲಿರುವ ಜ್ಞಾನವನ್ನು ಹಸ್ತಗತ ಮಾಡಿಕೊಳ್ಳದಿದ್ದರೆ ಗತ್ಯಂತರವೇ ಇಲ್ಲ. ಆದ್ದರಿಂದ ಸಕೀಲಗಳ ನಿಜಸ್ಥಿತಿಯನ್ನು ಮನವರಿಕೆ ಮಾಡಿಕೊಂಡು ಆ ಪ್ರಕಾರ ಜೀವಿತದಲ್ಲಿ ಶಕ್ಯವಿದ್ದಮಟ್ಟಿಗೆ ನಡವಳಿಕೆಯಲ್ಲಿ ತರತಕ್ಕದ್ದು.

ಸಕೀಲಗಳು ಬೇರೆ ಬೇರೆ ದೃಷ್ಟಿಯಿಂದ ಅನೇಕ ರೀತಿಯಾಗಿ ವರ್ಗೀಕರಿಸಲ್ಪಟ್ಟಿವೆ. ಆದರೂ ಅವುಗಳಲ್ಲಿ ಒಂದಾದ ತೀರ ಸ್ಥೂಲಮಾನದ ಅಷ್ಟವಿಧ ಸಕೀಲಗಳ ದ್ವಾರವಾಗಿ ನಿರ್ದೇಶಿಸುವೆನು. ಅದು ಹೇಗೆಂದರೆ:—

## ಅಷ್ಟವಿಧ ಸಕೀಲಗಳು

(೧) ಚಕ್ರ:— ಆಧಾರ, ಸ್ವಾಧಿಷ್ಠಾನ, ಮಣಿಪೂರಕ, ಅನಾಹತ, ವಿಶುದ್ಧಿ, ಆಜ್ಞೇಯ. (೨) ಇದಕ್ಕೆ ಅನುಸಾರವಾಗಿ ಅಂಗಗಳು ಯಾವ

ವೆಂದರೆ— ಈಶ್ವರ, ಮಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ. (೩) ಇದಕ್ಕೆ ಅನುಸಾರವಾಗಿ ಲಿಂಗಗಳು ಯಾವವೆಂದರೆ— ಆಚಾರ, ಗುರು, ಶಿವ, ಚರ, ಪ್ರಸಾದ, ಮಹಾ. (೪) ಶಕ್ತಿಗಳು ಯಾವವೆಂದರೆ— ಕ್ರಿಯಾ, ಜ್ಞಾನ, ಇಚ್ಛಾ, ಆದಿ, ಪರಾ, ಚಿತ್. (೫) ಭಕ್ತಿಗಳು ಯಾವ ವೆಂದರೆ:— ಶ್ರದ್ಧಾ, ನಿಷ್ಠಾ, ಅವಧಾನ, ಅನುಭಾವ, ಆನಂದ, ಸಮರಸ. (೬) ಹಸ್ತಗಳು ಯಾವವೆಂದರೆ:— ಸುಚಿತ್ತ, ಸುಬುದ್ಧಿ, ನಿರಹಂಕಾರ, ಸುಮನ, ಸುಜ್ಞಾನ, ಸದ್ಭಾವ. (೭) ಮುಖಗಳು ಯಾವವೆಂದರೆ:— ಘ್ರಾಣ, ಜಿಹ್ವೆ, ನೇತ್ರ, ತ್ವಚೆ, ಶ್ರೋತ್ರ, ಹೃದಯ. (೮) ಪದಾರ್ಥಗಳು ಯಾವವೆಂದರೆ:— ಸುಗಂಧ, ಸುರಸ, ಸುರೂಪ, ಸುಶಬ್ದ, ಸುತೃಪ್ತಿ.

ಕಲೆಗಳು ಯಾವವೆಂದರೆ:— ನಿವೃತ್ತಿ, ಪ್ರತಿಷ್ಠಾ, ವಿದ್ಯಾ, ಶಾಂತಿ, ಶಾಂತ್ಯತೀತ ಶಾಂತ್ಯತೀತೋತ್ತರ. ಈ ಕಲೆಗಳು ಸ್ವತಂತ್ರವಾದವುಗಳಲ್ಲ. ಅವು ಶಕ್ತಿಗಳ ಪರ್ಯಾಯಗಳು.

ಹೀಗೆ ಅವು ಅಷ್ಟ ವಿಧ ಸಕೀಲಗಳೆಂದೆನಿಸುತ್ತವೆ. ಅವುಗಳ ಜ್ಞಾನ ವನ್ನು ವೀರಶೈವನು ಹೊಂದತಕ್ಕದ್ದು.

ಇವುಗಳಲ್ಲದೆ ೧೦೮ ವಿಧ ಸಕೀಲಗಳು, ೨೧೬ ವಿಧ ಸಕೀಲುಗಳಿವೆ. ಇವುಗಳ ಜ್ಞಾನದಿಂದ ಷಟ್‌ಸ್ಥಲಗಳ ಜ್ಞಾನವನ್ನು ಹೊಂದಲು ಶಿವಾನುಭವಿಯು ಯೋಗ್ಯನಾಗುತ್ತಾನೆ.

ಷಟ್‌ಸ್ಥಲಗಳಲ್ಲಿ ಹೇಳಿದ ಆರು ಅಂಗರು ಬೇರೆ ಬೇರೆಯಲ್ಲ. ಒಬ್ಬನೇ ಅಂಗನು ತನ್ನಲ್ಲಿ ಉಂಟಾದ ಲಿಂಗ ಪ್ರಗತಿಯ ಅಂತಸ್ತುಗಳಿಗನುಸಾರವಾಗಿ ಆರು ಅವಸ್ಥೆಗಳನ್ನು ಹೊಂದಿ ಬೇರೆ ಬೇರೆ ಹೆಸರುಗಳು ಅವನಿಗೆ ಉಂಟಾ ಗುತ್ತವೆ. ಅದೇ ಮೇರೆಗೆ ಒಂದು ಲಿಂಗವೇ ಆರು ಲಿಂಗವಾಗಿರುವದು. ಆದ್ದರಿಂದ ಅಂಗನು ತಾನಾವ ಸ್ಥಲದಲ್ಲಿ ನಿಂತು ಲಿಂಗಾರಾಧನೆಗೆ ಉದ್ಯುಕ್ತ ನಾದರೂ ಅಲ್ಲಿಯೇ ಷಟ್‌ಸ್ಥಲಗಳನ್ನೆಲ್ಲ ಪಡೆದು ಕೊನೆಗೆ ಲಿಂಗಾಂಗ ಸಾಮ ರಸ್ಯವನ್ನು ಪಡೆಯಬೇಕು.

### ಶಿವಾನುಭವಮಂಟಪ

ಬಸವನು ಕಲ್ಯಾಣದಲ್ಲಿರುವಾಗ ಅವನ ಯಶೋದುಂದುಭಿಯನ್ನು ಕೇಳಿ ನಾನಾ ದೇಶಗಳಿಂದ ಶಿವಶರಣರು ಅಲ್ಲಿಗೆ ಬಂದು ತತ್ವಚಿಂತನೆಯನ್ನು ಮಾಡು

ವರು. ಇದಕ್ಕೋಸ್ಕರ ಬಸವೇಶ್ವರನು ರಚಿಸಿದ್ದ ಸ್ಥಾನವೇ ಶಿವಾನುಭವ ಮಂಟಪವೆಂಬ ಹೆಸರಿನಿಂದ ಪ್ರಸಿದ್ಧವಾಯಿತು. ಇಲ್ಲಿಗೆ ಕಾಶ್ಮೀರ, ನೇಪಾಳ, ಬಂಗಾಳಗಳಿಂದಲೂ ಉತ್ತರದಲ್ಲಿ ಗುರ್ಜರ ದೇಶದಿಂದಲೂ ಪೂರ್ವದಲ್ಲಿ ಓಡಿಸಾ, ಆಂಧ್ರ ದೇಶಗಳಿಂದಲೂ ದಕ್ಷಿಣದಲ್ಲಿ ತುಳು, ಮಲೆಯಾಳ, ಪಾಂಡ್ಯ, ಚೋಳ ಮೊದಲಾದ ದೇಶಗಳಿಂದಲೂ ಶಿವಶರಣರೂ ಅಮರಗಣಾಧೀಶ್ವರರೂ ಕಲ್ಯಾಣಕ್ಕೆ ಬಂದರೆಂದು ವೀರಶೈವ ಗ್ರಂಥಗಳೆಲ್ಲವೂ ಹೇಳುತ್ತವೆ. ಆಗ ಕಲ್ಯಾಣವು ಮಹಾಮಹಿಮರ ಆಗರವಾಯಿತು. ಭೂ ಕೈಲಾಸವೆಂದೆನಿಸಿ ಕೊಂಡಿತು. ಅಲ್ಲಿಗೆ ಅಲ್ಲಮ, ಸಿದ್ಧರಾಮ, ಮಹಾದೇವಿಯಕ್ಕ, ಮೋಳಗಿ ಮಾರಯ್ಯ ಇಂಥ ಬಹುಜನ ಶರಣರು ಬಂದು ಪ್ರಸಿದ್ಧರಾದರು.

ಇಂಥ ಮಹಾಜ್ಞಾನಿಗಳು ಕಲ್ಯಾಣದಲ್ಲಿ ಬಸವನನ್ನು ಆಶ್ರಯಿಸಿರಲಾಗಿ "ಬಸವನು ಶಿವಾನುಭವಿಗಳಿಗಾಗಿ ಒಂದು ಮಂಟಪ ಅಥವಾ ಮಂದಿರವನ್ನೇ ಸ್ಥಾಪಿಸಿದನು. ಇದಕ್ಕೆ 'ಅನುಭವಮಂಟಪ'ವೆಂದು ಹೆಸರು. ಷಟ್‌ಸ್ಥಲ ಬ್ರಹ್ಮಿಗಳೆಂದು ಪ್ರಸಿದ್ಧರಾದವರು ಇದರಲ್ಲಿ ಪ್ರವೇಶಿಸುವರು. ಈ ಮಂಟಪ ದಲ್ಲಿ ಪರಮಜ್ಞಾನಮೂರ್ತಿಯಾದ ಪ್ರಭುವು ಮಿಗಿಲಾಗಿ ಪ್ರಕಾಶಿಸುತ್ತಿದ್ದನು. ಅವನೊಡನೆ ಚನ್ನಬಸವ, ಬಸವ, ಮೋಳಿಗಿಮಾರಯ್ಯ, ಮಡಿವಾಳಮಾಚಿ ದೇವ, ಸಿದ್ಧರಾಮ ಮೊದಲಾದವರು ತತ್ವ ಚಿಂತನೆಯಲ್ಲಿರುವರು.

ಈ ಕಲ್ಯಾಣದ ಅನುಭವಮಂಟಪವು ಹಿಂದಕ್ಕೆ ಗ್ರೀಸ ದೇಶದಲ್ಲಿ ಪ್ಲೇಟೋ ಎಂಬ ತತ್ವಜ್ಞಾನಿಯು ಸ್ಥಾಪಿಸಿದ ತತ್ವ ಮಂಟಪವನ್ನು ಹೋಲು ತ್ತದೆ. ಪ್ಲೇಟೋನ ತತ್ವಮಂಟಪಕ್ಕಾದರೂ ದೂರದಿಂದ ವಿದ್ಯಾರ್ಥಿಗಳು ಬರುತ್ತಿದ್ದರು. ತತ್ವ ದೃಷ್ಟಿಯಿಂದ ಪ್ಲೇಟೋನನ್ನು ಬಸವನಿಗೆ ಹೋಲಿಸ ಬಹುದು. ಅರಿಸ್ಟಾಟಲನನ್ನು ಚನ್ನಬಸವನಿಗೆ ಹೋಲಿಸಬಹುದು.

ಅನುಭವ ಮಂಟಪದಲ್ಲಿ ಬಸವ, ಅಲ್ಲಮನಂಥವರು ತಮ್ಮ ಅದ್ವಿತೀಯ ಜ್ಞಾನವನ್ನು ತೋರಿಸುತ್ತಿದ್ದರು. ಅನುಭವ, ಯೋಗ, ಕ್ರಿಯೆ, ಜ್ಞಾನ ಮೊದಲಾದವುಗಳು ಆ ಮಹಾತ್ಮರ ಮುಖದಿಂದ ಹೊರಹೊಮ್ಮುತ್ತಿದ್ದವು. ಅಲ್ಲಿ ಪ್ರಕಟವಾದ ವಿಚಾರಗಳನ್ನು ಲಿಖಿಸುವ ಬಗ್ಗೆಯೂ ಯೋಗ್ಯ ಏರ್ಪಾ ಡುಗಳು ಅಲ್ಲಿ ಇದ್ದವು. ಇವುಗಳಿಂದಲೇ ವಚನ ವಾಙ್ಮಯವು ಬೆಳಕಿಗೆ ಬಂದಿತು.

ಅಮರಗಣಾಧೀಶ್ವರರು ಇದಕ್ಕೂ ಮೊದಲು ಕಾಲ ಕಾಲಕ್ಕೆ ಉದ್ಭವಿಸಿ ತಮ್ಮ ವಿಚಾರಗಳನ್ನು ಪ್ರಕಟಿಸುತ್ತಾ ಬಂದಿದ್ದಾನೆ. ಆದರೆ ಬಸವೇಶ್ವರನ ಕಾಲದಲ್ಲಿ ಅವನ ಪ್ರಭಾವದಿಂದ ದಿಗ್ದೇಶಗಳಿಂದ ಅಸಂಖ್ಯ ಗಣಾಧೀಶ್ವರರು ಕಲ್ಯಾಣಕ್ಕೆ ಬಂದು ಅಲ್ಲಿ ಮಿಲಿತರಾಗಿ ಅಸಂಖ್ಯ ವಚನಗಳನ್ನು ರಚಿಸಿದರು. ಇವುಗಳಲ್ಲಿ ಅತ್ಯಲ್ಪ ಭಾಗಗಳು ಮಾತ್ರ ಈ ವರೆಗೆ ಪ್ರಕಾಶಿತವಾಗಿವೆ. ಉಳಿದವುಗಳು ಇನ್ನೂ ಬೆಳಕನ್ನು ಕಂಡಿಲ್ಲ. ಅವುಗಳನ್ನು ಸಂಶೋಧಿಸಿ ಪ್ರಕಟಿಸುವದು ಈಗಿನ ಕಾಲದ ವೀರಶೈವರ ಮುಖ್ಯ ಕಾರ್ಯವಾಗಿದೆ. ಈಗ ಕೈಕೊಳ್ಳಲ್ಪಟ್ಟ ಅಮರಗಣಾಧೀಶ್ವರರ ಮಹೋತ್ಸವವು ಈ ಕಾರ್ಯಕ್ಕೆ ಮೊದಲಾಗಲೆಂದು ನಾವು ಹಾರೈಸಿದ್ದೇವೆ.

## ವೀರಶೈವ ಸಮಾಜದಲ್ಲಿಯ ವರ್ಗಗಳು

ವೀರಶೈವರಿದ್ದ ಪ್ರಾಂತಗಳಲ್ಲೆಲ್ಲ ಅವರ ಮಠಗಳು ನಿಬಿಡವಾಗಿ ಹಬ್ಬಿರುತ್ತವೆ. ಅವುಗಳ ಮೂಲಕ ಅನೇಕ ಸಾಮಾಜಿಕ ಧಾರ್ಮಿಕ ಉಪಯುಕ್ತ ಕಾರ್ಯಗಳು ಬಹುಕಾಲದಿಂದಲೂ ನಡೆದು ಬಂದಿರುತ್ತವೆ. ಅವುಗಳ ಮೂಲಕ ವೀರಶೈವ ಸಮಾಜವು ಒಂದು ಸುಸಂಘಟಿತ ಸಮಾಜವಾಗಿರುತ್ತದೆ. ದೇಶದಲ್ಲಿ ಅನೇಕ ಕ್ರಾಂತಿಗಳಾಗುತ್ತ ಬಂದಿವೆ. ಆದರೂ ಈ ಮಠಗಳ ಮೂಲಕ ವೀರಶೈವರಲ್ಲಿ ಸುವ್ಯವಸ್ಥೆಯು ನಡೆದುಬಂದಿರುತ್ತದೆ.

ವೀರಶೈವ ಸಮಾಜದಲ್ಲಿ ಭಕ್ತವರ್ಗ, ಮಹೇಶ್ವರ ವರ್ಗ, ನಿರಂಜನ ವರ್ಗ ಎಂದು ಮೂರು ಮುಖ್ಯ ವಿಭಾಗಗಳನ್ನು ಕಲ್ಪಿಸಬಹುದು.

ಭಕ್ತವರ್ಗದವರು ಸಮಾಜಕ್ಕೆ ಅವಶ್ಯವಿರುವ ಕಸಬು ಕಾಯಕಗಳನ್ನು ಮಾಡಿಕೊಂಡು ಸಮಾಜದ ಸಂಪತ್ತನ್ನು ಬೆಳೆಯಿಸುತ್ತ ಅಷ್ಟಾವರಣ ನಿರತರಾಗಿ ಕಾರ್ಯಮಾಡುತ್ತ ಬಂದಿದ್ದಾರೆ.

ಮಹೇಶ್ವರ ವರ್ಗದವರು ಸಮಾಜದ ಆಚಾರ ಸಂಸ್ಕೃತಿಗಳ ಪರಿಪಾಲನೆ, ಶಿಕ್ಷಣ ಪ್ರಸಾರ, ವಿಧಿ ವಿಧಾನ ಮೊದಲಾದ ಕಾರ್ಯಗಳನ್ನು ನಡೆಯಿಸಿಕೊಂಡು ಬಂದಿರುತ್ತಾರೆ. ಇವರಲ್ಲಿ ಪಂಚಾಚಾರ್ಯರು, ಪಟ್ಟದ ದೇವರು, ಚರಂತಿಗಳು, ಹಿರೇಮಠದವರು ಮುಂತಾದವರು ಬರುತ್ತಾರೆ. ಮೊದಲಿನ ಕಾಲದಲ್ಲಿ ಇವರೇ ಜನತೆಗೆ ಶಿಕ್ಷಣ ಕೊಡುವ ಕಾರ್ಯ ಮಾಡುತ್ತಿದ್ದರು. ಬ್ರಿಟಿಶರು ಬಂದ ಬಳಿಕ ಗ್ರಾಮಾಂತರಗಳಲ್ಲಿ ಶಾಲೆಗಳು ಸ್ಥಾಪಿತವಾದಂದಿ

ನಿಂದ ಶಿಕ್ಷಣಪ್ರಸಾರ ಕಾರ್ಯವು ಮಠಗಳ ಮೂಲಕ ನಡೆಯುವದು ಅನಾವಶ್ಯಕವಾಯಿತು.

ನಿರಂಜನ ವರ್ಗದವರು ಸ್ವಯಂ ಸ್ಫೂರ್ತಿಯಿಂದ ಪ್ರೇರಿತರಾಗಿ ಲೋಕ ಸಂಗ್ರಹ ಕಾರ್ಯ ಮಾಡುವರು. ಇವರು ಷಟ್‌ಸ್ಥಲ ತತ್ವಗಳನ್ನರಿತು ಕೊಂಡು ಆಚರಿಸಿ ವೀರಶೈವ ಮತತತ್ವ ಜ್ಞಾನಭಾಂಡಾರವನ್ನು ಹರಡು ವಂಥವರು ಇರುತ್ತಾರೆ. ಇವರು ತತ್ವ ಸಂಶೋಧನದಲ್ಲಿ ಕಾಲಕಳೆಯುವರು. ಇವರು ಆಜನ್ಮ ಬ್ರಹ್ಮಚಾರಿಗಳಾಗಿ ನಿಸ್ವಾರ್ಥ ಬುದ್ಧಿಯಿಂದ ಲಿಂಗಾಂಗ ಸಾಮರಸ್ಯ ಜ್ಞಾನ ಪ್ರಸಾರ ಕಾರ್ಯ ಮಾಡುವವರು ಇರುತ್ತಾರೆ.

ಈ ಮೂರು ವರ್ಗದವರು ವೀರಶೈವ ಸಮಾಜದ ಅಸ್ತಿತ್ವ ಅದರ ಘನತೆ ಇವುಗಳನ್ನು ಕಾಯ್ದುಕೊಂಡು ಈ ವರೆಗೆ ಬಂದಿರುತ್ತಾರೆ. ಇವರು ಮಾಡುತ್ತ ಬಂದಿರುವ ಈ ಕಾರ್ಯವನ್ನು ಅಮರಗಣಾಧೀಶ್ವರರ ಚರಿತ್ರೆಗಳಲ್ಲಿ ಕಾಣಿಸುವದು ಅವಶ್ಯವಾಗಿದೆ.

## ವಾಙ್ಮಯ

ಕನ್ನಡದಲ್ಲಿ ಜೈನರು, ವೀರಶೈವರು, ಬ್ರಾಹ್ಮಣರು ಕನ್ನಡ ಭಾಷೆಯ ಸೇವೆ ಮಾಡಿ ಕೀರ್ತಿ ಪಡೆದಿದ್ದಾರೆ. ಕನ್ನಡಕ್ಕೆ ವೀರಶೈವರು ತಮ್ಮ ಸ್ವತಂತ್ರ ವಾದ ಸುಂದರವಾದ ಸಾಹಿತ್ಯದ ಸೊಬಗನ್ನು ಕೊಟ್ಟು ಅದನ್ನು ಅಂದಚಂದ ಮಾಡಿ ಉಳಿದ ಸಂಸ್ಕೃತಿಗಳಲ್ಲಿ ತಲೆ ಎತ್ತಿ ನಿಲ್ಲುವಂತೆ ಮಾಡಿದ್ದಾರೆ. ಜೈನ ಕವಿಗಳು ಪ್ರೌಢ ವಾಕ್ಯಗಳನ್ನು ಕಟ್ಟು ನಿಟ್ಟುಗಳಿಂದ ಬರೆದು ಕೇವಲ ಭಾಷಾ ಪಾಂಡಿತ್ಯರೆನಿಸಿಕೊಂಡಿದ್ದಾರೆ. ಆದರೆ ವೀರಶೈವ ಗ್ರಂಥಕಾರರು ಅನ್ಯರಂತೆ ಕಂಡು ನಡೆಯಲಿಲ್ಲ. ಏಕೆಂದರೆ ಅವರ ತತ್ವ, ಮತ, ಸಂಘಗಳು ಸ್ವತಂತ್ರ ವಾಗಿರುವವು. ಅವರು ತಮ್ಮ ಸುಂದರ ಸುಗಮ ಶೈಲಿಯಿಂದ ಸ್ಫೂರ್ತಿದಾ ಯಕವಾದ ನವಚೈತನ್ಯದಿಂದ ಕೂಡಿದ ಅನುಭವ ಪೂರಿತ ವಾಙ್ಮಯವನ್ನು ಉಂಟುಮಾಡಿದ್ದಾರೆ. ಆದ್ದರಿಂದ ಅವರ ಭಾಷೆಯು ರಮ್ಯವಾಗಿ ಬೆಳಕಿಗೆ ಬಂದಿರುತ್ತದೆ.

ಜೈನ, ಬ್ರಾಹ್ಮಣ ಕವಿಗಳೆಲ್ಲರೂ ಸಾಂಪ್ರದಾಯ ಶರಣರೆಂದು ಹೇಳ ಬಹುದು. ವೀರಶೈವ ಗ್ರಂಥಕಾರರು ತಮ್ಮ ವಸ್ತುಗಳನ್ನು ಆರಿಸುವಲ್ಲಿ ಜನಸಾಮಾನ್ಯರ ಭಾಷೆಯನ್ನು ಉಪಯೋಗಿಸುವಲ್ಲಿ, ಕನ್ನಡ ಛಂದಸ್ಸನ್ನು ನಿರ್ಮಿಸುವಲ್ಲಿ ತಮ್ಮ ಸ್ವಾತಂತ್ರ್ಯವನ್ನು ತೋರಿಸಿದ್ದಾರೆ.

ಹರಿಹರನ ರಗಳೆ, ರಾಘವಾಂಕನ ಕಾವ್ಯ, ವಚನಗ್ರಂಥಗಳು, ತ್ರಿಪದಿಗಳು ಇವುಗಳಲ್ಲಿ ವೀರಶೈವ ಗ್ರಂಥಕಾರರ ಸ್ವಾತಂತ್ರ್ಯವು ಒಡೆದು ಕಾಣುವಂತೆ ಇದೆ.

ಇದರಿಂದ ವೀರಶೈವ ಗ್ರಂಥಕಾರರ ಸಂಖ್ಯೆಯು ಬಹು ದೊಡ್ಡದಾಗಿರುತ್ತದೆ. ಆರ್. ನರಸಿಂಹಾಚಾರ್ಯರ ಕವಿಚರಿತೆ ಗ್ರಂಥಗಳನ್ನು ವಾಚಕರು ನೋಡಿದರೆ ಈ ಸಂಗತಿಯು ಸ್ಪಷ್ಟಪಡುತ್ತದೆ. ವೀರಶೈವರು ಬರೆದ ಗ್ರಂಥಗಳ ಸಂಖ್ಯೆಯು ಉಳಿದ ಸಮಾಜದವರು ಬರೆದ ಗ್ರಂಥಗಳಿಗಿಂತಲೂ ಬಹಳ ಹೆಚ್ಚಿಗೆ ಇರುತ್ತದೆ.

ವೀರಶೈವ ಗ್ರಂಥಕಾರರು ಕೇವಲ ಕನ್ನಡ ಮಾತ್ರವಲ್ಲ, ಅವರು ಸಂಸ್ಕೃತ, ತಮಿಳು, ತೆಲುಗು ಹೀಗೆ ಹಲವಾರು ಭಾಷಾಸಾಹಿತ್ಯಕ್ಕೂ ಕೂಡ ಸೇವೆ ಸಲ್ಲಿಸಿರುವರು. ತೆಲುಗಿನಲ್ಲಿ ಶ್ರೀನಾಥ, ಪಿಡುಪರ್ತಿ ಸೋಮ ಕವಿ, ಪಿಡುಪರ್ತಿ ಬಸವ ಕವಿ, ಧೂರ್ಜಟಿ, ಅನ್ನಮಾಮಾತ್ಯ, ಪಾಲ್ಕುರಿಕೆ ಸೋಮ ಮೊದಲಾದವರು ಹೆಸರಾದ ಗ್ರಂಥಕಾರರಾಗಿದ್ದಾರೆ. ಸಂಸ್ಕೃತದಲ್ಲಿ ಕ್ರಿಯಾಸಾರ, ಶ್ರೀಕರಭಾಷ್ಯ, ಬಸವರಾಜೀಯ ಇವು ಹೆಸರಾದ ಗ್ರಂಥಗಳಾಗಿವೆ.

ಈ ವಿಷಯವು ಬಹು ವಿಸ್ತಾರವಾದದ್ದು. ಈ ಬಗ್ಗೆ ಅನೇಕ ಗ್ರಂಥಗಳು ಉಪಲಬ್ಧವಿವೆ. ಲೇಖ ವಿಸ್ತಾರ ಭಯಕ್ಕೆ ಈ ವಿಷಯವನ್ನು ನಾವು ಈ ಪುಟ್ಟ ಲೇಖದಲ್ಲಿ ಹೆಚ್ಚಿಗೆ ಬರೆಯಲಾರೆವು. ಆದರೆ ವಾಙ್ಮಯ ಕಾರ್ಯದಲ್ಲಿ ವೀರಶೈವರು ಒಂದು ಮಹತ್ತರವಾದ ಸೇವೆಯನ್ನು ನಾಡಿಗೆ ಸಲ್ಲಿಸಿದ್ದಾರೆಂದು ಹೇಳುವದೇ ನಮ್ಮ ಉದ್ದೇಶವಾಗಿದೆ.

## ವೀರಶೈವ ರಾಜಕೀಯ ಪುರುಷರು

ವೀರಶೈವ ಸಮಾಜವು ಪ್ರಬಲ ಸ್ಥಿತಿಯನ್ನು ಹೊಂದಿದ್ದು ೧೧ ನೇ ೨ನೇ ಶತಮಾನಗಳಲ್ಲಿ ಇರುತ್ತದೆ. ೧೨ನೇ ಶತಮಾನದಲ್ಲಿ ಅದು ಒಂದು ಘನತರವಾದ ಸ್ಥಾನವನ್ನು ಹೊಂದಿತು. ೧೨, ೧೩, ೧೪ ನೇ ಶತಮಾನಗಳಲ್ಲಿ ಕರ್ನಾಟಕದಲ್ಲಿ ಮಹತ್ವದ ರಾಜವಂಶಗಳು ಉಂಟಾದವು. ಇವುಗಳು ಇಲ್ಲಿ ಆಳುತ್ತಿರುವಾಗ ವೀರಶೈವ ಸೇನಾಪತಿಗಳೂ, ರಾಜರೂ, ಮಾಂಡಲಿಕರೂ ಅಲ್ಲಿ ಪ್ರಸಿದ್ಧಿಗೆ ಬಂದರು. ಸಾಂತರ ರಾಜರೂ ನೊಳಂಬ ಪಲ್ಲವರೂ ಕರ್ನಾಟಕದ ಮಧ್ಯಪ್ರದೇಶದಲ್ಲಿ ರಾಜ್ಯವಾಳಿದರು. ಇವರಲ್ಲಿ ಅನೇಕರು ವೀರಶೈವ ಮತಾವಲಂಬಿಗಳಾಗಿದ್ದರು. ದೇವಗಿರಿ ಯಾದವರ ಕಾಲ

ವನ್ನು ನೋಡಿದಲ್ಲಿ ಚೌಡದಾನಪುರ ಶಿಲಾಶಾಸನದಲ್ಲಿ ಹೇಳಲ್ಪಡುವ ದೇವರಸ ದಂಡಾಧಿಪನೂ ವರದಾನಿ ಗುಡ್ಡಮ್ಮನ್ಮಯು ಹೆಸರಿನಿಂದ ವಾತಾಖ್ಯಪುರವನ್ನು ಸ್ಥಾಪಿಸಿದ ಸಾಯಿದೇವ ಮಂಡಲಾಧಿಪತಿಯೂ ಪ್ರಸಿದ್ಧಿಗೆ ಬಂದರು. ವಿಜಯ ನಗರದ ರಾಜರ ಕಾಲದಲ್ಲಿ ಲಕ್ಕಣ್ಣ ದಂಡೇಶನು ಪ್ರಸಿದ್ಧಿಗೆ ಬಂದನು. ಮುಂದೆ ಕೆಳದಿ, ಸ್ವಾದಿ, ಬೀಳಗಿ, ಕೊಡಗು, ಹಾಗಲವಾಡಿ ಇಲ್ಲಿ ವೀರಶೈವ ರಾಜಮನೆತನಗಳು ಅಸ್ತಿತ್ವದಲ್ಲಿ ಬಂದವು. ಮೈಸೂರು ಸಂಸ್ಥಾನದ ಆರಂಭ ಕಾಲದ ರಾಜರು ವೀರಶೈವ ಧರ್ಮವನ್ನು ಪಾಲಿಸುತ್ತಿದ್ದರು. ನೆಲ್ಮಾಳ, ಪುಂಗನೂರು, ಸುಗಟೂರು, ಯಲಹಂಕ ಈ ಗ್ರಾಮಗಳ ಪಾಳ್ಯಗಾರರು ವೀರಶೈವರಾಗಿದ್ದರು. ಸುರಪುರ ರಾಜರ ಆಸ್ಥಾನದಲ್ಲಿ ನಿಷ್ಠೀ ಕಲ್ಲಪ್ಪ, ನಿಷ್ಠೀ ವೀರಪ್ಪ ಇವರು ಪ್ರಸಿದ್ಧಿಗೆ ಬಂದರು. ಇದಲ್ಲದೆ ವಿಜಾಪುರ ಬಾದಶಹರಿಗೆ ಅಂಕಿತರಾಗಿ ವಿಜಾಪುರ, ಕಲಬುರ್ಗಿ, ರಾಯಚೂರ, ಧಾರವಾಡ, ಬೆಳಗಾವಿ, ಸೊಲ್ಲಾಪುರ ಈ ಜಿಲ್ಲೆಗಳಲ್ಲಿ ೫೦-೬೦ ಗ್ರಾಮಗಳಲ್ಲಿ ದೇಶಗತಿ ಮನೆತನಗಳು ಉದ್ಭವಿಸಿದವು. ಇವುಗಳ ಅಧಿಪತಿಗಳು ರಾಜರಲ್ಲಿ ದಂಡನಾಯಕರಾಗಿ ತಮ್ಮ ಶೌರ್ಯ ಸಾಹಸಗಳನ್ನು ಮೆರೆಯಿಸಿದ್ದಾರೆ. ಇವರೆಲ್ಲರ ಚರಿತ್ರೆಗಳನ್ನು ಈ ಚಿಕ್ಕ ಲೇಖನದಲ್ಲಿ ವಿಸ್ತರಿಸುವದು ಅಶಕ್ಯವಿದೆ. ಆದ್ದರಿಂದ ಅವರ ಉಲ್ಲೇಖವನ್ನು ಮಾತ್ರ ನಾವು ಇಲ್ಲಿ ಮಾಡಿದ್ದೇವೆ. ಅವರು ಮಾಡಿದ ಸಾಹಸದ ಕಾರ್ಯಗಳು ಕರ್ನಾಟಕ ಇತಿಹಾಸದಲ್ಲಿ ಚಿರ ಸ್ಮರಣೀಯವಾಗಿವೆ.

## ಅಮರಗಣಾಧೀಶ್ವರರ ಸ್ಥಾನಗಳು

ಅಮರಗಣಾಧೀಶ್ವರರು ಉತ್ತರ ಕರ್ನಾಟಕದಲ್ಲಿ ಹೆಚ್ಚು ಪ್ರಸಿದ್ಧಿಗೆ ಬಂದಿದ್ದಾರೆ. ಅವರು ಜೀವಿಸಿದ್ದು ಇದೇ ಭಾಗದಲ್ಲಿ. ಆದ್ದರಿಂದ ಅವರ ಪುಣ್ಯ ಕ್ಷೇತ್ರಗಳು ಧಾರವಾಡ, ಉತ್ತರ ಕಾನಡಾ, ಬೆಳಗಾವಿ, ವಿಜಾಪುರ, ಕಲಬುರ್ಗಿ, ಸೊಲ್ಲಾಪುರ, ರಾಯಚೂರ, ಬಳ್ಳಾರಿ ಜಿಲ್ಲೆಗಳಲ್ಲಿ ಹೆಚ್ಚಾಗಿ ದೊರೆಯುತ್ತವೆ. ಆ ಗ್ರಾಮಗಳು ಸೊಲ್ಲಾಪುರ, ಬಾಗೇವಾಡಿ, ಸಂಗಮ, ಹಿಪ್ಪರಗಿ, ಮುದನೂರು, ನವಿಲೆ, ರಾಚವಟ್ಟಿ, ಸಿದ್ಧಗಿರಿ, ಗೊಬ್ಬೂರು, ಗೋಲಗಿರಿ, ಸಿದ್ಧಗಂಗಾ, ಆಲಂದೆ, ರಂಭಾಪುರಿ, ಶ್ರೀಶೈಲ, ಉಳಿವಿ, ಬಳ್ಳಿಗಾವಿ, ಉಜ್ಜನಿ, ಕೊಲ್ಲಾಪುರ, ಚೌಡದಾನಪುರ, ಅಮರೇಶ್ವರ, ಪಟ್ಟದಕಲ್ಲು, ಐಹೊಳೆ ಮುಂತಾದವು ಇರುತ್ತವೆ. ಇಲ್ಲಿ ಗಣಾಧೀಶ್ವರರ ಕುರುಹುಗಳು ಹೇರಳವಾಗಿ ಸಿಕ್ಕುತ್ತವೆ. ಇವು ಪುಣ್ಯ ಕ್ಷೇತ್ರಗಳೆಂದೆನಿಸಿಕೊಳ್ಳುತ್ತವೆ.

ಎಂಟುನೂರು ವರ್ಷಗಳ ಹಿಂದೆ ಅಮರಗಣಾಧೀಶ್ವರರು ಉದಯ ವಾಗಿ ತಮ್ಮ ಉಚ್ಚ ತತ್ವಗಳನ್ನು ಎಲ್ಲ ಕಡೆಗೂ ಪ್ರಸಾರ ಮಾಡಿದರು. ಇದರಿಂದ ಕರ್ನಾಟಕದಲ್ಲಿ ವಾಙ್ಮಯ, ಕಲೆ, ಸಾಮಾಜಿಕ ಮತ್ತು ಔದ್ಯೋಗಿಕ ಸುಧಾರಣೆಗಳು ಬಹುಮುಖವಾಗಿ ಬೆಳೆದವು. ಸರ್ವರಲ್ಲಿ ಸಮತಾ ಭಾವವು ನೆಲೆಗೊಂಡಿತು. ಜಾತಿಭೇದಗಳು ನಷ್ಟವಾದವು. ಇದು ಅಮರ ಗಣಾಧೀಶ್ವರರು ತಮ್ಮ ಉಚ್ಚ ತತ್ವಗಳನ್ನು ಪ್ರಸಾರ ಮಾಡಿದ್ದರ ಫಲವಾಗಿದೆ. ಈಗ ಗಣರಾಜ್ಯವು ಇದ್ದು ಅದು ಸುರಾಜ್ಯವಾಗಬೇಕೆಂದು ಉತ್ಸವದ ಕಾರ್ಯಕರ್ತರು ಆಶಿಸಿದ್ದಾರೆ. ಬುದ್ಧನು ಭಾರತದಲ್ಲಿ ಉದ್ಭವಿಸಿ ಎಲ್ಲರಲ್ಲಿ ಸಮಾನತೆ, ಸಮತಾವಾದ, ಬಂಧು ಪ್ರೀತಿಗಳನ್ನು ಉಂಟುಮಾಡಿದನು. ಹಾಗೆಯೇ ಅಮರಗಣಾಧೀಶ್ವರರು ೧೨ನೇ ಶತಮಾನದಲ್ಲಿ ಉದಯವಾಗಿ ಇದೇ ಕಾರ್ಯವನ್ನು ಮಾಡಿದರು. ಆದರೆ ಮುಂದೆ ಅವರ ವಿಚಾರಗಳು ನಾಡಿನಲ್ಲಿ ಮುಸುಳಿ ಹೋದವು. ಆದರೆ ಈಚೆಗೆ ಅಮರಗಣಾಧೀಶ್ವರರ ತತ್ವಗಳು ಪುನಃ ತಲೆ ಎತ್ತಹತ್ತಿವೆ. ಅವರು ಮಾಡಿದ ಮಹತ್ಕಾರ್ಯಗಳ ಅರಿವು ಎಲ್ಲರಿಗೂ ಆಗಹತ್ತಿದೆ. ಅವರ ತತ್ವಗಳ ಪ್ರಸಾರದಿಂದ ಜಾತಿಗಳ ಪ್ರಭಾವವು ಅಡಗಹತ್ತಿದೆ. ಜನತೆಯಲ್ಲೆಲ್ಲ ಐಕ್ಯತಾ ಭಾವವು ಉಂಟಾಗಹತ್ತಿದೆ. ಶಾಂತಿ ಸಮಾಧಾನಗಳು ನೆಲೆಗೊಳ್ಳಹತ್ತಿವೆ. ಆದ್ದರಿಂದ ಇನ್ನುಮೇಲೆ ಪ್ರಮಥರ ತತ್ವಗಳು ಎಲ್ಲ ಜನರಿಗೆ ತಿಳಿಯುವಂತೆ ಆಗಬೇಕು. ಈ ಉದ್ದೇಶವನ್ನಿಟ್ಟುಕೊಂಡು ಉತ್ಸವ ಕಮೀಟಿಯವರು ಅಮರಗಣಾಧೀಶ್ವರರ ಮಂಟಪೋತ್ಸವವನ್ನು ವಿಜಯಪುರದಲ್ಲಿ ನೆರವೇರಿಸಿದ್ದಾಗಿದೆ. ಈ ಉತ್ಸವಕಾಲದಲ್ಲಿ ಅಮರ ಗಣಾಧೀಶ್ವರರ ತತ್ವಗಳನ್ನು ಸಕಲ ಜನರು ತಿಳಿದುಕೊಂಡು ನಾಡಿನಲ್ಲಿ ಶಾಂತತೆ ನೆಮ್ಮದಿಗಳುಂಟಾಗಿ ಎಲ್ಲರೂ ಉದಾರ ಹೃದಯಿಗಳಾಗಿ ಸಹಿಷ್ಣುತಾ ಭಾವವುಳ್ಳವರಾಗಿ ನಾಡಿನ ಹಿತಕ್ಶ್ರೇಯಸ್ಕರ ಪ್ರಯತ್ನ ಮಾಡುವವರಾಗುವರೆಂದು ಕಮೀಟಿಯವರು ಭರವಸೆ ತಾಳಿದ್ದಾರೆ.

# ರೇವಣಸಿದ್ಧ

ವೀರಶೈವ ಸಮಾಜದಲ್ಲಿ ಬಾಳೇಹಳ್ಳಿ, ಶ್ರೀಶೈಲ, ಉಜ್ಜಿನಿ, ಕಾಶೀ ಕ್ಷೇತ್ರ ಮತ್ತು ಕೇದಾರ ಎಂಬ ಐದು ಸ್ಥಳಗಳು ಐದು ಸಿಂಹಾಸನ ಪೀಠಗಳಿಗೆ ಸ್ಥಾನಗಳೆಂದು ತಿಳಿಯಲ್ಪಡುತ್ತವೆ. ಇವುಗಳಲ್ಲಿ ಬಾಳೇಹಳ್ಳಿ ಗ್ರಾಮವು ರೇವಣಸಿದ್ಧೇಶ್ವರನ ಪೀಠವೆಂದು ವೀರಶೈವರಲ್ಲಿ ಹೆಸರಾಗಿರುತ್ತದೆ. ರೇವಣಸಿದ್ಧೇಶ್ವರನು ಜಗದ್ಗುರುವಾಗಿ ಮಹತ್ವದ ಧರ್ಮ ಜಾಗ್ರತಿಯ ಕಾರ್ಯಗಳನ್ನು ಮಾಡಿದ್ದಾನೆ. ಬಾಳೆಹಳ್ಳಿಯು ಈಗ ಮೈಸೂರ ಸಂಸ್ಥಾನದಲ್ಲಿಯ ಕಡೂರು ಜಿಲ್ಹೆಯಲ್ಲಿ ಒಂದು ನಿಬಿಡವಾದ ಅರಣ್ಯ ಪ್ರದೇಶದಲ್ಲಿ ಭದ್ರಾತೀರದಲ್ಲಿ ಇರುತ್ತದೆ.

ರೇವಣಸಿದ್ಧೇಶ್ವರನು ಈಗ ಆಂಧ್ರ ದೇಶದಲ್ಲಿರುವ ಕೊಲ್ಲಿಪಾಕಿ ಎಂಬ ಗ್ರಾಮದಲ್ಲಿ ಜನಿಸಿರುತ್ತಾನೆ. ಇಲ್ಲಿ ಸೋಮೇಶ್ವರ ದೇವಾಲಯವಿದ್ದು ಈ ಸೋಮೇಶ್ವರನಲ್ಲಿ ರೇವಣಸಿದ್ಧೇಶ್ವರನು ಉದ್ಭವಿಸಿದನೆಂದು ಜನರ ತಿಳುವಳಿಕೆ ಇದೆ. ಈ ಕಾಲದಲ್ಲಿ ವಿಜಾಪೂರ ಜಿಲ್ಹೆಯಲ್ಲಿಯ ಒಂದು ಭಾಗವಾಗಿದ್ದ ತರ್ದೇವಾಡಿ ನಾಡಿನಲ್ಲಿಯೂ ಅದಕ್ಕೆ ಸಮೀಪವರ್ತಿಯಾದ ಐಹೊಳೆ ಮುದನೂರು ಗ್ರಾಮಗಳಲ್ಲಿದ್ದ ಭಾಗಗಳಲ್ಲಿಯೂ ಅನೇಕ ಶಿವಶರಣರು ಉತ್ಪನ್ನರಾಗಿ ಅಮರಗಣಾಧೀಶ್ವರರ ಧರ್ಮವನ್ನು ಪ್ರಸಾರಪಡಿಸುವವರಾದರು. ಈ ಸಂಗತಿಯನ್ನು ರೇವಣಸಿದ್ಧೇಶ್ವರನು ಅರಿತುಕೊಂಡು ಇಲ್ಲಿದ್ದ ಮಹಾನುಭಾವರ ಸಹವಾಸದಲ್ಲಿ ಕಾಲಕಳೆಯಬೇಕೆಂದು ಯೋಚಿಸಿ ಅವನು ಇತ್ತ ಕಡೆಗೆ ಬಂದಿರಬಹುದೆಂದು ತೋರುತ್ತದೆ. ಅವನು ಇಲ್ಲಿಗೆ ಬಂದು ಮೊದಲು ಮಂಗಳವಾಡದಲ್ಲಿ ವಾಸಮಾಡಹತ್ತಿದನು.

ರೇವಣಸಿದ್ಧನು ಇಲ್ಲಿಗೆ ಬಂದಬಳಿಕ ಅವನು ಅಮರಗಣಾಧೀಶ್ವರರ ಉದಾರ ತತ್ವಗಳನ್ನು ನಾಡಿನಲ್ಲೆಲ್ಲ ಪ್ರಸಾರಮಾಡುವವನಾದನು. ಅವನು ಮುಂದೆ ದೇಶದ ಮುಖ್ಯ ಭಾಗಗಳಲ್ಲಿ ಸಂಚಾರ ಮಾಡಿ ಧರ್ಮಪ್ರಸಾರ ಕಾರ್ಯಮಾಡಿದನು. ಅವನು ಸಾತಾರಾ ಜಿಲ್ಹೆಯಲ್ಲಿರುವ ರೇಣಾವಿ, ಸೊಲ್ಲಾಪೂರ ಜಿಲ್ಹೆಯಲ್ಲಿರುವ ಸಿದ್ಧನಕೆರೆ, ಮಾಸನೂರು ಈ ಸ್ಥಳಗಳಲ್ಲದೆ ವಿಜಾಪೂರ ಜಿಲ್ಹೆಯಲ್ಲಿರುವ ಹೊರ್ತಿ, ಇಂಗಳೇಶ್ವರ, ಹೈದರಾಬಾದ ಸಂಸ್ಥಾನದಲ್ಲಿರುವ ಅಮರೇಶ್ವರ, ರಟಗಲ್ಲು, ಮುಂದೆ ಬೆಳಗಾಂವ ಜಿಲ್ಹೆಯಲ್ಲಿರುವ

ಬೆಲ್ಲದಬಾಗೇವಾಡಿ ಮುಂದೆ ಕೊಲ್ಹಾಪೂರ ಪಟ್ಟಣ, ಮುಂದೆ ಬನವಾಸಿ ಗ್ರಾಮಗಳಿಗೆ ಹೋಗಿ ಧರ್ಮಪ್ರಸಾರ ಮಾಡಿದನು. ಮುಂದೆ ಅವನು ಕಾಂಚೀಪಟ್ಟಣ, ಬೆಂಗಳೂರು ಜಿಲ್ಹೆಯಲ್ಲಿರುವ ಕ್ಲೋಸಪೇಟೆ ಇಲ್ಲಿಯೂ ಸಂಚಾರ ಮಾಡಿದನು. ಅವನು ಸಂಚಾರ ಮಾಡಿದ ಸ್ಥಳಗಳಲ್ಲೆಲ್ಲ ಅವನ ಮಹತ್ವದ ದೇವಾಲಯಗಳು ಈಗಲೂ ಇವೆ. ಮುಂದೆ ಅವನು ವಿಜಾಪೂರ ಪ್ರಾಂತಕ್ಕೆ ತಿರುಗಿ ಬಂದು ಮಂಗಳವಾಡದಲ್ಲಿ ತನ್ನ ಒಂದು ಸಿಂಹಾಸನ ವನ್ನು ರಚಿಸಿ ಅದಕ್ಕೆ ತನ್ನ ಮಗನಾದ ರುದ್ರಮುನಿಯನ್ನು ಪಟ್ಟಗಟ್ಟಿ ಅನೇಕ ವರ್ಷ ಅಲ್ಲಿ ವಾಸಮಾಡಿದನು.

ರೇವಣಸಿದ್ಧನು ಮಾಸನೂರಿಗೆ ಬಂದಾಗ್ಗೆ ಅಲ್ಲಿದ್ದ ಶಿವಾಲಯದಲ್ಲಿ ದ್ದಾಗ್ಗೆ ರಾಕ್ಷಸ ಮಿಥುನವು ಶಾಪಹತವಾಗಿ ತಿಗುಣಿಗಳಾಗಿ ಅಲ್ಲಿಯ ವೃಕ್ಷ ವನ್ನಾಶ್ರಯಿಸಿ ಇದ್ದವು. ಅವು ಬಹುಜನರನ್ನು ಕೊಂದುಹಾಕಿದ್ದವು. ರೇವಣ ಸಿದ್ಧನು ಅಲ್ಲಿದ್ದಾಗ್ಗೆ ಅವು ಅವನ ಮೇಲೆ ಬರಲು ಅವನ ನೊಸಲಗಣ್ಣಿನ ಉರಿ ತಾಕಿ ಸುಟ್ಟುಹೋದವು. ಆಗ ಅವು ಉಕ್ಕಿನ ಗುಂಡುಗಳಾಗಲು ಅವು ಗಳಲ್ಲೊಂದು ಕಠಾರಿಯನ್ನು ಮಾಡಿ ಮತ್ತೊಂದನ್ನು ಖಡ್ಗವನ್ನಾಗಿ ಮಾಡಿ ಅದನ್ನು ಅವನು ಮಾಸನೂರು ಮಡುವಿನಲ್ಲಿ ಒಗೆದುಬಿಟ್ಟನು. ಆಮೇಲೆ ಅವನು ಬನವಾಸಿಗೆ ಬಂದಾಗ್ಗೆ ಅಲ್ಲಿ ಆಳುತ್ತಿದ್ದ ವಿಕ್ರಮಾದಿತ್ಯನಿಗೆ ಆ ಕಠಾರಿಯನ್ನು ಕೊಟ್ಟು ಇದರಿಂದ ನೀನು ಅಜೇಯನಾಗುವಿ ಎಂದು ಹೇಳಿದನು.

ಮುಂದೆ ಅವನು ಬಿಜ್ಜಳನನ್ನು ಕಂಡಾಗ್ಗೆ ಬಿಜ್ಜಳನು ಗರ್ವವುಳ್ಳವ ನಾಗಿ ಕುದಿಯುವ ಅನ್ನವನ್ನು ಅವನ ಜೋಳಿಗೆಯಲ್ಲಿ ಹಾಕಿಸಲು ಅರಮನೆಯು ಭುಗಿಲೆಂದು ಉರಿಯಹತ್ತಿತು. ಆಗ ಬಿಜ್ಜಳನು ಅವನ ಕ್ಷಮೆ ಯನ್ನು ಕೇಳಲು ಉರಿಯು ಅಡಗಿತು. ಆಮೇಲೆ ಅವನು ಸೊಲ್ಲಾಪೂರಕ್ಕೆ ಬಂದು ಅಲ್ಲಿ ಕೆಲಕಾಲ ನಿಂತು ತಾನು ಮೊದಲು ಉದಯವಾದ ಕೊಲ್ಲಿ ಪಾಕಿಗೆ ಬಂದು ಅಲ್ಲಿಯ ಸೋಮೇಶ್ವರ ಲಿಂಗದಲ್ಲಿ ಐಕ್ಯವನ್ನು ಹೊಂದಿದನು.

ಈ ಪ್ರಕಾರ ರೇವಣಸಿದ್ಧನು ಅದ್ಭುತವಾದ ಧರ್ಮಪ್ರಸಾರ ಕಾರ್ಯ ವನ್ನು ಮಾಡಿದ್ದಾನೆ. ಈ ಭಾಗದಲ್ಲೆಲ್ಲ ಅವನು ಬಹು ಪ್ರಖ್ಯಾತಿಗೆ ಬಂದು ಅನೇಕ ಪವಾಡಗಳನ್ನು ಮಾಡಿದ್ದಾನೆ. ಆಗಿನ ಕಾಲದ ಅರಸರೂ ಮಾಂಡ

ಲಿಕರೂ ಸಹ ತನ್ನನ್ನು ಸೇವಿಸುವಂತೆ ಮಾಡಿದ್ದಾನೆ. ಇದರಿಂದ ರೇವಣ ಸಿದ್ಧನು ವೀರಶೈವ ಇತಿಹಾಸದಲ್ಲಿ ಬಹು ಪ್ರಖ್ಯಾತಿಯನ್ನು ಹೊಂದಿದ್ದಾನೆ. ಅವನ ಹೆಸರಿದ ಕ್ಷೇತ್ರಗಳು ಕರ್ನಾಟಕದಲ್ಲಿ ಬಹುಕಡೆಗೆ ಉಂಟಾಗಿರುತ್ತವೆ.

---

## ಪಂಡಿತಾರಾಧ್ಯ

ಪಂಡಿತಾರಾಧ್ಯನು ಶ್ರೀಶೈಲ ಸಿಂಹಾಸನ ಸ್ಥಾಪಕನೆಂತಲೂ ಪಂಚ ಪೀಠಾಧಿಪತಿಗಲ್ಲಿ ಒಬ್ಬನೆಂತಲೂ ಹೆಸರಾಗಿದ್ದಾನೆ. ಈಗ ಮದ್ರಾಸ ಇಲಾಖೆಯಲ್ಲಿರುವ ಕಾಕಿನಾಡ ಜಿಲ್ಹೆಯಲ್ಲಿ ದ್ರಾಕ್ಷಾರಾಮವೆಂಬ ಪ್ರಸಿದ್ಧ ಕ್ಷೇತ್ರವಿರುತ್ತದೆ. ಇಲ್ಲಿ ಭೀಮೇಶ್ವರ ಲಿಂಗವು ಪ್ರಸಿದ್ಧವಾಗಿದೆ. ಇಲ್ಲಿ ಭೀಮನ ಪಂಡಿತನೆಂಬವನು ಈ ದೇವಾಲಯದ ಪುರೋಹಿತನು. ಶ್ರೀಶೈಲ ಮಲ್ಲಿಕಾರ್ಜುನನ ಆಶೀರ್ವಾದದಿಂದ ಒಬ್ಬ ಮಗನು ಅವನಿಗೆ ಜನಿಸಿ ದನು. ಅವನೇ ಮಲ್ಲಿಕಾರ್ಜುನ ಪಂಡಿತಾರಾಧ್ಯನು. ಮುಂದೆ ಪಂಡಿತಾ ರಾಧ್ಯನು ಶರ್ಯಾತಿರಾಯನ ಮಗಳನ್ನು ಮದುವೆಯಾದನು. ಪಂಡಿತಾರಾ ಧ್ಯನು ಮುಖ್ಯವಾಗಿ ದ್ರಾಕ್ಷಾರಾಮ ಕ್ಷೇತ್ರದಲ್ಲಿದ್ದರೂ ಅವನು ಅಮರಗುಂಡ ಎಂಬಲ್ಲಿ ವಾಸವಮಾಡುತ್ತಿದ್ದನು. ಮುಂದೆ ಪಂಡಿತಾರಾಧ್ಯನು ಬಸವೇಶ್ವರನ ವಚನಗಳನ್ನು ಪರಿಶೀಲಿಸಿ ಕನ್ನಡ ಭಾಷೆಯ ಜ್ಞಾನವನ್ನು ಹೊಂದಿ ವೀರಶೈವ ಮತವನ್ನು ಪಾಲಿಸುವವನಾದನು. ಇಲ್ಲಿಗೆ ಸಮೀಪವಾಗಿರುವ ಧನದಪುರ ಎಂಬ ಗ್ರಾಮದಲ್ಲಿ ವೆಲನಾಡ ಚೋಳನೆಂಬ ರಾಜನು ಇದ್ದು ಅವನ ಆಸ್ಥಾನದಲ್ಲಿ ಬೌದ್ಧರು ಪ್ರಬಲರಾಗಿದ್ದುದನ್ನು ನೋಡಿ ಅವನು ಅಲ್ಲಿಗೆ ಬಂದು ಬೌದ್ಧಾಚಾರ್ಯನನ್ನು ವಾದದಲ್ಲಿ ಸೋಲಿಸಿದನು. ಮುಂದೆ ಪಂಡಿತಾರಾಧ್ಯನು ನಡುಗುಡೆಂ, ಪಾನುಗಲ್ಲು ಮುಂತಾದ ಗ್ರಾಮಗಳಿಗೆ ಹೋಗಿ ಬಸವೇಶ್ವರನು ಪಾಲಿಸುತ್ತಿದ್ದ ತತ್ವಗಳ ಪ್ರಚಾರ ಮಾಡುವವನಾದನು. ಮುಂದೆ ಆಂಧ್ರ ದೇಶ ದಲ್ಲಿ ಬಹುಕಡೆಗೆ ಅವನು ಪ್ರವಾಸಮಾಡಿದನು. ಆಮೇಲೆ ಅವನು ಬಸವೇಶ್ವರ ನನ್ನು ಕಾಣಬೇಕೆಂದು ಬಯಸಿ ಕಲ್ಯಾಣಕ್ಕೆ ಹೊರಟನು. ಅವನು ವನಿಪುರ ಎಂಬ ಗ್ರಾಮಕ್ಕೆ ಬಂದಿರಲು ಬಸವೇಶ್ವರನು ಕಲ್ಯಾಣವನ್ನು ಬಿಟ್ಟು ಕೂಡಲ ಸಂಗಮಕ್ಕೆ ಹೋಗಿ ಅಲ್ಲಿ ಐಕ್ಯಹೊಂದಿದನೆಂದು ತಿಳಿದುಬಂದಿತು. ಇದನ್ನು

ಕೇಳಿ ಪಂಡಿತಾರಾಧ್ಯನಿಗೆ ಅತ್ಯಂತ ದುಃಖವಾಗಿ ಬಸವೇಶ್ವರನಿಗೋಸ್ಕರ ಬಹಳ ಪ್ರಳಾಪಿಸಿದನು. ಮುಂದೆ ಪಂಡಿತಾರಾಧ್ಯನು ವೆಲ್ಲಟೂರು ಎಂಬ ಗ್ರಾಮಕ್ಕೆ ಬಂದು ಅವನು ಅಲ್ಲಿಯೇ ಸಮಾಧಿಸ್ಥನಾದನು. ಅವನ ತರುವಾಯ ಅವನ ಮಗ ಕೇದಾರ ಗುರುವು ಸಿಂಹಾಸನ ಪಟ್ಟವನ್ನು ಹೊಂದಿದನು. ಪಂಡಿತಾರಾಧ್ಯನು ಅನೇಕ ಆಂಧ್ರ ಮತ್ತು ಕನ್ನಡ ಗ್ರಂಥಗಳನ್ನು ಬರೆದಿದ್ದಾನೆ. ಪಂಡಿತಾರಾಧ್ಯನು ಅಮರಗಣಾಧೀಶ್ವರರ ತತ್ವಗಳನ್ನು ಪಾಲಿಸುತ್ತ ಒಂದು ಶ್ರೇಷ್ಠ ಸ್ಥಾನವನ್ನು ಹೊಂದಿದ್ದರಿಂದ ಅವನು ಸಿಂಹಾಸನಾಧಿಪತಿಯಾಗಿ ಪ್ರಸಿದ್ಧಿಯನ್ನು ಹೊಂದಿದ್ದಾನೆ.

---

## ಮರುಳಸಿದ್ಧ

ಶಿಲಾದ ಮುನಿಗೆ ಸುಪ್ರಭೆ ಎಂಬ ಹೆಂಡತಿ ಇದ್ದು ಅವಳು ಶಾಪಗ್ರಸ್ತಳಾಗಿ ಮರ್ತ್ಯಲೋಕಕ್ಕೆ ಬಂದು ಕಗ್ಗಲ್ಲಪುರದಲ್ಲಿ ಕೂಚಿಮಾರನೆಂಬ ಮಾದಿಗನ ಹೆಂಡತಿಯಾದಳು. ಈತನು ಗ್ರಾಮದ ಒಡೆಯನಾದ ಬಾಚಿಗೌಡನ ಸೇವಕನಾಗಿದ್ದನು. ಮುಂದೆ ಮರುಳಸಿದ್ಧೇಶ್ವರನು ಕೂಚಿಮಾರನ ಮಗನಾಗಿ ಜನಿಸಿದನು. ಇವನು ದನ ಕಾಯುವ ಬಾಲಕರ ಕೂಡ ದನ ಕಾಯುವ ಕೆಲಸ ಮಾಡುತ್ತಿದ್ದನು. ಆದರೆ ಮುಂದೆ ಇವನು ಪವಾಡ ಪುರುಷನಾಗಿ ಬಾಲ್ಯದಲ್ಲಿಯೇ ಅನೇಕ ಪವಾಡಗಳು ಅವನಿಂದ ಆಗಹತ್ತಿದವು. ಇವನು ಪವಾಡ ಮಾಡಿದ ಸ್ಥಳಗಳು ದಾವಣಗೆರೆ ಪ್ರಾಂತದಲ್ಲಿದ್ದು ಅವು ಬಾಚಿಗುಡ್ಡ, ಬೇತೂರು, ಆನೆಗೋಡು, ಬನ್ನಿಗೋಡು ಮುಂತಾದವುಗಳು ಇವೆ. ಹಳೆಬೀಡು, ಓರಂಗಲ್ಲು, ಕಲ್ಯಾಣ ಇವೆಲ್ಲವೂ ರಾಜಧಾನೀ ಸ್ಥಳಗಳಾಗಿದ್ದು ಅಲ್ಲಿಗೂ ಅವನು ಪ್ರವಾಸ ಮಾಡಿದನು. ಹೀಗಿರಲು ಕೊಲ್ಲಾಪುರ ಸಮೀಪದಲ್ಲಿ ಸಿದ್ಧಗಿರಿ ಗ್ರಾಮವಿದ್ದು ಅಲ್ಲಿ ಅವನು ರೇವಣಸಿದ್ಧನಿಂದ ಉಪದೇಶಹೊಂದಿ ವೀರಶೈವ ಧರ್ಮದಂತೆ ನಡೆಯಹತ್ತಿದನು. ಕೊಲ್ಲಾಪುರದಲ್ಲಿ ಇದ್ದಾಗ್ಗೆ ಅವನು ಮಾಯೆಯನ್ನು ಜಯಿಸಿದನು. ಮುಂದೆ ಸೊಲ್ಲಾಪುರಕ್ಕೆ ಹೋಗಿ ಸಿದ್ಧರಾಮನ ದರ್ಶನವನ್ನು ಹೊಂದಿದನು. ಹೈದ್ರಾಬಾದ ಸಂಸ್ಥಾನದಲ್ಲಿ ಮುದನೂರು ಎಂಬಲ್ಲಿಗೆ ಹೋಗಿ ಏಕೋರಾಮನನ್ನು ಕಂಡನು. ಮುಂದೆ ಅವನು ಬಳ್ಳಾರಿಜಿಲ್ಲೆಯಲ್ಲಿರುವ ಉಜ್ಜನಿಯಲ್ಲಿ ಬಹಳ

ದಿವಸ ವಾಸ ಮಾಡಿದನು. ಅಲ್ಲಿ ಬೈರೇದೇವರ ಗುಡ್ಡ, ಕಗ್ಗಲ್ಲವರ ಕಟ್ಟೆ, ಕಗ್ಗಲ್ಲಪುರ ಮೂಗಣ್ಣನ ದೇವಸ್ಥಾನ ಮುಂತಾದ ಸ್ಥಳಗಳಲ್ಲಿ ಮರುಳುಸಿದ್ಧನ ಪವಾಡಗಳಾಗಿವೆ. ತೂಲಳ್ಳಿ ಎಂಬಲ್ಲಿ ಮರುಳುಸಿದ್ಧನ ದೇವಸ್ಥಾನವಿದೆ. ದಾವಣಗೆರೆ ತಾಲೂಕಿನ ಕುರುಡಿ ಎಂಬ ಗ್ರಾಮದಲ್ಲಿ ಎಲ್ಲ ಜಾತಿಯ ಹುಡುಗರು ತರುತ್ತಿದ್ದ ಬುತ್ತಿಗಳನ್ನು ಮರುಳುಸಿದ್ಧನು ಕೂಡಿಸಿ ಎಲ್ಲರಿಗೂ ಹಂಚಿಕೊಡುವನು. ಊರಿನ ಬ್ರಾಹ್ಮಣರು ಇದನ್ನು ತಿಳಿದು ಮರುಳುಸಿದ್ಧನನ್ನು ಒಂದು ಹಗೆಯಲ್ಲಿ ಹಾಕಿ ಸುಣ್ಣ ತುಂಬಿ ನೀರನ್ನು ಹೊಯ್ಯಲು ಅವನಿಗೆ ಏನೂ ಅಪಾಯವಾಗಲಿಲ್ಲ. ಇದರ ಬದಲು ಅಲ್ಲಿ ಸಿದ್ಧೇಶ್ವರನೆಂಬ ಲಿಂಗವು ಉದ್ಭವಿಸಿತು. ಬೇತೂರು ಗ್ರಾಮದಲ್ಲಿ ಬ್ರಾಹ್ಮಣರು ಯಜ್ಞ ಮಾಡುತ್ತಿರಲು ಅಲ್ಲಿ ನಡೆದ ಹಿಂಸಾಕೃತಿಯನ್ನು ಮರುಳುಸಿದ್ಧೇಶ್ವರನು ನೋಡಿ ನಿಷೇಧಿಸಲಾಗಿ ಬ್ರಾಹ್ಮಣರು ಕುಪಿತರಾಗಿ ಅವನ ಕೈಕಾಲು ಕಟ್ಟಿ ಅಣಬೇ ಕೆರೆಗೆ ಹಾಕಿದರು. ಆದರೆ ಮರುಳಸಿದ್ಧನ ಜೀವಕ್ಕೆ ಏನೂ ಅಪಾಯವಾಗಲಿಲ್ಲ. ಅವನು ಉಜ್ಜನಿಪುರದಲ್ಲಿ ಅನೇಕರ ವರ್ಷ ನಿಲ್ಲಲಾಗಿ ಅದು ಆತನ ಮುಖ್ಯ ಸ್ಥಳವಾಯಿತು. ಈ ಪ್ರಕಾರ ಮರುಳುಸಿದ್ಧನು ಹಿಂಸಾತ್ಮಕ ಆಚಾರಗಳನ್ನು ನಿಲ್ಲಿಸಿದ್ದಾನೆ. ಜಾತಿ ವೈಷಮ್ಯ ಭಾವವನ್ನು ತೊಡೆದು ಹಾಕಿದ್ದಾನೆ. ಕುಟಿಲ ಸಿದ್ಧಿಗಳನ್ನು ನಿರಾಕರಿಸಿದನು. ಭಕ್ತಿಯೇ ಈಶ್ವರ ಸಾಕ್ಷಾತ್ಕಾರಕ್ಕೆ ಪರಮಸಾಧನವೆಂದು ಬೋಧಿಸಿದನು. ಇವೆಲ್ಲವೂ ಅಮರ ಗಣಾಧೀಶ್ವರರ ತತ್ವಗಳ ಪರಿಣಾಮಗಳಾಗಿವೆ. ಈ ತತ್ವಗಳನ್ನು ಮರುಳು ಸಿದ್ಧೇಶ್ವರನು ಮಧ್ಯ ಕರ್ನಾಟಕದಲ್ಲಿ ಬೋಧಿಸಿ, ಉಜ್ಜನಿಪುರದ ಹೆಸರನ್ನು ಎಲ್ಲ ಕಡೆಗೂ ಬಿತ್ತರಿಸಿದನು. ಇವನು ಮೊದಲು ಅಸ್ಪೃಶ್ಯನು. ಆದರೂ ಅವನಿಗೆ ರೇವಣಸಿದ್ಧನು ಲಿಂಗಧಾರಣೆ ಮಾಡಿದ್ದರಿಂದ ಮುಂದೆ ಅವನು ಅಮರಗಣಾಧೀಶ್ವರರ ತತ್ವಗಳನ್ನು ಪ್ರಸಾರಮಾಡುತ್ತ ಸಂಚರಿಸಿದನು. ಹೀಗೆ ಈತನು ಉಜ್ಜನಿಪುರದಲ್ಲಿ ನಿಂತು ಅಲ್ಲಿ ಅನೇಕ ಪವಾಡಗಳನ್ನು ಮಾಡಿದ್ದರಿಂದ ಉಜ್ಜನಿಯ ಮಹತ್ವವು ಹೆಚ್ಚಾಯಿತು. ವೀರಶೈವರಿಗೆ ಅದು ಪಂಚ ಸಿಂಹಾಸನ ಸ್ಥಳದಲ್ಲಿ ಒಂದಾಯಿತು. ಮರುಳಸಿದ್ಧೇಶ್ವರನ ಖ್ಯಾತಿಯು ಬೆಳೆಯಿತು. ಅವನು ವೀರಶೈವರಿಗೆ ಒಬ್ಬ ಶ್ರೇಷ್ಠ ಗುರುವಾದನು.

## ಏಕೋರಾಮಾರಾಧ್ಯ

ಏಕೋರಾಮಾರಾಧ್ಯನು ಮುದ್ರಾಪುರ ಅಂದರೆ ಈಗಿನ ಕಲಬುರ್ಗಿ ಜಿಲ್ಲೆಯಲ್ಲಿರುವ ಮುದುನೂರು ಗ್ರಾಮದವನು. ಅಲ್ಲಿ ರಾಮನಾಥ ಅಥವಾ ರಾಮೇಶನ ದೇವಾಲಯವು ಬಹು ಪ್ರಸಿದ್ಧವಾದದ್ದಿತ್ತು. ಈ ಗ್ರಾಮದಲ್ಲಿ ಮೊದಲು ದೇವರದಾಸಿಮಯ್ಯನು ಪ್ರಸಿದ್ಧಿಗೆ ಬಂದನು.

ಏಕೋರಾಮನ ಪೂರ್ವಜನ ಹೆಸರು ದೂರ್ವಾಸದೇವ. ಆತನ ಪುತ್ರ ಶಿವಾನಂದ, ಅವನ ಪುತ್ರ ಶ್ರೀಕಂಠ. ಈ ಶ್ರೀಕಂಠನ ಮಗನು ರಾಮರುದ್ರ ಶಿವಾಚಾರ್ಯನ . ಅವನು ರಾಮನಾಥನನ್ನು ಬೇಡಿಕೊಳ್ಳಲು ಅವನಿಂದ ಏಕೋರಾಮಾರಾಧ್ಯನು ಜನಿಸಿದನು.

ಏಕೋರಾಮನು ರಾಮನಾಥನಲ್ಲಿ ಪೂರ್ಣ ಭಕ್ತಿಯುಳ್ಳವನಾಗಿ ಮೊದಲು ಶುದ್ಧ ಶೈವನಂತೆ ಆಚರಿಸುತ್ತಿದ್ದನು. ಆದರೆ ಮುಂದೆ ಶಂಕುಕರ್ಣ ಗಣಾಧೀಶ್ವರನು ಅವನಿಗೆ ವೀರಶೈವ ಮಾರ್ಗದ ಮಹತ್ವವನ್ನು ಅರುಹಿದನು. ಮುಂದೆ ಏಕೋರಾಮನು ರಾಮನಾಥಲಿಂಗನಿಂದ ವೀರಶೈವ ದೀಕ್ಷೆಯನ್ನು ಹೊಂದಿದನು.

ಮುದ್ರಾಪುರದ ಅರಸನಾದ ವೀರಭಾಸ್ಕರನಿಗೆ ಬ್ರಾಹ್ಮಣರು ದೂರು ಹೇಳಲಾಗಿ ವೈಷ್ಣವರಿಗೂ ಏಕೋರಾಮನಿಗೂ ಅನೇಕ ವಾಗ್ವಾದಗಳಾದವು. ಅವುಗಳಲ್ಲಿ ಏಕೋರಾಮನು ಶಿವಮತವೇ ಶ್ರೇಷ್ಠವು. ಹೊಲೆಯನಾದರೂ ಶಿವಭಕ್ತರೇ ಕುಲಜರೆಂದು ಸಿದ್ಧಮಾಡಿದನು. ಆಗ ಗ್ರಾಮದಲ್ಲಿದ್ದವರೆಲ್ಲರೂ ವೀರಶೈವ ದೀಕ್ಷೆಯನ್ನು ಹೊಂದಿದರು. ಅವರು ಏಕೋರಾಮನಿಗೆ ಪಟ್ಟವನ್ನು ಕಟ್ಟಿದರು.

ಇದರಿಂದ ಏಕೋರಾಮನ ಕೀರ್ತಿಯು ದೇಶದಲ್ಲೆಲ್ಲ ಪಸರಿಸಿತು. ಆಗ ಅಯೋಧ್ಯೆಯ ವ್ಯಾಸದೀಕ್ಷಿತನೆಂಬವನು ತೀರ್ಥಾಟನ ಮಾಡುತ್ತ ಮುದ್ರಾಪುರಕ್ಕೆ ಬಂದನು. ಆತನೊಡನೆ ವೀರಶೈವ ಮತತತ್ವಗಳ ಚರ್ಚೆಯಾಗಿ ಅದರಲ್ಲಿ ವ್ಯಾಸ ದೀಕ್ಷಿತನು ಅಪಜಯವನ್ನು ಹೊಂದಿದನು.ಆಗ ಏಕೋರಾಮನು ವೀರಶೈವಮಾರ್ಗದ ರೀತಿಗಳನ್ನು ಅರುಹಲು ವ್ಯಾಸ ದೀಕ್ಷಿತನು ವೀರಶೈವ ದೀಕ್ಷೆಯನ್ನು ಹೊಂದಿದನು. ಮುಂದೆ ಏಕೋರಾಮನು ನಾಡಿನಲ್ಲಿ ಅನೇಕ ಪವಾಡಗಳನ್ನು ಮಾಡಿ ಪ್ರಸಿದ್ಧನಾದನು. ಒಂದು ದಿವಸ ಏಕೋ

ರಾಮನು ರಾಮನಾಥ ದೇವಾಲಯಕ್ಕೆ ಹೋಗಿರಲು ಅಲ್ಲಿ ಅವನಿಗೆ ಪರಮಾತ್ಮನು ದರ್ಶನ ಕೊಟ್ಟು ಅವನನ್ನು ಕೈಲಾಸಕ್ಕೊಯ್ದನು. ಈ ಪ್ರಕಾರ ಏಕೋರಾಮಾರಾಧ್ಯನ ಚರಿತ್ರೆ ಇದ್ದು ಅವನು ವೀರಶೈವ ಸಮಾಜದಲ್ಲಿ ಅತ್ಯುಚ್ಚ ಪದವಿಯನ್ನು ಹೊಂದಿದನು.

---

## ಅಲ್ಲಮಪ್ರಭು

ಅಲ್ಲಮಪ್ರಭುವು ನಿರಹಂಕಾರ ಮತ್ತು ಸುಜ್ಞಾನಿ ಎಂಬವರಿಗೆ ಮಗನಾಗಿ ಬನವಾಸಿಯಲ್ಲಿ ಜನಿಸಿದನು. ಆಗ ಬನವಾಸಿಯಲ್ಲಿ ಮಮಕಾರನೆಂಬ ರಾಜನು ಆಳುತ್ತಿದ್ದನು. ಅವನಿಗೆ ಪಟ್ಟದರಾಣಿ ಮೋಹಿನಿ ಎಂಬವಳು ಇದ್ದು ಅವರ ಮಗಳು ಮಾಯೆ ಎಂಬವಳಿದ್ದಳು. ಅವಳು ಅಲ್ಲಿಯ ಮಧುಕೇಶ್ವರನ ದೇವಾಲಯಕ್ಕೆ ದಿನಾಲು ಹೋಗಿ ಪೂಜೆ ಮಾಡಿ ಬರುತ್ತಿದ್ದಳು.

ಇತ್ತ ಅಲ್ಲಮನು ಮೃದಂಗ ಬಾರಿಸುವಲ್ಲಿ ನಿಷ್ಣಾತನಾಗಿ ಅವನೂ ದೇವಾಲಯಕ್ಕೆ ಆಗಮಿಸುತ್ತಿದ್ದನು. ಮಾಯೆಯು ಅವನನ್ನು ನೋಡಿ ಮೋಹಿತಳಾಗಿ ಅವನನ್ನು ತನ್ನ ಅರಮನೆಗೆ ಬರಮಾಡಿಕೊಂಡು ಅವನಿಗೆ ನಾಟ್ಯಾಚಾರ್ಯನಾಗಿ ತನ್ನೊಡನೆ ಇರಲು ಬಯಸಿದಳು. ಆದರೆ ಅಲ್ಲಮಪ್ರಭುವು ಅವಳ ಉದ್ದೇಶವನ್ನು ತಿಳಿದವನಾಗಿ ಅವನು ಅದಕ್ಕೆ ಒಪ್ಪಿಕೊಳ್ಳದೆ ಪಟ್ಟಣವನ್ನು ಬಿಟ್ಟುಕೊಟ್ಟು ಹೊರಬಿದ್ದನು.

ಅಲ್ಲಮಪ್ರಭುವು ಶಿವಯೋಗವನ್ನು ಆಚರಿಸುತ್ತ ಮಹಾ ಯೋಗಿಎಂದು ನಾಡಿನಲ್ಲಿ ಪ್ರಸಿದ್ಧಿಯನ್ನು ಹೊಂದಿದನು. ಆದರೆ ಈ ಕಾಲದಲ್ಲಿ ಬನವಾಸಿ ನಾಡು ಶಿವಶರಣರಿಗೆ ಕೇಂದ್ರಸ್ಥಾನವಾಗಿತ್ತು. ಅಲ್ಲಿ ಅನುಮಿಷ, ರೇವಣಸಿದ್ಧ, ಮರುಳುಸಿದ್ಧ ಮೊದಲಾದ ಶಿವಾನುಭವಿಗಳು ಪ್ರಸಿದ್ಧರಾಗಿದ್ದರು. ಅಲ್ಲಮಪ್ರಭುವು ಅಲ್ಲಿದ್ದ ಈ ಶಿವಾನುಭವಿಗಳ ಸಾನ್ನಿಧ್ಯದ ಮೂಲಕ ಅಮರಗಣಾಧೀಶ್ವರರ ತತ್ವಗಳನ್ನು ಚೆನ್ನಾಗಿ ಅರಿತವನಾಗಿದ್ದನು.

ಅವನು ಮಮಕಾರ ರಾಜನ ಅರಮನೆಯಿಂದ ಹೊರಬಿದ್ದಕೂಡಲೆ ಅವನು ಅಮರಗಣಾಧೀಶ್ವರರ ತತ್ವಗಳನ್ನು ಪ್ರಸಾರ ಮಾಡುತ್ತ ಕಲ್ಯಾಣದ

ಕಡೆಗೆ ಹೊರಟನು. ದಾರಿಯಲ್ಲಿ ಅವನು ಗೊಗ್ಗಯ್ಯ, ಮುಕ್ತಾಯಕ್ಕ, ಸಿದ್ಧರಾಮ ಮೊದಲಾದವರನ್ನು ಕಂಡು ಅವರಿಗೆ ವೀರಶೈವ ಮತದ ಬೋಧೆಯನ್ನು ಮಾಡಿ ಕಲ್ಯಾಣಕ್ಕೆ ಬಂದು ಅಲ್ಲಿ ಬಸವೇಶ್ವರನನ್ನು ಕಂಡನು. ಹೇಗೆ ಕನಿಷ್ಕ ರಾಜನ ಮೂಲಕ ಬೌದ್ಧ ಧರ್ಮೀಯರ ಸಭಾಕಾರ್ಯಗಳು ನಡೆದವೋ ಹಾಗೆ ಬಸವೇಶ್ವರನ ಸನ್ನಿಧಿಯಲ್ಲಿ ಶಿವಾನುಭವ ಮಂಟಪವು ಸ್ಥಾಪಿತವಾಗಿ ಅಲ್ಲಿ ಧರ್ಮಚರ್ಚೆಗಳು ಯಾವಾಗಲೂ ನಡೆಯುತ್ತಿದ್ದವು. ಅಲ್ಲಮಪ್ರಭುವು ಅವುಗಳಲ್ಲಿ ಅಂಗ ವಹಿಸಿ ಶಿವಶರಣರಿಗೆ ಮಾರ್ಗದರ್ಶಿಯಾಗಿದ್ದನು.

ಮುಂದೆ ಅಲ್ಲಮಪ್ರಭುವು ವೀರಶೈವ ಧರ್ಮೋಪದೇಶ ಮಾಡುತ್ತ ದೇಶ ಸಂಚಾರ ಮಾಡಲು ಪ್ರಾರಂಭಿಸಿದನು. ಆವನು ಮೊದಲು ಶ್ರೀಶೈಲಕ್ಕೆ ಹೋಗಿ ಗೋರಕ್ಷನೆಂಬ ಹಠಯೋಗಿಗೆ ಅಮರಗಣಾಧೀಶ್ವರರ ತತ್ವಗಳನ್ನು ತಿಳಿಸಿದನು. ಆಮೇಲೆ ಅರಣ್ಯದಲ್ಲಿ ತಪಸ್ಸು ಮಾಡುತ್ತಿದ್ದ ಮುನಿಗಳಿಗೆ ವೀರಶೈವ ಧರ್ಮದ ಅರಿಕೆಯನ್ನು ಮಾಡಿಕೊಟ್ಟನು. ಮುಂದೆ ಪೊನ್ನಾಂಬಲ ರಾಮೇಶ್ವರ, ಗೋಕರ್ಣ ಇಲ್ಲಿಗೆ ಹೋಗಿ ಆಮೇಲೆ ಅವನು ಕಾಶಿ, ಕೇದಾರ, ದೇವಸ್ಥಾನಗಳನ್ನು ನಿರೀಕ್ಷಿಸಿ ಕಲ್ಯಾಣಕ್ಕೆ ತಿರುಗಿ ಬರುವವನಾದನು.

ಅಲ್ಲಮಪ್ರಭುವು ಕಲ್ಯಾಣಕ್ಕೆ ಬಂದಬಳಿಕ ಬಸವೇಶ್ವರನು ಈ ಮೊದಲು ಅಲ್ಲಿ ಶೂನ್ಯಸಿಂಹಾಸನವನ್ನು ನಿರ್ಮಿಸಿದ್ದು ಅದರ ಮೇಲೆ ಅವನಿಗೆ ವೀರಶೈವಮತಕ್ಕೆ ಜಗದ್ಗುರುವಾಗಿ ಅಧಿಷ್ಠಿತನನ್ನಾಗಿ ಮಾಡಿದನು. ಇದರತರುವಾಯ ಗಣಾಧೀಶ್ವರರು ವೀರಶೈವಮತದ ಪ್ರಚಾರವನ್ನು ಬಹು ಭರದಿಂದ ನಾಡಿನಲ್ಲಿ ನಡಿಸಹತ್ತಿದರು.

ಅಮರಗಣಾಧೀಶ್ವರರ ಧಾರ್ಮಿಕ ತತ್ವಗಳು ಬಹು ವಿಶಾಲವಾದವುಗಳು. ಇದರಿಂದ ಅವುಗಳನ್ನು ಬ್ರಾಹ್ಮಣ, ಜೈನ ಮೊದಲಾದ ಪುರಾಣ ಮತವಾದಿಗಳು ಪುರಸ್ಕರಿಸಹತ್ತಿ ಅವರಲ್ಲಿ ಬಹು ಜನರು ವೀರಶೈವರಾದರು.

ಈ ಕಾಲಕ್ಕೆ ಅಮರಗಣಾಧೀಶ್ವರರು ಅಸ್ಪೃಶ್ಯ ಮೊದಲಾದ ಜಾತಿಯವರಿಗೂ ಸಹ ವೀರಶೈವಮತದ ಬೋಧೆ ಮಾಡಲಾಗಿ ಅವರಲ್ಲಿ ಪರಸ್ಪರ ಅನ್ನೋದಕ ವ್ಯವಹಾರಗಳೂ ಲಗ್ನಾದಿ ಕಾರ್ಯಗಳೂ ಸಹ ನಡೆಯುಹತ್ತಿದವು.

ಈ ಕಾಲದಲ್ಲಿ ಮಧುವರಸನೆಂಬ ಬ್ರಾಹ್ಮಣನ ಮಗಳು ಮತ್ತು ಹರಳಯ್ಯನೆಂಬ ಮಚ್ಚಿಗನ ಮಗನು ಇವರಲ್ಲಿ ಲಗ್ನ ವ್ಯವಹಾರವು ನಡೆಯಿತು. ಆಗ ಬಿಜ್ಜಳನು ಬಸವೇಶ್ವರನನ್ನು ತನ್ನಲ್ಲಿ ಬರಮಾಡಿಕೊಂಡು ಹೀಗೆ ಅಧರ್ಮದಿಂದ ಶರಣರಾದವರು ನಡೆಯಕೂಡದೆಂದು ಅಪ್ಪಣೆಮಾಡಲಾಗಿ ಬಸವೇಶ್ವರನು ಅಮರಗಣಾಧೀಶ್ವರರು ಜಾತಿಭೇದವನ್ನು ಮನ್ನಿಸುವದಿಲ್ಲ. ಇದು ಅಧರ್ಮವಲ್ಲೆಂದು ಎಷ್ಟು ತಿಳಿಸಿಹೇಳಿದರೂ ಅರಸನು ಅದನ್ನು ಕೇಳದೆ ಈ ಉಭಯತರಿಗೆ ಮರಣದಂಡಣೆಯನ್ನು ವಿಧಿಸಿದನು. ಈ ಪ್ರಕಾರ ಅವರು ಕೊಲ್ಲಿಸಲ್ಪಟ್ಟರು.

ಇದರಿಂದ ಅಮರಗಣಾಧೀಶ್ವರರು ತಮ್ಮ ಧರ್ಮದಂತೆ ನಡೆಯಲು ಕಲ್ಯಾಣದಲ್ಲಿ ಆತಂಕಗಳು ಉಂಟಾಗಹತ್ತಲು ಬಸವ ಮೊದಲಾದ ಶಿವಶರಣರು ದೇಶತ್ಯಾಗವನ್ನು ನಿಶ್ಚಯಿಸಿದರು. ಆದ್ದರಿಂದ ಬಸವೇಶ್ವರನು ಕೂಡಲಸಂಗಮಕ್ಕೆ ಮತ್ತು ಅಲ್ಲಮಪ್ರಭು ಮೊದಲಾದವರು ಶ್ರೀಶೈಲಕ್ಕೆ ತೆರಳಿದರು. ಮತ್ತು ಕಡೆಗೆ ಅವರು ಆಸ್ಥಾನಗಳಲ್ಲಿಯೇ ಸಮಾಧಿಸ್ಥರಾದರು.

ಅಲ್ಲಮಪ್ರಭುವು ಅಮರಗಣಾಧೀಶ್ವರರಲ್ಲಿ ಉನ್ನತ ಸ್ಥಾನವನ್ನು ಹೊಂದಿದವನಾಗಿದ್ದಾನೆ.

---

## ಚನ್ನಬಸವ

ಚನ್ನಬಸವೇಶ್ವರನು ಬಸವೇಶ್ವರನ ಅಕ್ಕನಾದ ನಾಗಲಾಂಬಿಕೆಯ ಮಗನು. ಅವನ ತಂದೆಯ ಹೆಸರು ಶಿವಸ್ವಾಮಿಯು. ಚನ್ನಬಸವನು ಷಣ್ಮುಖನ ಅವತಾರವೆಂದು ವೀರಶೈವರು ತಿಳಿದಿದ್ದಾರೆ. ಷಣ್ಮುಖನು ಜ್ಞಾನದಲ್ಲಿಯೂ ವಿದ್ಯೆಯಲ್ಲಿಯೂ ಎಲ್ಲ ದೇವತೆಗಳಿಗಿಂತಲೂ ಮೇಲ್ತರದವನೆಂದು ಹಿಂದೂ ಧರ್ಮಗ್ರಂಥಗಳಲ್ಲಿ ಹೇಳಲ್ಪಟ್ಟಿದೆ. ಅಲ್ಲದೆ ಅವನು ತ್ರಿಪುರಸಂಹಾರಕನಾಗಿ ಪರಾಕ್ರಮಿಯೆಂತಲೂ ಹೆಸರಾಗಿದ್ದಾನೆ. ಅವನಂತೆಯೇ ಚನ್ನಬಸವನು ಪರಾಕ್ರಮಿಯೂ ವಿದ್ವತ್ತೆಯುಳ್ಳವನೂ ಎಂದು ತಿಳಿಯಲ್ಪಟ್ಟಿದ್ದಾನೆ.

ಚನ್ನಬಸವೇಶ್ವರನು ನಾಗಲಾಂಬಿಕೆಯ ಗಂಡನಾದ ಶಿವಸ್ವಾಮಿಯು ತನ್ನ ಗ್ರಾಮದಲ್ಲಿರುವಾಗಲೇ ಹುಟ್ಟಿರುತ್ತಾನೆ. ಆಗ ಬಸವೇಶ್ವರನು ಇನ್ನೂ

ಕಲ್ಯಾಣಕ್ಕೆ ಬಂದಿದ್ದಿಲ್ಲ. ಅವನು ಕೂಡಲಸಂಗಮಕ್ಷೇತ್ರದಲ್ಲಿಯೇ ವಾಸಿಸುತ್ತಿದ್ದನು. ಅಲ್ಲಿ ಬಸವೇಶ್ವರನು ಚನ್ನಬಸವೇಶ್ವರನಿಗೆ ಲಿಂಗಧಾರಣೆಯನ್ನು ಮಾಡಿದನು. ಅವನ ತಾಯಿಯಾದ ನಾಗಲಾಂಬಿಕೆಯು ಅಲ್ಲಿ ಯೋಗಿಣಿಯಾಗಿ ಷಟ್‌ಸ್ಥಲಮಾರ್ಗವನ್ನು ಚನ್ನಾಗಿ ಬಲ್ಲವಳಾಗಿದ್ದಳು. ಚನ್ನಬಸವನು ಬಸವೇಶ್ವರನ ಮತ್ತು ನಾಗಲಾಂಬಿಕೆಯ ನಿರೀಕ್ಷಣೆಯಲ್ಲಿ ಬೆಳೆಯುತ್ತ ವೀರಶೈವ ಮತದ ತತ್ವಗಳನ್ನು ಚನ್ನಾಗಿ ಬಲ್ಲವನಾಗಿ ಒಬ್ಬ ಶ್ರೇಷ್ಠ ಶಿವಾನುಭವಿ ಎಂದೆನಿಸಿಕೊಂಡನು.

ಮುಂದೆ ಬಸವೇಶ್ವರನು ಕಲ್ಯಾಣದಲ್ಲಿ ಮಂತ್ರಿಪದಾರೂಢನಾದ ಬಳಿಕ ಅಲ್ಲಿ ಶಿವಾನುಭವ ಮಂಟಪವು ಸ್ಥಾಪಿತವಾಗಲು ಅಲ್ಲಿಗೆ ಎಲ್ಲ ಕಡೆಯಿಂದಲೂ ಅಸುರಗಣಾಧೀಶ್ವರರು ಆಗಮಿಸಹತ್ತಿದರು. ಚನ್ನಬಸವೇಶ್ವರನು ಅತ್ಯಂತ ಕುಶಾಗ್ರಮತಿಯುಳ್ಳವನಾಗಿ ತತ್ವಪರಾಮರ್ಶೆಯಲ್ಲಿ ಎಲ್ಲರಿಗಿಂತಲೂ ಮಿಗಿಲೆನಿಸಿಕೊಂಡನು. ಬಿಕ್ಕಟ್ಟಿನ ಧಾರ್ಮಿಕ ಸಮಸ್ಯೆಗಳನ್ನು ಅವನು ಹಗುರಾಗಿ ಬಿಡಿಸುವನು. ಬಸವ, ಅಲ್ಲಮಪ್ರಭುಗಳು ಸಹ ಅವನು ನಿರ್ಣಯಿಸಿದ ಸಿದ್ಧಾಂತಗಳಿಗೆ ತಮ್ಮ ಸಮ್ಮತಿಯನ್ನು ಕೊಡುವ ಪರಿಸ್ಥಿತಿಯು ಉಂಟಾಯಿತು. ಚನ್ನಬಸವನು ಈ ಕಾಲಕ್ಕೆ ಕರಣಹಸಿಗೆ, ಮಿಶ್ರಾರ್ಪಣ, ಮಂತ್ರಗೋಪ್ಯ ಇವುಗಳಲ್ಲದೆ ಅಸಂಖ್ಯ ಷಟ್‌ಸ್ಥಲ ವಚನಗಳನ್ನೂ ರಚಿಸಿದ್ದಾನೆ.

ಮುಂದೆ ಹರಳಯ್ಯ ಮಧುವಯ್ಯಗಳ ಕೊಲೆಗಳು ಬಿಜ್ಜಳನ ಕೈಯಿಂದ ಸಂಭವಿಸಿದವು. ಆಗ ನಾಡಿನಲ್ಲಿ ವೀರಶೈವ ಧರ್ಮದ ಪ್ರಕಾರ ನಡೆಯುವದು ಶಕ್ಯವಲ್ಲವೆಂದು ಬಸವೇಶ್ವರನಿಗೆ ತೋರಿದ್ದರಿಂದ ಅವನು ಇನ್ನುಮೇಲೆ ಶರಣರು ತಮ್ಮ ತಮ್ಮ ಅನುಕೂಲ ಸ್ಥಳಗಳಿಗೆ ಹೋಗಿ ತಮ್ಮ ಧರ್ಮಾಚರಣೆಗಳನ್ನು ನಡಿಸಹತ್ತಬೇಕೆಂದು ಸಾರಿ ತಾನೂ ಕೂಡಲಸಂಗಮ ಕ್ಷೇತ್ರಕ್ಕೆ ತೆರಳಿದನು. ಅವನು ಅಲ್ಲಿಗೆ ಹೋಗುವ ಮುಂದೆ ಎಲ್ಲ ಶಿವಶರಣರು ಚನ್ನಬಸವೇಶ್ವರನ ಆಜ್ಞೆಯನ್ನು ಪಾಲಿಸುತ್ತಿರಬೇಕೆಂದು ವಿಧಿಸಿದನು. ಈ ಪ್ರಕಾರ ಅಲ್ಲಮಪ್ರಭುವು ಮೊದಲನೇ ಜಗದ್ಗುರುವೆಂತಲೂ ಚನ್ನಬಸವೇಶ್ವರನು ಅವನ ತರುವಾಯ ಎರಡನೇ ಜಗದ್ಗುರುವೆಂತಲೂ ಪ್ರಸಿದ್ಧರಾದರು.

ಬಿಜ್ಜಳನು ಹರಳಯ್ಯ ಮಧುವಯ್ಯಗಳನ್ನು ಕೊಲೆ ಮಾಡಿದ ಬಳಿಕ ಚನ್ನಬಸವ ಮೊದಲ್ಗೊಂಡು ಕಲ್ಯಾಣದಲ್ಲಿದ್ದ ಶಿವಶರಣರು ಶರಣರನ್ನು ಹೀಗೆ ಘಾತಿಸಿದ ಬಿಜ್ಜಳನನ್ನು ಸಂಹರಿಸುವದು ತಮ್ಮ ಕರ್ತವ್ಯವೆಂದು

ಭಾವಿಸಿದರು. ಇದು ಪಂಚಾಚಾರಗಳಲ್ಲಿ ಒಂದಾದ ಗಣಾಚಾರವೆಂದೆನಿಸಿ ಕೊಂಡಿದೆ. ಆಗ್ಗೆ ಶಿವಶರಣರಲ್ಲಿ ಇಬ್ಬರಾದ ಜಗದೇವ ಮತ್ತು ಮೊಲ್ಲಿಬೊಮ್ಮ ಯ್ಯಗಳು ಬಹಿರಂಗವಾಗಿ ಬಿಜ್ಜಳನ ಕೊಲೆಮಾಡಿದರು.

ಈ ಕಾಲದಲ್ಲಿ ಬಿಜ್ಜಳನ ಒಂದು ಲಕ್ಷ ಸೈನ್ಯವು ಕಲ್ಯಾಣದಲ್ಲಿ ಸಿದ್ಧ ವಾಗಿತ್ತು. ಇಂಥ ದೊಡ್ಡ ಸೈನ್ಯವನ್ನು ಎದುರಿಸುವದು ಅಲ್ಪಸಂಖ್ಯಾಕರಾದ ಶಿವಶರಣರಿಗೆ ಅಶಕ್ಯವೆಂದು ತೋರಿದ್ದರಿಂದ ಅವರು ಕೂಡಲೇ ಕಲ್ಯಾಣ ಪಟ್ಟಣವನ್ನು ಬಿಟ್ಟು ತೊರಗಲ್ಲು ನಾಡಿನ ಕಡೆಗೆ ತೆರಳಿದರು. ಆಗ ಈ ನಾಡು ಅರಣ್ಯ ಪ್ರದೇಶವಾಗಿತ್ತು. ಬಸವೇಶ್ವರ ತತ್ವಗಳನ್ನು ವಿರೋಧಿಸು ತ್ತಿದ್ದ ಸನಾತನ ಧರ್ಮದವರೂ ಜೈನರೂ, ಬಿಜ್ಜಳನ ಅನುಯಾಯಿಗಳೂ ಚನ್ನಬಸವೇಶ್ವರನ ಹನ್ನೆರಡು ಸಾವಿರ ಏಳುನೂರಾ ಎಪ್ಪತ್ತು ದಂಡಾಳುಗಳ ಮೇಲೆ ಏರಿಹೋದರು. ಆಗ ಈ ಭಾಗದಲ್ಲಿದ್ದ ಅರಣ್ಯ ಪ್ರದೇಶಗಳಲ್ಲಿ ತುಮುಲ ಕಾಳಗಗಳು ಅವರ ನಡುವೆ ನಡೆದವು. ಅವು ಕಡಕೋಳ, ತಲ್ಲೂರ, ಮುರಗೋಡ, ಕಾದರೋಳಿ, ಕಕ್ಕೇರಿ, ಸಾಂಬ್ರಾಣಿ, ಇವೇ ಮೊದಲಾದ ಸ್ಥಳಗಳಲ್ಲಿ ಸಂಭವಿಸಿದವು. ಶಿವಶರಣರು ಈ ಭಾಗವನ್ನು ಬಿಟ್ಟು ಈ ಮೊದಲು ಯೋಚಿಸಿದ ಮೇರೆಗೆ ಉಳಿವಿಯು ಪ್ರದೇಶಕ್ಕೆ ಹೋಗಿ ಅಲ್ಲಿ ವಾಸಮಾಡಹತ್ತಿದರು. ಬಿಜ್ಜಳನ ಅಸಂಖ್ಯಾತ ದಂಡಾಳುಗಳು ಅಲ್ಲಿಯೂ ಅವರನ್ನು ಬೆನ್ನಟ್ಟಲಾಗಿ ಅಲ್ಲಿ ಮಹಾಮನೆ ಎಂಬ ಹೆಸರಿನ ಬಿಕ್ಕಟ್ಟಿನ ಪ್ರದೇಶದಲ್ಲಿ ಕಾಳಗವಾಯಿತು. ಅದರಲ್ಲಿ ಶಿವಶರಣರು ಬಿಜ್ಜಳನ ದಂಡಾಳು ಗಳನ್ನು ಹಿಮ್ಮೆಟ್ಟಿಸಿದರು. ಆದರೆ ಈ ಕಾಲದಲ್ಲಿ ಅವರು ಈ ಸ್ಥಳದಲ್ಲಿ ನಿರಾತಂಕವಾಗಿರುವದು ಅಶಕ್ಯವೆಂದು ತಿಳಿದುಕೊಂಡು ಎಲ್ಲರೂ ಈ ಮಹಾ ಮನೆಯ ಸ್ಥಳದಲ್ಲಿ ಪರಂಧಾಮವನ್ನೈದಿದರು. ಚನ್ನಬಸವೇಶ್ವರನ ಸಮಾ ಧಿಸ್ಥಳವು ಈಗಲೂ ಉಳಿವಿಯಲ್ಲಿ ಇರುತ್ತದೆ. ಪ್ರತಿವರ್ಷ ಅಲ್ಲಿ ಅವನ ದೊಡ್ಡ ಜಾತ್ರೆಯಾಗುತ್ತದೆ. ಈ ಅರಣ್ಯ ಪ್ರದೇಶವು ಕರ್ನಾಟಕದಲ್ಲಿ ಒಂದು ಅದ್ಭುತ ಸ್ಥಳವಾಗಿಯತ್ತದೆ.

ಹೇಗೆ ಬಸವೇಶ್ವರ ಮತ್ತು ಅಲ್ಲಮಪ್ರಭುಗಳು ವೀರಶೈವ ಇತಿಹಾಸ ದಲ್ಲಿ ಉಚ್ಚ ಸ್ಥಾನವನ್ನು ಹೊಂದಿರುವರೋ ಹಾಗೆಯೇ ಚನ್ನಬಸವೇಶ್ವರನು ವೀರಶೈವರಲ್ಲಿ ಗಣ್ಯತೆಯುನ್ನು ಹೊಂದಿದ್ದಾನೆ.

## ಸಿದ್ಧರಾಮೇಶ್ವರ

ಸಿದ್ಧರಾಮೇಶ್ವರನು ಸೊನ್ನಲಗಿ ಅಂದರೆ ಈಗಿನ ಸೊಲ್ಲಾಪುರ ಪಟ್ಟಣ ದವನು ಇದ್ದಾನೆ. ಅವನ ತಂದೆಯು ಆ ಗ್ರಾಮದ ಅಧಿಪತಿಯಾಗಿದ್ದನು. ಅವನ ಹೆಸರು ಮೊರಡಿಯ ಮುದ್ದುಗೌಡ. ಅವನ ಹೆಂಡತಿಯ ಹೆಸರು ಸುಗ್ಗಳೆ. ತಂದೆಯು ಇವನಿಗೆ ದೂಳಿಮಹಾಂಕಾಳ ಎಂಬ ಹೆಸರನ್ನಿಟ್ಟನು. ಈ ಹೆಸರು ಆಗ ಪ್ರಚಲಿತವಿದ್ದ ಒಂದು ಕಿರುಕುಳ ದೈವದ ಹೆಸರಾಗಿತ್ತು. ಸಿದ್ಧರಾಮನನ್ನು ಅವನ ತಂದೆಯು ಮೊದಲು ದನ ಕಾಯಲಿಕ್ಕೆ ಹಚ್ಚಿದನು. ಅದ್ದರಿಂದ ಅವನು ದಿನಾಲು ಅಡವಿಗೆ ಹೋಗಿ ಬರುತ್ತಿದ್ದನು. ಈ ಕಾಲ ದಲ್ಲಿ ನಾಡಿನಲ್ಲಿ ದೂಳಿಮಹಾಂಕಾಳನಂಥ ಕಿರುಕುಳ ದೈವಗಳ ಆರಾಧನೆಗಳೂ ಸಿದ್ಧರ ಚಲ್ಲಾಟಗಳೂ ಬಹಳ ಪ್ರಬಲವಾಗಿದ್ದವು. ಸಿದ್ಧರಾಮನು ದನ ಕಾಯುವಾಗ ಅಡವಿಯಲ್ಲಿ ಮಲ್ಲಿಕಾರ್ಜುನನೆಂಬ ದೇವಾಲಯವನ್ನು ಕಂಡು ಅದರ ಮೇಲೆ ಅವನು ಭಕ್ತಿಯುಳ್ಳವನಾದನು. ಆಗ ಅವನನ್ನು ಒಬ್ಬ ಜಂಗಮನು ಕಂಡು ಈ ದೇವಾಲಯವು ಮಲ್ಲಿಕಾರ್ಜುನ ಅಥವಾ ಮಲ್ಲಯ್ಯನ ದೆಂದು ಹೇಳಿ ಈ ಮಲ್ಲಯ್ಯನು ಶ್ರೀಶೈಲಪರ್ವತದಲ್ಲಿದ್ದಾನೆಂದು ತಿಳಿಸಿದನು. ಆಗ ಅವನನ್ನು ಪ್ರತ್ಯಕ್ಷ ಕಾಣಬೇಕೆಂದು ಸಿದ್ಧರಾಮನು ಅಲ್ಲಿಗೆ ಹೊರಟನು. ದಾರಿಯಲ್ಲಿ ಕಷ್ಟಗಳನ್ನು ಪಟ್ಟರೂ ಮಲ್ಲಯ್ಯನ ಸ್ಮರಣೆಯನ್ನು ಮಾಡುತ್ತ ಅವನು ಸಂಚರಿಸಿದನು. ಆದರೆ ಅರಣ್ಯದಲ್ಲಿ ಮಲ್ಲಯ್ಯನನ್ನು ಎಷ್ಟು ಹುಡುಕಿದರೂ ಅವನು ಕಾಣದೆ ಹೋಗಲು ಸಿದ್ಧರಾಮನು ಒಂದು ಕಂದರ ದಲ್ಲಿ ಜಿಗಿದು ಪ್ರಾಣ ಕೊಡಲು ಸಿದ್ಧನಾದನು. ಆಗ ಮಲ್ಲಯ್ಯನು ಅವನಿಗೆ ಪ್ರತ್ಯಕ್ಷನಾಗಿ ಪ್ರಾಣಕೊಡುವದನ್ನು ನಿಲ್ಲಿಸಿದನು. ಆಗ ಸಿದ್ಧರಾಮನು ಅವನಿಗೆ ಸೊಲ್ಲಾಪುರದಲ್ಲಿ ನೀನು ಇರಬೇಕೆಂದು ಪ್ರಾರ್ಥಿಸಲು ಅದನ್ನು ಮಲ್ಲ ಯ್ಯನು ಒಪ್ಪಲು ಸಿದ್ಧರಾಮನು ತನ್ನ ಗ್ರಾಮಕ್ಕೆ ತಿರುಗಿ ಬರುವವನಾದನು. ಅಲ್ಲಿ ಕಪಿಲಸಿದ್ಧಮಲ್ಲಿಕಾರ್ಜುನ ಎಂಬ ಹೆಸರಿನಿಂದ ಮಲ್ಲಯ್ಯನು ಗ್ರಾಮ ದೇವತೆಯಾಗಿ ಪ್ರತಿಷ್ಠಿಸಲ್ಪಟ್ಟನು.

ಮುಂದೆ ಸಿದ್ಧರಾಮೇಶ್ವರನು ನಾಡಿನಲ್ಲಿ ಅನೇಕ ದೇವಾಲಯಗಳನ್ನೂ ಕೆರೆಗಳನ್ನೂ ಕಟ್ಟಿಸುವದರಲ್ಲಿ ತೊಡಗಿದನು.

ಈ ಕಾಲದಲ್ಲಿ ಅಲ್ಲಮಪ್ರಭುವು ಶಿವಾನುಭವಿಯಾಗಿ ದೇಶರಲ್ಲಿ ಧರ್ಮ ಪ್ರಸಾರ ಮಾಡುತ್ತ ಸೊನ್ನಲಗಿಗೆ ಬಂದನು. ಅವನು ಸಿದ್ಧರಾಮನನ್ನು



ಸಂಪುಟ ೨೮ ]　　[ ಸಂಚಿಕೆ ೫

# ಶಿವಾನುಭವ



ಸಂಪಾದಕರು

ಫ. ಗು. ಹಳಕಟ್ಟಿ,

ಬಿ. ಎ. ಎಲ್. ಎಲ್. ಬಿ.

ವಾ. ವ. ೫-೧೨-೦ )　ವಿಜಾಪೂರ　( ನೋ ೧೯೫೪

# ವಿಷಯಾನುಕ್ರಮಣಿಕೆ



# ಶಿವಾನುಭವ



| ವರ್ಷ ೨೮ | ಮೇ ೧೯೫೪ | ಸಂಚಿಕೆ ೫ |
| --- | --- | --- |



## ಶಿವಾನುಭವ ಮಂಟಪ.

( ಲೇ:— ಪ್ರೋ ಡಿ. ಕೆ. ಭೀಮಸೇನರಾವ್ ಎಂ ಎ. )

ಮಹಾನುಭಾವರಾದ ಬಸವಣ್ಣನವರು ಮಾಡಿದ ಮಹಾ ಕಾರ್ಯಗಳಲ್ಲಿ ಅನುಭವ ಮಂಟಪದ ಸ್ಥಾಪನೆ ಮುಖ್ಯವಾಗಿದೆ. ಬಸವಣ್ಣನವರು ವೀರಶೈವ ಮತೋದ್ಧಾರಣಕ್ಕಾಗಿ ತಮ್ಮ ತನು, ಮನ, ಧನಗಳನ್ನು ಸಮರ್ಪಿಸಿ, ಪರಮ ತ್ಯಾಗಿಗಳೆಂದು ಖ್ಯಾತಿಯನ್ನು ಪಡೆದರು. ಇವರು ಬಾಲ್ಯದಲ್ಲಿಯೇ ಬ್ರಾಹ್ಮಣರಲ್ಲಿ ರೂಢ ಮೂಲವಾಗಿದ್ದ ಅಂಧಾನುಕರಣದ ಸಂಪ್ರದಾಯ, ಬಾಹ್ಯಾಡಂಬರ, ಅರಿವು ಇಲ್ಲದ ಆಚರಣೆ ಮುಂತಾದವುಗಳ ವಿರುದ್ಧವಾಗಿ ಕಟುವಾಗಿ ಖಂಡಿಸಿ, ಬ್ರಾಹ್ಮಣವನ್ನು ತ್ಯಜಿಸಿ; ಮತಕ್ಷೇತ್ರದಲ್ಲಿ ಕ್ರಾಂತಿಕಾರರಾದರು. ತಮ್ಮ ಜನ್ಮಸ್ಥಳವನ್ನು ತ್ಯಜಿಸಿ, ಕೂಡಲಸಂಗಮೇಶ್ವರನ ಸಾನ್ನಿಧ್ಯವನ್ನು ಸಾರಿ ಅಲ್ಲಿ ಆತನ ಅನುಗ್ರಹ ಪಡೆದು, ಭಗವದಾದೇಶದಂತೆ ಕಲ್ಯಾಣಕ್ಕೆ ಹೋದರು. ಅಲ್ಲಿ ಬಿಜ್ಜಳನ ಮೇಲೆ ತಮ್ಮ ಪ್ರಭಾವವನ್ನು ಬೀರಿ ಆಸ್ಥಾನದಲ್ಲಿ ಉನ್ನತವಾದ ಅಧಿಕಾರಸ್ಥಾನವನ್ನು ಪಡೆದರು. ಕರ್ನಾಟಕ ಸಾಮ್ರಾಜ್ಯದ ಕೋಶಕ್ಕೆಲ್ಲ ಮುಖ್ಯಾಧಿಕಾರಿಗಳಾದರು. ಮಹಾರಾಜ್ಯದ ಭಂಡಾರಕ್ಕೆ ಅಧಿಪತಿಗಳಾಗಲೂ ಅರ್ಹತೆಯನ್ನು ಪಡೆದುದು ಕೇವಲ ಲೌಕಿಕ ದೃಷ್ಟಿಯಿಂದ ಇವರಿಗಿದ್ದ ವ್ಯಾವಹಾರಿಕ ಜ್ಞಾನದ ಅನುಭವದಿಂದ. ಇದರಿಂದ ಬಸವಣ್ಣನವರು ಒಂದು ವಿಸ್ತಾರವಾದ ಸಾಮ್ರಾಜ್ಯದ ಹಣಕಾಸಿನ ವ್ಯವಸ್ಥೆಯನ್ನು ನಡೆಸುವಲ್ಲಿ ಎಷ್ಟು ಸಮರ್ಥರಾಗಿದ್ದರೆಂದು ವ್ಯಕ್ತವಾಗುತ್ತದೆ. ಲೌಕಿಕದಲ್ಲಿ ಇವರು ರಾಜ್ಯದ ಆಡಳಿತವನ್ನು ಸುವ್ಯವಸ್ಥಿತವಾಗಿ ಸಾಗಿಸಿ

ಕೊಂಡು ಹೋಗುವ ಸಾಮರ್ಥ್ಯವನ್ನು ಪಡೆದಂತೆ ಪಾರಮಾರ್ಥಿಕದಲ್ಲಿಯ ಧರ್ಮಕ್ಷೇತ್ರವು ವ್ಯವಸ್ಥೆಗೊಂಡು ಸ್ಥಿರವಾಗಿ, ಶಾಶ್ವತವಾಗಿ, ಸಮೃದ್ಧವಾಗಿ ವಿಪುಲವಾಗಿ ಧರ್ಮದ ಬೆಳೆ ಬೆಳೆದು ಮುಮುಕ್ಷುಗಳೆಲ್ಲರೂ ಆಹಾರವನ್ನು ಪಡೆದು ಆತ್ಮ ಸಂತೃಪ್ತಿಯನ್ನು ಪಡೆಯಲು ಕೃಷಿಮಾಡಿದ ಮಹಾ ಕೃಷಿಕಾರರು. ಈ ಕೃಷಿಯ ಫಲವೇ ಇವರು ಸ್ಥಾಪಿಸಿದ ಅನುಭವ ಮಂಟಪ.

ಬಸವಣ್ಣನವರು ಮಾಡಿದ ಪ್ರಯತ್ನಗಳೆಲ್ಲವೊ ನವೀನವಾದವುಗಳು-ಅವರು ಆಧ್ಯಾತ್ಮದಲ್ಲಿಯೂ, ಪ್ರಾಪಂಚಿಕದಲ್ಲಿಯೂ ನವೀನ ಪ್ರಯೋಗಗಳನ್ನು ಕೈಕೊಂಡರು. ಮನುಷ್ಯನ ಐಹಿಕ ಜೀವನದಲ್ಲಿ ಬಸವಣ್ಣನವರು ದೊಡ್ಡ ಮಾರ್ಪಾಡುಗಳನ್ನು ಮಾಡಿದರು. ಹಾಗೆಯೇ ಆತ್ಮಿಕದಲ್ಲಿಯೂ ಅವರು ಶಿವಮಾರ್ಗವನ್ನುಪಕ್ರಮಿಸಿದರು. ಬಸವಣ್ಣನವರು ಕಲ್ಯಾಣಕ್ಕೆ ಬರುವುದಕ್ಕೆ ಮುಂಚೆ ಕನ್ನಡದ ಜನಜೀವನದ ಕೊರತೆಗಳನ್ನು ಚೆನ್ನಾಗಿ ಕಂಡುಕೊಂಡಿದ್ದರು- ಆ ಕೊರತೆಗಳೇನು ? ಕನ್ನಡದ ಜನತೆ ಪ್ರಾಚೀನ ಋಷಿ ಪ್ರೋಕ್ತವಾದ ಶುದ್ಧ ಮನಸ್ಸಿನ ಆಚರಣೆಯನ್ನು ಬಿಟ್ಟು ಬರಿಯ ತೋರಿಕೆಯ ನಡತೆಯಲ್ಲಿಯೇ ತೃಪ್ತವಾಗಿತ್ತು. ಸಮಾಜದಲ್ಲಿ ಎಷ್ಟೋ ಕಟ್ಟಲೆಗಳು ನಿಯಮಗಳು ಏರ್ಪಟ್ಟು ಸಮಾಜವು ಪ್ರಗತಿಪಥ ಕಾಣದೆ, ಕಂಗೆಟ್ಟು ಎತ್ತ ಎತ್ತಲೋ ಅಲೆದಾಡುತ್ತಿತ್ತು. ಧರ್ಮ, ನೀತಿ, ಆಚರಣೆಗಳಲ್ಲಿ ಔನ್ನತ್ಯವು ಮಾಯವಾಗಿ, ಶೈಥಿಲ್ಯವು ತಲೆದೋರಿತ್ತು. ವರ್ಣ ವರ್ಣಗಳಲ್ಲಿ ಉಚ್ಚ ನೀಚ ಭಾವವು ಅತಿರೇಕಕ್ಕೆ ಹೋಗಿ, ಮತದ್ವೇಷವೂ ವ್ಯಕ್ತಿದ್ವೇಷವೂ ಹೆಚ್ಚಾಗಿತ್ತು. ಸ್ತ್ರೀ ಪುರುಷರ ವಿಚಾರವಾಗಿ ಪಾರಮಾರ್ಥಿಕದಲ್ಲಿಯೂ ವ್ಯವಹಾರದಲ್ಲಿಯೂ ತಾರತಮ್ಯವು ಅತ್ಯಧಿಕವಾಗಿತ್ತು. ಇವೆಲ್ಲವೂ ಹೋಗಬೇಕು. ನವೀನ ಸಮಾಜವು ವ್ಯವಸ್ಥಿತವಾಗಬೇಕು. ಪರಮಾತ್ಮ ಪ್ರಾಪ್ತಿ, ಜೀವನ ಮುಕ್ತಿ ಸುಲಭೋಪಾಯದಿಂದಾಗಬೇಕು. ಈ ಎಲ್ಲ ವಿಚಾರಗಳು ಬಸವಣ್ಣನವರನ್ನು ಬಾಧಿಸುತ್ತಿದ್ದುವು. ಇವೆಲ್ಲವೂ ಕೈಗೂಡಬೇಕಾದರೆ ತಕ್ಕ ಕಾಲ ಬರಬೇಕು, ತಮಗೆ ತಕ್ಕ ಸ್ಥಾನ ಲಭಿಸಬೇಕು: ಇಷ್ಟೆಲ್ಲವನ್ನು ಮಾಡುವುದಕ್ಕೆ ಯೋಗ್ಯತೆಯನ್ನು ಪಡೆಯಬೇಕು ಎಂದು ಬಸವಣ್ಣನವರು ನಿರೀಕ್ಷಿಸುತ್ತಿದ್ದರು. ಕಲ್ಯಾಣಕ್ಕೆ ಬಂದಮೇಲೆ ಇವರ ಹೆಬ್ಬಯಕೆ ಈಡೇರಿತು.

ಜನತೆ ತಮ್ಮನ್ನು ಆದರಿಸಬೇಕಾದರೆ ತಾವು ಹೇಳಿದಂತೆ ನಡೆಯಬೇಕಾದರೆ, ತಮ್ಮಲ್ಲಿ ವಿಶ್ವಾಸವನ್ನು ಇಡಬೇಕಾದರೆ, ಮೊದಲು ತಾವು

ತಮ್ಮನ್ನು ಪರಿಶುದ್ಧರನ್ನಾಗಿ ಮಾಡಿಕೊಳ್ಳಬೇಕೆಂದು ಬಸವಣ್ಣನವರು ಯೋಚಿಸಿದರು. ತಮ್ಮ ನಡತೆಯನ್ನು ನಿರ್ಮಲವಾಗಿಟ್ಟುಕೊಂಡರು. ಕಾಯಾ, ವಾಚಾ, ಮನಸಾ ಈ ತ್ರಿಕರಣಪೂರ್ವಕವಾಗಿ ನಿರ್ವಂಚನೆಯಿಂದ ಇದ್ದರು. ತಮ್ಮನ್ನು ಬಗೆಬಗೆಯ ಪರೀಕ್ಷೆಗಳಿಗೆ ಈಡುಮಾಡಿಕೊಂಡರು. ವೀರಶೈವವನ್ನು ಉದ್ಧರಿಸಿದ ತಾವು ತಾವೇ ಬೋಧಿಸಿದ ತತ್ವಗಗಳನುಸಾರವಾಗಿ ಆಚರಿಸತೊಡಗಿದರು. ತಾವು ಎಂಥ ಉನ್ನತವಾದ ಅಧಿಕಾರದಲ್ಲಿದ್ದರೂ ಪರಮಾತ್ಮನಿಗೆ ಕಿಂಕರರು ಬರಿ ಅಷ್ಟೇ ಅಲ್ಲ, ಪರಮಾತ್ಮನ ಕಿಂಕರರಿಗೂ ಕಿಂಕರರು ಎಂದು ಅತ್ಯಂತ ನಮ್ರತೆಯಿಂದ ನಡೆದರು. ಜಂಗಮವೇ ಚಲಿಸುವ ಲಿಂಗವೆಂಬ ಧೃಡವಾದ ನಂಬುಗೆಯಿಂದ ಮನುಷ್ಯಮಾತ್ರದಲ್ಲಿ ದೇವತ್ವವನ್ನು ಕಂಡರು. ಶಿವಭಕ್ತರ ಯೋಗಕ್ಷೇಮಕ್ಕಾಗಿ ತಮ್ಮದಾಗಿದ್ದ ಎಲ್ಲವನ್ನೂ ಧಾರೆಯೆರೆದರು. ಧನವನ್ನು ನೀರಿನಂತೆ ಕೋಡಿವರಿಸಿದರು. ಅವರ ವಾಸಗೃಹ ಶರಣರ ಆರ್ತರ ವಸತಿಗೃಹವಾಯಿತು. ಬಂದವರಿಗೆಲ್ಲ ಭೇದಭಾವವಿಲ್ಲದೆ ಆದರ ಆತಿಥ್ಯಗಳಿಗೆ ತಾವೇ ಸೊಂಟ ಕಟ್ಟಿ ನಿಲ್ಲುತ್ತಿದ್ದರು. ಭಕ್ತಿಯೇ ರೂಪವೆತ್ತಿ ಬಂದಂತೆ ಕಂಡರು. ಭಕ್ತಿಭಂಡಾರಿ ಬಸವಣ್ಣನವರೆಂದೆನಿಸಿಕೊಂಡರು.

ಬಸವಣ್ಣನವರ ಮಹಾತ್ಮೆ, ಅವರ ವೈರಾಗ್ಯ ಇವುಗಳ ಕಿರಣಗಳು ನಾಡಿನಲ್ಲಿ ಹರಡಿತು. ಅವರ ಸಾನ್ನಿಧ್ಯವನ್ನು ಅವರ ದರ್ಶನವನ್ನಾಕಾಂಕ್ಷಿಸಿ ನಾಡಿನ ಮೂಲೆಗಳಿಂದ ಸಾವಿರ ಸಾವಿರ ಸಂಖ್ಯೆಯಲ್ಲಿ, ಜನ ತಂಡೋಪತಂಡವಾಗಿ ಬರತೊಡಗಿದರು. ಇವರಿಗೆ ಬರಿಯ ಆತಿಥ್ಯವನ್ನು ಕೊಟ್ಟು ದರ್ಶನಸುಖವಿತ್ತು, ಅಷ್ಟಕ್ಕೇ ತೃಪ್ತರಾಗಲಿಲ್ಲ. ಬಸವಣ್ಣನವರು ಬಂದವರು ಉದ್ಧಾರವಾಗಬೇಕಾದರೆ ಅವರಿಗೆ ಸದ್ಬೋಧಾಮೃತವನ್ನುಣಿಸಬೇಕು. ಸದಾಚಾರದಲ್ಲಿರುವಂತೆ ಅವರನ್ನು ಪ್ರೇರಿಸಬೇಕು. ಅವರಿಗೆ ಮುಕ್ತಿಪಥವನ್ನು ತೋರಿಸಬೇಕು, ಎಂದು ಬಸವಣ್ಣನವರು ಸಂಕಲ್ಪ ಮಾಡಿದರು. ಈ ಸಂಕಲ್ಪದ ಪರಿಣಾಮವೇ 'ಅನುಭವ ಮಂಟಪ' ದ ಸ್ಥಾಪನೆ.

ಬಸವಣ್ಣನವರು ಒಳ್ಳೆಯ ನುರಿತ ವ್ಯವಸ್ಥಾಪಕರೆಂಬಂಶವನ್ನು ಈ ಮೊದಲು ನಿರೂಪಿಸಿದೆ. ಇದಕ್ಕೆ ಈಗಿನ ಕಾಲದ ಉದಾಹರಣೆಯನ್ನು, ಹೋಲಿಕೆಯನ್ನು ಕೊಡಬೇಕಾದರೆ ಮಹಾತ್ಮಾ ಗಾಂಧಿಯವರನ್ನೇ ಕೊಡಬೇಕು. ಬಸವಣ್ಣನವರು ಯಾವ ಕಾರ್ಯವನ್ನಾದರೂ ಕೈಕೊಳ್ಳಬೇಕಾದರೆ

ಬಹಳ ದೂರ ದೃಷ್ಟಿಯಿಂದ ನೋಡುತ್ತಿದ್ದರು. ಪೂರ್ವಾಪರ ಯೋಚಿಸುತ್ತಿದ್ದರು. ಆ ಕಾರ್ಯ ಯಶಸ್ವಿಯಾಗಬೇಕಾದರೆ ಅದು ಹೇಗೆ ಸುಸಂಘಟಿತವಾಗಬೇಕೆಂಬುದನ್ನು ವಿವೇಚಿಸುತ್ತಿದ್ದರು. ಈಗ ಅನುಭವ ಮಂಟಪವೇನೋ ಸ್ಥಾಪಿತವಾಯಿತು. ಅದು ಒಂದು ಮಹಾ ಸಂಸ್ಥೆ, ದೊಡ್ಡ ಸಂಘಟನೆ. ಇಂಥ ಸಂಸ್ಥೆಗೆ ಅಧ್ಯಕ್ಷರಾಗಬೇಕಾದವರಲ್ಲಿ ಎಂಥ ಗುಣಗಳಿರಬೇಕು? ಅದರ ಕಾರ್ಯಕಲಾಪಗಳೇನು ? ಅದರ ಸ್ವರೂಪವೇನು ? ಅದರಲ್ಲಿ ಸೇರುವವರಲ್ಲಿ ಎಂಥ ಗುಣಗಳಿರಬೇಕು ? ಅವರು ಎಂಥವರಿರಬೇಕೆಂಬುವನ್ನು ಕೂಲಂಕಷವಾಗಿ ವಿಚಾರಿಸಬೇಕು. ಬಸವಣ್ಣನವರು ಅದರಿಂದಲೇ ಅವರು ಪರಮ ವಿರಕ್ತ ಶಿರೋಮಣಿಗಳೂ, ಮಹಾ ಜ್ಞಾನಿಗಳೂ, ಮಾಯೆಯನ್ನು ಗೆದ್ದು ಶಿವಯೋಗ ಮಾರ್ಗವನ್ನವಲಂಬಿಸಿದವರೂ, ಭರತಖಂಡವನ್ನೆಲ್ಲ ಸಂಚರಿಸಿ, ವಾದಿಗಳನ್ನು ಮುರಿದು, ಶಿವತಾರತಮ್ಯವನ್ನು ಸ್ಥಾಪಿಸಿ, ಪರಶಿವ ಸದೃಥರೆಂದು ವಿಖ್ಯಾತಿಯನ್ನು ಅಧ್ಯಕ್ಷರನ್ನಾಗಿರಲು ಪ್ರಾರ್ಥಿಸಿದುದು. ಅಲ್ಲಮಪ್ರಭುಗಳೆಂದರೆ ಪರಮತಗಳಿಗೆ ಬರಿಯ ಪರಮತೀಯರಿಗೊಂದೇ ಅಲ್ಲ,ಬಹಿರಾಡಂಬರದ ಸ್ವಮತೀಯರಿಗೂ ಉಗ್ರಮೂರ್ತಿಗಳು, ನಿರ್ದಾಕ್ಷಿಣ್ಯರು, ಇಂಥವರು ಅಧ್ಯಕ್ಷರಾಗಿರುವಾಗ ಈ ಮಹಾಸಂಸ್ಥೆಯಲ್ಲಿ ಕ್ಷುದ್ರವಾಗಲಿ, ಶೈಥಿಲವಾಗಲಿ, ಹುಳುಕಾಗಲಿ ಹುಟ್ಟಲು ಅವಕಾಶವಿರಲಿಲ್ಲ. ಈ ಮಂಟಪದಲ್ಲಿ ಪ್ರವೇಶ ಪಡೆದವರ ವರ್ತನೆಯ ವಿಚಾರವಾಗಿಯಾಗಲಿ, ಕೌಶಿಲ್ಯದ ವಿಚಾರವಾಗಿಯಾಗಲಿ, ತಮಗೆ ಅಥವಾ ಬೇರೆಯವರಿಗೆ ಸಂದೇಹವೇನಾದರೂ ಉಂಟಾದರೆ, ಅಲ್ಲಮಪ್ರಭುಗಳು ಅವರನ್ನು ತೀಕ್ಷ್ಣವಾಗಿ ಪರೀಕ್ಷಿಸುತ್ತಿದ್ದರು. ಇಂಥ ಒಂದು ಸಂದರ್ಭವನ್ನು ಇಲ್ಲಿ ಉದಾಹರಿಸಬಹುದು. ಮಹಾದೇವಿಯಕ್ಕನು ತನ್ನ ಪತಿಯನ್ನು ತೊರೆದು, ಪರಶಿವನೇ ತನ್ನ ಪತಿಯೆಂದು ನಂಬಿ, ಅನುಭವ ಮಂಟಪದ ಮಹಾನುಭಾವರ ಸಂಗವನ್ನಪೇಕ್ಷಿಸಿ, ದಿಗಂಬರೆಯಾಗಿ, ಕಲ್ಯಾಣಕ್ಕೆ ಬಂದ ಸಂದರ್ಭವದು. ಲೋಕೋತ್ತರ ಸುಂದರಿಯೂ ಭರಯೌವನದ ತರುಣಿಯೂ ಇಷ್ಟೆಲ್ಲದರ ಮೇಲೆ ದಿಗಂಬರೆಯೂ ಆದ ನವಯುವತಿ ಆ ಪುರುಷ ಸಮುದಾಯದಲ್ಲಿರುವುದೆಂದರೆ ಸಮಾಜ ದೃಷ್ಟಿಯಿಂದಲೂ, ಶೀಲರಕ್ಷಣೆಯ ದೃಷ್ಟಿಯಿಂದಲೂ ತುಂಬಾ ಆಕ್ಷೇಪಾರ್ಹವಾದ ವಿಷಯವಾಗಿದ್ದಿತು. ಅಲ್ಲಮಪ್ರಭುಗಳು ಇಂಥ ಸಾಧ್ವೀಶಿರೋಮಣಿಯಾದ ಮನ್ಮಥನನ್ನು ಭಸ್ಮ ಮಾಡಿದ ಮಹಾನುಭಾವೆಯನ್ನು ಉಗ್ರ ಪರೀಕ್ಷೆಗೆ ಈಡುಮಾಡಿದರು. ಕಿನ್ನರಬೊಮ್ಮಯ್ಯನನ್ನು ಕಳಿಸಿ, ಅವಳ ಸತ್ವಗುಣವನ್ನು ಪರೀಕ್ಷಿಸಿದರು. ಮಹಾದೇವಿ

ಯಕ್ಕನ ನಿಷ್ಕಲ್ಮಶವಾದ ಶೀಲವನ್ನು ಪರೀಕ್ಷಿಸಿ, ಕಿನ್ನರಿ ಬೊಮ್ಮಯ್ಯನು ಮಹಾದೇವಿಯಕ್ಕನನ್ನು ಆ ಮಹಾತ್ಮರ ಸಭೆಯಲ್ಲಿ ಮುಕ್ತಕಂಠದಿಂದ ಕೊಂಡಾಡಿದನು.

ಈ ಮಹಾಸಭೆಯಲ್ಲಿ ಜಾತಿ, ಮತ, ಪಂಥ ಪಂಗಡಗಳ ಭೇದವಿಲ್ಲದಂತೆ ಅಲ್ಲಮಪ್ರಭುಗಳು ಅವರು ಪುರುಷರೇ ಆಗಲಿ, ಸ್ತ್ರೀಯರೇ ಆಗಲಿ, ಎಲ್ಲರನ್ನು ಸೇರಿಸಿಕೊಂಡರು. ಇವರೆಲ್ಲರೂ ಮಹಾನುಭಾವರೇ. ವಯಸ್ಸಿನಲ್ಲಿ ಬಸವಣ್ಣನವರಿಗಿಂತ ಹಿರಿಯನಾದ ಕಲ್ಲುಕುರಿಕೆಯ ಪ್ರಭುವಾದ ಸಕಲೇಶ ಮಾದರಸ, ಕಾಶ್ಮೀರದ ಅರಸು, ಮೋಳಿಗೆಯ ಮಾರಯ್ಯ, ಮಡಿವಳ ಮಾಚಯ್ಯ, ಅಂಬಿಗರ ಚೌಡಯ್ಯ, ಡೋಹರ ಕಕ್ಕಯ್ಯ, ಹಡಪದ ಅಪ್ಪಣ್ಣ, ಜೇಡರ ದಾಸಿಮಯ್ಯ ಮೊದಲಾದ ಎಲ್ಲ ಕಾಯಕದವರೂ ಈ ಮಂಟಪದ ಸದಸ್ಯರಾಗಿದ್ದರು. ಇವರಲ್ಲದೆ ಎಷ್ಟೋಜನ ಸ್ತ್ರೀಯರೂ ಈ ಸಂಸ್ಥೆಯಲ್ಲಿದ್ದರು. ಮೋಳಿಗೆಯ ಮಾರಯ್ಯನ ಪತ್ನಿಯಾದ ಮಹಾದೇವಿ, ನೀಲಾಂಬಿಕೆ, ಮಹಾದೇವಿಯಕ್ಕ, ಅಕ್ಕನಾಗಮ್ಮ, ಮುಕ್ತಾಯಕ್ಕ ಮುಂತಾದ ಹತ್ತಿಪ್ಪತ್ತು ಜನ ಸ್ತ್ರೀಯರು ಕಂಡುಬರುತ್ತಾರೆ. ಈ ಹೆಸರುಗಳನ್ನು ಕರೆವಲ್ಲಿ ಒಂದು ವಿಶೇಷ ಗುಣ ವ್ಯಕ್ತವಾಗುತ್ತದೆ. ಪುರುಷರಾದರೆ ಅವರ ಹಸರುಗಳ ಜೊತೆಯಲ್ಲಿ "ಅಣ್ಣ" 'ಅಯ್ಯ" "ತಂದೆ" "ದೇವ" ಎಂದೂ, ಸ್ತ್ರೀಯರಾದರೆ ಅವರ ಹೆಸರುಗಳ ಜೊತೆಯಲ್ಲಿ "ಅಕ್ಕ" ಅಮ್ಮ, ಅವ್ವ, ದೇವಿ, ಅಂಬಿಕೆ ಎಂದೂ ಬಾಂಧವ್ಯ ಸೂಚಕವಾದ ಮಾತುಗಳು ಉಕ್ತವಾಗಿವೆ. ಸ್ತ್ರೀ ಪುರುಷರು ಏಕತ್ರ ಸೇರಿದ ಈ ಮಹಾಸಭೆಯಲ್ಲಿ ಒಬ್ಬರು ಮತ್ತೊಬ್ಬರನ್ನು ಕರೆವಾಗ "ಅಣ್ಣ", "ಅಕ್ಕ" ಎಂದು ಸಂಬೋಧಿಸುತ್ತ, ಮನೋವಿಕಾರಕ್ಕೆ ಎಡೆಯಿಲ್ಲದಂತೆ ವರ್ತಿಸುತ್ತಿದ್ದುದು ಇವರೆಲ್ಲರೂ ಒಂದೇ ಕುಟುಂಬಕ್ಕೆ ಸೇರಿದವರೆಂಬಂಶವನ್ನು ವ್ಯಕ್ತಗೊಳಿಸುತ್ತದೆ. ಬಸವಣ್ಣನವರು ಈ ನಿಟ್ಟಿನಲ್ಲಿ ಒಂದು ಮಹತ್ಕಾರ್ಯವನ್ನು ಸಾಧಿಸಿದ್ದಾರೆ.

ಇಂಥ ಮಹಾತ್ಮರ ಮಹಾ ಸಮ್ಮೇಳನದಲ್ಲಿ ಅವರೆಲ್ಲರ ಸಮ್ಮುಖವಾಗಿ ಅಲ್ಲಮಪ್ರಭುಗಳು ಶೂನ್ಯಸಿಂಹಾಸನದಮೇಲೆ ವಿರಾಜಮಾನವಾಗಿದ್ದ ದೃಶ್ಯವು ಕೈಲಾಸದಲ್ಲಿ ಗಣನಾಥರಿಂದೊಡಗೂಡಿ ಪರಮೇಶ್ವರನು ಸಭೆಯನ್ನು ನಡಿಸುತ್ತಿರುವ ಸನ್ನಿವೇಶವನ್ನು ಜ್ಞಾಪಕಕ್ಕೆ ತರುತ್ತದೆ. ಈ ಅನುಭವ ಮಂಟಪದಲ್ಲಿ ನಡೆಯುತ್ತಿದ್ದ ಕಾರ್ಯಕಲಾಪಗಳು ಬಹಳ ಸ್ವಾರಸ್ಯ

ವುಳ್ಳವಾಗಿವೆ. ಪ್ರತಿಯೊಬ್ಬ ಮಹಾನುಭಾವನೂ ಲೌಕಿಕವಾಗಿಯಾಗಲಿ, ತನಗುಂಟಾದ ಅನುಭವಗಳನ್ನು ಎಲ್ಲ ಸಭಿಕರ ಮುಂದೆ ಮನಸ್ಸು ಬಿಚ್ಚಿ ಮಂಡಿಸುತ್ತಿದ್ದನು. ಪ್ರತಿಯೊಬ್ಬ ಸದಸ್ಯನೂ ತನ್ನ ಮನಸ್ಸಿನಲ್ಲಿ ಏಳುತ್ತಿದ್ದ ಸಂದೇಹಗಳನ್ನು ವಿವರಿಸುತ್ತಿದ್ದನು. ಅಲ್ಲಿ ನೆರೆದವರಲ್ಲಿ ಯಾರಾದರೂ ಆ ಸಂದೇಹಗಳಿಗೆ ನಿವಾರಣೆಗಳನ್ನು ಸುಲಭವಾದ ಕನ್ನಡದ ಮಾತಿನಲ್ಲಿ ಅನೇಕ ವ್ಯಾವಹಾರಿಕ ದೃಷ್ಟಾಂತಗಳಿಂದ ನಿರೂಪಿಸುತ್ತಿದ್ದರು. ಭಕ್ತಿ, ವೈರಾಗ್ಯ, ಜ್ಞಾನ ಇವುಗಳ ಅನ್ವೇಷಣೆ, ಸಂಪ್ರಾಪ್ತಿ ಮಾರ್ಗ, ಭಗವತ್ ಸ್ವರೂಪ, ಆ ವಿಷಯಕವಾದ ಜ್ಞಾನ, ಮನುಷ್ಯನ ಚಂಚಲವಾದ ಮನಸ್ಸು, ಅದನ್ನು ಗೆಲ್ಲುವ ಉಪಾಯ, ಕಪಟ, ಕಾರ್ಪಣ್ಯ, ಶೀಲ, ಸುಖ ದುಃಖ ಹೀಗೆ ಎಲ್ಲ ವಿಷಯಗಳೂ ಚರ್ಚೆಗೆ ಆಸ್ಪದವಾಗಿರುತ್ತಿದ್ದುವು. ಜಟಿಲವಾದ ತಾತ್ವಿಕ ವಿಷಯಗಳಿಗೆ ಅಧ್ಯಕ್ಷರಾದ ಅಲ್ಲಮಪ್ರಭುಗಳು ಜ್ಞಾನಾನುಭವಗಳಿಂದ ಸಮರ್ಪಕವಾದ ಉತ್ತರಗಳನ್ನು ಕೊಡುತ್ತಿದ್ದರು. ಅಲ್ಲಿ ನೆರೆದ ಶರಣರ ಮಹಾ ಸಮುದಾಯವು ಈ ವಚನಾಮೃತವನ್ನು ಆಸ್ವಾದಿಸಿ ಧನ್ಯರಾಗುತ್ತಿದ್ದರು.

ಈ ಮಹಾ ಸಭೆಯ ಮಹಾ ಸಮುದ್ರದಲ್ಲಿ ಮಥನವಾದ ವಿಷಯಗಳಿಂದ ಐದು ಮಹಾ ಸಾಹಿತ್ಯಗಳು ಉದ್ಭವಿಸಿವೆ. ಇವು ಕನ್ನಡ ಸಾಹಿತ್ಯದಲ್ಲಿ ಅನರ್ಘ್ಯವಾದ ರತ್ನಗಳು. ಮಹಾನುಭಾವರಾದ ಬಸವಣ್ಣನವರು ಸಂಸ್ಥಾಪಿಸಿದ ಈ ಅನುಭವ ಮಂಟಪ ವೃಕ್ಷದ ಅಮೃತ ರಸಪೂರಿತವಾದ ಫಲಗಳು ಐದು ಶೂನ್ಯ ಸಂಪಾದನೆಗಳು.

ಹೈದರಾಬಾದ ಬಾನುಲಿ ಕೇಂದ್ರದಿಂದ ಪ್ರಸಾರವಾದುದು. ಆ.ವಾ.

# ಜಂಗಮಂ.

(ಲೇ:— ಶ್ರೀ. ಈಶ್ವರ ಕಳಕಣ್ಣವರ,-ಬೆಳಗಾವ.)

---

ಉಪೋದ್ಘಾತ ಅಂದರೇನು ?

ಯಾವ ಸಂಸಾರ ಸಾಗರವನ್ನು ತೊರೆದು ಉಚ್ಚವಾದ, ಉತ್ಕೃಷ್ಟ ವಾದ, ಮನೋರಂಜಕವಾದ ಭವ್ಯಾಕೃಷ್ಟವಾದ ಜನಸಮೂದಾಯ ರಹಿತ ವಾದ ಪರಮಾನಂದ ಪ್ರಾಪ್ತಕರವಾದ ಸತ್ಯಶೀಲತೆಯ ಶಿಖರವನ್ನೇರಿಸಬಲ್ಲ, ಮಂಗಲಸ್ವರೂಪವಾದ ಭಿನ್ನಾಭಿನ್ನರಹಿತವಾದ ಯಾವತ್ತೂ ಸದ್ಬೋಧದ ಸುಧೆಯನ್ನು ಸುರಿಸಬಲ್ಲ, ಆ ಸತ್ಯ, ನಿತ್ಯ, ಪರಿಪೂರ್ಣತೆಯುಳ್ಳ ಆತ್ಮನನ್ನು ಅರಿಯಲು ಸದಾ ಪ್ರಯತ್ನಿಸುತ್ತಿರುವ ಸಜ್ಜನರೂ, ಸತ್ಪುರುಷರೂ ಆದ ಯತಿ ಗಳು. ಅಥವಾ ಅಲೌಕಿಕವನ್ನು ಧರಿಸಿದ ಯತಿಗಳ ಅಮರಪಕ್ವವಾದ ವಾಣಿ ವಾಕ್ಪದದ ಪರಿಪಕ್ವವು. ಭವಿಯು ಅದನ್ನು ಸಾಧಿಸಲು ಆತಂಗೆ ಸಾಕೆನಿಸದೆ ಸಪ್ಪೆಯದೆ ಬೇರೊಂದನ್ನು ಇಚ್ಛಿಸದೆ ತನ್ನ ಜೋಕೆಗುಂದದೆ ಅನಂತಚಿನ್ಮಾತ್ರ ಸ್ವರೂಪವಾದ ಮಂಗಲಶ್ರೇಷ್ಠ ಯತಿತ್ವವನ್ನು ಅರಿಯಬೇಕೆಂಬ ಅರಿವಿನ ಆಳ ಅನುಭವವನ್ನು ಅರಿಯಲು ಸಕಲಪ್ರಪಂಚವನ್ನು ತ್ಯಜಿಸಿ ನಿರ್ಮಲ ಮನದಿಂದ ಯತಿವರ್ಯರ ಮಾತಿನಂತೆ "ವಿರತಿಬಲಿಯಲುಬೇಕು, ಜನಗಳ ಪರಿಚಯ ಇಲ್ಲಿರಬೇಕು, ಮಾತಿನ ಹರಿಯಬಿಟ್ಟಿರಬೇಕು ಬಹು ಏಕಾಂತವಿರ ಬೇಕು, ಹರಿದಶನವನು ಬಿಟ್ಟಿರಲುಬೇಕು, ಬರುವ ನಿದ್ರೆಯ ತಗ್ಗಿಸಲುಬೇಕು ಮರೆಯಬೇಕು ಪ್ರಪಂಚವಾಸನವೆಲ್ಲ ಕೇಳಿಂದಾ!" ಅನ್ನುವಂತೆ ಎಲ್ಲದ ರಲ್ಲಿ ಸರ್ವಸಂಗಪರಿತ್ಯಾಗಿಯಾದ ವೃತ್ತಿಯುಳ್ಳವನು ಪರಮಸರಸಾನಂದಯುತ ನಾದವನೇ ಜಂಗಮ.

ಕರ್ಮಿ, ಮುಮುಕ್ಷಿ, ಅಭ್ಯಾಸಿ, ಅನುಭವಿ, ಆರೂಢ ಎಂಬ ಸಮರಸ ಯುಕ್ತ ಸರ್ವದರ ಅನುಮತಿ ತ್ಯಾಗದಲ್ಲಿಯೂ ತ್ರಿವರ್ಣ ಘಟಕಗಳು ಕಲ್ಪಿತವಾಗುತ್ತವೆ. ಲೌಕಿಕ ಘಟನೆ, ಆಧ್ಯಾತ್ಮಿಕ ಘಟನೆಯಂತಲೂ ಆತ್ಮಾ ನಾತ್ಮ ಘಟನೆ ಎಂತಲೂ ಇದೆ.

ಲೌಕಿಕಘಟನೆ:— ಅಜ್ಞಾನದ ಮಂದತೆಯನ್ನು ವಿಕಾರ ಸ್ವರೂಪ ವನ್ನು ಮತ್ತು ಭಿನ್ನಾಭಿನ್ನಾಕೃತಿಯನ್ನು ಜಾಡ್ಯತನವನ್ನು ಮೋಹಕ ಸ್ವರೂ

ಶಾವರ್ತನ ಬಲೆಯನ್ನೂ ಹರಿದು ಸುವಿಸ್ತರವಾದ ಮಾರ್ಗಕ್ಕೆ ಸಹಾಯಿ ಏಿತ್ತು, ಅದರ ಏಳ್ಗೆಗಾಗಿ ಪ್ರಗತಿಪಥವನ್ನು ದೊರಕಿಸಲು ದಾರಿದೀವಟಿಗೆ ಯಂತೆಯೂ ಅಂಧಕಾರದ ತಿಮಿರನ್ನು ದೂರೀಕರಿಸಲೂ ಸಾಧಕವಾದ ಲಯ ಉದಯ ಗಮನ ರಹಿತವಾದ ಆತ್ಮೋದ್ಧಾರದ ಮಾರ್ಗಗೋಚರವನ್ನು ಲೌಕಿಕವನ್ನು ಅಲೌಕಿಕನ್ನಾಗಿ ಮಾಡಲು ಅನಂತಮಾರ್ಗಗಳಲ್ಲಿ ಒಂದು ಘಟನೆಯಂದರೆ ಜಂಗಮು.

ಅಧ್ಯಾತ್ಮಿಕ ಘಟನೆ:— ಆತ್ಮಾಧಿಕ್ಯವಾದ ಆತ್ಮವಿಚಾರದಲ್ಲಿ ಪೂರ್ಣತೆಯಲ್ಲಿ ತೊಡಗಲು ಆ ದಿವ್ಯ ಬೋಧಾನಂದ ಸಮಯದಲ್ಲಿ ತತ್ಪರನಾಗಿ ವಿಚಾರ ಪ್ರವಾಹದ ಸುಮಾರ್ಗ ಪ್ರಕಟನೆಯದೆಶೆಯುಲ್ಲಿ ಪ್ರಗತಿಪಥವನ್ನು ಅನುಸರಿಸುವದೇ ಅಧ್ಯಾತ್ಮಿಕ ಸುಮಾರ್ಗ. ಇಂಥದರಲ್ಲಿ ಸಮರಸ ಶಕ್ತಿಯನ್ನು ಆಲಂಗಿಸಿ ಮುಕ್ತಿಪಥವನ್ನು ಅರಿಯಲು ಸಾಧ್ವಿಗಳು ಮಂಗಲತೆಯನ್ನು ಸಾಧಿಸಲಿರುವಂತೆ ಸಾಧಿಸುತ್ತಿರುವ ಆತ್ಮಸಾಧನದ ವೃತ್ತಿಯೇ ಜಂಗಮು.

ಆತ್ಮಾನಾತ್ಮಿಕ ಘಟನೆ:—ಸ್ವಾರ್ಥತೆಯನ್ನು ತ್ಯಜಿಸುವದಲ್ಲದೆ ವಿಷಯಾಭಿಲಾಷೆಯ ಸಿಲುಕದೆ "ಅಹಂ ಮಮಕಾರ" ಎಂಬ ಅಂಗನಾಶಕ ರಿಪುಗಳನ್ನು ತೊರೆದು ಮಲಿನತೆಯನ್ನು ದೂರೀಕರಿಸಿ, ಅದರ ಆಳ ಅನುಭವದಲ್ಲಿ ಆತ್ಮೀಯ ಕಾರ್ಯಾಂಗಗಳಾವವು. ಮತ್ತು ಅನಾತ್ಮೀಯ ಕಾರ್ಯಾಂಗಗಳಾವವು ಇದರ ಅರಿವನ್ನು ಅರಿಯಲಿರುವ ಸ್ವಾರ್ಥವು ಆಧ್ಯಾತ್ಮದಲ್ಲಿ ಕರ್ಮಿ, ಮುಮುಕ್ಷಿ, ಅಭ್ಯಾಸಿ, ಅನುಭವಿ, ಆರೂಢ ಎಂಬುವಂತೆ ಈ ಜಂಗಮತ್ವವ ದಳೂ ಅತ್ಯಲ್ಪ ಅಂಗಕಾರ್ಯಯುತ ಸುಜ್ಞಾನ ತರಂಗವೃತ್ತಿಯು.

ಭವದ ಭವನದಲ್ಲಿ ಸಾಕನಿಸಿಪ ಕ್ಷೀರಸಾಗರದ ಸವೆಯದ ಪರಮಾನಂದ ದಿವ್ಯಬೋಧೆ, ಬೇರೊಂದನ್ನು ಇಚ್ಛಿಸದ ಚೈತನ್ಯವು. ಅತಿ ಆನಂದವಾದ ಸದ್ಭಾವನೆಯನ್ನು ಅರಿತು ಪರಮಪರಂತರವಾದ ಪರಮಕ್ಕೆ ಪರಂಜ್ಯೋತಿಯಾದ ಮುಮುಕ್ಷತ್ವವನ್ನಾಲಂಗಿಸುವದೇ ಗುರುರೂಪ ಸನ್ಯಾಸಿವೃತ್ತಿಯು. ಮಂಗಲನಿಗೆ ಅಂಗರಹಿತವಾಗಿ ಸರಸಾನಂದದಲ್ಲಿ ನೆಲಿಸಿ ಮುಕ್ತಿಪಥದ ಅಧಿಕಾರ ಅವಸನ್ನಿಧಾನವನ್ನು ಅಕ್ಕರತೆಯಿಂದಿಕ್ಕಿ ಸಂಸಾರವನ್ನು ಸುಲಭವಾಗಿ ಮಾಡಿ ಸುಜ್ಞಾನ ಸುಧೆಯ ಸಾಗರ ತೆರೆಯ ತರಂಗದಲ್ಲಿ ನಿಂದು ಝುರಿನಲ್ಲಿ ತೇಲಾಡಿದಂತೆ ಈ ಮಲಿನ ದೇಹವನ್ನು ಮಲ್ಲಿಗೆಯ ಅಮರಪಕ್ವದಂತೆ ತೇಲಿಸಬಹುದಾದ ಭೂಲೋಕದ ಕರ್ಮಭೂಮಿಯಲ್ಲಿದ್ದರೂ ಅರಿವಿನ ಚಲನೆಯಿಂದ ಜಯಿಸಬಹುದಾದ ವೃತ್ತಿಯೇ ಜಂಗಮವೃತ್ತಿಯು.

ತರ್ಕ ವಿಮೋಚನೆಯನ್ನೀಯಲು ವೇದಾದಿಗಳ ಆತ್ಮೋನ್ನತಿಯ ಆಧಾರ ಬೆಂಬಲವಾದರೂ ಅಧಿಕಾರವಾಗಿ ಇಕ್ಕೇರುತ್ತಿದೆ. ನ್ಯಾಯಾನೋಹಕವನ್ನು ತೊರೆದು ಅದರಡಿಯಲ್ಲಿ ಪಸಡಿಸಿ ನರಕಯಾತ್ರೆಯನ್ನು ಸಮೀಪಿಸುವದ ಕಿಂತಲೂ ಸನೆಯದ ಕಾಲಕ್ಕೂ ಯಾವಾಗಲೂ ಅಲಂಕರಿಸಿದ ಆನಂದ ಸಾಗರವನ್ನು ಅನುಭವಿಸಿ ಆಧ್ಯಯುಕ್ತರಾಗಿ ಆಶೆ ಜೀವಿಗಳಿಗೆ ಪರಮಾ ಮೃತವಾದ ಆನಂತವಾದ ಸಮುಯುಕ್ತವಾದ ಜಂಗಮವೃತ್ತಿ. ಪ್ರಗತಿಗಾಗಿ ಅನಂತರ ಬಯಕೆಯ ಅರಿಕೆಯನ್ನು ಪೂರ್ಣಿಸಲು ಸ್ವಾಮಿ ವಿವೇಕಾನಂದರು ಅನುಮತಿಸಿದಂತೆ ಅದರ ಏಳ್ಗೆಗಾಗಿ ಈಗಲೂ ಪ್ರಗತಿಪಥದಲ್ಲಿ ನಡೆದ ಜಂಗಮವೃತ್ತಿಯು ಪರಮವಾದುದು. ಆದಿಯು ನಿಜವಾದ ಅನುಭವವಾ ದರೂ ಜಂಗಮತ್ವವೇ ಸರಿ.

---

# ಆಧ್ಯಾತ್ಮಿಕ-ವಚನಗಳು.

(ಶ್ರೀ ರೇವಣಸಿದ್ಧಪ್ಪಾ ಶೀಲವಂತ, ಹುನಗುಂದ)

---

ಸ್ಥೂಲ, ಸೂಕ್ಷ್ಮ, ಕಾರಣ ಶರೀರಕ್ಕೆ ಗುರು, ಲಿಂಗ, ಜಂಗಮವಾ ಗಿರಿಸಿದೆ। ಒಳಗೆ ಕೋಟಿ ಸೂರ್ಯರದಂತೆ ಒಪ್ಪುವ ಪ್ರಕಾಶವೇ ಶ್ರೀ ವಿಭೂತಿಯಾಗಿರಿಸಿದೆ ಸದಾ ನಿಮ್ಮ ಅಂತಃಕರಣ ದೃಷ್ಟಿ ಯಿರುವದೇ ರುದ್ರಾಕ್ಷಿಯಾಗಿರಿಸಿದೆ। ಯಾವಾಗಲೂ ನಿಮ್ಮ ನಿಜಧ್ಯಾನವೇ ಮಂತ್ರ ವಾಗಿರಿಸಿದೆ। ಪಶ್ಚಿಮ ಶಿಖೆಯಲ್ಲಿ ಮೆರೆಯುವ ಶಿವಲಿಂಗದ ಅಮೃತವೇ ಪಾದೋದಕವಾಗಿರಿಸಿದೆ। ಇಂತೀ ಅಷ್ಟಾವರಣ ಗುಣಗಳಿಲ್ಲದವರಿಗೆ ಒಲಿ ಯುವನೇ ನಮ್ಮ ಕೋಟೀಕಲ್ಲ ಶ್ರೀ ಹೊಳೆಹುಚ್ಚೇಶ್ವರಾ॥

ಲಿಂಗದ ಮೇಲೆ ದೃಢತ್ವವಿಲ್ಲದ ಮಾನವರು ನಾನಾ ಗುಡಿಗಳಲ್ಲಿ ದೇವರಿರುವರೆಂದು ತಿರುಗುವವರ ಗತಿ ಎಂತು ಹೇಳಲಿ! ಗಂಡ ಬಿಟ್ಟ ಗಯ್ಯಾಳಿಯಂತೆ ಇಷ್ಟಲಿಂಗವ ಬಿಟ್ಟು ಅನ್ಯಲಿಂಗಕ್ಕೆ ಹೋದೊಡೆ, ನಾನಾ ಭವಸಾಗರದಲಿ ತಿರುಗುವವರೇ ಹೊರತು ನಿಮ್ಮಾಣೆಯಾಗಿಯೂ ಮುಕ್ತಿ ಇಲ್ಲ ನೋಡಯ್ಯಾ ಕೋಟಿಕಲ್ಲ ಶ್ರೀ ಹೊಳೆಹುಚ್ಚೇಶ್ವರಾ॥

ಜಗದ ವೃಕ್ಷಕ್ಕೆ ಅಜ್ಞಾನವೆಂಬ ಅನೇಕ ವಿಟಪಗಳಾಗಿ ಪರಿಣಮಿಸಿದವು ನೋಡಯ್ಯಾ। ವಿಚಾರಿಸಿ ನೋಡಿದರೆ ಏನೂ ಹುರುಳಿಲ್ಲವಯ್ಯಾ। ಪಂಚತತ್ವದಿಂದುದ್ಭವಿಸಿದ ನಾವೆಲ್ಲರೂ ಭಿನ್ನರಾದರೆ, ಸರ್ವ ಜೀವ ಹೃದಯದಲ್ಲಿ ಹುದುಗಿಕೊಂಡಿಪ್ಪ ನಮ್ಮ ದೇವನೇನಾದರೂ ಭಿನ್ನವೇ ? ಇದನ್ನರಿತು ನಡೆದರೆ ಧರ್ಮದ ನಿಜವಾದ ರೀತಿಯನ್ನು ಸ್ಥಾಪಿಸಿದಂತಾಗುತ್ತದೆ ನೋಡಯ್ಯಾ। ಇಲ್ಲವಾದರೆ ಜಗತ್ತು ಅಧರ್ಮಮಯವಾಗಿ ನಾನಾ ಕಾರ್ಪಣ್ಯಗಳಿಗೀಡಾಗುವದಲ್ಲದೆ ನರಕವು ಪ್ರಮುಥರಾಣಿಯಾಗಿಯೂ ತಪ್ಪುವದಿಲ್ಲ ನೋಡಯ್ಯಾ। ಕೋಟೇಕಲ್ಲ ಶ್ರೀ ಹೊಳೆಹುಚ್ಚೇಶ್ವರಾ ॥

ಬಡವರಾರೆಂಬುದು ಬಲ್ಲರೆ ಹೇಳಿರೋ, ಅರಿಯದಿರ್ದೊಡೆ ಕೇಳಿರೋ। ಶಾಂತಿಯಿಲ್ಲದವನೇ ಬಡವನಯ್ಯಾ। ಸತ್ಯವಿಲ್ಲದವನೇ ಬಡವನಯ್ಯಾ। ದಯವಿಲ್ಲದವನೇ ಬಡವನಯ್ಯಾ। ಅಹಿಂಸೆಯನ್ನು ಆಚರಿಸದೆ ಇರುವವನೇ ಬಡವನಯ್ಯಾ। ಇಷ್ಟೇ ಅಲ್ಲ. ತನ್ನತಾನರಿಯದವನೇ ಬಡವನಯ್ಯಾ। ದೇವಾ. ಶರಣರು ಸಕಲ ತತ್ವಗಳಿಂದ ಮರೆದು ಸುಖಪಡುತ್ತಿರುವವರೇ ನಿಜವಾದ ಶ್ರೀಮಂತರು ನೋಡಯ್ಯಾ ಕೋಟೇಕಲ್ಲ ಶ್ರೀ ಹೊಳೆಹುಚ್ಚೇಶ್ವರಾ ।

ಸಪ್ತಾಶ್ವಗಳು ಮಾಡಿದ ಹೊನ್ನರಥದಲ್ಲಿ ಕುಳಿತು ಎದೆಸೆಟೆಸಿಕೊಂಡು ಹೋಗುವ ಅಂಬಗಳಿರಾ, ಮುಂದೆ ಕೆರೆ, ಹಳ್ಳ, ಹೊಳೆಗಳು, ತುಂಬಿ ಭೋರ್ಗರೆಯುತ್ತಿರುವವು ನೋಡಯ್ಯಾ। ಆಚೆಗೆ ಸಾಲಾಗಿ ನಿಂತಿರುವ ಮೇರುಪರ್ವತಗಳು ಝೇಂಕರಿಸುತ್ತಿರುವವು ನೋಡಯ್ಯಾ। ಅದರಾಚೆಗೆ ಸಪ್ತಸಾಗರಗಳು ಹೊರಸೂಸಿ ನಿಮ್ಮನ್ನು ನೋಡಿ ಚಪ್ಪಾಳೆ ಇಕ್ಕಿ ಗಹಗಹಿಸಿ ನಗುತ್ತಿರುವವು ನೋಡಯ್ಯಾ। ಇವೆಲ್ಲವನ್ನೂ ದಾಟಬೇಕಾದರೆ "ಶಿವ" ಮಂತ್ರವೊಂದೇ ಮಹಾ ದಾರಿ ನೋಡಯ್ಯಾ। ಅದರಾಚೆಯಲ್ಲಿರುವದೇ ಕೈಲಾಸ ನಗರ ನೋಡಯ್ಯಾ। ಅದರಲ್ಲಿ ಪ್ರಕಾಶಿಸುತ್ತಿರುವ ನಿತ್ಯ ನಿರಂಜನ ಪರಮಗುರು ಕೋಟೇಕಲ್ಲ ಶ್ರೀ ಹೊಳೆಹುಚ್ಚೇಶ್ವರ ಲಿಂಗವನ್ನು ಮನಮುಟ್ಟಿ ಪೂಜಿಸಿ ಧನ್ಯರಾಗಿರಯ್ಯಾ ॥

# ಅರಭಾಂವಿ ದುರದುಂಡೀ ಮಹೇಶ್ವರನ ಮಹಿಮೆ.

(ಲೇ: — ಶ್ರೀ ಪರ್ವತರಾಜ ಅಂಗಡಿ. ಸಂಗೊಳ್ಳಿ.)



ಶ್ರೀಮದ್ ವಿರಳರೂಪ ನಿರುಪಾಧಿಜಂಗಮಂ । ಹೇಮ ಗಿರಿ
ಯಿಂದಿಳಿದು ಶಿವಲಿಂಗನಾಮದಿಂ । ಭೂಮಿಯಲಿ ಬಂದು
ನಿಜಲೀಲೆಯಿಂ ಮೆರೆದಿರ್ದನರಭಾವಿ ಪುಣ್ಯಾದ್ರಿಯೊಳ್ ॥

ಗೋಕಾವಿ ತಾಲೂಕಿನಲ್ಲಿ, ಅರಭಾವಿ ಶ್ರೀ ದುರದುಂಡೀ ಮಹೇಶ್ವರನು ತಮ್ಮ ಜೀವಮಾನದಲ್ಲಿ ಅನೇಕ ಭಾಗಗಳಲ್ಲಿ ಲೀಲೆ ಮಾಡಿ ತೋರಿಸಿದ್ದಾರೆ. ಇವುಗಳಲ್ಲಿ ಅನೇಕ ಲೀಲಾಭಾಗಗಳು ಇವೆ. ಇದರಲ್ಲಿ ಒಂದನ್ನು ಆರಿಸಿ ಬರೆಯುವೆ. ಇವರು ಮಹಾ ಪವಾಡಪುರುಷರು, ಗಣಪುರುಷನ ಅವತಾರಿಗಳು ಇದ್ದರು. ಈಗಲು ಇದ್ದಾರೆ. ಇವರು "ಜಂಗಮೋ ಜಗಚ್ಚರಿತ:" ಎಂಬುದನ್ನು ದೃಢಗೊಳಿಸಿದರು. ಒಮ್ಮೆ ದುರದುಂಡೀ ಮಹೇಶ್ವರನು ಗೋಗಾವಿಯಲ್ಲಿ ಭಕ್ತರ ಮನೆಗಳ ಬಿನ್ನಹವನ್ನು ತೀರಿಸಲಿಕ್ಕೆ ಹೋಗಿದ್ದರಂತೆ, ಆವಾಗ್ಗೆ ಘಟಪ್ರಭಾ ನದಿಗೆ ಮಹಾಪೂರ ಬಂದಿತ್ತು. ನಿರುಪಾಧಿ ಜಂಗಮನಾದ ದುರದುಂಡೇಶ್ವರನು ಬಿನ್ನಹ ತೀರಿಸಿ, ನದಿಯ ದಂಡೆಗೆ ಬಂದನು. ನದಿಯನ್ನು ದಾಟಬೇಕಾಯಿತು. ಗೋಕಾವಿಯ ನಾವಿಕರು ಹಾಗು ಕೆಲವು ಜನರು ಈ ಮಹಿಮನನ್ನು ಬಯ್ದು, ನಿಂದಿಸಿ, ಹೊರದೂಡಿ, ತಮ್ಮ ನಾವೆಗಳಲ್ಲಿ ಹತ್ತಗೊಡಲಿಲ್ಲ. ಕೊನೆಗೆ ಘಟಪ್ರಭಾ ಮಹಾಪೂರದಲ್ಲಿ ತಮ್ಮ ಕಂಬಳಿಯ ಗದ್ದಿಗೆಯನ್ನು ಹಾಸಿ, ಅದರ ಮೇಲೆ ಕುಳಿತು "ಹರಹರ ಮಹಾದೇವ" ಎಂದರು. ಅದು ಮಹಾಪೂರದಿಂದ ತುಂಬಿದ ನದಿಯ ಆಚೆಯ ದಡದಲ್ಲಿ ಒಯ್ದು ಮುಟ್ಟಿಸಿತು. ಇತ್ತಕಡೆ ನಾವಿಕರು ನಾವೆಗಳ ಕಟ್ಟು ಕಡೆಯುತ್ತ, ನಡುಹೊಳೆಯಲ್ಲಿ ಬಂದರು. ನಾವೆಗಳು ನಿಂತಲ್ಲಿ ನಿಂತವು. ಎಷ್ಟು ಪ್ರಯತ್ನಿಸಿದರೂ ನಾವೆಗಳು ಮುಂದೆ ಸಾಗಲಿಲ್ಲ. ನಮ್ಮ ಜೀವನಕ್ಕೆ ಗಂಡಾಂತರಬಂದಿತೆಂದು ಆ ನಿರುಪಾಧಿ ಜಂಗಮನ ಕಡೆಗೆ ನೋಡಿದರು. "ಪರಮಾಶ್ಚರ್ಯ. ಈ ಮಹಿಮನು ನಮ್ಮಕಿಂತ ಮುಂದೆಹೋಗಿ, ಆಚೆಯ ದಡದಲ್ಲಿ ಇದ್ದಾನೆ. ಇವರು ಸಾಮಾನ್ಯ ಪುರುಷರಲ್ಲ. ಎಂದು ತಿಳಿದು — ತಮ್ಮ ತಪ್ಪನ್ನು ಒಪ್ಪಿ

ಕೊಂಡು, ಈ ಮಹಿಮನನ್ನು ಕರೆದರು. ಕರೆದರೂ, ತಿರುಗಿ ಬರಲಿಲ್ಲ. ಈ ಮಹೇಶ್ವರನು— "ಭಕ್ತರೇ! ನಾನು ಇನ್ನೂ ತಿರುಗಿ ಬರಲಿಕ್ಕೆ ಸಾಧುವಿಲ್ಲಾ, ನೀವು ಶೀವ್ರ ನಾವೆಗಳನ್ನು ತೆಗೆದುಕೊಂಡು ಬನ್ನಿರಿ. ಅವುಗಳ ಬರುವವು" ಎಂದು ಅಪ್ಪಣೆಕೊಡಿಸಿದರು. ಇದರಿಂದ ದಂಡೆಯನ್ನು ಬಂದು ಸೇರಿವವು. ಈ ಲೀಲಾ ಭಾಗದಿಂದ ಗೋಕಾವಿಯ ಶರಣರ ಸಂಶಯವನ್ನು ಹರಿದ ವಿಷಯವು ಸುಗಮವಾಗಿದೆ. ಗೋಕಾವಿಯ ಘಟಪ್ರಭಾ ನದಿಯ ದಡದಲ್ಲಿ ಇವನ ಗುಡಿಯನ್ನು ಕಟ್ಟಿಸಿದ್ದಾರೆ. ಈಗಲೂ ಕಾಣಬಹುದು. ಇದೇ ಭಾಗವು ಕೆಳಗಿನ ಗದ್ಯ-ಪದ್ಯಗಳಿಂದ ರಚಿಸಿದ ಭಾಗದಲ್ಲಿ ಒಡಮೂಡಿಸಿದ್ದೇನೆ.

ಅರಭಾವಿ ಕ್ಷೇತ್ರದಲಿ ದುರದುಂಡಿ ಜಂಗಮಂ | ಮೆರೆದಿರಲ್ಬಳಿಕೊಂದು ವಾಸರದೆ ಗೋಕಾವಿ | ಹರ ಶರಣ ಸಂತತಿಯು ವೀರ ಮಹಿಮೆಯ ಕೀರ್ತ್ಯ ಮನದೊಳಗೆ ಸಂದೇಹದಿಂ ‖ ನಿರುಪಾಧಿ ಜಂಗಮಗೆ ನಿಲುಕಡೆಯಿದೇಂ ಜಗದೆ | ವರ ವಿಶ್ವತೋ ರೂಪದಿಂದಿರುವ ಕಜ್ಜವಿದು | ಪರಿಣಾಮವಲ್ತೆಂದು ತಮ್ಮೊಳಗೆ ಮಾತಾಡುತ್ತಿರುತಿರ್ದರೊಂದೊಂದನು ‖೧‖

ಪರಮವರ ವೀರಶೈವದ ಮಾರ್ಗಸಮ್ಮತವೆ? | ಪರಿಕಿಪಡೆ ಷಟ್ಸ್ಥಲ ಬ್ರಹ್ಮರಿಗಿದೇಂ ಹಿತವೆ! | ತುರುಗಳಂ ಕರುಗಳಂ ಕುರಿಹಿಂಡುಗಳ ಕಾಯ್ದು ಕಂಬಳಿಯ ಪೊದ್ದಿರ್ಪುದು ‖ ಚರಕುಲೋತ್ತಮರಿಂಗೆ ತಾನುಚಿತವಲ್ಲೆಂದು | ಶರಣ ಸಂತತಿ ಕೂಡಿ ಸರ್ವ ಮಾಯುನಿಂಗಿತವ | ನರಿಯದಲಿ ತಮತಮಗೆ ಮಾತಾಡುತಾಕ್ಷಣದೊಳನುಭವದ ಮಂಟಪದೊಳು ‖೨‖

ಒಂದೊಂದು ಮಾತುಗಳನಾಡುತ್ತ ಮನದೊಳಗೆ | ಸಂದೇಹಗೊಳುತಿರಲು | ಸರ್ವಾತ್ಮಗತನಿತ್ತ | ಸಂದೆಗದ ವರಶರಣಂ ಪಾಲಿಸುವೆನೆಂದು ತನ್ನೊಳಗೆ ತಾನರಿಯುತೆ ‖ ಮಂದಹಸಿತಂಗೆಯ್ವುತರ ಭಾವಿಕ್ಷೇತ್ರದಿಂ | ಬಂದು ತತ್ಪುರದ ಮುಂದೆಸೆಯೊಲ್ಲಿ ನಿಂದಿರಲು | ಸಂದ ಘಟಪಾವನಿಯು ಪರಿಪೂರ್ಣ ಭಾವದಿಂ ಮೆರೆದಿರ್ದುದಾ ವೇಳೆಯೋಳ್ ‖೩‖

ದಂಡೆಯಿಂ ಪೊರಸೂಸಿ ಘನಜಲಂ ಬಿಡದೆ ಭೂ-| ಮಂಡಲದೆ ಪರಕಲಿಸಿ ಪರಿಯುತ್ತಿರೆ ಪರಮ ದುರ- | ದುಂಡಿ ಜಂಗಮನಿರವ ಕಂಡು ನದ್ಯಂಗನೆಯು ಭಯಭಕ್ತಿಯಂ ತೋರುತೆ ‖ ದಿಂಡುಗೆಡೆದಂತಿರ್ದ ತೆರೆಗೈಗಳಂ ಮುಗಿದು | ಮಂಡಿತೋತ್ತಮನಡಿಗೆ ಬಿನ್ನೈಸೆ ಕರುಣದಿಂ | ಮಂಡಿಸಿದನೆಂಬಂತೆ ಸರ್ವರುಂ ನೋಡುತಿರಲಾ ಮಹಿಮನಾ ನದಿಯೊಳು ‖೪‖

ಮಿರುಪ ವ್ಯಾಘ್ರಾಜಿನದ ಪರಿಯಂತೆ ಕಂಗೊಳಿಸು-। ತಿರುವ ತತ್ಕಂಬಳಾಸನದಲ್ಲಿ ಮಂಡಿಸುತೆ । ಕರಿಕಮಂಡಲು ವೇತ್ರವರ ಭಸ್ಮರುದ್ರಾಕ್ಷಿಮಾಲಾಳಿಗಳನೆಸೆಯುತೆ । ತೊರೆಯಲ್ಲಿ ಮನದೊಳಗೆ ಪಂಚಾಕ್ಷರೀ ಮನುವ। ಸ್ಮರಿಸುತ್ತೆ ಬರುತಿರ್ದ ನಿಳೆಯರಿಯೆ ಜಂಗಮಂ ॥ ಧರಣಿಯೊಳಗಿದು ಚಿತ್ರಮರಿಯಲ್ಕೆ ಸಾಧ್ಯಮತ್ಯಾನಂದದಂ ಮಹಿಮೆಯು ॥೫॥

ಇಂತಿತ್ತಲ-ನದ್ಯುದಕವನ್ನುಳಿದು ತತ್ಪುರಕೆ । ಕಂತುಹರ ನಿಜಾರ್ತ ಶಿವಯೋಗಿ ನಡೆದಲ್ಲಿ । ಸಂತಸದೆ ಪ್ರಮಥ ಗೀತಾವಳಿಯ ಪೇಳುತ್ತೆ ಕುಳಿತಿರ್ಪ ಶಿವಶರಣರ ॥ ಸಂತತಿಯ ಮಂಟಪಕೆ ನಿಜರೂಪದಿಂ ಬರಲು । ಮುಂತಿರ್ದ ಸಾಹಿಮನಂ ಕಂಡೆರಗಿ ತಮತಮಗೆ । ಭ್ರಾಂತಿಯಿಂ ಬೆರಗಾಗುತಲಿ ದೇವದೇವೇಶ ದುರದುಂಡಿ ಶಿವಜಂಗಮಾ ॥೬॥

ಕೀರ್ತಿಸುಪಡರಿದೆಂದು ಕರಕಂಜಮಂ ಮುಗಿದು । ಮೂರ್ತಿಗೊಳಿಸುತ್ತಲ್ಲಿ ಘನನದಿಯ ದಾಂಟಿರ್ದ । ವಾರ್ತೆಯಂ ಕೇಳುತ್ತೆ ಗುಣದೊಳಭಿಮಾನಿ । ಶಿವಗಣದೊಳಭಿಮಾನಿ, ಶಿವನಂ ॥ ಸ್ಫೂರ್ತಿಯಿಂ ಪೂಜಿಸುವದಾಭಿಮಲಕಾಖ್ಯನುಂ । ಪ್ರೀತಿಯಿಂ ಗುರು-ಲಿಂಗ-ಜಂಗಮಕೆ ಬಳುವಳಿಯ । ಕೂರ್ತೀವ ಬಳ್ಳೊಳ್ಳಿ ಶಿವಶರಣ ಮುಖ್ಯ ವ್ಯಡಭಕ್ತಾಗ್ರರಾಕ್ಷಣದೊಳು ॥೭॥

ಪೆರ್ದೊರೆಯ ದಂಡೆಯಲಿ ನಾವೆಗಳು ಕಟ್ಟಾಗಿ । ಮೂರ್ದಿನ ಮುದಾಯ್ತೀಗ ತಡೆದಿಹುದು ಸರ್ವರ-। ನ್ನಾದಿನದ ಪರ್ಯಂತರಂ ಮಾರ್ಗವಿಲ್ಲೆನುತೆ ಮಾತಾಡುತಿರ್ಪರಾರ್ಯರ್ । ತೋರ್ದ್ದು ನಿಜರೂಪಮಂ ಗಂಗೆಯ ಕುಮಾರಕರ। ಮೀರ್ದು ಬಂದಿರ್ದುದೀಜಗದೊಳಗ-ಪೂರ್ವಮಿದು। ಸಾರ್ದಿಲ್ಲಿ ಶರಣಾಳಿ-ಸಂದೇಹಮಂ ಬಿಡಿಸಲೋಸುಗದೆ ನೀಂ ದಯದಲಿ ॥೮॥

ಬಂದಿರ್ದ ಕಜ್ಜಮಿದು ಗುಣಮಾಯ್ತು ಭಾವಿಪಡೆ । ಸಂದೇಹಮೇಂ ದೇವ ಜಗದೊಳಗೆ ಕೂರ್ತಿರ್ಪ । ಸುಂದರಿಯ ಮಂದಿರಕೆ ಮನದಾಣ್ಮನೇ ಬಂದರೇಂ ಕುಂದು ತಾನಪ್ಪುದೇ? । ಕುಂದುಗೊರಲನ ರೂಪಮೇಯಾದ ಜಂಗಮಕೆ । ಕುಂದದೇಂ? ಭಕ್ತಾಂಗ ಭೂಮಿಯೋಳ್ಮನ್ನಾಥ । ಮಂಚಮತಿಗಳು ನಾವು ಮರೆಯೆಮ್ಮ ಕರ್ಮಮಂ ಮೆರೆಸಿನ್ನ ಧರ್ಮಂಗಳಂ ॥೯॥

ಇನಿತೆಲ್ಲಮಂ ಕಂಡು ಪಾರಾಶರಂ ತನ್ನ । ವಿನುತ ಶಾರ್ದೂಲಾಜಿನ ಕರದಂಡಾದಿಗಳ-। ನನುಗೊಳಿಸುತಾ ನದಿಯ ಶೋಷದಿಂ ಜಗಮರಿಯೆ

ದಾಂಟುತ್ತೆ ಭರದಿಂದಲಾ॥ ಮುನಿಪತಿಯು ಶಿವಭಕ್ತಿಯಿಂ ಮೆರೆದನೆಂದೆನ್ನು । ವನು ಸಮುದ ಕಥನವನು ಕೇಳ್ದು ಬಲ್ಲಿವದೀಗ । ಘನದಯಾನಿಧಿ-ಪರಮ ಶಿವಲಿಂಗ ಜಂಗಮನೆ ಪ್ರತ್ಯಕ್ಷಮಂ ಕಂಡೆವು ॥೧೦॥

ಆದನೀಕ್ಷಿಸುತೆ ಭಯಗೊಂಡು ಮನದೊಳ್ನೊಂದು । ಮುದುವಳಿದು ಭಕ್ತಿ-ವರ್ಗವ ಬಟ್ಟು ಕೈಮುಗಿದು । ಮದನಾರಿ ಶಿವಲಿಂಗ ಜಂಗಮೋ ತ್ರಮ ನಿಮಗೆ ಮೃದುವತ್ತಿ ಕಾಯಾರ್ಪಣಂ ॥ ಒದಗಿರ್ದ ಮರವಿನಿಂ ಮಾಡಿರ್ದ ತಪ್ಪುಗಳ । ಹೃದಯಾಂತರಾಳದೊಳ್ತರದೀಗ ಪಾಲಿಪುದು । ಪದುಳದಿಂದೆನುತೆರಗಿ ಬಿನ್ನೈಸೆ ದುಱದುಂಡಿ ಜಂಗಮನು ನಗುತೆ ಮುತ್ತಂ ॥೧೧॥

ನೂನಂ ಹಸಿವು ನೀಗಿತೇನುಂಟು ಸಂದೇಹ-। ಮಾನಂದಮಾಯ್ತೆಂದು ನಲಿದನಾಯತಿವರನು । ಮಾನಂದನಾರಿ ದುಱದುಂಡಿ ಜಂಗಮನಿಂತುಘನ ಮಹಿಮೆಗಳ ತೋರುತೆ । ತಾನೊಂದು ದಿನದಲ್ಲಿ ಗೋಪಾಲ ಪಟ್ಟಣದ । ಶ್ರೀನಂದನಾಂತರದೆ ಶಿವಯೋಗದಿಂದಿರ್ದ-। ನೇನೆಂದು ವರ್ಣಿಪೆನು ಘಟ ಪಾನದೀ ತೀರ ತಳದೊಳಗೆ ಕಂಗೊಳಿಸುತೆ ॥೧೨॥

ಇಂದುಮುಖಿ ಕೇಳೆಂದು ಕೈಲಾಸ ಮಂದಿರದೆ ।
ನಂದಿ ಮುಖ್ಯ ಪ್ರಮಥರಾಲಿಸುತಿರಲ್ಕುದದೊ-।
ಳಿಂದುಶೇಖರನು ತತ್ಶಿವಲಿಂಗ ಮಹಿಮೆಯಂ
ಮನವೊಲ್ದು ತಿಳುಹುತಿರ್ದಂ ॥೧೩॥

ಇದು ಬಸವ ಸುಕುಮಾರನತಿ ಭಕ್ತಿಯಿಂ ಗೈದ ।
ಸದಮಲದ ಶಿವಲಿಂಗ ಜಂಗಮಂ ವಿಲಾಸವಿದು ॥೧೪॥

ಇತಿ ನಿರುಪಾದಿ ಜಂಗಮ ಮಹಿಮೆಯಂ ॥

# —ಃ ಸದ್ಭಕ್ತಿ :—

( ಲೇಖಕಃ— ಶ್ರೀ ಸಿ. ನಾ. ಮಹಾಂತಣ್ಣವರ ಹೊನೂರ )

—※○※—

ಪರಮ ಸುಜ್ಞಾನಿಗಳಾದ ವೀರಶೈವ ಸದ್ಭಕ್ತರು ಮಾರ್ಗಕ್ರಿಯೆ ಮೀರಿದ ಕ್ರಿಯೆಗಳಿಂದ ಅಂತರ್ಜ್ಞಾನದ ಬಹಿಃಕ್ರಿಯೆಗಳೊಂದಾಗಿ ಆಚರಿಸಿದ ಸದಾಚಾರ ಸದ್ಭಕ್ತಿಯಾಚರಣೆಯೆಂತೆಂದೊಡೆ, ಗುರುಲಿಂಗ ಜಂಗಮದಲ್ಲಿ ವಂಚನೆಯಿಲ್ಲದೆ, ಸಹಜ ಭಾವದಿಂದ ಒಳ ಹೊರಗೆ ಒಂದೇ ಆಗಿ, ತನಗೆ ಶಿವಾಗಮಂಗಳೇ ಧರ್ಮಶಾಸ್ತ್ರಂಗಳಾಗಿ, ಅಂತರಂಗ ಬಹಿರಂಗವ ಜ್ಞಾನ ಕ್ರಿಯೆಗಳಲ್ಲಿ ಗುರುಲಿಂಗ ಜಂಗಮವೇ ಪ್ರಾಣವಾಗಿ, ಗುರುಭಕ್ತಿ, ಲಿಂಗ ಭಕ್ತಿ, ಜಂಗಮಭಕ್ತಿಯಲ್ಲಿ ಅರ್ಥ ಪ್ರಾಣಾಭಿಮಾನವನೊಪ್ಪಿಸಿ, ತನುಮನ ಧನವನು ನಿರ್ವಂಚಕತ್ವದಿ ಕೊಟ್ಟು ಕೊಳ್ಳುವ ಸೂಕ್ಷ್ಮ ಸಕೀಲವನು ಗುರುಮುಖದಿಂದ ಅರಿದು ಆದ್ಯರ ಆಚರಣೆಯಂತೆ ನಡೆಗಲಿತು ಡಾಂಭಿಕತ್ವವಿಲ್ಲದೆ, ಸಹಜ ಭಕ್ತರಾಗಿ ಇದ್ದಕ್ಕಿದ್ದಹಾಗೆ ಆಚರಿಸುವದೇ ಸದ್ಭಕ್ತಿಯೆನಿಸುವದು.

“ ಕಿಂಕುರ್ವಾಣಮಂಬಲಿದು ಗುರುಲಿಂಗಮುಖಂ ಚರಲಿಂಗವೆಂದು ನಿಃ ।
ಶ್ಶಂಕತೆಯಿಂ ಸುವರ್ಣವಸನಾನ್ನ ಪುರಸ್ಸರ ವಸ್ತು ವಾಹನಾ ॥
ಲಂಕರಣಂಗಳಂ ಸಲೆ ಸಮರ್ಪಿಸಿ ವೀರಶಿವಾಗಮೋಕ್ತ ಚಿ
ಹ್ನಾಂಕಿತರ್ಗೆ ಮಣಿವಂತುಟೆ ಭಕ್ತಿಪದಂ ಶಿವಾಧವಾ ॥ ೧ ॥

ಪರಮ ಸುಜ್ಞಾನಿಯಾದ ಸದ್ಭಕ್ತನು ಇರುವಂಥ ಲೋಕವೇ ಶಿವಲೋಕವು. ಆ ಭಕ್ತನ ಹಿನ್ನೆರೆ ಮುನ್ನೆರೆಯಲ್ಲಿಪ್ಪವರೇ ಪ್ರಮಥಗಣಂಗಳು. ಆ ಸದ್ಭಕ್ತನ ಹಿತ್ತಿಲು ಅಂಗಳಗಳಲ್ಲಿಪ್ಪ ಜಾಲಿ ಬೊಬ್ಬುಲಿ ವೃಕ್ಷಗಳೇ ಕಲ್ಪ ವೃಕ್ಷಗಳು. ಆ ಭಕ್ತನಿರ್ದ ಕಲ್ಮರ·ಮಟ್ಟಿ ಬೆಟ್ಟ ಮೊರಡಿಗಳೇ ಅವಿಮುಕ್ತ ಕ್ಷೇತ್ರವು. ಆತನ ಅಂಪಣವೇ ವಾರಣಾಸಿ ಆತನ ಬಚ್ಚಲ ಹೊಂಡಗಳೇ ಪುಣ್ಯ ತೀರ್ಥಂಗಳು. ಆ ಭಕ್ತನ ಸತಿಯರೇ ಪಾರ್ವತಿ ದೇವಿಯರು. ಆತನ ಸುತರೇ ವೀರಭದ್ರಗಣನಾಯಕರು. ಆ ಭಕ್ತನೇ ಸಕಲ ಲೋಕದಲ್ಲಿ ಪೂಜ್ಯನಾಗಿಪ್ಪನು.

ಸದ್ಭಕ್ತಿಯ ಮಹಿಮಾತಿಶಯಕ್ಕೆ ಎಣೆಯಿಲ್ಲವಾಗಿ ಸಕಲ ಕ್ಷುದ್ರ ಪದಂಗಳೆಲ್ಲ ಭಕ್ತಿ ಸತ್ಪಥಕ್ಕೆ ಸಮಬಾರವು. ಅಣಿಮಾದ್ಯಷ್ಟ ಮಹಾ ಸಿದ್ಧಿಗಳೆಲ್ಲವು ಆ ಭಕ್ತನ ಮಹಾದ್ವಾರವನ್ನು ಕಾಯ್ದುಕೊಂಡಿರುವವು.

ಸದ್ಭಕ್ತನ ಸ್ಥಿತಿಯು ಲೋಕದ ಕರ್ಮಿಗಳಂತಲ್ಲ, ಹೇಗಂದರೆ ನಯೋಗೋ ನತಪೋ ನಾರ್ಚನೋ ಕ್ರಮಕೋಪಿ ನವಿದ್ಯತೇ । ಅಮಾಯ ಶಿವಮಾರ್ಗೇಸ್ಮಿನ್ ಭಕ್ತಿರೇಕಾ ಪ್ರದರ್ಶ್ಯತೇ" ಎಂಬ ಪ್ರಮಾಣದಂತೆ, ಆ ಭಕ್ತನು ಭಿನ್ನ ಕರ್ಮಿಗಳಂತೆ ಯೋಗ ತಪ ಅರ್ಚನೆ ಮೊದಲಾದ ಕರ್ಮಗಳನ್ನು ಭಿನ್ನವಿಟ್ಟಾಚರಿಸದೆ, ಶಿವಾದ್ವೈತ ಭಕ್ತಿಯುಕ್ತನಾಗಿ, ನಿತ್ಯ ನಿರ್ಮಲನಾಗಿ, ಸತ್ಯವಾಚಕನಾಗಿ ಪರಮಾರೂಢನಾಗಿ ತಾನೆಂಬುದಿಲ್ಲದೆ ಏನೆಂಬುದಿಲ್ಲದೆ, ಶಿವಾಜ್ಞೆಯೆಂದು ಸಕಲ ಕಾರ್ಯಗಳಲ್ಲಿ ಶಿವಜ್ಞಾನ ಮುಂದುಗೊಂಡು ಭೃತ್ಯತ್ವದಿಂದಿದ್ದರೂ ಕರ್ತನಾಗಿ ತೋರುವಂತೆ, ಸರ್ವವೂ ಶಿವಮಯವಾಗಿರ್ಪನು ಹೇಗೆಂದರೆ " ಶಿವನು ಶಿವಾರ್ಚನೈಕರತನಾಗಿರಲೋ ಸುಗಮಾತ್ಮಲೋಕದಿಂ । ದವತರಿಸಿ ಸ್ವಕೀಯ ಘನಲೀಲೆಯೊಳೊಯ್ಯನೆ ಮಾನುಷಮಪ್ಪ ವಿಮಳ ವೇಷಮಂ ಧರಿಸಿ ಸಕಲ ಜಗದ್ಧಿತ ದಿವ್ಯಚೇಷ್ಟೆಯಿಂದವೆ ಪರಿರಂಜಿಸಂ ಪರಮ ಭಕ್ತಿಮಯ ಸ್ಥಳದೊಳ್ ಶಿವಾಧವಂ" ॥ ಎಂದುಂಟಾಗಿ ಸದ್ಭಕ್ತನು ಶಿವರೂಪಿಯಾಗಿಪ್ಪನು.

ಸಂಕಲ್ಪಂಚ ವಿಕಲ್ಪಂಚ ವರ್ಜಯೇತ್ ಶಿವಭಕ್ತಿಮಾನ್ । ರಾಂಚನೇನ ಶರಣ್ಯಂಚ ಭಕ್ತಸ್ಥಲ ಸುಬುದ್ಧಿಮಾನ್ ॥ ಎಂಬ ಆಗಮ ಪ್ರಮಾಣವಿಹುದಾಗಿ, ಆ ಸದ್ಭಕ್ತಂಗೆ ಸಂಕಲ್ಪ ವಿಕಲ್ಪಂಗಳಿಲ್ಲ. ಹೇಗೆಂದರೆ—ನಾನು ಶಿವತತ್ವವಹುದೋ ಅಲ್ಲವೋ ಎಂಬ ಸಂಕಲ್ಪ ವಿಕಲ್ಪಗಳಿಲ್ಲವು. ಆತನು ಶಿವನನಿಜಸ್ವರೂಪವಾದ ಲಾಂಛನವ ಕಂಡಲ್ಲಿ ಭೃತ್ಯಭಾವದಿಂದ ಶರಣಾಗತನಾಗುತ್ತಿಹನು. ಆದಾಗ್ಯೂ ಭೃತ್ಯಾಚಾರಿಯಲ್ಲ. ಎಂತೆಂದೊಡೆ, ಸ್ವಸ್ವರೂಪಕ್ಕೆ ತಾನೇ ಅರ್ಚಿಸಿಕೊಂಬ ಹಾಗೆ, ತನ್ನ ಅಂತರಂಗದ ಚಿತ್ಕಲಾಮೂರ್ತಿಯೇ ಬಹಿರಂಗದಲ್ಲಿ ನಿಜವಾಗಿ ನಿಂದುದಲಾ ಎಂದು ಗುರುಲಿಂಗ ಜಂಗಮದಲ್ಲಿ ಪೂಜಾ ವಂದನಾದಿ ಅರ್ಚನಾರ್ಪಣ ಕ್ರಿಯೆಯೊಳು ಭೃತ್ಯಾಚಾರಿ ದಾಸಭಾವದ ಸೇವೆಯಂತೆ ಮಾಡದೆ ಮತ್ತು ಅಹಂ ಬ್ರಹ್ಮವೆಂಬ ಅಹಂ ಭಾವವಿಲ್ಲದೆ, ಸ್ವಯಮೇವ ನಮಸ್ಕಾರವೆಂಬಂತೆ ತನ್ನ ತಾ ಅರ್ಚಿಸಿಕೊಂಬುವಹಾಗೆ ಅಭೇದ ಭಾವನೆಯಿಂದ ಆಚರಿಸುವ ಶರಣಂಗೆ ಸಕಲ

ಕ್ರಿಯಾ ಕರ್ಮಂಗಳಲ್ಲಿ ತಾನೆದುರೆಂಬ ಸಂಕಲ್ಪವಿಲ್ಲವಾಗಿ ತಾನೇ ಬ್ರಹ್ಮ ವೆಂದು ಅಹಂ ಭಾವದ ಹುಚ್ಚು ತಲೆಗೇರಿದ ಶುಷ್ಕ ವೇದಾಂತಿಗಳಂತೆ ಭಾಗ್ಯಭ್ರಷ್ಟನಾಗಿ ನಿತ್ಯ ಕ್ರಿಯಾರ್ಚನೆಗಳಂ ಬಿಟ್ಟು ಭ್ರಷ್ಟನಾಗದೆ, ಸಕಲ ಕ್ರಿಯಾ ಅರ್ಚನಾದಿಗಳಲ್ಲಿ ಸ್ವಸ್ವರೂಪ ಸಾಕ್ಷಾತ್ಕಾರವನೀಕ್ಷಿಸುತ್ತ ಅಭೇದ ಭಾವನೆಯಿಂದ ಇರುವನು.

ಗುರುಲಿಂಗ ಜಂಗಮಕ್ಕೆ ಕೊಟ್ಟುಕೊಂಬಲ್ಲಿ ಪೂರ್ವ ಕ್ರಿಯೆ ಮೀರಿದ ಕ್ರಿಯೆಗಳೆಂಬ ಮೇಲು ವಿಚಾರದಲ್ಲಿ ಅಂತರ್ಜ್ಞಾನ, ಬಹಿಃಕ್ರಿಯೆಗಳಿಂದ ಸ್ವಲ್ಪಾದರೂ ಭೇದವಿಲ್ಲ. ಸಕಲ ಪದಾರ್ಥಗಳನ್ನು ಶಿವಾರ್ಪಿತಕ್ಕೆ ಸಲ್ಲಿಸು ವಲ್ಲಿ, ತನ್ನ ಪ್ರಸಾದವನ್ನು ಶಿವನಿಗೆ ಕೊಡುವಲ್ಲಿ ಶಿವಪ್ರಸಾದವ ತಾನು ಕೊಂಬಲ್ಲಿ, ತಾ ಬೇರೆ, ಶಿವಬೇರೆನ್ನದೆ ತಾನೆಂಬ ಇದಿರೆಂಬ ಸಂಕಲ್ಪವಿಲ್ಲದೆ ಪ್ರಸಾದ ಕಾಯಸ್ವರೂಪನಾಗಿ ವರ್ತಿಸುವನು.

ಇಂತಪ್ಪ ಜ್ಞಾನಮಯನಾದ ಪರಮ ಸದ್ಭಕ್ತನ ಮಹತ್ವಾತಿಶಯ ವನ್ನು ಎಷ್ಟು ವರ್ಣಿಸಬಹುದು ? "ಪರಮಾದ್ವೈತ ವಿಜ್ಞಾನ ನಿಷ್ಠಸ್ಯಾಸ್ಯ ಮಹಾತ್ಮನಃ | ಶುಶ್ರೂಷಾ ಕ್ರಿಯತೇ ಏನ ತತ್ಪಾದೌ ಮಮ ಮಸ್ತಕೇ" ಎಂದು ಪರಮ ರಹಸ್ಯದಲ್ಲಿ ಹೇಳುತ್ತಿಹುದಾಗಿ ಮತ್ತು "ಕರ್ಮಾವಲಂಬನಂ || ವಯಂತು ಶಿವಭಕ್ತಾನಾಂ ಪಾದುಕಸ್ಯಾವಲಂಬನಂ" ಎಂಬೀ ಈಶ್ವರ ವಾಕ್ಯ ವುಂಟಾಗಿ, ಇಂತಪ್ಪ ಸದ್ಭಕ್ತನ ಚಾರಿತ್ರ್ಯಕ್ಕೆ ಮೂರು ಲೋಕದಲ್ಲಿಯೂ ಸಮಾನವಿಲ್ಲ

"ಪೂಜಕೋಃ ಬಹವಃಸಂತಿ, ಭಕ್ತಿ ಶತ ಸಹಸ್ರಶಃ || ಪ್ರಸಾದೇನ್ಯೈವ ಪಾತ್ರಂತು ದ್ವಿತ್ರೀಣ್ಯೈವ ಪಂಚಷಟ್ || ಎಂಬ ಗ್ರಂಥಾರ್ಥಾನುಸಾರವಾಗಿ ಲೋಕದಲ್ಲಿ ಪರಮೇಶ್ವರನ ಪೂಜೆ ಮಾಡತಕ್ಕಂಥವರು ಬಹುಜನರುಂಟು, ಮತ್ತು ಭಕ್ತರೆನಿಸಿಕೊಂಬವರೂ ಕೋಟ್ಯವಧಿ ಇದ್ದವರುಂಟು. ಆದಾಗ್ಯೂ ಇವರೆಲ್ಲರು ಶಿವಪ್ರಸಾದಕ್ಕೆ ಯೋಗ್ಯರಲ್ಲ. ಇವರಲ್ಲಿ ಭೇದಭಾವನೆಯಾದ ಭಿನ್ನತ್ವವಿರುವದರಿಂದ ಶಿವಪ್ರಸನ್ನತ್ವವನ್ನು ಅವರು ಪಡೆಯಲರಿಯರು.

ಒಬ್ಬಾನೊಬ್ಬ ರಾಜಭೋಗವುಳ್ಳ ಸ್ತ್ರೀಯಳು ಸಕಲಾಭರಣಗಳಿಂದ ಅಲಂಕರಿಸಿಕೊಂಡು ನಿರ್ಮಲ ದರ್ಪಣವನ್ನು ಕೈಯಲ್ಲಿ ಹಿಡಿದುಕೊಂಡು ಆ ದರ್ಪಣವನ್ನು ನಿರೀಕ್ಷಿಸುತ್ತಿರಲು, ಆ ಸಮಯದಲ್ಲಿ ಆ ಸ್ತ್ರೀಯಳ ಬಳಿಯಲ್ಲಿದ್ದವರೆಲ್ಲರಿಗೂ ತಿಳಿಯಬರುವದೇನಂದರೆ ಈ ಸ್ತ್ರೀಯಳು ದರ್ಪಣ ವನ್ನು ನೋಡುತ್ತಿಹಳೆಂದು ಕಾಣುವರಲ್ಲದೆ, ತನ್ನ ನೋಡುವಳೆಂದು ತಿಳಿ

ಯರು. ಆದರೆ ಆ ಸ್ತ್ರೀಯಳು ತನ್ನನ್ನೇ ನೋಡುವಳಲ್ಲದೆ, ಕನ್ನಡಿಯನ್ನು ನೋಡಳು. ಕನ್ನಡಿಯು ಕೈಗೆ ಬರುವವರೆಗೂ ಕನ್ನಡಿಯನ್ನು ನೋಡಬೇಕೆಂಬ ಭಾವವಿರುವದು. ಆ ದರ್ಪಣವು ಕೈಗೆ ಬಂದಾಕ್ಷಣವೇ ದರ್ಪಣದ ಭಾವ ಜಾರಿ ಸ್ವಸ್ವರೂಪದೊಳು ದೃಷ್ಟಿ ನಟ್ಟು, ತನ್ನ ಮುಖ, ಲಾವಣ್ಯ, ಹಾವಭಾವ, ವಿಲಾಸ ವಿಭ್ರಮಂಗಳನೆ ನೋಡುತ್ತ ಪರಿಣಾಮಿಸುತ್ತಿಹಳೆಂಬಹಾಗೆ, ಸದ್ಭಕ್ತರಾದ ಶಿವಶರಣರು ನಿಜವನರಿಯದ ಮುನ್ನ ಕ್ರಿಯೆಯೆಂಬ ಮಾಯಾಜಾಡ್ಯದಲ್ಲಿರ್ಪರಲ್ಲದೆ, ನಿಜವನರಿತಬಳಿಕ, ಮಾಯಾರಹಿತರಾಗಿ, ಆನೆಯು ರಾಜ್ಯವೈಭವವಲ್ಲಿದ್ದರೂ ಕಾನನವನ್ನು ಲಕ್ಷಿಸಿಟ್ಟಂತೆ ಶರಣರು ಸದ್ಭಕ್ತಿ ಪ್ರಯೋಜನವನ್ನು ಮುಂದುಗೊಂಡು ಸಂಸಾರದೊಳಗಿದ್ದು ಷಟ್ ಕೃಷಿ ಲೋಕ ವ್ಯವಹಾರದೊಳಗಿದ್ದರೂ ಮಾಯಾರಹಿತರಾಗಿರ್ಪರು.

ಸದ್ಭಕ್ತಿ ಚಾರಿತ್ರ್ಯಕ್ಕೆ ಭಿನ್ನ ಭಕ್ತಿಯೇ ಕೇಡು. ಹೇಗೆಂದರೆ— ಲೌಕಿಕರು ಕೃಷಿಯ ಮಾಡುವಲ್ಲಿ ಮೈಗಳ್ಳತನವು ಹೇಗೆ ದರಿದ್ರತ್ವಕ್ಕೆ ಮುಖ್ಯ ಕಾರಣವೋ ಹಾಗೆ ಈ ಪಾರಮಾರ್ಥ ಕೃಷಿಯಾದ ಸದ್ಭಕ್ತಿ ಚರಿತ್ರಕ್ಕೆ ಭಿನ್ನ ಭಕ್ತಿಯು ಸಲ್ಲದು. ಈ ಭಿನ್ನ ಭಕ್ತಿಯು ಭವಾಂತರಕ್ಕೆ ಕಾರಣವು. ಅದು ಕಾರಣ ಸದ್ಭಕ್ತರು ಭಿನ್ನತ್ವವನ್ನು ಬಿಟ್ಟು ಅಭಿನ್ನ ಕ್ರಿಯಾಚಾರದಿಂದಿದ್ದರೂ ಸತ್ಕ್ರಿಯೆಗಳಾದ ನಿತ್ಯ ಕ್ರಿಯೆಗಳನು ಬಿಡದೆ ಮಾಡುತ್ತಿರುವರು. "ದಿನದಿನದುಚಿತವೇಳೆಯೊಳುಪಚರಿಸುದು ನಿನಗೆ ಕಾಳವೆಲೆ ಯೋಗಿ ನೀನೆ ಬಿಡದಿರು." ಎಂದು ನಿಜಗುಣ ಶಿವಯೋಗಿಗಳ ವಾಕ್ಯವಿಹುದು. ಇದರಂತೆ ಅಭಿನ್ನ ಭಾವನೆಯಿಂದ ಸ್ವಯಮೇವ ಬ್ರಹ್ಮವಾಗಿ ಶಿವಲಿಂಗಾರ್ಚನಾಪೂರ್ಣ ಕ್ರಿಯೆಗಳಂ ಮಾಡುತ್ತಿದ್ದಾಗ್ಯಾದರೂ ಆತನ ಅಂತರಂಗವನರಿಯದ ಲೌಕಿಕರ ಕಣ್ಣಿಗೆ ಕರ್ಮಿಯಂತೆ ಕಾಣುತ್ತಿಹನು. ಆದಾಗ್ಯೂ ಆತನು ಕರ್ಮಿಯಲ್ಲವು, "ಆವ ಬಾಧೆಯನುಂಟುಮಾಡಬಹುದಖಿಳ ಭೋಗಾವಲಂಬನದೊಳಿರೆ ಶಿವಯೋಗಿಗೆ" ಎಂದು ನಿಜಗುಣರ ವಾಕ್ಯವಿಹುದು.

ಪಾರಮಾರ್ಥ ಕೃಷಿಕರಾದ ಸಹಜ ಸದ್ಭಕ್ತರಾಚರಣೆಯಾದ ಷಟ್‌ಸ್ಥಲದ ವರ್ತನೆಯು ಎಂತೆಂದೊಡೆ— ಗುರುಲಿಂಗ ಜಂಗಮದಲ್ಲಿ ಭೇದವಿಲ್ಲದೆ, ತ್ರಿವಿಧ ಮೂರ್ತಿಗಳು ಒಂದೇ ಎಂದು ಗುರುಲಿಂಗದ ಮುಖವೇ ಜಂಗಮವೆಂದು ನಿಃಸಂಶಯದಿಂದ ಸುವರ್ಣವಸನಾನ್ನ ಮೊದಲಾದ ಸಮಸ್ತ

ಭೋಗ ಪದಾರ್ಥಗಳನ್ನೆಲ್ಲ ಸದ್ಭಕ್ತಿಪೂರ್ವಕದಿಂದ ಚನ್ನಾಗಿ ಸಮರ್ಪಿಸಿ ವೀರಶೈವಾಗಮಂಗಳಲ್ಲಿ ಹೇಳಿದ ಸದ್ವೀರ ಮಾಹೇಶ್ವರ ಗುರುಹಂ ಕಂಡು ಶರಣಾಗತನಾಗುವದೇ ಭಕ್ತಿಲಕ್ಷಣವು. ಆ ಆಚರಣೆಯಲ್ಲಿ ಆಚರಿಸುತಿಪ್ಪ ಸಹಜ ಸದ್ಭಕ್ತನಾಚರಣೆಯೇ ಭಕ್ತಸ್ಥಲವೆನಿಸುವದು.

ಈ ಭಕ್ತಸ್ಥಲವು ನಿಜವಾದಲ್ಲಿ ಆ ಸದ್ಭಕ್ತಗೆ ಮುಂದಿನ ಐದು ಸ್ಥಲಗಳು ತನ್ನಿಂದ ತಾನೇ ಸಾಧ್ಯವಾಗುವವು. "ಪರವಧುವಂ ಪರದ್ರವಿಣಮುಂ ಪರಹಿಂಸೆಯುನ್ಯದೆ ದೂರದಿಂ। ಪರಿಹರಿಸಿ ಸ್ವದೇಶಿಕ ನಿರೂಪಿತಮಪ್ಪ ಷಡರ್ಥ ಸಂಗ್ರಹಾ। ಚರಣೆಯೊಳೇಕ ಲಿಂಗ ನಿಜನಿಷ್ಠೆ ಸಮಾಹಿತವಾದಡಂತದೇ। ಪರಮ ಮಹೇಶ್ವರ ಸ್ಥಲದ ಲಕ್ಷಣವೃತ್ತಿ ಪದಂ ಶಿವಾಧವಾ॥" ಎಂಬ ಪದ್ಯದ ಅನುಸಾರವಾಗಿ, ಸಹಜ ಸದ್ಭಕ್ತರ ವರ್ತನೆಯಲ್ಲಿ ಪರಸತಿ, ಪರಾರ್ಥ ಪರಹಿಂಸೆಗಳಂ ಬಿಟ್ಟು, ಸದ್ಗುರುನಾಥನ ಉಪದೇಶ ಕ್ರಮದಂತೆ ಷಡರ್ಥ ಸಂಗ್ರಹಾಚರಣೆಯಲ್ಲಿ ಏಕಮೂರ್ತಿ ಸ್ತ್ರಯೋಭಾಗಂ ಗುರು ಲಿಂಗಂತು ಜಂಗಮಂ । ಜಂಗಮಂ ಗುರುಲಿಂಗಂಚ ತ್ರಿವಿಧಂ ಲಿಂಗ ಮುಚ್ಯತೇ ॥" ಎಂಬಾಗಮ ಪ್ರಮಾಣದಂತೆ ಏಕಲಿಂಗ ನಿಜನೈಷ್ಠೆಯಿಂದ ಕೂಡಿದ ಭಕ್ತಸ್ಥಲಾಚರಣೆಯಲ್ಲಿ ಮಹೇಶ್ವರ ಸ್ಥಲವಡಗಿಪ್ಪುದು. ಸದ್ಭಕ್ತರಲ್ಲಿ ಅನ್ಯಸ್ತ್ರೀಯರ ವ್ಯಸನ, ಅನ್ಯ ದ್ರವ್ಯದ ಕಾಂಕ್ಷೆ ಅನ್ಯ ಪ್ರಾಣ ಹಿಂಸೆ, ಅನ್ಯದೈವದ ಭಜನೆಗಳಂ ತಿರಸ್ಕರಿಸುತ್ತ, ಸದ್ಗುಣಗಳಿಂದ ಲೋಕೋಪಕಾರಿಯಾಗಿ ವರ್ತಿಸಬೇಕೆಂಬಾಶೆಯುಂಟಾಗಿ, ಜಗದೋಪಕಾರಿಗಳಾಗುತ್ತ ದುಷ್ಟರಾದ ದುರ್ಜನರಂ ತಿರಸ್ಕರಿಸಿ, ಹಿಡಿದಾಚಾರವಂ ಬಿಡದೆ ನಡೆಯಿಸಬೇಕೆಂಬ ಛಲದ ನೈಷ್ಠೆಯಲ್ಲಿ ಪಂಚಾಚಾರವೇ ಪ್ರಾಣವಾಗಿ ವರ್ತಿಸುವ ವೀರಮಾಹೇಶ್ವರಾಚರ್ಯ ಸ್ಥಿತಿಯೇ ಮಹೇಶ್ವರ ಸ್ಥಲವೆನಿಸುವದು.

ಆ ಮಾಹೇಶ್ವರ ಸ್ಥಲದಲ್ಲಿ ಪ್ರಸಾದಿಸ್ಥಲವಡಗಿಪ್ಪುದು. ಹೇಗೆಂದರೆ— ಮಹೇಶ್ವರ ಸ್ಥಲದಾಚರಣೆಯು ನಿಜವಾಗಿ ಸಕಲ ಪದಾರ್ಥಗಳನ್ನು ಅಂತರಂಗ ಬಹಿರಂಗದಲ್ಲಿ ಜ್ಞಾನಕ್ರಿಯಾರೂಪ ಸಕಲ ಭೋಗೋಪಭೋಗಗಳನ್ನೆಲ್ಲ ಲಿಂಗವಿರಹಿತವಾಗಿ ಅಣುಮಾತ್ರವಾವರೂ ಕೊಳ್ಳದೆ, ಸಕಲವೆಲ್ಲವನು ಲಿಂಗಕ್ಕರ್ಪಿಸಿ, ಲಿಂಗ ಭೋಗೋಪಭೋಗಿಯಾಗಿರ್ದಲ್ಲಿ ಆ ಭಕ್ತನೇ ಅನಾದಿ ಪ್ರಸಾದಿಯೆನಿಸಿಕೊಂಬುವನು.

ಆ ಪ್ರಸಾದಿಯ ಸ್ಥಲದಲ್ಲಿ ಪ್ರಾಣಲಿಂಗಿಸ್ಥಲವಡಗಿಪ್ಪುದು. ಹೇಗೆಂದರೆ, "ಪರಿಪೂರ್ಣ ಪ್ರಸನ್ನೇತಿ" ಎಂದುಂಟಾಗಿ, ತಾನು ಪೂರ್ಣ ಪ್ರಸಾದ

ಕಾಯನಾದಲ್ಲಿ, ಲಿಂಗ ಬೇರೆ ತಾ ಬೇರೆಂಬ ಭಿನ್ನತ್ವವಿಲ್ಲ. ಸರ್ವಾಂಗ ಲಿಂಗಮಯವಾಗಿ, ವಾಯು ಪ್ರಾಣವಳಿದು, ಲಿಂಗಪ್ರಾಣವಾಗಿಪ್ಪಲ್ಲಿ ಆ ಭಕ್ತನೇ ಪ್ರಾಣಲಿಂಗಿಯೆನಿಸಿರ್ಪನು.

ಪ್ರಾಣಲಿಂಗಿ ಸ್ಥಲದಲ್ಲಿ ಶರಣಸ್ಥಲವಡಗಿಪ್ಪುದು. ಹೇಗೆಂದರೆ— ಪಂಚೇಂದ್ರಿಯ ಸುಖಭೋಗಗಳನ್ನೆಲ್ಲ ಲಿಂಗಕ್ಕೆ ಕೊಟ್ಟು ಭೋಗಿಸುವಲ್ಲಿ ಶರಣ ಸತಿ ಲಿಂಗ ಪತಿ ಭಾವದಿಂದ ನಿರವಂಚಕ ನಿಃಭಿಮಾನದಿಂದ ಲಿಂಗ ಸಹ ಭೋಗದಲ್ಲಿ ತೆರೆಮರೆಯುಳ್ಳದೆ ಪರಮ ಪತಿವ್ರತಾಂಗನೆಯು ತನ್ನಂಗ ಸುಖವನ್ನು ಪುರುಷಂಗಿತ್ತು, ಮಮಕಾರದಿಂದಪ್ಪಿದಲ್ಲಿ ನಿಜವಲ್ಲಭನು ಅಂಗ ಭೋಗದ ಸರ್ವ ಸುಖವು ತನಗುಪಭೋಗದಾನಂದವಾಗುವಂತೆ ಶರಣನ ಲಿಂಗಭೋಗೋಪಭೋಗದ ಪರಿ ಇಪ್ಪುದಾಗಿ, ಈ ರೀತಿಯಿಂದ ಸಕಲ ಸುಖ ಭೋಗಗಳನ್ನೆಲ್ಲ ಸರ್ವೇಂದ್ರಿಯ ಮುಖಗಳಿಂದ ವೀರಶೈವಾಗಮೋಚಿತ ಕ್ರಮದಿಂದ ಅರ್ಪಿಸುತ್ತ ಲಿಂಗದ ಸರ್ವಾನಂದವೇ ತನಗೆ ಪ್ರಸಾದ ಭೋಗವಾಗಿ ಸರ್ವಾಂಗ ಲಿಂಗಮಯನಾಗಿ ವರ್ತಿಸುವ ಭಕ್ತನೇ ಶರಣನೆನಿಸುವನು.

ಶರಣ ಸ್ಥಲದಲ್ಲಿ ಐಕ್ಯಸ್ಥಲವಡಗಿಪ್ಪುದು. ಹೇಗೆಂದರೆ, ತನಗವಸಾನ ಭೂಮಿಯೇ ಶಿವಲಿಂಗ. ಆ ಶಿವಲಿಂಗಕ್ಕವಸಾನ ಭೂಮಿಯೇ ತಾನಾಗಿ, ಸಕಲ ಪ್ರಪಂಚ ರಚನಾಕ್ರಿಯೆಯುಂ ನೆರೆಬಿಟ್ಟು ಅಷ್ಟವಿಧಾರ್ಚನ ಷೋಡಶೋಪಚಾರ ಕ್ರಿಯೆಗಳನೆಲ್ಲವ ಸ್ವಪ್ನವ ಮಾಡಿ, ನಿರ್ಭಾವ ಸ್ವರೂಪನಾಗಿ ಶಿಖಿ ಕರ್ಪೂರ ಸಂಯೋಗದಂತೆ, ಸ್ವಯಂಜ್ಯೋತಿ ಸ್ವರೂಪನಾಗಿ, ಲಿಂಗದೊಳ್ ಬೆರೆದು ಲಿಂಗಾಂಗ ಸಾಮರಸ್ಯನಾಗಿರ್ಪಲ್ಲಿ ಆ ಭಕ್ತನೇ ಐಕ್ಯನಾಗಿರ್ಪನು.

ಈ ಷಟ್‌ಸ್ಥಲ ಜ್ಞಾನಪೂರ್ಣನಾದ ಸದ್ಭಕ್ತನ ಸಹಜ ಭಕ್ತಿಯ ನಿಲವ ತಿಳಿಯಬೇಕಾದರೆ, ಬಹು ಜ್ಞಾನಾರ್ಜಿತ ಪುಣ್ಯದಿಂದಲ್ಲದೆ ತಿಳಿಯದು. "ಏಕೇನ ಜನ್ಮ ಸಂಪ್ರಾಪ್ಯ ಕರ್ಮಜ್ಞಾನ ಸಮಾಧಿಭಿಃ | ನರಾಣಾಂ ಕ್ಷೀಣ ಪಾಪಾನಾಂ ಶಿವಭಕ್ತಿಃ ಪ್ರಜಾಯತೇ ||" ಎಂಬದಾಗಿ ಮತ್ತು "ದುರ್ಲಭಂ ನರಜನ್ಮಾನಿ ವಿವೇಕ ಮತಿ ದುರ್ಲಭಂ | ಶಿವಭಕ್ತಾನಾಂ ಜ್ಞಾನೀತ್ರೈಲೋಕ್ಯದುರ್ಲಭಂ ||" ಎಂದುಂಟಾಗಿ, ಈ ಶಿವ ಸದ್ಭಕ್ತಿಯು ಪ್ರಾಪ್ತಿಸಬೇಕಾದರೆ ಬಹುಜನ್ಮದ ಸುಕೃತದಿಂದಲ್ಲದೆ ಪ್ರಾಪ್ತಿಸದು.

ಸದ್ಭಕ್ತರಾದವರು ಸತ್ಯಶುದ್ಧ ಕಾಯಕದಿಂದ ಮಾಡಿ ನೀಡಿ ಮುಕ್ತರಾಗಬೇಕು. ಈ ಸತ್ಯಶುದ್ಧ ಕಾಯಕವೇ ಕೈಲಾಸವೆಂದರಿಯದೆ, ಕೆಲವು ಕೆಲವು ಭಿನ್ನವ್ರತನೇಮಾಚಾರದಿಂದಾಚರಿಸಿ ಪೂರ್ಣ ಭಕ್ತಿಗೆ ವಿಲಕ್ಷಣರಾಗಿ, ಕೈಲಾಸಾದಿ ಚತುರ್ವಿಧ ಫಲಗಳ ಧರ್ಮಾಚಾರ ಪದಗಳಾದ ಧರ್ಮಾದಿ ಮೋಕ್ಷಾಂತಮಾದ ಚತುರ್ವಿಧ ಫಲಂಗಳ ಪಡೆವ ಭಿನ್ನ ಭ್ರಾಂತರಾಗಿದ್ದವರು ಕೈಲಾಸದಲ್ಲಿರ್ದರೂ ಭಿನ್ನ ಭವಿತ್ವವೇ ಮುಂದುಗೊಂಡ ಕಾರಣ ಆ ಕೈಲಾಸದಲ್ಲಿರ್ದರೂ ಶಿವನ ಸಾನ್ನಿಧ್ಯವಿಲ್ಲದ ಕಾರಣ ಭವಹಿಂಗದು. ಅದು ಹೇಗೆಂದರೆ, ಒಬ್ಬಾನೊಬ್ಬ ರಾಜನ ಪಟ್ಟಣದಲ್ಲಿ ಒಬ್ಬ ದರಿದ್ರನು ನೆಲೆಗೊಂಡಿದ್ದರೂ ರಾಜಬಹುಮಾನವಿಲ್ಲದೆ, ರಾಜಸಂಗಸಮರಸವಿಲ್ಲದೆ ದಾರಿದ್ರ್ಯವನ್ನನುಭವಿಸುತಲಿರ್ಪಂತೆ, ಆ ಷಟ್‌ಸ್ಥಲಜ್ಞಾನಹೀನರಾಗಿದ್ದವರು ಕೈಲಾಸದಲ್ಲಿರ್ದರೂ ನಿಜಸುಖಸಾಧ್ಯವಾಗದೆ ಭವದುಃಖಿಗಳಾಗಿಯೇ ಇರ್ಪರು.

ಷಟ್‌ಸ್ಥಲ ಜ್ಞಾನಸಂಬಂಧಮಾದ ಸದ್ಭಕ್ತಗಣಂಗಳು ಈ ಲೋಕದಲ್ಲಿರ್ದರೂ ಪರಶಿವನ ಸ್ವಯಾನಂದ ಮೂರ್ತಿಗಳು "ಭಾಸಿತೇ ರಾಜಪುತ್ರವತ್" ಎಂಬಂತೆ ರಾಜನಿಗೆ ಮಗನಾಗಿ ಪುಟ್ಟಿದಲ್ಲಿ ಲೋಕದ ಭಿನ್ನಾತ್ಮರಿಗೆ ರಾಜಭಯ ರಾಜಮಾನ್ಯಗಳುಂಟಲ್ಲದೆ, ರಾಜಕುಮಾರನಿಗೆ ರಾಜಭಯಾದಿಗಳುಂಟೇ ? ಹಾಗೆ ಸದ್ಭಕ್ತರು ಶಿವನಿಗೆ ಸಲುಗೆಗರಾಗಿರುವದರಿಂದ ಮತ್ತು ಶಿವನಿಂ ಪುಟ್ಟಿ, ಮತ್ತು ಶಿವನಂ ಮುಟ್ಟಿದ ಕಾರಣದಾಸಿಯಂತೆ ಭಿನ್ನಕ್ರಿಯಾದಿಗಳ ಭಯವಿಲ್ಲದೆ ಸ್ವತಂತ್ರರಾಗಿ ಸ್ವಲೀಲಾನಂದ ಭಕ್ತಿಯನಾಚರಿಸುತ್ತಿಪ್ಪರು.

ಆ ಸದ್ಭಕ್ತನಿಪ್ಪ ಲೋಕವೇ ಕೈಲಾಸ. ಆತನಿರ್ದಲ್ಲಿರುವುದೇ ಸಾಲೋಕ್ಯ ಆತನ ಸಮೀಪದಲ್ಲಿರ್ದ ಸೇವಕರಾದವರೇ ಸಾಮೀಪ್ಯಪದಸ್ಥರು. ಆ ಭಕ್ತನ ಆಚರಣೆಯಂತೆ ಆಚರಣೆಯುಳ್ಳವರೇ ಸಾರೂಪ್ಯಪದಸ್ಥರು. ಆ ಸದ್ಭಕ್ತನ ಸಾಮರಸ್ಯಾನಂದ ಗೋಷ್ಠಿಯಲ್ಲಿಪ್ಪವರೇ ಸಾಯುಜ್ಯಪದಸ್ಥರು. ಇದನರಿಯದೆ ಧರ್ಮಾರ್ಥಕಾಮಾದಿಗಳಂ ಬಯಸಿ ಕರ್ಮನಿಷ್ಠರಾದವರು ಭವಿಗಳೆನಿಸುವರು. "ಕೈಲಾಸಾದಿ ಪದೇಷ್ವಾಶಾ ಯಸ್ತಸ್ಯ ಭವಿನೋ ಭವೇತ್ । ಭವಿಶ್ಚೈವ ಪದಂ ಸರ್ವಂ ತದ್ಗಣೋ ಭವಿನೋಗಣಾಃ" ॥ ಎಂದುಂಟಾಗಿ, ಧರ್ಮದಿಂದ ಅರ್ಥ, ಅರ್ಥ ಪ್ರಯೋಜನವಾದುದೇ ಕಾಮ, ಕಾಮದಲ್ಲಿ

ಜ್ಞಾನೋದಯದಿಂದ ಮೋಕ್ಷಾಪೇಕ್ಷೆ ಅದು ಈ ಚತುರ್ವಿಧ ಫಲಪದತ್ವಂಗಳ ನಿಚ್ಛೈಸದೆ ಶಿವಧರ್ಮದಿಂದಿರ್ಪುದೇ ಧರ್ಮ. ಆ ಶಿವಧರ್ಮಭಕ್ತಿಯಿಂದ ಪಾರಮಾರ್ಥ ಜ್ಞಾನಿಯಾಗಿಪ್ಪುದೇ ಅರ್ಥ ಮತ್ತು ಕಾಮಾದಿ ಅರಿಷಡ್ವರ್ಗಂಗಳಿಗೆ ವಿಲಕ್ಷಣ ಬ್ರಹ್ಮನಪ್ಪ ನಿಷ್ಕಾಮಿಯಾಗಿಪ್ಪೆನೆಂಬ ಅಪೇಕ್ಷೆಯೇ ಕಾಮ. ಸ್ವಸ್ವರೂಪ ಸಾಕ್ಷಾತ್ಕಾರದಿಂದ ಭಕ್ತನ ಸಾಮರಸ್ಯವೇ ಮೋಕ್ಷ. ಈ ಪ್ರಕಾರವಾದ ಆಚರಣೆಯಿಂದಿರ್ಪುದೇ ಸದ್ಭಕ್ತಿಯೆನಿಸುವದು.

ವ್ಯಷ್ಟಿ ಸಮಷ್ಟಿಗಳ ಭೇದಾಭೇದಗಳ ಮೀರಿದ, ಮಾರ್ಗಕ್ರಿಯೆ ಮೀರಿದ ಕ್ರಿಯೆಗಳನುಭವಿಸಿ, ಲಿಂಗಾಂಗಸಾಮರಸ್ಯದೊಳಗಿದ್ದ ಶ್ರೀ ಘನಮಹೇಶರು ಪರಮವಿರಕ್ತರಾಗಿ ಲೋಕೋಪಕಾರಿಗಳಾಗಿ "ಕೃಷಿದೀಪಿಕೆ" ಎಂಬ ಗ್ರಂಥವನು ರಚಿಸಿ, ಶರಣಗಣಂಗಳ ಹಾಗು ಭಕ್ತಗಣಂಗಳ ಹಿತಕ್ಕಾಗಿ ಆ ಕೃಷಿದೀಪಿಕೆಯಲ್ಲಿಯೇ ವೀರಶೈವ ಮಹಾಜ್ಞಾನದೀಪಿಕೆಯನ್ನು ರಚಿಸಿದ್ದೂ ಕೆಲಮಹನೀಯರಿಗೆ ಗೊತ್ತಿರಬಹುದು. ಅವರು ವೀರಶೈವ ಷಟ್‌ಸ್ಥಲಾನುವರ್ತಿಗಳಾಗಿ ತಮಗಿದ್ದ ಪಾರಮಾರ್ಥ ಪ್ರಕಾಶಾನುಭಾವದ ಪ್ರಸಾದ ವಾಣಿಯ ಭಕ್ತಿರಸದ ಆಚರಣೆಯು ಶಿವಾನುಭಾವಿಗಳಿಗೆ ಅಂತಬರ್ಹ್ಯಗಳಲ್ಲಿ ಅಳವಡಲೆಂದು ಶಿವಾನುಭವ ಪತ್ರಿಕೆಯಲ್ಲಿ ಪ್ರಕಾಶಗೊಳಿಸಿದ್ದಾಗಿದೆ. ಅಂತಹ ಮಹಾತ್ಮರ ಮಹಾಪಾದವನ್ನು ಸ್ಮರಿಸಿ ಸದ್ಯದ ವಿಷಯ ಸಂಪೂರ್ತಿಗೊಳಿಸುವೆ.

ಊರ್ಧ್ವಾಮ್ನಾಯ ಗುರೂಪದೇಶ ಭವನಂ ಓಂಕಾರ ಸಿಂಹಾಸನಂ। ಶುದ್ಧಾಚಾರ ಸಮಸ್ತವೇದ ಮಥನಂ ಷಟ್‌ಚಕ್ರ ಸಂಚಾರಿಣಂ ॥ ಪಶ್ಚಾದ್ವೈತಸ್ಫುಲಿಂಗ ಜ್ಯೋತಿರಮಲಂ ಪೂರ್ಣ ಪ್ರಭಾಶೋಭಿತಂ। ಶಾಂತಂ ಸದ್ಗುರುಪಾದುಕಾಂ ಭಜ ಮನಶ್ಚೈತನ್ಯ ಚಂದ್ರೋದಯೆ ॥೧॥

ಕಂದ॥ ಕಡು ಬೆಡಗಿನ ಕಾಯಕದಿಂ।
ಪಡೆದಿಹ ಸದಮಲ ಷಡರ್ಥಸಾಹಿತದಿಂದಂ ॥
ತಡೆಯುತೆ ಮಾಡಿದ ಪಾಕವ।
ಮೃಡಶರಣಂಗಿತ್ತು ಕೊಳ್ಳುವವನೇ ಭಕ್ತಂ ॥೧॥

ಭವದುಃಖಂಗಳ ಬಿಡಿಸುವ।
ಶಿವಸನ್ನಿಧಿಯಂ ಪಡೆಯುವ ಸನ್ಮಾರ್ಗಗಳಂ ॥

ಶಿವನವತಾರದ ಗುರುವಿಗೆ ।
ತವೆ ತನುಮನಧನ ಸವೆಸುದೆ ಭಕ್ತ್ಯಾಚಾರಂ ॥೨॥

ಭಕ್ತಿಯೆ ಮುಕ್ತಿಯ ಮೂಲಂ ।
ಭಕ್ತಿಯೇ ಸತ್ಕ್ರಿಯೆ ಸಕೀಲ ಸುಜ್ಞಾನಕ್ಕಂ ॥
ಭಕ್ತಿಯೆ ಶಕ್ತಿಯರೂಪೈ ।
ಭಕ್ತಿಯೆ ಪಂಚಪ್ರಸಾದ ಸ್ಥಾನುಭಾನಂ ॥೩॥ (ಸ್ಥಾನಂ)

ಲಿಂಗಾನಂದದೊಳಿರುತಿಹ ।
ಮಂಗಳಮಯ ಶಿವಶರಣರ ಪಾದವ ಪಿಡಿಯಲ್ ॥
ಪಿಂಗದ ಕರುಣಾರಸದಿಂ ।
ಕಂಗೊಳಿಸುವ ಭಕ್ತಿಭಾವ ಬಾರದೆ ಪೇಳ್ಕೈ ॥೪॥

ಭಕ್ತಿಯು ಭವದಾಶೂಲಂ ।
ಭಕ್ತಿಯು ನಿಗಮಾಗಮಗಳ ಜ್ಞಾನದ ಫಲಂ ॥
ಭಕ್ತಿಯು ಪ್ರೇಮದ ಜಾಲಂ ।
ಭಕ್ತಿಯು ವರವೀರಶೈವ ಮತಾನುಕೂಲಂ ॥೫॥

# ಎಲ್ಲರವ ನಮ್ಮಣ್ಣ ಕಲ್ಯಾಣ ಬಸವಣ್ಣ

ಎಲ್ಲರವ ನಮ್ಮಣ್ಣ ಕಲ್ಯಾಣ ಬಸವಣ್ಣ ||ಪ||
ಎಲ್ಲರೆದೆಗಳ ತುಂಬಿ ತುಳುಕಿಸುವ ಹಿರಿಯಣ್ಣ ||ಅ||

ಬಾಗೇವಾಡಿಯೊಳುದಿಸಿ ಕಲ್ಯಾಣದೊಳು ನೆಲಸಿ
ತ್ಯಾಗ ಜೀವನಕಾಗಿ ನೀಲಾಂಬಿಕೆಯ ವರಿಸಿ
ಲೋಕ ಜನ ಹಿತಕಾಗಿ ಬಿಜ್ಜಳನಿಗಾಳಾಗಿ
ಭಕುತಿ ಭಂಡಾರವನು ಒಡೆದನದನೆಲ್ಲರಿಗೆ ||೧||

ವಿಶ್ವಮಾನವ ಧರ್ಮ ರಾಜಕೀಯದೊಳಿಣೆದು
ಘೋಷಿಸದ ಕಾಯಕವ ಕೈಲಾಸವೆಂದೆನುತ
ಈ ಸಕಲ ಜನಮನಕೆ ಏಕ ದೇವನ ತೋರಿ
ಆ ಸಿರಿಯ ಕೈಲಾಸವಿಲ್ಲಿಳುಹಲೆಳಸಿದವ ||೨||

ಅನುಭವದ ಮಂಟಪದಿ ಜಾತಿ ಮತ ಪಂಥಗಳ-
ನೆಣಿಸದೊಂದೇ ಜಾತಿ ಮಾನವರು ನಾವೆಂದು
ಕೈನೆಗಹಿ ಬೋಧಿಸಿದ ವಿಶ್ವಾತ್ಮ ಭಾವವನು
ಮನುಜ ದೇವನು ನಮ್ಮ ಭಾಗ್ಯದಾ ಬಸವಣ್ಣ ||೩||

ನುಡಿದಂತೆ ನಡೆದವನು ನಡೆದಂತೆ ನುಡಿದವನು
ನಡೆ-ನುಡಿಗಳೊಂದಾಗಿ ಜೋಡಿಸಿದ ಜೀವನದಿ
ಕೂಡಲಸಂಗಯ್ಯಾ "ರಾಮೇಶ" ನೊಳು ಸೇರಿ
ಪೊಡವಿಯೊಳು ಬೆಳಗಿದನು ವರ ಭಕುತಿ ಜ್ಯೋತಿಯನು ||೪||

—ಶ್ರೀ. ಜೋಳದರಾಶಿ ಕೆ. ದೊಡ್ಡನಗೌಡರು

# ರಾಮರಾಜ್ಯ.

[ಲೇಖಕರು:- ಶ್ರೀಯುತ ಭೀ. ಶ್ರೀ. ಕುಲಕರ್ಣಿ, ವಿಜಾಪುರ.]



ನಮ್ಮ ಭರತಖಂಡವು ಅನೇಕ ಶತಮಾನಗಳಿಂದಲೂ ವೈಭವದಿಂದ ಮೆರೆದ ದೇಶವಾಗಿದೆ. ನಮ್ಮ ದೇಶದ ಸಂಪತ್ತನ್ನು ಮತ್ತು ಜನತೆಯ ಅಜ್ಞಾನವನ್ನು ಕಂಡು ಯಾರು ಅಪಹರಣಮಾಡಲಿಕ್ಕಿಲ್ಲ ? ಅನೇಕ ಜನ ಪರ ರಾಜರು ನಮ್ಮ ದೇಶದ ಸಂಪತ್ತನ್ನು ದೋಚಿಕೊಂಡು ತೆರಳಿದರು. ಹಾಗು ಹಲವು ಜನ ರಾಜರು ವೈಭವ ಸಂಪತ್ತಿನಿಂದಲೂ, ಸೃಷ್ಟಿಸೌಂದರ್ಯದಿಂದಲೂ ವೈಭವಶಿಖರಕ್ಕೇರಿದಂತಹ ನಮ್ಮ ದೇಶವನ್ನು ಕಂಡು ಸ್ವರ್ಗಸುಖವನ್ನು ಸವಿದಿದ್ದಾರೆ. ಆ ಕಾಲದಲ್ಲಿ ರಾಜರೆಂದರೆ ಬಹುಶಃ ವಿಲಾಸಿಗಳಾದ ರಾಜರೇ ಬಹುಜನರಾಗಿರುವರೆಂಬುದು ಹಿಂದಿನ ಇತಿಹಾಸಗಳಿಂದ ತಿಳಿದುಬರುವದು. ಇದೆಲ್ಲವೂ ಪ್ರಜೆಗಳ ಅಜ್ಞಾನತನದಿಂದಲೇ. ನಮ್ಮ ಅಜ್ಞಾನವನ್ನು ತಿಳಿದು ಇಂದಿನ ರಾಜರಲ್ಲಿ ಬಹುಜನ ರಾಜರು ಹೀಗೆ ವಿಲಾಸದಿಂದ ವರ್ತಿಸಿದ್ದಾರೆ. ಅವರು ಮಾತ್ರ ರಾಜರೆಂದು ಯಾರೂ ತಿಳಿಯತಕ್ಕದ್ದಲ್ಲ.

ರಾಜರೆಂದರೆ ವಿಲಾಸದಿಂದ ಕಾಲಕಳೆಯುವದಕ್ಕಲ್ಲ. ಪ್ರಜೆಗಳ ಹಿತಕ್ಕಾಗಿ ಕಷ್ಟ ಸಹಿಸಿ, ಆಡಳಿತವನ್ನು ಸುವ್ಯವಸ್ಥಿತವಾಗಿ ಸಾಗಿಸುವದಕ್ಕಾಗಿ. ಪ್ರಜೆಗಳೇ ರಾಷ್ಟ್ರದ ಆಧಾರ ಸ್ಥಂಬರು, ಪ್ರಜೆಗಳೇ ರಾಷ್ಟ್ರದ ಸಂಪತ್ತು, ಪ್ರಜೆಗಳೇ ಮಕ್ಕಳೆಂದು ತಿಳಿದುಕೊಳ್ಳುವದು ರಾಜರ ಕರ್ತವ್ಯ. ಇಂಥ ಅಮೌಲ್ಯವಾದ ರಾಷ್ಟ್ರದ ಸಂಪತ್ತು ಪ್ರಜೆಗಳಾದಮೇಲೆ ತಮ್ಮ ಅಮೌಲ್ಯತ್ವನರಿಯದೇ ಇದ್ದುದಕ್ಕೆ ಪ್ರಜೆಗಳೇ ಕಾರಣರು. ಏಕೆಂದರೆ ಒಕ್ಕಟ್ಟು ಎಂಬುದು ಹಿಂದಿನ ಕಾಲದಲ್ಲಿ ನಮ್ಮಲ್ಲಿ ಎನಿತೂ ಇಲ್ಲದೆ ಅಜ್ಞಾನದಲ್ಲಿದ್ದುದೇ ಇದಕ್ಕೆ ಕಾರಣವಾಗಿದೆ. ಹಾಗು ಅದು ಇಂದಿನವರೆಗೂ ನಮ್ಮಲ್ಲಿ ಕಂಡುಬರುತ್ತಿದೆ.

ಇಂತು ಅಜ್ಞಾನದಿಂದ ಕಾಲಹಣಮಾಡುತ್ತಿರುವಾಗ ನಾವೆಲ್ಲರೂ ಒಟ್ಟಿಗೆ ಸೇರಿ, ಇದಕ್ಕೆ ಯಾವ ಉಪಾಯವಾದರೆ ನಮ್ಮ ಕಷ್ಟಗಳು ಹೋಗಲಾಗುವವು ಎಂಬುದನ್ನು ಕುರಿತು ವಿಚಾರಿಸಿ, ಒಕ್ಕಟ್ಟುತನವೇ ಎಲ್ಲದಕ್ಕೂ

ಮುಖ್ಯ ಮಾರ್ಗವೆಂದು ತಿಳಿದು ಆ ಒಕ್ಕಟ್ಟಿನಿಂದಲೇ ಹಲವು ಜನ ಹಿಂದೂ ರಾಜರು ಸಹ ರಾಜ್ಯವಾಳಿದರು. ಆದರೆ ರಾಜ್ಯಾಡಳಿತದಲ್ಲಿ ಅಷ್ಟೊಂದು ಸುಧಾರಣೆಯನ್ನು ಯಾವ ರಾಜಾಧಿರಾಜರೂ ಮಾಡಿರಲಿಲ್ಲ. ನಮ್ಮ ದೇಶದಲ್ಲಿ ಪ್ರಜೆಗಳ ಹಿತಕ್ಕಾಗಿ ಹಾಗೂ ತಾನಾದರೂ ಪ್ರಜೆಗಳ ಸಮಾನನಾಗಿ, ಪ್ರಜೆಗಳ ನುಡಿಯಂತೆ ನಡೆದು ಕಾಲಹರಣಮಾಡಿದ ರಾಜನೆಂದರೆ ಶ್ರೀರಾಮ ನೊಬ್ಬನೇ ಎಂದು ಹೆಮ್ಮೆಯಿಂದ ಹೇಳಬಹುದು. ಶ್ರೀರಾಮನು ರಾಜ್ಯ ವಾಳಿದುದು ಹಿಂದುಸ್ಥಾನದ ಒಂದು ವಿಶಿಷ್ಟ ರಾಜಕೀಯವೆಂದು ಹೇಳಬಹುದು. ಆದರೆ ಇಂದಿನ ಯುಗದಲ್ಲಿ ಅದು ಎಷ್ಟರಮಟ್ಟಿಗೂ ಸಾಧ್ಯವಾಗದೆ ಹೋಗಿದೆ.

ಶ್ರೀರಾಮನು ರಾಜ್ಯವಾಳುವಾಗಿನ ಕೆಲವೊಂದು ಉದಾಹರಣೆಗಳನ್ನು ಕೇಳಿದರೆ ಆತನ ರಾಜ್ಯಾಡಳಿತದ ಸ್ವರೂಪವು ಹೊಳೆಯುವದು. ಆತನ ಒಂದೇ ಒಂದು ವಿಶಿಷ್ಟ ವಿಚಾರವಾವುದೆಂದರೆ "ಯಥಾ ರಾಜಾ ತಥಾ ಪ್ರಜಾ" ಇದುವೇ ಆತನ ಉನ್ನತಿಯ ಹಾಗು ರಾಷ್ಟ್ರದ ಉನ್ನತಿಯ ಉಚ್ಚ ವಿಚಾರ. ಶ್ರೀರಾಮನು ಪ್ರಜಾಭಕ್ತನಾಗಿ ಕಾಲಕಳೆದಿದ್ದಾನೆ ಅಂದಮೇಲೆ ಪ್ರಜೆಗಳ ಪ್ರೇಮ ರಾಜನಲ್ಲಿ ಒಡಮೂಡಿದುದು ಸೋಜಿಗವಲ್ಲ. ಅಂತೆಯೇ ಆ ಪ್ರಜಾಪ್ರೇಮವು ಇನ್ನೂವರೆಗೆ ಅಳಿಯದೆ ಉಳಿದಿದೆ. ಆತನನ್ನು ದೇವತಾ ಪುರುಷನೆಂದು ತಿಳಿದು ಆತನನ್ನು ಅಂದಿನಿಂದ ಇಂದಿನವರೆಗೂ ಪೂಜಿಸು ತ್ತಿದೆ. ಆತನು ಪ್ರಜೆಗಳ ಸಮಾನನಾಗಿ ನಡೆದ ಅನೇಕ ಉದಾಹರಣೆಗಳಿವೆ. ಅವುಗಳಲ್ಲಿ ಒಂದು ಉದಾಹರಣೆಯನ್ನು ಇಲ್ಲಿ ನಡೆಯಬಹುದು.

ಒಂದಾನೊಂದು ದಿನ ಶ್ರೀರಾಮನನ್ನು ಭೆಟ್ಟಿಯಾಗಲು ಒಬ್ಬ ಮಹಾ ಯತಿಗಳು ಬಂದರು. ಶ್ರೀರಾಮನು ಆ ಯತಿವರ್ಯರಿಗೆ ಆದರ ಸತ್ಕಾರಗ ಳಿಂದ ಕರೆದುಕೊಂಡು ತನ್ನ ಆಸನದಲ್ಲಿ ಕುಳ್ಳಿರಿಸಿ ಮಾತುಗಳನ್ನಾಡುತ್ತಿರಲು ಆ ಯತಿವರ್ಯನು ಶ್ರೀರಾಮನನ್ನು ಕುರಿತು– "ನಾನು ನಿಮ್ಮ ಕೂಡ ಕೆಲವು ವಿಚಾರಗಳನ್ನು ಮಾಡಬೇಕಾಗಿದೆ ಕಾರಣ ತಾವು ಮತ್ತು ನಾನು ಮಾತು ಗಳನ್ನಾಡುವಾಗ್ಗೆ ಯಾರೂ ಇಲ್ಲಿ ಆಗಮಿಸದಂತೆ ದ್ವಾರಪಾಲಕನಿಗೆ ಅಪ್ಪಣೆ ಕೊಡಿ" ಎಂದೊಡನೆ ಶ್ರೀರಾಮನು ಸಮೀಪದಲ್ಲಿಯೇ ನಿಂತಿರುವ ತನ್ನ ಸಹೋದರನಾದ ಲಕ್ಷ್ಮಣನಿಗೆ ದ್ವಾರದಲ್ಲಿ ನಿಲ್ಲಲು ಹೇಳಿ, ಇತರ ಯಾರಿಗೂ ಒಳಗೆ ಪ್ರವೇಶವನ್ನೀಯದಿರಲು ಎಚ್ಚರಿಕೆಯನ್ನಿತ್ತು, ಆ ಮುನಿಗಳ ಕೂಡ ಮಾತನಾಡುತ್ತಿರಲು ಶ್ರೀರಾಮನ ಗುರುಗಳಾದ ವಶಿಷ್ಠಮುನಿಗಳು ಶ್ರೀರಾಮ ನನ್ನು ಕಾಣಲು ಒಳಗೆ ಪ್ರವೇಶಿಸಿದರು. ಲಕ್ಷ್ಮಣನು ಗುರುಗಳ ಆಗಮನ

ದಿಂದ ಸಂತುಷ್ಟನಾಗಿ ಹಾಗು ಗುರುಗಳ ಪ್ರವೇಶಕ್ಕೆ ತಡೆಯನ್ನುಂಟುಮಾಡುವದು ತರವಲ್ಲವೆಂದು ಸುಮ್ಮನಾದನು. ವಶಿಷ್ಠರು ಶ್ರೀರಾಮನು ಹಾಗು ಆ ಯತಿಗಳು ಕುಳಿತಲ್ಲಿಗೆ ಬರಲು, ಆ ಯತಿಯು ಸಿಟ್ಟಿನಿಂದ ಶ್ರೀರಾಮನನ್ನು ತೆಗಳಿದನು. ಅದೇ ವೇಳೆಯಲ್ಲಿ ಶ್ರೀರಾಮನು ಲಕ್ಷ್ಮಣನನ್ನು ಕುರಿತು ವಿಚಾರಿಸಲು ಲಕ್ಷ್ಮಣನು-" ಗುರುಗಳ ಪ್ರವೇಶಕ್ಕೆ ತಡೆಮಾಡುವರುಂಟೇ ? ಏನಾದರೂ ಅವರು ಗುರುಗಳಲ್ಲವೇ ? ಗುರುಗಳ ಪ್ರವೇಶಕ್ಕೆ ತಡೆಮಾಡಿದರೆ ಗುರುದ್ರೋಹ ಬಗೆದಂತಲ್ಲವೇ ?" ಎಂದು ನುಡಿಯಲು, ಶ್ರೀರಾಮನು- 'ಗುರುಗಳಿರಲಿ, ರಾಜನಿರಲಿ. ಕಾಯದೆಯು ಎಲ್ಲರಿಗೂ ಒಂದಲ್ಲವೇ ? ಅಪ್ಪಣೆ ಪಾಲಿಸದಿರುವ ನಿನಗೆ ಶಿಕ್ಷೆಯೇ ಯೋಗ್ಯವೆಂದು ಶಿಕ್ಷೆಯನ್ನೀಯಲು, ಲಕ್ಷ್ಮಣನು ಶಿಕ್ಷೆಯನ್ನು ಅನುಭೋಗಿಸಬೇಕಾಯಿತು. ಹೀಗೆ ತನ್ನ ರಾಜ್ಯಾಡಳಿತದಲ್ಲಲ್ಲದೆ ಗೃಹವಿಚಾರದಲ್ಲಿಯೂ ಕೂಡ ಪ್ರಜೆಗಳ ಅನುಮತಿಯಂತೆ ನಡೆದಿದ್ದನೆಂಬುದಕ್ಕೆ ತನ್ನ ಸತಿ ಸೀತಾದೇವಿಯನ್ನು ತ್ಯಜಿಸಿದ ಕಥೆಯಿಂದ ತಿಳಿದುಬರುವದು. ಬಾಗಿ ನಡೆದರೆ ಡೊಗನೆಂದೂ, ಸೆಟೆದು ನಡೆದರೆ ಗರ್ವವುಳ್ಳವನೆಂದೆನ್ನುವ ಜಗದ ಜನತೆಗೆ ಆದರ್ಶಪ್ರಿಯನಾದುದು ಬಹು ಆಶ್ಚರ್ಯಕರವಾದ ಸಂಗತಿ.

ಇಂದು ನಾವೆಲ್ಲರು ರಾಮರಾಜ್ಯದ ಸವಿಯನ್ನುಣ್ಣಬೇಕೆಂದು ಇಚ್ಛಿಸಿ ರಾಮರಾಜ್ಯವೆಂಬ ನಾಮಕರಣದಿಂದ ರಾಜ್ಯಾಡಳಿತಕ್ಕೆ ಮನ್ನಣೆ ಕೊಟ್ಟಿದ್ದೇವೆ. ಆದರೆ ಇಂದಿನ ರಾಮರಾಜ್ಯ ಸೋಗಿನ ರಾಮರಾಜ್ಯವಾಗಿದೆ. ನಮ್ಮ ದೇಶಿಗರೇ ಇದನ್ನು ಅರಿಯಬಹುದು. ಆದರೆ ಪರದೇಶಿಗರು ನಮ್ಮಲ್ಲಿಯ ಈ ದೊಡ್ಡಾಟದಲ್ಲಿಯ ಕಾಯದೆಗಳನ್ನು ಕೇಳಿ ಸಂತೋಷವನ್ನು ವ್ಯಕ್ತಮಾಡುವರು. ಇಂದು ಜನತೆ ಹಾಗು ಸರಕಾರದಲ್ಲಿ ಸಹಕಾರವಿಲ್ಲದಿರುವದು ಹಾಗು ಜನತೆಯ ಅಜ್ಞಾನತನ, ಹೆಮ್ಮೆ, ರಾಷ್ಟ್ರದಮೇಲಿನ ಪ್ರೇಮತ್ವವಿಲ್ಲದಿರುವದು, ವ್ಯಸನ ಮುಂತಾದವುಗಳು ರಾಮರಾಜ್ಯ ನಾಮಕ್ಕೆ ಕುಂದುತರುವಂತಾಗಿವೆ.

ಇಂದಿನ ನಮ್ಮ ರಾಜ್ಯಾಧಿಕಾರಿಗಳು ಒಮ್ಮೆಲೇ ಭಯಂಕರವಾದ ಕಾಯದೆಗಳನ್ನು ಅಮಲಿನಲ್ಲಿ ತಂದಿರುವರು. ಆದರೆ ಮುಂದಾಗುವ ಪರಿಣಾಮವೇನನ್ನೂ ಅವರು ಅರಿಯಲಿಲ್ಲ. ಎಲ್ಲಕ್ಕೂ ಮೊದಲು ಕೈಕೊಂಡ ವಿಷಯ ಮಧ್ಯಪಾನದ ವಿಷಯವಾಗಿ. ಆದರೆ ಇದನ್ನು ಸರಕಾರವು ಸೂಕ್ಷ್ಮರೀತಿಯಿಂದ ಅರಿಯಬಹುದಾಗಿತ್ತು. ಪಾನನಿರೋಧವೇನೋ ಹೆಸರಿಗೆ ಮಾತ್ರ ನಿಲ್ಲಿಸಿದ್ದು ದಾಯಿತು. ಆದರೆ ಅದರ ಉತ್ಪತ್ತಿಯೇನೂ ಕಡಿಮೆಯಾಗಲಿಲ್ಲ. ನಮ್ಮ ಹಿಂದೂ ಸಮಾಜದಲ್ಲಿ ಕುಡುಕರಿಗೆ ಸಮಾಜದಲ್ಲಿ ಸ್ಥಾನಮಾನವಿದ್ದಿರಲಿಲ್ಲ.

ಇದಾದರೂ ಕುಡಿಯುವ ಮನುಷ್ಯನಿಗೆ ಭಯವಲ್ಲದೇ ಕುಡುಕರ ಸ್ಥಿತಿಯನ್ನು ಕಂಡಾದರೂ ತಿಳಿದುಕೊಂಡು ಕುಡಿಯುವ ಚಟಕ್ಕೆ ಸಿಲುಕದೇ ಇರುತ್ತಿದ್ದರು.

ಆದರೆ ಮುಖ್ಯವಾಗಿ ಯಾವುದನ್ನು ನಿರ್ಬಂಧ ಮಾಡಬೇಕಾಗಿತ್ತೋ ಅದನ್ನೇ ಸಂಕಾರವು ಮರೆತುಬಟ್ಟಿದೆ. ಅದಾವುದೆಂದರೆ ಕಲಿಯುಗದ ಕಾಮಧೇನುವಾದ "ಚಹಾ." ಎಲ್ಲಿ ನೋಡಿದಲ್ಲಿ ಚಹದ ಹೊಗೆ ಹಾರುತಿದೆ. ಹಿಂದಿನ ಕಾಲದಲ್ಲಿ ಎಲ್ಲಿನೋಡಿದಲ್ಲಿ ಹವಳ ಮುತ್ತುಗಳು ರಾಸಿ ರಾಸಿಯಾಗಿ ಪೇಟೆಯಲ್ಲಿ ಮಾರಾಟಕ್ಕೆ ಇರುತ್ತಿತ್ತಂತೆ. ಆದರೆ ಇಂದು ನಾವು ಹವಳು, ಮುತ್ತು, ವಜ್ರ, ವೈಢೂರ್ಯಗಳೆಂಬ ಶಬ್ದಗಳನ್ನೇ ಮಾತ್ರ ವರ್ಣನಾತ್ಮಕ ಕಾದಂಬರಿ ಮುಂತಾದ ಕಥೆಗಳಿಂದ ಓದಿ ತಿಳಿದುಕೊಂಡಿದ್ದೇವೆ. ಆದರೆ ಅವುಗಳು ಹೇಗಿದ್ದವೆಂಬುದನ್ನು ಹೇಳುವಜನರಿಲ್ಲ. ಅಂದಮೇಲೆ ಅಂಥ ಸಂಪತ್ತಿನ ಕಾಲ ಬಹು ಪುರಾತನಕಾಲವಾಗಿರಬಹುದು. ಆದರೆ ಇತ್ತೀತ್ತ ನಾವು ನೋಡುತ್ತಿದ್ದ ಬೆಳ್ಳಿ ಬಂಗಾರಗಳೂ ಮಾಯವಾಗಹತ್ತಿವೆ. ಏಕೇಂದರೆ ಅದರಮೇಲಿನ ಮಮತೆಯು ನಮ್ಮಲ್ಲಿಲ್ಲ.ವೇಲಾಗಿ ಆಡಂಬರಕ್ಕೆ ಮೆಚ್ಚಿದ್ದೆವೆ. ನಮ್ಮಲ್ಲಿ ಬ್ರಿಟಿಶರ ಆಳಿಕೆಯ ಕಾಲದಿಂದ ಅವರ ಆಡಂಬರದ ಉಡುಪು ತೊಡಪು ಮತ್ತು ಸ್ನೋ ಪಾವಡರ ಮುಂತಾದವುಗಳೇ ನಮ್ಮಲ್ಲಿ ಬೇಕವೆ ಇದಲ್ಲದೆ ಮೋಟಾರು ಹಾಗು ರೇಡಿಯೋ ಮುಂತಾದವುಗಳಿಗಾಗಿ ಜನರ ಮನ ಧಾವಿಸಿದೆ. ಹಾಗು ಅವುಗಳನ್ನು ಕೊಳ್ಳಲು ಧಾರಾಳವಾಗಿ ಹಣವನ್ನು ಸುರಿಸುತ್ತಿದ್ದಾರೆ. ಅಂದಮೇಲೆ ನಿಜವಾದ ಸಂಪತ್ತು ನಾಶವಾಗುವದಕ್ಕೆ ಸಂದೇಹವಿಲ್ಲ. ಇದರಿಂದ ತಿಳಿದುಬರುವದೇನೆಂದರೆ ನಮ್ಮ ದೇಶದ ಸಂಪತ್ತು ನಾಶವಾಗಿಲ್ಲ, ನಾವು ಆಡಂಬರಕ್ಕೆ ಸಿಲುಕಿ ನಾಶವಾಗಿದ್ದೇವೆ. ಇಂದು ಪ್ರತಿಯೊಬ್ಬ ಸ್ತ್ರೀಯರ ಮೈಮೇಲೆ ಮಂಗಲಸೂತ್ರವೆಂದು ಲಗ್ನಕಾಲದಲ್ಲಿ ವರನು ವಧುವಿಗೆ ಕಟ್ಟುವ ಮಾಂಗಲ್ಯದಹೊರತಾಗಿ ಇನ್ನುಳಿದ ವಸ್ತ್ರಾಭರಣಗಳನ್ನು ಕಾಣುವದು ವಿರಳವಾಗಿದೆ.

ಇಂದು ಸರ್ವರ ಜೀವವೂ ಚಹದಲ್ಲಿದೆ. ಯಾರಾದರೂ ಮಿತ್ರರನ್ನಾಗಿ ಮಾಡಿಕೊಳ್ಳಬೇಕಾದರೆ ಇಲ್ಲವೆ ಯಾವದಾದರೊಂದು ಮಾತಿನ ಚರ್ಚೆಗಾಗಿ ಮೊದಲು ಚಹಾಮಂದಿರಕ್ಕೇ ಹೋಗಬೇಕು. ಯಾರನ್ನಾದರೂ ಮೋಸಗೊಳಿಸಬೇಕಾದರೆ ಅವರನ್ನು ಕರೆದುಕೊಂಡು ಚಹಾಮಂದಿರಕ್ಕೇ ಹೋಗ

ಬೇಕು. ಚಹಾಮಂದಿರವೇಕೆ ಮನೆಮಾರು ಕೊಂಪೆಗಳಲ್ಲಿಯೂ ಇಂದು ಚಹದ ಮಡಿಕೆಗಳು ಉರಿಯುವ ಒಲೆಗಳಮೇಲೆ ಕುದಿಯುತ್ತಿವೆ. ಆದರಾತಿಥ್ಯಕ್ಕಾಗಿ ಚಹಾ. ಮಂತ್ರತಂತ್ರಗಳಿಗಾಗಿ ಚಹಾ. ಮದುವೆ ಮುಂಜಿಗಳಗಾಗಿ ಚಹಾ. ವ್ಯಾಪಾರಿವರ್ಗಕ್ಕೆ ಲಾಭಮಾಡಿಕೊಡುವದು ಈ ಚಹವೇ. ಅಂದಮೇಲೆ ಈ ಚಹವು ಕಲಿಯುಗದ ಕಾಮದೇನುವಲ್ಲದೆ ಇನ್ನೇನು ? ಯಾವನಾದರೊಬ್ಬ ವ್ಯಾಪಾರಸ್ಥನು ಗಿರಾಕಿಗಳಿಗೆ ಮೊದಲು ಚಹಮಂದಿರಕ್ಕೆ ಕರೆದುಕೊಂಡು ಹೋಗಿ, ಒಂದೆರಡು ಹಿತವಚನಗಳಿಂದ ಕೂಡಿಕೊಂಡು ಚಹದೇವಿಯ ದರ್ಶನಮಾಡಿಸಿದರೆ ತೀರಿತು. ಆ ಚಹದ ಹಣವನ್ನು ಸಹ ಗಿರಾಕಿಯು ತಾನೇ ಕೊಟ್ಟು, ವ್ಯಾಪಾರಸ್ಥನು ಹೇಳಿದ ಮಾಲಿನ ಬೆಲೆಯನ್ನು ಕೊಟ್ಟು ಗಿರಾಕಿಯು ವ್ಯಾಪಾರಸ್ಥನಿಗೆ ವಿನಯದಿಂದ ನಮಸ್ಕರಿಸಿ ಹೋಗುವನು. ಇಂಥ ಚಹಕ್ಕೆ ಮಹತ್ವ ಕೊಟ್ಟು, ಸರಕಾರವು ಬಡವರ ಹಿತವನ್ನುಮಾಡದೇ ಮೋಸುಗಾರರಿಗೆ ಆಸ್ಪದವಿತ್ತಿದೆ. ನಮ್ಮ ದೇಶ ಮೋಸುಗಾರಭರಿತವಾಗಹತ್ತಿದೆ.

ಇನ್ನು ಎರಡನೆಯದಾಗಿ ಬೀಡಿ, ಸಿಗಾರೇಟುಗಳು. ಎಲ್ಲಿ ನೋಡಿದಲ್ಲಿ ಪೇಟೆಯಲ್ಲಿ ಬೀಡಿ ಸಿಗಾರೇಟುಗಳ ಜಾಹಿರಾತುಗಳೇ ಜಾಹಿರಾತುಗಳು. ಜಾಹಿರಾತುಮಾಡುವದೊಂದೇಇರಲಿ, ನಮ್ಮ ಮುಖಂಡರ ನಾಮಕರಣದಿಂದ ಬೀಡಿಗಳು ತಯಾರಾಗುತ್ತಲಿವೆ. ಎಲ್ಲಿ ನೋಡಿದಲ್ಲಿ ಪಟೇಲ ಬೀಡಿ, ನೆಹರೂ ಬೀಡಿ ಮುಂತಾದ ಬೀಡಿಗಳು ತಯಾರಾಗುತ್ತಿವೆ. ಇವುಗಳಾದರೂ ಒಂದುವೇಳೆಯಲ್ಲಿ ಬಹು ಮಹತ್ವದ ಸ್ಥಾನವನ್ನು ಪಡೆಯುತ್ತಿವೆ. ಇವಾದರೂ ಹಿತಕಾರಿ ವಸ್ತುಗಳೇ ಸರಿ. ಯಾವುದಾದರೊಂದು ಪ್ರವಾಸವನ್ನು ಕೈಕೊಂಡಾಗ್ಗೆ ರೇಲ್ವೆಯಲ್ಲಾಗಲಿ, ಮೋಟಾರಿನಲ್ಲಾಗಲಿ, ಸಿನೇಮಾಮಂದಿರದಲ್ಲಾಲಿ, ಜನದಟ್ಟನೆಯ ಸ್ಥಾನಗಳಲ್ಲಿ ಜನರಲ್ಲಿ ಕೂಡ್ರಬೇಕಾದರೆ ಹಾಗೇ ಕೂಡ್ರಲು ಅವಕಾಶ ಸಿಗದಿದ್ದಲ್ಲಿ ತನ್ನ ಎಡಬಲ ಕುಳಿತ ಯಾರಾದರೊಬ್ಬರಿಗೆ ಒಂದೇ ಒಂದು ಬೀಡಿಯನ್ನಾಗಲಿ ಇಲ್ಲವೆ ಬೆಂಕೀ ಪೆಟ್ಟಿಗೆಯನ್ನಾಗಲಿ ಬೇಡಿದಲ್ಲಿ ಕೊಟ್ಟರೆ ನಾವು ಕೂಡ್ರಬಹುದಾದ ಸ್ಥಳಕ್ಕಿಂತಲೂ ಹೆಚ್ಚು ಸ್ಥಳ ಸುಲಭವಾಗಿ ದೊರೆಯುವದು. ಇಂತಹ ಚಟಗಳಿಗೆ ಮನಸೋತು ಜನ ಮೋಸುಹೋಗಹತ್ತಿದೆ.

ಚಹದ ಮಹಿಮೆಯಂತೂ ಎಷ್ಟು ವರ್ಣಿಸಿದರೂ ಇನ್ನೂ ಹೆಚ್ಚು ಹೆಚ್ಚಾಗಿ ವರ್ಣನೆಯನ್ನು ಪಡೆಯುತ್ತಾ ಇದೆ. ನೌಕರಿ ವಗೈರೆ ಬೇಕಾದಲ್ಲಿ ಇದುವೇ ಸೂಚನೆ. ಇದು ಕೇವಲ ಪುರುಷರಿಗಾಗಿಯಲ್ಲ. ಸ್ತ್ರೀಯರಿಗೆ

ಕುಂಕುಮದ ಸಮಾನವಾಗಿದೆ. ಕುಂಕುಮ ಹಚ್ಚಿಕೊಳ್ಳುವದನ್ನು ಮರೆಯ ಬಹುದು, ಆದರೆ ಮೊದಲು ಈ ಚಹ ತಯಾರಿಸದೆ ಇರರು. ಯಾರಾದರೂ ಗೆಳತಿಯರು ಮನೆಗೆ ಬಂದಲ್ಲಿ ಚಹವಿಲ್ಲದೆ ಕಳಿಸರು. ಮೊದಲಿನಕಾಲದಲ್ಲಿ ಮನೆಗೆಬಂದು ಹೋಗುವ ಹೆಣ್ಣುಮಕ್ಕಳಿಗೆ ಕುಂಕುಮಹಚ್ಚುವ ಹಿಂದೂ ಸ್ತ್ರೀಪದ್ಧತಿಯುಸಹ ಇಂದು ವಿರಳವಾಗಿದೆ. ಒಟ್ಟಿನಮೇಲೆ ನಮ್ಮ ಸಾಂಸ್ಕೃತಿಯೇ ನಾಶವಾಗಿದೆ. ನಮ್ಮ ಭಾರತೀಯ ಸಾಂಸ್ಕೃತಿಯು ಬಹು ಉಚ್ಚಮಟ್ಟಿನ ದೆಂಬುದನ್ನು ಮರೆತಿದ್ದೇವೆ. ಆದಿಕಾಲದಿಂದಲೂ ವೈಭವಸಿಖರಕ್ಕೇರಿದ ನಮ್ಮ ದೇಶವು ಇಂದು ಯಾವ ಸ್ಥಿತಿಯಲ್ಲಿದೆ ಎಂಬುದನ್ನು ಅರಿತುಕೊಳ್ಳು ವದು ಸರ್ವರ ಕರ್ತವ್ಯ. ಎರಡು ಗಾಲಿಗಳಿಂದಲೇ ರಥವು ಮುಂದಕ್ಕೆ ಹೇಗೆ ಸಾಗುತ್ತದೋ ಹಾಗೆ ಸರಕಾರ ಹಾಗು ಜನತೆಯು ಒಂದಾದಲ್ಲಿ ರಾಜ್ಯವು ಸುಸೂತ್ರವಾಗಿ ಸಾಗುವಲ್ಲಿ ಸಂದೇಹವಿಲ್ಲ. ಇಂದು ನಮ್ಮಲ್ಲಿ ಏಕಭಾವನೆಇಲ್ಲದಿರುವದೇ ರಾಜ್ಯಾಡಳಿತಕ್ಕೆ ತೊಂದರೆಯಾಗಿದೆ ಒಂದಲ್ಲ, ಎರಡಲ್ಲ ಅನೇಕ ಪಕ್ಷಗಳು ಅನೇಕತೆರನಾಗಿ ಇಂದಿನ ರಾಜ್ಯಾಡಳಿತಕ್ಕೆ ಹಾಗು ಮುಖಂಡರಿಗೆ ತೆಗಳುವದುಂಟು. ಹಾಗೆ ತೆಗಳುವವರು ನಿಜವಾಗಿ ಸ್ವಾರ್ಥಸಾಧಕರು ಹಾಗು ರಾಷ್ಟ್ರದ್ರೋಹಿಗಳೆಂದರೆ ತಪ್ಪಾಗದು. ಇಂದು ಪ್ರಜಾರಾಜ್ಯವಿದೆಯೆಂದು ಪ್ರಜೆಗಳಾದ ನಾವು ಬೇಕಾದಹಾಗೆ ವರ್ತಿಸುವದು ತಪ್ಪು. ಇಂಥ ಅಜ್ಞಜನರಿರುವದರಿಂದಲೇ ಸರಕಾರವು ನಮ್ಮಮೇಲೆ ಒತ್ತಾಯದ ಕಾಯದೆಗಳನ್ನು ಕೈಕೊಳ್ಳಹತ್ತಿದ್ದಾರೆ. ಇದನ್ನು ತಿಳಿಯದೇ ಸರಕಾರಕ್ಕೆ ದೋಷಕೊಡುವದು ತಪ್ಪು. ಹಾಗು ನಮ್ಮ ರಾಜಕಾರಣಿಗಳು ರಾಜಕೀಯ ವಿಷಯಗಳನ್ನು ಮನನಮಾಡಿಕೊಂಡು ಒಳ್ಳೆಯ ಆಚರಣೆಯಿಂದ ನಡೆದರೆ ದೇಶದ ಉನ್ನತಿಯ ಸ್ಥಾನವು ನಮ್ಮ ರಾಜಕಾರಣಿಗಳಿಗೇ ಸಲ್ಲುವದು.

ಶಿಕ್ಷಣವನ್ನು ಕಲಿತು ಅದರ ದುರುಪಯೋಗವನ್ನು ನಾವು ಮಾಡಿಕೊಳ್ಳು ತ್ತಿದ್ದೇವೆ. ಇದೆಲ್ಲವೂ ಸರಕಾರದ ತಪ್ಪೆನ್ನಲಿಕ್ಕಾಗದು. ಈಗ್ಗೆ ನಾವು ನಡೆಯುತ್ತಿರುವದು ರಾಮರಾಜ್ಯ ಮಾರ್ಗವಲ್ಲ. ಬ್ರಿಟಿಶ ಮಾರ್ಗ. ಈ ಮಾರ್ಗದಿಂದ ನದೆದರೆ ನಮ್ಮ ದೇಶವು ಪರಕೀಯವಾಗಲು ಇಲ್ಲವೆ ಸಂಪೂರ್ಣ ನಾಶಹೊಂದುವದರಲ್ಲಿ ಸಂದೇಹವಿಲ್ಲ.

---

## ಬಸವಣ್ಣನವರ ನೆನಹು.



ಶಿವಪರಾತ್ಪರ ವಸ್ತು ಬಸವನು
ಶಿವನ ಚಿದ್ಧರ್ಮಾವತಾರವು
ಶಿವನೆ ಈ ಜಗ ಲಿಂಗರೂಪನು
ಶಿವನೆ ಸಂಗನ ಬಸವನು ॥

ಜಗದವಸುವೀ ಬಸವನಾಗಿಹ
ಯುಗದ ಶಿವನೀ ಬಸವನಾಗಿಹ
ಸೊಗಸು ಜಂಗಮ ಲಿಂಗ ಸಮರಸ
ಮಿಗಿಲು ಶರಣ ಕುಟುಂಬಿಯು

ಬಸವನಾಮವೆ ಕಲ್ಪವೃಕ್ಷವು
ಬಸವ ದೇಹವೆ ಪುರುಷಶಿಲೆಯು
ಬಸವ ಹೃದಯವೆ ಕಾಮಧೇನುವು
ಬಸವ ಜನ್ಮವೆ ಸಫಲವು

ಕವಿಯು ಬಸವನು ರವಿಯು ಬಸವನು
ಶಿವನು ಬಸವನು ಸಿದ್ಧ ಬಸವನು
ದಿವದ ಸವಿಯನುಭವದಿ ತೋರಿದ
ಶಿವ ಸುಧಾಮಯ ಬಸವನು

ಚಂಡ ಬಸವನು ವೃಷಭನಹುದು
ಕೊಂಡಿ ಮಂಚಣದೇವ ನಾರದ
ಚನ್ನಬಸವ ಕುಮಾರ ಸ್ವಾಮಿಯು
ಇನ್ನು ಶರಣರೆ ಗಣಗಳು

ಕಪ್ಪೆ ಚಿಪ್ಪಲಿ ಮುತ್ತು ಜನಿಸುವ
ತೆರದಲುದಯಿಸಿ ಗಣಗಳೆಲ್ಲರು
ಒಪ್ಪಿ ಕಂಕಣಕಟ್ಟಿ ನಿಂದರು
ಶರಣ ಬಸವನ ಸಂಗಡ

ಗುರುವಿನ ಹೃತ್ಕಮಲವಲ್ಲಿಹ
ವರದ ನಂದಿಯು ಅವನ ಚಿಹ್ನೆಯು
ಲಿರುವುದೈ ನಿನ್ನಿಷ್ಟ ಲಿಂಗವು
ಶರಣ ಮಾನ್ಯನೆ ಪಡೆಯುದ

ಇಷ್ಟ ಲಿಂಗವ ಗುರುವಿನಿಂ ಪಡೆ
ಶ್ರೇಷ್ಠ ಭಕ್ತ ಮಹೇಶನಾಗಿರು
ನಿಷ್ಠನಾಗಿರೆ ಶರಣನೆನಿಸಿರೆ
ಕಷ್ಟವೆ ಶಿವನೈಕ್ಯವು!

ಬಸವ ಮತವೆ ಶಿವನ ಮತವು
ಬಸವ ಮತವೆ ಶ್ರೇಷ್ಠ ಮತವು
ಬಸವ ತತ್ವವೆ ಧರೆಯನಾಳ್ವುದು
ಅಸಮವೆನಿಸುತ ಧರೆಯಲೀ

ಎಲ್ಲರಲ್ಲಿ ಸ್ವತಂತ್ರ ಶಕ್ತಿಯ
ಸಲ್ಲಿಸುವುದೈ ಬಸವ ಮತವು

ಎಲ್ಲ ಸೃಷ್ಟಿಯು ಸಮವು ಶಿವನಲಿ
ಎಲ್ಲವೂ ಶಿವಸತ್ವವು

ಎಲ್ಲರೆಲ್ಲರು ಮಾಡಿ ಕಾಯಕ
ಎಲ್ಲರರ್ಚಿಸಿ ಇಷ್ಟಲಿಂಗವ
ಎಲ್ಲ ಕಾಯಲು ಶಿವನ ಸಮಯುವ
ಇಲ್ಲಿ ಜನತೆಯ ಉನ್ನತಿ

ಶಿವನ ಭಕ್ತಗೆ ಇಲ್ಲ ತನು ಸುಖ
ಶಿವನ ಸಂಗಿಗೆ ಇಲ್ಲ ಸೂತಕ
ಶಿವನು ವರಿಸಿದ ನರನು ಭುವಿಯಲಿ
ಜವಗೆ ಮಣಿಯನು ಸೋಲನು

ನರರು ನಾರಿಯರೆಲ್ಲರೊಂದೆ
ಗುರುವು ಲಿಂಗ ವಿಭೂತಿ ಮಂತ್ರವು
ಹರಗೆ ಭಕ್ತಾಚಾರವೆಲ್ಲವ
ಧರೆಯಲಿರುವರು ಸಲಿಸಲಿ

ಹರನ ಧರೆ ಇದು ಅವನ ಸಾಲವ
ಹಂಸದೀಕ್ಷೆ ವೀರಶೈವರು
ಧರೆಯ ಕಾಯಕ ಮಾಡಿ ಜಂಗಮ
ಗೆಸಗುತಲಿ ದಾಸೋಹವ

ಅಂಪವೀಧರೆ ಋಣವ ಹರಿಸಲು
ಲಿಂಗಸಮರಸ ಸುಲಭವೊಪ್ಪುದು
ಭಂಗಬಾರದು ಐಕ್ಯಕೆನ್ನುತ
ಅಂಗಕಾಯಕ ವಿಧಿಸಿದ

ವಚನ ಬಸವನ ಮಲ್ಲೆ ಸುರಗಿಯು
ಸುಚಿಯು ಸುರಭಿಯ ಸುಲಭ ಮೋಹಕ
ವಚನ ಜ್ಞಾನದ ಸುರಭಿ ಕ್ಷೀರವು
ವಚನ ಚೇತನ ಜ್ಯೋತಿಯು

ಹೊಯ್ದರೆಲ್ಲವ ಹೊರೆದರೆಂದನು
ಬೈದರೆಲ್ಲರ ಬಂಧುವೆಂದನು
ಕೊಯ್ದು ಹಿಂಸೆಯ ಮೂಲವೆಲ್ಲವ
ಬಸವನುರು ಸತ್ಯಾಗ್ರಹಿ

ವೇದವೆಂಬುವ ತುಹಿನ ಶೈಲದ
ಮೋದವಾಹಿನಿ ಸಂಗಬಸವನ
ಕಾದ ಕನ್ನಡ ನಾಡ ಹೃದಯಕೆ
ನಾದಬ್ರಂಹನು ಬಸವನೂ

ಸ್ಥಾವರನು ಗುಡಿಯೊಳಗೆ
ಜಂಗಮನು ಬಯಲೊಳಗೆ
ಸಂಗಮನು ಜಾತ್ರೆಯಲಿ
ಶಿವನಾತ್ಮ ಕೈಲಾಸದಲ್ಲಿ
ಇವನು ಬಸವ! ಶರಣು ಬಸವ

—ಶ್ರೀ ಲಕ್ಷ್ಮಣರಾವ್ ಹೊಯಿಸಳರು
ಬೆಂಗಳೂರು

# ಭಕ್ತಿಯೋಗ.

( ಲೇ. : — ಶ್ರೀ. ಬಂಥನಾಳ ಶಿವಯೋಗಿಗಳ ಬಾನುಲಿ ಭಾಷಣ )

---

ಮಾನವನು ಮಾಯಾಬಂಧನದಿಂದ ಮುಕ್ತನಾಗಲು, ಮತ್ತು ಸತ್ಯವಾದ, ಶಾಶ್ವತವಾದ ಸುಖಶಾಂತಿ ಸಮಾಧಾನಗಳನ್ನು ಹೊಂದಲು, ಹಿಂದೂ ಧರ್ಮದಲ್ಲಿ ಮಾರ್ಗತ್ರಯಗಳೇ ಮುಖ್ಯವಾದವುಗಳೆಂದು ಶ್ರುತಿಯು ಸಾರಿದೆ. ವೇದದಲ್ಲಿ ಈ ಮಾರ್ಗತ್ರಯಗಳಿಗೆ, ಕರ್ಮಕಾಂಡವೆಂತಲೂ ಉಪಾಸನಾ ಕಾಂಡವೆಂತಲೂ, ಜ್ಞಾನಕಾಂಡವೆಂತಲೂ, ಅರ್ಥಾತ್ ಕರ್ಮಯೋಗ, ಭಕ್ತಿಯೋಗ, ಜ್ಞಾನಯೋಗಗಳೆಂದು ಸಂಬೋಧಿಸಲಾಗಿದೆ. ಈ ಮೂರೂ ಮಾರ್ಗಗಳಲ್ಲಿ ಭಕ್ತಿಯೋಗವು ಅತಿಶಯ ಸುಲಭ ಹಾಗೂ ಸರಳವಾಗಿರುವದಲ್ಲದೆ, ಮಾನವನು ಕೊನೆಗೆ ಯಾವ ಧ್ಯೇಯವನ್ನು ಮುಟ್ಟಬೇಕಾಗಿರುವದೋ ಅಂಥ ಪರಂಧಾಮಕ್ಕೆ ಕೈಹಿಡಿದು ಕರೆದೊಯ್ಯುವ ಸ್ವಾಭಾವಿಕವಾದ ಮಾರ್ಗವಾಗಿದೆ.

ಭಕ್ತಿಯೋಗವೆಂದರೆ ಪರಮೇಶ್ವರನನ್ನು ಅಂತಃಕರಣಪೂರ್ವಕವಾಗಿ ಶೋಧಿಸುವದು. ಈ ಶೋಧನೆಯು ಪ್ರೇಮದಲ್ಲಿ ಪ್ರಾರಂಭವಾಗಿ ಪ್ರೇಮದಲ್ಲಿ ಬೆಳೆದು, ಕಡೆಗೆ ಪ್ರೇಮದಲ್ಲಿಯೇ ಕೊನೆಗೊಳ್ಳುವದು. ಇದನ್ನೇ ಆರ್ಷೇಯ ಋಷಿಯಾದ ಶಾಂಡಿಲ್ಯನು " ಸಾ ಪರಾನುರಕ್ತಿರೀಶ್ವರೇ" ಎಂದು ತನ್ನ ಭಕ್ತಿಸೂತ್ರದಲ್ಲಿ ಹೇಳಿದ್ದಾನೆ. ನಾರದ ಋಷಿಯು ಕೂಡ, "ಸಈಶ್ವರಃ ಅನಿರ್ವಚನೀಯ ಪ್ರೇಮಸ್ವರೂಪಃ " ಎಂದು ತನ್ನ ಭಕ್ತಿಸೂತ್ರದಲ್ಲಿ ಹೇಳಿರುವನು. ಅಂದರೆ ದೇವರು ಪ್ರೇಮಸ್ವರೂಪನಾಗಿದ್ದು, ಆತನಲ್ಲಿ ತ್ರಿಕರಣಪೂರ್ವಕವಾಗಿ ಉತ್ಕಟವು ಪ್ರೇಮವನ್ನಿಡುವದೇ ಭಕ್ತಿಯೋಗವೆಂದು ಹೇಳಿರುವರು.

ಈ ಪ್ರಪಂಚವೆಲ್ಲವೂ ಪ್ರೇಮದ ಆಕರ್ಷಣ ಶಕ್ತಿಯಿಂದಲೇ ನಿಂತಿದೆ. ಸಮಾಜದಲ್ಲಿ ಯಾವದು ಉದಾತ್ತವಾದದ್ದು, ಉತ್ತಮವಾದದ್ದು ಮತ್ತು ಉತ್ಕರ್ಷಕವಾದದ್ದಿದೆಯೋ, ಅದೆಲ್ಲವೂ ಪ್ರೇಮದಲ್ಲಿಯೇ ಉದ್ಭವವಾಗಿದೆ.

ಅದರಂತೆ ಕೀಳಾದ, ಕೆಡುಕಾದ ರಾಕ್ಷಸೀವೃತ್ತಿಯೂ ಕೂಡ ಪ್ರೇಮದಲ್ಲಿಯೇ ಉಗಮವಾಗಿದೆ. ಆದರೆ ವ್ಯತ್ಯಾಸವಿಷ್ಟೇ. ಎರಡನೆಯ ಪ್ರಕಾರದಲ್ಲಿ ಪ್ರೇಮದ ದುರುಪಯೋಗವಾಗಿರುತ್ತದೆ. ಒಬ್ಬನು ಬಹು ಪರೋಪಕಾರಿಯಾಗಿದ್ದಾನೆ; ತನ್ನಲ್ಲಿದ್ದುದನ್ನೆಲ್ಲವನ್ನೂ ಬಡವರಿಗೂ, ಅನಾಥರಿಗೂ, ದಾನಮಾಡುವ ಭಾವದವನಾಗಿರುವನೆಂದು ತಿಳಿಯುವಾ. ಮತ್ತೊಬ್ಬನು ಅನ್ಯರಿಗೆ ಅನ್ಯಾಯ ಬಗೆದು, ಮೋಸಮಾಡಿ, ತನ್ನ ಸ್ವಾರ್ಥವನ್ನೇ ಸಾಧಿಸುತ್ತಿರುವನೆಂದು ತಿಳಿಯುವಾ. ಹೀಗೆ ಪರಸ್ಪರ ವಿರೋಧವಾದ ಈ ಕೃತಿಗಳಿಗೆ, ಮೂಲ ಭಾವನೆಯು ಮಾತ್ರ ಒಂದೇ ಆಗಿರುವದು. ಪರೋಪಕಾರಿಯಾದ ಮನುಷ್ಯನ ಪ್ರೇಮವು ಅನ್ಯರ ಮೇಲಿದ್ದರೆ, ಸ್ವಾರ್ಥಸಾಧಕನ ಪ್ರೇಮವು ತನ್ನ ಮೇಲಿರುವದು. ಅಂತೂ ಈ ಎರಡೂ ಕಾರ್ಯಗಳಿಗೂ ಮೂಲಕಾರಣವಾಗಿರುವ ಪ್ರೇಮವು ಒಂದೇ ಆಗಿರುವದು. ಸಚ್ಛೀಲ ಮನುಷ್ಯನಲ್ಲಿರುವ ಪ್ರೇಮವು ಯೋಗ್ಯದಿಶೆಯಲ್ಲಿ ಸಾಗಿದರೆ, ದುಶ್ಶೀಲ ಮನುಷ್ಯನಲ್ಲಿಯ ಪ್ರೇಮವು ತಪ್ಪುದಿಶೆಯಲ್ಲಿ ಸಾಗಿರುವದು. ಈ ಪ್ರಕಾರವಾಗಿ ಮಾನವನಲ್ಲಿ ಸ್ವಾಭಾವಿಕವಾಗಿರುವ ಪ್ರೇಮದ ಪ್ರಮೇಯವನ್ನು ತಿಳಿದುಕೊಂಡು ಅದರ ಸದುಪಯೋಗ ಮಾಡಿಕೊಳ್ಳುವದೇ ಭಕ್ತಿಯೋಗವಾಗಿರುವದು.

ಮನುಷ್ಯನಲ್ಲಿ ನೈಸರ್ಗಿಕವಾಗಿರುವ ಮತ್ತು ಸಹಜವಾಗಿರುವ ಪ್ರೇಮವನ್ನೇ ಹೆಂಡತಿಯ ಮೇಲೆ ಇಟ್ಟಿದ್ದಾದರೆ, ಅದಕ್ಕೆ ಮೋಹವೆನ್ನುವರು. ಅದೇ ಪ್ರೇಮವನ್ನೇ ತನ್ನ ಮನೆ, ಹೊಲ, ದನಕರ ಮೊದಲಾದ ಸ್ಥಾವರ ಜಂಗಮ ಆಸ್ತಿಗಳ ಮೇಲೆ ಇಟ್ಟಿದ್ದಾದರೆ, ಅದಕ್ಕೆ ಮಮಕಾರವೆನ್ನುವರು. ಅದೇ ಪ್ರೇಮವನ್ನೇ ಮಕ್ಕಳ ಮೇಲೆ ಇಟ್ಟಿದ್ದಾದರೆ, ಅದಕ್ಕೆ ವಾತ್ಸಲ್ಯವೆನ್ನುವರು. ಅದೇ ಪ್ರೇಮವನ್ನೇ ಗೆಳೆಯರ ಮೇಲೆ ಇಟ್ಟಿದ್ದಾದರೆ, ಅದಕ್ಕೆ ಸ್ನೇಹವೆನ್ನುವರು. ಅದೇ ಪ್ರೇಮವನ್ನೇ ಬಡವರ ಮೇಲೆ ಇಟ್ಟಿದ್ದಾದರೆ, ಅದಕ್ಕೆ ದಯೆಯೆನ್ನುವರು. ಅದೇ ಪ್ರೇಮವನ್ನೇ ತನ್ನ ದೊಡ್ಡಸ್ತಿಕೆಯ ಮೇಲೆ ಇಟ್ಟಿದ್ದಾದರೆ ಅದಕ್ಕೆ ಅಹಂಕಾರವೆನ್ನುವರು. ಅದೇ ಪ್ರೇಮವನ್ನೇ ದುಡ್ಡಿನ ಮೇಲೆ ಇಟ್ಟಿದ್ದಾದರೆ, ಅದಕ್ಕೆ ಲೋಭವೆನ್ನುವರು. ಅದೇ ಪ್ರೇಮವನ್ನೇ ಚಹಾ, ಕಾಫಿ, ಬೀಡಿ, ಸಿಗರೇಟ, ನಶ್ಯ ಮೊದಲಾದವುಗಳ ಮೇಲೆ ಇಟ್ಟಿದ್ದಾದರೆ, ಅವಕ್ಕೆ ಚಟವೆನ್ನುವರು. ಅದೇ ಪ್ರೇಮವನ್ನೇ ಸಿಂದಿ, ಶರೆ, ಗಾಂಜಾ, ಅಫೀಮ ಮೊದಲಾದವುಗಳ ಮೇಲೆ ಇಟ್ಟಿದ್ದಾದರೆ ಅದಕ್ಕೆ ವ್ಯಸನವೆನ್ನುವರು. ಅದೇ ಪ್ರೇಮವನ್ನೇ ಸ್ವಸ್ತ್ರೀಯಳ ಬಿಟ್ಟು

ಪರಸ್ತ್ರೀಯಲ್ಲಿಟ್ಟಿದ್ದಾದರೆ, ಅದಕ್ಕೆ ವ್ಯಭಿಚಾರವೆನ್ನುವರು. ಅದೇ ಪ್ರೇಮವನ್ನೇ ಪರಮಾತ್ಮನ ಮೇಲೆ ಇಟ್ಟಿದ್ದಾದರೆ, ಅದಕ್ಕೆಯೇ ಭಕ್ತಿ, ಭಕ್ತಿ ಎಂದೆನ್ನುವರು.

ಭಕ್ತಿಯೋಗವು ಉಚ್ಚಪ್ರೇಮದ ಶಾಸ್ತ್ರವಾಗಿದೆ. ಪ್ರೇಮಸೂತ್ರದ್ವಾರದಿಂದ ಕೊನೆಗೆ ವಿಶ್ವವ್ಯಾಪಿ ಪ್ರೇಮವನ್ನು ಹಾಗೂ ಬ್ರಹ್ಮಾನಂದವನ್ನು ಹೇಗೆ ಪ್ರಾಪ್ತಿಮಾಡಿಕೊಳ್ಳಬೇಕೆಂಬದನ್ನು ತೋರಿಸಿಕೊಡುವದೇ ಭಕ್ತಿಯೋಗದ ಗುರಿಯಾಗಿದೆ.

ಮಹಾನುಭಾವನಾದ ನಿಜಗುಣ ಶಿವಯೋಗಿಯು, ತನ್ನ ಕೈವಲ್ಯಪದ್ಧತಿಯೊಳಗೆ, "ಆವಕಾಲದೊಳು ಬಳಿಕಾವ ದೇಶದೊಳು ಬೇರಾವ ವಸ್ತುವಿನೊಳಿಡೆ ನೆರೆಯದತಿ ಮಮತೆ" ಆವ ಪರಿಯೊಳು ತನ್ನ ಮೇಲಿರ್ಪುದಂತೆ ಗುರುದೇವತೆಯೊಳನುರಾಗವಿಹುದೆ ನಿಜಭಕ್ತಿ. ಅಂದರೆ ಹಗಲು ರಾತ್ರಿ ಮೊದಲಾದ ಯಾವ ಕಾಲದಲ್ಲಿಯೇ ಆಗಲಿ, ಬಾಲ್ಯ, ತಾರುಣ್ಯ, ಮುಪ್ಪು ಮೊದಲಾದ ವಾರ್ಧಕ್ಯಾದಿ ಆವ ಅವಸ್ಥೆಯಲ್ಲಿಯೇ ಇರಲಿ, ಸ್ವಸ್ಥಲ ಪರಸ್ಥಲಾದಿಯಾಗಿ ಆವ ದೇಶದಲ್ಲಿಯೇ ಇರಲಿ, ಪ್ರಪಂಚದ ಯಾವ ವಸ್ತುವಿನೊಡನೆ ಬೆರತಿದ್ದರೂ ಸಹ ಮಾನವನು ತನ್ನ ಮೇಲಿನ ಪ್ರೀತಿಯನ್ನು ಹೇಗೆ ಮರೆತಿರುವದಿಲ್ಲವೋ, ಹಾಗೆಯೇ ಸತತವಾಗಿ ಪರಮಾತ್ಮನ ಮೇಲೆ ಪ್ರೇಮವನ್ನಿಟ್ಟಿರುವದೇ ಭಕ್ತಿಯೆಂದು ಹೇಳಿರುವನು.

ಹೀಗೆ ಪರಮೇಶ್ವರನಲ್ಲಿ ಅಹೇತುಕವಾಗಿ, ಅಖಂಡವಾಗಿ ಪ್ರೇಮವನ್ನಿಡುವದೇ ಭಕ್ತಿಯೋಗವಾಗಿದ್ದರೂ, ಸ್ವಾಮಿ ವಿವೇಕಾನಂದರು ಹೇಳಿದಂತೆ ಈ ಮಾರ್ಗದಲ್ಲಿಯೂ ಒಂದು ಭೀತಿಯ ಸ್ಥಾನವಿದೆ. ಕೆಳಮಟ್ಟದ ಭಕ್ತಿಯಲ್ಲಿ ಅಥವಾ ಗೌಣೀಯ ಭಕ್ತಿಯಲ್ಲಿ, ಸಂಕುಚಿತ ಭಾವನೆಯ ಭಕ್ತರು ವಿಶೇಷವಾಗಿ ಉದಯಿಸುವ ಸಂಭವವಿದೆ. ಜಗತ್ತಿನೊಳಗಿನ ಎಲ್ಲ ಧರ್ಮಗಳಲ್ಲಿಯೂ ಇಂಥ ಸಂಕುಚಿತ ಭಾವನೆಯ ಭಕ್ತರು ಧರ್ಮದ ಹೆಸರಿನ ಮೇಲೆ ಅತ್ಯಾಚಾರಗಳನ್ನು ಮಾಡಿದ ಉದಾಹರಣೆಗಳು ಇತಿಹಾಸದಲ್ಲಿ ವಿಪುಲವಾಗಿ ಸಿಗುತ್ತವೆ. ಅವೆಲ್ಲ ಗೌಣೀಭಕ್ತಿಯಲ್ಲಿದ್ದವರ ಕೃತಿಗಳಾಗಿವೆ. ತನ್ನ ಪ್ರೀತಿಯ ವಿಷಯವಾದ ಇಷ್ಟದೇವತೆಯಲ್ಲಿ ಪೂಜ್ಯಭಾವನೆಯನ್ನು ಮತ್ತು ದೃಢವಾದ ನಿಷ್ಠೆಯನ್ನು ಇಡದ ಹೊರತು ಭಕ್ತಿಯು ನಿರ್ಮಾಣವಾಗಲು ಸಾಧ್ಯವಿಲ್ಲ. ಆದರೆ ತನ್ನ ಇಷ್ಟದೇವತೆಯಲ್ಲಿರುವ ಪೂಜ್ಯಭಾವವು ಅನ್ಯರ ಪೂಜ್ಯವಸ್ತುಗಳ ವಿಷಯದಲ್ಲಿ ಅನಾ

ಪರಕೆಯನ್ನುಂಟು ಮಾಡುವದಕ್ಕೆ ಕಾರಣವಾಗಿರುವದು ಕಂಡುಬರುತ್ತದೆ. ಯಾವ ಸಾಧಕನಲ್ಲಿ ಪರಾಭಕ್ತಿಯು ಇನ್ನೂ ಪ್ರಾರಂಭವಾಗಿರುವದಿಲ್ಲವೋ ಅಂಥ ಗೌಣೀ ಭಕ್ತಿಯ ಜನರು ಸ್ವಕೀಯ ದೇವತಾ ವಿಷಯದಲ್ಲಿ ಧರ್ಮದ ವಿಷಯದಲ್ಲಿ ದ್ವೇಷವನ್ನೂ, ತಿರಸ್ಕಾರವನ್ನೂ, ತೋರಿಸುತ್ತಿರುತ್ತಾರೆ. ಇಂಥವರು ಶ್ವಾನನಿಗಿಂತ ಅಲ್ಪ ಬುದ್ಧಿಯವರೆಂದು ಹೇಳಬಹುದು.

ಶ್ವಾನವು ತನ್ನ ಒಡೆಯನ ವಸ್ತುಗಳನ್ನು ಯಾರೂ ಸ್ಪರ್ಶವೂ ಕೂಡ ಮಾಡದಂತೆ ದಕ್ಷತೆ ವಹಿಸಲು ಯಾವ ಪ್ರೇಮವನ್ನು ತೋರಿಸುತ್ತಿರುವದೋ, ಅದು ಅವರ ಜನ್ಮಜಾತಗುಣವಾಗಿರುತ್ತವೆ. ಆದರೆ ಶ್ವಾನಿನ ಈ ಹುಟ್ಟುಗುಣವು ಸಂಕುಚಿತಭಾವನೆಯ ಭಕ್ತರಗಿಂತಲೂ ಶ್ರೇಷ್ಠವಾದುದೆಂದು ಹೇಳಬಹುದಾಗಿದೆ. ತನ್ನ ಯಜಮಾನನು ಯಾವ ವೇಷದಲ್ಲಿಯೇ ಇರಲಿ, ಅಥವಾ ವೇಷವಿಲ್ಲದೆ ತೆರೆದ ಮೈಯಿಂದಿರಲಿ, ಅತಏವ, ಆತನು ಬೇರಾದ ರೀತಿಯಲ್ಲಿದ್ದರೂ ಆತನನ್ನು ಅದು ಎಂದೂ ಶತ್ರುಭಾವದಿಂದ ನೋಡುವದಿಲ್ಲ ತನ್ನ ಒಡೆಯನೆನ್ನುವ ಭಾವವನ್ನು ಮರೆಯುವದಿಲ್ಲ. ಆದರೆ ಸಂಕುಚಿತ ಭಾವನೆಯ ಭಕ್ತರು, "ಏಕಂ ಸದ್ವಿಪ್ರಾ ಬಹುಧಾ ವದಂತಿ ಎಂಬ ಶ್ರುತಿವಾಕ್ಯದಂತೆ, ಹರ, ಹರಿ, ಅಲ್ಲಾ, ಗಾಡ್ ಮೊದಲಾದ ಎಲ್ಲ ನಾಮಗಳು ಒಬ್ಬ ಪರಮೇಶ್ವರನನ್ನು ಕುರಿತು ಹೇಳಿದವುಗಳಾಗಿವೆಯೆಂಬುದನ್ನು ತಿಳಿಯದೆ, ಪರರ ಧರ್ಮ ಹಾಗೂ ದೇವತೆಗಳ ಬಗೆಗೆ ಅನಾಚಾರಗಳನ್ನೂ ಅತ್ಯಾಚಾರಗಳನ್ನೂ ಮಾಡುತ್ತಿರುವದನ್ನು ನೋಡಿದರೆ ಶ್ವಾನನಗಿಂತಲೂ ಇವರ ಬುದ್ಧಿ ಹೀನವಾದುದೆಂದು ಸ್ಪಷ್ಟವಾಗಿ ತಿಳಿಯುವದಿಲ್ಲವೆ? ಸಮಾಜದಲ್ಲಿ ಇಂಥ ಸಂಕುಚಿತ ಭಾವನೆಯ ಭಕ್ತರೇ ವಿಶೇಷನಾಗಿರುವರು. ಪೂರ್ಣ ಭಕ್ತನು ಅಥವಾ ಪರಾಭಕ್ತಿಯುಳ್ಳವನು ಒಬ್ಬ ಪರಮಾತ್ಮನ ಸ್ವರೂಪವೇ ಅನೇಕರಿಗೆ ಅವರವರ ಭಾವನೆಗನುಸರಿಸಿ ಅನೇಕರಿಗೆ ಅವರವರ ಭಾವನೆಗನುಸರಿಸಿ ಅನೇಕ ಪ್ರಕಾರವಾಗಿ ಪ್ರತೀತಿಯಾಗಿದೆಯೆಂದೂ, ಮತ್ತು ಈಶ್ವರನ ವಿಷಯದಲ್ಲಿರುವ ಅನೇಕ ಪ್ರಕಾರವಾದ ವರ್ಣನೆಗಳು ಒಬ್ಬ ಪರಮೇಶ್ವರನ ವರ್ಣನೆಯೇ ಆಗಿದೆಯೆಂದೂ ನಂಬುರುತ್ತಾನೆ. ಒಬ್ಬ ದೇವನೇ ಅನೇಕ ನಾಮಗಳಿಂದಲೂ, ರೂಪಗಳಿಂದಲೂ ಭಕ್ತರ ಇಚ್ಛಾನುಸಾರವಾಗಿ ಹೇಳಿಸಿಕೊಳ್ಳುವನೆಂದೂ, ಕಾಣಿಸಿಕೊಳ್ಳುವನೆಂದೂ ತಿಳಿದ ಭಕ್ತನು ಅನ್ಯರ ಧರ್ಮ ಹಾಗೂ ದೇವತೆಗಳ ಬಗೆಗೆ

ಶಿಲಮಾತ್ರವಾದರೂ ದ್ವೇಷ, ಅಸೂಯಾದಿಗಳನ್ನು ತೋರಿಸದೆ, ಆದರತೆಯನ್ನೇ ವ್ಯಕ್ತಮಾಡುತ್ತಿರುತ್ತಾನೆ. ಆದರೆ ಕೆಲವು ಡಾಂಭಿಕರು ಅನ್ಯ ಧರ್ಮಗಳ ವಿಷಯದಲ್ಲಿ ತಾವು ಬಹು ಉದಾರಭಾವವುಳ್ಳವರೆಂದು ತೋರಿಸುವದಕ್ಕಾಗಿ ಮೂರ್ಖತನದಿಂದ ಅನೇಕ ಮಾರ್ಗಗಳಲ್ಲಿ ಈ ಕಡೆಯಿಂದ ಆ ಕಡೆಗೆ, ಆ ಕಡೆಯಿಂದ ಈ ಕಡೆಗೆ ಯಾವದೊಂದು ಧ್ಯೇಯವಿಲ್ಲದೆ ಓಡಾಡುತ್ತಿದ್ದರೆ ಇವರು ನಿಜವಾದ ಭಕ್ತರಾಗಲು ಯೋಗ್ಯರಲ್ಲವೆಂದು ತಿಳಿಯಬೇಕು. ಕಾರಣವೇನೆಂದರೆ, ಆಗ ತಾನೇ ಭೂಮಿಯಿಂದ ಅಂಕುರಿಸುತ್ತಿರುವ ವೃಕ್ಷದಸುತ್ತಲೂ ಬೇಲಿಯನ್ನಿಡುವದು ಅವಶ್ಯಕವಾಗಿರುವಂತೆ, ಭಕ್ತಿಮಾರ್ಗದಲ್ಲಿ ಸಾಗುತ್ತಿರುವ ಸಾಧಕನ ಸೂಕ್ಷ್ಮ ಮನಸ್ಸು, ಅನೇಕ ಪ್ರಕಾರವಾದ ಕಲ್ಪನೆಗಳಲ್ಲಿ, ಧ್ಯೇಯಗಳಲ್ಲಿ ತೊಡಗುವದು ಅಪಾಯಕರವಾದುದು. ಒಂದು ಸ್ಥಲದಲ್ಲಿ ಬಿತ್ತಿದ ಬೀಜವನ್ನು ಅಲ್ಲಿಯೇ ಇಟ್ಟರೆ ಅದು ಮೊಳೆತು, ಸಸಿಯಾಗಿ, ಬೇರುಬಿಟ್ಟು ಹೇಗೆ ಗಿಡವಾಗಿ ಫಲವನ್ನು ಕೊಡುತ್ತಿದೆಯೋ ಹಾಗೆಯೇ ಭಕ್ತಿಯೆಂಬ ಬೀಜವನ್ನು ಇಷ್ಟಮೂರ್ತಿಯೆಂಬ ಒಂದೇ ಸ್ಥಳದಲ್ಲಿ ಇರಿಸಿದರೇನೇ ಆ ಭಕ್ತಿಯು ಅಂಕುರಿಸಿ ಫಲವನ್ನುಂಟುಮಾಡುವದು. ಎಲ್ಲ ಭೂಮಿಯು ಒಂದೇಯೆಂದು, ಒಂದು ಸ್ಥಳದಲ್ಲಿ ಬಿತ್ತಿದ ಬೀಜವನ್ನು ತೆಗೆದು ಮತ್ತೊಂದು ಸ್ಥಳದಲ್ಲಿಟ್ಟು, ಮತ್ತೆ ಅಲ್ಲಿಂದ ತೆಗೆದುಕೊಂಡು ಇನ್ನೊಂದು ಸ್ಥಳಕ್ಕೆ ಹಾಕುತ್ತಹೋದರೆ ಹೇಗೆ ಆ ಬೀಜವು ಮೊಳೆತು ಸಸಿಯಾಗಿ ಫಲವನ್ನು ಕೊಡುವದಿಲ್ಲವೋ, ಹಾಗೆಯೇ ಭಕ್ತಿಯ ಬೀಜವನ್ನು ನಾನಾ ಮೂರ್ತಿಗಳೆಂಬ ಬೇರೆ ಬೇರೆ ಸ್ಥಳದಲ್ಲಿಡುತ್ತ ಹೋದರೆ, ಆ ಭಕ್ತಿಯಿಂದ ಮೋಕ್ಷವೆಂಬ ಫಲವು ದೊರೆಯುವದಿಲ್ಲ. ಆದಕಾರಣ ಒಂದೇ ಮೂರ್ತಿಯಲ್ಲಿಯೇ ಭಕ್ತಿಯನ್ನಿಡುವದು ವಿಹಿತವಾಗಿದೆ. ಅದಕ್ಕಾಗಿಯೇ ಬಸವೇಶ್ವರನು,—

"ದೇವನೊಬ್ಬ ನಾಮ ಹಲವು। ಪರಮಪತಿವ್ರತೆಗೆ ಗಂಡನೊಬ್ಬ।
ಮತ್ತೊಂದಕ್ಕೆರಗಿದರೆ ಕಿವಿ ಮೂಗು ಕೊಯ್ಯುವನು। ಹಲವು ದೇವ
ರೆಂಜಲತಿಂಬುವರನೇನೆಂಬೆ ಕೂಡಲಸಂಗಮದೇವಾ।

ಅಂದರೆ ಒಬ್ಬ ಮನುಷ್ಯನಿಗೆಯೇ ಪತ್ನಿಯು ಪತಿಯೆಂತಲೂ, ತಮ್ಮನು ಅಣ್ಣನೆಂತಲೂ, ಅಣ್ಣನು ತಮ್ಮನೆಂತಲೂ, ಮಗನು ತಂದೆಯೆಂತಲೂ, ತಂದೆಯು ಮಗನೆಂತಲೂ, ಸೊಸೆಯು ಮಾವನೆಂತಲೂ ಹೀಗೆ ಅನೇಕ ಹೆಸರುಗಳಿಂದ ಕರೆಯುತ್ತಾರೆಯೋ ಹಾಗೆಯೇ ವಿಶ್ವವ್ಯಾಪಿಯಾದ ಪರಮಾತ್ಮ

ನೊಬ್ಬನಿಗೇನೇ ಅನೇಕ ಹೆಸರುಗಳಿಂದ ಕರೆಯುತ್ತಾರೆ. ಯಾರು ಯಾವ ಹೆಸರಿನಿಂದ ಪ್ರಾರ್ಥಿಸಿದರೂ ಆ ಪ್ರಾರ್ಥನೆಯು ಪರಬ್ರಹ್ಮಕ್ಕೇನೇ ಮುಟ್ಟುತ್ತದೆ. ಆದರೂ ಭಕ್ತನು ತನ್ನ ಇಷ್ಟಮೂರ್ತಿಯಲ್ಲಿಯೇ ನಿಷ್ಠೆಯುಳ್ಳವನಾಗಿರಬೇಕು. ಲೋಕದಲ್ಲಿರುವ ಎಲ್ಲ ಪುರುಷರು ತನ್ನ ಪತಿಯಂತೆಯೇ ಪುರುಷರಾಗಿದ್ದರೂ ಪತಿವ್ರತೆಯಾದ ಸ್ತ್ರೀಯಳು ಹೇಗೆ ತಾನು ಲಗ್ನವಾದ ಪುರುಷನನ್ನು ಮಾತ್ರ ಪತಿಯೆಂದು ಭಾವಿಸಿ, ಪತಿಭಕ್ತಿಯನ್ನು ಆತನಲ್ಲಿ ಮಾತ್ರ ಇಡುತ್ತಾಳೆಯೋ ಹಾಗೆಯೆ ಭಕ್ತನು ತನ್ನ ಇಷ್ಟದೇವತೆಯಂತೆ ಅನ್ಯರ ಇಷ್ಟಮೂರ್ತಿಗಳು ದೇವತೆಗಳೇ ಎಂದು ತಿಳಿದುಕೊಂಡರೂ, ತನ್ನಿಷ್ಟವ ಮೂರ್ತಿಯಲ್ಲಿಯೇ ನೈಷ್ಠಿಕ ಭಕ್ತಿಯನ್ನು ನೆಲೆಗೊಳಿಸಬೇಕು ಎಂದು ಹೇಳಿರುವನು.

ತುಲಸಿ ರಾಮಾಯಣದಲ್ಲಿ ಹನುಮಂತನು "ಜಾನಕೀನಾಥನು ಮತ್ತು ಶ್ರೀನಾಥನು ಒಂದೇ ರೂಪದ ಎರಡು ಅವತಾರಗಳೆಂದು ನನಗೆ ಪೂರ್ಣವಾಗಿ ಗೊತ್ತಿದೆ. ಆದರೂ ಕಮಲನಯನನಾದ ರಾಮನ ಮೂರ್ತಿಯೇ ನನ್ನ ಹೃದಯದಲ್ಲಿ ವಾಸವಾಗಿರುವದೆಂದೂ, ಸರ್ವರ ರಾವ, ರೂಪವೇ ನನಗೆ ಕಾಣುತ್ತಿರುವದೆಂದೂ" ಹೇಳಿರುವ ಮಾತು ಭಕ್ತಿಯೋಗದ ಮೂಲ ಸೂತ್ರವೇ ಆಗಿದೆ. ಸರ್ವರ ಕೂಡ ಸರ್ವರ ಹೆಸರು ತಕ್ಕೊಳ್ಳಬೇಕು. ಎಲ್ಲದಕ್ಕೂ ಹೌದು, ಹೌದು ಅನ್ನಬೇಕು. ಆದರೆ ಸ್ವಕೀಯವಾದ ಧ್ಯೇಯವನ್ನು ಮಾತ್ರ ಯಾವಾಗಲೂ ಬಿಟ್ಟಿರಬಾರದು. ಇದೇ ಭಕ್ತಿಯೋಗದ ರಹಸ್ಯವಾಗಿದೆ.

ಭಕ್ತಿಯೋಗವು ಪರಿಪೂರ್ಣತೆಯನ್ನು ಹೊಂದಬೇಕಾದರೆ ಭಕ್ತನಲ್ಲಿ ಪರಮಾತ್ಮನ ಬಗೆಗೆ ಇನ್ನೊಂದು ಭಾವವು ಪ್ರಕಟವಾಗುವದು. ಅದಕ್ಕೆ ವಿರಹ ಭಕ್ತಿಯೆಂತಲೂ, ಮಧುರ ದುಃಖವೆಂತಲೂ ಕರೆಯುವರು. ಪರಮೇಶ್ವರನ ದರ್ಶನವಾಗಲೊಲ್ಲದೆಂಬುವ ವಿರಹದಿಂದ ಭಕ್ತನು ಅತ್ಯಂತ ವ್ಯಾಕುಲನಾಗುವನು; ದುಃಖಿಯಾಗುವನು; ದುಮ್ಮಾನಗೊಳ್ಳುವನು. ಅವನಿಗ ಯಾವ ವಿಷಯದಲ್ಲಿಯೂ ಸುಖವೆನಿಸುವದಿಲ್ಲ. ಪರಮಾತ್ಮನ ಹೊರ್ತು ಅನ್ಯ ಯಾವ ವಸ್ತುವಿನ ದರ್ಶನವಾದರೂ ಅವನ ಸಮತೋಲನವು ತಪ್ಪಿಬಿಡುತ್ತದೆ. ಲೌಕಿಕರ ಪ್ರೇಮದಲ್ಲಿಯೂ ಕೂಡ ಈ ಪ್ರಕಾರವಾದ ವಿರಹವು ನಮಗೆ ಕಾಣುತ್ತಿರುವದು. ಒಬ್ಬ ಪುರುಷನು ಒಬ್ಬ ಸ್ತ್ರೀಯಳಲ್ಲಿ ಅಥವಾ ಒಬ್ಬ ಸ್ತ್ರೀಯಳು ಒಬ್ಬ ಪುರುಷನಲ್ಲಿ ಅತಿಶಯವಾದ

ಅನುರಾಗವನ್ನಿಟ್ಟಿದ್ದಾದರೆ ತನ್ನ ಪ್ರೀತಿಯ ವ್ಯಕ್ತಿಗಳ ವಿನಾ ಇತರರ ದರ್ಶನವು ಅವರಿಗೆ ಅಸಹ್ಯವಾಗಿ ತೋರುತ್ತದೆ. ಅದರಂತೆ ಪರಾಭಕ್ತಿಯ ಉದ್ರೇಕವು ಮನಸ್ಸಿನಲ್ಲುಂಟಾದರೆ ಪರಮಾತ್ಮನ ವಿನಾ ಬೇರೆ ಯಾವ ವಸ್ತುವಿನ ಸಂಪರ್ಕವೂ ಕೂಡ ಆ ಭಕ್ತನಿಗೆ ಸಹಿಸುವದಾಗುವದಿಲ್ಲ. ಅವನು ನೆನಸಿದಲ್ಲಿಯೂ, ಕನಸಿನಲ್ಲಿಯೂ ಪರಮಾತ್ಮನ ಚಿಂತನೆಯನ್ನೇ ಮಾಡುತ್ತಿರುವನು. ಶ್ರವಣ, ಕೀರ್ತನ, ಸ್ಮರಣೆ ಮೊದಲಾದ ನವವಿಧ ಭಕ್ತಿಯಲ್ಲಿಯೇ ಕಾಲಕಳೆಯುವನು. ಚೈತನ್ಯ, ಬಸವ, ಅಕ್ಕ ಮಹಾದೇವಿ, ಮೀರಾಬಾಯಿ ರಾಮಕೃಷ್ಣ ಪರಮಹಂಸ ಮೊದಲಾದವರು ಈ ಪರಾಭಕ್ತಿಗೆ ಆದರ್ಶಮೂರ್ತಿಗಳಾಗಿರುತ್ತಾರೆ. ಇದೇ ಭಕ್ತಿಯೋಗದ ಕೊನೆಯ ಮೆಟ್ಟಲು.

ಇಂಥ ಭಗವದ್ಭಕ್ತರಿಗೆ ಲೋಕದ ಜನರು "ಹುಚ್ಚರು" ಎಂದು ಸಂಬೋಧಿಸುವರು. ಆದರೆ ಚನ್ನಾಗಿ ವಿಚಾರಮಾಡಿ, ವಿಮರ್ಶೆ ಮಾಡಿ ನೋಡಿದರೆ ಇಡೀ ಪ್ರಪಂಚವೇ ಹುಚ್ಚರ ಆಸ್ಪತ್ರೆಯಾಗಿದೆಯೆಂದು ನಿಚ್ಚಳವಾಗಿ ಕಂಡುಬರುವದು. ಪ್ರಪಂಚದಲ್ಲಿರುವ ಪ್ರತಿಯೊಬ್ಬ ಮಾನವನಿಗೂ ಒಂದಿಲ್ಲೊಂದು ಪ್ರಕಾರದ ಹುಚ್ಚು ಹಿಡಿದೇ ಇರುವದು. ಕೆಲವರಿಗೆ ಹೆಂಣಿನ ಹುಚ್ಚು, ಕೆಲವರಿಗೆ ಗಂಡಿನ ಹುಚ್ಚು, ಕೆಲವರಿಗೆ ಹೊನ್ನಿನ ಹುಚ್ಚು, ಕೆಲವರಿಗೆ ಮಂಣಿನ ಹುಚ್ಚು, ಕೆಲವರಿಗೆ ಮಕ್ಕಳ ಹುಚ್ಚು, ಕೆಲವರಿಗೆ ಅಧಿಕಾರದ ಹುಚ್ಚು, ಕೆಲವರಿಗೆ ಉಡುಪಿನ ಹುಚ್ಚು, ಕೆಲವರಿಗೆ ಕೀರ್ತಿಯ ಹುಚ್ಚು, ಕೆಲವರಿಗೆ ಚಟಗಳ ಹುಚ್ಚು, ನನಗೆ ರೇಡಿಯೋದಲ್ಲಿ ಭಾಷಣಮಾಡುವ ಹುಚ್ಚು, ನಿಮಗೆ ರೇಡಿಯೋದಲ್ಲಿ ಕೇಳಬೇಕೆಂಬುವ ಹುಚ್ಚು ಅಂತೂ ಮನುಷ್ಯಮಾತ್ರಕ್ಕೆಲ್ಲ ಒಂದಿಲ್ಲೊಂದು ರೀತಿಯ ಹುಚ್ಚು ತನ್ನ ಬಡಕೊಂಡದ್ದೇ ಕಂಡುಬರುವದರಿಂದ ಭಗವದ್ಭಕ್ತರಿಗೆ ದೇವರ ಹುಚ್ಚುಹಿಡಿದಿದೆಯೆನ್ನುವದರಲ್ಲಿ ಯಾವ ದೋಷವೂ ಇಲ್ಲ. ಆದರೆ ಉಳಿದವರ ಹುಚ್ಚು ಕ್ಷಣಿಕ ಸುಖದಾಯಕವಾದ ಮಿಥ್ಯ ವಸ್ತುಗಳಿಗಾಗಿರುವದು. ಭಕ್ತರ ಹುಚ್ಚು ಮಾತ್ರ, ಅತ್ಯಂತ ದುಃಖನಿವೃತ್ತಿ ಪರಮಾನಂದ ಪ್ರಾಪ್ತಿಗೆ ಕಾರಣನಾದ ಪರಮಾತ್ಮನ ಕೂಡುವದಾಗಿರುವದು.

ಇಂಥ ಹುಚ್ಚುಹಿಡಿದ ಜೀವನವೇ ಪುಣ್ಯಜೀವನವು; ಪವಿತ್ರ ಜೀವನವು; ಕಡೆಯ ಜೀವನವು. ಹೀಗೆ ದೇವರ ಹುಚ್ಚುಹಿಡಿದ ಭಕ್ತನನ್ನು

ಕುರಿತು ಶ್ರೀಕೃಷ್ಣನು ಗೀತೆಯ ೯ನೇ ಅಧ್ಯಾಯದ ೩೧ನೇ ಶ್ಲೋಕದಲ್ಲಿ "ಕ್ಷಿಪ್ರಂ ಭವತಿ ಧರ್ಮಾತ್ಮಾ ಶಶ್ವಚ್ಛಾಂತಿಂ ನಿಗಚ್ಛತಿ । ಕೌಂತೇಯ ಪ್ರತಿಜಾನೀಹಿ ನಮೆ ಭಕ್ತಃ ಪ್ರಣಶ್ಯತಿ ॥"

ಅಂದರೆ ಭಗವದ್ಭಕ್ತನು ಭಕ್ತಿಯ ಸಮಕಾಲದಲ್ಲಿಯೇ ಧರ್ಮಾತ್ಮನಾಗಿ ಶಾಶ್ವತವಾದ ಅಮರ ಶಾಂತಿಯನ್ನು ಹೊಂದುವನೆಂದು ಪ್ರತಿಜ್ಞಾಪೂರ್ವಕವಾಗಿ ತಿಳಿದುಕೊಳ್ಳು ಎಂದು ಹೇಳಿದ್ದಾನೆ. ಅದರಂತೆ ಬಸವೇಶ್ವರನೂ ಸಹ "ವೇದಪ್ರಿಯನೆಂಬರು ಶಿವನು ವೇದಪ್ರಿಯನಲ್ಲವಯ್ಯ; ನಾದಪ್ರಿಯನೆಂಬರು ಶಿವನು ನಾದಪ್ರಿಯನಲ್ಲವಯ್ಯ ! ವೇದವನೋದಿದ ಬ್ರಹ್ಮನ ತಲೆ ಹೋಯಿತ್ತು । ನಾದವ ನುಡಿಸಿದ ರಾವಣಂಗೆ ಅರೆ ಆಯುಷ್ಯ ಆಯಿತ್ತು । ವೇದಪ್ರಿಯನು ಅಲ್ಲ ನಾದಪ್ರಿಯನು ಅಲ್ಲ ಭಕ್ತಿಪ್ರಿಯ ನಮ್ಮ ಕೂಡಲಸಂಗಮದೇವಾ । ಎಂಬುದಾಗಿ ಡಂಗುರ ಸಾರಿದ್ದಾನೆ.

## ಕೊನೆಯ ಮಾತು

ಒಬ್ಬ ಮಹಾನುಭಾವರ ಅನುಭವದುಕ್ತಿಯಂತೆ ಭಕ್ತಿಯ ಶಕ್ತಿಯೆಂದರೆ ದೇವರಿಗೆ ಶರಣಾಗುವದು. ಆತ್ಮವು ಭಕ್ತಿಯಾಗಬೇಕು. ತನ್ನನ್ನು ಮರೆತು ದೇವನಲ್ಲಿ ಬೆರೆತುಕೊಳ್ಳಬೇಕು. ಅಂದರೆ ಎಲ್ಲವೂ ಸರಿಹೋಗುವದು. ಕಷ್ಟನಷ್ಟಗಳು ಕಾಣವು. ಅಸಾಧ್ಯವು ಸಾಧ್ಯವಾಗುವದು. ನಮ್ರವಾಗಿ ನಡೆಯಬೇಕು. ಸೊಕ್ಕು ಠಕ್ಕುಗಳು ತಕ್ಕುದಲ್ಲ ದೇವನಲ್ಲಿ. ಹೊಳೆಯಲ್ಲಿ ಹೊಳೆಯುವ ಮತ್ಸ್ಯವನ್ನು ನೋಡಬೇಕು. ಜಲವೇ ಅದರ ಜೀವನವಾಗಿರುವದು. ಮೀನು ನೀರಿಲ್ಲದೆ ನಲಿಯದು. ಜಲವಿಲ್ಲದೆ ಜೀವಿಸದು. ಇಷ್ಟೇ ಅಲ್ಲ, ನೀರಿಲ್ಲದ ನೆಲದಲ್ಲಿ ತೊಳಲುವದು, ಬಳಲುವದು, ವಿಲಿವಿಲಿ ಒದ್ದಾಡುವದು ಕಡೆಗೆ ನೀರಿಗಾಗಿ ತಡವಿಲ್ಲದೆ ಮಡಿಯುವದು. ಇದೇ ಜಲದಲ್ಲಿಯ ಮೀನಿನ ಭಕ್ತಿ. ಅಂತೆಯೇ ಹೊಳೆಯಾದರೂ ಮೀನಿಗೆ ಮನಬಂದಂತೆ ಬಳಿಕೆ ಮಾಡಿಕೊಡುವದು. ಮೀನು ಮಹಾ ಪ್ರವಾಹದಲ್ಲಿಯೂ ನೀರಿನ ಇದಿರು ಈಸುವದು. ಅದೇ ಗುಡ್ಡದಂಥ ಮದ್ದಾನೆಯು ನದಿಯಲ್ಲಿ ಇದಿರು ಈಸಲು ಹೋಗಿ, ತೆರೆಯ ಹೊಡೆತಕ್ಕೆ ಕಾಲುಮೇಲಾಗಿ, ಸೊಂಡಿಲು ಕೆಳಗಾಗಿ, ಹೊರಳುತ್ತ ಉರುಳುತ್ತ,

ಹೋಳಿಯ ತಳಕ್ಕೆ ಸಿಕ್ಕು ಸಾಯುವದು. ಇದು ಸೊಕ್ಕಿನ ಸಾವು; ಗರ್ವ ಗಂಡಾಂತರ. ಮೀರಿನದು ವಿನಯದ ವಿಜಯವು; ಭಕ್ತಿಯೋಗದ ಭಾಗ್ಯವು ಇಂಥ ಭಕ್ತಿಯೋಗದ ಅನುಭವವನ್ನು ಭಾರತೀಯರೆಲ್ಲರಿಗೂ ಭಗವಂತನು ಅನುಗ್ರಹ ಮಾಡಲೆಂದು ಪ್ರಾರ್ಥಿಸಿ ಭಾಷಣ ಪೂರೈಸುವೆನು.

( ಧಾರವಾಡ ಬಾನುಲಿ ಒಡೆಯರ ಅನುಮತಿಯಿಂದ ಲೇಖಕರಿಂದ ಪ್ರಸಿದ್ಧಿಸಲ್ಪಟ್ಟಿದೆ. )

---

## ಏಳುನೂರಾ ಎಪ್ಪತ್ತು ಅಮರಗಣಂಗಳ ಪೂಜಾಮಹೋತ್ಸವ

**ಯದಾಯದಾಹಿ ಧರ್ಮಸ್ಯ ಗ್ಲಾನಿರ್ಭವತಿ ಭೂತಲೇ।**
**ತದಾತದಾವತಾರೋಯಂ ಗಣೇಶಸ್ಯ ಮಹೀತಲೇ॥**
**(ಶಿವಾಗಮ)**

ಶ್ರೀಮನ್ನಿರಂಜನ ಪರಮಪೂಜ್ಯ ಶ್ರೀ ಬಂಥನಾಳ ಮಹಾ ಶಿವ ಯೋಗಿಗಳವರ ಕೃಪಾಶೀರ್ವಾದ ಬಲದಿಂದ ವಿಜಾಪೂರ ಜಿಲ್ಲಾ ಲಿಂಗಾಯತ ವಿದ್ಯಾವರ್ಧಕ ಸಂಘದ ಪರವಾಗಿ ಹೊರಡಿಸಿದಪ್ರಕಟನೆ.



ಸಾಮೂಹಿಕ ಜೀವನವನ್ನು ಸಾಗಿಸುತ್ತಿರುವ ಮಾನವ ಜನಾಂಗವು ಉದಾತ್ತವಾದ ನೈತಿಕ, ಧಾರ್ಮಿಕ, ಸಾಮಾಜಿಕ ಬಲವನ್ನು ಸಾಧಿಸಬೇಕಾದರೆ ಪುಣ್ಯಪುರುಷರ, ಮಹಾವಿಭೂತಿಗಳ ಸ್ಮರಣೆಯು ಮೇಲಿಂದ ಮೇಲೆಬೇಕು. ಕಾಲ ಕಾಲಕ್ಕೆ ಅವರು ನಿರೂಪಿಸಿ ಹೋದ ತತ್ವಾವಬೋಧೆಯೇ ಜೀವನಶ್ರೇಯೋ ಮಾರ್ಗದಲ್ಲಿ ಜನಜಂಗುಳಿಯನ್ನು ಕೈಹಿಡಿದುಕರೆದೊಯ್ಯುವ ಕರುಣಾಳು ಬೆಳಕಾಗಬೇಕು. ಹಿಂದಿನ ಆದರ್ಶ ಜೀವಿಗಳೇ ಇಂದಿನವರ ಬಾಳಬಟ್ಟೆಯ ಕೈಪಿಡಿಯಾಗಬೇಕಲ್ಲವೇ? ಜಾಗತಿಕ ಧಾರ್ಮಿಕ ದರ್ಶನಗಳೆಲ್ಲ ಒಂದು ದೃಷ್ಟಿಯಿಂದ ಈ ರೀತಿಯಾದ ಕೈಪಿಡಿಗಳೇ ಸರಿ.

ಧರ್ಮವೆಂದರೆ ಮಾನವನನ್ನು ಉಚ್ಚಸಂಸ್ಕಾರದಿಂದ ಉದಾತ್ತಗೊಳಿಸುವ—ಮಾನವ ಹೃದಯವನ್ನು ವಿಕಾಸಗೊಳಿಸಿ, ಪರಿಪಕ್ವಗೊಳಿಸಿ, ಸಂಪೂರ್ಣ ಪರಿವರ್ತನೆಯನ್ನು ಹೊಂದುವಂತೆ ಮಾಡಿ—ಆತ್ಮವಿಕಾಸವನ್ನು ಸಾಧಿಸಲು ಸಹಾಯಕಾರಿಯಾಗುವ ಒಂದು ಸಾಧನವೆಂದು ಹೇಳಬಹುದು. ಅದರಲ್ಲಿ ಭಕ್ತಿ, ನಿಷ್ಠೆ, ಸತ್ಯ. ಜ್ಞಾನ, ವೈರಾಗ್ಯ ಮೊದಲಾದುವುಗಳೆಲ್ಲ ಅಡಕವಾಗಿರುತ್ತವೆ. ಇಂತಹ ಉದಾತ್ತ ತಳಹದಿಯುಳ್ಳ ಧರ್ಮಗಳಲ್ಲಿ ಲಿಂಗಾಂಗ ಸಾಮರಸ್ಯದ ತತ್ವವನ್ನು ಎತ್ತಿಹೇಳುವ ಷಟ್‌ಸ್ಥಲ-ಅಷ್ಟಾವರಣಗಳ, ಪಂಚಾಚಾರಗಳ ಕಲ್ಪನೆಯುಳ್ಳ ವೀರಶೈವ ಧರ್ಮವೂ ಒಂದೆಂದು ಹೇಳಬೇಕಾಗುತ್ತದೆ. ಈ ಧರ್ಮಕ್ಕೆ ಕಾರಣಪುರುಷರೆನಿಸಿಕೊಂಡ ಬಸವಾದಿ ಏಳನೂರಾ ಎಪ್ಪತ್ತು ಅಮರಗಣಂಗಳನ್ನು ಮಾನವರಾದ ನಾವು ಎಷ್ಟು ಹೊಗಳಿದರೂ ಎಷ್ಟು ಪೂಜಿಸಿದರೂ ತೀರದು.

೧೧-೧೨ನೆಯ ಶತಮಾನಗಳಲ್ಲಿ, ಸಂಸ್ಕಾರ ವಿರಹಿತರಾದ ಮಾನವರನ್ನು ಅಂದರೆ ಭವಿಗಳನ್ನು ಭಕ್ತರನ್ನಾಗಿಮಾಡಿ, ಕಾಯಕತ್ವವನ್ನು ಬೆಳಗಿಸಿ, ಸತ್ಯ; ಅಹಿಂಸೆ, ನೀತಿ, ನಿಷ್ಠೆ, ತ್ಯಾಗಬುದ್ಧಿಗಳು ಮಾನವ ಸಮಾಜದಲ್ಲಿ ನೆಲೆಗೊಂಡು ನಿಲ್ಲುವಂತೆ ಮಾಡಿದ ಪ್ರಮಥರು ಜಗತ್ತಿನ ಯಾವ ಮಹಾಪುರುಷರಿಗಿಂತಲೂ ಕಡಿಮೆ ತರಗತಿಯವರಲ್ಲ. ಅಬ್ರಾಹಂಲಿಂಕನ್ನನು ಪಾರುಣ ದಾಸ್ಯದಲ್ಲಿ ತೊಳಲುತ್ತಲಿದ್ದ ನಿಗ್ರೋಜನರನ್ನುದ್ಧರಿಸಿದರೆ, ಕರ್ಮಕಾಂಡದಲ್ಲಿ, ಅಂಧಪರಂಪರೆಯಲ್ಲಿ, ಮೂಢಧರ್ಮದಲ್ಲಿ ಹೊರಳಾಡುತ್ತಲಿದ್ದ ಪಾಮರರನ್ನು ಶಿವಶರಣರು ಪಾವನರನ್ನಾಗಿ ಮಾಡಿದ್ದಾರೆ. ಕ್ರೈಸ್ತ, ಪೈಗಂಬರರಂತೆ ಕೀಳು ದೇವತೆಗಳ ಪೂಜೆಯನ್ನು ಅಲ್ಲಗಳೆದು, ಕ್ರೂರಪದ್ಧತಿಯ ಬಲಿಕರ್ಮಾದಿಗಳನ್ನು ಹಳಿದು ಶಿವಶರಣರೂ ನಿರಾಕಾರ ಪರಶಿವನ ಏಕೇಶ್ವರೀ ಪಂಥವನ್ನು ಸ್ಥಾಪಿಸಿದ್ದಾರೆ. ಲೋಕಮಾನ್ಯ ಟಿಳಕರು ಅಜ್ಞಾನಿಗಳಿಗೆ ಆವಶ್ಯವಾದ ಜ್ಞಾನದೀಕ್ಷೆಯನ್ನು ದಯಪಾಲಿಸಿ ಜನತೆಯನ್ನು ಜಾಗೃತಗೊಳಿಸಿದ್ದರೆ ಅಮರಗಣಂಗಳು ಮತಜಾತಿಗಳ ಕಿಕ್ಕಟದಿಂದ ನುಚ್ಚುನೂರಾದ ಮಾನವ ಜನಾಂಗವನ್ನು "**ಶಿವಭಕ್ತರಲ್ಲಿ ಕುಲವನರಸದ**" ಮಹಾ ಮಾನವ ಧರ್ಮದಿಂದ ಜಾಗೃತಗೊಳಿಸಿ ಸಮಾಜದ ಕಟ್ಟನ್ನು ಬಿಗಿಮಾಡಿದ್ದಾರೆ. ಭಾರತರಾಷ್ಟ್ರ-ಪಿತಾಮಹನೆನಿಸಿಕೊಂಡ ಮಹಾತ್ಮಾ ಗಾಂಧೀಜಿಯವರು ಸತ್ಯ, ಅಹಿಂಸೆ, ಹರಿಜನೋದ್ಧಾರ ಕಾರ್ಯಗಳಿಂದ ಮಾನವಸಮಾಜಕ್ಕೆ ಎಂದೂ ಮರೆಯದ ಮಹಾ

ಸೇವೆಯನ್ನು ಸಲ್ಲಿಸಿದ್ದರೆ, ತೀರಹಿಂದಿನ ದಿನಮಾನಗಳಲ್ಲಿ, ವೈಜ್ಞಾನಿಕ ವಿಕಾಸವು ಮುಂದುವರಿಯದಿದ್ದ ಕಾಲದಲ್ಲಿ "**ದಯವೇ ಧರ್ಮದ ಮೂಲ,**" "**ಸತ್ಯವ ನುಡಿವುದೇ ಸ್ವರ್ಗಲೋಕ,**" **ಮಾದಾರನೆಂಬೆನೇ ಚನ್ನಯ್ಯನ**" ಎಂದು ಮೊದಲಾಗಿ ವಚನ ಸಾಹಿತ್ಯದಲ್ಲಿ ಪ್ರಚಾರಿಸಿ, ಅದರಂತೆ ಆಚರಿಸಿ, ಬಸವಾದಿ ಪ್ರಮಥರು ನಮ್ಮ ನಾಡಿನ ಮುತ್ರಜ್ಞರಾಗಿದ್ದಾರೆ. ಇಂತಹ ಶಿವಶರಣರ ಮತಧರ್ಮವು ಕೇವಲ ಒಂದು ಪಂಗಡದವರ ಮತಧರ್ಮವೆಂದು ಕಲ್ಪಿಸುವುದು ಕೇವಲ ಸಂಕುಚಿತ ದೃಷ್ಟಿಯೇ ಸರಿ. ಇಂತಹ ಧರ್ಮಕ್ಕೆ ಮೂರ್ತಸ್ವರೂಪಕರಾಗಿ ಅವತರಿಸಿದರೆಂದು ಪ್ರಖ್ಯಾತಿ ಇರುವ ಏಳುನೂರಾ ಎಪ್ಪತ್ತು ಅಮರಗಣಂಗಳ ಆರಾಧನೆ, ಸ್ವಾರ್ಥದಿಂದ ಪಕ್ಷಪಂಗಡಗಳಿಂದ ಮೈಮರೆತ ಇಂದಿನ ಮಾನವ ಸಮಾಜದ ಜಾಗೃತಿಗೆ ಅತ್ಯವಶ್ಯವೆನಿಸದಿರದು.

ಮಾಯಾವಿಕಾರಿಯಾದ ಮಾನವನ ಕಾಯಶುದ್ಧಿಯನ್ನು ಮಾಡಿ, ಪ್ರಾಣಕ್ಕೆ ಅರಿವನ್ನು ತೋರಿ, ಸುಜ್ಞಾನವು ಪ್ರಭಾವಿಸುವಂತೆ ಮಾಡಿ ಜೀವತ್ರಯಗಳ ಪ್ರಪಂಚವನ್ನು ನಿವೃತ್ತಮಾಡಿ, ಪೂರ್ವಾಶ್ರಯವನ್ನು ಕಳೆದು ಭವಿಯನ್ನು ಭಕ್ತನನ್ನಾಗಿಮಾಡಿ, ಪಿಂಡತತ್ವದಲ್ಲಿದ್ದೇ ಪರತತ್ವವನ್ನರಿಯಬೇಕೆಂದು, ಅರಿವುದಕ್ಕೊಂದು ಕುರುಹು ಬೇಕೆಂದು, ಭಕ್ತನ ಅಂಗದಲ್ಲಿ ಲಿಂಗಸಾಹಿತ್ಯವನ್ನು ಮಾಡಿ ವಿಷಯಸಂಗರಾಹಿತ್ಯವನ್ನುಂಟುಮಾಡುವನು: ಆಗ ಭಕ್ತನು ಆಶಾಪಾಶವನ್ನು ನಾಶಮಾಡಿ, ತ್ರಿವಿಧಲಿಂಗಸ್ಥಿತಿ, ತ್ರಿವಿಧ ದಾಸೋಹಂ ಭಾವನೆಗಳಿಂದ ವರ್ತಿಸುವದರಿಂದ ಷಟ್‌ಸ್ಥಲಗಳನ್ನು ಸಾಧಿಸುತ್ತಾನೆ. ಆಗ ಆತನಿಗೆ ದೇಹಭಾವ ನಷ್ಟವಾಗಿ, ಶಿವಭಾವ ಪ್ರಾಪ್ತವಾಗಿ, ಸ್ಥಿರಗೊಂಡು, ನಾದ-ಬಿಂದು-ಕಳಾತೀತನಾಗಿ ಪರತತ್ವದಲ್ಲಿ ಸಮರಸನಾಗುತ್ತಾನೆ. ಇದೇ ಅಮರಗಣಂಗಳು, ಶಿವಶರಣರು ನಿರೂಪಿಸಿದ ಲಿಂಗಾಂಗ ಸಾಮರಸ್ಯದ ಸ್ಪಷ್ಟವಾದ ಮಾನವಧರ್ಮ. ಗತಕಾಲದ ಆದರ್ಶಗಳನ್ನು ಪದೇಪದೇ ಮರೆಯುವುದು ಪ್ರಪಂಚದ ಹೊಂಚಿನಲ್ಲಿ ಸಿಲುಕಿ ನರಳುವ ಮಾನವನ ಸಹಜ ಸ್ವಭಾವವಾದುದರಿಂದ, ಆತ್ಮಾನುಭಾವ-ಶಿವಾನುಭಾವಗಳ ಸಮನ್ವಯ ಸ್ವರೂಪನಿದರ್ಶನದಿಂದ ಜನತೆಯಲ್ಲಿ ನೈತಿಕ, ಧಾರ್ಮಿಕ ಜಾಗೃತಿಯನ್ನುಂಟು ಮಾಡುವ ಸದುದ್ದೇಶದಿಂದ, ವಿಜಯಪುರ ನಗರದಲ್ಲಿ, ವಿಜಯಕಾಲೇಜದ ಹೊಸಕಟ್ಟಡದ ಬಯಲಲ್ಲಿ, ಬರಲಿರುವ ಕಾರ್ತಿಕ ಮಾಸದಲ್ಲಿ, **ಏಳುನೂರಾ ಎಪ್ಪತು ಅಮರಗ**

ಖಂಗಳ, ಏಳನೂರಾ ಎಪ್ಪತ್ತು ಮಂಟಪಗಳ ಮಹಾಪೂಜೆಯ ಏರ್ಪಾಡು ಮಾಡಬೇಕೆಂದು ಭಕ್ತವೃಂದವು ಬಲವಾಗಿ ಬಿನ್ನವಿಸಿಕೊಂಡ ಮೂಲಕ ಈ ಮಹಾತ್ಕಾರ್ಯಕೈಕೊಳ್ಳಲಾಗಿದೆ ಒಂದೊಂದು ಮಂಟಪದ ಪೂಜಾವ್ಯವಸ್ಥೆಯನ್ನು ವಹಿಸಿಕೊಂಡ ಭಕ್ತನು ೧೫೧ ರೂ (ಒಂದು ನೂರಾ ಐವತ್ತೊಂದು ರೂಪಾಯಿ) ನಿಧಿಯನ್ನು ಸಲ್ಲಿಸಬೇಕಾಗುವುದು. ಈ ೧೫೧ ರೂ. ಗಳಲ್ಲಿ ೫೧ ರೂ, ಕಾಲೇಜನಿಧಿಗೆ, ೫೦ ರೂ ಮಂಟಪಪೂಜೆ ಆಗಮಿಸುವ ಸ್ವಾಮಿಗಳವರ ಪೂಜೋಪಕರಣ ಆಗಮನ-ನಿರ್ಗಮನ ಸಹಿತ ವೆಚ್ಚಕ್ಕೆ, ಇನ್ನುಳಿದ ೫೦ ರೂ. ಅನ್ನ ಸಂತರ್ಪಣಾದಿ ಸಕಲ ವ್ಯವಸ್ಥೆಗೆ ವಿನಿಯೋಗಿಸಲಾಗುವುದು. ಹೀಗೆ ಏರ್ಪಡಿಸಲಾದ ಮಂಟಪಪೂಜೆಗಾಗಿಯನ್ನು ವಹಿಸಿಕೊಂಡ ಭಕ್ತರು ವಿದ್ಯಾದಾನದ ಧರ್ಮಪ್ರೋತ್ಸಹಣೆಯ, ಅನ್ನದಾನದ ಫಲಗಳನ್ನು ಏಕಕಾಲಕ್ಕೆ ಪಡೆದಂತಾಗುತ್ತದೆ. ಒಂದೊಂದು ಮಂಟಪಪೂಜೆಯ ವ್ಯವಸ್ಥೆಯನ್ನು ಒಬ್ಬೊಬ್ಬ ಭಕ್ತನು ವಹಿಸಿಕೊಳ್ಳುವದೆಂದರೆ ಒಟ್ಟಿಗೆ ಏಳನೂರಾ ಎಪ್ಪತ್ತು ಜನ ಭಕ್ತರಿಗೆ ಮಾತ್ರ ಅಮರಗಣ-ಮಂಟಪಪೂಜಾ ಸುಸಂಧಿ ದೊರೆಯುತ್ತದೆ. ಅದುದರಿಂದ ಒಂದೊಂದು ಮಂಟಪಪೂಜೆಯನ್ನು ವಹಿಸಿಕೊಳ್ಳಲಿಚ್ಛೆಯುಳ್ಳ ಧರ್ಮಬಂಧುಗಳು ಮುಂಚಿತವಾಗಿ ಪತ್ರಬರೆದು ಅದನ್ನು ನಿರ್ದಿಷ್ಟ ಪಡಿಸಿಕೊಳ್ಳಬೇಕಾಗಿ ವಿನಂತಿ.

ಎಸ್. ಬಿ ಪಾಟೀಲ.

ಚೇರಮನ್,

ಜಿಲ್ಹಾ ಲಿಂಗಾಯತ ವಿದ್ಯಾವರ್ಧಕ ಸಂಘ, ವಿಜಾಪುರ.

ಪಡೆ ಕಾಣಬಾರದ ಘನವು. ನಿಮ್ಮನೆಂತು ಕರಸ್ಥಲದಲ್ಲಿ ಧರಿಸುವೆ ? ಚನ್ನಮಲ್ಲಿಕಾರ್ಜುನಯ್ಯ ನಿಮ್ಮ ನೋಡಿ ನೋಡಿ ಸೈವೆರಗಾಗುತಿರ್ದೆನು”

ಈ ಸ್ಥಿತಿಯು ಪ್ರಾಪ್ತವಾಗಲು ಮನುಷ್ಯನು ಈ ಜಗತ್ತಿನಲ್ಲಿ ಇದ್ದರೂ ಅವನು ಅದರಲ್ಲಿ ಇಲ್ಲದಂತೆ ಇರುತ್ತಾನೆ. ಈತನು ನಿರ್ಮುಕ್ತನು, ಶರಣನು ಎಂದು ವಚನಕಾರರು ಹೇಳುತ್ತಾರೆ.

ಮಹಾದೇವಿಯಕ್ಕನು ಬಸವೇಶ್ವರನ ಮಂದಿರದಲ್ಲಿ ಇದ್ದಾಗ್ಗೆ ತಾನು ಹೇಗೆ ವೇಳೆಗಳೆಯುತ್ತಿದ್ದೆನೆಂಬುದನ್ನು ಕುರಿತು ಅವಳು ಕೆಲವು ಸುಂದರ ವಾದ ವಚನಗಳನ್ನು ರಚಿಸಿದ್ದಾಳೆ. ಅವುಗಳಲ್ಲಿ ಅವಳು ಹೇಳುವದೇನೆಂದರೆ:-

೧. ಉದಯದಲೆದ್ದು ನಿಮ್ಮ ನೆನೆವೆನಯ್ಯ. ನಿಮ್ಮ ಬರವ ಹಾರುತ್ತಿರ್ದೆನಯ್ಯ. ಹಸೆ ಹಂದರವನಿಕ್ಕಿ ನಿಮ್ಮಡಿಗಳಿಗೆಡೆಮಾಡಿಕೊಂಡಿಪ್ಪೆನಯ್ಯಾ. ಚನ್ನಮಲ್ಲಿಕಾರ್ಜುನಾ ನೀನಾವಾಗ ಬಂದಿಹೆ ಎಂದು.

೨. ಹಗಲು ನಾಲ್ಕು ಜಾವ ನಿಮ್ಮ ಕಳವಳದಲ್ಲಿಪ್ಪೆ ನೋಡಯ್ಯ; ಇರುಳು ನಾಲ್ಕು ಜಾವ ನಿಮ್ಮ ವಿಕಳಾವಸ್ಥೆಯಲ್ಲಿರ್ಪೆ ನೋಡಯ್ಯ; ಇರುಳು ಹಗಲು ನಿಮ್ಮ ಕಳವಳದಲ್ಲಿ ಮರೆದೊರಗಿದೆನಯ್ಯ ಚನ್ನಮಲ್ಲಿಕಾರ್ಜುನಾ ನಿಮ್ಮೊಲುಮೆ ನಟ್ಟು ಹಸಿವು ತೃಷೆ ನಿದ್ರೆಯ ಮರೆತೆನು.

ಈ ಪ್ರಕಾರ ಅವಳು ಲಿಂಗಸಂಧಾನದಲ್ಲಿರುತ್ತೇನೆಂದು ಅವಳು ತನ್ನ ಈ ವಚನಗಳಲ್ಲಿ ಹೇಳಿದ್ದಾಳೆ. ಇದರಿಂದ ಅವಳು ಮಾನಸಿಕ ಉಚ್ಚಸ್ಥಿತಿಯ ಮೇಲ್ಮಟ್ಟವನ್ನು ಹೊಂದಿದ್ದಳೆಂದು ತೋರಿಬರುತ್ತದೆ.

ಈ ಭಾವನೆಯನ್ನಿಟ್ಟುಕೊಂಡು ಅವಳು ತನ್ನ ಇಷ್ಟಲಿಂಗದಲ್ಲಿ ಲೋಲುಪಳಾಗುತ್ತಾಳೆ. ಇಷ್ಟಲಿಂಗದ ಧ್ಯಾನವಿಲ್ಲದೆ ಪ್ರಾಣಲಿಂಗ, ಭಾವಲಿಂಗಗಳು ಸಾಧಿಸಲಾರವೆಂದು ಶಿವಶರಣರ ವಿಚಾರಗಳಿರುತ್ತವೆ. ಮಹಾದೇವಿಯಕ್ಕನು ಈ ತತ್ವದಂತೆಯೇ ವರ್ತಿಸುತ್ತಾಳೆ. ಅವಳು ತನ್ನ ೧೫೩ ನೇ ವಚನದಲ್ಲಿ ಹೇಳುವದೇನೆಂದರೆ:—

ಅಯ್ಯಾ, ದೂರದಲಿರ್ದಿಹೆ ಎಂದು ಬಾಯಾರಿ ಬಳಲುತ್ತಿರ್ದೆನಯ್ಯ ನಾನು. ಅಯ್ಯಾ ಸಾರಿ ಬಂದು ನೀನೆನ್ನ ಕರಸ್ಥಲದಲ್ಲಿ ಮೂರ್ತಿಗೊಂಡರೆ ಇನ್ನಾರತಿ ಎಲ್ಲವೂ ಲಿಂಗ. ಆಲಿ ನಿಮ್ಮಲ್ಲಿ ನಟ್ಟವು ನೋಡಯ್ಯ. ಚನ್ನ ಮಲ್ಲಿಕಾರ್ಜುನಯ್ಯ ನಿಮ್ಮನೆನ್ನ ಕರಸ್ಥಲದಲ್ಲಿ ನೋಡಿ ನೋಡಿ ಕಂಗಳೇ ಪ್ರಾಣವಾಗಿರ್ದೆನಯ್ಯ

ಇಷ್ಟಲಿಂಗದಲ್ಲಿ ಧ್ಯಾನಾಸಕ್ತನಾದಲ್ಲಿ ಪ್ರಾಣಲಿಂಗದಲ್ಲಿ ಹೇಗೆ ಅದು ರೂಪುಗೊಳ್ಳುತ್ತದೆಂಬುದನ್ನು ಮಹಾದೇವಿಯಕ್ಕನು ಇಲ್ಲಿ ಹೇಳಿದ್ದಾಳೆ. ಮುಂದೆ ಅವಳು ಪುನಃ ಹೇಳುವದೇನೆಂದರೆ:—

ಸೆಜ್ಜೆಯುಪ್ಪರಿಸಿ ಶಿವಲಿಂಗ ನೀನೆನ್ನ ಕರಸ್ಥಲಕ್ಕೆ ಬರೆ ಪ್ರಜ್ವಲಿಸಿ ತೊಳತೊಳಗಿದೆ ಬೆಳಗುತ್ತಿಹ ಕಾಂತಿಯಲ್ಲಿ ಜಜ್ಜರಿಸಿ, ತನುಮನ ದೃಷ್ಟಿ ನಟ್ಟು ಲಿಂಗದಲ್ಲಿ ಜಜ್ಜರಿಸಿ ಸುರಿವ ಶಿವಸುಖ ರತಿಯೊಳೋಲಾಡುತ್ತ ಸಜ್ಜನ ಸದ್ಭಕ್ತಿ ರತಿಯೊಡನೆ ಕೂಡಿಯಾಡಿ ಲಜ್ಜೆಗೆಟ್ಟು ನಿಮ್ಮ ನೆರೆವೆ ಚನ್ನ ಮಲ್ಲಿಕಾರ್ಜುನಾ.

ಇಷ್ಟಲಿಂಗದಲ್ಲಿ ಧ್ಯಾನವನ್ನಿಟ್ಟಲ್ಲಿ ಮನಸ್ಸಿನಲ್ಲಿ ಯಾವ ಹೊಳಹು ಉಂಟಾಗುತ್ತದೆಂಬುದನ್ನು ಮಹಾದೇವಿಯಕ್ಕನು ತನ್ನ ಅನುಭವದಿಂದ ಇಲ್ಲಿ ಹೇಳಿದ್ದಾಳೆ. ಭಕ್ತರು ಇದರ ರೀತಿಯನ್ನು ಸ್ವತಃ ಪ್ರಯೋಗದಲ್ಲಿ ತಂದು ಕಾಣಬೇಕು. ಎಂದು ನಾವು ಹೇಳದಿರಲಾರೆವು. ಇದರಿಂದ ಯಾವ ಪರಿಣಾಮ ವಾಗುವದೆಂಬುದನ್ನು ಮಹಾದೇವಿಯಕ್ಕನು ಕೆಳಗಿನ ವಚನಗಳಲ್ಲಿ ಹೇಳಿದ್ದಾಳೆ. ಅವಳು ಒಂದು ವಚನದಲ್ಲಿ ಹೇಳುವದೇನೆಂದರೆ:—

ಗಿರಿಯೊಳು ವನದೊಳು ಗಿಡಗಿಡದತ್ತ ದೇವ, ಎನ್ನ ದೇವ ಬಾರಯ್ಯ. ತೋರಯ್ಯ ನಿಮ್ಮ. ಕರುಣವನೆಂದು ನಾನು ಅರಸುತ್ತ ಅಳಲುತ್ತ ಕಾಣದೆ ಸುಳಿದುಬಂದು ಕಂಡೆ ಶರಣರ ಸಂಗದಿಂದ. ಅರಸಿ ಹಿಡಿದಿಹೆನೆಂದು ನೀ ನಡಗುವ ಠಾವ ಹೇಳಾ ಚನ್ನಮಲ್ಲಿಕಾರ್ಜುನಾ. (ವಚನ ೧೪೯.)

ಮಹಾದೇವಿಯಕ್ಕನು ತನ್ನ ಪ್ರಾಣಲಿಂಗಾನುಸಂಧಾನದಿಂದ ಜಗತ್ತಿನಲ್ಲಿ ಪರಮಾತ್ಮನು ತುಂಬಿಕೊಂಡಿರುವನೆಂದು ಭಾವವುಳ್ಳವಳಾಗಿ ತಾನು ನೋಡಿದ ವೃಕ್ಷ, ಪಶು, ಪಕ್ಷ್ಯಾದಿಗಳನ್ನು ದೇವರು ಎಲ್ಲಿದ್ದಾನೆಂಬುದನ್ನು ಅವಳು ಅವುಗಳಿಗೆ ಕೇಳುತ್ತಾಳೆ. ಇದು ಕೇವಲ ಕಾಲ್ಪನಿಕವಾದ ಸಂಗತಿಯಲ್ಲ. ಇದು ಅವಳಿಗೆ ಹಾಗೆ ನಿಜವಾಗಿ ತೋರುತ್ತಿದ್ದುದರಿಂದ ಅವಳು ಈ ರೀತಿ ಅವುಗಳಿಗೆ ಪ್ರಶ್ನೆಯನ್ನು ಮಾಡುತ್ತ ಸಂಚರಿಸುತ್ತಾಳೆ.

ಅವಳು ಒಂದು ಕಡೆಗೆ ಗಿಳಿಗಳ ಹಿಂಡು ನೋಡುತ್ತಾಳೆ. ಮಾವಿನ ಮರ, ಕೋಗಿಲೆಗಳನ್ನು ನೋಡುತ್ತಾಳೆ. ಚೆಲುವಾದ ಬೆಳುದಿಂಗಳನ್ನು ನೋಡುತ್ತಾಳೆ. ಅವುಗಳಲ್ಲಿರುವ ಸೌಂದರ್ಯವು ಪರಮಾತ್ಮನೆಂದು ಅವಳಿಗೆ ಭಾಸವಾಗಿ ಚನ್ನಮಲ್ಲಿಕಾರ್ಜುನನು ಎಲ್ಲಿದ್ದಾನೆಂದು ಅವುಗಳಿಗೆ ಅವಳು ಪ್ರಶ್ನೆಮಾಡುತ್ತಾಳೆ. ಅದು ಹೇಗೆಂದರೆ:—

ಅಳಿಸಂಕುಲವೇ, ಮಾಮರವೇ. ಬೆಳುದಿಂಗಳೇ, ಕೋಗಿಲೆಯೇ ನಿಮ್ಮ ನಿಮ್ಮನೆಲ್ಲರನು ಒಂದ ಬೇಡುವೆನು, ಎನ್ನೊಡೆಯ ಚನ್ನಮಲ್ಲಿಕಾರ್ಜುನ ದೇವರ ಕಂಡರೆ ಕರೆದು ತೋರಿರೇ. (ವಚನ ೧೪೩.)

ಚಿಲಿಮಿಲಿ ಎಂದೋದುವ ಗಿಳಿಗಳಿರಾ ನೀವು ಕಾಣಿರೆ, ನೀವು ಕಾಣಿರೆ. ಸರವೆತ್ತಿ ಪಾಡುವ ಕೋಗಿಲೆಗಳಿರಾ ನೀವು ಕಾಣಿರೆ ನೀವು ಕಾಣಿರೆ. ಎರಗಿ ಬಂದಾಡುವ ತುಂಬಿಗಳಿರಾ ನೀವು ಕಾಣಿರೆ, ನೀವು ಕಾಣಿರೆ. ಕೊಳನ ತಡಿಯೊಳಾಡುವ ಹಂಸೆಗಳಿರಾ ನೀವು ಕಾಣಿರೆ, ನೀವು ಕಾಣಿರೆ, ಗಿರಿಗಂಹ್ವರದೊಳಗಾಡುವ ನವಿಲುಗಳಿರಾ ನೀವು ಕಾಣಿರೆ, ನೀವು ಕಾಣಿರೆ, ಚನ್ನಮಲ್ಲಿಕಾರ್ಜುನನೆಲ್ಲಿಹನೆಂದು ನೀವು ಹೇಳಿರೆ ನೀವು ಹೇಳಿರೆ.

ಈ ಪ್ರಕಾರ ಮಹಾದೇವಿಯಕ್ಕನು ಪರಮಾತ್ಮನನ್ನು ಕುರಿತು ಪ್ರಾರ್ಥಿಸುತ್ತ ಅವಳು ಒಂದು ವಚನದಲ್ಲಿ ನುಡಿದುದು ಏನೆಂದರೆ— ಪರಮಾತ್ಮನಿಗೆ ಪ್ರಿಯಕರವಾದದ್ದೇ ಸುಖವು. ಅವನಿಗೆ ಬೇಡಾದದ್ದೇ ದುಃಖವು, ಎಂದು ಹೇಳುತ್ತಾಳೆ. ಪರಮಾತ್ಮನಿಗೆ ಒಂದುವೇಳೆ ನರಕವನ್ನು ಕಾಂಕ್ಷಿಸಿದರೆ, ಅದು ನರಕವಲ್ಲ, ಅದು ಮೋಕ್ಷವೆಂದು ಹೇಳುತ್ತಾಳೆ. ಒಂದು ವೇಳೆ ಮುಕ್ತಿಯೆಂಬಲ್ಲಿ ಪರಮಾತ್ಮನ ಜ್ಞಾನವಿರದಿದ್ದರೆ ಅದು ನರಕವೆಂದು ಹೇಳುತ್ತಾಳೆ. ಅವಳು ಸುಖ, ದುಃಖ ನರಕ, ಮೋಕ್ಷ ಇವುಗಳ ವ್ಯಾಖ್ಯೆಯನ್ನು ಮಾಡಲಿಕ್ಕೆ ಹೋಗುವದಿಲ್ಲ. ಸದ್ಗುಣಿಯಾದ ಮತ್ತು ಶೀಲವಂತನಾದ ಮನುಷ್ಯನಿಗೆ ಸುಖದುಃಖಾದಿಗಳ ಸ್ಥಿತಿಯು ಸಹಜವಾಗಿ ಸ್ವಾಭಾವಿಕವಾಗಿ ತೋರಹತ್ತುತ್ತದೆ. ಯಾವುದು ಯೋಗ್ಯ, ಯಾವುದು ಅಯೋಗ್ಯ, ಎಂಬುದರ ತಿಳವಳಿಕೆಯು ಅವನಿಗೆ ಸ್ವಯಂ ಸ್ಫೂರ್ತಿಯಾಗಿ ಆಗಹತ್ತುತ್ತದೆ. ಅದಕ್ಕನುಗುಣವಾಗಿ ಅವನು ಆಚರಿಸುತ್ತಾನೆ. ಈ ಬಗ್ಗೆ ಇರುವ ಒಂದು ವಚನವು ಆವುದೆಂದರೆ:—

ನಿನ್ನರಿಕೆಯ ನರಕವೇ ಮೋಕ್ಷ ನೋಡಯ್ಯಾ. ನಿನ್ನನರಿಯದ ಮುಕ್ತಿಯೇ ನರಕ ಕಂಡಯ್ಯಾ. ನೀನೊಲ್ಲದ ದುಃಖವೇ ದುಃಖ ಕಂಡಯ್ಯಾ. ನೀನೊಲಿದ ದುಃಖವೇ ಪರಮಸುಖವು ಕಂಡಯ್ಯಾ. ಚನ್ನಮಲ್ಲಿಕಾರ್ಜುನಯ್ಯಾ ನೀ ಕಟ್ಟಿ ಕೆಡಹಿದ ಬಂಧನವೇ ನಿರ್ಬಂಧನವೆಂದಿಪ್ಪನು. (ವಚನ ೧೫೬.)

ಈ ವರೆಗೆ ನಾವು ಮಹಾದೇವಿಯಕ್ಕನು ಚಿಕ್ಕಂದಿನಿಂದ ಹಿಡಿದು ಮಧ್ಯವಯಸ್ಕಳಾಗುವ ವರೆಗೆ ನಡೆದ ಸಂಗತಿಗಳನ್ನು ವಿವರಿಸಿದೆವು. ಇದರಮೇಲಿಂದ ಮಹಾದೇವಿಯಕ್ಕನು ಒಬ್ಬ ಉಚ್ಚ ತರಗತಿಯ ಶಿವಶರಣೆಯಾಗಿ ಪರಮಾತ

ನನ್ನು ಪ್ರಸನ್ನ ಮಾಡಿಕೊಂಡು ಅವನ ಪ್ರಕಾಶದಲ್ಲಿ ವರ್ತಿಸುವವಳಿದ್ದಾಳೆಂಬುದು ವಾಚಕರಿಗೆ ಗೋಚರವಾಗದೆ ಇರದು. ಆದರೆ ಅವಳು ತನಗೆ ಉಂಟಾದ ಜ್ಞಾನವನ್ನು ಅರಿಯದವರು ಸಹ ಅರಿಯಬೇಕೆಂದು ಇಚ್ಛಿಸಿ, ಸುಂದರವಾದ ನುಡಿಗಳಲ್ಲಿ ತನ್ನ ಅನುಭವವನ್ನು ಯಾವಾಗಲೂ ಹೇಳುತ್ತಾಳೆ. ಈ ಪ್ರಕಾರ ಕಾರ್ಯಮಾಡಿದ ಹೆಂಗಳೆಯರ ಸಂಖ್ಯೆಯು ನಾಡಿನಲ್ಲಿ ಅತ್ಯಲ್ಪವಾದುದೆಂದು ಹೇಳಬಹುದು. ಇದರಿಂದ ಮಹಾದೇವಿಯಕ್ಕನು ಶರಣ ಶರಣೆಯರೆಂಬ ನಭೋಮಂಡಳದಲ್ಲಿ ಪ್ರಕಾಶಿಸುತ್ತ ತನ್ನ ಪ್ರಕಾಶವನ್ನು ಪೃಥ್ವಿಯಲ್ಲೆಲ್ಲ ಹರಹುತ್ತ ತನ್ನ ಕಾಲಕ್ಕೆ ಮಾತ್ರವಲ್ಲ, ಶಾಶ್ವತವಾಗಿ ನಾಡಿನಲ್ಲಿ ಬೆಳಗುತ್ತಿದ್ದಾಳೆ. ಆಕೆಯ ನುಡಿಗಳನ್ನು ಆಸ್ವಾದಿಸುವವರು ಧನ್ಯರೆಂದು ತಿಳಿಯಲು ಯಾವ ಸಂದೇಹವೂ ಇರಲಾರದು.

ಈ ಪ್ರಕಾರ ಮಹಾದೇವಿಯಕ್ಕನು ವಚನಗಳನ್ನು ಮಾತ್ರವಲ್ಲದೆ ಸ್ವತಂತ್ರ ವಿಷಯಗಳ ಬಗ್ಗೆಯೂ ಕೂಡ ತನ್ನ ವಿಚಾರಗಳನ್ನು ಪ್ರಕಟಮಾಡಿದ್ದಾಳೆ. ಅವಳು ಸೃಷ್ಟಿಯ ನಿರ್ಮಾಣ ಮತ್ತು ಅದರ ಸ್ವರೂಪದ ಬಗ್ಗೆ ಒಂದು ದೀರ್ಘ ವಚನವನ್ನು ಹೇಳಿದ್ದಾಳೆ. ಮಹಾದೇವಿಯಕ್ಕನ 'ಸೃಷ್ಟಿಯ ವಚನ'ವೆಂದು ಅದು ನಾಡಿನಲ್ಲಿ ಪ್ರಸಿದ್ಧವಾಗಿದೆ. ಈ ವಚನವನ್ನು ನಾವು ವಚನಶಾಸ್ತ್ರ ಸಾರ ಭಾಗ ೨. ಈ ಗ್ರಂಥದಲ್ಲಿ ಪ್ರಕಟಮಾಡಿದ್ದೇವೆ. ವಾಚಕರು ಅದನ್ನು ಅವಲೋಕಿಸಬಹುದು.

ಮಹಾದೇವಿಯಕ್ಕನು ಶಿವಶರಣೆಯರಲ್ಲಿ ಉಚ್ಚ ಸ್ಥಾನವನ್ನು ಹೊಂದಿ ಅವಳನ್ನು ಕುರಿತು ಮಾಡಿದ ಸ್ತೋತ್ರಗಳನ್ನು ವೀರಶೈವ ವಾಙ್ಮಯದಲ್ಲಿ ಅನೇಕವುಗಳನ್ನು ಕಾಣಬಹುದು. ಆಕೆಯ ವಿಷಯವಾಗಿ ಒಂದು ಸಾಂಗತ್ಯವೂ ಇದೆ. ಅದು ಲಲಿತವೂ ಸುಲಭವೂ ಇದ್ದು, ಅತ್ಯಂತ ಆದರಣೀಯವಾಗಿರುತ್ತದೆ.

ಈ ಪ್ರಕಾರ ಮಹಾದೇವಿಯಕ್ಕನು ಬಸವೇಶ್ವರನ ಗೃಹದಲ್ಲಿ ಕಾಲ ಕಳೆಯುತ್ತಿರಲು ಹರಳಯ್ಯ ಮಧುವಯ್ಯಗಳ ಪ್ರಸಂಗವು ಕಲ್ಯಾಣದಲ್ಲಿ ಒದಗಿ ಬಂದಿತು. ಬಿಜ್ಜಳನು ಅವರಿಬ್ಬರನ್ನು ಕೊಲೆಬಡಿಸಿದನು. ಹೀಗೆ ಇಬ್ಬರು ಶಿವಶರಣರು ಬಿಜ್ಜಳನಿಂದ ಘಾತಿಸಲ್ಪಡಲಾಗಿ ಪುರಾಣಮತವಾದಿಗಳು ಸಂತೋಷಬಟ್ಟರು. ಶಿವಾನುಭವವನ್ನು ಹೀಯಾಳಿಸುತ್ತಿದ್ದ ಅನೇಕ ಧರ್ಮೀಯರು ನಾಡಿನಲ್ಲಿದ್ದು ಇವರೆಲ್ಲರು ಒಮ್ಮುಖವಾಗಿ ಶಿವಶರಣ ಶರಣೆಯರನ್ನು ಹಿಂಸಿಸುವ ಕಾರ್ಯಗಳನ್ನು ಪ್ರಾರಂಭಿಸಿದರು. ಇದರಿಂದ ವೀರಶೈವರಿಗೂ ಇತರ ಮತಸ್ಥರಿಗೂ ದ್ವೇಷಭಾವವು ದಿನೇ ದಿನೇ ಹೆಚ್ಚುತ್ತ

ಬಂದಿತು. ಹೀಗೆ ಕಲ್ಯಾಣ ಪಟ್ಟಣದಲ್ಲಿ ಶಾಂತ ವಾತಾವರಣವು ಉಳಿಯು ದಂತೆ ಆಯಿತು. ಕ್ರೋಧಾವೇಶಗಳು ಬೆಳೆದವು. ಈ ಸ್ಥಿತಿಯುಂಟಾಗಲು ಶಿವಶರಣರು ತಮ್ಮ ಶಿವಾನುಭವದ ನಡೆಯಂತೆ ನಡೆಯುವದು ಮತ್ತು ಬಿಜ್ಜಳನ ರಾಜ್ಯದಲ್ಲಿ ಅವರು ಸುರಕ್ಷಿತವಾಗಿ ಇರುವದು ಅಶಕ್ಯವೆಂಬು ಬಸವೇಶ್ವರನಿಗೆ ತೋರಿತು. ಆದ್ದರಿಂದ ಅವನು ಶಿವಶರಣರು ಕಲ್ಯಾಣ ದಲ್ಲಿ ಇರದೆ ತಮಗೆ ಯೋಗ್ಯ ಕಂಡ ಸ್ಥಳಗಳಿಗೆ ಹೋಗಿ ಗುಪ್ತವಾಗಿ ಅಥವಾ ಪ್ರಕಟವಾಗಿ ತಮ್ಮ ತಮ್ಮ ಆಚರಣೆಗಳನ್ನು ಅನುವರ್ತಿಸಬೇಕೆಂದು ಸಾರಿದನು. ಹೀಗೆ ಸಾರಿ ತಾನು ಕಲ್ಯಾಣ ಪಟ್ಟಣವನ್ನು ಬಿಟ್ಟು ಕೃಷ್ಣಾ ಮತ್ತು ಮಲಾಪಹಾರೀ ನದಿಗಳು ಕೂಡಿದ ಕೂಡಲಸಂಗಮ ಕ್ಷೇತ್ರಕ್ಕೆ ಚಿತ್ತೈಸಿ ಅಲ್ಲಿಯೇ ಇರಹತ್ತಿದನು.

ಹೀಗಾಗಲು ಕಲ್ಯಾಣದ ರಾಜ್ಯದಲ್ಲಿ ಅಲ್ಲೋಲ ಕಲ್ಲೋಲವಾಯಿತು. ಕಲ್ಯಾಣದಲ್ಲಿದ್ದ ಶಿವಶರಣರು ತಮಗೆ ತಿಳಿದತ್ತ ಹೊರಟು ಹೋಗಹತ್ತಿ ದರು. ಅಲ್ಲಿ ಉಳಿದ ಕೆಲವು ಶಿವಶರಣರು ಭದ್ರವಾದ ಸ್ಥಳದಲ್ಲಿದ್ದು ಕೊಂಡು ಆತ್ಮಸಂರಕ್ಷಣೆಯಲ್ಲಿ ತೊಡಗಿದರು. ಈ ಕಾಲಕ್ಕೆ ಶಿವಶರಣರ ವಿರೋಧಿಗಳು ಬಹುಸಂಖ್ಯಾಕರಾಗಿದ್ದರು. ಅವರಿಗೆ ರಾಜನ ಬೆಂಬಲವಿದ್ದದ ರಿಂದ ಶಿವಶರಣರನ್ನು ದೂಷಿಸುತ್ತ ಅವರು ನಾಡಿನಲ್ಲಿ ಸಂಚರಿಸಹತ್ತಿದರು. ಈ ಪ್ರಕಾರ ನಾಡಿನಲ್ಲಿ ಎಲ್ಲೆಲ್ಲಿಯೂ ಪರಸ್ಪರ ಅವಿಶ್ವಾಸದ ನಡೆಗಳೂ ಅಪ್ರೀತಿ ವೈಮನಸ್ಸುಗಳೂ ಬೆಳೆಯುತ್ತಹೋದವು.

ಈ ಸ್ಥಿತಿಯಲ್ಲಿ ಅಬಲೆಯಾದ ಮಹಾದೇವಿಯಕ್ಕನು ಯಾವ ಮಾರ್ಗ ವನ್ನು ಸ್ವೀಕರಿಸಬೇಕೆಂಬುದು ಅವಳಿಗೆ ಒಂದು ದೊಡ್ಡ ಸಮಸ್ಯೆಯಾಯಿತು. ಅವಳು ತನ್ನ ತಾಯಿತಂದೆಗಳ ಗ್ರಾಮವಾದ ಬನವಾಸಿಗೆ ತಿರುಗಿ ಹೋಗು ವದು ಶಕ್ಯವಿರಲಿಲ್ಲ. ಅವಳಂಥ ಪ್ರಸಿದ್ಧಿಗೆ ಬಂದ ಶರಣೆಯು ಕಲ್ಯಾಣದಲ್ಲಿ ಸುರಕ್ಷಿತವಾಗಿ ಇರುವದೂ ಸಂಭವವಿದ್ದಿದ್ದಿಲ್ಲ. ಆದ್ದರಿಂದ ಅವಳು ಬಸವೇ ಶ್ವರನಂತೆ ದೇಶತ್ಯಾಗ ಮಾಡಬೇಕೆಂದು ನಿಶ್ಚಯಿಸಿದಳು.

ಈ ಕಾಲದಲ್ಲಿ ಕಲ್ಯಾಣದಲ್ಲಿದ್ದ ಬಹುಜನ ಶಿವಶರಣರು ತಮಗೆ ತೋಚಿದಂತೆ ಬೇರೆ ಬೇರೆ ಕಡೆಗೆ ಚಲ್ಲಾಪಿಲ್ಲಿಯಾಗಿ ಹೋಗಹತ್ತಿದರು. ಈ ಕಾಲದಲ್ಲಿ ಕಲ್ಯಾಣಪಟ್ಟಣದ ಸುತ್ತಲೂ ಅರಣ್ಯಗಳೂ, ಗುಹೆಗಳೂ

ಹೇರಳವಾಗಿ ಪಸರಿಸಿದ್ದವು. ಅಲ್ಲಿಗೆ ಬಹುಜನರು ಹೋಗಿ ಅವಿತುಕೊಂಡು ಕಾಲಕಳೆಯಹತ್ತಿದರು. ಅವುಗಿ ದೇವಯ್ಯನು ಭೀಮಾತೀರದಲ್ಲಿ ಇರುವ ಈಗಿನ ಪುಳುಜ ಗ್ರಾಮಕ್ಕೆ ತೆರಳಿದನು. ಹೀಗೆ ಬಹುಜನರು ತಮ್ಮ ತಮ್ಮ ಪರಿಚಿತ ಸ್ಥಳಗಳಿಗೆ ಹೋಗಿ ಗುಪ್ತವಾಗಿ ವಾಸವಾಡಹತ್ತಿದರು. ಕೂಡಲ ಸಂಗಮ ಕ್ಷೇತ್ರವು ಒಂದು ಪುಣ್ಯ ಸ್ಥಳವು. ಇಂಥ ಸ್ಥಳದಲ್ಲಿ ಹೋದರೆ ತಮಗೆ ಹಿಂಸೆಯಾಗುವದೆಂದು ಬಹುಜನರು ದೇವಾಲಯಗಳಿದ್ದ ಸ್ಥಳಗಳಿಗೆ ತೆರಳಿದರು. ಚನ್ನ ಬಸವೇಶ್ವರ, ನೀಲಾಂಬಿಕೆ, ನಾಗಲಾಂಬಿಕೆ, ಮಹಾದೇವಿ ಯಕ್ಕಗಳು ಬಸವೇಶ್ವರನು ಇರುತ್ತಿದ್ದ ಮಂದಿರವು ಭದ್ರವಾದದ್ದೆಂದು ತಿಳಿದು ಅಲ್ಲಿಯೇ ಇರಹತ್ತಿದರು. ಬೇರೆ ಕೆಲವರು ಬಿಜ್ಜಳನ ರಾಜಧಾನಿಯಿಂದ ಬಹು ದೂರವಿರುವ ಅರಣ್ಯ ಪ್ರದೇಶಗಳಿಗೆ ಹೊರಟು ಹೋಗಹತ್ತಿದರು. ಶ್ರೀಶೈಲ ಪ್ರಾಂತವು ಕಲ್ಯಾಣದಿಂದ ದೂರದಲ್ಲಿದ್ದು ಅದು ಪರರಾಜರ ಅಧೀನದಲ್ಲಿತ್ತು. ಆದ್ದರಿಂದ ಸಾವಿರಾರು ಜನ ಶಿವಶರಣರು ಈ ಪ್ರಾಂತದ ಕಡೆಗೆ ಹೋಗಿ ವಾಸವಾಡಹತ್ತಿದರು. ಇಲ್ಲಿ ಒಂದು ಪುರಾತನ ಸಿಂಹಾಸನ ಮಠವು ಇದ್ದು ಇದರ ಆಶ್ರಯದಲ್ಲಿ ಇರತೊಡಗಿದರು. ಇವರು ಶಸ್ತ್ರಾಸ್ತ್ರ ಸಜ್ಜಿತರಾಗಿ ಸುಸಂಘಟಿತರಾಗಿ ಆತ್ಮಸಂರಕ್ಷಣೆಯಲ್ಲಿ ತೊಡಗಿದವರಾದರು. ಆದ್ಧರಿಂದ ಬಹುಜನ ಶಿವಶರಣರು ಈ ಸ್ಥಾನಕ್ಕೆಯೇ ಬರುವವರಾದರು. ಅಲ್ಲಮಪ್ರಭುವು ಒಬ್ಬ ಪ್ರಸಿದ್ಧ ವ್ಯಕ್ತಿಯು. ಅವನೂ ಮಹಾದೇವಿಯಕ್ಕನೂ ಇಲ್ಲಿಗೆ ಬಂದು ದೇವಸ್ಥಾನಕ್ಕೆ ಸಮೀಪವಾಗಿ ಇರುವವರಾದರು. ಆದರೆ ಅಲ್ಲಿ ಬಹುಜನರ ದಟ್ಟಣೆ ಇದ್ದುದರಿಂದ ಅದು ಅವರಿಗೆ ಸುರಕ್ಷಿತವೆನಿಸಲಿಲ್ಲ. ಆದರೆ ಈ ಸ್ಥಾನದ ಕೆಳಗಡೆ ಕೃಷ್ಣಾನದಿಯು ಹರಿಯುತ್ತಿದ್ದು ಅಲ್ಲಿ ಅದು ಬಹಳ ಆಳವಾಗಿದೆ. ಅದರ ಆಚೆಯ ದಂಡೆಯಲ್ಲಿ ಕದಳೀ ಬನವೆಂದು ಒಂದು ನಿಬಿಡವಾದ ಅರಣ್ಯ ಪ್ರದೇಶವಿದೆ. ಈ ಸ್ಥಾನವು ಸುರಕ್ಷಿತಕ್ಕೋಸ್ಕರ ಮಾತ್ರವಲ್ಲ ತಮ್ಮ ಶಿವಾನುಭವ ಆಚರಣೆಗೋಸ್ಕರ ಬಹಳ ಅನುಕೂಲವೆಂದು ಅಲ್ಲಮಪ್ರಭು ಮಹಾದೇವಿಯಕ್ಕಗಳಿಗೆ ತೋರಿತು. ಆದ್ದರಿಂದ ಅವರಿಬ್ಬರು ಈ ವನವನ್ನು ಪ್ರವೇಶಮಾಡಿ ಅಲ್ಲಿ ಇರತೊಡಗಿದರು. ಅವರು ಅಲ್ಲಿ ಎಷ್ಟುದಿನಂ ಕಾಲಕಳೆದರೆಂಬುದು ಯಾರಿಗೂ ಗೊತ್ತಾಗಿರುವದಿಲ್ಲ. ಆದರೆ ಅಲ್ಲಿಗೆ ಹೋದಬಳಿಕ ಅವರು ಎಂದೂ ಹಿಂದಿರುಗಿ ಬರಲಿಲ್ಲೆಂಬುದು ನಿಶ್ಚಯಾತ್ಮಕವು. ಅವರು ಅಲ್ಲಿಯೇ ಸಮಾಧಿಸ್ಥರಾದರೆಂದು ಯಾವತ್ತರ ನಂಬಿಗೆ ಇದೆ.

ಈ ಪ್ರಕಾರ ಮಹಾದೇವಿಯಕ್ಕನ ಚರಿತ್ರೆ ಇರುತ್ತದೆ. ಅವಳು ಅತ್ಯಂತ ಪವಿತ್ರಜೀವಿಯಾಗಿದ್ದಾಳೆ. ಅವಳು ತನ್ನ ಜೀವಿತಾವಧಿಯಲ್ಲಿ ಉಚ್ಚ ಶಿವಾನುಭವಿ ಎಂದೆನಿಸಿಕೊಂಡು ಕಾಲಕಳೆದಳು. ಆಕೆಯ ಚರಿತ್ರೆಯು ಬಹುಜನರ ಲಕ್ಷ್ಯವನ್ನು ಸ್ವಾಭಾವಿಕವಾಗಿ ಎಳೆದಿರುತ್ತದೆ. ಅವಳ ವಚನಗಳು ಆಕೆಯ ಹೆಸರನ್ನು ನಿರಂತರವಾಗಿ ಉಳಿಸಿರುವವು. ಆಕೆಯು ಒಬ್ಬ ಮಾದರಿ ಸ್ತ್ರೀಯೆಂದೆನಿಸಿಕೊಂಡು ವೈರಾಗ್ಯಮೂರ್ತಿಯಾಗಿ ಯಾವಾಗಲೂ ಬಸವೇಶ್ವರನ ಸನ್ನಿಧಿಯಲ್ಲಿ ಇದ್ದುಕೊಂಡು ಶಿವಶರಣರಲ್ಲಿ ಹೆಸರುವಾಸಿಯಾಗಿದ್ದಾಳೆ.

---

## ರೇವಣಸಿದ್ಧ

ರೇವಣಸಿದ್ಧೇಶ್ವರನು ಬಸವೇಶ್ವರ, ಅಲ್ಲಮಪ್ರಭು, ಸಿದ್ಧರಾಮೇಶ್ವರ ಇವರಕಿಂತಲೂ ಮೊದಲಿನವನು. ಈ ಮೂವರು ಮಹಾನುಭಾವರಂತೆಯೇ ರೇವಣಸಿದ್ಧೇಶ್ವರನಾದರೂ ವೀರಶೈವ ಧರ್ಮವನ್ನು ಪ್ರಚಾರಪಡಿಸಿದ್ದಾನೆ. ಅವನು ಬಹುಶಃ ೧೨ನೇ ಶತಮಾನದ ಆದಿಭಾಗದಲ್ಲಿ ಪ್ರಸಿದ್ಧಿಗೆ ಬಂದಿರಬಹುದೆಂದು ಅವನ ಚರಿತೆಯಿಂದ ತಿಳಿದುಬರುತ್ತದೆ. ಅವನಕಿಂತಲೂ ಮೊದಲು ಕೆಲವು ಶಿವಶರಣರು ಕರ್ನಾಟಕಾಂಧ್ರದೇಶಗಳಲ್ಲಿ ಆಗಿ ಹೋಗಿದ್ದಾರೆ. ಇವರಲ್ಲಿ ದೇವರದಾಸಿಮಯ್ಯ ಕೊಂಡಗುಳಿಯ ಕೇಶಿರಾಜ ಇವರು ಮುಖ್ಯರು. ಇವರಲ್ಲದೆ ಕೆಂಭಾವಿ ಭೋಗಣ್ಣ, ಬಾಹೂರು ಬ್ರಹ್ಮಯ್ಯ, ತೆಲಗು ಜೊಮ್ಮಯ್ಯ ಹೀಗೆ ಬೇರೆ ಕೆಲವು ಶಿವಶರಣರು ಕರ್ನಾಟಕದ ಉತ್ತರಭಾಗದಲ್ಲಿ ಪ್ರಾದುರ್ಭವಿಸಿದ್ದಾರೆ. ಇವರಲ್ಲಿ ಕೆಲವರು ವಚನಗಳನ್ನು ಸಹ ರಚಿಸಿದ್ದಾರೆ. ಇವರಲ್ಲಿ ದೇವರದಾಸಿಮಯ್ಯನು ಅತ್ಯಂತ ಉಚ್ಚ ಸ್ಥಾನವನ್ನು ಪಡೆದಿದ್ದಾನೆ. ಈತನು ೧೧ ನೇ ಶತಮಾನದ ಮಧ್ಯಭಾಗದಲ್ಲಿ ಮುದುನೂರು ಎಂಬಲ್ಲಿ ವಾಸಿಸುತ್ತಿದ್ದನು. ಮುದನೂರು ಕಲಬುರ್ಗಿ ಜಿಲ್ಹೆಯಲ್ಲಿದೆ. ಇವನ ತರುವಾಯ ೫೦-೬೦ ವರುಷಗಳಾದಮೇಲೆ ರೇವಣಸಿದ್ಧೇಶ್ವರನು ಮಂಗಳವಾಡ ಅಥವಾ ತರ್ದವಾಡಿ ಪ್ರಾಂತಕ್ಕೆ ಬಂದು ಇಲ್ಲಿ ಶರಣರ ಧರ್ಮವನ್ನು ಪ್ರಕಾಶಪಡಿಸಿದ್ದಾನೆ.

ರೇವಣಸಿದ್ಧೇಶ್ವರನ ಮೂಲ ಗ್ರಾಮವು ಆಂಧ್ರದೇಶವಾಗಿರುವ ಕೊಲ್ಲಿಪಾಕಿ ಎಂಬುದಾಗಿತ್ತೆಂದು ಅವನ ಚರಿತ್ರೆಯಿಂದ ತಿಳಿದುಬರುತ್ತದೆ

ಕೊಲ್ಲಿಪಾಕಿ, ಪೊಟ್ಟಲಕೆರೆ ಮತ್ತು ಶ್ರೀಶೈಲ ಈ ಸ್ಥಾನಗಳಲ್ಲಿ ವೀರಶೈವ ಧರ್ಮವು ಮೊದಲು ಪ್ರಸಾರಹೊಂದಿರಬೇಕೆಂಬ ಅನುಮಾನವು ಶಿವಶರಣರ ಚರಿತ್ರೆಗಳಿಂದ ತೋರಿಬರುತ್ತದೆ. ಶ್ರೀಶೈಲ ಪ್ರಾಂತವೇ ಶೈವ ಧರ್ಮದ ಉಗಮಸ್ಥಾನವೆಂದು ಹೇಳಬಹುದು. ಶ್ರೀಶೈಲವು ಒಂದುಕಾಲದಲ್ಲಿ ನಿಬಿಡ ವಸತಿಯುಳ್ಳ ಪಟ್ಟಣವಾಗಿತ್ತು. ಆದರೆ ಮುಂದೆ ಜನರು ಇಲ್ಲಿ ಇರಲಿಕ್ಕೆ ಶಕ್ಯವಾಗದ್ದರಿಂದ ಇಲ್ಲಿಯ ಜನರ ದಟ್ಟ ವಸ್ತಿಯು ಕಡಿಮೆಯಾಗುತ್ತ ಹೋಗಿ ಮುಂದೆ ಅದು ನಿರ್ಜನ ಪ್ರದೇಶವಾಯಿತು.

ರೇವಣಸಿದ್ಧೇಶ್ವರನು ಶ್ರೀಶೈಲದಿಂದ ಅನತಿ ದೂರದಲ್ಲಿರುವ ಕೊಲ್ಲಿ ಪಾಕಿ ಎಂಬ ಗ್ರಾಮದಲ್ಲಿ ಒಂದು ಸೋಮೇಶ್ವರ ದೇವಾಲಯವಿದ್ದು ಈ ಸೋಮೇಶ್ವರಲಿಂಗದಿಂದ ಅವನು ಉದ್ಭವಿಸಿದನೆಂದು ಜನರ ತಿಳುವಳಿಕೆ ಇದೆ. ಮುಂದೆ ಅವನು ಈ ಗ್ರಾಮದಲ್ಲಿ ಎಷ್ಟು ದಿವಸ ವಾಸವಾಗಿದ್ದನೆಂಬುದು ಗೊತ್ತಾಗುವದಿಲ್ಲ. ಆದರೆ ಕೆಲವು ವರ್ಷಗಳ ತರುವಾಯ ಅವನು ಈ ಪ್ರಾಂತವನ್ನು ಬಿಟ್ಟು ವಿಜಾಪುರ ಜಿಲ್ಲೆಯ ಉತ್ತರ ಭಾಗದಲ್ಲಿರುವ ಮಂಗಳ ವಾಡ ಗ್ರಾಮಕ್ಕೆ ಬಂದು ಅಲ್ಲಿ ವಾಸಮಾಡಹತ್ತಿದನೆಂದು ಕಂಡುಬರುತ್ತದೆ.

ಈ ತರ್ದವಾಡಿ ಪ್ರಾಂತದಲ್ಲಿಯೂ ಅದಕ್ಕೆ ಸಮೀಪವರ್ತಿಯಾದ ಐಹೊಳೆ, ಮುದುನೂರು ಗ್ರಾಮಗಳಿದ್ದ ಭಾಗಗಳಲ್ಲಿಯೂ ಅನೇಕ ಶಿವ ಶರಣರು ಇದಕ್ಕೂ ಪೂರ್ವದಲ್ಲಿ ಉತ್ಪನ್ನರಾಗಿ ಶರಣರ ಧರ್ಮವನ್ನು ಪ್ರಚಾರಪಡಿಸುವವರಾಗಿದ್ದರು. ಈ ಸಂಗತಿಯನ್ನು ರೇವಣಸಿದ್ಧೇಶ್ವರನು ಅರಿ ತುಕೊಂಡು ಇಲ್ಲಿದ್ದ ಮಹಾನುಭಾವರ ಸಹವಾಸದಲ್ಲಿ ಕಾಲಕಳೆಯಬೇ ಕೆಂದು ಬಯಸಿ ಅವನು ಇತ್ತಕಡೆಗೆ ಬಂದಿರಬಹುದೆಂದು ತೋರುತ್ತದೆ. ಆದ್ದರಿಂದ ಅವನು ಕೊಲ್ಲಿಪಾಕಿಯಲ್ಲಿ ಬಹಳ ದಿವಸ ಇರದೆ ಮಂಗಳ ವಾಡ ಪ್ರಾಂತಕ್ಕೆ ಬಂದು ಅಲ್ಲಿ ವಾಸ ಮಾಡಿರಬಹುದು.

ರೇವಣಸಿದ್ಧೇಶ್ವರನು ಕರ್ನಾಟಕದ ಈ ಭಾಗಕ್ಕೆ ಬಂದ ಕಾಲದಲ್ಲಿ ಅವನು ಪಾಶುಪತ ಧರ್ಮದ ತತ್ವಗಳನ್ನು ಪರಿಶೀಲಿಸಿದವನಾಗಿದ್ದನೆಂದು ತೋರುತ್ತದೆ. ಈ ಸಂಗತಿಯು ಹರಿಹರನು ರಚಿಸಿದ ರೇವಣಸಿದ್ಧೇಶ್ವರನ ರಗಳೆಯಿಂದ ಕಂಡುಬರುತ್ತದೆ. ಆದರೆ ಅವನು ಈ ಪ್ರಾಂತದಲ್ಲಿ ಸಂಚ ರಿಸಿದ ಬಳಿಕ ಅವನು ಶಿವಾನುಭವದ ತತ್ವಗಳನ್ನು ಪಾಲಿಸುವವನಾದನೆಂದು ತೋರುತ್ತದೆ. ಇಲ್ಲಿ ಅವನು ಅನೇಕ ಶಿವಶರಣರನ್ನು ಕಂಡು ವಚನ

ಸಂಪುಟ 28]        May 1954        [ಸಂಚಿಕೆ 5

## ಸಕಲಾಗಮ ಶಿಖಾಮಣಿ ವಚನ        Page 17-24

ಷಡ್ವಿಧ ಹಸ್ತಂಗಳುತ್ಪತ್ಯವನು ಷಡ್ವಿದ ಹಸ್ತಂಗಳ ನೆಲೆಯನು, ಷಡ್ವಿಧ ಹಸ್ತಂಗಳ ನಿವೃತ್ತಿಯ ನೆಲೆಯನು, ನವಭಕ್ತಿಯ ಉತ್ಪತ್ಯವನು, ನವ ಭಕ್ತಿಯ ನೆಲೆಯನು. ನವಭಕ್ತಿಯ ನಿವೃತ್ತಿಯನು ನವಅಧಿ ದೇವತೆಗಳುತ್ಪತ್ಯವನು ನವ ಅಧಿದೇವತೆಗಳ ನೆಲೆಯನು ನವಅಧಿದೇವತೆಗಳ ನಿವೃತ್ತಿಯನು ಅಷ್ಟನಾದದುತ್ಪತ್ಯವನು, ಅಷ್ಟ ನಾದದ ನೆಲೆಯನು. ಅಷ್ಟನಾದದ ನಿವೃತ್ತಿಯನು, ಷಡ್ವಿಧ ಭಕ್ತಿಯುತ್ಪತ್ಯವನು ಷಡ್ವಿಧ ಭಕ್ತಿಯ ನೆಲೆಯನು ಷಡ್ವಿಧ ಭಕ್ತಿಯ ನಿವೃತ್ತಿಯನು. ಷಡ್ವಿಧ ಪರಿಣಾಮದುತ್ಪತ್ಯವನು, ಷಡ್ವಿಧ ಪರಿಣಾಮದ ನೆಲೆಯನು, ಷಡ್ವಿಧ ಪರಿಣಾಮದ ನಿವೃತ್ತಿಯನು. ಚತುರ್ವೇದದುತ್ಪತ್ಯವನು, ಚತುರ್ವೇದದ ನೆಲೆಯನು, ಚತುರ್ವೇದದ ನಿವೃತ್ತಿಯನು. ಅಜಪಗಾಯತ್ರಿ ಉತ್ಪತ್ಯವನು, ಅಜಪ ಗಾಯತ್ರಿಯ ನೆಲೆಯನ, ಅಜಪ ಗಾಯತ್ರಿಯ ನಿವೃತ್ತಿಯನು. ಷಡ್ವಿಧ ಚಕ್ರದ ಭೇದವನು, ಇಷ್ಟ ಪ್ರಾಣಭಾವಲಿಂಗದ ಭೇದವನು, ಇಷ್ಟಪ್ರಾಣಭಾವಲಿಂಗದಲ್ಲಿ ತಾರಕ ಸ್ವರೂಪ, ದಂಡಕ ಸ್ವರೂಪ ಕುಂಡಲಾಕಾರ, ಅರ್ಧಚಂದ್ರಾಕಾರ, ದರ್ಪಣಾಕಾರ ಜ್ಯೋತಿಸ್ವರೂಪವು ಅಡಗಿಹ ಭೇದವನು, ಅಕಾರ ಉಕಾರ ಮಕಾರ ಈ ಮೂರು ಕೂಡಿ ಪ್ರಕಾರ್ಥವಾಗಿ ಅಖಂಡ ಜ್ಯೋತಿರ್ಮಯ ಲಿಂಗವಾದ ಭೇದವನು, ಆತ್ಮನುತ್ಪತ್ಯವನು, ಆತ್ಮನ ನೆಲೆಯನು, ಆತ್ಮನ ನಿವೃತ್ತಿಯನು. ಪೃಥ್ವಿ, ಅಪ್ಪು, ತೇಜ, ವಾಯು, ಆಕಾಶದ ನಿವೃತ್ತಿಯನು. ಭಕ್ತ, ಮಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯರ ನೆಲೆಯನು. ಭಕ್ತ, ಮಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯದ, ನಿವೃತ್ತಿಯನು. ಷಡ್ವಿಧ ಹಸ್ತದುತ್ಪತ್ಯವನು. ಷಡ್ವಿಧ ಹಸ್ತಂಗಳ ನೆಲೆಯನು, ಷಡ್ವಿಧ ಹಸ್ತಂಗಳ ನಿವೃತ್ತಿಯನು. ಷಡ್ವಿಧ ಲಿಂಗದುತ್ಪತ್ಯವನು, ಷಡ್ವಿಧ ಲಿಂಗದ ನೆಲೆಯನು, ಷಡ್ವಿಧ ಲಿಂಗದ ನಿವೃತ್ತಿಯನು. ಷಡ್ವಿಧ ಮುಖಂಗಳುತ್ಪತ್ಯವನು, ಷಡ್ವಿಧ ಮುಖಂಗಳ ನೆಲೆಯನು, ಷಡ್ವಿಧ ಮುಖಂಗಳ ನಿವೃತ್ತಿಯನು. ಷಡ್ವಿಧ ಪರಿಣಾಮದುತ್ಪತ್ಯವನು, ಷಡ್ವಿಧ ಪರಿಣಾಮದ ನೆಲೆಯನು, ಷಡ್ವಿಧ ಪರಿಣಾಮದ ನಿವೃತ್ತಿಯನು, ಷಡ್ವಿಧ ಅವಿಕಾರವಧಾನದ ಭೇದವನು, ನಿರಾಳ ಚಕ್ರಂಗಳ ಭೇದವನು, ನಿರಾಮಯ ಷಟ್‌ಸ್ಥಲದ ಭೇದವನು, ಷಟ್‌ಸ್ಥಲ ಬ್ರಹ್ಮದುತ್ಪತ್ಯವನು, ಷಟ್‌ಸ್ಥಲ ಬ್ರಹ್ಮದಲ್ಲಿ ಮೂವತ್ತಾರು ತತ್ವಂಗಳುತ್ಪತ್ಯವನು, ಷಟ್‌ಶಕ್ತಿಗಳುತ್ಪತ್ಯವನು,

ಷಡಂಗಂಗಳುತ್ಪತ್ತ್ಯವನು, ಶಿವಶಕ್ತಿಗಳುತ್ಪತ್ತ್ಯವನು, ಪ್ರೇರಕಾವಸ್ಥೆಯ ದರುಶನವನು, ಮಧ್ಯಾವಸ್ಥೆಯ ದರುಶನವನು, ಮೇಲಾದವಸ್ಥೆಯ ದರುಶನದ ಭೇದವನು, ಕೆಳಗಾದವಸ್ಥೆಯ ದರ್ಶನದ ಭೇದವನು, ಸಕಲಾವಸ್ಥೆಯ ದರ್ಶನದ ಭೇದವನು, ಶುದ್ಧಾವಸ್ಥೆಯ ದರ್ಶನದ ಭೇದವನು, ಪಂಚವು ಲಿಂಗಗಳ ದರ್ಶನವನು, ನಿರ್ಮಲಾವಸ್ಥೆಯ ದರ್ಶನದ ಭೇದವನು, ನಿಂಳವಸ್ಥೆಯ ದರ್ಶನವನು, ನಿರಂಜನಾವಸ್ಥೆಯ ದರ್ಶನವನು, ಜ್ಞಾನಾವಸ್ಥೆಯ ದರ್ಶನವನು, ಶಿವಾವಸ್ಥೆಯ ದರುಶನವನು, ಮಂತ್ರಾಧ್ವದುತ್ಪತ್ತ್ಯವನು, ಮಂತ್ರಾಧ್ವದ ವರ್ತನೆಯನು ಪದಾಧ್ವದುತ್ಪತ್ತ್ಯವನು, ಪದಾಧ್ವದ ವರ್ತನೆಯನು, ವರ್ಣಾಧ್ವದುತ್ಪತ್ತ್ಯವನು, ವರ್ಣಾಧ್ವದ ವರ್ತನೆಯನು, ಭುವನಾಧ್ವದುತ್ಪತ್ತ್ಯವನು, ಭುವನಾಧ್ವದ ವರ್ತನೆಯನು, ತತ್ವಾಧ್ವದುತ್ಪತ್ತ್ಯವನು, ತತ್ವಾಧ್ವದ ವರ್ತನೆಯನು, ಕಲಾಧ್ವದುತ್ಪತ್ತ್ಯವನು, ಕಲಾಧ್ವದ ವರ್ತನೆಯನು, ಗುರುಲಿಂಗಜಂಗಮವೆಂದು ಸುಳಿವ ಅಣ್ಣಗಳ ತಾಮಸ ನಿರಸನವ ಮಾಡಿ ನುಡಿದವನದಭೇದವನು, ತತ್‌ಪದ ತ್ವಂ ಪದ ಅಸಿ ಪದಂಗಳ ಭೇದವನು, ಆ ತತ್ಪದ, ತ್ವಂಪದ, ಅಸಿ ಪದಗಳು ಅಕಾರ ಉಕಾರ, ಮಕಾರಂಗಳಲ್ಲಿ ಅಡಗಿದ ಭೇದವನು ಆ ಅಕಾರ, ಉಕಾರ, ಮಕಾರ ಏಕವಾಗಿ ಷಟ್‌ಸ್ಥಲ ಬ್ರಹ್ಮವಾದ ಭೇದವನು, ವಚನಾನುಭಾವದ ಭೇದವನು, ಅರಿಯೆನೆಲೆ ಸದ್ಗುರು ಸ್ವಾಮಿ ನಿರೂಪಿಸೆಂದು, ಆ ಶಿಷ್ಯನು ಬೆಸಗೊಳಲು, ಆ ಸದ್ಗುರುಸ್ವಾಮಿ ನಿರೂಪಿಸಿದ ವಚನ, ಲೋಕಾದಿ ಲೋಕಂಗಳೇನೂ ಏನೂ ಇಲ್ಲದಂದು ಶಿವ ಹೇಂಗಿರ್ದನೆಂದರೆ ವಚನ|| ಪರಾಪರವಿಲ್ಲದಂದು, ಆ ಪರಾಪರವು ಪರವಾಗಿಹ ಪರಬ್ರಹ್ಮವಿಲ್ಲದಂದು, ಪರಶಿವರಿಲ್ಲದಂದು, ಊರ್ಧ್ವ ಶೂನ್ಯ, ಮಧ್ಯಶೂನ್ಯವಾಗಿಹ ನಿರಾಮಯ ಬ್ರಹ್ಮವಿಲ್ಲದಂದು, ಶಂಕರ, ಶಶಿಧರ, ವೃಷಭ, ವಾಹನರಿಲ್ಲದಂದು, ಸುರಾಳ, ನಿರಾಳವಿಲ್ಲದಂದು, ಹಮ್ಮು ಬಿಮ್ಮುಗಳಿಲ್ಲದಂದು, ಬ್ರಹ್ಮ, ವಿಷ್ಣು, ರುದ್ರ, ಈಶ್ವರ, ಸದಾಶಿವರಿಲ್ಲದಂದು, ಪೃಥ್ವಿ, ಅಪ್ಪು, ತೇಜ, ವಾಯು ಆಕಾಶವಿಲ್ಲದಂದು ಚಂದ್ರ ಸೂರ್ಯ ಆತ್ಮರಿಲ್ಲದಂದು ಏನು ಏನೂ ಇಲ್ಲದಂದು ನಿರಂಜನಾತೀತನಾಗಿರ್ದನಯ್ಯ ಇಲ್ಲದಂತೆ, ನಮ್ಮ ಅಪ್ರಮಾಣ ಕೂಡಲಸಂಗಮದೇವಾ.

೮೨. ಅನಂತ ಕೋಟಿ ಸೂರ್ಯ ಚಂದ್ರಾಗ್ನಿಮಯವಾಗಿಹ ಪರಂಜ್ಯೋತಿ ಉದಯವಾಗದಂದು, ರಾಜಸ ತಾಮಸ ಸಾತ್ವಿಕ ಗುಣತ್ರಯ

ಗಳುತ್ಪತ್ಯವಾಗದಂದು, ಅಕ್ಷರತ್ರಯಂಗಳು ತ್ಪತ್ಯವಾಗದಂದು, ಸರ್ಪನ ಮೇಲೆ ಪೃಥ್ವಿಹಾಸದಂದು, ಮಹಾಮೇರು ಕೈಲಾಸವಿಲ್ಲದಂದು, ಗಂಗೆ ವಾಳುಕ ಸಮ ರುದ್ರರಿಲ್ಲದಂದು ಸ್ವರ್ಗ ಮರ್ತ್ಯ ಪಾತಾಳಲೋಕ ವಿಲ್ಲ ದಂದು, ಭೂಲೋಕ ಭುವರ್ಲೋಕ ವಿಲ್ಲದಂದು, ಮಹರ್ಲೋಕ ಜನ ಲೋಕ. ತಪರ್ಲೋಕ, ಸತ್ಯಲೋಕ, ಗೋಲೋಕ, ಇಂತೇಳು ಲೋಕಂ ಗಳಿಲ್ಲದಂದು ಅತಳ, ವಿತಳ, ಸುತಳ; ತಳಾತಳ, ರಸಾತಳ, ನಿರಾತಳ, ಪಾತಾಳ, ಲೋಕಂಗಳೆಂಬ ಕೆಳಗೇಳು ಲೋಕಂಗಳು ಇಲ್ಲದಂದು ಮಲ ಯಶಕ್ತಿ ವಿದ್ಯ ಮಹೇಂದ್ರ ರುಕ್ಷವಂತ ಸಹ್ಯವೆಂಬ ಸಪ್ತಕುಲ ಪರ್ವತಂ ಗಳಿಲ್ಲದಂದು ಸಾಲ್ವತ್ತೆಂಟುಸಾವಿರ ಮುನಿಗಳಿಲ್ಲದಂದು ಮೂವತ್ತುಮೂರು ಕೋಟಿ ದೇವತೆಗಳಿಲ್ಲದಂದು ಸರ್ವಶೂನ್ಯ ನಿರಾಲಂಬವಾಗಿರ್ದಲ್ಲಿ ನಿರಂಜ ನಾತೀತನಾಗಿರ್ದನೆಯ್ಯಾ ಇಲ್ಲದಂತೆ ನಮ್ಮ ಅಪ್ರಮಾಣ ಕೂಡಲಸಂಗಮ ದೇವಾ.

೮೩. ತತ್ವವಾಚ್ಯ ಅವಾಚ್ಯ ಪ್ರಣವ ತಲೆದೋರದಂದು, ಕಲಾ ತತ್ವ ತಲೆದೋರದಂದು, ಅನಾದಿತ್ವ ತಲೆದೋರದಂದು, ಚಿನ್ನಾದ, ಚಿದ್ಬಿಂದು ಚಿತ್ಕಳೆ ತಲೆದೋರದಂದು, ನಾದ ಸುನಾದ ತಲೆದೋರದಂದು, ಮಹಾ ನಾದ ಗುಹ್ಯನಾದ ತಲೆದೋರದಂದು, ಇವೇನು ಏನೂ ಎನಲಿಲ್ಲದಂದು, ನಿರಂಜನಾತೀತನಾಗಿರ್ದನಯ್ಯಾ ಇಲ್ಲದಂತೆ, ನಮ್ಮ ಅಪ್ರಮಾಣ ಕೂಡಲ ಸಂಗಮದೇವಾ

೮೪. ನಿರಂಜನ ಪ್ರಣವ, ಅವಾಚ್ಯ ಪ್ರಣವ,ಉತ್ಪತ್ಯವಾಗದತ್ತ,ಕಲಾ ಪ್ರಣವ, ನಾದಿ ಪ್ರಣವ ಉತ್ಪತ್ಯವಾಗದತ್ತ, ಅಕಾರ ಉಕಾರ ಮಕಾರ ವೆಂಬ ಬೀಜ ಉತ್ಪತ್ಯವಾಗದತ್ತ, ನಾದ ಬಿಂದು ಕಳೆಗಳುತ್ಪತ್ಯವಾಗದತ್ತ, ಪ್ರಕೃತಿ ಪ್ರಾಣ ಓಂಕಾರ ಉತ್ಪತ್ಯವಾಗದತ್ತತ್ತ, ಲೋಕಾದಿ ಲೋಕಂಗ ಳೇನೂ ಉತ್ಪತ್ಯವಾಗದತ್ತ ನಿರಂಜನ ಪ್ರಣವ ಅತೀತನಾಗಿರ್ದನಯ್ಯಾ ಇಲ್ಲ ದಂತೆ ನಮ್ಮ ಅಪ್ರಮಾಣ ಕೂಡಲಸಂಗಮದೇವಾ.

೮೫. ಸಕಲ ತತ್ವವಿಲ್ಲದಂದು, ನಿಃಕಲ ತತ್ವವಿಲ್ಲದಂದು, ಸಕಲ ನಿಃಕಲ ತತ್ವವಿಲ್ಲದಂದು, ಪರಶಿವತತ್ವ ವಿಲ್ಲದಂದು, ನಿರಂಜನ ತತ್ವವಿಲ್ಲ ದಂದು. ಈ ತತ್ವಂಗಳೇನೂ ಇಲ್ಲದಂದು, ನಿರಂಜನಾತೀತನಾಗಿರ್ದನಯ್ಯಾ ಇಲ್ಲದಂತೆ ನಮ್ಮ ಅಪ್ರಮಾಣ ಕೂಡಲಸಂಗಮದೇವಾ.

೮೬. ಏನು ಏನು ಎನಲಿಲ್ಲದ ಮಹಾ ಘನ ನಿರಂಜನಾತೀತನಾಗಿಹ ವಸ್ತು ಲೋಕಾದಿ ಲೋಕಂಗಳ ಸೃಜಿಸಬೇಕೆಂದು ನೆನಹುಮಾತ್ರದಲ್ಲಿಯೇ ನಿರಂಜನಪ್ರಣವ ಉತ್ಪತ್ಯವಾಯಿತ್ತು. ಇನ್ನು ನಿರಂಜನ ಪ್ರಣವದ ಸ್ಥಲದ ವಚನ ಅದೆಂತೆಂದೊಡೆ ಮಂತ್ರಾಧ್ವ, ಪದಾಧ್ವ, ಜನನಕ್ಕೆ ಬಾರದಂದು ವರ್ಣಾಧ್ವ, ಭುವನಾಧ್ವ ಜನನಕ್ಕೆ ಬಾರದಂದು ತತ್ವಾಧ್ವ, ಕಲಾಧ್ವ ಜನನಕ್ಕೆ ಬಾರದಂದು, ನಿರಂಜನಪ್ರಣವವಾಗಿರ್ದನಯ್ಯ ಇಲ್ಲದಂತೆ ನಮ್ಮ ಅಪ್ರಮಾಣ ಕೂಡಲಸಂಗಮದೇವಾ.

೮೭. ಆಧಾರ, ಸ್ವಾಧಿಷ್ಠಾನ ಚಕ್ರ ಉತ್ಪತ್ಯವಾಗದ ಮುನ್ನ ಮಣಿಪೂರಕ ಅನಾಹತ ಚಕ್ರ ಉತ್ಪತ್ಯವಾಗದ ಮುನ್ನ, ವಿಶುದ್ಧಿ ಚಕ್ರ, ಆಜ್ಞಾ ಚಕ್ರ ಉತ್ಪತ್ಯವಾಗದ ಮುನ್ನ, ಬ್ರಹ್ಮಚಕ್ರ ಶಿಖಾಚಕ್ರ ಉತ್ಪತ್ಯವಾಗದ ಮುನ್ನ, ಪಶ್ಚಿಮ ಚಕ್ರ ಅಣುಚಕ್ರ ಉತ್ಪತ್ಯವಾಗದ ಮುನ್ನ, ನಿರಂಜನ ಪ್ರಣವವಾಗಿರ್ದನಯ್ಯಾ ಇಲ್ಲದಂತೆ, ನಮ್ಮ ಅಪ್ರಮಾಣ ಕೂಡಲಸಂಗಮದೇವಾ.

೮೮. ನಿರಾಳಜಾಗ್ರ, ನಿರಾಳಸ್ವಪ್ನ, ಇವಿಲ್ಲದತ್ತತ್ತ ನಿರಾಳಸುಷುಪ್ತಿ ನಿರಾಳತೂರ್ಯವಿಲ್ಲದತ್ತತ್ತ. ನಿರಾಳವ್ಯೋಮ ನಿರಾಳ ವ್ಯೋಮಾತೀತವಿಲ್ಲದತ್ತತ್ತ, ನಿರಂಜನಪ್ರಣವವಾಗಿದ್ದನಯ್ಯ ಇಲ್ಲದಂತೆ ನಮ್ಮ ಅಪ್ರಮಾಣ ಕೂಡಲಸಂಗಮದೇವಾ.

೮೯. ನಿರ್ಮಲಜಾಗ್ರ, ನಿರ್ಮಲಸ್ವಪ್ನವಿಲ್ಲದಂದು, ನಿರ್ಮಲ ಸುಷುಪ್ತಿ ನಿರ್ಮಲ ತೂರ್ಯವಿಲ್ಲದಂದು, ನಿರ್ಮಲವ್ಯೋಮ, ನಿರ್ಮಲವ್ಯೋಮಾತೀತವಿಲ್ಲದಂದು ನಿರಂಜನಪ್ರಣವವಾಗಿದ್ದನಯ್ಯ ಇಲ್ಲದಂತೆ ನಮ್ಮ ಅಪ್ರಮಾಣ ಕೂಡಲಸಂಗಮದೇವಾ.

೯೦. ಶಿವಜಾಗ್ರ ಶಿವಸ್ವಪ್ನವಿಲ್ಲದಂದು ಶಿವಸುಷುಪ್ತಿ ಶಿವತೂರ್ಯವಿಲ್ಲದಂದು ಶಿವವ್ಯೋಮ ಶಿವವ್ಯೋಮಾತೀತ ವಿಲ್ಲದಂದು ನಿರಂಜನ ಪ್ರಣವವಾಗಿದ್ದನಯ್ಯ ಇಲ್ಲದಂತೆ ನಮ್ಮ ಅಪ್ರಮಾಣ ಕೂಡಲಸಂಗಮದೇವಾ.

೯೧. ಜ್ಞಾನಜಾಗ್ರ ಜ್ಞಾನಸ್ವಪ್ನ ವಿಲ್ಲದಂದು ಜ್ಞಾನಸುಷುಪ್ತಿ ಜ್ಞಾನತೂರ್ಯವಿಲ್ಲದಂದು ಜ್ಞಾನವ್ಯೋಮ ಜ್ಞಾನವ್ಯೋಮಾತೀತವಿಲ್ಲದ ಮುನ್ನ ನಿರಂಜನ ಪ್ರಣವವಾಗಿದ್ದನಯ್ಯಾ ಇಲ್ಲದಂತೆ ನಮ್ಮ ಅಪ್ರಮಾಣ ಕೂಡಲಸಂಗಮದೇವಾ.

೯೨. ಶಿವತತ್ವವಿಲ್ಲದಂದು ಸದಾಶಿವ ತತ್ವವಿಲ್ಲದಂದು ಮಹೇಶ್ವರ ತತ್ವವಿಲ್ಲದಂದು ಕೇವಲ ತತ್ವವಿಲ್ಲದಂದು ಸಕಲತತ್ವವಿಲ್ಲದಂದು ಶುದ್ಧ ತತ್ವವಿಲ್ಲದಂದು ಈ ತತ್ವಂಗಳೇನೂ ಏನೂ ಎನಲಿಲ್ಲದಂದು ನಿರಂಜನ ಪ್ರಣವಮವಾಗಿದ್ದನಯ್ಯ ಇಲ್ಲದಂತೆ ನಮ್ಮ ಅಪ್ರಮಾಣ ಕೂಡಲಸಂಗಮದೇವಾ.

೯೩. ನಿರಂಜನ ಪ್ರಣವದ ನೆನಹು ಮಾತ್ರ ಬಿಂದು ವಾಚ್ಯ ಪ್ರಣವ ಉತ್ಪತ್ಯವಾಯಿತ್ತು ಇನ್ನು ಅವಾಚ್ಯ ಪ್ರಣವದ ಸ್ಥಲದ ವಚನ ಅದೆಂತೆಂದಡೆ ನಿರಾಳ ಶಾಂತ್ಯತೀತೋತ್ತರ ಕಲೆ ನಿರಾಳ ಶಾಂತ್ಯತೀತ ಕಲೆಗಳಲ್ಲಿದಂದು ನಿರಾಳ ಶಾಂತಿಕಲೆ ನಿರಾಳ ವಿದ್ಯಾಕಲೆಗಳಿಲ್ಲದಂದು ನಿರಾಳ ಪ್ರತಿಷ್ಠಾಕಲೆ ನಿರಾಳ ನಿವೃತ್ತಿ ಕಲೆಗಳಿಲ್ಲದಂದು ನಿರಾಳ ಮಹಾ ಸಾದಾಖ್ಯ ನಿರಾಳ ಶಿವಸಾದಾಖ್ಯವಿಲ್ಲದಂದು ನಿರಾಳ ಅಮೂರ್ತಿ ಸಾದಾಖ್ಯ ವಿಲ್ಲದಂದು ನಿರಾಳಮೂರ್ತಿ ಸಾದಾಖ್ಯ ವಿಲ್ಲದಂದು ನಿರಾಳ ಕರ್ತೃಸಾ ದಾಖ್ಯವಿಲ್ಲದಂದು ನಿರಾಳ ಕರ್ಮಸಾದಾಖ್ಯ ವಿಲ್ಲದಂದು ಅಜಪಗಾಯತ್ರಿ ಇಲ್ಲದಂದು ಅವಾಚ್ಯ ಪ್ರಣವವಾಗಿದ್ದನು ನೋಡಾ ಇಲ್ಲದಂತೆ ನಮ್ಮ ಅಪ್ರಮಾಣ ಕೂಡಲಸಂಗಮದೇವಾ.

೯೪. ಆದಿಯನಾದಿ ಇಲ್ಲದಂದು, ಅಜಾಂಡ ಬ್ರಹ್ಮಾಂಡವಿಲ್ಲದಂದು, ವ್ಯೋಮವ್ಯೋಮಾಕಾಶವಿಲ್ಲದಂದು, ಜೀವ ಪರಮರಿಲ್ಲದಂದು, ಅಜಪ ಗಾಯತ್ರಿ ಇಲ್ಲದಂದು ಅನೇಕ ಕೋಟಿ ವೇದಾಗಮ ಶಾಸ್ತ್ರ ಪುರಾಣಾದಿ ಗಳಿಲ್ಲದಂದು, ದ್ವೈತಾದ್ವೈತವಿಲ್ಲದಂದು, ಶೂನ್ಯ ನಿಶ್ಶೂನ್ಯವಿಲ್ಲದಂದು, ಅವಾಚ್ಯಪ್ರಣವವಾಗಿರ್ದನು ನೋಡಾ, ಇಲ್ಲದಂತೆ ನಮ್ಮ ಅಪ್ರಮಾಣ ಕೂಡಲಸಂಗಮದೇವಾ.

೯೫. ಬ್ರಹ್ಮ, ವಿಷ್ಣು, ರುದ್ರರಿಲ್ಲದಂದು, ಈಶ್ವರ ಸದಾಶಿವರಿಲ್ಲ ದಂದು, ಉಮೆಯ ಕಲ್ಯಾಣವಾಗದಂದು, ರವಿ ಶಶಿಗಳ ಗಂಗೆಯ ಧರಿಸ ದಂದು, ಸಚರಾಚರಂಗಳು ರಚನೆಗೆ ಬಾರದಂದು, ಅವಾಚ್ಯ ಪ್ರಣವ ತಾನೆಯಾಗಿದ್ದನು ನೊಡಾ ಇಲ್ಲದಂತೆ ನಮ್ಮ ಅಪ್ರಮಾಣ ಕೂಡಲ ಸಂಗಮದೇವನು.

೯೬. ಮಹಾ ಸಾದಾಖ್ಯ, ಶಿವಸಾದಾಖ್ಯವಿಲ್ಲದಂದು, ಅಮೂರ್ತಿ ಸಾದಾಖ್ಯವಿಲ್ಲದಂದು, ಮೂರ್ತಿಸಾದಾಖ್ಯವಿಲ್ಲದಂದು, ಕರ್ತೃಸಾದಾಖ್ಯ

ಕವರ್ ಸಾದಾಖ್ಯವಿಲ್ಲದಂದು, ಶಾಂತತೀತೋತ್ತರ ಕಲೆ, ಶಾಂತತೀತ ಕಲೆಗಳಿಲ್ಲದಂದು, ಶಾಂತಿಕಲೆ, ವಿದ್ಯಾಕಲೆಗಳಿಲ್ಲದಂದು, ಪ್ರತಿಷ್ಠಾಕಲೆ ನಿವೃತ್ತಿ ಕಲೆಗಳಿಲ್ಲದಂದು, ನಿಃಕಲ ಶಕ್ತಿ, ಪರಶಕ್ತಿ ಜನನಕ್ಕೆ ಬಾರದಂದು ಆದಿ ಶಕ್ತಿ, ಇಚ್ಛಾಶಕ್ತಿ, ಜನನಕ್ಕೆ ಬಾರದಂದು, ಜ್ಞಾನಶಕ್ತಿ, ಕ್ರಿಯಾಶಕ್ತಿ ಜನನಕ್ಕೆ ಬಾರದಂದು, ಅವಾಚ್ಯ ಪ್ರಣವವಾಗಿರ್ದನು ನೋಡಾ ಇಲ್ಲದಂತೆ ನಮ್ಮ ಅಪ್ರಮಾಣ ಕೂಡಲಸಂಗಮದೇವನು.

೯೭. ಅವಾಚ್ಯ ಪ್ರಣವದ ನೆನಹು ಮಾತ್ರದಲ್ಲಿ, ಕಲಾಪ್ರಣವ ಉತ್ಪತ್ತ್ಯ, ಇನ್ನು ಕಲಾಪ್ರಣವದ ಸ್ಥಲದ ವಚನ ಅದೆಂತೆಂದಡೆ. ಅವಾಚ್ಯ ಪ್ರಣವದ ನೆನಹು ಮಾತ್ರದಲ್ಲಿ, ಚಿನ್ನಾದ, ಚಿದ್ಬಿಂದು, ಚಿತ್ಕಳೆ ಉತ್ಪತ್ತ್ಯ, ಚಿನ್ನಾದ ಕಲೆ, ದ್ವಾದಶಕಲೆ, ಚಿದ್ಬಿಂದುಕಲೆ, ಷೋಡಶ ಕಲೆ, ಚಿತ್ಕಲೆಯ ಕಲೆ, ದಶಕಲೆ, ಆ ಮೂವತ್ತೆಂಟು ಕಲೆಗಳು ಏಕವಾಗಿ, ಕಲಾಪ್ರಣವ ಉತ್ಪತ್ತ್ಯನೋಡಾ ಅಪ್ರಮಾಣ ಕೂಡಲಸಂಗಮದೇವಾ.

೯೮. ಆ ಕಲಾಪ್ರಣವದ ಮೂವತ್ತೆಂಟು ಕಾಂತಿಯದೆಂತೆಂದಡೆ ಒಂದೊಂದು ಕಲೆಗಳು ಕಾಲಾಗ್ನಿಯೋಪಾದಿಯ ಕಾಂತಿಯನುಳ್ಳುದು, ಒಂದೊಂದು ಕಲೆಗಳು ಕೋಟಿ ಮಿಂಚುಗಳಿಗೆ ಸಮಾನವಹ ಪ್ರಭೆಯ್ಯ ಮುಳ್ಳುದು. ಜ್ಞಾನಸ್ವರೂಪವಾಗಿಹ, ಸೂಕ್ಷ್ಮ ಕಲೆಗಳೇಕವಾಗಿ ಮೂವತ್ತೆಂಟು ಕೋಟಿ ಮಿಂಚುಗಳಿಗೆ ಸಮಾನವಾಹ ಪ್ರಭೆಯನುಳ ಚಿತ್ಕಲಾ ಪ್ರಣವವು ಶಿಖಾಗ್ರದಲ್ಲಿಹುದು ನೋಡಾ ಅಪ್ರಮಾಣ ಕೂಡಲ ಸಂಗಮದೇವಾ.

೯೯. ರಹಸ್ಯೇ ॥ ಜ್ವಲತ್ಕನಲಾಭಾಸ । ತಟಿತ್ಕೋಟಿ ಸಮಪ್ರಭಾಃ । ತತ್ಸ್ರೋರ್ದ್ಧಂಚ ಶಿಖಾಸೂಕ್ಷ್ಮಂ । ಚಿದ್ರೂಪಂ ಪರಮಂಕಳಾ ಎಂದುದಾಗಿ, ಅಪ್ರಮಾಣ ಕೂಡಲಸಂಗಮದೇವಾ.

೧೦೦. ಚಿತ್ಕಳಾಪ್ರಣಮವನುಪಮಿಸಬಾರದ ಉಪಮಾತೀತವು, ಮನಾತೀತವು, ವರ್ಣಾತೀತವು, ತತ್ವಾತೀತವು, ಜ್ಞಾನಾತೀತವು ನಿರಂಜನ ಕಲಾ ಪ್ರಣವ ಸೂಕ್ಷ್ಮವಾಗಿಹುದು ನೋಡಾ ಅಪ್ರಮಾಣ ಕೂಡಲ ಸಂಗಮದೇವಾ.

೧೦೨. ರಹಸ್ಯ ॥ ವಾಙ್ಮಾತೀತಮನಾತೀತಂ । ವರ್ಣಾತೀತಂ ಚ ಶಶ್ವರಃ । ಜ್ಞಾನಾತೀತ ನಿರಂಜನಂ । ಕಳಾಯಾಂ ಸೂಕ್ಷ್ಮ ಭಾವಯೇತ್ ಎಂದುದಾಗಿ, ಅಪ್ರಮಾಣ ಕೂಡಲಸಂಗಮದೇವಾ.

೧೦೩. ವಚನ ॥ ಅಷ್ಟಕುಲ ಪರ್ವತಂಗಳುತ್ಪತ್ಯವಾಗದಂದು! ಅಷ್ಟದಿಕ್ಪಾಲಕರುತ್ಪತ್ಯವಾಗದಂದು, ಮಹಾ ಮೇರು ಕೈಲಾಸ ಉತ್ಪತ್ಯವಾಗದಂದು, ಅಷ್ಟ ವಸುಗಳು ದ್ವಾದಶಾದಿತ್ಯರೇಕಾದಶ ರುದ್ರರುತ್ಪತ್ಯವಾಗದಂದು, ದ್ವಾದಶ ರಾಶಿ ನಕ್ಷತ್ರ ನವಗ್ರಹಂಗಳಿಲ್ಲದಂದು, ಅಗ್ನಿಮಂಡಲಾದಿತ್ಯಮಂಡಲ ಉತ್ಪತ್ಯವಾಗದಂದು, ಚಂದ್ರಮಂಡಲ ತಾರಾಮಂಡಲುತ್ಪತ್ಯವಾಗದಂದು ಏನು ಏನು ಎನಲಿಲ್ಲದಂದು, ಚಿತ್ಕಳಾಪ್ರಣವವಾಗಿರ್ದನು ನೋಡಾ ಇಲ್ಲದಂತೆ ನಮ್ಮ ಅಪ್ರಮಾಣ ಕೂಡಲಸಂಗಮದೇವಾ.

೧೦೪. ಏನೂ ಏನೂ ಎನಲಿಲ್ಲದ ಮಹಾ ಘನ ಚಿತ್ಕಳಾಪ್ರಣವದ ನೆನಹುಮಾತ್ರದಲ್ಲಿ ಅನಾದಿಪ್ರಣವ ಉತ್ಪತ್ಯ, ಇನ್ನು ಅನಾದಿ ಪ್ರಣವದ ಸ್ಥಲದ ವಚನವದೆಂತೆಂದಡೆ, ಆದಿ ಅಕಾರ ಉಕಾರ ಮಕಾರ ವಿಲ್ಲದಂದು, ಆದಿ ನಾದಬಿಂದು ಕಳೆಗಳಿಲ್ಲದಂದು, ಆದಿ ಪ್ರಕೃತಿಪ್ರಾಣವಿಲ್ಲದಂದು, ಅಖಂಡ ಜ್ಯೋತಿರ್ಮಯವಾಗಿಹ ಗೋಳಕಾಕಾರ ಪ್ರಣವವೆಂಬ ಜ್ಯೋತಿರ್ಲಿಂಗವಿಲ್ಲದಂದು, ಓಂಕಾರವೆಂಬ ಅನಾದಿ ಪ್ರಣವವಾಗಿರ್ದನು ನೋಡಾ ಇಲ್ಲದಂತೆ ನಮ್ಮ ಅಪ್ರಮಾಣ ಕೂಡಲಸಂಗಮದೇವಾ.

೧೦೫. ಆದಿರುದ್ರ, ಆದಿಈಶ್ವರ, ಆದಿಸದಾಶಿವರಿಲ್ಲದ ಮುನ್ನ ಮುನ್ನ, ಆದಿ ಅಕಾರ ಉಕಾರ ಮಕಾರಕ್ಕೆ, ಆದಿ ನಾದಬಿಂದು ಕಳೆಗಳಾದರವಾಗದ ಮುನ್ನ ಮುನ್ನ, ಆ ಆದಿ ನಾದಬಿಂದು ಕಳೆಗೆ ಆ ಆದಿ ಪ್ರಕೃತಿಗಳಾಧಾರವಾಗದ ಮುನ್ನ ಮುನ್ನ, ಆ ಆದಿ ಪ್ರಕೃತಿಗೆ ಪ್ರಾಣಾಧಾರವಾಗದ ಮುನ್ನ ಮುನ್ನ ಆ ಲಿಂಗಕ್ಕೆ ಲಿಂಗವಾಧ್ಯಾವಾಗದ ಮುನ್ನ ಮುನ್ನವೆ ಓಂಕಾರವೆಂಬ ಅನಾದಿ ಪ್ರಣವವಾಗಿರ್ದನು ನೋಡಾ - ಇಲ್ಲದಂತೆ ನಮ್ಮ ಅಪ್ರಮಾಣ ಕೂಡಲಸಂಗಮದೇವಾ.

೧೦೬. ಆದಿ ಅಕಾರದಲ್ಲಿ ತಾರಕಾಸ್ವರೂಪ, ದಂಡಕಾಸ್ವರೂಪ ಉತ್ಪತ್ಯವಾಗದ ಮುನ್ನ ಮುನ್ನವೆ. ಆದಿ ಉಕಾರದಲ್ಲಿ ಕುಂಡಲಾಕಾರ ಅರ್ಧ

ಚಂದ್ರಕ ಉತ್ಪತ್ಯವಾಗದ ಮುನ್ನ ಮುನ್ನಲಿ ಆದಿ ಮಕಾರದಲ್ಲಿ ದರ್ಪಣಾ ಕಾರ ಜ್ಯೋತಿ ಸ್ವರೂಪ ಉತ್ಪತ್ಯವಾಗದ ಮುನ್ನ ಮುನ್ನವೆ, ಆದಿ ಅಕಾರ ಉಕಾರ ಮಕಾರ ಈ ಮೂರು ಏಕವಾಗಿ, ಅಖಂಡ ಜ್ಯೋತಿರ್ಮಯ ವಾಗಿಹ ಗೋಳಕಾಕಾರ ಪ್ರಣವ ಉತ್ಪತ್ಯವಾಗದ ಮುನ್ನ ಮುನ್ನವೆ ಓಂಕಾರವೆಂಬ ಅನಾದಿ ಪ್ರಣವವಾಗಿದ್ದನು ನೋಡಾ ಇಲ್ಲದಂತೆ ನಮ್ಮ ಅಪ್ರಮಾಣ ಕೂಡಲಸಂಗಮದೇವಾ.

೧೦೬. ಮಂತ್ರ ಹನ್ನೊಂದು ವೈಶಾಲ್ಯವಾಗದಂದು, ಪದತೊಂಭತ್ತು ನಾಲ್ಕು ವೈಶಾಲ್ಯವಾಗದಂದು, ವರ್ಣ ಐವತ್ತೆರಡು ವೈಶಾಲ್ಯವಾಗದಂದು, ಇನ್ನೂರು ಇಪ್ಪತ್ತುನಾಲ್ಕು ಭುವನ ವೈಶಾಲ್ಯವಾಗದಂದು, ತೊಂಬತ್ತಾರು ತತ್ವ ವೈಶಾಲ್ಯವಾಗದಂದು, ಅರುವತ್ತು ನಾಲ್ಕು ಕಳೆ ವೈಶಾಲ್ಯವಾಗದಂದು ಓಂಕಾರವೆಂಬ ಅನಾದಿ ಪ್ರಣವವಾಗಿದ್ದನು ನೋಡಾ ಇಲ್ಲದಂತೆ ನಮ್ಮ ಅಪ್ರಮಾಣ ಕೂಡಲಸಂಗಮದೇವಾ.

೧೦೭. ಓಂಕಾರವೆಂಬ ಅನಾದಿಪ್ರಣವದ ನೆನಹುಮಾತ್ರದಲ್ಲಿ ಆದಿ ಅಕಾರ, ಉಕಾರ, ಮಕಾರ, ಉತ್ಪತ್ಯವಾಯಿತ್ತು. ಇನ್ನು ಆದಿ ಅಕಾರ ಉಕಾರ ಮಕಾರದಲ್ಲಿ ಆ ಆದಿ ನಾದ ಬಿಂದು ಕಳೆ ಈ ಮೂರು ಏಕವಾಗಿ ಅಖಂಡ ಜ್ಯೋತಿರ್ಮಯವಾಗಿಹ ಗೋಳಕಾಕಾರ ಪ್ರಣವವಾಯಿತ್ತು. ಅದೆಂತೆಂದಡೆ, ಓಂಕಾರವೆಂಬ ಅನಾದಿ ಪ್ರಣವದ ನೆನಹುಮಾತ್ರದಲ್ಲಿ ಆದಿ ಅಕಾರ, ಉಕಾರ, ಮಕಾರ ಉತ್ಪತ್ಯ. ಆ ಆದಿ ಅಕಾರ ಉಕಾರ ಮಕಾರ ಈ ಮೂರು ಬೀಜಾಕ್ಷರ ಅಕಾರವೇ ಆದಿನಾದ ಉಕಾರವೇ ಆದಿಬಿಂದು ಮಕಾರವೇ ಆದಿಕಳೆ, ಅಕಾರವೇ ಆದಿರುದ್ರ, ಉಕಾರವೇ ಆದಿ ಈಶ್ವರ, ಮಕಾರವೇ ಆದಿಸದಾಶಿವ. ಇಂತೀ ಆದಿ ಅಕಾರ-ಉಕಾರ, ಮಕಾರಕ್ಕೆ ಆದಿನಾದ ಬಿಂದುಕಳೆಯೇ ಆಧಾರ ಆ ಆದಿನಾದ ಬಿಂದುಕಳೆಗೆ ಆ ಆದಿ ಪ್ರಕೃತಿಗೆ ಪ್ರಣಮಮಂತ್ರಯೇ ಆಧಾರ ಅಪ್ರಣವು ಮಾತ್ರಿಕೆಗೆ ಅಖಂಡ ಜ್ಯೋತಿರ್ಮಯ ಲಿಂಗವೇ ಆಧಾರ, ಆ ಎಂದರೆ ಅನಾಹತ, ಉ ಎಂದರೆ ಆದಿ ನಾದ ಇಳಿಯಿತ್ತು. ಮಾ ಎಂಬಲ್ಲಿ ಬಿಂದು ಬಂದು ಕೂಡಲು, ಶಿವಶಕ್ತಿಯಾಗುತ್ತಿಹಂತಾ ಓಂಕಾರವಾಯಿತ್ತು. ನೋಡಾ ಅಪ್ರಮಾಣ ಕೂಡಲಸಂಗಮದೇವ.

# ಶಿವಶರಣರು ಸಮಾಜಕ್ಕೆ ಸಲ್ಲಿಸಿದ ಸೇವೆ.

(ಲೇ:- ಜಿ. ಎಮ್. ಕಟಗೇರಿ, ಬೇಲೂರು.)

—ooo—

ಶ್ರೀ ಶಿವನ ಸ್ವರೂಪಿಗಳಾದ ಶಿವಶರಣರು ಆಗಿ ಹೋಗಿದ್ದಾರೆ, ಎಂದು ಹೇಳುವವರು ತಮ್ಮ ಒಳಗಣ್ಣನ್ನು ತೆರೆದು ನೋಡಿದ್ದಾದರೆ ಶಿವಶರಣರು ಇದ್ದಾರೆ ಎಂಬ ಕಲ್ಪನೆಗಳು ಬಂದಾವು. ಅವರು ವ್ಯಕ್ತಿಗತವಾಗಿ ಬಾಳಿ ಹೋಗಿಲ್ಲ. ಒಂದು ಶಕ್ತಿಯಾಗಿ ಬಾಳಿ ಹೋಗಿದ್ದಾರೆ, ಎಂದು ಹೇಳಲು ಕೆಸರು, ಮಳಲು, ನೊರೆ, ತೊರೆಗಳು ಎಲ್ಲವೂ ಸಿಹಿ, ಎಲ್ಲವೂ ರುಚಿ, ಎಲ್ಲವೂ ಸದುಪಯೋಗ. ಕಳವೆ ಇಲ್ಲದೆ ಅವರದೇ ಆದ ವಚನ ಸಾಹಿತ್ಯವು ಪ್ರವಾಹವಾಗಿ ಹರಿಯುತ್ತಿರುವಾಗ, ಅಪರಂಜಿಯಾಗಿ ಕಂಗೊಳಿಸುತ್ತಿರುವಾಗ ಅವರ ನೆನಹು ನನಸಾಗದೆ ಇರದು.

ನಮ್ಮೀ ನಾಡಿಗೆ ಅಚ್ಚಗನ್ನಡದ ಬೇಸಾಯಗಾರರಾದ ಉಪನಿಷತ್ ಕರ್ತೃಗಳಾಗಿ ಮಹರ್ಷಿಗಳೆನಿಸಿದ ಕನ್ನಡಿಗರು ಹೆಮ್ಮೆಪಡಬಹುದಾದ ಮಹಾ ಶಕ್ತಿಗಳಾಗಿರುವರು. ಶಿವಶರಣರ ಸಾಹಿತ್ಯದಲ್ಲಿ ಜೀವಕಳೆಯಿದೆ, ಮತ್ತು ಈ ಸಾಹಿತ್ಯ ಅಮೌಲ್ಯವಾದುದು: ಧರ್ಮ ಗ್ರಂಥಗಳಾದ, ಸಿದ್ಧಾಂತ ಗ್ರಂಥಗಳಾದ ಉತ್ತಮ ಸಾಹಿತ್ಯ ಗ್ರಂಥಗಳಾದ, ತಮ್ಮ ಮನೋಭಾವವನ್ನು ಮರೆಯಿಸಿದ, ವಿಶ್ವಧರ್ಮ ಸಾರವನ್ನು ಸರಳ ಶೈಲಿಯಲ್ಲಿ ತಿಳಿಸುವ, ಒಂದು ಸಾಹಿತ್ಯವನ್ನು ಹೆಣೆದು ಜನಸಮೂಹದೆದುರು ಇಟ್ಟಿದ್ದಾರೆ. ಈ ಮಾಲೆಯೇ ನಮ್ಮಗಳೆಲ್ಲರಿಗೆ ನೀತಿಯ ನೆಲೆಗಟ್ಟನ್ನು ಭದ್ರಪಡಿಸಿದೆ, ಭದ್ರಪಡಿಸುತ್ತಲಿದೆ, ಇನ್ನೂ ಭದ್ರಪಡಿಸುವದು. ಇಂಥ ಶಿವಶರಣರ ವಚನಸಾಹಿತ್ಯವನ್ನು ಅರಿತುಕೊಂಡರೆ ಸಾಕು. ಅವನು ಅರಿತುಕೊಳ್ಳುವ ಸಾಹಿತ್ಯವಾವುದೂ ಉಳಿಯದು. "ಕತ್ತೆ ಬಲ್ಲುದೇ ಕತ್ತುರಿಯ ?' ಎಂಬ ನಾಣ್ಣುಡಿಯಂತೆ ನಮ್ಮ ಜನಸಮುದಾಯವು ಅದನ್ನು ಅರಿಯಬೇಕಾದಷ್ಟು ಅರಿತಿಲ್ಲವೆಂದರೂ ಯೋಗ್ಯವು. ಇಂಗ್ಲೀಷದಲ್ಲಿ "*Golden Sayings*" ಬಹಳ ಮಹತ್ವದವು ಎಂದು ತಿಳಿದುಕೊಂಡು ತಮ್ಮ ಜೀವನವನ್ನೇ ಇಂಗ್ಲೀಷಕ್ಕೆ ಮೀಸಲಿಟ್ಟ ಅನೇಕ ಮಹಾ ವ್ಯಕ್ತಿಗಳು ಉಂಟು. ಆದರೆ ಕನ್ನಡ ಸಾಹಿತ್ಯದ ಜೀವರತ್ನಗಳು ಈ ವಚನಗಳು ಎಂಬುದನ್ನು ವ್ಯಕ್ತಿಗಳು ಅರಿತಿಲ್ಲವೆಂದೇ ನಾನು ಇಲ್ಲಿ ಹೇಳಬ

ಯನುತ್ತೇನೆ. ಕಾಯಕವೇ ಕೈಲಾಸ, ಸತ್ಯವೇ ಶಿವನು, ಎಂಬ ಮಾತುಗಳನ್ನು *It's worship, Truth is God* ಎಂದು ಹೇಳಿದ್ದಾರೆ. ಕನ್ನಡ ಸಾಹಿತ್ಯವು ಸುಳಿದ ಬಾಳೆಯ ಹಣ್ಣು ಎಂದು ಅನುಭವಾಮೃತಕಾರರು ಹೇಳಿದ್ದುಂಟು. ಸಾಹಿತ್ಯ ಮಾತಂತೂ ಇರಲಿ

ಇನ್ನು ನಾವು ಜಾತೀಯತೆಯ ಮಾತಿನತ್ತ ಹೊರಳಿದ್ದಾದರೆ, ಮಹಾತ್ಮಾ ಗಾಂಧೀಜಿಯವರು ೨೦ನೆಯ ಶತಮಾನದಲ್ಲಿ ಅಸ್ಪೃಶ್ಯರನ್ನು ಉದ್ಧಾರ ಮಾಡಿದ ಕಾರ್ಯವನ್ನು ಶಿವಶರಣರು ೧೨ನೇ ಶತಮಾನದಲ್ಲಿ 'ವಿಪ್ರ ಮೊದಲು ಅಂತ್ಯಜಕಡೆಯಾಗಿ ಎಲ್ಲರನ್ನೂ ಒಂದೇ ಎಂಬೆ. ಬ್ರಾಹ್ಮಣನಾಗಲಿ, ಕ್ಷತ್ರಿಯನಾಗಲಿ, ವೈಶ್ಯನಾಗಲಿ, ಶೂದ್ರನಾಗಲಿ, ಗುರುಕಾರುಣ್ಯವ ಪಡೆದು ಅಂಗದ ಮೇಲೆ ಲಿಂಗವ ಧರಿಸಿದವನು ಆಚಾರ ಸಂಪನ್ನ ಸತ್‌ಕ್ರಿಯನಾದ ಮಹಾತ್ಮನೇ ಮೂರುಲೋಕಕ್ಕೆ ಅಧಿಕಾರಿ' ಎಂಬ ಭಕ್ತಿಯುಕ್ತ ಮಾತುಗಳಿಂದ ಸರ್ವರಿಗೂ ತಿಳಿಯಾಗಿ ಅದರಿಂದಾಗುವ ದುಷ್ಪರಿಣಾಮವನ್ನು ತಿಳಿಸಿಕೊಟ್ಟಿದ್ದಾರೆ. ಇಷ್ಟೇ ಅಲ್ಲ, ಹರಳಯ್ಯ ಹಾಗು ಮಧುವರಸ ಇವರಲ್ಲಿ ನೆಂಟಸ್ತನ ಮಾಡಿಸಿದ್ದಾರೆ.

ಸಮಾಜವು ನೀತಿಯಿಂದ ಕೂಡಿಪ್ಪ, ನೀತಿಯು ಮಾನವನ ಜೀವಾಳವು. ಅದು ಸತ್ಯ, ಅಹಿಂಸೆ, ಅಸ್ತೇಯ, ಅಪರಿಗ್ರಹ, ಇಂದ್ರಿಯನಿಗ್ರಹ, ಬ್ರಹ್ಮಚರ್ಯ ಮೊದಲಾದ ಕವಲುಗಳಿಂದೆ ಕೂಡಿದೆ, ಎಂದು ತಿಳಿದು ಇಂದು ಮಹಾತ್ಮಾಜೀಯವರು ಹೋರಾಡಿದಂತೆ ಅಂದು ಶರಣರು "ಸತ್ಯ ನುಡಿವುದೇ ಸ್ವರ್ಗಲೋಕ" "ದಯವು ಬೇಕು ಸಕಲ ಪ್ರಾಣಿಗಳಲ್ಲಿ" "ಕಳಬೇಡ ಕೊಲಬೇಡ" "ಇಂದಿಗೆಂದು ನಾಳೆಗೆಂದು ಚಿಂತಿಸಬೇಡ" "ಶರಣಸತಿ ಲಿಂಗಪತಿ" "ಲೋಕದಡೊಂಕ ನೀವೇಕೆ ತಿದ್ದುವಿರಿ, ನಿಮ್ಮ ನಿಮ್ಮ ತನುವ ಸಂತೈಸಿಕೊಳ್ಳಿರಿ" ಎಂಬ ಅನೇಕ ತಮ್ಮ ಹಿತನುಡಿಗಳಿಂದ ಕನ್ನಡಿಗರು ಎಂದೆಂದಿಗೂ ಮರೆಯದ ನೀತಿಮಾರ್ಗವನ್ನು ತೋರಿಸಿದ್ದಾರೆ. ನೀತಿಮಾರ್ಗವನ್ನು ಅನುಸರಿಸದಿದ್ದರೆ ಕಾಗೆ ಕೋಳಿಗಳಂತೆ ನಮ್ಮ ಬಾಳು ಕೀಳು.

'ಅಂಬಲಿ ಕಂಬಳಿ ಮಾಸ್ತಿ ಮಿಕ್ಕದ್ದೆಲ್ಲ ಜಾಸ್ತಿ' ಎಂಬ ಸೂಕ್ಷ್ಮ ತತ್ವದಂತೆ ಇವರು (ಶಿವಶರಣರು) ತಮಗೂ ಸಹಿತ ಪರರಿಗೆ ಬೇಕಾದ ವಸ್ತುವನ್ನು ಗಳಿಸುತ್ತಿದ್ದಿಲ್ಲ. ಇದಕ್ಕೆ ಉದಾ:— ಓರ್ವ ಕಳ್ಳನು ಜಂಗಮ ವೇಷದಲ್ಲಿ ಬಸವಣ್ಣನವರ ಧರ್ಮಪತ್ನಿಯ ಮೈಮೇಲಿನ ಆಭರಣಗಳನ್ನು

ಬಿಚ್ಚಲು ಹೋದೆವು. ಅಲ್ಲದೆ ಇವರು ಮೇಲಿಂದ ಮೇಲೆ ಹೇಳುತ್ತಿದ್ದರು-ಪರದ್ರವ್ಯಕ್ಕೆ ಆಶೆಮಾಡಿದರೆ 'ನರಕವೇಗತಿ'. ಅದುಕಾರಣ ಯಾವತ್ತೂ ಶಿವಶರಣರು ಕಾಯಕಮಾಡುವಾಗ "ಹೊನ್ನಿನೊಳ ಗೊಂದೆಡೆಯು ಅನ್ನದೊಳ ಗೊಂದಗುಳ ಸೀರೆಯೊಳ ಗೊಂದೆಳೆಯು ಎನ್ನದೆನಲಾರೆ". ಈ ಶಿವ ಶರಣರ ಮಾರ್ಗವನ್ನು ಅನುಸರಿಸಿ ನಾವು ಕಾಯಕಸಾಗಿಸಿದರೆ ನಮ್ಮ ರಾಜಕೀಯ ಮಟ್ಟಲು ಯಾವ ಸ್ಥಿತಿಗೆ ಬರುತ್ತಿತ್ತು ಬಲ್ಲಿರಾ? !

ವೇದ, ಆಗಮ, ಶಾಸ್ತ್ರ, ಪುರಾಣವೆಲ್ಲವು ಕರ್ಮಕ್ಕೆ ಹೆಚ್ಚು ಮಹತ್ವ ಈಯುತ್ತವೆ. ಆದರೆ ವಚನಕಾರರು ಭಕ್ತಿಗೆ ಹೆಚ್ಚು ಮಹತ್ವಕೊಟ್ಟಿದ್ದಾರೆ. ಭಕ್ತಿಯೇ ಬೇಕಾದ್ದನ್ನು ಸಾಧಿಸುವ ಸಾಧನ ಎಂದು ಕಂಡು ಹಿಡಿದು ಅನುಭವಿಸಿದ್ದಾರೆ. ಅದು ಕಾರಣ ಜಗದಣ್ಣ ಬಸವಣ್ಣನು "ಭಕ್ತಿಭಾಂಡಾರಿ ಯಾದನು, ಎಂಬುದು "ಭಕ್ತಿಪ್ರಿಯ ನಮ್ಮ ಕೂಡಲಸಂಗನು ದೇವಾ" ಈ ವಚನದಿಂದ ತಿಳಿಯುತ್ತದೆ.

ಸ್ತ್ರೀಯರಿಗೂ ದೀಕ್ಷೆ ಮತ್ತು ಷಟ್‌ಸ್ಥಲ ಸಾಧನ ಮಾರ್ಗಗಳು ಉಂಟೆಂದು ಸಮಾನವಾದ ಅವಕಾಶವನ್ನು ಕೊಟ್ಟಿದರ ಫಲವನ್ನು ಈ ನಮ್ಮ ಶಿವಶರಣರಲ್ಲಿ ಕಾಣಬಹುದು. ಹೆಂಗಸರು ಮಾಯೆಯೆಂದಾಗಲಿ, ಅವರು ಕೀಳೆಂದಾಗಲಿ; ಕೇವಲ ಗೃಹಕೃತ್ಯ ನಿರ್ವಹಣದ ತೊತ್ತು ಎಂದಾ ಗಲಿ ಪುರುಷನ ಭೋಗಸಾಮಗ್ರಿ ಯೆಂದಾಗಲಿ ಭಾವಿಸದೆ, ಅವರೂ ಜ್ಞಾನವನ್ನು ಉಪದೇಶಿಸಬಲ್ಲ ಮಹಾನುಭಾವಿಗಳೆಂದು ಶಿವಶರಣರ ಪವಿತ್ರವಾದ ವಚನ ಧರ್ಮ ಗೌರವಿಸುತ್ತಿದೆ. ಗಂಡು ಹೆಚ್ಚು ಹೆಣ್ಣು ಕಡಿಮೆ ಎಂದು ಹೆಣ್ಣನ್ನು ಅಲ್ಲಗಳೆಯಬಾರದು. ದೇಹದಿಂದ ಮಾತ್ರ ಗಂಡು ಹೆಣ್ಣುಗಳ ಭೇದವೇ ಹೊರತು, ಆತ್ಮವು ಗಂಡೂ ಅಲ್ಲ, ಹೆಣ್ಣೂ ಅಲ್ಲ. ಆತ್ಮನಿಗೆ ಅಂಟಿಕೊಂಡಿರುವ ಮಲತ್ರಯಗಳು ಕಳಚಿಬಿದ್ದರೆ ಸ್ವರೂಪ ಜ್ಞಾನ ಉಂಟಾಗುವದರಿಂದ ಸ್ತ್ರೀ ದೇಹಾಧಾರಿಗೂ ಮೋಕ್ಷ ಉಂಟು, ಲಿಂಗೈಕ್ಯ ಉಂಟು, ಎಂದು ವಚನ ಧರ್ಮ ಹೇಳುತ್ತಿದೆ. ಒಟ್ಟಿನಮೇಲೆ ವಿಶ್ವಧರ್ಮವಾದ ನಮ್ಮ ವೀರಶೈವ ಧರ್ಮದಲ್ಲಿ ಹೆಣ್ಣು ಮತ್ತು-ಗಂಡು ಗಳೀರ್ವರಿಗೂ ಸಂಸ್ಕಾರ ಉಂಟು. ಆದರೆ ಉಳಿದ ಧರ್ಮಗಳ ಉದಾಹರಣೆ ತಕ್ಕೊಂಡದ್ದಾದರೆ ನಮ್ಮ ಧರ್ಮಗಳಂತೆ ಗಂಡುಹೆಂಡರುಗಳಿಗೆ ಸಂಸ್ಕಾರವಿಲ್ಲ. ಮಹಾದೇವಿಯಕ್ಕ, ಮುಕ್ತಾಯಕ್ಕ, ಮೊದಲಾದವರು ಹೀಗೆಯೇ ಮುಕ್ತಿಯನ್ನು ಪಡೆದಿದ್ದಾರೆ. ಶಾಯಿದೇವರೆಂದು ವೇದಹೇಳತು.

ಆದರೆ ಅದಕ್ಕಿಂತ ಮುನ್ನಡಿಯನ್ನಿಟ್ಟ ನಮ್ಮ ವಚನ ಧರ್ಮವು ಹೆಂಣು ದೇವರೆಂದು ಸಾರಿತು. ಈಗ ನಡೆದಿರುವ ಸ್ತ್ರೀಸ್ವಾತಂತ್ರ್ಯ ಕಾರ್ಯವನ್ನು ಶಿವಶರಣರು ಮೇಲ್ಕಾಣಿಸಿದಂತೆ ೧೨ನೆಯ ಶತಮಾನದಲ್ಲಿ ಜರುಗಿಸಿದ್ದಾರೆ, ಎಂಬುದು ಕೆಳಗಿನ ವಚನದಿಂದ ತಿಳಿದು ಬರುತ್ತದೆ.

"ಗಂಡುಳ್ಳಮ್ಮನ ಗೌರಿ ಎಂದು ಕರೆದಡೆ
ಭೂಮಂಡಲಕ್ಕೆ ಅರಸನಾಗಿ ಹುಟ್ಟುವನಾತನು.
ಗಂಡುಳ್ಳಮ್ಮನ ಒಡೆವೆರೆದಾತ
ನರಕದಲಿ ದಿಂಡುಗೆಡದಿಪ್ಪನೈ ರಾಮನಾಥ

ಅದುಕಾರಣ ಶಿವಶರಣರನ್ನು ಅನುಸರಿಸುವದು ನಮ್ಮೆಲ್ಲರ ಆದ್ಯ ಕರ್ತವ್ಯ.

---

## ಕಾಯಕದ ರೀತಿಗಳು

( ಲೇಖಕ:— ಶ್ರೀ ಜೆ. ತಿಮ್ಮಪ್ಪ, ಶಿರಿಗೆರೆ. )

—೦೦೦—

ದಿ. ೧೬-೧-೫೪ನೇ ಶನಿವಾರ ಚಳಿಗಾಲದ ಸೇವಾಶಿಬಿರದ ಮುಕ್ತಾಯ ಸಮಾರಂಭ ದಾವಣಗೆರೆ ಸಿಟಿ ಡಾ. ಪಿ. ನಾಗನಗೌಡರ ಅಧ್ಯಕ್ಷತೆಯಲ್ಲಿ ನಿರ್ವರ್ತಿಸಿತ್ತು. ಈ ಸಮಾರಂಭದ ಅಂಗವಾಗಿ ಹಿಂದೀ ವಿದ್ಯಾರ್ಥಿಗಳು "ಕಾಯಕವೇ ಕೈಲಾಸ" ವೆಂಬ ನಾಟಕವನ್ನು ಅಭಿನಯಿಸಿದರು. ಈ ಸಮಾರಂಭದಲ್ಲಿ ಶ್ರೀ ತರಳಬಾಳು ಜಗದ್ಗುರು ಶ್ರೀ ಶಿವಕುಮಾರ ಶಿವಾ ಚಾರ್ಯ ಮಹಾಸ್ವಾಮಿಗಳು ನಾಟಕೀಯ ವಸ್ತುವಿನ ಪರಿಚಯ ಮಾಡುತ್ತಾ ಈ ದಿನದ ಸಮಾರಂಭದ ಅಂಗವಾಗಿ ನಡೆದಿರುವ ಕಾರ್ಯಕ್ರಮಗಳಲ್ಲಿ ಕಾಯಕವೇ ಕೈಲಾಸವೆಂಬ ನಾಟಕ ಪ್ರದರ್ಶನವು ಒಂದು ಕಾರ್ಯಕ್ರ ಮವಿತ್ತು. ಇಲ್ಲಿ ವಿದ್ಯಾರ್ಥಿಗಳ ಚಟುವಟಿಕೆ ಪ್ರಾರಂಭವಾದಂದಿನಿಂ ದಲೂ, ಪ್ರತಿಸಮಾರಂಭದಲ್ಲೂ ಒಂದೊಂದು ನಾಟಕವು ಪ್ರದರ್ಶಿತವಾಗು ತ್ತಿರುವುದು ಪದ್ಧತಿಯಾಗಿರುವದು. ಇವುಗಳಲ್ಲಿ ಶರಣಸಾಹಿತ್ಯಕ್ಕೆ ಸಂಬಂಧ ಪಟ್ಟವೇ ಹೆಚ್ಚಾಗಿರುತ್ತವೆ. ಶರಣಸಾಹಿತ್ಯವೆಂದರೆ ಸಾಮಾನ್ಯವಾಗಿ ವೀರ ಶೈವದ ಧರ್ಮಸಿದ್ಧಾಂತವೆಂದು ಜನರು ಭಾವಿಸುತ್ತಾರೆ. ಆದರೆ ಈ ನಮ್ಮ ಭಾವನೆ ಸರಿಯಾದುದಲ್ಲ. ನಾವು ಯಾವದೇ ಒಂದು ಧರ್ಮ

ಸಿದಾ ತವನ್ನು ತಪ್ಪೆಂದಲ್ಲವೆಂಬ ಸಂಕುಚಿತ ದೃಷ್ಟಿಯಿಂದ ನೋಡಬಾರದು. ನಾವು ಇಲ್ಲಿಯೇ ಮುಗ್ಗರಿಸುತ್ತಿದ್ದೇವೆ. ನಮ್ಮ ಈ ಸಂಕುಚಿತ ಮನೋಭಾವವೇ ಈ ಜಾತಿಮತಗಳ ಕಲಹಕ್ಕೆ ಕಾರಣ. ನಾವು ಪ್ರತಿಯೊಂದು ಧರ್ಮಸಿದ್ಧಾಂತವನ್ನೂ ವಿಶಾಲಭಾವನೆಯಿಂದ ಪರಿಶೀಲಿಸಬೇಕು. ಯಾವುದೇ ಧರ್ಮತತ್ವವಾಗಲೀ ಪ್ರತಿಯೊಂದು ದೇವನೆಡೆಗೆ ಮಾನವನನ್ನು ಕರೆದೊಯ್ಯುವ ಹೆದ್ದಾರಿಯೆಂಬುದನ್ನು ನಾವು ಮನಗಾಣಬೇಕು. ನಮ್ಮ ಸ್ವಧರ್ಮದ ಮಹತ್ವ ಮತ್ತು ವೈಶಿಷ್ಟ್ಯಗಳ ಪರಿಜ್ಞಾನವಾಗಬೇಕಾದರೆ ಪರಧರ್ಮಗಳ ಅರಿವು, ಅತ್ಯಾವಶ್ಯಕ. ವೀರಶೈವಧರ್ಮ ಅಂದರೆ ಶರಣಧರ್ಮವು. ಅದು ಯಾವುದೇ ಒಂದು ಜಾತಿಮತವನ್ನು ನಿರ್ದೇಶಿಸಿಲ್ಲ. ಅದು ಮಾನವ ಪ್ರಪಂಚವನ್ನೇ ಒಂದು ಬಾಂಧವ್ಯದಲ್ಲಿ ಬಂಧಿಸಲು ಯತ್ನಿಸುತ್ತಿದೆ. ಈ ಶರಣಧರ್ಮದಲ್ಲಿ ನಾವು ಉಪನಿಷತ್ ಧರ್ಮದ ವಿಶಾಲತೆಯನ್ನೂ, ಬೌದ್ಧಧರ್ಮದ ಅಹಿಂಸೆಯನ್ನೂ, ಜೈನಧರ್ಮದ ದಯೆಯನ್ನೂ ಮುಸ್ಲಿಂ ಧರ್ಮದ ಏಕನಿಷ್ಠೆಯನ್ನೂ, ಕ್ರೈಸ್ತಧರ್ಮದ ಭಕ್ತಿಯನ್ನೂ ಕಾಣಬಹುದಾಗಿದೆ.

ಶರಣ ಧರ್ಮದ ಗುರಿ ಕೇವಲ ಪರಲೋಕಸುಖವಲ್ಲ. ಇಹಲೋಕದ ಸುಖವೂ ಗುರಿಯಾಗಿದೆ. ಆದ್ದರಿಂದಲೇ ಅಣ್ಣ ಬಸವಣ್ಣನವರು ಲೋಕವೆಂಬುದು ಕರ್ತಾರನ ಕಮ್ಮಟವಯ್ಯ ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರಯ್ಯಾ. ಇಲ್ಲಿ ಸಲ್ಲದವರು ಅಲ್ಲಿ ಸಲ್ಲರಯ್ಯಾ ಎಂದು ಹೇಳಿದ್ದಾರೆ. ಜಗತ್ತಿನ ನಾನಾ ಧರ್ಮಗಳು ಕೇವಲ ಒಬ್ಬೊಬ್ಬ ವ್ಯಕ್ತಿಗಳಿಂದ ಕಂಡು ಹಿಡಿಯಲ್ಪಟ್ಟಿವೆ. ಆದರೆ ಈ ವೀರಶೈವ ಧರ್ಮವು ಯಾವನೇ ಒಬ್ಬ ವ್ಯಕ್ತಿಯಿಂದ ಕಂಡುಹಿಡಿಯಲ್ಪಟ್ಟಿದ್ದಲ್ಲ. ನೂರಾರು ಜನ ಶರಣ ಶರಣೆಯರ ವಾದ ವಿವಾದಗಳ ಫಲವಾಗಿ ಉದಯಿಸಿದ ಅನುಭವಗಳ ಸಾರವಿದು. ಒಂದೇ ಒಂದು ಮಾತಿನಲ್ಲಿ ಹೇಳುವದಾದರೆ ಈ ಶರಣ ಧರ್ಮವು ಸರ್ವಾಧಿಕಾರಿ ಧರ್ಮವಲ್ಲ. ಪ್ರಜಾಪ್ರಭುತ್ವದ ವಿಶಾಲ ವಿಚಾರ ತಳಹದಿಯ ಮೇಲೆ ಕಟ್ಟಲ್ಪಟ್ಟ ಧರ್ಮ. ಇದು ರಾಜರ ಕಾಲವಲ್ಲ, ಅಂತೆಯೇ ಸರ್ವಾಧಿಕಾರಿಗಳ ಕಾಲವೂ ಅಲ್ಲ. ಪ್ರಜಾಪ್ರಭುತ್ವಕಾಲ. ಆದರೆ ಪ್ರಜಾಪ್ರಭುತ್ವ ರಾಜಕೀಯ ಕ್ಷೇತ್ರಕ್ಕೆ ಮಾತ್ರ ಅನ್ವಯಿಸುತ್ತದೆಂದು ನಾವು ಭಾವಿಸಿದ್ದೇವೆ. ಆದರೆ ನಾವಿಂದು ಪ್ರತಿ ಸಂದರ್ಭದಲ್ಲೂ ಪ್ರಜಾ ಪ್ರಭುತ್ವವನ್ನು ಆದರಿಸುವ ಯುಗದಲ್ಲಿದ್ದೇವೆ. ನಮ್ಮ ಶರಣರು ಧಾರ್ಮಿಕ ಕ್ಷೇತ್ರದಲ್ಲೂ ಪ್ರಜಾಪ್ರಭುತ್ವದ ಉಪಯೋಗ ಮಾಡಿಕೊಂಡಿದ್ದಾರೆ. ನಮ್ಮ

ನಾಡಿನ ಭವಿಷ್ಯವನ್ನು ರೂಪಿಸಲು ಘಟನಾಶಮಿತಿಯನ್ನು ರೂಪಿಸಿಕೊಂಡಿದ್ದೇವೆ. ಶರಣರು ಈಗ್ಗೆ ಎಂಟುನೂರು ವರ್ಷಗಳ ಕೆಳಗೆ ಅನುಭವ ಮಂಟಪವನ್ನು ರಚಿಸಿಕೊಂಡು ಅಲ್ಲಿ ಜಗತ್ತಿನ ಮಾನವರ ನಾನಾ ಜನರ ಅನುಭವಗಳ ಸಮ್ಮೇಲನವಾಗಿರುವದರಿಂದ ಈ ಶರಣ ಧರ್ಮವು ಎಂದೆಂದಿಗೂ ಉಪಯೋಗವಾಗುವ ವಿಶಾಲ ತಳಹದಿಯ ಮೇಲೆನಿಂತಿದೆ ಅನೇಕ ತಜ್ಞರು ಅಭಿಪ್ರಾಯ ಪಟ್ಟಿರುವಂತೆ ಶರಣ ಸಾಹಿತ್ಯದಂತಹ ಸಾಹಿತ್ಯ ಜಗತ್ತಿನ ಯಾವ ಭಾಷೆಯಲ್ಲೂ ಇಲ್ಲವೆಂಬುದು ನಿಜವಾಗಿಯೂ ನಾವು ವಿಶೇಷವಾಗಿ ಕನ್ನಡಿಗರು ಹೆಮ್ಮೆ ಪಟ್ಟುಕೊಳ್ಳುವ ಸಂಗತಿಯಾಗಿದೆ. ಶರಣರು ನಾನಾ ಸಮಸ್ಯೆಗಳ ಪರಿಹಾರವನ್ನು ಕಂಡು ಹಿಡಿಯುವ ಮೂಲಕ ವಿಶ್ವಶಾಂತಿಗೆ ಭದ್ರವಾದ ನೆಲಗಟ್ಟನ್ನು ಕಟ್ಟಿದರು. ಅಂತಹ ಅನೇಕ ಸಮಸ್ಯೆಗಳಲ್ಲಿ ನಿರುದ್ಯೋಗ ಸಮಸ್ಯೆಯೂ ಒಂದು. ಇಂದಿಗೂ ಇದು ನಮ್ಮನಾಯಕರನ್ನು ಚಿಂತೆಗೆ ಈಡುಮಾಡಿದೆ. ಶರಣರು ನಿರುದ್ಯೋಗ ಸಮಸ್ಯೆಯನ್ನು ಹೇಗೆ ಪರಿಹರಿಸಿದರೆಂಬುದನ್ನು ನೀವಿಂದು ಈ ನಾಟಕದಲ್ಲಿ ನೋಡುತ್ತೀರಿ. ಎಂದಾದರೂ ಈ ನಿರುದ್ಯೋಗ ಸಮಸ್ಯೆಗೆ ಮೂಲ ಕಾರಣರು "ಕಲಿತವರು" "ತಿಳಿದವರು" ಎಂಬುದನ್ನು ನೀವಿಲ್ಲಿ ಕಾಣುತ್ತೀರಿ. ಇಂದಾದರೂ ನಮ್ಮ ನಾಡು ಕೊರತೆಯಿಂದ ಕೂಡಿದೆ. ನಾವು ಶರಣರ ಮಾರ್ಗದಲ್ಲಿ ನಡೆದರೆ ನಿಜವಾಗಿಯೂ ನಮ್ಮ ಭವಿಷ್ಯ ಭವ್ಯವಾಗುವದರಲ್ಲಿ ಸಂಶಯವಿಲ್ಲ. ಶರಣರ ಆರ್ಥಿಕ ಯೋಜನೆಗೆ ನೀತಿಯು ತಳಹದಿಯಿದೆ. ದಯೆಯು ಹೊದಿಕೆಯಿದೆ. ಆರ್ಥಿಕಸ್ಥಿತಿ ಇಂದು ರಷ್ಯಾದಲ್ಲಿ ಉತ್ತಮವಾಗಿದೆ. ಆದರೆ ಅಲ್ಲಿ ದಯೆಗೆ ಸ್ಥಾನವಿಲ್ಲ. ಅಮೇರಿಕಾದಲ್ಲಿ ಉತ್ತಮವಾಗಿದೆ ಎಂದರೆ ಅಲ್ಲಿ ನೀತಿಗೆ ಗೌರವವಿಲ್ಲ. ನೀತಿ ಮತ್ತು ದಯೆಗಳಿಲ್ಲದ ಆರ್ಥಿಕ ಯೋಜನೆ ಎಂದಾದರೂ ಅಶಾಂತಿಗೀಡಾಗದಿರದು.

ಜಗತ್ತಿನ ಅಶಾಂತಿಗೆ ಕಾರಣ ಆರ್ಥಿಕ ದುರವಸ್ಥೆ. ನಾಳೆ ವಿಶ್ವದ ಮಹಾಯುದ್ಧವಾದರೆ ಅದು ಆರ್ಥಿಕ ನೀತಿಯಕಾರಣದಿಂದಲೇ. ಜಗತ್ತನ್ನು ವಿನಾಶಮುಖದಿಂದ ಉಳಿಸಬೇಕಾದರೆ ಶರಣರ ಆರ್ಥಿಕ ನೀತಿಯನ್ನು ನಾವು ಅಂಗೀಕರಿಸಬೇಕು. ಇದನ್ನು ಅವರು ಕಾಯಕ ಸಿದ್ಧಾಂತವೆಂದು ಕರೆದಿದ್ದಾರೆ. ಈ ಸಿದ್ಧಾಂತದಲ್ಲಿ ಯಾರಿಗೂ ವಿನಾಯತಿ ಇಲ್ಲ. ಯಾರು ಬಚ್ಚಿಡುವಂತಿಲ್ಲ. ಹಂಚುವ ಉಣ್ಣುವ ನೀತಿಯಿದೆ, ಎಂಬುದಾಗಿ ಅಪ್ಪಣೆ ಕೊಡಿಸಿದರು.

---

# ಬಸವಣ್ಣನವರು ಸಮಾಜ ಕ್ರಾಂತಿ ಪುರುಷರು

—ooo—

**ಕ್ರಾಂತಿಯ ಸ್ವರೂಪ —**

ಕ್ರಾಂತಿ ಎಂದೊಡನೆ ಮೈನವಿರೇಳುತ್ತದೆ. ಧ್ವನಿ ಕುಗ್ಗಿ ಕಠೋರ ವಾಗುತ್ತದೆ. ಹೃದಯ ವಿಹ್ವಲಗೊಳ್ಳುತ್ತಿದೆ. ಮನದಲ್ಲಿ ವಿಚಾರಗಳ ಕೋಲಾ ಹಲ ವೇಳುತ್ತದೆ. ಭ್ರಮೆ ಯಾಗುತ್ತದೆ. ಕ್ರಾಂತಿ ಎ ದರೆ ರವಿಯುದ ಯದಂತೆ ಜನರ ಕಲುಷಿತ ಮನಸ್ಸನ್ನು ಹಸಗೊಳಿಸಿ ನಯವ ಗಿ ಚೈತ ನ್ಯವಾಗಿ ಹಳೆಯದೆಲ್ಲಾ ಹೊಸತನ್ನಾಗಿ ಮಾಡುತ್ತದೆ. ದೇಶದಲ್ಲಿಯ ಅನೀತಿ ರಾಜದಾಡಳಿತೆಯನ್ನು ಕಿತ್ತೊಗೆಯಲು, ಸಮಾಜದ ಅತ್ಯಾಚಾರ ಅನ್ಯಾಯವನ್ನು ಕಡಿದೊಗೆಯಲು ಕ್ರಾಂತಿಯ ಕೊಡಲಿ ಬೇಕು. ಸಮಾಜದ ಹಳೆಯ ಸಂಪ್ರದಾಯಗಳನ್ನು ಹತ್ತಿಕ್ಕಿ ಹೊಸಸಮಾಜವನ್ನು ಕಟ್ಟಲು ಒಂದು ಕ್ರಾಂತಿಬೇಕು. ಹೀಗೆ ಕ್ರಾಂತಿಗಳಲ್ಲಿ ಎರಡು ವಿಧವುಂಟು. ಒಂದು ರಾಜ್ಯಕ್ರಾಂತಿ ಮತ್ತೊಂದು ಸಮಾಜಕ್ರಾಂತಿ. ಅನೀತಿ ಅನ್ಯಾಯದ ಮೇಲೆ ರಾಜ್ಯಕ್ರಾಂತಿಯಾಗುತ್ತದೆ. ಅತ್ಯಾಚಾರ ಪಕ್ಷಪಾತದ ಮೇಲೆ, ಧರ್ಮದ ಹೆಸರಿನಲ್ಲಿ ಸಮಾಜಕ್ರಾಂತಿ ಯಾಗುತ್ತದೆ. ಜನತ್ತಿನಲ್ಲಿ ಸಣ್ಣ ಪುಟ್ಟ ಸಮಾಜಕ್ರಾಂತಿಗಳು ಎಷ್ಟೋ ಆಗಿವೆ. ಅವುಗಳಲ್ಲಿ ಮುಖ್ಯವಾದವುಗಳು ನಾಲ್ಕು, ಯುರೋಪದಲ್ಲಿ, ಮಧ್ಯ ಏಶಿಯಾದಲ್ಲಿ, ಭಾರತದಲ್ಲಿ, ಮತ್ತು ಚೀನದಲ್ಲಿ.

ಯುರೋಪದಲ್ಲಿ ಆದ ಕ್ರಾಂತಿಯು ಸಾಕ್ರೇಟೀಸನಿಂದ, ಎಸುವಿನಿಂದ. ಗ್ರೀಕ ಹಳೆಧರ್ಮದ ಮೂಢನಂಬಿಕೆಯಿಂದ ಸಮಾಜದಲ್ಲಿ ಅಧರ್ಮ ಅನೀತಿ ಹೆಚ್ಚಾಗಿ, ಜನರಲ್ಲಿ ಅಜ್ಞಾನದ ಅಂಧಕಾರವು ಪಸರಿಸಿತ್ತು. ಮನುಷ್ಯನು ಬದುಕು ಸುಖಕ್ಕಾಗಿ, ಆನಂದಕ್ಕಾಗಿ, ಸುಖ ಆನಂದವನ್ನು ಸಂಪಾದಿಸಲು ದೇವತೆಗಳನ್ನು ಒಲಿಸಲು ಎಂಥ ಕೆಲಸನ್ನಾದರೂ ಮಾಡುತ್ತಿದ್ದರು.

ಸಾವು ನೋವು ಸುಖದುಃಖಗಳನ್ನು ಕುರಿತು ಪ್ಲೇಟೋ ಅನೇಕ ಪ್ರಶ್ನೆಗಳನ್ನು ಸಾಕ್ರೇಟೀಸಗೆ ಕೇಳಿದ್ದಾನೆ. 'Is there a life after death? What is the meaning of the good and evil around us? How can we work in the right way? What

is happiness? These questions we ask to day They are the questions put two thousand years ago. Plato offers his wisdom and his vision of the happy life to help us find the answer.

ಅಜ್ಞಾನದ ಅಂಧಕಾರಕ್ಕೆ ಜ್ಞಾನದ ದೀವಿಗೆ ಹಚ್ಚಿದವನು ಸಾಕ್ರೇಟಿಸ್. ಜ್ಞಾನದ ಜ್ಯೋತಿಯಿಂದ ಜಗತ್ತಿನಲ್ಲಿ ಬೆಳಕು ತಂದವ ಏಸುಕ್ರಿಸ್ತ.

ಕಾನ್‌ಸ್ಟಾಂಟಿನೋಪಲ್‌ನಲ್ಲಿ ಮೂಡಣ ಸಾಮ್ರಾಜ್ಯವೂ ಪಾರ್ಸಿಸ್ಥಾನ ಸಾಮ್ರಾಜ್ಯವೂ ಪರಸ್ಪರವಾಗಿ ಹೋರಾಡುತ್ತ ಹೆಣಗುತ್ತ ಇಬ್ಬರ ನಡುವೆ ಸಂಪದ್ಯುಕ್ತವಾಗಿದ್ದ ಏಶಿಯಾ ಮೈನರ್ ಪ್ರದೇಶವನ್ನು ಹಾಳು ಮಾಡಿ ತಾವು ಹಾಳಾಗಿ ಹೋದವು. ಆಗ ಅಲ್ಲಿ ಲೂಟಿ ಹೊಡೆಯುವ ಆಶೆ, ತಮ್ಮ ತಮ್ಮೊಳಗೆ ಹೊಡೆದಾಡುವದು, ಕೊಲೆ ಸುಲಿಗೆಗಳಿದ್ದವು. ಅರಬಸ್ಥಾನ ತುರ್ಕಸ್ಥಾನದ ನಿವಾಸಿಗಳಲ್ಲಿ ಒಕ್ಕಟ್ಟೇ ಉಳಿಯಲಿಲ್ಲ. ಬಂದ ಅರಸರ ಅಮಾನುಷತ್ವ ಬೆಳೆಯತೊಡಗಿತು. ಇಂಥ ಸಮಯದಲ್ಲಿ 'ನಾವೆಲ್ಲರೂ ಅಣ್ಣತಮ್ಮಂದಿರು, ದೇವರು ಒಬ್ಬನೇ ಇದ್ದಾನೆ, ಅವನು ಹೇಯಕೃತಿಗಳನ್ನು ಸೇರುವದಿಲ್ಲ' ಎಂಬ ಸಂದೇಶವನ್ನು ದೇವದೂತ ಮಹ್ಮದ ಪೈಗಂಬರರು ತಂದರು.

ಭರತಖಂಡವು ಪುಣ್ಯಭೂಮಿ, ವೇದಗಳ ಮೂಲಸ್ಥಾನ. ಇಂಥ ಪುಣ್ಯಸ್ಥಳದಲ್ಲಿ ದೇವರ ಹೆಸರಿನಲ್ಲಿ ಸ್ವಾರ್ಥವನ್ನು ಬಯಸಿ ಅಲ್ಲದ ಸಲ್ಲದ ಕೃತಿಗಳನ್ನು ಮಾಡಲು ಹೇಸುತ್ತಿರಲಿಲ್ಲ. ಆಗ ಅಹಿಂಸಾ-ಶಾಂತಿಯನ್ನು ಸೂರ್ಯಚಂದ್ರರನ್ನಾಗಿ ಮಾಡಿಕೊಂಡು ಜಗತ್ತಿಗೆ ಬೆಳಕನ್ನು ಕೊಟ್ಟವ ಗೌತಮ. ಚೀನದಲ್ಲಿಯೂ ಕಾನ್‌ಫೂಶಿಯಸ್‌ನು ಸಂದೇಶವನ್ನು ತಂದು ಜನರಿಗೆ ಕೊಟ್ಟ. ಇವರೆಲ್ಲರ ಗುರಿ ಒಂದೇಯಾಗಿದೆ. ಮಾರ್ಗಗಳು ಮಾತ್ರ ಬೇರೆ ಬೇರೆ. ಗುರಿ ಒಂದೇ ಯಾದರೂ ಮಾರ್ಗಗಳು ಬೇರೆಬೇರೆ ಯಾಗಲು ಕಾರಣವುಂಟು. ಅವು ಭೌಗೋಲಿಕ, ರಾಜಕೀಯ ಕಾರಣಗಳು. ಇವುಗಳ ಮೇಲೆ ಅನೇಕ ಸಮಾಜ ಸಂಪ್ರದಾಯಗಳ ಬದಲಾವಣೆಗಳು ಪಾಶ್ಚಾತ್ಯ ದೇಶದಲ್ಲಿ ಆದವು. ಆದರೆ ನಮ್ಮ ಭಾರತವು ಸುವರ್ಣಭೂಮಿ. ಇಲ್ಲಿ ಉಸುಕು ಬಿತ್ತಿ ಮುತ್ತು ಬೆಳೆಯುವಂತಹ ಭೂಮಿ. ಇಂಥ ದೇಶಕ್ಕೆ ಯಾವ ಕೊರತೆಯೂ ಇಲ್ಲ. ಜನರು ಉಂಡುಟ್ಟು ಸುಖದಿಂದ

ಕಾಲಹರಣಮಾಡುತ್ತ ಶಯ್ಯೆಯಮೇಲೆ ಸ್ವಪ್ನಾದಾವಸ್ಥೆಯಲ್ಲಿ ಕಂಡ ಸಂಗತಿಗಳನ್ನು ಬಿಡಿಸುವಂತೆ ವೇದಗಳು ಹುಟ್ಟಿದವು. ಇವು ಹುಟ್ಟಿವವೇನೋ ಸರಿ. ಆದರೆ ಪರಿಶುದ್ಧಿಯಾಗಿ ಬೆಳಕಿಗೆ ಬರಲಿಲ್ಲ. ಇದ್ದುದು ಒಂದು, ಆದದ್ದ ಬೇರೆ. ಹೀಗಾಗಿ ಹಿಂದೂಧರ್ಮದಲ್ಲಿ ಹೊಲಸೆದ್ದು ನಷ್ಟಕೆ ಗುರಿ ಮಾಡಿತು.

**ಬಸವಣ್ಣನವರು ಹುಟ್ಟಿದುದು —**

ಕಂನಾಡಿನಲ್ಲಿ ಆರ್ಯರು ಸೇರಿ, ದ್ರಾವಿಡರ ಸಂಸ್ಕೃತಿಯನ್ನು ನಾಶಗೊಳಿಸಿ ತಮ್ಮ ಸತ್ತೆಯಿಂದ ಜನರನ್ನು ಅನ್ಯಾಯಮಾರ್ಗಕ್ಕೆ ಎಳೆದರು. ಯಾವ ಸ್ವಾತಂತ್ರ್ಯವನ್ನು ಅವರಿಗೆ ಕೊಡದೆ ವೇಶ್ಯ ಶೂದ್ರರನ್ನು ಕೀಳು ವರ್ಗದವರೆಂದು ಕಡೆಗಣಿಸಿದರು. ದ್ವಿಜರು ನಿಜವಾಗಿ ದ್ವಿಜಗಳೇ ಆದವು. ಮನುಷ್ಯತ್ವವನ್ನ ಅರಿಯಲಿಲ್ಲ. 'ತಾವು ಬ್ರಹ್ಮನ ಮಕ್ಕಳು, ನಾವೇ ಶ್ರೇಷ್ಠರೆಂದು ಭಾವಿಸಿದ ಜನರು ಜಾತಿಯ ಗರ್ವಾಂಧತೆಯಲ್ಲ ಮುಳುಗಿದರು. ಇವರನ್ನು ಹೊಡದೆಬ್ಬಿಸಿದ ಮಹಾಸತ್ಪುರುಷ ಬಸವಣ್ಣನವರು. ಬಸವಣ್ಣನವರು ಬ್ರಾಹ್ಮಣರಾದರೂ ಕೂಡ ತಮ್ಮ ಜನರೇ ಕೆಳವರ್ಗದವರ ಮೇಲೆ ಮಾಡುವ ಅತ್ಯಾಚರವನ್ನು ಖಂಡಿಸಿ ಅದನ್ನು ಹೋಗಲಾಡಿಸುವ ಸಲುವಾಗಿ ತಮ್ಮ ವೇಷವನ್ನು ಬದಲಾಯಿಸಿದರು.

**ಬಸವಣ್ಣನವರ ದೃಷ್ಟಿಕೋನ ಮತ್ತು ಮಹಾತ್ಮಾ ಗಾಂಧಿಯವರ ದೃಷ್ಟಿಕೋನ —**

ಜನತೆಯಲ್ಲಿ ಸಮಾನತೆಯನ್ನು ತರುವಸಲುವಾಗಿ, ಅಸ್ಪೃಶ್ಯತೆಯನ್ನು ಹೋಗಲಾಡಿಸಲು ಹೆಣಗಾಡಿದವರು ಬಸವಣ್ಣ ಮತ್ತು ಮಹಾತ್ಮಾ ಗಾಂಧಿ. ಹೊಲೆಯರನ್ನು, ಮಾದಿಗರನ್ನು ಕಲೆಹಾಕಿ ಉಚ್ಚಮಟ್ಟಕ್ಕೇರಿಸಿದರು. ಜನತೆಯಲ್ಲಿ ಸಮಾನತೆಯನ್ನು ತಂದರು. ನಾವೆಲ್ಲರೂ ಮನುಷ್ಯರೆಂಬ ಭಾವನೆಯನ್ನು ತಿಳಿಸಿದರು. ಆದರೆ ಬಸವಣ್ಣನವರ ದೃಷ್ಟಿಕೋನವು ಎಂಥದಿದೆ? ಎಂಬುದನ್ನು ನಾವು ಊಹಿಸಬಹುದು. ಬಸವಣ್ಣನವರು ಅಸ್ಪೃಶ್ಯತೆ ನಿವಾರಣೆಗಾಗಿ ಅಸ್ಪೃಶ್ಯರನ್ನೇ ಮೇಲಕ್ಕೆತ್ತಿದರು. ಆದರೆ ಮಹಾತ್ಮಾಜೀಯವರು ಅಸ್ಪೃಶ್ಯತೆಯ ನಿವಾರಣೆಗೆ ಉಚ್ಚವರ್ಗದವರನ್ನು ಕೆಳಮಟ್ಟಕ್ಕೆ ತಂದರು. ಅಸ್ಪೃಶ್ಯರನ್ನು ಸುಧಾರಿಸಿ ಮೇಲ್ತರಗತಿಗೆ ಒಯ್ದವರು ಬಸವಣ್ಣನವರು. ಮೇಲ್ತರಗತಿಯ ಜನರನ್ನು ಕೆಳತರಗತಿಗೆ ಅಂದರೆ ಸುಧಾರಿಸಿದ ಜನರನ್ನು ಅಸ್ಪೃಶ್ಯರಲ್ಲಿ ಕೂಡಿಸಿ ಸಮಾನತೆಯನ್ನೇ ಮಾಡಿದವರು ಗಾಂಧೀಯವರು. ಅಂದಮೇಲೆ ನಮ್ಮ ಕರ್ನಾಟಕದ ಶರಣನ ದೃಷ್ಟಿ

ಕೋನ ಎಂಥದು ಇತ್ತು, ಎಂಬುದನ್ನು ನಾವು ಊಹಿಸಬಹುದು. ಬ್ರಹ್ಮನ ಮಕ್ಕಳು ನಾವೇ ಶ್ರೇಷ್ಠರೆಂದು ತಿಳಿದು ಸೊಕ್ಕಿನಿಂದ ನಡೆಯುತ್ತಿದ್ದ ಜನರ ಹಾದಿಯನ್ನು ಬಿಟ್ಟು, ನೀವು ಬ್ರಹ್ಮನ ಮಕ್ಕಳಾದರೆ, ನಾವು ಶಿವ ಶರಣರೆಂದರೂ, ಸಾಕಷ್ಟು ತತ್ವಗಳು ಸಾಕಷ್ಟು ಗ್ರಂಥಗಳಲ್ಲಿದ್ದವು. ಬರೀ ಹೇಳುವದರಿಂದ ಏನೂ ಪ್ರಯೋಜನ ವಿಲ್ಲೆಂಬುದನ್ನು ಬಸವಣ್ಣನವರು ತಿಳಿದಿದ್ದರು. ಈಜು ಬಾರದವನು ಬಾವಿಯಲ್ಲಿ ಬಿದ್ದಾಗ ಹಾಗೆ ಮಾಡ ಬೇಕು, ಹೀಗೆ ಮಾಡಬೇಕು, ಕೈಕಾಲು ಬಡಿ ಎಂದು ಹೇಳುವದರಿಂದ ಆತಬದುಕಲಾರ. ಆತನಿಗೆ ಸಹಾಯಮಾಡಬೇಕು, ಎತ್ತಿ ಹಿಡಿಯಬೇಕು, ಅದ ರಂತೆ ಇಂದು ಅತಿ ಅಜ್ಞಾನದ ಅಂಧಕಾರದಲ್ಲಿ ಮುಳುಗಿದ ಜನತೆಗೆ ವೇದ ಗಳಲ್ಲಿಯ ತತ್ವಗಳನ್ನು ಹೇಳುವದರಿಂದ ಉಪಯೋಗವಿಲ್ಲ. ಜನರು ತಿಳಿ ವಳಿಕೆಯಾಗಲೆಂದು "ಗಿಳಿಯೋದಿ ಫಲವೇನು? ಬೆಕ್ಕು ಬಹುದ ಹೇಳಲ ರಿಯದು. ಜಗವೆಲ್ಲ ಕಾಂಬ ಕಣ್ಣು ತನ್ನ ಕೊಂಬ ಕೊಲೆಯ ಕಾಣ ಲರಿಯದು. ಇದಿರಗುಣವ ಬಲ್ಲೆವೆಂಬರು ತಮ್ಮ ಗುಣವ ಅರಿಯರು" ಸಮಾಜದಲ್ಲಿ ಹೊಕ್ಕು "ಜನಸೇವೆಯೇ ಈಶ ಸೇವೆ. ಕಾಯಕವೇ ಕೈಲಾಸ" ಎಂದು ಸಾರುತ್ತ ಸೇವೆಮಾಡಲು ಟೊಂಕಕಟ್ಟಿನಿಂತರು. ಈಜುಬಾರದವನ ಸಹಾಯಕ್ಕೆ ಈಜುಗುಂಬಳ ಕಾಯನ್ನು ಕೊಟ್ಟ ಶರಣರ ವಚನಾಮೃ ತವನ್ನು ನೀಡಿದರು. ನಾಯಿಗೆ ಹುಗ್ಗಿ ದಕ್ಕುವದಿಲ್ಲವಂತೆ. ಹಾಗೆ ಕೆಲವರಿಗೆ ವಚನಗಳು ಸೇರಲಿಲ್ಲ,

### ಕಾಯಕವೇ ಕೈಲಾಸ

ನಾವು ಕೈಲಾಸ ಕಾಣಬೇಕಾದರೆ ಕಾಯಕ ಮಾಡಬೇಕು. ಮನು ಷ್ಯನು ಹುಟ್ಟಿ ಬಂದಮೇಲೆ ಆತನ ಜೀವನದಲ್ಲಿ ಎಡರು ತೊಡರುಬರಹ ತ್ತುತ್ತಿವೆ. ಅವನು ಧೀರತೆಯಿಂದ ಶಾಂತಿಯಿಂದ ಸಾಧನೆಮಾಡಿಕೊಳ್ಳಬೇಕು. ಸಂಸಾರದಲ್ಲಿ ನಾವುಕಾರ್ಯದಲ್ಲಿಯೇ ಸುಖವನ್ನುಪಡೆಯುತ್ತೇವೆ. ಲೋಕಕ್ಕೆ ಅನ್ನವ ನೀಡುವ ನೇಗಿಲಯೋಗಿ ತನ್ನ ಕಾರ್ಯದಲ್ಲಿಯೇ ಸ್ವರ್ಗಕಾಣುತ್ತಾನೆ.

"ನೇಗಿಲಕುಳದೊಳು ಅಡಗಿದೆ ಕರ್ಮ, ನೇಗಿಲ ಮೇಲೆಯೇ ನಿಂತಿದೆ ಧರ್ಮ" ಎಂದು ಕುವೆಂಪುರವರು ಹೇಳಿದ್ದು ಯಥಾರ್ಥ ವಿದೆ. ಇದೇ ರೀತಿಯಾಗಿ ತಮ್ಮ ಕಾಯಕದಲ್ಲಿಯೇ ಕೈಲಾಸವಿದೆ. ಹಿಂದಿನಕಾಲದಲ್ಲಿ ಯಂತೆ ಗವಿ ಕಂದರಗಳಲ್ಲಿಯೇ ಆಶ್ರಮ ಕಟ್ಟಿಕೊಂಡು ತಪಶ್ಚರ್ಯ ಮಾಡುತ್ತ ಮುಕ್ತಿಯ ಮಾರ್ಗವನ್ನು ಕಂಡುಕೊಳ್ಳುವ ಕಾಲವಲ್ಲ. ಇಂದಿ

ನಂತೆಯೇ ಬಸವಣ್ಣನವರ ಕಾಲದಲ್ಲಿಯೂ ಕೂಡ ಹೀಗೆ ಪರಿಸ್ಥಿತಿ ಇರಬೇಕು. ಹಗಲುರಾತ್ರಿ ದುಡಿದರೂ ಹೊಟ್ಟೆಗೆ ಅನ್ನಸಿಗದ ಕಾಲದಲ್ಲಿ "ಕಾಯಕವೇ ಕೈಲಾಸವೆಂದು" ಉಸುರಿದರು.

**ಜನಸೇವೆಯೇ – ಈಶಸೇವೆ —**

ಅನ್ಯಾಯದಿಂದ ಅತ್ಯಾಚಾರದಿಂದ ಬಳಲುವ ಜನತೆ ಕಿವಿವರಾತು ಸೈರಿಸಲಿಲ್ಲ. ಆದರಿಂದ ಉಪಯೋಗವಾಗಲಿಲ್ಲ. ಸಮಾಜದಲ್ಲಿಯ ಕುಂದುಕೊರತೆಯನ್ನು ಹೋಗಲಾಡಿಸಲು ಸಮಾಜ ಸೇವೆಯನ್ನು ಮಾಡಹತ್ತಿದರು. ಜನಸೇವೆ ಮಾಡಹತ್ತಿದರು.

ಜನರ ಕಲುಷಿತ ಆತ್ಮವನ್ನು ಉದ್ಧಾರ ಮಾಡಿದಾಗ ಶಿವನೊಲಿಯುವ ಎಂದುಸುರಿದರು. ಮಹಾತ್ಮಾಗಾಂಧಿಯಾದರೂ ಕೂಡ ಜನಸೇವೆಯೇ ಈಶಸೇವೆ ಎಂದು ಹೇಳಿದರು.

**ಇದೇ ಅಂತರಂಗ ಶುದ್ಧಿ – ಇದೇ ಬಹಿರಂಗ ಶುದ್ಧಿ —**

ಸಮಾಜದಲ್ಲಿ ಕೊಲೆ ಸುಲಿಗೆ ಸುಳ್ಳಾಡುವದನ್ನು ಖಂಡಿಸಿದರು. ಪರರಿಗೆ ಹೀಯಾಳಿಸಬೇಡಿರಿ. ಬಂದ ಅತಿಥಿಗಳಿಗೆ ಪ್ರೀತಿಯಿಂದ ಬರಮಾಡಿಕೊಳ್ಳಿರಿ. ಅವರ ಸೇವೆ ಮಾಡಿರಿ. ಮನುಷ್ಯನು ಹುಟ್ಟಿಬಂದ ಮೇಲೆ ಎಲ್ಲರೊಡನೆ ಸಹಕರಿಸಬೇಕಾಗುವದು. ಸಮಾಜದಲ್ಲಿ ಬಾಳುವೆ ಮಾಡಬೇಕಾಗುವದು. ಸಮಾಜದಲ್ಲಿ ಅನೇಕ ಜನರು ತುಂಬಿದ್ದಾರೆ. ಇಂಥದರಲ್ಲಿ ನಮ್ಮ ಜೀವನರಥವು ಸುಗಮವಾಗಿ ಸುಪಥದಲ್ಲಿ ಸಾಗಬೇಕಾದರೆ ಬಸವಣ್ಣನವರು ಸತ್ಸಂಗ ಹಿಡಿ ಎಂದು ಹೇಳಿದರು. ಶರಣರ ಸತ್ಸಂಗದಲ್ಲಿದ್ದರೆ ನಿನ್ನ ಅಂತರಾತ್ಮ ಶುದ್ಧಿಯಾಗುವದು. "ಗಿರಿಗಳ ಮೇಲೆ ಹಲವು ತರುಮರಾದಿಗಳಿದ್ದರ್ ಶ್ರೀಗಂಧದಸನ್ನಿಧಿಯಲು ಪರಿಮಳವಾಗದೇ? ಎಷ್ಟು ಚಂದವಾದ ದೃಷ್ಟಾಂತ! ಮರ್ತ್ಯಲೋಕದವರಿಗೆ ಕೈಬಿಡಬಾರದವೋಹ ಸುಖ. ಈ ಸುಖಸಂಪಾದನೆಗಾಗಿಯೇ ಮಾನವನು ಸುವರ್ಣಸೇತುವೆಯನ್ನು ಕಟ್ಟಿ ದೇವಲೋಕಕ್ಕೆ ಮೊರೆಯನ್ನಿಡ ಹತ್ತಿದ. ಸಂಪಾದನೆಗಾಗಿ ದೇವಲೋಕವರನ್ನು ಒಲಿಸಿಕೊಳ್ಳಲು ಎಂಥ ನೀಚಕೃತಿಯನ್ನಾದರೂ ಮಾಡಲು ಸಿದ್ಧನಾದ, ಧರ್ಮದ ಹೆಸರಿನಲ್ಲಿ ಆಗುವ ಈ ಅತ್ಯಾಚಾರವನ್ನು ಖಂಡಿಸಿ, ದೇವಲೋಕ ಮರ್ತ್ಯಲೋಕ ಬೇರುಂಟೇ? ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರು. ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರು. ಆಚಾರವೇ ಸ್ವರ್ಗ ಅನಾಚಾರವೇ ನರಕ ಎಂದು ಹೇಳಿದರು

ಇದರಿಂದ ಎಷ್ಟೋ ಜನರ ಮನಸ್ಸು ಮಾರ್ಪಟ್ಟಿತು. ಬದಲಾವಣೆಯಾಗಿ ಬೆಳಕಿಗೆ ಬಂದಿತು. "ನಿಷ್ಕಪಟಿಯಾಗು ಎಂದು ಹೇಳಿದರು. ಕೇವಲ ಮನುಷ್ಯನ ಧ್ಯೇಯ, ಅವನ ಆಶೆ, ಹಣದ ಮೇಲೆ. ಗಂಡಹೆಂಡಿರ ಹೃದಯೊ ದಾದರೆ ಮಗು ಹುಟ್ಟಿ, ಮಗುವಿನ ಮೇಲೆ ಪ್ರೀತಿಯಾಗುವಂತೆ ಸಮಾಜದಲ್ಲಿಯು ಜನರ ಹೃದಯುಗಳು ಒಂದಾದರೆ ಹೊಸ ಸಮಾಜವು ನಿರ್ಮಾಣವಾಗಿ ಪ್ರೀತಿಗೆ ಪಾತ್ರವಾಗುತ್ತದೆ. "ಹೃದಯೊಲುಮೆಯ ಕಣ್ಣಾದು ಮುಳುಗಲು ಲೋಕಕೆ ಬೆಳಕಿಲ್ಲ" ಎಂದು ಕುವೆಂಪುಂವರುದರೂ ಇದೇ ರೀತಿಯಾಗಿ ಹೇಳಿದ್ದಾರೆ. ನಮಗೆ ವಿನಯುಬೇಕು, ವಿನಯುದಿಂದ ಸ್ನೇಹ ಸೌಹಾರ್ದಗಳು ಬೆಳೆಯುತ್ತವೆ. ಅದರಿಂದ ಹೃದಯ ಗಳು ನಿಷ್ಕಲ್ಮಷವಾಗುತ್ತವೆ. ಅಂದೇ ಅಂತರಂಗದ ಶುದ್ಧಿ ಬಹಿರಂಗ ಶುದ್ಧಿ ಯಾಗುತ್ತದೆ. ಶಿವಸೊಲಿಯುವ.

**ಕ್ರಾಂತಿಪುರುಷ —**

ಕರ್ನಾಟಕದಲ್ಲಿ ದ್ವಿಜರು ಸತ್ಯವನ್ನು ಕುಗ್ಗಿಸಿದರು. ಅಸ್ಪೃಶ್ಯರನ್ನು ಉದ್ಧರಿಸಿ ಹೊಸ ಸಮಾಜದ ಸೂತ್ರಧಾರನಾದ ಅಂದಿನಿಂದ ಕರ್ನಾಟಕದಲ್ಲಿ ಬ್ರಾಹ್ಮಣ ವೀರಶೈವರೆಂಬ ಪಂಗಡಗಳಾದವು. ಸೊಕ್ಕಿನ ಮೇಲ್ತರಗತಿಯ ಜನರಿಗೆ ಎಷ್ಟು ಹೇಳಿದರೂ ಬುದ್ಧಿ ಬರಲಿಲ್ಲ. ಇನ್ನೂ ಹಾಗೇ ತಮ್ಮ ವರ್ತನೆಯನ್ನು ಪಾಲಿಸುತ್ತಲಿದ್ದಾರೆ. ಜನರಿಗೆ — "ಎಲೇ ಕೋಗಿಲೇ ನಿನಗೇತಕೆ ಕುಲದ ಹೆಮ್ಮೆ? ಕಾಗೆಯ ಗೂಡಿನೊಳು ಬಾಳಬದುಕಿದಿ. ಅದರಂತೆ ಎಲೇ ಬ್ರಾಹ್ಮಣ, ನಿಮಗೇಕೆ ಈ ಕುಲದ ಹೆಮ್ಮೆ? ಶೂದ್ರರಿಂದ ಅನ್ನಪಡೆದು ಅವರಿಂದ ಸೇವೆಸಂಪಾದಿಸಿ ಅವರಿಂದಲೇ ನಿಮ್ಮ ಬಾಳು ಬದುಕು. ಏಕಿಂತು ಈ ಸೊಕ್ಕು?" ಎಂದು ಕುವೆಂಪುರವರು ಕೇಳಿದ್ದಾರೆ. ಬಸವಣ್ಣನವರ ವಚನವನ್ನು ಅಭ್ಯಾಸ ಮಾಡಿದರೆ ಬಸವಣ್ಣನವರ ಕಾರ್ಯಕ್ಷೇತ್ರವನ್ನು ಪರಿಶೀಲಿಸಿದರೆ ಬಸವಣ್ಣನವರು ಸಮಾಜದ ಕ್ರಾಂತಿಪುರುಷರೆಂದು ನಮಗೆ ತೋರುತ್ತದೆ.

**ಬಸವಜಯಂತಿ —**

ಬಸವಜಯಂತಿಯನ್ನು ಆಚರಿಸುವ ಉದ್ದೇಶವನ್ನು ನಾವು ಚೆನ್ನಾಗಿ ಅರಿತುಕೊಳ್ಳಬೇಕಾಗಿದೆ. ಕೇವಲ ಬಸವನ ಮೂರ್ತಿ ತೊಟ್ಟಿಲಲ್ಲಿ ಹಾಕಿ ತೂಗಿ ದಿನಾಚರಣೆ ಮಾಡಿದರೆ ಅದು ಜಯಂತಿಯಾಗಲಿಲ್ಲ. ಬಸವನ ದಿವ್ಯ ಸಂದೇಶವನ್ನು ತಾಯಿತಂದೆಗಳಿಗೆ ಮಗುವನ್ನು ತೊಟ್ಟಿಲಲ್ಲಿ ಹಾಕಿ ಜೋಗುಳಾನ ಮಾಡಿದ ಮೇಲೆ ಮಗುವಿನಿಂದ ತಾವು ಮುಪ್ಪಿನ ಕಾಲದಲ್ಲಿ ಸುಖವಾಗಿ ಬಾಳುವ ಉದ್ದೇಶವಿರುವಂತೆ ಸಂದೇಶವನ್ನು ತೊಟ್ಟಿಲಲಿ

ಹಾಕಿ ಅವುಗಳನ್ನು ಜೋಪಾನಮಾಡಿ ಅವುಗಳಿಂದ ಉಪಯೋಗ ಪಡೆದು ಕೊಂಡು ಮುಕ್ತಿಯ ಮಾರ್ಗವನ್ನು ಅನುಸರಿಸುವದೇ ಜಯಂತಿ. ಬಸವಣ್ಣನವರು ಎಂದೋ ವಚನಗಳನ್ನು ಸಾರಿದ್ದಾರೆ. ಅವು ಇಂದಿಗೂ ಇವೆ. ಆ ವಚನಗಳು ತ್ರಿಕಾಲದವರೆಗೂ ಇರುವದರಲ್ಲಿ ಸಂದೇಹವಿಲ್ಲ. ಎಂದೆಂದಿಗೂ ಜನಜೀವಕ್ಕೆ ಅವು ಅನ್ವಯಿಸುತ್ತವೆ! ಸಹಕಾರಿಯಾಗುತ್ತವೆ.

**ನವಯುಗ —**

ಇಂದಿನ ನವಯುಗ ಬಹುಮಂದವಾಗಿದೆ. ಪಾಶ್ಚಾತ್ಯರ ನಾಳಿಯಿಂದ ಬುದ್ಧಿ ಮಂಕಾಗಿದೆ, ಶಿಕ್ಷಣ ಸಂಪಾದನೆ ಕೆಚ್ಚಾಗಿ ಇಂದಿನ ಶಿಕ್ಷಣ ದಿಂದ ಯಾವ ಉದ್ಧಾರವೂ ಇಲ್ಲ. ಪಾಶ್ಚಿಮಾತ್ಯರ ಆಡಂಬರದಿಂದ ನಮ್ಮದನ್ನು ನಾವು ಮರೆತಿದ್ದೇವೆ. ಕ್ಷಣಸುಖಕ್ಕಾಗಿ ಪಾಶ್ಚಿಮಾತ್ಯರ ಪಾನಕ್ಕೆ ಬಾಯ್ದೆರೆದು, ಅಜರಾಮರವಾಗಿ ಉಳಿಯುವ ಸಚ್ಚಿದಾನಂದವನ್ನು ಕೊಡುವ ಅಮೃತ ವಚನವನ್ನು ಮರೆತು ಬಿಟ್ಟಿದ್ದೇವೆ. ನವಯುಗ ಲೀಲೆಯ ಬಗೆಗೆ 'ಕರೆಯುತಿದೆ. ಯುಗವಾಗಿ ಈ ಕವಿತೆಯನ್ನು ಕುವೆಂಪುರವರು ಹೇಳಿದ್ದಾರೆ. ಅದನ್ನು ಕೆಳಗೆ ಕೊಡುವೆ.

ವಿಶ್ವದ ಸಾಹಿತ್ಯದಲ್ಲಿಯೇ ಶರಣರ ವಚನಸಾಹಿತ್ಯವು ಒಂದು ವಿಶಿಷ್ಟ ಸ್ಥಾನ ಗಳಿಸಿದೆ. ಈ ಶರಣರ ವಚನಗಳೇ ಸಮಾಜ ಸೇವೆಯ, ಸಮಾಜೋದ್ಧಾರದ ಸೂತ್ರಗಳು. ಸೂತ್ರಧಾರಿಯಾದ ಬಸವಣ್ಣನವರ ಸಂದೇಶವು ಆತ್ಮ ಗೀತೆಯಾಗಿವೆ. ಜೀವ ಜ್ಯೋತಿಯಾಗಿದೆ. ಈ ಜ್ಯೋತಿ ಹೋದ ಹೋದಲ್ಲೆಲ್ಲಾ ಬೆಳಕು ಬೀರುವದರಲ್ಲಿ ಸಂದೇಹವಿಲ್ಲ. ಈ ಗೀತ ಹಾಡುವಲ್ಲಿ ಕಲುಷಿತ ಆತ್ಮ ಪುಷ್ಪವೇದಿಕೆಯ ಮೇಲೆ ನಲಿದಾಡಿಸುವದರಲ್ಲಿ ಸಂಶಯವಿಲ್ಲ. ಬಸವಣ್ಣನವರ ದೃಷ್ಟಿ ಹಗಲಿನ ಕಣ್ಣಿದ್ದಂತೆ. ಹಗಲಿನ ಕಣ್ಣು ರವಿಲೋಕಕೆ ಬೆಳಕನ್ನೀಯುವಂತೆ ಬಸವಣ್ಣನವರು ಪ್ರಜ್ವಲಿತ ಪ್ರಕಾಶವನ್ನು ಬೀರಿದ್ದಾರೆ.

**" ಕರೆಯುತಿದೆ ಕುವೆಂಪು ಯುಗವಾಣಿ "**

"ಸಂಪತ್ತಿದೆ; ವಿದ್ವತ್ತಿದೆ;
ಕೈಸೇರಿದೆ ವಿಜ್ಞಾನ
ವಿಷಯಾಗ್ನಿಗ ಸುಖದಾಸೆಯ
ಕಲ್ಲೆಣ್ಣೆಯ ಪಾನ!

ನೊಣವೀಸೆಯು ಹುಳುಹೆಜ್ಜೆಯತಾ
ಎಣಿಸುವ ಬಿಜ್ಞೆಯಬಲ್ಲೆ;
ತನ್ನಾತ್ಮವ ತಾನರಿಯುವ
ಸಾಧನೆಯೊಂದನು ಬಲ್ಲೆ!

ಅನ್ವೇಷಣೆ! ಅನ್ವೇಷಣೆ!
ಸ್ಪುಬಿಸಲು ಪುರಸೊತ್ತಿಲ್ಲ!
ತಿಳಿದೂ ತಿಳಿದೂ ತಿಳಿದೂ
ಕಡೆಗೇನೂ ಗೊತ್ತಿಲ್ಲ.

ಇಹವಿಲ್ಲದೆ ಪರವಿಲ್ಲದೆ
ತೊತ್ತಾಗಿಹ ಬೊಚ್ಚರಿಗೆ,
ನಡತೆಗೆ ಸ್ಮೃತಿ, ಚಿಂತೆಗೆ ಶ್ರುತಿ
ದೇವರಿಗತಿ ಪ್ರಾಚ್ಯರಿಗೆ!

ಯುಗಚಕ್ರವ ಮುನ್ನೂಕಲು
ಇದೆ ಗುರುದೇವನ ಶಕ್ತಿ;
ನಮಗಿಂದಿಗೆ ಬೇಕಾದುದು
ಉದ್ಧಾರದ ಆಸಕ್ತಿ;

ಬಾ ಬೇಗನೆ, ರವಿದೇವನೆ,
ನವಶತಮಾನದ ಧೂತ!
ಹೊಸಬಾಳಿಗೆ ತಳಿರಾಗಿಸು,
ನವಯುಗ ಚೈತ್ರದ ಚೇತ!

ದನಿಗೈಯಲಿ ಜಗದೆದೆಯಲಿ
ಖಗಕುಲ ನವಸಂಗೀತ
ಹೊರಹೊಮ್ಮಲಿ ಸಂಮಥನದಿ
ಕವಿಗಾನದ ನವನೀತ!



## ಮಗುವು - ಮಾಯೆ!



ಎಳೆಯ ಮಗುವು ಎಳೆಯ ಬಾಳು
ಏನು ಮಾಯಾ ಚಾಟವೊ!
ಅಳಿಯದಂಥ ಪ್ರೇಮ ಬಳುವ-
ಳಿನ ದೈವ ದಾಟವೊ!!

ಮುಗ್ಧ ಮಗುವು ಶುದ್ಧಭಾವ
ಮುಗ್ಧದೇಗನಾಟವು:
ಶಬ್ದಗಿಬ್ದ ವೇನು ಇಲ್ಲ
ಮುದ್ದುತೊದಲು ನಾದವು

ಮುದ್ದ ಮುಗ್ಧ ಮಗುವಿನಲ್ಲಿ
ಶುಭ ಮಾಯೆ ತುಂಬಿದೆ;
"ಮಾಯೆಯಲ್ಲಿ ಮಗುವು ಬೆಳೆದು
ಮಾಯೆಯಾಗಿ ಬಿಡುತಿದೆ!"

## ಆತ್ಮ ಮತ್ತು ಶರೀರ



ಮೂಡಣ ಪಡುವಣ ಏಳಿನ ಬೀಳಿನ
ಬಾಳಿನ ಅಂತೆಯೆ ನೋಡಣ್ಣ;
ಅಂತ್ಯವೆ ಇಲ್ಲದ ಜಾನಿನ ಜೀವನ
ಮಾನವನಂತೆಯೆ ನೋಡಣ್ಣ

ಹುಟ್ಟಿದ ರವಿತಾ ಮುಳಗಿ ಪಶ್ಚಿಮದಲಿ
ಹುಟ್ಟಿದ ಮನುಜನು ಸಾಯುವನಣ್ಣ
ಹುಟ್ಟುವ ಕಾಲಕೆ ಹುರುಪಿನಲಿರುವದು
ಮುಂಜಾವಿನಲಿ ಬೆಳಗಣ್ಣ

"ಆತ್ಮವೆಂಬುದು ನಿಂತಲೆ ನಿಂತಿಹ
ಸೂರ್ಯನಂತೆಯೆ ನೋಡಣ್ಣ;
ಶರೀರವೆಂಬುದು ಪೃಥ್ವಿಯ ತೆರದಲಿ
ಬಿದ್ದು ಏಳ್ವದು ನೋಡಣ್ಣ"

## "ಈಶ್ವರನ ಕಂಡೆ"



ಸಂಜೆಯ ಸಮಯದಿ
ಬಾಗಿಲ ಹೊರಗಡೆ
ನಾನದು ನಿಂತಾಗ
ಅರಳಿದ ಗುಲಾಬಿಯು
ಪರಿಮಳ ಸೂಸುತ
ನನ್ನನು ಕರೆದಾಗ
ನಿಸರ್ಗದಲ್ಲಿಯ ರಸನೇಂದರೊಳು
ತುಂಬಿ ನಿಂತಾಗ—
ನನ್ನಯ ಮನವದು ಹರುಷದಿ ಆಗ
ಉಕ್ತಿ ಬಂದಾಗ-
ನನ್ನಯ ಮನಕೆ ಶಾಂತಿಯ ನೀಡಿದೆ
ನೀನದು ಅಂದಾಗ—
ನಗುವುತಲಂದಿತು ನಿನ್ನಯ ಶಾಂತಿಯೆ
ನನ್ನಯ ಶಾಂತಿಯು; ನೀನೂ ನನ್ನಾಂಗ
"ನಶ್ವರ ದೇಹಗ
ಳೆಡೂ ನಮ್ಮವು
ಈಶ್ವರ ನೊಬ್ಬನೆ
ನಮ್ಮಿಬ್ಬರೊಳು" ಎಂದದು ಅಂದಾಗ
ನಿನ್ನಯ ಪರಿಮಳ
ನನ್ನಯ ಅನುಭವ
ಗಳೆರಡರ ಮಿಲನವೆ
ಹಾ-ಈಶ್ವರನೆಂದೆ ಸಂಜೆಯು ಆದಾಗ

# ಲಿಂಗ



ಲಿಂಗವಂತ ಧರ್ಮದಲ್ಲಿ
ಲಿಂಗವೆಂಬುದೊಂದು ಶ್ರೇಷ್ಠ
ಅಂಗ ಅಂಗವೆಂದೆಲ್ಲ
ಲಿಂಗ ಲಿಂಗ ಲಿಂಗವಂತ
    ತುಂಬಿತುಂಬಿ ತುಳುಕಲಿ!
ಮೋಹವೆಂಬು ದನ್ನೆಗೆದ್ದ
ಮಹಾದೇವಿ ಅಕ್ಕನಂದು
ಮನದೊಳಿಟ್ಟ ಲಿಂಗವಿಂದು
    ಎನ್ನ ಮನವ ತುಂಬಲಿ
ಸತ್ಯ ಮೈತ್ರಿ ಅಹಿಂಸೆ
ತತ್ವವನ್ನು ನಮಗೆ ಎಂದೊ
ಇತ್ತ ಬಸವಲಿಂಗವೇ–
    ನನ್ನ ಮನವ ಬೆಳಗಲಿ!
ಬಂಧು ಭಾವ ಮರಳುವಂತ
ಜಾತಿ ಭಾವ ಸರಿಯುವಂತ
ನೀತಿವಂತ ಬಸವಲಿಂಗ
    ನಮ್ಮ ಮನಸದಾಗಲಿ!

ಸಿಂ. ಬ. ಸಾವಳಗಿ.

ಬೆಳಗಾಂವ



# ಆಧ್ಯಾತ್ಮಿಕ ವಚನಗಳು

ಂಂ—[ ಶ್ರೀ ರೇವಣಸಿದ್ಧಪ್ಪ ಶೀಲವಂತ. ಹುನಗುಂದ ]—ಂಂ

—೦೦೦—

ಸಪ್ತಾಶ್ವಗಳು ಕೂಡಿದ ಹೊನ್ನ ರಥದಲ್ಲಿ ಕುಳಿತು ಎಡೆಸಟೆಸಿಕೊಂಡು ಹೋಗುವ ಅಂಣಗಳಿರಾ! ಮುಂದೆ ಕೆರೆ, ಹಳ್ಳ, ಹೊಳೆಗಳು ತುಂಬಿ ಭೋರ್ಗರೆಯುತ್ತಿರುವವು ನೋಡಯ್ಯ! ಅವರಾಚೆಗೆ ಸಾಲಾಗಿ ನಿಂತಿರುವ ಮೇರು ಪರ್ವತಗಳು ಝೇಂಕರಿಸುತ್ತಿರುವವು ನೋಡಯ್ಯಾ! ಅದರಾಚೆಗೆ ಸಪ್ತಸಾಗರಗಳು ಹೊರಳಾಡಿ ನಿಮ್ಮನ್ನು ನೋಡಿ ಚಪ್ಪಾಳೆ ಇಕ್ಕಿ ಗಹಗಹಿಸಿ ನಗುತ್ತಿರುವವು ನೋಡಯ್ಯಾ! ಇವೆಲ್ಲವನು ದಾಟಬೇಕಾದರೆ "ಶಿವ" ಮಂತ್ರವೊಂದೇ ಮಹಾದಾರಿ ನೋಡಯ್ಯಾ! ಅದರಾಚೆಯಲ್ಲಿರುವುದೇ ಕೈಲಾಸನಗರ ನೋಡಯ್ಯಾ! ಅದರಲ್ಲಿ ಪ್ರಕಾಶಿಸುತ್ತಿರುವ ನಿತ್ಯ ನಿರಂಜನ ಪರಮಗುರು ಕೋಟೆಕಲ್ಲ ಶ್ರೀ ಹೊಳೆಹುಚ್ಚೇಶ್ವರ ಲಿಂಗವನ್ನು ಮನ ಮುಟ್ಟಿ ಪೂಜಿಸಿ ಧನ್ಯರಾಗಿರಯ್ಯಾ ||

೨ ಬಡವರಾರೆಂಬುದು ಬಲ್ಲರೆ ಹೇಳಿರೋ? ಅರಿಯದಿದ್ದೊಡೆ ಕೇಳಿರೋ ಸತ್ಯವಿಲ್ಲದವನೇ ಬಡವನಯ್ಯಾ! ದಯವಿಲ್ಲದವನೇ ಬಡವನಯ್ಯಾ ಅಹಿಂಸೆಯನ್ನು ಆಚರಿಸದೇ ಇರುವವನೇ ಬಡವನಯ್ಯಾ! ಇಷ್ಟೇ ಅಲ್ಲ, ತನ್ನ ತಾನರಿಯದವನೇ ಬಡವನಯ್ಯಾ! ದೇವಾ ಶಿವಶರಣರು ನಿಮ್ಮ ರಾಜಭಂಡಾರದಲ್ಲಿ ಸಕಲತತ್ವಗಳಿಂದ ಮೆರೆದು ಸುಖಪಡುತ್ತಿರುವವರೇ ನಿಜವಾದ ಶ್ರೀಮಂತರು ನೋಡಾ ಕೋಟೆಕಲ್ಲ ಶ್ರೀ ಹೊಳೆಹುಚ್ಚೇಶ್ವರಾ!

೩ ಪಂಚೇಂದ್ರಿಯಂಗಳು ಎನ್ನವೆಂದರೆ ಶ್ರೀಗುರುವು ನಗುವನಯ್ಯಾ! ಮನವು ಎನ್ನದೆಂದರೆ ಲಿಂಗ ನಗುವದಯ್ಯಾ! ಅದೆನೆಂದರೆ ಜಂಗಮ ನಗುವನಯ್ಯಾ! ಅರಿವೆಯು ಆಚೆಯಲ್ಲಿರುವ ನಿಮಗೆ, ನಾನೆಂದರೆ ನಗುವ ನಿಮ್ಮ ಕೋಟೆಕಲ್ಲ ಶ್ರೀ ಹೊಳೆಹುಚ್ಚೇಶ್ವರಾ||

೪ ಅರಿದೆನೆಂದರೆ ಅರವತ್ತು ಗಾವುದ ನೋಡಯ್ಯಾ. ಮುಟ್ಟಿದೆನೆಂದರೆ ಮೂವತ್ತು ಗಾವುದ ನೋಡಯ್ಯಾ! ಅರಿ ಮುಟ್ಟಿನಾಚೆಯಲ್ಲಿರುವುದೇ ಪರಂಜ್ಯೋತಿ ಕಾಣಯ್ಯಾ! ಆ ಜ್ಯೋತಿಯಲ್ಲಿ ಜ್ಯೋತಿ ಅಡಗಿದಮೇಲೆ ಭಿನ್ನ ಮಾಡಲುಂಟೇನಯ್ಯಾ ಕೋಟೆಕಲ್ಲ ಶ್ರೀ ಹೊಳೆಹುಚ್ಚೇಶ್ವರಾ!

ಜ ಅನಂತ ಜನ್ಮಗಳಲ್ಲಿ ಕೋಟ್ಯಾನುಕೋಟಿ ಚೀಲ ಧಾನ್ಯವನುಂಡರೂ ಹಸಿವು ಅಡಗಲಿಲ್ಲ ನೋಡಯ್ಯಾ! ಸಪ್ತಸಾಗರದಷ್ಟು ನೀರುಕುಡಿದರೂ ತೃಷೆ ಅಡಗಲಿಲ್ಲ ನೋಡಯ್ಯಾ! ದೇವಾ ನಿಮ್ಮ ಪರಿಸಾಹಿತಿಯ ಒಂದೆಗಳಿಂದು ಧನ್ಯನಾದೆ ನೋಡಯ್ಯಾ ಕೋಟಿಕಲ್ಲ ಶ್ರೀಹೊಳಿ ಕುಜ್ಜೇಶ್ವರಾ॥

---

## ಪ್ರಾರ್ಥನೆ

### (ಭಜನೆ)

o—[ಲೇಖಕ — ಶ್ರೀ ರೇವಣಸಿದ್ದಪ್ಪ ಶೀಲವಂತ. ಹುನಗುಂದ]—o

o—o—o

ಜಗತ್ತಿನ ಯಾವದೇ ಮತಧರ್ಮದವರಾಗಲಿ ಭಜನೆಗೆ ಬಹುಪ್ರಾಮುಖ್ಯತೆಯನ್ನು ಕೊಟ್ಟಿರುತ್ತಾರೆ. ಅಂತೆಯೇ ಭಜನೆಯು ಮನುಷ್ಯನಷ್ಟೇ ಪ್ರಾಚೀನವಾಗಿದೆ. ಲೋಕದಲ್ಲಿ ಯಾರಿಗಾದರೂ ಸಾವು ಶಾಶ್ವತವಾಗಿದ್ದರೂ ಸಹ, ಆವನ ನೆಂದು ಅರಿತು ಕೊಳ್ಳುವದು ಪ್ರತಿಯೊಬ್ಬ ಮುಮುಕ್ಷುವಿನ ಮುಖ್ಯ ಕರ್ತವ್ಯವಾಗಿದೆ. ಆದ್ದರಿಂದ ಅದು ಗುರುಮುಖವಾಗಿರಬೇಕು. ಯಾಕೆಂದರೆ

ಜನರು ಮುನಿದರೆ ನೃಪರು ಕಾಯುವರು ತನ್ನವರ।
ನೃಪನು ಮುನಿಯಲ್ಕೆ ಶಂಕರನು ಕಾಯ್ವನಾ ಶಂಕರನು
ಮುನಿದ ಕಾಲಕ್ಕೆ ಗುರುವು ಕಾಪಾಡುವನು ಗುರುವು ಮುನಿಯಲ್ಕೆ
ಕಾವರಿಲ್ಲ।
ಎನುತ ಸಚ್ಛಾಸ್ತ್ರಗಳ್ ಘೋಷಿಸಲ್ಕದು ಕೇಳಿ।
ವಿನಯದಿಂ ನಿನ್ನ ಚರಣಕ್ಕಾನು ಪೂಜಿಸುತಾವೆ।
ನನವರತ ಭೋ ಗುರುವೆ ನಿಜಸೌಖ್ಯವೆನಗಿತ್ತು ಕರುಣದಿ ಪರಿಪಾಲಿಸು

ಎಂಬ ಶರಣರ ವಚನದ ತಾತ್ಪರ್ಯವೇನೆಂದರೆ— ಹೇ ಗುರುನಾಥನೇ! ಜನರು ಮುನಿದ ಕಾಲದಲ್ಲಿ ಪ್ರಭುವಿನ ಮೊರೆಬಿದ್ದರೆ ಆ ಪ್ರಭು ರಕ್ಷಿಸುವನು. ಅಂತಹ ಪ್ರಭುವು ಮುನಿದ ಕಾಲದಲ್ಲಿ ಪರಮೇಶ್ವರನ ಮೊರೆಬಿದ್ದರೆ ಪ್ರಭು (ಅರಸು) ರಕ್ಷಿಸುವಂತೆ ಆ ಪರಮೇಶ್ವರನು ರಕ್ಷಿಸುತ್ತಾನೆ. ಅಂತಪ್ಪ ಪರಮೇಶ್ವರನು ಮುನಿದ ಕಾಲದಲ್ಲಿ ಶ್ರೀ ಗುರುವಿನ ಮೊರೆಬಿದ್ದರೆ ಆ ಗುರುವು ಕೈಬಿಡದೇ ಕಾಪಾಡುತ್ತಾನೆ (ಆ ಹರನು ಮುನಿದರೆ ಗುರುಕಾ

ಯುವನೆಂಬ ಹಿರಿಯರ ಉಕ್ತಿಯೊಂದಿರುತ್ತದೆ. ಹರಮುನಿದರೆ ಅವನು ದೇಹಕರಣಾದಿಗಳಿಗೆ ಉಪಹತಿಯನ್ನುಂಟು ಮಾಡುತ್ತಾನಾಗಲಿ, ನಿತ್ಯ ನಿರ್ಮಲ ನಿರ್ವಿಕಾರ ನಿಜಾನಂದ ರೂಪವಾದ ನಿನ್ನ ಸ್ವರೂಪಕ್ಕೆ ಎಂದಿಗೂ ಉಪಹತಿಯನ್ನುಂಟು ಮಾಡಲಾರನು, ಎಂದು ಮೊರೆಬಿದ್ದ ಶಿಷ್ಯನಿಗೆ ಬೋಧಿಸಿ ಉದ್ಧರಿಸುವ ಶಕ್ತಿಯು ಶ್ರೀಗುರುವಿನಲ್ಲಿರುವದರಿಂದ ಹಿರಿಯರ ಉಕ್ತಿಯು ಯಥಾರ್ಥವಾದುದು) ಗುರುಮುನಿದರೆ ಕಾಪಾಡುವ ನಾಥರು ಮತ್ತಾರು ಇರುವದಿಲ್ಲ, ಎಂಬುದಾಗಿ ಶಾಸ್ತ್ರಗಳು ಘೋಷಿಸುತ್ತಿರುವದರಿಂದ, ಅದು ತಿಳಿದು ನಾನು ಶ್ರದ್ಧಾ ಭಕ್ತಿಯಿಂದ ನಿನ್ನಪಾದಾರವಿಂದಕ್ಕೆ ನಮಸ್ಕರಿಸುತ್ತೇನೆ. ನೈಜವಾದ ಮುಕ್ತಿ ಸುಖವನ್ನಿತ್ತು ಕರುಣಿಸು ಎಂಬರ್ಥವಾಗುತ್ತದೆ. ಈ ವಿಷಯವಾಗಿ ಶ್ರೀ ಮಹಾನುಭಾವರಾದ ಬಸವಣ್ಣನವರು, ಪ್ರಭುದೇವರು, ಚನ್ನಬಸವ, ಸಿದ್ಧರಾಮ, ಶ್ರೀ ಅಕ್ಕ ಮಹಾದೇವಿ ಮುಂತಾದ ಜ್ಞಾನವೃದ್ಧ ಶಿವಶರಣ ಶರಣೆಯರು ಗುರುವಿನ ಬಗ್ಗೆ ಮನವಾರೆ ಹೊಗಳಿದ್ದಾರಲ್ಲದೇ "ನ ಗುರೋರಧಿಕಂ" ಎಂಬುದನ್ನು ಜಗತ್ತಿಗೇ ಘಂಟಾ ಘೋಷವಾಗಿ ಸಾರಿದ್ದಾರೆ. ಆದಕ್ಕಾಗಿ ನಾವು ಯಾವ ವಿಷಯವನ್ನೇ ಅರಿಯಲಿ ಅದು ಗುರುಮುಖವಾಗಿಯೇ ಇರಬೇಕು. ಅಂದರೆ ಮುಕ್ತಿಗೆ ವಿಘ್ನತ್ರಯಗಳನ್ನು ನಿವೃತ್ತಿಗೊಳಿಸಿ ನೈಜವಾದ ಚಿರ ಸೌಖ್ಯವನ್ನು ಕೊಡುತ್ತಾನೆ. ಅದ್ದರಿಂದ ಪ್ರತಿಯೊಂದು ಸಮಾಜದವರು ಪ್ರತಿಯೊಂದು ದಿವಸಕ್ಕೊಮ್ಮೆಯಾದರೂ ಪ್ರಾರ್ಥನೆ ಅವಶ್ಯ.

ಇಂದಿನ ಬೌದ್ಧಿಕ ಯುಗದಲ್ಲಿ ಆಧ್ಯಾತ್ಮಿಕವೇ ಮನುಷ್ಯನ ಸಕಲ ಸಂಕಷ್ಟಗಳಿಗೆ ಪರಿಹಾರೋಪಾಯವೆಂದು ತಿಳಿಯುವದು ಬಹು ಅವಶ್ಯ. ಮಾನವನು ಪರಿಪೂರ್ಣನಲ್ಲ; ಅವನ ಆತ್ಮ ವಸ್ತುವಿನ ಉತ್ಕ್ರಾಂತಿಪಥದಲ್ಲಿ ಒಂದು ಹಂತ ಮಾತ್ರ. ಅವನ ಮನಸ್ಸು "ಅತಿಮಾನಸ" ವಾಗಿ ಅವನು "ಅತಿಮಾನವ" ನಾಗಿ ಪರಿವರ್ತನೆ ಹೊಂದಬೇಕಾಗಿದೆ. ಅದೇ ಭವಿತವ್ಯ, ಈ ಭವಿತವ್ಯದತ್ತ ಅರಿತು ಮುನ್ನಡೆಯಬೇಕಾದರೆ ಮನಃ ಪ್ರಮಾಣವನ್ನು ಮೀರಿನಿಂತ "ಋತು"ವನ್ನು ಭೂಮಿಗಿಳಿಸಿ ತರುವುದವಶ್ಯ. ಅದಕ್ಕಾಗಿ ದುಡಿಯುವದು ಪ್ರತಿಯೊಬ್ಬ ಮಾನವರ ಮುಖ್ಯ ಕರ್ತವ್ಯವಾದ್ದರಿಂದ ಇದನ್ನು ಮನಸಾ ಸಾಧಿಸಬೇಕಾದರೆ ದೇವರಲ್ಲಿ ನಿಶ್ಚಲಮನಸ್ಸಿನಿಂದ ಮೊರೆ ಇಡಬೇಕು. ಅರ್ಥಾತ್ ಪ್ರಾರ್ಥನೆ ಸಲ್ಲಿಸಬೇಕು. ನಾವು

ಘೋಷವಾಗಲೂ ನಿಷ್ಕಾಮದಿಂದ ದೇವರನ್ನು ಅನನ್ಯರೀತಿಯಿಂದ ಭಜಿಸ
ಬೇಕು. ಇಂಥ ಪ್ರಾರ್ಥನೆಯ ಶಕ್ತಿಯಿಂದಲೇ ಶ್ರೀಮಹಾತ್ಮಾ ಗಾಂಧೀ
ಜಿಯವರು ಜಗತ್ತಿಗೆ ಮಾರ್ಗದರ್ಶಕರಾದುದಲ್ಲದೇ ಮಹಾತ್ಮರೆಂದು ಮೆರೆದು
ಕೀರ್ತಿಶಾಲಿಗಳಾದರು (ಪ್ರಾರ್ಥನೆ) ಭಜನೆಯನ್ನು ಪ್ರತಿಯೊಂದು ಸಮಾ
ಜದವರು ಪ್ರತಿದಿವಸ ಅವಶ್ಯ ಮಾಡಲೇಬೇಕು. ಇದು ಮಾನವನ ಮುಖ್ಯ
ಕರ್ತವ್ಯ. ಭಜನೆಯನ್ನು ಊರಹೊರಗೆ ಪ್ರಶಾಂತ ಸ್ಥಳ, ಸಾಧುಸತ್ಪು
ರುಷರಸ್ಥಳ, ಅಥವಾ ಮಠ ಮಾನ್ಯ, ಗುಡಿಮುಂತಾದ ಶೂನ್ಯ ದೇವಾ
ಲಯಗಳಲ್ಲಿ ಭಜನೆಗೆ ಒಳ್ಳೇ ಮಹತ್ವದ ಸ್ಥಳಗಳಾಗಿವೆ. ಯಾಕಂದರೆ ಅಂತ
ರಾತ್ಮನನ್ನು ಒಲಿಸಲಿಕ್ಕೆ ಮೇಲಿನ ಎಲ್ಲ ಸ್ಥಳಗಳು ಬಹಳಯೋಗ್ಯವಾದ
ವುಗಳು. ಅಂಥಸ್ಥಾನಗಳಲ್ಲಿ ಮನಸ್ಸು ಚಂಚಲವಾಗದೆ ನಿಶ್ಚಲವಾಗಿ ಏಕ
ಮುಖವಾಗಿ ನಿಲ್ಲುತ್ತದೆ. ಭಜನೆ (ಪ್ರಾರ್ಥನೆ)ಯನ್ನು ಮೈಮರೆತು ದೇವ
ರನ್ನು ನನ್ಯ ಭಕ್ತಿಯಿಂದ ಪ್ರಾರ್ಥಿಸಬೇಕು. ಆದಕ್ಕೇನೆ ದೇವನೊಲಿ
ಯುವನು. ಜಗತ್ತಿನ ಸರ್ವಮಾನವ ಪ್ರಾಣಿಗೂ ಪ್ರಾರ್ಥನೆಯು ಅತೀವ
ಪ್ರಾಮುಖ್ಯ. ಪ್ರಾರ್ಥನೆ ಎಂಬುದು ಮನುಷ್ಯನಷ್ಟೇ ಪ್ರಾಚೀನವಾದುದು.
ಮನುಷ್ಯನು ನಿರಾಶನಾದಾಗ ನಿರುತ್ಸಾಹನಾದಾಗ ಪ್ರಾರ್ಥನೆಯಿಂದ
ಅಪೂರ್ವಶಕ್ತಿಯನ್ನು ಪಡೆದು ಮುನ್ನುಗ್ಗುತ್ತಿದ್ದಾನೆ. ಇಂಥ ಶಕ್ತಿಯುಳ್ಳ
ಮನುಷ್ಯರಿಗೆ ವಿಜ್ಞಾನಿ (ವಿಜ್ಞಾನಮಯ ಶರೀರ)ಎಂದು ಅನ್ನುತ್ತಾರೆ. ಮನೋ
ಮಯ ಶರೀರಾಂತರ ವಿರುವ ಕಾರಣ ಆತ್ಮನೇ ಪರಮಾತ್ಮನಾಗಿದ್ದಾನೆ.
ಯಾವ ಪೂರ್ವೋಕ್ತ ಪ್ರತಿಪಾದಿತವಾದ ಆತ್ಮನೇ ಅನ್ನರಸಮಯವಾದ
ಶರೀರ, ಮತ್ತು ಪ್ರಾಣಮಯ ಶರೀರದ ಅಂತರ್ಯಾಮಿ ಇರುತ್ತಾನೆ.
ಪ್ರಥಮ ಪ್ರತಿಪಾದಿತವಾದ ಮನೋಮಯ ಶರೀರಕ್ಕಿಂತಲೂ ಸೂಕ್ಷ್ಮವಾದ್ದ
ಕಾರಣ ಅದರ ಅಂತಃಸ್ಥಿತವಾದ ಯಾವ ಆತ್ಮನಿಂಟೋ ಅವನು ಅನ್ಯನಾಗಿ
ದ್ದಾನೆ. ಅವನೇ ವಿಜ್ಞಾನಮಯನೆನಿಸುತ್ತಾನೆ. ಅರ್ಥಾತ್ ಬುದ್ಧಿ ಎಂಬ
ಗುಹೆಯಲ್ಲಿ ನಿವಾಸಮಾಡುವ ಮತ್ತು ಅದರಲ್ಲಿ ತದಾಕಾರನಾಗಿರುವ ಜೀವಾ
ತ್ಮನಿಂದ ಈ ಮನೋಮಯ ಶರೀರವು ಪೂರ್ಣವಾಗಿದೆ. ಅಂದರೆ:—
ಅವನು ಈ ಮನೋಮಯ ಶರೀರದಲ್ಲಿ ಸರ್ವತ್ರ ವ್ಯಾಪಕನಾಗಿದ್ದಾನೆ
ಮತ್ತು ಮನೋಮಯವು ತನಗಿಂತಲೂ ಮೊದಲಿನ ಪ್ರಾಣಮಯ ಮತ್ತು
ಅನ್ನಮಯದಿಂದ ವ್ಯಾಪ್ತವಾಗಿದೆ. ಅಂತ: ಈ ವಿಜ್ಞಾನಮಯ ಜೀವಾತ್ಮನು
ಸರ್ವ ಶರೀರಗಳಲ್ಲಿ ವ್ಯಾಪ್ತನಾಗಿರುವನೆಂದು ಪರಮಾತ್ಮನ ವಾಕ್ಯವಿದೆ.

ಸರ್ವತ್ರವ್ಯಾಪ್ತಿಕವಾದ ಆಕಾಶವು ಕೂಡಾ ಅಸಂಗತ್ವಭಾವದಿಂದಲೂ ಹಾಗು ಯಾವದರೊಡನೆ ಲಿಪ್ತವಾಗದೆಯೂ ಹೇಗಿರುವದೋ ಹಾಗೆ ಸರ್ವ ದೇಹ ಸ್ಥಿತನಾದಾತ್ಮನೂ ಕೂಡ ಅಸಂಗಸ್ವಭಾವನಾಗಿರುವದರಿಂದ ಯಾವ ವಿಷಯಗಳಿಂದಲೂ ಲಿಪ್ತನಾಗುವದಿಲ್ಲೆಂದು ಹೇಳಿದಕಾರಣ ಈ ವಿಜ್ಞಾನ ಮಯನಾತ್ಮನೂ ಕೂಡ. ನಿಜವಾಗಿಯೂ ಪುರುಷಾಕಾರವೇ ಆಗಿರುತ್ತಾನೆ. ಆ ವಸ್ತುವು ಪುರುಷನಲ್ಲಿ ವ್ಯಾಪ್ತನಾಗಿರುವದರಿಂದಲೇ ಈ ಪುರುಷಾಕಾರವೆಂದು ಹೇಳಬೇಕಾಗಿದೆ. ಆ ವಿಜ್ಞಾನಮಯ ಅಂಗಗಳನ್ನು ಪಕ್ಷಿಯಾಕಾರದಲ್ಲಿ ಕಲ್ಪಿಸೋಣ. ಬುದ್ಧಿಯ ವೃತ್ತಿರೂಪ ನಿಶ್ಚಯವಾದ ಯಾವ ಶ್ರದ್ಧೆಯುಂಟೋ ಅದು ವಿಜ್ಞಾನಮಯಾತ್ಮ ಪಕ್ಷಿಯ ಶರೀರದಲ್ಲಿ ಪ್ರಧಾನ ರೂಪವಾದ ಶಿರವಾಗಿದೆ. ಏಕೆಂದರೆ ;– ಈ ದೃಢವಾದ ವಿಶ್ವಾಸವೇ ಪ್ರತ್ಯೇಕ ವಿಷಯದಲ್ಲಿ ಉನ್ನತಿಯ ಕಾರಣವಾಗಿರುವದರಿಂದ ಪರಮಾತ್ಮನ ಪ್ರಾಪ್ತಿಯಲ್ಲಿ ಸರ್ವಕ್ಕಿಂತಲೂ ಪ್ರಥಮ ಹಾಗೂ ಸರ್ವಕ್ಕಿಂತಲೂ ಅಧಿಕ ಆವಶ್ಯಕವು ಇದಕ್ಕಿರುವದರಿಂದ ಇದು ಶಿರವೆಂದು ಹೇಳಿದೆ. ಸದಾಚಾರ ನಿಶ್ಚಯವೇ ಬಲಗಡೆಯ ರೆಕ್ಕೆಯಾಗಿಯೂ, ಸತ್ಯ ಭಾಷಣವೇ ಎಡಗಡೆಯ ರೆಕ್ಕೆಯಾಗಿಯೂ ಧ್ಯಾನ ದ್ವಾರ ಪರಮಾತ್ಮನೊಡನೆ ಸಂಯುಕ್ತನಾಗಿರುವುದೇ ವಿಜ್ಞಾನಮಯನೆಂಬ ಪಕ್ಷಿಯ ಶರೀರದ ಮಧ್ಯಭಾಗವಾಗಿಯೂ ಮತ್ತು "ಮಹಃ" ನಾಮದಿಂದ ಪ್ರಸಿದ್ಧವಾದ (ಭೂಃ ಭುವಃ, 'ಸ್ವಃ' 'ಮಹಃ" ವೆಂಬ ಚತುರ್ವಿಧ ವ್ಯಾಹೃತಿಗಳಲ್ಲಿ "ಮಹಃ" ಎಂಬುದನ್ನು ಬ್ರಹ್ಮ ಸ್ವರೂಪವೆಂದು ಹೇಳಿರುವದರಿಂದ ಅದು ಬ್ರಹ್ಮದ ನಾಮವಾಗಿರುತ್ತೆ) ಇದನ್ನೇ ಪರಮಾತ್ಮ ಪ್ರಾಪ್ತ್ಯರ್ಥ ಆಧಾರವೆಂದು ಹೇಳಲ್ಪಟ್ಟಿದೆ. ಏಕೆಂದರೆ ಪರಮಾತ್ಮನೇ ಜೀವಾತ್ಮನ ಪರಮಾಶ್ರಯನಾಗಿದ್ದಾನೆ. ಆದ್ದರಿಂದ ಪ್ರಾರ್ಥನೆ ಸಕಾಮ ಅಂದರೆ ಐಹಿಕ ಲಾಭಗಳನ್ನು ಪಡೆಯುವ ಆಶೆಯಿಂದಾಗಲಿ, ಅಥವಾ ನಿಷ್ಕಾಮ ಅಂದರೆ ಕೇವಲ ಪರಮಾತ್ಮನ ಪ್ರೀತಿಗಾಗಲೀ ಇರಬಹುದು. ಇವೆರಡೂ ಬಗೆಯ ಪ್ರಾರ್ಥನೆಗಳ ಆವಶ್ಯಕತೆ, ಅವುಗಳಿಂದ ಪಡೆಯಬಹುದಾದ ಬಲ ಮತ್ತು ಆನಂದ ಇವನ್ನು ಆಧ್ಯಾತ್ಮಿಕ ಜಿಜ್ಞಾಸುವರು ಮಾತ್ರ ಅನುಭವಿಸುತ್ತಾರೆ. ಆದಕಾರಣ ಪ್ರತಿದಿನ ಯಾವನೇ ಸಮಾಜದವರಾಗಲಿ ತಮ್ಮ ತಮ್ಮ ಏಕಾಂತ ಸ್ಥಳದಲ್ಲಿ ಪರಮಾತ್ಮನಿಗೆ ಪ್ರಾರ್ಥನೆಯನ್ನು ನಿಷ್ಕಾಮ ಮನಸ್ಸಿನಿಂದ ಸಲ್ಲಿಸುತ್ತಾಹೋದರೆ, ಆ ದಯಾಘನನು ಸಕಲ ಸಂಪತ್ತುಗಳನ್ನು ದೊರೆಕಿಸಿ ಕೊಡುವನಲ್ಲದೇ ಕೊನೆಗೆ ಚಿರಶಾಂತಿ (ಮುಕ್ತಿ)ಯನ್ನು ಕೊಡುವನು.



# ಆದಿ ಭಾರತ.

[ಲೇಖಕರು:- ಶ್ರೀಯುತ ಭೀ. ಶ್ರೀ. ಕುಲಕರ್ಣಿ ವಿಜಾಪುರ.]

—:●:—

ನಮ್ಮ ಜನ್ಮಭೂಮಿಯಾದ ಭಾರತಖಂಡವು ಒಂದಾನೊಂದು ಕಾಲದಲ್ಲಿ ಯಾವ ಸ್ಥಿತಿಯಲ್ಲಿದ್ದಿತು ಮತ್ತು ಈಗ್ಗೆ ಯಾವ ಸ್ಥಿತಿಯಲ್ಲಿದೆ ಎಂಬುದನ್ನು ನಾವೆಲ್ಲರೂ ತಿಳಿದುಕೊಳ್ಳಬೇಕಾಗಿರುವ ಒಂದು ಮುಖ್ಯ ವಿಷಯ ವಾಗಿದೆ. ಒಂದಾನೊಂದು ಕಾಲದಲ್ಲಿ ನಮ್ಮ ದೇಶವು ಜಗತ್ತಿನಲ್ಲಿಯೇ ಉಚ್ಚಮಟ್ಟದ ಪದವಿಯನ್ನು ಹೊಂದಿದ್ದು, ಜಗತ್ತಿನ ಇತರ ದೇಶಗಳಿಂದ ನಮ್ಮ ಈ ಭಾರತಖಂಡಕ್ಕೆ ಅನೇಕ ಜನ ಪರದೇಶಿಗರು ಆಗಮಿಸಿ ನಮ್ಮ ದೇಶದ ಸಾಂಪತ್ತಿಕ ಹಾಗೂ ಸಾಂಸ್ಕೃತಿಯ ಉಚ್ಚಮಟ್ಟವನ್ನು ತುಂಬಾ ಹೊಗಳಿ, ಭಾರತಖಂಡವೆಂಬುದು ಭೂಲೋಕದ ಸ್ವರ್ಗವೆಂದು ತಮ್ಮ ವರ್ಣನೆಯಲ್ಲಿ ವರ್ಣಿಸಿದ್ದುಂಟು. ಆದರೆ ಇಂದು ನಾವು ಆ ಭೂಲೋಕದ ಸ್ವರ್ಗಸ್ಥಾನವಾದ ಭಾರತಖಂಡವನ್ನು ಭೂಲೋಕದ ನರಕಸ್ಥಾನವನ್ನಾಗಿ ಮಾಡಿದುದು ನಮಗೆ ತಿಳಿಯದಂತಾಗಿದೆ. ನಮ್ಮ ದೇಶವು ಈಗ್ಗೆ ಸರ್ವತರದಿಂದಲೂ ಅತೀ ಹೀನಾವಸ್ಥೆಗೆ ಒಳಪಟ್ಟಿದೆ. ಇದು ನಮ್ಮ ಭಾರತೀಯರ ದೋಷವೇ ಎಂದರಿಯಬಹುದು.

ನಮ್ಮ ದೇಶದಲ್ಲಿ ಒಕ್ಕಟ್ಟು ಎಂಬ ಭಾವನೆಯೇ ಅಳಿದಿದೆ. ಕೇವಲ ಆಡಂಬರಿಗಳಾಗಿ ನಾವು ಈ ಪುಣ್ಯಭೂಮಿಯಲ್ಲಿ ಜೀವಿಸುತ್ತಿರುವದು ನಾಚಿಕೆಗೇಡುತನವೇ ಸರಿ. ಆಡಂಬರದಿಂದ ನಮ್ಮ ದೇಶವು ಹೀನತೆಗೊಳಪಟ್ಟಿದೆ. ಚಹ, ಬೀಡಿ, ಸಿಗಾರೇಟ ಮುಂತಾದ ಶರೀರನಾಶಕ ಪದಾರ್ಥಗಳನ್ನು ಸೇವಿಸಿ, ಇಂದು ನಮ್ಮ ಭಾರತೀಯರು ಅಶಕ್ತತೆಗೊಳಗಾಗಿ ಚೈತನ್ಯಮಯ ಜೀವನವನ್ನು ಹಾಳುಮಾಡಿಕೊಂಡಿರುವರು. ಚೈತನ್ಯವು ಅಳಿದರೆ ಮನುಷ್ಯನು ಜೀವದಿಂದ ಇದ್ದಂತಲ್ಲ, ಶವದ ಸಮಾನ. ಚೈತನ್ಯವೇ ಜೀವನದ ಜ್ಯೋತಿಯೆಂಬುದು ಅರಿತು ಜೀವಿಸಬೇಕು. ಚೈತನ್ಯವನ್ನು ಹಾಳು ಮಾಡಿಕೊಳ್ಳುವ ಸೇವನವೆಂದರೇ ಚಹ, ಕಾಫಿ, ಸಿಗಾರೇಟ ಮುಂತಾದವುಗಳು. ಇವು ನಿಜವಾಗಿಯೂ ಆತ್ಮಹತ್ಯದ ಒಂದು ಅಂಶವಾಗಿವೆ. ಆತ್ಮಹತ್ಯವು ಮಹಾ ಪಾಪವಲ್ಲವೇ ? ಹಾಗಾದರೆ ಈ ಶರೀರನಾಶಕ ಪದಾರ್ಥ

ಪೇಟೆಯಲ್ಲಿ ಹೋದೊಡನೆ ಎಣ್ಣೆಯ ಕಮರು ವಾಸನೆ ಮನುಷ್ಯನನ್ನು ಸುತ್ತುವುದು ಅತನನ್ನು ಚಹ ಫರಾಳದ ಅಂಗಡಿಗಳಿಗೆ ಕರೆದೊಯ್ಯುತ್ತಿದೆ. ಮನೆಯಲ್ಲಿ ಹೆಂಡಿರು ಮಕ್ಕಳು ತುತ್ತು ರೊಟ್ಟಿಗೆ ಅಭಾವವಾಗಿದ್ದರೆ ಪೇಟೆಯಲ್ಲಿ ಪುರುಷರು ತಿರುಕರಂತೆ ಫರಾಳದ ಅಂಗಡಿಗಳಲ್ಲಿ ಜಾಡ್ಯವನ್ನು ತರಿಸುವಂತಹ ಮಲಿತ ಎಣ್ಣೆಯಲ್ಲಿ ಕರಿದ ಫರಾಳನ್ನು ಸೇವಿಸುವರು. ಇದರಿಂದ ಹಣವಲ್ಲದೆ ಗುಣವೂ ಮತ್ತು ಶರೀರವೂ ನಾಶವಾಗುತ್ತವೆ. ಇವೆಲ್ಲ ವಿಚಾರಿಸದಿರುವ ನಾವು ಮನುಷ್ಯತ್ವಕ್ಕೆ ಸಮಾನರೇ ಅಲ್ಲ.

ಭಾರತವು ಸ್ವತಂತ್ರವಾಗಿ ೬-೭ ವರ್ಷಗಳಾದರೂ ಇನ್ನೂ ವರೆಗೆ ಒಂದಂಶದಷ್ಟು ಸಹ ನಾವು ಸುಧಾರಣೆಯಲ್ಲಿ ತಂದಿಲ್ಲ. ಹಾಳು ಹಟಗಳಂತೂ ಮಿತಿಮೀರಿವೆ. ಸ್ವಾರ್ಥಬುದ್ಧಿಯಂತೂ ತುಂಬಿ ತುಳುಕುತ್ತಿದೆ. ಎಲ್ಲರ ಹೃದಯದಲ್ಲಿ ಹೀಗಿರಲು ದೇಶದ ಊರ್ಜಿತ ಸ್ಥಿತಿ ಎಲ್ಲಿ? ನಮ್ಮ ಪದದಮೇಲೆ ನಾವೇ ಕಲ್ಲುಬಂಡೆಯನ್ನೆಸೆದುಕೊಂಡು ನೋವಾಯಿತೆಂದು ಹೇಳಿಕೊಂಡಂತಾಗುವದು. ನಮ್ಮ ಸಂಸ್ಕೃತಿಯಂತೂ ಅಳಿದು ಹೋಗಿದೆ. ಹಳ್ಳಿಗಳಲ್ಲಿ ಮಾತ್ರ ಅಲ್ಪಮಟ್ಟಿಗೆ ಉಳಿದಿದೆ. ಆದರೆ ಪಟ್ಟಣಗಳಲ್ಲಿಯ ಆಡಂಬರದ ಭೂತಗಳು ಹಳ್ಳಿಗಳಲ್ಲಿ ಹೊಕ್ಕರೆ ನಮ್ಮ ಸಂಸ್ಕೃತಿಯು ಸಂಪೂರ್ಣ ನಾಶಹೊಂದುವದರಲ್ಲಿ ಸಂದೇಹವಿಲ್ಲ. ಹಳ್ಳಿಗರೆಲ್ಲರೂ ಪಟ್ಟಣವಾಸಕ್ಕೆ ಮೆಚ್ಚಿ, ಹೊಲಮನೆಗಳನ್ನು ರೈತರಿಗೆ ಸಾಗಿಸಲು ಹಚ್ಚಿ ಪಟ್ಟಣದ ಸುವಾಸನೆಯ ಹೊಗೆವಾಸನೆಗೋ ಇಲ್ಲವೆ ಸಿನೇಮಾ ನಾಟಕದ ರುಚಿಗಾಗಿಯೋ ಇಲ್ಲವೆ ಮೋಟಾರು ಟಾಂಗೆಗಳಲ್ಲಿ ಹೆಂಡದಿರೊಂದಿಗೆ ಪೇಟೆಯಲ್ಲಿ ಮೆರೆಯುಲೋಸುಗವೋ ಬಂದು, ಪಟ್ಟಣದಲ್ಲಿ ತುತ್ತು ರೊಟ್ಟಿಗೆ ಅಭಾವವಾಗಿ, ಆಡಂಬರಕ್ಕೆ ಮೆಚ್ಚಿ, ಹೊಲಮನೆಗಳ ಅಲ್ಪ ಕಾಳುಕಡಿ ಮತ್ತು ಪಟ್ಟಣದಲ್ಲಿ ದೊರೆಯುವಂಥ ಕೂಲಿಯ ಸಂಬಳದಮೇಲೋ ಜೀವನವನ್ನು ಸಾಗಿಸುತ್ತಿರುವರು. ಹಳ್ಳಿಗಳಲ್ಲಿಯ ಹೊಲಮನೆಗಳ ಅರಿವೇ ಅವರಿಗಿರುವದಿಲ್ಲ. ಬೆಳೆಗಳ ಯೋಗ್ಯತೆ ಅಯೋಗ್ಯತೆಯನ್ನು ತಕ್ಕಮಟ್ಟಿಗೇ ಅರಿತವರಾಗಿದ್ದರೆ. ಹೀಗಾಗಿ ರೈತರು ಲಕ್ಷಗೊಡದೇ ಬಂದಷ್ಟರಲ್ಲಿಯೇ ಹೊಲದೊಡೆಯನಿಗೆ ಧಾನ್ಯಗಳನ್ನು ಕೊಟ್ಟರೆ ಕೊಡಬಹುದು. ಇಲ್ಲದಿದ್ದರೆ ಬೆಳೆಗಳು ಸಮಾರಾಗಿ ಬೆಳೆ ಬರಲಿಲ್ಲವೆಂದು ತಿಳಿಸಿ, ತಾವೇ ಬಳಸಿಕೊಳ್ಳಬಹುದು. ಹೀಗಾಗಿ ರೈತರಲ್ಲಿಯೂ ಬೆಳೆ ಬೆಳೆದು ನಮ್ಮ ಹೊಲದೊಡೆಯರ ಪ್ರೀತಿಗೆ ಪಾತ್ರರಾಗಬೇಕೆಂಬ ಭಾವನೆಯೂ ವಿರಳವಾಗಿದೆ. ಏಕೆಂದರೆ, ಹೇಗಾದರೂ ನಮಗೆ

ವರ್ಷಕ್ಕೆ ಸಾಲುವಷ್ಟು ಧಾನ್ಯ ಬಂದೇ ಬರುವದು. ಹೆರವರಿಗಾಗಿ ನಾವೇಕೆ ಪರಿಶ್ರಮಪಟ್ಟು ದುಡಿಯಬೇಕೆಂದು ವ್ಯಗ್ರರಾಗಿ ದುಡಿಯಹತ್ತಿದರೆ, ಬೆಳೆ ಬೆಳೆಯಿರಿ, ಸ್ವಾವಲಂಬಿಗಳಾಗಿರಿ ಎಂದು ವರ್ತಮಾನಪತ್ರಗಳಲ್ಲಿ ಜಾಹೀರ ಪಡಿಸಿದರೆ ಹಾಸ್ಯಾಸ್ಪದವೇ ಸರಿ. ರೈತರಂತೂ ಸ್ವಾವಲಂಬಿಗಳಾಗಿದ್ದಾರೆ. ಆದರೆ ಪಟ್ಟಣದಲ್ಲಿ ಮಾತ್ರ ಹೊಲಮನೆಗಳಿದ್ದ ಉದ್ಯೋಗಸ್ಥರು ಆನಂದ ದಿಂದ ಕಾಲಕಳೆಯುತ್ತಿರಲು ಅವರಾದರೂ ಸ್ವಾವಲಂಬಿಗಳೇ ಸರಿ. ಇನ್ನು ಉಳಿದವರೆಂದರೆ ಹೊಲಮನೆಗಳಿಲ್ಲದ ಬಡವರು. ಬಡವರಿಗಾಗಿ ಸರಕಾರವು ಯಾವ ಉಪಾಯವನ್ನು ಕೈಕೊಂಡಿಲ್ಲ. ಯಾವದಾದರೊಂದು ನೌಕರಿ ಸ್ವೀಕರಿಸಬೇಕಾದರೆ *Deposit* ಹಣ ಬೇಕೆಂಬ ಕಾಯಿದೆಪ್ರಕಾರ ಬಡವ ರಿಗೆ ಹಣವೆಲ್ಲಿಂದ ದೊರೆಯಬೇಕು ? ಹೀಗಾಗಿ ಉದ್ಯೋಗಗಳು ಸಿರಿವಂತ ರಿಗಾಗಿಯೇ ಅವಲಂಬಿಸಿವೆ. ಹೀಗೆಯೂ ಕೇಳಬಹುದು, ಮೊದಲಿನ ಕಾಲ ದಲ್ಲಿ ನೌಕರಿಯ ಅಭಾವವಿದ್ದಿಲ್ಲವೇಕೆಂದು. ಇದನ್ನು ವಿಚಾರಿಸುವಾ. ಮೊದಲಿನ ನಮ್ಮ ಶ್ರೀಮಂತ ಜನ ನೌಕರಿಯೆಂದರೆ ಅತಿ ಹೀನವೆಂದೂ, ಇದನ್ನು ಕೈಕೊಂಡರೆ ನಮ್ಮ ವರ್ಚಸ್ಸು ಕಡಿಮೆಯಾಗುವದೆಂದೂ ತಿಳಿದು, ನೌಕರಿ ವಗೈರೆ ಉದ್ಯೋಗಗಳನ್ನು ಸ್ವೀಕರಿಸದೇ ಹಳ್ಳಿಗಳಲ್ಲಿ ತಮ್ಮ ಹೊಲಮನೆಗಳನ್ನು ಸಾಗಿಸಿಕೊಂಡು ಸುಖದಿಂದ ಜೀವಿಸುತ್ತಿದ್ದರು. ಆದರೆ ಅವರಿಂದು ಹೀಗೆ ನೌಕರಿಯನ್ನವಲಂಬಿಸಲು ಕಾರಣವೇನೆಂದರೆ, ಮೇಲೆ ತಿಳಿಸಿದಂತೆ ಆಡಂಬರವೆಂಬ ಭೂತವು ಆವರಿಸಿ, ಆಡಂಬರಕ್ಕಾಗಿ ಹಣ ಸಾಲದೇ ನಾಚಿಕೆಯೆಂಬ ಅರಿವನ್ನೇ ಹೋಗಲಾಡಿಸಿ, ಇಂಥ ನೌಕರಿಗಾಗಿ ಸ್ಥೀವಿತ್ತಿದೆ. ಇನ್ನು ವಿಚಾರಿಸಬಹುದು, ಪಟ್ಟಣಗಳಲ್ಲಿಯ ಸಿನೇಮಾ, ನಾಟಕ ಮುಂತಾದ ಮನರಂಜನೆಯನ್ನು ತೆಗೆದುಹಾಕಲ್ಪಡಬೇಕೆಂದೂ, ಹಾಗೆ ಮಾಡಿದಲ್ಲಿ ನಮ್ಮ ಭರತಖಂಡವು ಮೊದಲಿನಂತೆ ಊರ್ಜಿತಾವಸ್ಥೆಗೆ ಬರುವದೆಂದು ತಿಳಿಯಬಹುದು. ಆದರೆ ಇದು ಶುದ್ಧ ತಪ್ಪು ತಿಳುವಳಿಕೆ. ಪಟ್ಟಣಗಳು ಮತ್ತು ಮನರಂಜನೆಗಳು ಏಕೆ ನಿರ್ಮಿತವಾದುವೆಂದರೆ ಕೇವಲ ಬಡವರಿಗಾಗಿ ಎಂದು ಹೇಳಬಹುದು. ಏಕೆಂದರೆ, ದುಡಿಯಲೋಸುಗ ದುಡಿಮೆಯ ಸ್ಥಳಗಳನ್ನು ಹುಡುಕುತ್ತಾ, ಬಡಜನರು ಕಾರಖಾನೆ ಮುಂತಾದ ಔದ್ಯೋಗಿಕ ಸ್ಥಳಗಳಿಗೆ ಬಂದು ನೆಲಸಿ, ಪಟ್ಟಣಗಳಾಗಿವೆ, ಹೊರತು ಅಲ್ಪಸಂಖ್ಯಾಕರಾದ ಶ್ರೀಮಂತರಿಂದಲ್ಲ. ಆದರೆ ಇಂದು ಪಟ್ಟಣಗಳಲ್ಲಿ ಸಿರಿವಂತಜನರು ಆಗಮಿಸಲು ಕಾರಣವೇನೆಂದರೆ, ಬಡಜನರು ಔದ್ಯೋಗಿಕ

ಸ್ಥಳಗಳಿಗೆ ಬಂದೊಡನೆ ಹಣವಿಲ್ಲದ ಅವರಿಗೆ ಮನೆಮಾರುಗಳೆಲ್ಲಿ? ಇಂಥ ಸುಸಂಧಿಯನ್ನು ತಿಳಿದು ಸಿರಿವಂತರು ಪಟ್ಟಣಗಳಲ್ಲಿ ಆಗಮಿಸಿ, ಬಡಜನರ ಹಿತಕ್ಕಾಗಿ ಎಂಬುವಂತೆ ಮನೆಮಾರುಗಳನ್ನು ಕಟ್ಟಿಸಿ, ಬಾಡಿಗೆಯಿಂದ ಬಡವರಿಗೆ ಮನೆಯೊಪ್ಪಿಸಿ, ಬಾಡಿಗೆಯ ಹಣದಿಂದ ಜೀವಿಸಹತ್ತಿದರು. ಮುಂದೆ ದುಡ್ಡಿನ ಲೋಭವು ಹೆಚ್ಚಾಗಿ ಮತ್ತು ಬಡವರಿಗಾಗಿ ಸಾಕಷ್ಟು ಮನೆ ಮಾರುಗಳಾದೊಡನೆ ಬೇರೆ ವಿಚಾರಗಳಾವರಿಸಿ, ದುಡಿದು ದಣಿದಂಥ ಬಡವನಿಗೆ ಮತ್ತೆ ಏನು ಬೇಕಾಗಬಹುದೆಂದು ವಿಚಾರಿಸಿ, ದುಡಿಯುವ ಮಾನವನಿಗೆ ವಿಶ್ರಾಂತಿ ಬೇಕಲ್ಲವೇ? ಇದನ್ನು ಸ್ವಾಭಾವಿಕವಾಗಿ ತಿಳಿದುಕೊಳ್ಳ ಬಹುದು. ಇದನ್ನು ತಿಳಿದು ಸಿರಿವಂತ ಜನ ತಮ್ಮ ಹೊಲಮನೆಗಳನ್ನು ಮಾರಿ, ಬಂದ ಹಣದಿಂದ ಸಿನೇಮಾ ಮುಂತಾದ ಮನರಂಜನೆಗಳನ್ನು ನಿರ್ಮಿಸಿ, ಹಣ ದೋಚಿಕೊಳ್ಳುತ್ತಿರುವರು. ಆದರೆ ಇದು ಅವರ ತಪ್ಪಲ್ಲ. ಧನಲೋಭವು ಸಂಸಾರಸ್ಥರಿಗೆಲ್ಲರಿಗೂ ಇರುವದು ಸ್ವಭಾವಿಕ. ಆದಲ್ಲ ಸುಶಿಕ್ಷಿತ ಜನ ತಿಳುವಳಿಕೆಯಿಲ್ಲದ ಅಶಿಕ್ಷಿತರಂತೆ ವರ್ತಿಸುವದುಂಟು. ಅದು ಹೇಗೆಂದರೆ, ಸುಶಿಕ್ಷಿತ ಬಹುಜನ ಪರದೇಶಿಗರಂತೆ ಆಡಂಬರದ ಉಡುಗೆ ತೊಡಪುಗಳೊಡನೆ ಕೈ ಹೊಲಸಾಗದಂತೆ ಕಾದು ಬಿಳುಪಾದ ಹಾಳೆಗಳ ಮೇಲೆ ಬರೆಯುವ ನೌಕರಿಯನ್ನು ಮಾಡುತ್ತ, ನೌಕರಿಗಾಗಿ ಸ್ಥಳವಿಲ್ಲದಿರಲು ಯಾವದಾದರೊಂದು ಆಫೀಸಿನೆದುರು ಕುಳಿತು, ಉಪವಾಸವನ್ನು ಕೈಕೊಂಡರೆ ಅದು ನಿಜವಾಗಿ ಕೇಡಿಗಳೇ ಸರಿ. ದುಡಿಯುವದು ಜನತೆಯಲ್ಲಿ ಆಡಂಬರದಿಂದ ಮೆರೆದಾಡುವದಕ್ಕಲ್ಲ, ಹೊಟ್ಟೆಗಾಗಿ ಮಾತ್ರ. ಆಡಂಬರವು ನಮ್ಮ ದೇಶಸ್ಥರಿಗೆ ಯೋಗ್ಯವಲ್ಲ. ಏಕೆಂದರೆ ನಾವು ಶೇತಕಾರಿಗಳು. ಒಕ್ಕಲುತನವೇ ನಮ್ಮ ಮುಖ್ಯ ಉದ್ಯೋಗ. ಉಳಿದ ಮಾಂಸಾಹಾರಿ ದೇಶಿಗರಂತೆ ವರ್ತಿಸುವದು ತಪ್ಪು. ಹೊಟ್ಟೆ ಹೊರೆದುಕೊಳ್ಳುವದಕ್ಕಾಗಿ ದುಡಿಮೆ ಅಂದಮೇಲೆ ಯಾವದಾದರೊಂದು ದುಡಿತವನ್ನು ಕೈಕೊಂಡರಾಯಿತು. ಆದರೆ ಇಲ್ಲಿ ಮತ್ತೊಂದು ವ್ಯತ್ಯಾಸವು ಕಂಡುಬರುವದು. ಅದಾವದೆಂದರೆ, ಸರಕಾರಿ ನೌಕರಿಗಳಿಗಿದ್ದ ಮಾನ್ಯತೆ, ವಿರಾಮ, ಸೌಲಭ್ಯಗಳು ಇತರ ಉದ್ಯೋಗಗಳಲ್ಲಿಲ್ಲ. ಮೇಲಾಗಿ ದುಡಿತಕ್ಕೆ ತಕ್ಕ ಫಲವಿಲ್ಲ. ಹೀಗಾಗಿ ಜನತೆಯ ಒಲವು ಆ ಮೆತ್ತನ್ನ ಗಾದಿಯನ್ನು ಹಾಸಿದ ಖುರ್ಚಿ, ಟೇಬಲ್ ಮೇಲೆ ಸುವಾಸನೆಯುಳ್ಳ ಊದಬತ್ತಿ. ನುಣುಪಾದ ಶುಭ್ರ ಕಾಗದ, ಇವೆಲ್ಲವುಗಳಲ್ಲದೆ ಇವರಿಗೆ ಪಾತ್ರವಾಗಲಾರದೆಂದು ವಾಯುದೇವನನ್ನೇ

ಕಂಖ ವತಾರದಲ್ಲಿ ಅವರಿಗೊಲಿಸಿದಮೇಲೆ ಇನ್ನಿತರ ಖಾಸಗಿ ನೌಕರರು ಬಿಸಿಲಿನಿಂದ ಬೆಂದು, ರಕ್ತವನ್ನು ಸುರಿಸಿ, ಕೈ ಮೈಗಳನ್ನು ಮಲಿನ ಮಾಡಿಕೊಂಡು, ಜನರಲ್ಲಿ ಅತಿ ಹೀನನೆಂದೆನಿಸಿಕೊಳ್ಳಲು ಅರ್ಹರಾಗುವರೇ? ಇದಕ್ಕೆ ಒಂದೇ ಒಂದು ಉದಾಹರಣೆ ಕೊಡಬಹುದು. ಅದಾವದೆಂದರೆ, ಒಂದು ಪಾತ್ರೆಯಲ್ಲಿ ವಿಷವೂ, ಇನ್ನೊಂದು ಪಾತ್ರೆಯಲ್ಲಿ ಅಮೃತವೂ ಉಂಟು. ಅದರಲ್ಲಿ ಯಾವುದು ಸ್ವೀಕರಿಸುವಿರೆಂದು ಕೇಳಿದಾಗ ಯಾರಾದರೂ ವಿಷ ಸ್ವೀಕರಿಸಬಹುದೇ? ಹಾಗೆ ಸರಕಾರಿ ನೌಕರಿಗಳು ಅಮೃತ ಸಮಾನವೂ, ಖಾಸಗಿ ನೌಕರಿಗಳು ವಿಷದ ಸಮಾನವೂ ಆಗಿವೆ. ವಿಷದ ಸಮಾನವಾದ ಇತರ ಖಾಸಗಿ ನೌಕರಿಗಳನ್ನು ಮಾಡುವವರೆಂದರೆ ಕೇವಲ ಅಶಿಕ್ಷಿತರು ಮಾತ್ರ. ಆದರೆ ಈಗ್ಗೆ ಎಲ್ಲರೂ ಆ ಅಮೃತಸಮಾನವಾದ ಸರಕಾರಿ ನೌಕರಿ ಪಡೆಯಲೋಸುಗ ಶಿಕ್ಷಣ ಕಲಿಯುವರು, ಹಾಗೂ ಅಶಿಕ್ಷಿತರಾದ ಪಾಲಕರು ತಮ್ಮ ಮಕ್ಕಳನ್ನು ತಮ್ಮಂತೆ ದುಃಖಸೇತ್ರದಲ್ಲಿ ಸಿಲುಕಿಸಬಾರದೆಂದು ಕೂಲಿಯಿಂದ ಬಂದಹಣದಿಂದ ಮಕ್ಕಳಿಗೆ ವಿದ್ಯಾಭ್ಯಾಸ ಕಲಿಸಿ, ಕೊನೆಗೆ ನಿರಾಶರಾಗುವರು. ಸುಶಿಕ್ಷಿತರಾದ ಜನರು ಇತರ ಉದ್ಯೋಗ ಕೈಕೊಳ್ಳದೇ ನಿರುದ್ಯೋಗಿಗಳಾಗಿರುವರು. ಹೀಗಾಗಿ ಕೆಲವೇ ವರ್ಷಗಳಲ್ಲಿ ಒಕ್ಕಲುತನವು ಸಂಪೂರ್ಣನಾಶಹೊಂದಿ ಹುಲ್ಲುಬೀಜಗಳೇ ಆಹಾರ ಧಾನ್ಯವೆಂದು ಸೇವಿಸುವ ಪ್ರಸಂಗ ಬರಬಹುದು. ಇದು ಶಾಶ್ವತ. ಇದನ್ನರಿತು ಸರಕಾರವು ಯೋಗ್ಯ ಕ್ರಮವನ್ನು ಕೈಕೊಳ್ಳುವದು ಉತ್ತಮ. ಅದಾವುದೆಂದರೆ, ಯಾವ ಉತ್ಪನ್ನವಿಲ್ಲದ ಬಡವರಿಗೆ ಸ್ಥಳವಿತ್ತಲ್ಲಿ ಮಾತ್ರ ರಾಜ್ಯದಾಡಳಿತವೂ ಸುರಕ್ಷಿತವಾಗಿ ಸಾಗುವದು. ಏಕೆಂದರೆ, ಬಡಜನರೇ ಹೆಚ್ಚು ಜ್ಞಾನಿಗಳು. ಹೀಗೆ ಸರಕಾರವು ಈ ಕಾರ್ಯ ಕೈಕೊಂಡಲ್ಲಿ ನಿರುದ್ಯೋಗತನವೂ, ಆಹಾರಸಮಸ್ಯೆಯೂ ಪೂರ್ಣ ಫಲಕಾರಿಯಾಗುವದರಲ್ಲಿ ಯಾವ ಸಂಶಯವೂ ಇಲ್ಲ. ಆಮೇಲೆ ಸಿರಿವಂತರು ತಾವಾಗಿಯೇ ತಮ್ಮ ಬೀಡಾರವಾದ ಹಳ್ಳಿಗಳಿಗೆ ತೆರಳಿ ಒಕ್ಕಲುತನ ವ್ಯವಸಾಯ ಹಾಗು ಪಟ್ಟಣಗಳಲ್ಲಿ ಉದ್ಯೋಗವ್ಯವಸಾಯಗಳನ್ನು ಕೈಕೊಂಡು ತರತರದ ಸಂಶೋಧನೆಗಳನ್ನು ಶೋಧಿಸಬಹುದು. ಆದರೆ ಈ ದುಶ್ಚಟಗಳನ್ನು ಹಾಗೂ ಆಡಂಬರದ ವೇಷಭೂಷಣಗಳನ್ನು ತ್ಯಜಿಸಿ, ಸ್ವದೇಶಾಭಿಮಾನಿಗಳಾದರೆ ಮಾತ್ರ ಆದಿಭಾರತ ಅರುಣೋದಯವು ಮರಳಿ ಉದಯವಾಗುವದರಲ್ಲಿ ಸಂದೇಹವಿಲ್ಲ.

---

# ಕೊಳೂರು ಕೊಡಗೂಸು.

( ಲೇಖಕರು:- ಶ್ರೀಯುತ ಎಸ್. ಎಮ್. ಜಾದರ, ಧಾರವಾಡ. )



ಕೋಳೂರು ಎಂಬುದೊಂದು ಚಿಕ್ಕ ಹಳ್ಳಿ. ಅಲ್ಲಿ ಲಿಂಗವಂತರ ಒಂದು ಸಾಮಾನ್ಯ ಸಿರಿವಂತಿಕೆಯ ಮಾನವಂತರ ಮನೆ. ಈ ಮನೆಯ ಯಜಮಾನ ಸಾಧು ಮನುಷ್ಯ. ಸರಕಾರಿ ಉದ್ಯೋಗಿ, ಅಲ್ಲದೆ ಲಿಂಗ ಪೂಜೆಯಲ್ಲಿ ನೈಮರಿತು, ದೇವ ದೇವನ ಸಂಕೀರ್ತನೆಯನ್ನು ಮಾಡಿ ಪೂಜೆಯನ್ನು ಮುಗಿಸುವವ. ಅಲ್ಲದೆ ಸ್ವತಃ ತನ್ನ ಲಿಂಗಪೂಜೆಯು ಮುಗಿದಕೂಡಲೆ ಕಾಯ್ದ ಹಾಲನ್ನು ಈಶ್ವರದೇವರಿಗೆ ನೈವೇದ್ಯ ಕೊಡುವದು ಅವನ ವಾಡಿಕೆಯಾಗಿತ್ತು. ಹೀಗೆ ಅವನು ದಿನಾಲು ನೈವೇದ್ಯ ತೋರಿಸಿ ಅದನ್ನು ಕುಡಿದುಬರುವದೊಂದು ಅವನ ಮತ್ತೊಂದು ವಾಡಿಕೆ. ನಂತರ ಮಗಳೊಂದಿಗೆ ನಗುತ್ತ ಕಲೆಯುತ್ತ ಊಟಮಾಡುತ್ತಿದ್ದ. ಅವನ ಮಗಳಾದರೂ ೧೧ ವರ್ಷದ ಚಿಕ್ಕ ಹುಡುಗಿ. ತಾಯಿಯಿಲ್ಲದ ಮಗಳು. ಹೀಗಾಗಿ ತಂದೆಯ ಮಾತನ್ನು ತಿರವಿಹಾಕದೆ ಅವನ ಕಣ್ಮಣಿಯಂತೆ ಇದ್ದಳು. ಇದರಿಂದ ಅವನು ಅವಳನ್ನು ಕಂಡಾಗಲೆಲ್ಲ ಅವಳನ್ನು ಎತ್ತಿ ಮುದ್ದಾಡುತ್ತಿದ್ದ.

ಹೀಗಿರುವಾಗ ಅವನು ಒಮ್ಮೆ ಸನಿಯದ ಜಾತ್ರೆಯೊಂದಕ್ಕೆ ಹೋಗುವದನ್ನು ನಿರ್ಧರಿಸಿದ. ಅವನು ಶಿವಭಕ್ತನಾದ್ದರಿಂದ ಸಾಧು ಸತ್ಪುರುಷರು ಎಂದರೆ ಬಿದ್ದುಸಾಯುತ್ತಿದ್ದ. ಮತ್ತು ಇನ್ನೊಂದು ಅವನ ಕಲ್ಪನೆಯೇನೆಂದರೆ ಇಂಥ ಧಾರ್ಮಿಕ ವಿಷಯದ ಬಗ್ಗೆ ಲಕ್ಷ ಪೂರೈಸುವದರಿಂದ ಮನುಷ್ಯನ ಬುದ್ಧಿಯು ನೀರೊಳಗೆ ಬಿದ್ದ ಎಣ್ಣೆಯ ಹನಿಯಂತೆ ಆಗುವದು ಎಂಬುದು ಅವನ ಮತ್ತೊಂದು ಕಲ್ಪನೆ. ಆ ಜಾತ್ರೆಯ ಸಲುವಾಗಿ ಅವನು ಹೊರಟೇಬಿಟ್ಟ. ಹೋಗುವ ಮುನ್ನ ಮಗಳಿಗೆ ಚನ್ನಾಗಿ ಬಾಗಿಲು ಇಕ್ಕಿಕೋ. ಅಲ್ಲಲ್ಲಿ ತಿರುಗಾಡಬೇಡ. ದೇವರಿಗೆ ಹಾಲನ್ನು ನೈವೇದ್ಯ ಹಿಡಿಯುವದಕ್ಕೆ ಮರೆಯಬೇಡ. ಮತ್ತು ಆಕಳ ಬಗ್ಗೆ ಕಾಳಜಿ ತಕ್ಕೋ. ಬೇಗನೇ ಆಕಳನ್ನು ಕರೆದುಕೋ ಎಂದು ಮುಂತಾಗಿ ಮಗಳಿಗೆ ತಿಳಿಸಿ ಹೇಳಿದ. ಮತ್ತು ಬರುವಾಗ ನಿನಗೆ ಆಟಿಗೆ ಸಾಮಾನುಗಳನ್ನು ತರುವೆ

ಎಂದು ಹೇಳಿ ಹೊರಟ. ಮಗಳಾದರೂ ತಂದೆಯ ಮಾತಿಗೆ ಒಪ್ಪಿಕೊಂಡಳು.

ಆಮೇಲೆ ಅವಳು ಎಲ್ಲ ವ್ಯವಸ್ಥೆಯನ್ನು ಮಾಡಿ ಮುಗಿಸಿದಳು. ಹೋಗುವಾಗ ತಂದೆಯು ಲಿಂಗಪೂಜೆಯನ್ನು ಮಾಡಿಕೊಂಡು, ದೇವರಿಗೆ ನೈವೇದ್ಯ ಸಮರ್ಪಿಸಿ ಹೋಗಿದ್ದ. ಆದ್ದರಿಂದ ಅವಳು ಅಂದು ದೇವರಿಗೆ ಹಾಲು ಕೊಡುವುದೇನು ಅಗತ್ಯವಿದ್ದಿಲ್ಲ. ಇನ್ನುಳಿದ ಎಲ್ಲ ವ್ಯವಸ್ಥೆಯನ್ನು ಮುಗಿಸಿ, ಬೇಗನೇ ಊಟಮಾಡಿ, ದೇವರನ್ನು ನೆನೆದು ಮಲಗಿದಳು. ಮತ್ತು ನಸುಕಿನಲ್ಲಿಯೇ ಎದ್ದು, ಪ್ರಾತರ್ವಿಧಿಗಳನ್ನು ತೀರಿಸಿಕೊಂಡು, ಸ್ನಾನ ಮಾಡಿ, ಆಕಳನ್ನು ಕರೆದುಕೊಂಡು, ನಂತರ ಅದನ್ನು ಕಾಯುವವನಿಗೆ ಎಚ್ಚರಿಸಿ ತಾನು ದೇವರ ಪೂಜೆಯಲ್ಲಿ ಮಗ್ನಳಾದಳು. ನಂತರ ಪೂಜೆಯು ಮುಗಿದೊಡನೆಯೇ ದೇವರಿಗೆ ನಮಸ್ಕರಿಸಿ ಈಶ್ವರ ಗುಡಿಗೆ ನೈವೇದ್ಯ ಕೊಡಲು ಗುಡಿಗೆ ಹೋದಳು. ಮತ್ತು ಇಂದು ತಂದೆಯು ಇಲ್ಲ. ಜಾತ್ರೆಗೆ ಹೋಗಿರುವನು. ಆದ್ದರಿಂದ ಬೇಗನೆ ಕುಡಿದುಬಿಡು ಎಂದಳು. ಪಾಪ, ಅವಳಿಗೇನು ಗೊತ್ತು? ತಂದೆಯು ಹಾಲನ್ನು ನೈವೇದ್ಯ ಹಿಡಿದು ಅಲ್ಲಿಯೇ ಸುರಿದುಬಿಡುವನೆಂಬುದು.

ಅವಳು ನಿಂತೇನಿಂತಳು ದೇವನು ಹಾಲು ಕುಡಿಯಲಿಲ್ಲ. ಆಗ ಅವಳು ದೇವಾ ಹೀಗೇಕೆ ಮಾಡುವಿ? ತಂದೆಯಿಲ್ಲವೆಯೋ, ಅಥವಾ ಹಾಲು ಆರಿದೆಯೆಂದೋ, ಹೊತ್ತಿದೆಯೆಂದೋ, ಸುಡುವದೆಂದೋ ಮತ್ತೆ ಏನಾದರೂ ಆಗಿದೆಯೆಂದೋ? ಏನುದೇವಾ ಹೀಗೇಕೆ ಮಾಡುವಿ? ಸಣ್ಣ ಹುಡುಗಿಯೆಂದೋ ದೇವಾ ಹೇಳು. ಮತ್ತೆ ನಿಂತಳು ಏನೂ ಆಗಲಿಲ್ಲ. ಆಗ ಅವಳು ಸಕ್ಕರೆ ಬೆರೆಸಿದರೆ ಕುಡಿಯುವಿಯಾ, ಹಾಲಲ್ಲಿ ನೀರು ಬೆರೆಸಿರುವೆನೆಂದು ತಿಳಿದು ಕುಡಿಯಲೊಲ್ಲೆಯಾ? ಮತ್ತು ಎಷ್ಟೋ ಬೇಡಿಕೊಂಡಳು. ಪ್ರಯೋಜನವಾಗಲಿಲ್ಲ. ಆಗ ಅವಳು ಮನದಲ್ಲಿಯೇ ದೇವನಿಗೆ ದೃಷ್ಟಿಯಾಗುವದನ್ನು ಅರಿತಳು. ಅದಕ್ಕೇನೆ ಅವನು ಇಲ್ಲಿಯವರೆಗೆ ಕುಡಿಯಲಿಲ್ಲ ಎಂದವಳೇ ಮರೆಗೆ ನಿಂತಳು. ಅವಳು ಬಲ್ಲಳೇ ಕಲ್ಲುಮೂರ್ತಿಯು ಹಾಲು ಕುಡಿಯಬಾರದೆಂದು ಅಂತು ಬೇಸರವಾಯಿತು. ಕಡೆಗೆ ಎಷ್ಟೋ ರೀತಿಯಿಂದ ಹೇಳಿಕೊಂಡರೂ ಪ್ರಯೋಜನವಾಗದಾಗ ಕಡೆಗೆ ಅವಳು ಗಂಭೀರ ಭಾವದಿಂದ ದೇವಾ, ನೀನು ಹಾಲು ಕುಡಿಯದಿದ್ದರೆ ನಾನು ನಿನ್ನಡಿಯಲ್ಲಿಯೇ ತಲೆಹೊಡೆದುಕೊಂಡ

ಸಾಯುವೆ ಎಂದವಳೇ ತಲೆಯನ್ನು ಮೂರ್ತಿಯ ಪಾದಕ್ಕೆ ಹೊಡೆದುಬಿಟ್ಟಳು. ಅಚ್ಚ ಭಕ್ತಿವಾಸನ ಪುತ್ರಿಯಾದ ಅವಳಭಕ್ತಿಗೆ ಆ ದೇವನು ಮೆಚ್ಚಿ "ಕುಡಿವೇನಪ್ಪಾ ತಡಯಾಕೆ ಹಿಡಿದಾಡುವೆ ಎಂದಂತಾಯಿತು. ಮೇಲೆನೊತ್ತು ತ್ತಾಳಿ ನಿಜವಾಗಿ ಕಲ್ಲುಮೂರ್ತಿಯಲ್ಲಿಯೇ ಉದ್ಭವಿಸಿ ಅವಳನ್ನು ಎತ್ತಿ ಹಿಡಿದು ನಂತರ ಹಾಲನ್ನು ಕುಡಿದುಬಿಟ್ಟ. ಆಗ ಅವಳಾನಂದಕ್ಕೆ ಪಾರವಿಲ್ಲದಾಯಿತು. ಕೂಡಲೇ ಅವಳು ಪರಮಾತ್ಮನನ್ನು ಹೊಗಳುತ್ತ ಮನೆ ಸೇರಿದಳು. ಆವಾಗ ತಂದೆಬಂದು ಬಿಟ್ಟಿದ್ದ. ಆಗ ಅವನು ತಾಯೀ ಹಾಲು ಎಲ್ಲ ಕುಡಿದು ಬಂದಿಯೋ ಎಂದು ಸಲುಗೆಯಿಂದ ಕೇಳಿದ ಆಗವಳು ಆನಂದದಿಂದ ದೇವರು ಕುಡಿದುಬಿಟ್ಟ ಆಗ ಅವನು ಸ್ವಲ್ಪಸಿಟ್ಟಿಗೆದ್ದ "ಏನು ದೇವನ ಕುಡಿವನೇ"

ಹೌದಪ್ಪಾ. ಯಾಕೆ ಹೀಗೆ ಅನುಮಾನದಿಂದ ಸಿಟ್ಟಿಗೇಳುವಿ? ಆಗ ಅವನಿಗೆ ಪೂರ್ಣ ಸಿಟ್ಟುಬಂದು ತಲೆಯುಕೆಟ್ಟಿದಿಯೆ.? ಕಲ್ಲುಮೂರ್ತಿಯು ಹಾಲು ಕುಡಿಯುವದುಂಟೆ ?

ಇಲ್ಲವಪ್ಪಾ ನಿಜವಾಗಿ ಕುಡಿದುಬಿಟ್ಟ. ನೀನು ಹೀಗೆ ದಿನಾಲು ಕುಡಿಸಿದ ನಂತರ ತಿರುಗಿಬರುತ್ತಿದ್ದಿ. ಹಾಗೆಯೇ ನಾನುಸಹ ಅವನಿಗೆ ಕುಡಿಸಿದೆ.

ಏನು ನಾನು ದಿನಾಲು ಕುಡಿಸಿಬರುವೆನೆಂದು ತಿಳಿದಿರುವೆಯಾ ? ಇಲ್ಲಾ. ನಾನು ಅಲ್ಲಿಯೇ ಕುಡಿದುಬರುತ್ತಿದ್ದೆ. ನೀನು ನಿಜವಾಗಿಯೂ ಯಾವನಿಗೋ ಅಥವಾ ಯಾರಿಗೋ ಕೊಟ್ಟಿರುವಿ. ನಿಜವನ್ನು ಬೊಗಳು. ಇಲ್ಲವಾದರೆ ಕೊಲ್ಲುವೆ ನೋಡು.

ಏನು ಅಪ್ಪಾ ಹೀಗೇಕೆ ನುಡಿಯುವಿ ? ವಿಚಾರಮಾಡದೆ ಬೈಯ್ಯ ಬೇಡಪ್ಪಾ ತಂದೆ. ಇಲ್ಲ! ಇಲ್ಲ! ನೀನು ನಿಜವಾಗಿಯೂ ನೀಚಳು. ಮನೆಯ ಮಾನವನ್ನು ಹಾಳುಮಾಡುವಳು ನೀನೇ. ತಾಯಿ ಯಿಲ್ಲದ ಹುಡುಗಿ ಎಂದು ಸಲಗೆಕೊಟ್ಟರೆ ನೀನು ನನ್ನನ್ನೇ ಎಚ್ಚರಿಸಲು ಬಂದಿರುವೆಯಾ ? ಅದೇನೋ? ಅನ್ನುವರಲ್ಲ – "ಸಲುಗೆಯು ಕೊಟ್ಟ ನಾಯಿ ತಲೆಗೆ ಏರಿತು" ಅಂತು ಹಾಗಾಯಿತು ನೀ ಮಾಡಿಟ್ಟದ್ದು. ಹೂಂ. ಏನೆನ್ನುವೆ.

ತಂದೆಯೇ ನಾನು ನಿಜವಾಗಿಯೂ ಸುಳ್ಳುಹೇಳುವದಿಲ್ಲವಪ್ಪಾ. ಒಂದುವೇಳೆ ನಿನಗೆ ನಾ ಹೇಳಿದ್ದರಲ್ಲಿ ನಂಬಿಗೆಬಾರದೇ ಹೋದರೆ ದೇವ ನನ್ನೇ ದೇವನಿಂದಲೇ ಹೇಳಿಸಿಕೊಡುವೆ ನಡೆ ಬೇಕಾದರೆ.

ನಡೆ ನೀನು ವ್ಯಭಿಚಾರಿಣಿ. ಸಣ್ಣವಳೆಂದು ಬಿಟ್ಟೆ ಪರಿಣಾಮ. ಅವಳು ಮಾಕನಾತನೆ ದೇವರ ಗುಡಿಗೆ ಬಂದು, ಭಕ್ತಿಯಿಂದ ದೇವರಿಗೆ ನಮಸ್ಕರಿಸಿ, ದೇವಾ ಹೇಳು. ನಿನ್ನಿಂದಾದರೂ ಇವನು ಮಾರ್ಗ ಹಿಡಿಯಲಿ. ಹಾ; ಹಾ;... ಕಲ್ಲುದೇವನಿಂದ ಮಾರ್ಗ ಹಿಡಿಯಲಿ ಹೇಳು ನೋಡುವಾ. ತೋರಿಸು ಬೇಗ. ಅವನು ಮಕಿನ್ಮೊಮ್ಮೆ ಬೊಬ್ಬಿಟ್ಟುಕೊಂಡ.

ದೇವಾ ಎಂಥ ಸಮಯದಲ್ಲಿ ಕಾಡುನೆ. ಬೇಗನೇ ನಮ್ಮ ತಂದೆಗೆ ನಡೆದಲ್ಲ ವಿಷಯ ಹೇಳು.

ಹೇಳೋ ಕಲ್ಲ-ಮೂರ್ತಿಯಾದ ಈಶ್ವರನೇ. ಸತ್ಯಾಸತ್ಯ ನೋಡುವೆ ಬೇಗನೇ. ಇಂಥ ನೀಚಳಿಗೆ ದರ್ಶನ ಕೊಟ್ಟು ನಿನ್ನ ಪಾಪ ತೊಳೆದು ಕೊಳ್ಳುವ್ಯಾ. ಹೂಂ. ನಿನ್ನ ಆ ದೇವನೆಲ್ಲಿ?

ದೇವಾ ಸಮಯದಲ್ಲಿ ನನಗೊಬ್ಬಳಿಗೆ ಬಯ್ಯುವನು. ಅಲ್ಲದೆ ನಿನಗೂ ಸಹ ನನ್ನ ಈ ತಂದೆಯು ಬಯ್ಯುತ್ತಿರುವನು ನೋಡು. ಎಲ್ಲ ವಿಚಾರ ವನ್ನು ವಿವರಿಸಿ ಹೇಳು ಎಂದಳು.

ಅತ್ತ ತಂದೆಯು ತೋರಿಸು ಎಂದು ಒತ್ತಾಯಪಡಿಸುವದಲ್ಲದೆ ಬಯ್ಯುವನು. ಇತ್ತ ದೇವರ ದರ್ಶನವಿಲ್ಲದೆ ಅಬಲೆಯಾದ ಅವಳು ದೇವಾ ನೀ ದರ್ಶನ ಕೊಡದಿದ್ದರೆ ನಿನ್ನಡಿಯೇ ನನಗಾಧಾರ ಎಂದವಳೇ ಈಶ ಮೂರ್ತಿಗೆ ಹಣೆಯನ್ನು ಕುಕ್ಕತೊಡಗಿದಳು. ದೇವನು ಅಂಥ ಕರುಣಾ ಕರ ಪ್ರಸಂಗ ತಡೆಯನೇ ಭಕ್ತಳಿಗೆ ಮಾರ್ಗ ತೋರಿಸಲು ಒಮ್ಮೆಲೇ ಪ್ರತ್ಯಕ್ಷನಾಗಿ ಅವಳನ್ನು ಎತ್ತಿಹಿಡಿದು, ತಾಯಿ ನಿನ್ನ ಭಕ್ತಿಯು ಅಚಲ ವಾದುದು. ನೀನು ನಿಜವಾಗಿಯೂ ಕಲಿಯುಗದ ಪಾರ್ವತಿದೇವಿ. ನೀನು ಸಾಮಾನ್ಯಳಲ್ಲ ಎಂದವನೇ ಅವಳನ್ನು ನುಂಗಿಬಿಟ್ಟ. ಅವಳ ತಂದೆಯು ಬಹುಕರಿಯಿಂದ ಬೇಡಿಕೊಂಡಿದ್ದರಿಂದ ಕಡೆಗೆ ದೇವನು ಅವಳ ಕೂದಲು ಗಳು ಎಲ್ಲವೂ ಹೊರಗೆ ಕಾಣುವತನಕ ಬಿಟ್ಟು ಇನ್ನುಳಿದ ಎಲ್ಲ ಭಾಗ ವನ್ನು ನುಂಗಿಬಿಟ್ಟ. ಮತ್ತು ಅವಳ ತಂದೆಗೆ ದೇವನು ಮೋಕ್ಷಪದವಿ ಯನ್ನು ಕೊಟ್ಟನು. ನೋಡಿದಿರಾ ಭಕ್ತಿಯ ಭಾವವನ್ನು. ಶುದ್ಧ ಭಕ್ತಿಯು ಕೊತಗೂಸಿನದೇ ಎಂದು ಹೇಳಲು ಎಲ್ಲರಿಗೂ ಆನಂದವೆನಿಸುವದರಲ್ಲಿ ಸಂಶಯವಿಲ್ಲ. ಕೋಳೂರದಲ್ಲಿ ಇಂದಿಗೂ ಸಹ ಈಶ್ವರದೇವರ ಬಾಯಿ ಯಲ್ಲಿ ಕೊಡಗೂಸಿನ ಕೇಶಗಳು ಕಾಣುವದನ್ನು ನೋಡಬಹುದು.

---

# ಸಕಲಾಗಮ ಶಿಖಾಮಣಿ ವಚನ.

೧. ಶ್ರೀಮನ್ನಿರಾಳ ನಿರಂಜನ ನಿರಾಮಯ ನಿರಾಮಯಾತೀತ ಪರಮ ಪರಮಾನಂದ ಪರಮಾತ್ಮ ಪರಮೇಶ ಪರಾತ್ಪರ ಬ್ರಹ್ಮ ಪರಮ ತೇಜೋಮಯ ಅಗಣಿತ ಅಗೋಚರ ಅಪ್ರಮೇಯ ಅಖಂಡ ಪರಿಪೂರ್ಣ ಚೈತನ್ಯನಪ್ಪ ಸಕಳ ನಿಃಕಳಾತೀತನಾಗಿಹ ಅಖಂಡ ಜ್ಯೋತಿರ್ಮಯ ಲಿಂಗ ತಾನೇ ತನ್ನ ಲೀಲಾ ವಿನೋದಕ್ಕೆ ಅಪ್ರಮಾಣ ಕೂಡಲಸಂಗಯ್ಯನಾಗಿ ಬಿಜಯಂಗೆಯ್ದು ಅಪ್ರಮಾಣ ದೇವರ ಅರಿತರಂಗ ಬಹಿರಂಗ ಸರ್ವಾಂಗವೆಲ್ಲನಿಂಬುಗೊಂಡು ಸ್ಥೂಲ ಸೂಕ್ಷ್ಮ ಕಾರಣ ನಡೆನುಡಿ ಚೈತನ್ಯವೆಲ್ಲ ತಾನೆ ಯಂತ್ರವಾಹಕನಾಗಿ ಆಡಿಸುತ್ತಿರ್ದನು ನೋಡಾ, ನಮ್ಮ ಅಪ್ರಮಾಣ ಕೂಡಲಸಂಗಮದೇವಾ.

೨. ಪರಾಪರವಾಗಿಹ ಪರಬ್ರಹ್ಮ ಲೋಕಾದಿ ಲೋಕಂಗಳನು ಸೃಜಿಸಬೇಕೆಂದು, ನೆನಹು ಮಾತ್ರದಲ್ಲಿಯೆ ಆ ಪರಾಪರವಾಗಿಹ ಪರಬ್ರಹ್ಮದಲ್ಲಿ ಪರ ಉತ್ಪತ್ತ್ಯವಾಯಿತ್ತು. ಆ ಪರದಲ್ಲಿ ಶಿವನುತ್ಪತ್ತ್ಯನಾದನು. ಆ ಶಿವನಲ್ಲಿ ಶಕ್ತಿ ಉತ್ಪತ್ಯವಾದಳು. ಆ ಶಕ್ತಿಯಲ್ಲಿ ಬಿಂದು ಉತ್ಪತ್ಯವಾಯಿತ್ತು. ಆ ಬಿಂದುವಿನಲ್ಲಿ ನಾದ ಉತ್ಪತ್ಯವಾಯಿತ್ತು. ಆ ನಾದದಲ್ಲಿ ಸದಾಶಿವನುತ್ಪತ್ತ್ಯನಾದನು. ಆ ಸದಾಶಿವನ ಗೋಪ್ಯ ವಕ್ತ್ರದಲ್ಲಿ ಆತ್ಮನುತ್ಪತ್ಯನಾದನು. ಆ ಸದಾಶಿವನ ಈಶಾನ್ಯ ವಕ್ತ್ರದಲ್ಲಿ ಆಕಾಶ ಉತ್ಪತ್ಯವಾಯಿತ್ತು. ಆ ಸದಾಶಿವನ ತತ್ಪುರುಷವಕ್ತ್ರದಲ್ಲಿ ವಾಯು ಉತ್ಪತ್ಯವಾಯಿತ್ತು. ಆ ಸದಾಶಿವನ ಅಘೋರವಕ್ತ್ರದಲ್ಲಿ ಅಗ್ನಿ ಉತ್ಪತ್ಯವಾಯಿತ್ತು. ಆ ಸದಾಶಿವನ ವಾಮದೇವ ವಕ್ತ್ರದಲ್ಲಿ ಅಪ್ಪು ಉತ್ಪತ್ಯವಾಯಿತ್ತು. ಆ ಸದಾಶಿವನ ಸದ್ಯೋಜಾತ ವಕ್ತ್ರದಲ್ಲಿ ಪೃಥ್ವಿ ಉತ್ಪತ್ಯವಾಯಿತ್ತು. ಆ ಸದಾಶಿವನ ಹೃದಯದಲ್ಲಿ ಚಂದ್ರ ಉತ್ಪತ್ಯವಾಯಿತ್ತು. ಆ ಸದಾಶಿವನ ಚಕ್ಷುವಿನಲ್ಲಿ ಸೂರ್ಯ ಉತ್ಪತ್ಯವಾಯಿತ್ತು. ಆ ಸದಾಶಿವನು ಆಕಾಶಕ್ಕೆ ಅಧಿದೇವತೆಯಾಗಿಹನು. ಆ ಸದಾಶಿವನಲ್ಲಿ ಮಹೇಶ್ವರನುತ್ಪತ್ಯನಾಗಿ ವಾಯುವಿಗೆ ಅಧಿದೇವತೆಯಾಗಿಹನು. ಆ ಮಹೇಶ್ವರನಲ್ಲಿ ರುದ್ರನುತ್ಪತ್ಯನಾಗಿ, ಅಗ್ನಿಗೆ ಅಧಿದೇವತೆಯಾಗಿಹನು. ಆ ರುದ್ರನಲ್ಲಿ ವಿಷ್ಣು ಉತ್ಪತ್ಯ

ನಾಗಿ ಅಪ್ಪುವಿಗೆ ಅಧಿದೇವತೆಯಾಗಿಹನು. ಆ ವಿಷ್ಣುವಿನಲ್ಲಿ ಬ್ರಹ್ಮನು ತ್ಪತ್ಯನಾಗಿ, ಪೃಥ್ವಿಗೆ ಅಧಿದೇವತೆಯಾಗಿಹನು. ಆ ಬ್ರಹ್ಮನಲ್ಲಿ ಸರ್ವ ಜೀವಂಗಳುತ್ಪತ್ಯವಾಯಿತ್ತು ನೋಡಾ, ಅಪ್ರಮಾಣ ಕೂಡಲಸಂಗಮ ದೇವಾ.

೩. ಇನ್ನು ಪಿಂಡದುತ್ಪತ್ತಿ ಅದೆಂತೆಂದಡೆ:– ಆ ಪೃಥ್ವಿಯಲ್ಲಿ ಅನ್ನ ಉತ್ಪತ್ಯವಾಯಿತ್ತು. ಆ ಅನ್ನದಲ್ಲಿ ರಸ ಉತ್ಪತ್ಯವಾಯಿತ್ತು. ಆ ರಸದಲ್ಲಿ ರುಧಿರ ಉತ್ಪತ್ಯವಾಯಿತ್ತು. ಆ ರುಧಿರದಲ್ಲಿ ಮಾಂಸ ಉತ್ಪತ್ಯವಾಯಿತ್ತು. ಆ ಮಾಂಸದಲ್ಲಿ ಮೇಧಸ್ಸು ಉತ್ಪತ್ಯವಾಯಿತ್ತು. ಆ ಮೇಧಸ್ಸಿನಲ್ಲಿ ಅಸ್ಥಿ ಉತ್ಪತ್ಯವಾಯಿತ್ತು. ಆ ಅಸ್ಥಿಯಲ್ಲಿ ಮಜ್ಜ ಉತ್ಪತ್ಯವಾಯಿತು. ಆ ಮಜ್ಜೆ ಯಲ್ಲಿ ಶುಕ್ಲ ಉತ್ಪತ್ಯವಾಯಿತ್ತು ನೋಡಾ. ಅಪ್ರಮಾಣ ಕೂಡಲಸಂಗಮ ದೇವ.

೪. ಇನ್ನು ಸ್ತ್ರೀಯರಿಂದ ಜನನವಾಗುವ ಶಿಶುಗಳ ಭೇದವಂ ಪೇಳ್ವೆ ನದೆಂತೆಂದಡೆ, ಸ್ತ್ರೀಗೆ ರಜಸ್ವಲೆಯಾದ ತೃತೀಯ ದಿನಕ್ಕೆ ಗರ್ಭವಾಗಿ, ಹುಟ್ಟಿದ ಮಗಸು ಕಳ್ಳನಹನು. ಚತುರ್ದಿನಕ್ಕೆ ಪಾಪಿಯಹನು, ಪಂಚಮ ದಿನಕ್ಕೆ ಬುದ್ಧಿವಂತನಹನು. ಷಷ್ಠಮದಿನಕ್ಕೆ ವ್ರತಗೇಡಿಯಹನು. ಸಪ್ತಮ ದಿನಕ್ಕೆ ದಯಾಪರನಹನು, ಅಷ್ಟಮ ದಿನಕ್ಕೆ ದರಿದ್ರನಹನು, ನವಮ ದಿನಕ್ಕೆ ಧನಿಕನಹನು, ದಶಮ ದಿನಕ್ಕೆ ಕಾಮಿಯಹನು, ಏಕಾದಶ ದಿನಕ್ಕೆ ವ್ಯಾಧಿ ಪೀಡಿತನಹನು, ದ್ವಾದಶ ದಿನಕ್ಕೆ ಪಂಡಿತನಹನು, ತ್ರಯೋದಶ ದಿನಕ್ಕೆ ಅವಿ ವೇಕಿಯಹನು, ಚತುರ್ದಶ ದಿನಕ್ಕೆ ಭೋಗಿಯಹನು, ಪಂಚ ದಶದಿನಕ್ಕೆ ರಾಜನಹನು, ಷೋಡಶ ದಿನಕ್ಕೆ ಶಿವಯೋಗಿಯಹನು ನೋಡಾ, ಅಪ್ರ ಮಾಣ ಕೂಡಲಸಂಗಮದೇವ.

೫. ಇನ್ನು ಸ್ತ್ರೀಪುರುಷರ ಕೂಟದ ಸ್ವರಭೇದವದೆಂತೆಂದಡೆ, ಸ್ತ್ರೀ ಪುರುಷರಿಬ್ಬರಿಗೆ ಅಪಾನವಾಯು ಇದಿರಾದರೆ ಮಕ್ಕಳಿಬ್ಬರು ಪುಟ್ಟುವರು. ಪುರುಷಂಗೆ ಶಶಿ, ಸ್ತ್ರೀಗೆ ರವಿಸ್ವರವಾದರೆ ಸ್ತ್ರೀ ಪುಟ್ಟುವಳು. ಸ್ತ್ರೀಪುರುಷ ರಿಬ್ಬರಿಗೆಯೂ ಸ್ವರಸಂಚಲವಿಲ್ಲದಿದ್ದರೆ ಗರ್ಭವುಂಟು. ಸ್ತ್ರೀಪುರುಷರಿಬ್ಬರಿ ಗೆಯೂ ಸ್ವರಸಂಚಲವಾದರೆ ಗರ್ಭವಿಲ್ಲ. ಪುರುಷರಿಗೆ ಅಗ್ನಿಸ್ವರ ವಿಶೇಷ ವಾದರೆ ಬಂಜೆಯಹಳು ನೋಡಾ, ಅಪ್ರಮಾಣ ಕೂಡಲಸಂಗಮದೇವ.

೬. ಇನ್ನು ಕಾಲ ಭೇದಂಗಳು ಅದೆಂತೆಂದಡೆ:- ಪ್ರಥಮಕಾಲದಲ್ಲಿ ಪುಟ್ಟಿದ ಮಗ ಕೋಪಿಯಹನು, ದ್ವಿತೀಯ ಕಾಲದಲ್ಲಿ ಪುಟ್ಟಿದ ಮಗ ಪಾಪಕರ್ಮ ಮಿಶ್ರವಾಗಿಹನು, ತೃತೀಯ ಕಾಲದಲ್ಲಿ ಪುಟ್ಟಿದ ಮಗನು ಪಾಪಿಯಹನು, ಅಸ್ತಮಯವಾದ ಆರು ಗಳಿಗೆಗೆ ಪುಟ್ಟಿದ ಮಗ ಜ್ಞಾನಿಯಹನು, ಮಧ್ಯರಾತ್ರಿಯಲ್ಲಿ ಪುಟ್ಟಿದ ಮಗ ಶಾಂತಿದಾಂತಿ ಸಮತೆಯುಳ್ಳ ಪುರುಷನಹನು, ಬೆಳಗಾಗುವ ಜಾವದಲ್ಲಿ ಪುಟ್ಟಿದ ಮಗ ಪರಮ ಶಿವಯೋಗಿಯಹನು ನೋಡಾ, ಅಪ್ರಮಾಣ ಕೂಡಲಸಂಗಮದೇವ.

೭. ಇನ್ನು ವರ್ಣಭೇದವದೆಂತೆಂದಡೆ:-ಸ್ತ್ರೀಪುರುಷರಿಬ್ಬರ ಸಂಯೋಗ ಕಾಲದಲ್ಲಿ ಪೃಥ್ವಿ ಸ್ವರವಾದರೆ ಹುಟ್ಟಿದ ಮಗ ಪೀತವರ್ಣನಹನು. ಅಪ್ಪು ಸ್ವರವಾದರೆ ಶ್ವೇತವರ್ಣನಹನು. ಅಗ್ನಿ ಸ್ವರವಾದರೆ ರಕ್ತವರ್ಣನಹನು. ವಾಯು ಸ್ವರವಾದರೆ ಕೃಷ್ಣವರ್ಣನಹನು. ಆಕಾಶ ಸ್ವರವಾದರೆ ಧೂಮ್ರ ವರ್ಣನಹನು ನೋಡಾ, ಅಪ್ರಮಾಣ ಕೂಡಲಸಂಗಮದೇವ.

೮. ಇನ್ನು ಆಯುಷ್ಯಂಗಳ ಭೇದವದೆಂತೆಂದಡೆ:- ಸ್ತ್ರೀಪುರುಷರಿಬ್ಬರಿಗೆ ಸ್ವರ ಐದು ಗಳಿಗೆ ನಡೆದರೆ ಆಯುಷ್ಯ ನೂರು ವರುಷ, ನಾಲ್ಕುಗಳಿಗೆ ನಡೆದರೆ ಆಯುಷ್ಯ ಎಂಭತ್ತು ವರುಷ, ಮೂರು ಗಳಿಗೆ ನಡೆದರೆ ಆಯುಷ್ಯ ಅರುವತ್ತು ವರುಷ, ಎರಡು ಗಳಿಗೆ ನಡೆದರೆ ಆಯುಷ್ಯ ನಾಲ್ವತ್ತು ವರುಷ, ಒಂದು ಗಳಿಗೆ ನಡೆದರೆ ಆಯುಷ್ಯ ಇಪ್ಪತ್ತು ವರುಷ, ಅರಗಳಿಗೆ ನಡೆದರೆ ಆಯುಷ್ಯ ಹತ್ತು ವರುಷ, ಕಾಲುಗಳಿಗೆ ನಡೆದರೆ ಆಯುಷ್ಯ ಐದು ವರುಷ, ಇಂತೀ ಕ್ರಮದಿಂದ ನೋಡಿಕೊಂಬುದು ಅಪ್ರಮಾಣ ಕೂಡಲಸಂಗಮದೇವ.

೯. ಇನ್ನು ಆ ಶುಕ್ಲ ಸ್ತ್ರೀಪುರುಷರ ಸಂಯೋಗದಿಂದ ಮಾರುತ ನೂಂಕಲು ಹುಲ್ಲ ಮೇಲಣ ಹನಿಯ ಅರ್ಧ ಮಾತ್ರ ಆ ಸ್ತ್ರೀಯ ಶೋಣಿತದಲ್ಲಿ ಬಿದ್ದು ಆ ಶುಕ್ಲಶೋಣಿತ ಬಲಿದು, ಜೀವನಾಗಿ ಭೂತಂಗಳ ಕೂಡಿಕೊಂಡು ಕರ್ಮವಶದಿಂದ ಪಿಂಡನಹುದು. ಇದಕ್ಕೆ ಶ್ರುತಿ:— "ಆಯುಃ ಕರ್ಮಂಚ ವಿತ್ತಂಚ । ವಿದ್ಯಾನಿಧನ ಮೇವಚ । ಪಂಚೈತಾನಿ ವಿಲಿಖ್ಯಂತೆ ಗರ್ಭಸ್ಥಸ್ಯೈವದೇಹಿನಃ" ಇಂತೆಂದುದಾಗಿ, ಈ ಪಂಚಾಕ್ಷರವ ನಿಟಲತಟದಲ್ಲಿ ಬರೆವನು. ಆ ಶುಕ್ಲಶೋಣಿತಂಗಳು ಕೂಡಿ ಬೀಜವಹುದು, ಪುರುಷವೀರ್ಯ ಘನವಾದರೆ ಗಂಡು ಮಗ ಹುಟ್ಟುವನು. ಸ್ತ್ರೀವೀರ್ಯ ಘನವಾದರೆ ಹೆಣ್ಣ

ಮಗಳು ಹುಟ್ಟುವಳು. ಸಮವಾದರೆ ನಪುಂಸಕ ಹುಟ್ಟುವದು. ಮಾತಾಪಿತರ ಮಲತ್ರಯದಲ್ಲಿ ಪಿಂಡರೂಪವಹುದು ನೋಡಾ, ಅಪ್ರಮಾಣ ಕೂಡಲ ಸಂಗಮದೇವ.

೧೦. ಸ್ತ್ರೀಗೆ ಗರ್ಭವಾದ ಮೂರು ದಿನಕ್ಕೆ ಹಾಲಿಗೆ ಹೆಪ್ಪುಕೊಟ್ಟ ಹಾಗೆ ಕದಡಿಕೊಂಡಿಹುದು. ಐದುದಿನಕ್ಕೆ ಸುರಹೊನ್ನೆಯ ಮೊಗ್ಗೆಯ ಪ್ರಮಾಣ ಕೆಂಪಾಗಿಹುದು ನೋಡಾ, ಅಪ್ರಮಾಣ ಕೂಡಲಸಂಗಮದೇವ.

೧೧. ಹದಿನೈದುದಿನಕ್ಕೆ ಬುದ್ಬುದಾಕಾರವಾಗಿಹುದು. ಏಕಮಾಸಕ್ಕೆ ಕುಕ್ಕುಟಾಂಡ ಸ್ವರೂಪವಾಗಿ ಶಿರ ಉತ್ಪತ್ತ್ಯವಹುದು. ದ್ವಿತೀಯ ಮಾಸಕ್ಕೆ ಬಾಹುಗಳು ಹುಟ್ಟುವವು. ತೃತೀಯ ಮಾಸಕ್ಕೆ ಉದರ ಪುಟ್ಟುವದು. ಚತುರ್ಥ ಮಾಸಕ್ಕೆ ಸರ್ವಾಂಗ ಪುಟ್ಟುವದು ನೋಡಾ, ಅಪ್ರಮಾಣ ಕೂಡಲ ಸಂಗಮದೇವ.

೧೨. ಪಂಚಮಾಸಕ್ಕೆ ರೋಮಂಗಳು ಪುಟ್ಟುವವು ಷಣ್ಮಾಸಕೆಕ ಅಸ್ಥಿ ಪುಟ್ಟುವದು. ಸಪ್ತಮಾಸಕ್ಕೆ ಜೀವಕಳೆ ಸಂಪೂರ್ಣವಹುದು. ಅಷ್ಟಮಾಸಕ್ಕೆ ಪೂರ್ವಜನ್ಮವನರಿವನು. ॥ ಶ್ರುತಿ ॥ ಮೃತಸ್ಯ ಹಂ! ಪುನರ್ಜಾತೋ ಜಾತಸ್ಯ ಪಂ ಪುನಾಮೃತಃ । ನಾನಾಯೋನಿ ಸಹಸ್ರಾಣಿ ಕೃತ್ವಾಚೈವಮತ್ರ ಮಾಯಯೊ । ಎಂದುದಾಗಿ ಅಪ್ರಮಾಣ ಕೂಡಲಸಂಗಮದೇವ.

೧೩. ಈಶ್ವರನು ಮಾಯಾವಶವ ತೋರಿ, ಬೋಧಿಸಲೊಡನೆ ನವಮಾಸತುಂಬಿ ಎಪ್ಪತ್ತೆರಡು ಸಾವಿರದರುನೂರು ಶ್ವಾಸಂಗಳು ಮೂರು ಮಂಡಲಗಳು ಆರು ದ್ವಾರಗಳು ಮೂವತ್ತೆರಡು ಲಕ್ಷಣಂಗಳು ಐವತ್ತೆರಡಕ್ಷರಂಗಳು ಅರುವತ್ತುನಾಲ್ಕು ಕಲೆ ಜ್ಞಾನಂಗಳು ತೊಂಭತ್ತಾರು ತತ್ವಂಗಳು ಕೂಡಿ ದೇಹವಾಗಿ ಪ್ರಸೂತಿಕಾಲ ವಾಯುವಶದಿಂದ ಜನ್ಮಯು ಜಠರಮಂ ಪೊರಮಡವನು. ಪೊರಮಡುವದರೊಳಗಾಗಿ ಆದಿಮಾಯೆಯೆಂಬ ಗಾಳಿ ಬೀಸಿ ಒಡಲು ಮಲಿನವಾಗಿ ನೆನೆದುದೆಲ್ಲವ ಮರೆದುದು. ಮುನ್ನಮಾಡಿದ ಕರ್ಮಫಲದಿಂದ ಇಂತಾಯಿತ್ತು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೧೪. ಸುಕರ್ಮದಿಂದ ದೇವತಾಯೋನಿಯಲ್ಲಿ ಜನಿಸುವನು. ದುಷ್ಕರ್ಮದಿಂದ ಎಂಬತ್ತು ನಾಲ್ಕುಲಕ್ಷ ಜೀವರಾಶಿಗಳ ಕ್ರೂರಯೋನಿಗಳಲ್ಲಿ ಜನಿಸು

ವನು. ಇಂತೀ ಸುಕರ್ಮ ದುಷ್ಕರ್ಮ ಎರಡರ ಮಿಶ್ರದಿಂದ ಮನುಜಯೋನಿಯಲ್ಲಿ ಜನಿಸುವನು. ಇಂತಪ್ಪ ಸುಕರ್ಮ ದುಷ್ಕರ್ಮ ಫಲಂಗಳನು ಪೂರ್ವಕರ್ಮವಶದಿಂದುಂಬನು ನೋಡಾ, ಅಪ್ರಮಾಣ ಕೂಡಲಸಂಗಮ ದೇವಾ.

೧೫. ಸ್ಥೂಲಕಾಯ ಶರೀರ ಶುಕ್ಲ ಶೋಣಿತದಿಂದ ಎರಡು ಕೈ, ಎರಡು ಕಾಲು, ಬ್ರಹ್ಮಗ್ರಂಥಿಯೇಳು, ವಿಷ್ಣುಗ್ರಂಥಿಯೇಳು, ರುದ್ರಗ್ರಂಥಿಯೇಳು, ಈ ಮೂರೇಳಿಪ್ಪತ್ತೊಂದು ಗ್ರಂಥಿಯುಳ್ಳ ಕಂಕಾಳದಂಡವು ಆ ಕಂಕಾಳ ದಂಡದ ದ್ವಾರದಲ್ಲಿ ಷೋಡಶಕಲೆಯುಳ್ಳ ವೀಣಾದಂಡವು, ಮೂರು ಗೇಣು ಎಲವು, ಮೂರು ಗೇಣು ಮಾಂಸವು, ಮೂವತ್ತೆರಡು ಪಕ್ಕದೆಲುವು, ನಾಲ್ಕು ಗೇಣು ಗಾತ್ರವು, ಎಂಟುಗೇಣುದ್ದವು, ಹದಿನಾಲ್ಕು ಬಾಗಿಲುಳ್ಳದಾಗಿ ರಸ, ರುಧಿರ, ಮಾಂಸ, ಮೇಧಸ್ಸು, ಅಸ್ಥಿ, ಮಜ್ಜಾ, ಶುಕ್ಲ ಎಂಬ ಸಪ್ತಧಾತುಗಳಿಂದ ದೇಹವಾಗಿ ಬೆಳಯಿತ್ತು ನೋಡಾ, ಅಪ್ರಮಾಣ ಕೂಡಲಸಂಗಮ ದೇವಾ.

೧೬. ದೇಹವಾಗಿ ಬೆಳೆದು, ಅಧ್ಯಾತ್ಮಿಕ, ಆಧಿದೈವಿಕ, ಆಧಿಭೌತಿಕ ಎಂಬ ತಾಪತ್ರಯಂಗಳಿಂದ ನೊಂದು ಬೆಂದು ಪುಣ್ಯಪಾಪವಶದಿಂದ ಜೀವನಾಗಿ, ಅಂಡಜ ಸ್ವೇದಜ ಉದ್ಭಿಜ ಜರಾಯುಜ ಎಂಬ ಚೌರ್ಯಾಂಶಿ ಲಕ್ಷ ಜೀವಜಂತುಗಳ ಯೋನಿಯಲ್ಲಿ ಬಂದು ಹುಟ್ಟದ ಯೋನಿ ಇಲ್ಲ ಮೆಟ್ಟದ ಭೂಮಿ ಇಲ್ಲ. ಉಣ್ಣದ ಆಹಾರವಿಲ್ಲ, ಕಾಣದ ಸುಖದುಃಖವಿಲ್ಲ. ||ಶ್ರುತಿ|| ನಾನಾಯೋನಿ ಸಹಸ್ರಾಣಿ! ಗತ್ವಾ ಚೈವಂ ತು ಮಾಯಯೊ ಆಹಾರಂ ವಿವಿಧಂಭುಕ್ತ್ವಾ । ಪೀತ್ವಾಚ ವಿವಿಧ ಸ್ತನಾನ್ || ಎಂದುದಾಗಿ ಅಪ್ರಮಾಣ ಕೂಡಲಸಂಗಮದೇವ.

೧೭. ಇಂತಪ್ಪ ನಾನಾ ಯೋನಿ ಸುಖದುಃಖಗಳನುಂಡು; ಅಂತ್ಯಕ್ಕೆ ನರನಾಗಿ ಬಂದು, ಪೂರ್ವ ಜನ್ಮ ಸುಕೃತಫಲದಿಂದ ಮಹಾಪುರುಷರಂ ಸಾರ್ದು, ನರಗೋಚರವಂ ಮಾಡೆ, ಸ್ವರ್ಗಾದಿ ಭೋಗಂಗಳನು ಮೇಲಣ ಮುಕ್ತಿಯ ಪದವನು, ಪಡೆವ ತೆರನಾವುದೆಂದು ವಿಚಾರಿಸಿ, ಸಕಲ ವೇದಾಗಮ ಶಾಸ್ತ್ರ ಪುರಾಣಂಗಳ ಹೇಳಿದವರಿಂದಲೂ ಹೇಳಿದುದ ಕೇಳಿದವರಿಂದಲೂ ಕೇಳಿ ಅರಿದು, ಮತ್ತಂ ತೊಂಬತ್ತಾರು ತತ್ವಂಗಳನು ಕೇಳಿ ಆ ತೊಂಬತ್ತಾರು ತತ್ವಂಗಳಲ್ಲಿ ಮೂವತ್ತಾರು ತತ್ವದ ಭೇದವನು ತಿಳಿದು, ಎಪ್ಪತ್ತೆರಡುಸಾವಿರ

ನಾಡಿಯೊಳು, ಮೂವತ್ತೆರಡು ಸಾವಿರ ನಾಡಿಯ ಭೇದವನು, ಮೂವತ್ತೆರಡು ಸಾವಿರ ನಾಡಿಯೊಳು ಚತುರ್ದಶ ನಾಡಿಯ ಭೇದವನು, ಚತುರ್ದಶ ನಾಡಿಯೊಳು ತ್ರಿನಾಡಿಯ ಭೇದವನು, ಚತುರ್ದಶ ವಾಯುವನು ಚತುರ್ದಶ ವಾಯುವಿನೊಳು, ಪಂಚವಾಯುವಿನ ಭೇದವನ, ಪಂಚ ವಾಯುವಿನೊಳು, ದ್ವಿವಾಯುವಿನ ಭೇದವನು, ಷಡುಚಕ್ರವನು, ಅಂತಃಕರಣ ಚತುಷ್ಟಯವನು, ಮಂಡಲತ್ರಯದ ಭೇದವನು ಕೇಳಿ ಅರಿದ ನೋಡಾ, ಅಪ್ರಮಾಣ ಕೂಡಲ ಸಂಗಮದೇವಾ.

೧೮. ಇನ್ನು ನಾಡಿ ಧಾರಣೆ ಅದೆಂತೆಂದಡೆ:- ಎಪ್ಪತ್ತೆರಡು ಸಾವಿರ ನಾಡಿಗಳೊಳು, ಮೂವತ್ತೆರಡು ನಾಡಿಯೆ ಮುಖ್ಯವಾಗಿಹವು. ಆ ಮೂವತ್ತೆರಡು ನಾಡಿಯೊಳು, ಚತುರ್ದಶ ನಾಡಿಯೆ ಪ್ರಧಾನ ನಾಡಿಗಳಹವು. ಆ ಚತುರ್ದಶ ನಾಡಿಗಳೊಳು, ಮೂರು ನಾಡಿಯೆ ಮುಖ್ಯ. ಆ ಮೂರು ನಾಡಿಗಳೊಳು ಒಂದು ನಾಡಿಯೆ ಮುಖ್ಯ ಆ ಒಂದು ನಾಡಿಯನು ಯೋಗಿಗಳು ಬ್ರಹ್ಮನಾಡಿಯೆಂದು ಹೇಳುವರು ನೊಡಾ, ಅಪ್ರಮಾಣ ಕೂಡಲಸಂಗಮದೇವಾ.

೧೯. ಆ ಒಂದು ನಾಡಿಯೇ ಮೂಲಾಧಾರ ಮೊದಲಾಗಿ, ಬ್ರಹ್ಮರಂಧ್ರ ಕಡೆಯಾಗಿ ನೆಲವಿನ ಹಾಂಗೆ ಕೆಳಗು ಮೇಲು ಬಂಧಿಸಿಕೊಂಡಿಹುದು ನೋಡಾ, ಅಪ್ರಮಾಣ ಕೂಡಲಸಂಗಮದೇವಾ.

೨೦. ಕಾಲು, ಕೈ, ನಡವುಗಳೆಲ್ಲವನು ತಾವರೆ ನೂಲಿನಹಾಂಗೆ ಎಂಭತ್ತುನಾಲ್ಕು ಸಾವಿರ ಸಂಧಿಗಳ ಬಂಧಿಸಿಕೊಂಡಿಹುದು ನೋಡಾ, ಅಪ್ರಮಾಣ ಕೂಡಲಸಂಗಮದೇವಾ.

೨೧. ಸೂರ್ಯನ ಕಿರಣಂಗಳ ಹೇಗೆ ಸರ್ವಾಂಗವೆಲ್ಲವನು ಭೇದಿಸಿಕೊಂಡಿಹವು, ಹಾಗೆ ಆಧಾರ ಚಕ್ರಂಗಳಾರನು ಹಾಯ್ದು, ಬ್ರಹ್ಮರಂಧ್ರವ ಮುಟ್ಟಿ, ನಾದ ಬಿಂದುಗಳಿಗೆ ಆಶ್ರಯವಾಗಿಹುದು ನೋಡಾ, ಅಪ್ರಮಾಣ ಕೂಡಲಸಂಗಮದೇವಾ.

೨೨. ಅಗ್ನಿಮಂಡಲ, ಆದಿತ್ಯ ಮಂಡಲ, ಚಂದ್ರಮಂಡಲ ಎಂಬ ಮಂಡಲತ್ರಯಂಗಳ ಹಾಯ್ದು, ಬ್ರಹ್ಮಚಕ್ರ, ಶಿಖಾಚಕ್ರವ ಹಾಯ್ದು, ಆ ಪಶ್ಚಿಮ ಚಕ್ರವ ಮುಟ್ಟಿ, ಏಕನಾಡಿಯಾಗಿಹುದು ನೋಡಾ, ಅಪ್ರಮಾಣ ಕೂಡಲಸಂಗಮದೇವಾ.

೨೩. ನಾಡಿಗಳಲ್ಲಿ ಪೋಗಿ ಪೊಕ್ಕು, ಬೆರಸಿ, ಮಹಾ ಜ್ಯೋತಿ ಪ್ರಕಾಶವ ಕಾಂಬುದೇ ಅರಿವು ಕಾಣಾ ಅಪ್ರಮಾಣ ಕೂಡಲಸಂಗಮದೇವಾ.

೨೪. ತಿಲದೊಳಗಣ ತೈಲದಂತೆ, ಕ್ಷೀರದೊಳಗಣ ಘೃತದಂತೆ, ಪುಷ್ಪದೊಳಗಣ ಪರಿಮಳದಂತೆ, ಎಪ್ಪತ್ತೆರಡು ಸಾವಿರ ನಾಡಿಗಳೆಲ್ಲವ ಶಿವನಂ ಬೆರಸಿ, ಭೇದವಿಲ್ಲದೆ ಅಡಗಿ ನಿಂದ ನಿಲವು ನೋಡಾ, ಅಪ್ರಮಾಣ ಕೂಡಲ ಸಂಗಮದೇವಾ.

೨೫. ಇನ್ನು ವಾಯುಧಾರಣೆ ಅದೆಂತೆಂದಡೆ:- ಚತುರ್ದಶ ವಾಯುಗಳೊಳಗೆ ಪಂಚವಾಯುವೇ ಮುಖ್ಯವಾಗಿಹುದು. ಆ ಪಂಚವಾಯುಗಳೊಳಗೆ ದ್ವಿವಾಯುವೇ ಮುಖ್ಯವಾಗಿಹುದು, ಆ ದ್ವಿವಾಯುವಿನೊಳಗೆ ಏಕವಾಯುವೇ ಮುಖ್ಯವಾಗಿಹುದು. ಆ ಏಕವಾಯುವೇ ಚತುರ್ದಶವಾಯುವಾಗಿ ಚರಿಸುತ್ತಿಹುದು ನೋಡಾ, ಅಪ್ರಮಾಣ ಕೂಡಲಸಂಗಮದೇವಾ.

೨೬. ಎಂಬತ್ತೆಂಟು ಕೋಟಿ ರೋಮದ್ವಾರಂಗಳಲ್ಲಿ ಚರಿಸುವ ವಾಯು ನೆಲೆಯೆಂದು ಒಳಗೆ ತುಂಬುವದು ನೋಡಾ, ಅಪ್ರಮಾಣ ಕೂಡಲಸಂಗಮದೇವಾ.

೨೭. ಆ ನಾಡಿಗಳಲ್ಲಿ ಬೆರಸುವ ಭೇದವನರಿದು ಸುಷುಮ್ನನಾಳವ ಪೊಕ್ಕು ಮಹಾಜ್ಯೋತಿರ್ಮಯ ಲಿಂಗವ ಕಂಡು ಬೆರಸಿ ಭೇದವಿಲ್ಲದೆ ನಿಂದ ಶರಣನು ಮಹಾಜ್ಞಾನಿ ನೋಡಾ, ಅಪ್ರಮಾಣ ಕೂಡಲಸಂಗಮದೇವಾ.

೨೮. ಪಿಂಗಳವ ಮುಚ್ಚಿ ಈಡೆಯಲ್ಲಿ ತೆರೆದು ಪಿಂಗಳೆಯಲ್ಲಿ ಮೆಲ್ಲ ಮೆಲ್ಲನೆ ಬಿಡುವುದು. ಈಡೆಯ ಮುಚ್ಚಿ ಪಿಂಗಳೆಯಲ್ಲಿ ತೆರೆದು ಈಡೆಯಲ್ಲಿ ಮೆಲ್ಲಮೆಲ್ಲನೆ ಬಿಡುವುದು. ಹೀಂಗೆ ತೆರೆದು ಬಿಡಿಸಿದರೆ ಉಕ್ಕುವದು ಕಾಣಾ ಪೂರಕದೊಳು ಅಪ್ರಮಾಣ ಕೂಡಲಸಂಗಮದೇವಾ.

೨೯. ರೇಚಿಸುವ ಹಾಗೆ ಪೂರಿಸಿ ಕೊಂಡಿದ್ದರೆ ತ್ರಾಸಿನ ನಾಳಿಗೆಯ ಹಾಗೆ ಸಮವಹುದು. ಕುಂಭಕದೊಳಂ ನೆರೆ ನೋಟವ ನೋಡಿದರೆ ತುಂಬಿಹುದು ಕಾಣಾ ಅಪ್ರಮಾಣ ಕೂಡಲಸಂಗಮದೇವಾ.

೩೦. ರೇಚಕ ಪೂರಕ ಕುಂಭಕದ ಕಾಲಕೊಯ್ದರೆ ತ್ರಾಸಿನ ಹಾಗೆ ತತ್ವವಹುದು ಕಾಣಾ ಅಪ್ರಮಾಣ ಕೂಡಲಸಂಗಮದೇವಾ.

೩೧. ವಾಯುವಿನ ಕಾಲವನರಿದಡಗಿ ಬೆರಸಿ ನಿಂದರೆ ಆಯುಷ್ಯ ಅನೇಕ ಕಾಲ ಇಹುದು ಕಾಣಾ ಅಪ್ರಮಾಣ ಕೂಡಲಸಂಗಮದೇವಾ.

೩೨. ಸಕಲ ವೇದಾಗಮ ಶಾಸ್ತ್ರ ಪುರಾಣಗಳೆಲ್ಲ ಸಂಕಲ್ಪವಿಕಲ್ಪ ಭ್ರಾಂತಿಭ್ರಮೆಯ ಕೆಡಿಸಲರಿಯುವಾಗಿ ಅರಿದು ಅದರಿಂದ ಪ್ರಾಣವಾಗಿಹನು ಕಾಣಾ ಅಪ್ರಮಾಣ ಕೂಡಲಸಂಗಮದೇವಾ.

೩೩. ಹೋಗುವ ವಾಯುವ ಹೊದ್ದಿದರೆ ಶಿವನಹುದು ನೋಡಾ! ಇಳಿವ ವಾಯುವಿಂಗೆ ಈಡೆ ಪಿಂಗಳೆಗಳಲ್ಲಿ ಸೂಸುವ ಪವನವ ಸೂಸಲೀಯ್ಯದೆ ನಿಲಿಸಿದರೆ ಕೂಡುವನು ಕಾಣಾ ಶಿವನ ಅಪ್ರಮಾಣ ಕೂಡಲಸಂಗಮ ದೇವಾ.

೩೪. ಮುನ್ನ ಅನಂತಕೋಟಿಕಾಲ ತಪನಮಾಡಿದಾತಂಗಲ್ಲದೆ ಯೋಗ ಅಳವಲ್ಲ. ಮುನ್ನ ಅನಂತಕೋಟಿಕಾಲ ವ್ರತತಪವ ಮಾಡಿ, ಈಗ ಅರಿದು ಅನುಭವಿಸುವದೆ ಅರಿವು ನೋಡಾ, ಅಪ್ರಮಾಣ ಕೂಡಲಸಂಗಮದೇವಾ.

೩೫. ಇನ್ನು ಅಗ್ನಿಧಾರಣೆ ಅದೆಂತೆಂದಡೆ, ಮೂಲಜ್ಯೋತಿಯನೆಬ್ಬಿಸಿ ಸುಷುಮ್ನನಾಳದ ಬಟ್ಟೆಯ ತುದಿಯ ನಡರಿ, ಸಹಸ್ರದಳಮಂಟಪವಹಾಯ್ದು ಆ ಜ್ಯೋತಿಯೊಳು ಪರಿಣಾಮಿಸುತ್ತಿರ್ದ ನೋಡಾ, ಅಪ್ರಮಾಣ ಕೂದಲ ಸಂಗಮದೇವಾ.

೩೬. ಕಾಲಾಗ್ನಿಯನೆಬ್ಬಿಸಿ, ಕಮಲನಾಳದ ತುದಿಯನಡರಿ, ಕರ್ಮವ ನುಂಡು ಮಹಾಜ್ಯೋತಿಪ್ರಭೆಯಲ್ಲಿ ಬಯಲಾದೆ ಕಾಣಾ ಅಪ್ರಮಾಣ ಕೂಡಲ ಸಂಗಮದೇವಾ.

೩೭. ಮಹಾವಾಯುವಂ ಪಿಡಿದು ಮೂಲ ಗುಂಡಿಗೆಯೊಳಗಣ ಮೂಲ ಜ್ವಾಲೆಯನೆಬ್ಬಿಸಿ, ಮೇಲಣ ಬಯಲಬಾಗಿಲವ ತೆರೆದು ಹೊಕ್ಕು ಮಹಾಜ್ಯೋತಿ ರ್ಮಯ ಲಿಂಗದಲ್ಲಿ ಬಯಲಾದೆ ಕಾಣಾ ಅಪ್ರಮಾಣ ಕೂಡಲಸಂಗಮ ದೇವಾ.

೩೮. ಅರುವಿನೊಳಗೆ ಅರಿವ ತುಂಬಿದರೆ ಮನೆಯ ಹೋಹುದಕ್ಕೆ ಮಹಾ ಸುಲಭ ನೋಡಾ! ಪರದಲ್ಲಿ ಮನವ ಸಿಲುಕಿಸಿ ನಾಶಿಕಾಗ್ರದ ಮೇಲೆ ನಯನಾಂಬುಧಿಯ ತುಂಬಿ ಮೂಲಜ್ವಾಲೆಯ ಸುಷುಮ್ನನಾಳದ ಬಟ್ಟೆಯ ತುದಿಯನಡರಿಸಿ ಬ್ರಹ್ಮರಂಧ್ರವ ಮಟ್ಟಿಸಿ, ಮೂಲಾಧಾರ ಮಂಡಲದ ಶ್ವಾಸವ ಹಿಡಿದು ಹೊರಡಲೀಯ್ಯದೆ ಸಾಧಿಸುವ ಯೋಗಿಗಳಿಗೆ ಮೇಲೆ ಕೊಡ ನುಕ್ಕಿತು ನೋಡಾ ಅಪ್ರಮಾಣ ಕೂಡಲಸಂಗಮದೇವಾ.



ಸಂಪುಟ ೨೮ ] [ ಸಂಚಿಕೆ ೫

# ಶಿವಾನುಭವ



ಸಂಪಾದಕರು
ಫ. ಗು. ಹಳಕಟ್ಟಿ,
ಬಿ. ಎ. ಎಲ್. ಎಲ್. ಬಿ.

ವಾ. ಚ. ೫-೧೨-೦ ) ವಿಜಾಪೂರ ( ಸೋ ೧೯೫೪

# ವಿಷಯಾನುಕ್ರಮಣಿಕೆ

# ಶಿವಾನುಭವ

| ವರ್ಷ ೨೮ | ನೋ ೧೯೫೪ | ಸಂಚಿಕೆ ೫ |
| --- | --- | --- |

## ಶಿವಾನುಭವ ಮಂಟಪ.

( ಲೇ:— ಪ್ರೋ ಡಿ. ಕೆ. ಭೀಮಸೇನರಾವ್ ಎಂ ಎ. )

---

ಮಹಾನುಭಾವರಾದ ಬಸವಣ್ಣನವರು ಮಾಡಿದ ಮಹಾ ಕಾರ್ಯಗಳಲ್ಲಿ ಅನುಭವ ಮಂಟಪದ ಸ್ಥಾಪನೆ ಮುಖ್ಯವಾಗಿದೆ. ಬಸವಣ್ಣನವರು ವೀರಶೈವ ಮತೋದ್ಧಾರಣಕ್ಕಾಗಿ ತಮ್ಮ ತನು, ಮನ, ಧನಗಳನ್ನು ಸಮರ್ಪಿಸಿ, ಪರಮ ತ್ಯಾಗಿಗಳೆಂದು ಖ್ಯಾತಿಯನ್ನು ಪಡೆದರು. ಇವರು ಬಾಲ್ಯದಲ್ಲಿಯೇ ಬ್ರಾಹ್ಮಣರಲ್ಲಿ ರೂಢ ಮೂಲವಾಗಿದ್ದ ಅಂಧಾನುಕರಣದ ಸಂಪ್ರದಾಯ, ಬಾಹ್ಯಾಡಂಬರ, ಅರಿವು ಇಲ್ಲದ ಆಚರಣೆ ಮುಂತಾದವುಗಳ ವಿರುದ್ಧವಾಗಿ ಕಟುವಾಗಿ ಖಂಡಿಸಿ, ಬ್ರಾಹ್ಮಣವನ್ನು ತ್ಯಜಿಸಿ; ಮತಕ್ಷೇತ್ರದಲ್ಲಿ ಕ್ರಾಂತಿಕಾರರಾದರು. ತಮ್ಮ ಜನ್ಮಸ್ಥಳವನ್ನು ತ್ಯಜಿಸಿ, ಕೂಡಲಸಂಗಮೇಶ್ವರನ ಸಾನ್ನಿಧ್ಯವನ್ನು ಸಾರಿ ಅಲ್ಲಿ ಆತನ ಅನುಗ್ರಹ ಪಡೆದು, ಭಗವದಾದೇಶದಂತೆ ಕಲ್ಯಾಣಕ್ಕೆ ಹೋದರು. ಅಲ್ಲಿ ಬಿಜ್ಜಳನ ಮೇಲೆ ತಮ್ಮ ಪ್ರಭಾವವನ್ನು ಬೀರಿ ಆಸ್ಥಾನದಲ್ಲಿ ಉನ್ನತವಾದ ಅಧಿಕಾರಸ್ಥಾನವನ್ನು ಪಡೆದರು. ಕರ್ನಾಟಕ ಸಾಮ್ರಾಜ್ಯದ ಕೋಶಕ್ಕೆಲ್ಲ ಮುಖ್ಯಾಧಿಕಾರಿಗಳಾದರು. ಮಹಾರಾಜ್ಯದ ಭಂಡಾರಕ್ಕೆ ಅಧಿಪತಿಗಳಾಗಲೂ ಅರ್ಹತೆಯನ್ನು ಪಡೆದುದು ಕೇವಲ ಲೌಕಿಕ ದೃಷ್ಟಿಯಿಂದ ಇವರಿಗಿದ್ದ ವ್ಯಾವಹಾರಿಕ ಜ್ಞಾನದ ಅನುಭವದಿಂದ. ಇದರಿಂದ ಬಸವಣ್ಣನವರು ಒಂದು ವಿಸ್ತಾರವಾದ ಸಾಮ್ರಾಜ್ಯದ ಹಣಕಾಸಿನ ವ್ಯವಸ್ಥೆಯನ್ನು ನಡೆಸುವಲ್ಲಿ ಎಷ್ಟು ಸಮರ್ಥರಾಗಿದ್ದರೆಂದು ವ್ಯಕ್ತವಾಗುತ್ತದೆ. ಲೌಕಿಕದಲ್ಲಿ ಇವರು ರಾಜ್ಯದ ಆಡಳಿತವನ್ನು ಸುವ್ಯವಸ್ಥಿತವಾಗಿ ಸಾಗಿಸಿ

ಕೊಂಡು ಹೋಗುವ ಸಾಮರ್ಥ್ಯವನ್ನು ಪಡೆದಂತೆ ಪಾರಮಾರ್ಥಿಕದಲ್ಲಿಯೆ ಧರ್ಮಕ್ಷೇತ್ರವು ವ್ಯವಸ್ಥೆಗೊಂಡು ಸ್ಥಿರವಾಗಿ, ಶಾಶ್ವತವಾಗಿ, ಸಮೃದ್ಧವಾಗಿ ವಿಪುಲವಾಗಿ ಧರ್ಮದ ಬೆಳೆ ಬೆಳೆದು ಮುಮುಕ್ಷುಗಳೆಲ್ಲರೂ ಆಹಾರವನ್ನು ಪಡೆದು ಆತ್ಮ ಸಂತೃಪ್ತಿಯನ್ನು ಪಡೆಯಲು ಕೃಷಿಮಾಡಿದ ಮಹಾ ಕೃಷಿಕಾರರು. ಈ ಕೃಷಿಯ ಫಲವೇ ಇವರು ಸ್ಥಾಪಿಸಿದ ಅನುಭವ ಮಂಟಪ.

ಬಸವಣ್ಣನವರು ಮಾಡಿದ ಪ್ರಯತ್ನಗಳೆಲ್ಲವೂ ನವೀನವಾದವುಗಳು. ಅವರು ಆಧ್ಯಾತ್ಮದಲ್ಲಿಯೂ, ಪ್ರಾಪಂಚಿಕದಲ್ಲಿಯೂ ನವೀನ ಪ್ರಯೋಗಗಳನ್ನು ಕೈಕೊಂಡರು. ಮನುಷ್ಯನ ಐಹಿಕ ಜೀವನದಲ್ಲಿ ಬಸವಣ್ಣನವರು ದೊಡ್ಡ ಮಾರ್ಪಾಡುಗಳನ್ನು ಮಾಡಿದರು. ಹಾಗೆಯೇ ಆತ್ಮಿಕದಲ್ಲಿಯೂ ಅವರು ಶಿವಮಾರ್ಗವನ್ನು ಪಕ್ರಮಿಸಿದರು. ಬಸವಣ್ಣನವರು ಕಲ್ಯಾಣಕ್ಕೆ ಬರುವುದಕ್ಕೆ ಮುಂಚೆ ಕನ್ನಡದ ಜನಜೀವನದ ಕೊರತೆಗಳನ್ನು ಚೆನ್ನಾಗಿ ಕಂಡುಕೊಂಡಿದ್ದರು. ಆ ಕೊರತೆಗಳೇನು? ಕನ್ನಡದ ಜನತೆ ಪ್ರಾಚೀನ ಋಷಿ ಪ್ರೋಕ್ತವಾದ ಶುದ್ಧ ಮನಸ್ಸಿನ ಆಚರಣೆಯನ್ನು ಬಿಟ್ಟು ಬರಿಯ ಲೌಕಿಕದ ನಡತೆಯಲ್ಲಿಯೇ ತೃಪ್ತವಾಗಿತ್ತು. ಸಮಾಜದಲ್ಲಿ ಎಷ್ಟೋ ಕಟ್ಟಲೆಗಳು ನಿಯಮಗಳು ಏರ್ಪಟ್ಟು ಸಮಾಜವು ಪ್ರಗತಿಪಥ ಕಾಣದೆ, ಕಂಗೆಟ್ಟು ಎತ್ತ ಎತ್ತಲೋ ಅಲೆದಾಡುತ್ತಿತ್ತು. ಧರ್ಮ, ನೀತಿ, ಆಚರಣೆಗಳಲ್ಲಿ ಔನ್ನತ್ಯವು ಮಾಯವಾಗಿ, ಶೈಥಿಲ್ಯವು ತಲೆದೋರಿತ್ತು. ವರ್ಣವರ್ಣಗಳಲ್ಲಿ ಉಚ್ಚ ನೀಚ ಭಾವವು ಅತಿರೇಕಕ್ಕೆ ಹೋಗಿ, ಮತದ್ವೇಷವೂ ವ್ಯಕ್ತಿದ್ವೇಷವೂ ಹೆಚ್ಚಾಗಿತ್ತು. ಸ್ತ್ರೀ ಪುರುಷರ ವಿಚಾರವಾಗಿ ಪಾರಮಾರ್ಥಿಕದಲ್ಲಿಯೂ ವ್ಯವಹಾರದಲ್ಲಿಯೂ ತಾರತಮ್ಯವು ಅತ್ಯಧಿಕವಾಗಿತ್ತು. ಇವೆಲ್ಲವೂ ಹೋಗಬೇಕು. ನವೀನ ಸಮಾಜವು ವ್ಯವಸ್ಥಿತವಾಗಬೇಕು. ಪರಮಾತ್ಮ ಪ್ರಾಪ್ತಿ, ಜೀವನ ಮುಕ್ತಿ ಸುಲಭೋಪಾಯದಿಂದಾಗಬೇಕು. ಈ ಎಲ್ಲ ವಿಚಾರಗಳು ಬಸವಣ್ಣನವರನ್ನು ಬಾಧಿಸುತ್ತಿದ್ದುವು. ಇದೆಲ್ಲವೂ ಕೈಗೂಡಬೇಕಾದರೆ ತಕ್ಕ ಕಾಲ ಬರಬೇಕು, ತಮಗೆ ತಕ್ಕ ಸ್ಥಾನ ಲಭಿಸಬೇಕು. ಇವೆಲ್ಲವನ್ನು ಮಾಡುವುದಕ್ಕೆ ಯೋಗ್ಯತೆಯನ್ನು ಪಡೆಯಬೇಕು ಎಂದು ಬಸವಣ್ಣನವರು ನಿರೀಕ್ಷಿಸುತ್ತಿದ್ದರು. ಕಲ್ಯಾಣಕ್ಕೆ ಬಂದಮೇಲೆ ಇವರ ಹೆಬ್ಬಯಕೆ ಈಡೇರಿತು.

ಜನತೆ ತಮ್ಮನ್ನು ಆದರಿಸಬೇಕಾದರೆ ತಾವು ಹೇಳಿದಂತೆ ನಡೆಯಬೇಕಾದರೆ, ತಮ್ಮಲ್ಲಿ ವಿಶ್ವಾಸವನ್ನು ಇಡಬೇಕಾದರೆ, ಮೊದಲು ತಾವು

ತಮ್ಮನ್ನು ಪರಿಶುದ್ಧರನ್ನಾಗಿ ಮಾಡಿಕೊಳ್ಳಬೇಕೆಂದು ಬಸವಣ್ಣನವರು ಯೋಚಿಸಿದರು. ತಮ್ಮ ನಡತೆಯನ್ನು ನಿರ್ಮಲವಾಗಿಟ್ಟುಕೊಂಡರು. ಕಾಯಾ, ವಾಚಾ, ಮನಸಾ ಈ ತ್ರಿಕರಣಪೂರ್ವಕವಾಗಿ ನಿರ್ವಂಚನೆಯಿಂದ ಇದ್ದರು. ತಮ್ಮನ್ನು ಬಗೆಬಗೆಯ ಪರೀಕ್ಷೆಗಳಿಗೆ ಈಡುಮಾಡಿಕೊಂಡರು. ವೀರಶೈವವನ್ನು ಉದ್ಧರಿಸಿದ ತಾವು ತಾವೇ ಬೋಧಿಸಿದ ತತ್ವಗಗಳನುಸಾರವಾಗಿ ಆಚರಿಸ ತೊಡಗಿದರು. ತಾವು ಎಂಥ ಉನ್ನತವಾದ ಅಧಿಕಾರದಲ್ಲಿದ್ದರೂ ಪರಮಾತ್ಮನಿಗೆ ಕಿಂಕರರು ಬರಿ ಅಷ್ಟೇ ಅಲ್ಲ, ಪರಮಾತ್ಮನ ಕಿಂಕರರಿಗೂ ಕಿಂಕರರು ಎಂದು ಅತ್ಯಂತ ನಮ್ರತೆಯಿಂದ ನಡೆದರು. ಜಂಗಮವೇ ಚಲಿಸುವ ಲಿಂಗವೆಂಬ ಧೃಡವಾದ ನಂಬುಗೆಯಿಂದ ಮನುಷ್ಯಮಾತ್ರದಲ್ಲಿ ದೇವತ್ವವನ್ನು ಕಂಡರು. ಶಿವಭಕ್ತರ ಯೋಗಕ್ಷೇಮಕ್ಕಾಗಿ ತಮ್ಮದಾಗಿದ್ದ ಎಲ್ಲವನ್ನೂ ಧಾರೆಯೆರೆದರು. ಧನವನ್ನು ನೀರಿನಂತೆ ಕೋಡಿವರಿಸಿದರು. ಅವರ ವಾಸಗೃಹ ಶರಣರ ಆರ್ತರ ವಸತಿಗೃಹವಾಯಿತು. ಬಂದವರಿಗೆಲ್ಲ ಭೇದಭಾವವಿಲ್ಲದೆ ಆದರ ಆತಿಥ್ಯಗಳಿಗೆ ತಾವೇ ಸೊಂಟ ಕಟ್ಟಿ ನಿಲ್ಲುತ್ತಿದ್ದರು. ಭಕ್ತಿಯೇ ರೂಪವೆತ್ತಿ ಬಂದಂತೆ ಕಂಡರು. ಭಕ್ತಿಭಂಡಾರಿ ಬಸವಣ್ಣನವರೆಂದೆನಿಸಿಕೊಂಡರು.

ಬಸವಣ್ಣನವರ ಮಹಾತ್ಮೆ, ಅವರ ವೈರಾಗ್ಯ ಇವುಗಳ ಕಿರಣಗಳು ನಾಡಿನಲ್ಲಿ ಹರಡಿತು. ಅವರ ಸಾನ್ನಿಧ್ಯವನ್ನು ಅವರ ದರ್ಶನವನ್ನಾಕಾಂಕ್ಷಿಸಿ ನಾಡಿನ ಮೂಲೆಗಳಿಂದ ಸಾವಿರ ಸಾವಿರ ಸಂಖ್ಯೆಯಲ್ಲಿ, ಜನ ತಂಡೋಪತಂಡವಾಗಿ ಬರತೊಡಗಿದರು! ಇವರಿಗೆ ಬರಿಯ ಆತಿಥ್ಯವನ್ನು ಕೊಟ್ಟು ದರ್ಶನಸುಖವಿತ್ತು, ಅಷ್ಟಕ್ಕೇ ತೃಪ್ತರಾಗಲಿಲ್ಲ. ಬಸವಣ್ಣನವರು ಬಂದವರು ಉದ್ಧಾರವಾಗಬೇಕಾದರೆ ಅವರಿಗೆ ಸದ್ಬೋಧಾಮೃತವನ್ನುಣಿಸಬೇಕು. ಸದಾಚಾರದಲ್ಲಿರುವಂತೆ ಅವರನ್ನು ಪ್ರೇರಿಸಬೇಕು. ಅವರಿಗೆ ಮುಕ್ತಿಪಥವನ್ನು ತೋರಿಸಬೇಕು, ಎಂದು ಬಸವಣ್ಣನವರು ಸಂಕಲ್ಪ ಮಾಡಿದರು. ಈ ಸಂಕಲ್ಪದ ಪರಿಣಾಮವೇ 'ಅನುಭವ ಮಂಟಪ' ದ ಸ್ಥಾಪನೆ.

ಬಸವಣ್ಣನವರು ಒಳ್ಳೆಯ ನುರಿತ ವ್ಯವಸ್ಥಾಪಕರೆಂಬಂಶವನ್ನು ಈ ಮೊದಲು ನಿರೂಪಿಸಿದೆ. ಇದಕ್ಕೆ ಈಗಿನ ಕಾಲದ ಉದಾಹರಣೆಯನ್ನು, ಹೋಲಿಕೆಯನ್ನು ಕೊಡಬೇಕಾದರೆ ಮಹಾತ್ಮಾ ಗಾಂಧಿಯವರನ್ನೇ ಕೊಡಬೇಕು. ಬಸವಣ್ಣನವರು ಯಾವ ಕಾರ್ಯವನ್ನಾದರೂ ಕೈಕೊಳ್ಳಬೇಕಾದರೆ

ಬಹಳ ದೂರ ದೃಷ್ಟಿಯಿಂದ ನೋಡುತ್ತಿದ್ದರು. ಪೂರ್ವಾಪರ ಯೋಚಿಸುತ್ತಿದ್ದರು. ಆ ಕಾರ್ಯ ಯಶಸ್ವಿಯಾಗಬೇಕಾದರೆ ಅದು ಹೇಗೆ ಸುಸಂಘಟಿತವಾಗಬೇಕೆಂಬುದನ್ನು ವಿವೇಚಿಸುತ್ತಿದ್ದರು. ಈಗ ಅನುಭವ ಮಂಟಪವೇನೋ ಸ್ಥಾಪಿತವಾಯಿತು. ಅದು ಒಂದು ಮಹಾ ಸಂಸ್ಥೆ, ದೊಡ್ಡ ಸಂಘಟನೆ. ಇಂಥ ಸಂಸ್ಥೆಗೆ ಅಧ್ಯಕ್ಷರಾಗಬೇಕಾದವರಲ್ಲಿ ಎಂಥ ಗುಣಗಳಿರಬೇಕು? ಅದರ ಕಾರ್ಯಕಲಾಪಗಳೇನು ? ಅದರ ಸ್ವರೂಪವೇನು ? ಅದರಲ್ಲಿ ಸೇರುವವರಲ್ಲಿ ಎಂಥ ಗುಣಗಳಿರಬೇಕು ? ಅವರು ಎಂಥವರಿರಬೇಕೆಂಬುವನ್ನು ಕೂಲಂಕಷವಾಗಿ ವಿಚಾರಿಸಬೇಕು. ಬಸವಣ್ಣನವರು ಅದರಿಂದಲೇ ಅವರು ಪರಮವಿರಕ್ತ ಶಿರೋಮಣಿಗಳೂ, ಮಹಾ ಜ್ಞಾನಿಗಳೂ. ಮಾಯೆಯನ್ನು ಗೆದ್ದು ಶಿವಯೋಗ ಮಾರ್ಗವನ್ನವಲಂಬಿಸಿದವರೂ, ಭರತಖಂಡವನ್ನೆಲ್ಲ ಸಂಚರಿಸಿ, ವಾದಿಗಳನ್ನು ಮುರಿದು, ಶಿವತಾರತಮ್ಯವನ್ನು ಸ್ಥಾಪಿಸಿ, ಪರಶಿವ ಸದೃಥರೆಂದು ವಿಖ್ಯಾತಿಯನ್ನು ಅಧ್ಯಕ್ಷರನ್ನಾಗಿರಲು ಪ್ರಾರ್ಥಿಸಿದುದು. ಅಲ್ಲಮಪ್ರಭುಗಳೆಂದರೆ ಪರಮತಗಳಿಗೆ ಬರಿಯ ಪರಮತೀಯರಿಗೊಂದೇ ಅಲ್ಲ,ಬಹಿರಾಡಂಬರದ ಸ್ವಮತೀಯರಿಗೂ ಉಗ್ರಮೂರ್ತಿಗಳು, ನಿರ್ದಾಕ್ಷಿಣ್ಯರು, ಇಂಥವರು ಅಧ್ಯಕ್ಷರಾಗಿರುವಾಗ ಈ ಮಹಾಸಂಸ್ಥೆಯಲ್ಲಿ ಕ್ಷುದ್ರವಾಗಲಿ, ಶೈಥಿಲವಾಗಲಿ, ಹುಳುಕಾಗಲಿ ಹುಟ್ಟಲು ಅವಕಾಶವಿರಲಿಲ್ಲ. ಈ ಮಂಟಪದಲ್ಲಿ ಪ್ರವೇಶ ಪಡೆದವರ ವರ್ತನೆಯ ವಿಚಾರವಾಗಿಯಾಗಲಿ, ಪೌಶಿಲ್ಯದ ವಿಚಾರವಾಗಿಯಾಗಲಿ, ತಮಗೆ ಅಥವಾ ಬೇರೆಯವರಿಗೆ ಸಂದೇಹವೇನಾದರೂ ಉಂಟಾದರೆ, ಅಲ್ಲಮಪ್ರಭುಗಳು ಅವರನ್ನು ತೀಕ್ಷ್ಣವಾಗಿ ಪರೀಕ್ಷಿಸುತ್ತಿದ್ದರು. ಇಂಥ ಒಂದು ಸಂದರ್ಭವನ್ನು ಇಲ್ಲಿ ಉದಾಹರಿಸಬಹುದು. ಮಹಾದೇವಿಯಕ್ಕನು ತನ್ನ ಪತಿಯನ್ನು ತೊರೆದು, ಪರಶಿವನೇ ತನ್ನ ಪತಿಯೆಂದು ನಂಬಿ, ಅನುಭವ ಮಂಟಪದ ಮಹಾನುಭಾವರ ಸಂಗವನ್ನಪೇಕ್ಷಿಸಿ, ದಿಗಂಬರೆಯಾಗಿ, ಕಲ್ಯಾಣಕ್ಕೆ ಬಂದ ಸಂದರ್ಭವದು. ಲೋಕೋತ್ತರ ಸುಂದರಿಯೂ ಭರಯೌವನದ ತರುಣಿಯೂ ಇಷ್ಟೆಲ್ಲದರ ಮೇಲೆ ದಿಗಂಬರೆಯೂ ಆದ ನವಯುವತಿ ಆ ಪುರುಷ ಸಮುದಾಯದಲ್ಲಿ ಇರುವುದೆಂದರೆ ಸಮಾಜ ದೃಷ್ಟಿಯಿಂದಲೂ, ಶೀಲರಕ್ಷಣೆಯ ದೃಷ್ಟಿಯಿಂದಲೂ ತುಂಬಾ ಆಕ್ಷೇಪಾರ್ಹವಾದ ವಿಷಯವಾಗಿದ್ದಿತು. ಅಲ್ಲಮಪ್ರಭುಗಳು ಇಂಥ ಸಾಧ್ವೀಶಿರೋಮಣಿಯಾದ ಮನ್ಮಥನನ್ನು ಭಸ್ಮ ಮಾಡಿದ ಮಹಾನುಭಾವೆಯನ್ನು ಉಗ್ರ ಪರೀಕ್ಷೆಗೆ ಈಡುಮಾಡಿದರು. ಕಿನ್ನರಬೊಮ್ಮಯ್ಯನನ್ನು ಕಳಿಸಿ, ಅವಳ ಸತ್ವಗುಣವನ್ನು ಪರೀಕ್ಷಿಸಿದರು. ಮಹಾದೇವಿ

ಯಕ್ಕನ ನಿಷ್ಕಲ್ಮಶವಾದ ಶೀಲವನ್ನು ಪರೀಕ್ಷಿಸಿ, ಕಿನ್ನರಿ ಬೊಮ್ಮಯ್ಯನು ಮಹಾದೇವಿಯಕ್ಕನನ್ನು ಆ ಮಹಾತ್ಮರ ಸಭೆಯಲ್ಲಿ ಮುಕ್ತಕಂಠದಿಂದ ಕೊಂಡಾಡಿದನು.

ಈ ಮಹಾಸಭೆಯಲ್ಲಿ ಜಾತಿ, ಮತ, ಪಂಥ ಪಂಗಡಗಳ ಭೇದವಿಲ್ಲದಂತೆ ಅಲ್ಲಮಪ್ರಭುಗಳು ಅವರು ಪುರುಷರೇ ಆಗಲಿ, ಸ್ತ್ರೀಯರೇ ಆಗಲಿ, ಎಲ್ಲರನ್ನು ಸೇರಿಸಿಕೊಂಡರು. ಇವರೆಲ್ಲರೂ ಮಹಾನುಭಾವರೇ. ವಯಸ್ಸಿನಲ್ಲಿ ಬಸವಣ್ಣನವರಿಗಿಂತ ಹಿರಿಯನಾದ ಕಲ್ಯಾಣಕಿಯ ಪ್ರಭುವಾದ ಸಕಲೇಶ ಮಾದರಸ, ಕಾಶ್ಮೀರದ ಅರಸು, ಮೋಳಿಗೆಯ ಮಾರಯ್ಯ, ಮಡಿವಳ ಮಾಚಯ್ಯ, ಅಂಬಿಗರ ಚೌಡಯ್ಯ, ಡೋಹರ ಕಕ್ಕಯ್ಯ, ಹಡಪದ ಅಪ್ಪಣ್ಣ, ಜೇಡರ ದಾಸಿಮಯ್ಯ ಮೊದಲಾದ ಎಲ್ಲ ಕಾಯಕದವರೂ ಈ ಮಂಟಪದ ಸದಸ್ಯರಾಗಿದ್ದರು. ಇವರಲ್ಲದೆ ಎಷ್ಟೋಜನ ಸ್ತ್ರೀಯರೂ ಈ ಸಂಸ್ಥೆಯಲ್ಲಿದ್ದರು. ಮೋಳಿಗೆಯ ಮಾರಯ್ಯನ ಪತ್ನಿಯಾದ ಮಹಾದೇವಿ, ನೀಲಾಂಬಿಕೆ, ಮಹಾದೇವಿಯಕ್ಕ, ಅಕ್ಕನಾಗಮ್ಮ, ಮುಕ್ತಾಯಕ್ಕ ಮುಂತಾದ ಹತ್ತಿಪ್ಪತ್ತು ಜನ ಸ್ತ್ರೀಯರು ಕಂಡುಬರುತ್ತಾರೆ. ಈ ಹೆಸರುಗಳನ್ನು ಕರೆವಲ್ಲಿ ಒಂದು ವಿಶೇಷ ಗುಣ ವ್ಯಕ್ತವಾಗುತ್ತದೆ. ಪುರುಷರಾದರೆ ಅವರ ಹೆಸರುಗಳ ಜೊತೆಯಲ್ಲಿ "ಅಣ್ಣ" 'ಅಯ್ಯ" "ತಂದೆ" "ದೇವ" ಎಂದೂ, ಸ್ತ್ರೀಯರಾದರೆ ಅವರ ಹೆಸರುಗಳ ಜೊತೆಯಲ್ಲಿ "ಅಕ್ಕ" ಅಮ್ಮ, ಅವ್ವ, ದೇವಿ, ಅಂಬಿಕೆ ಎಂದೂ ಬಾಂಧವ್ಯ ಸೂಚಕವಾದ ಮಾತುಗಳು ಉಕ್ತವಾಗಿವೆ. ಸ್ತ್ರೀ ಪುರುಷರು ಏಕತ್ರ ಸೇರಿದ ಈ ಮಹಾಸಭೆಯಲ್ಲಿ ಒಬ್ಬರು ಮತ್ತೊಬ್ಬರನ್ನು ಕರೆವಾಗ "ಅಣ್ಣ", "ಅಕ್ಕ" ಎಂದು ಸಂಬೋಧಿಸುತ್ತ, ಮನೋವಿಕಾರಕ್ಕೆ ಎಡೆಯಿಲ್ಲದಂತೆ ವರ್ತಿಸುತ್ತಿದ್ದುದು ಇವರೆಲ್ಲರೂ ಒಂದೇ ಕುಟುಂಬಕ್ಕೆ ಸೇರಿದವರೆಂಬಂಶವನ್ನು ವ್ಯಕ್ತಗೊಳಿಸುತ್ತದೆ. ಬಸವಣ್ಣನವರು ಈ ದಿಟ್ಟಿನಲ್ಲಿ ಒಂದು ಮಹತ್ಕಾರ್ಯವನ್ನು ಸಾಧಿಸಿದ್ದಾರೆ.

ಇಂಥ ಮಹಾತ್ಮರ ಮಹಾ ಸಮ್ಮೇಳನದಲ್ಲಿ ಅವರೆಲ್ಲರ ಸಮ್ಮುಖವಾಗಿ ಅಲ್ಲಮಪ್ರಭುಗಳು ಶೂನ್ಯಸಿಂಹಾಸನದಮೇಲೆ ವಿರಾಜಮಾನವಾಗಿದ್ದ ದೃಶ್ಯವು ಕೈಲಾಸದಲ್ಲಿ ಗಣನಾಥರಿಂದೊಡಗೂಡಿ ಪರಮೇಶ್ವರನು ಸಭೆಯನ್ನು ನಡಿಸುತ್ತಿರುವ ಸನ್ನಿವೇಶವನ್ನು ಜ್ಞಾಪಕಕ್ಕೆ ತರುತ್ತದೆ. ಈ ಅನುಭವ ಮಂಟಪದಲ್ಲಿ ನಡೆಯುತ್ತಿದ್ದ ಕಾರ್ಯಕಲಾಪಗಳು ಬಹಳ ಸ್ವಾರಸ್ಯ

ಪುಳ್ಳವಾಗಿವೆ. ಪ್ರತಿಯೊಬ್ಬ ಮಹಾನುಭಾವನೂ ಲೌಕಿಕವಾಗಿಯಾಗಲಿ, ತನಗುಂಟಾದ ಅನುಭವಗಳನ್ನು ಎಲ್ಲ ಸಭಿಕರ ಮುಂದೆ ಮನಸ್ಸು ಬಿಚ್ಚಿ ಮಂಡಿಸುತ್ತಿದ್ದನು. ಪ್ರತಿಯೊಬ್ಬ ಸದಸ್ಯನೂ ತನ್ನ ಮನಸ್ಸಿನಲ್ಲಿ ಏಳುತ್ತಿದ್ದ ಸಂದೇಹಗಳನ್ನು ವಿವರಿಸುತ್ತಿದ್ದನು. ಅಲ್ಲಿ ನೆರೆದವರಲ್ಲಿ ಯಾರಾದರೂ ಆ ಸಂದೇಹಗಳಿಗೆ ನಿವಾರಣೆಗಳನ್ನು ಸುಲಭವಾದ ಕನ್ನಡದ ಮಾತಿನಲ್ಲಿ ಅನೇಕ ವ್ಯಾವಹಾರಿಕ ದೃಷ್ಟಾಂತಗಳಿಂದ ನಿರೂಪಿಸುತ್ತಿದ್ದರು. ಭಕ್ತಿ, ವೈರಾಗ್ಯ, ಜ್ಞಾನ ಇವುಗಳ ಅನ್ವೇಷಣೆ, ಸಂಪ್ರಾಪ್ತಿ ಮಾರ್ಗ, ಭಗವತ್ ಸ್ವರೂಪ, ಆ ವಿಷಯಕವಾದ ಜ್ಞಾನ, ಮನುಷ್ಯನ ಚಂಚಲವಾದ ಮನಸ್ಸು, ಅದನ್ನು ಗೆಲ್ಲುವ ಉಪಾಯ, ಕಪಟ, ಕಾರ್ಪಣ್ಯ, ಶೀಲ, ಸುಖ ದುಃಖ ಹೀಗೆ ಎಲ್ಲ ವಿಷಯಗಳೂ ಚರ್ಚೆಗೆ ಆಸ್ಪದವಾಗುತ್ತಿದ್ದುವು. ಜಟಿಲವಾದ ತಾತ್ವಿಕ ವಿಷಯಗಳಿಗೆ ಅಧ್ಯಕ್ಷರಾದ ಅಲ್ಲಮಪ್ರಭುಗಳು ಜ್ಞಾನಾನುಭವಗಳಿಂದ ಸಮರ್ಪಕವಾದ ಉತ್ತರಗಳನ್ನು ಕೊಡುತ್ತಿದ್ದರು. ಅಲ್ಲಿ ನೆರೆದ ಶರಣರ ಮಹಾ ಸಮುದಾಯವು ಈ ವಚನಾಮೃತವನ್ನು ಆಸ್ವಾದಿಸಿ ಧನ್ಯರಾಗುತ್ತಿದ್ದತು.

ಈ ಮಹಾ ಸಭೆಯ ಮಹಾ ಸಮುದ್ರದಲ್ಲಿ ಮಥನವಾದ ವಿಷಯಗಳಿಂದ ಐದು ಮಹಾ ಸಾಹಿತ್ಯಗಳು ಉದ್ಭವಿಸಿವೆ. ಇವು ಕನ್ನಡ ಸಾಹಿತ್ಯದಲ್ಲಿ ಅನರ್ಘ್ಯವಾದ ರತ್ನಗಳು. ಮಹಾನುಭಾವರಾದ ಬಸವಣ್ಣನವರು ಸಂಸ್ಥಾಪಿಸಿದ ಈ ಅನುಭವ ಮಂಟಪ ವೃಕ್ಷದ ಅಮೃತ ರಸಪೂರಿತವಾದ ಫಲಗಳು ಐದು ಶೂನ್ಯ ಸಂಪಾದನೆಗಳು.

ಹೈದರಾಬಾದ ಬಾನುಲಿಕೇಂದ್ರದಿಂದ ಪ್ರಸಾರವಾದುದು. ಆ.ವಾ.

# ಜಂಗಮ

(ಲೇ:— ಶ್ರೀ. ಈಶ್ವರ ಕಿಳಕಣ್ಣವರ-ಬೆಳಗಾವಿ.)

---

ಉಪೋದ್ಘಾತ ಅಂದರೇನು ?

ಯಾವ ಸಂಸಾರ ಸಾಗರವನ್ನು ತೊರೆದು ಉಚ್ಚವಾದ, ಉತ್ಕೃಷ್ಟವಾದ, ಮನೋರಂಜಕವಾದ ಭವ್ಯಾಕೃಷ್ಟವಾದ ಜನಸಮುದಾಯ ರಹಿತವಾದ ಪರಮಾನಂದ ಪ್ರಾಪ್ತಕರವಾದ ಸತ್ಯಶೀಲತೆಯ ಶಿಖರವನ್ನೇರಿಸಬಲ್ಲ, ಮಂಗಲಸ್ವರೂಪವಾದ ಭಿನ್ನಾಭಿನ್ನರಹಿತವಾದ ಯಾವತ್ತೂ ಸದ್ಬೋಧದ ಸುಧೆಯನ್ನು ಸುರಿಸಬಲ್ಲ, ಆ ಸತ್ಯ, ನಿತ್ಯ, ಪರಿಪೂರ್ಣತೆಯುಳ್ಳ ಆತ್ಮನನ್ನು ಅರಿಯಲು ಸದಾ ಪ್ರಯತ್ನಿಸುತ್ತಿರುವ ಸಜ್ಜನರೂ, ಸತ್ಪುರುಷರೂ ಆದ ಯತಿಗಳು. ಅಥವಾ ಅಲೌಕಿಕವನ್ನು ಧರಿಸಿದ ಯತಿಗಳ ಅಮರಪಕ್ವವಾದ ವಾಣಿ ವಾಕ್ಪದದ ಪರಿಪಕ್ವವು. ಭವಿಯು ಅದನ್ನು ಸಾಧಿಸಲು ಆತಂಗೆ ಸಾಕೆನಿಸದೆ ಸಿಡಿಯದೆ ಬೇರೊಂದನ್ನು ಇಚ್ಛಿಸದೆ ತನ್ನ ಜೋಕೆಗುಂದದೆ ಅನಂತಚಿನ್ಮಾತ್ರ ಸ್ವರೂಪವಾದ ಮಂಗಲಶ್ರೇಷ್ಠ ಯತಿತ್ವವನ್ನು ಅರಿಯಬೇಕೆಂಬ ಅರಿವಿನ ಆಳ ಅನುಭವವನ್ನು ಅರಿಯಲು ಸಕಲಪ್ರಪಂಚವನ್ನು ತ್ಯಜಿಸಿ ನಿರ್ಮಲ ಮನದಿಂದ ಯತಿವರ್ಯರ ಮಾತಿನಂತೆ "ವಿರತಿಬಲಿಯಲುಬೇಕು, ಜನಗಳ ಸಂಚಯ ಇಲ್ಲಿರಬೇಕು, ಮಾತಿನ ಹರಿಯಬಿಟ್ಟಿರಬೇಕು ಬಹು ಏಕಾಂತವಿರಬೇಕು, ಹಿರಿದಕನವನು ಬಿಟ್ಟಿರಲುಬೇಕು, ಬರುವ ನಿದ್ರೆಯ ತಗ್ಗಿಸಲುಬೇಕು ಮರೆಯಬೇಕು ಪ್ರಪಂಚವಾಸನವೆಲ್ಲ ಕೇಳೆಂದಾ!" ಅನ್ನುವಂತೆ ಎಲ್ಲದರಲ್ಲಿ ಸರ್ವಸಂಗಪರಿತ್ಯಾಗಿಯಾದ ವೃತ್ತಿಯುಳ್ಳವನು ಪರಮಸರಸಾನಂದಯುತನಾದವನೇ ಜಂಗಮ.

ಕರ್ಮಿ, ಮುಮುಕ್ಷು, ಅಭ್ಯಾಸಿ, ಅನುಭವಿ, ಆರೂಢ ಎಂಬ ಸಮರಸಯುಕ್ತ ಸರ್ವಭೇದರ ಅನುಮತಿ ತ್ಯಾಗದಲ್ಲಿಯೂ ತ್ರಿವರ್ಣ ಘಟಕಗಳು ಕಲ್ಪಿತವಾಗುತ್ತವೆ. ಲೌಕಿಕ ಘಟನೆ, ಆಧ್ಯಾತ್ಮಿಕ ಘಟನೆಯಂತಲೂ ಆತ್ಮಾನಾತ್ಮ ಘಟನೆ ಎಂತಲೂ ಇದೆ.

ಲೌಕಿಕಘಟನೆ:— ಅಜ್ಞಾನದ ಮಂದತೆಯನ್ನು ವಿಕಾರ ಸ್ವರೂಪವನ್ನು ಮತ್ತು ಭಿನ್ನಾಭಿನ್ನಾಕೃತಿಯನ್ನು ಜಾಡ್ಯತನವನ್ನು ಮೋಹಕ ಸ್ವರೂ

ಸಾವತರ್ನ ಬಲೆಯನ್ನೂ ಹರಿದು ಸುವಿಸ್ತರವಾದ ಮಾರ್ಗಕ್ಕೆ ಸಹಾಯ ವಿತ್ತು, ಅದರ ಏಳ್ಗೆಗಾಗಿ ಪ್ರಗತಿಪಥವನ್ನು ದೊರಕಿಸಲು ದಾರಿದೀವಟಿಗೆ ಯಂತೆಯೂ ಅಂಧಕಾರದ ತಿಮಿರನ್ನು ದೂರೀಕರಿಸಲೂ ಸಾಧಕವಾದ ಲಯ ಉದಯ ಗಮನ ರಹಿತವಾದ ಆತ್ಮೋದ್ಧಾರದ ಮಾರ್ಗಗೋಚರವನ್ನು ಲೌಕಿಕವನ್ನು ಅಲೌಕಿಕನ್ನಾಗಿ ಮಾಡಲು ಅನಂತಮಾರ್ಗಗಳಲ್ಲಿ ಒಂದು ಘಟನೆಯಂದರೆ ಜಂಗಮ.

ಅಧ್ಯಾತ್ಮಿಕ ಘಟನೆ:— ಆತ್ಮಾಧಿತ್ಯವಾದ ಆತ್ಮವಿಚಾರದಲ್ಲಿ ಪೂರ್ಣ ತೆಯಲ್ಲಿ ತೊಡಗಲು ಆ ದಿವ್ಯ ಬೋಧಾನಂದ ಸಮಯದಲ್ಲಿ ತತ್ಪರನಾಗಿ ವಿಚಾರ ಪ್ರವಾಹದ ಸುಮಾರ್ಗ ಪ್ರಕಟನೆಯದೆಶೆಯುಲ್ಲಿ ಪ್ರಗತಿಪಥವನ್ನು ಅನುಸರಿಸುವದೇ ಅಧ್ಯಾತ್ಮಿಕ ಸುಮಾರ್ಗ. ಇಂಥದರಲ್ಲಿ ಸಮರಸ ಶಕ್ತಿಯನ್ನು ಆಲಂಗಿಸಿ ಮುಕ್ತಿಪಥವನ್ನು ಅರಿಯಲು ಸಾಧ್ವಿಗಳು ಮಂಗಲತೆಯನ್ನು ಸಾಧಿಸಲಿರುವಂತೆ ಸಾಧಿಸುತ್ತಿರುವ ಆತ್ಮಸಾಧನದ ವೃತ್ತಿಯೇ ಜಂಗಮ.

ಆತ್ಮಾಸಾತ್ಮಿಕ ಘಟನೆ:—ಸ್ವಾರ್ಥತೆಯನ್ನು ತ್ಯಜಿಸುವದಲ್ಲದೆ ವಿಷಯಾ ಭಿಲಾಷೆಯ ಸಿಲುಕಡೆ "ಅಹಂ ಮಮಕಾರ" ಎಂಬ ಅಂಗನಾಶಕ ರಿಪುಗ ಳನ್ನು ತೊರೆದು ಮಲಿನತೆಯನ್ನು ದೂರೀಕರಿಸಿ, ಅದರ ಆಳ ಅನುಭವದಲ್ಲಿ ಆತ್ಮೀಯ ಕಾರ್ಯಾಂಗಗಳಾವವು. ಮತ್ತು ಅನಾತ್ಮೀಯ ಕಾರ್ಯಾಂಗಗ ಳಾವವು ಇದರ ಅರಿವನ್ನು ಅರಿಯಲಿರುವ ಸ್ವಾರ್ಥವು ಆಧ್ಯಾತ್ಮದಲ್ಲಿ ಕರ್ಮಿ, ಮುಮುಕ್ಷಿ, ಅಭ್ಯಾಸಿ, ಅನುಭವಿ, ಆರೂಢ ಎಂಬುವಂತೆ ಈ ಜಂಗ ಮತ್ವವ ದಳೂ ಅತ್ಯಲ್ಪ ಅಂಗಕಾರ್ಯಯುತ ಸುಜ್ಞಾನ ತರಂಗವೃತ್ತಿಯು.

ಭವದ ಭವನದಲ್ಲಿ ಸಾಕೆನಿಸಿಪ ಕ್ಷೀರಸಾಗರದ ಸವಿಯದ ಪರ ಮಾನಂದ ದಿವ್ಯಬೋಧೆ, ಬೇರೊಂದನ್ನು ಇಚ್ಛಿಸದ ಚೈತನ್ಯವು. ಅತಿ ಆನಂದ ವಾದ ಸದ್ಭಾವನೆಯನ್ನು ಅರಿತು ಪರಮಪರತರವಾದ ಪರಮಕೆ ಪರಂಜ್ಯೋತಿ ಯಾದ ಮುಮುಕ್ಷತ್ವವನ್ನಾಲಂಗಿಸುವದೇ ಗುರುರೂಪ ಸನ್ಯಾಸಿವೃತ್ತಿಯು. ಮಂಗಲನಿಗೆ ಅಂಗರಹಿತವಾಗಿ ಸರಸಾನಂದದಲ್ಲಿ ನೆಲಿಸಿ ಮುಕ್ತಿಪಥದ ಅಧಿ ಕಾರ ಅವಸನ್ನಿಧಾನವನ್ನು ಅಕ್ಕರತೆಯಿಂದಿಕ್ಕಿ ಸಂಸಾರವನ್ನು ಸುಲಭವಾಗಿ ಮಾಡಿ ಸುಜ್ಞಾನ ಸುಧೆಯ ಸಾಗರ ತೆರೆಯ ತರಂಗದಲ್ಲಿ ನಿಂದು ಝುರಿ ನಲ್ಲಿ ತೇಲಾಡಿದಂತೆ ಈ ಮಲಿನ ದೇಹವನ್ನು ಮಲ್ಲಿಗೆಯ ಅಮರಪಕ್ವದಂತೆ ತೇಲಿಸಬಹುದಾದ ಭೂಲೋಕದ ಕರ್ಮಭೂಮಿಯಲ್ಲಿದ್ದರೂ ಅರಿಷಡ್ ಜಲನೆಯಿಂದ ಜಯಿಸಬಹುದಾದ ವೃತ್ತಿಯೇ ಜಂಗಮವೃತ್ತಿಯು.

ತರ್ಕ ವಿಮೋಚನೆಯನ್ನೀಯಲು ವೇದಾದಿಗಳ ಅತ್ಯೋನ್ನತಿಯು ಆಧಾರ ಬೆಂಬಲವಾದರೂ ಅಧಿಕಾರವಾಗಿ ಇಕ್ಕೇರುತ್ತಿದೆ. ಮಾಯಾಮೋಹಕವನ್ನು ತೂರಿದು ಅದರಡಿಯಲ್ಲಿ ಪನಡಿಸಿ ನಂಕಯಾತ್ರೆಯನ್ನು ಸಮೀಪಿಸುವದಕಿಂತಲೂ ಸವೆಯದ ಕಾಲಕ್ಕೂ ಯಾವಾಗಲೂ ಅಲಂಕರಿಸಿಡ ಆನಂದ ಸಾಗರವನ್ನು ಅನುಭವಿಸಿ ಆಧಾರಯುಕ್ತರಾಗಿ ಆಶೆ ಜೀವಿಗಳಿಗೆ ಪರಮಾಮೃತವಾದ ಅನಂತವಾದ ಸಮಯುಕ್ತವಾದ ಜಂಗಮವೃತ್ತಿ. ಪ್ರಗತಿಗಾಗಿ ಅನಂತರ ಬಯಕೆಯ ಅರಿಕೆಯನ್ನು ಪೂರ್ಣಿಸಲು ಸ್ವಾಮಿ ವಿವೇಕಾನಂದರು ಅನುಮತಿಸಿದಂತೆ ಅದರ ಏಳ್ಗೆಗಾಗಿ ಈಗಲೂ ಪ್ರಗತಿಪಥದಲ್ಲಿ ನಡೆದ ಜಂಗಮವೃತ್ತಿಯು ಪರಮವಾದದು. ಆದಿಯ ನಿಜವಾದ ಅನುಭವವಾದರೂ ಜಂಗಮತ್ವವೇ ಸರಿ.

---

## ಅಧ್ಯಾತ್ಮಿಕ-ವಚನಗಳು.

(ಶ್ರೀ ರೇವಣಸಿದ್ಧಪ್ಪಾ ಶೀಲವಂತ, ಹುನಗುಂದ)

ಸ್ಥೂಲ, ಸೂಕ್ಷ್ಮ, ಕಾರಣ ಶರೀರಕ್ಕೆ ಗುರು, ಲಿಂಗ, ಜಂಗಮವಾಗಿರಿಸಿದೆ। ಒಳಗೆ ಕೋಟಿ ಸೂರ್ಯದಂತೆ ಒಪ್ಪುವ ಪ್ರಕಾಶವೇ ಶ್ರೀ ವಿಭೂತಿಯಾಗಿರಿಸಿದೆ ಸದಾ ನಿಮ್ಮ ಅಂತಃಕರಣ ದೃಷ್ಟಿ ಯಿರುವದೇ ರುದ್ರಾಕ್ಷಿಯಾಗಿರಿಸಿದೆ। ಯಾವಾಗಲೂ ನಿಮ್ಮ ನಿಜಧ್ಯಾನವೇ ಮಂತ್ರವಾಗಿರಿಸಿದೆ। ಪಶ್ಚಿಮ ಶಿಖೆಯಲ್ಲಿ ಮೆರೆಯುವ ಶಿವಲಿಂಗದ ಅಮೃತವೇ ಪಾದೋದಕವಾಗಿರಿಸಿದೆ। ಇಂತೀ ಅಷ್ಟಾವರಣ ಗುಣಗಳಿಲ್ಲದವರಿಗೆ ಒಲಿಯುವನೇ ನಮ್ಮ ಕೋಟೀಕಲ್ಲ ಶ್ರೀ ಹೊಳೆಹುಚ್ಚೇಶ್ವರಾ॥

ಲಿಂಗದ ಮೇಲೆ ಪೃಥಕ್ತ್ವವಿಲ್ಲದ ಮಾನವರು ನಾನಾ ಗುಡಿಗಳಲ್ಲಿ ದೇವರಿರುವರೆಂದು ತಿರುಗುವವರ ಗತಿ ಎಂತು ಹೇಳಲಿ! ಗಂಡ ಬಿಟ್ಟ ಗರ್ಭ್ಯಾಳಿಯಂತೆ ಇಷ್ಟಲಿಂಗವ ಬಿಟ್ಟು ಅನ್ಯಲಿಂಗಕ್ಕೆ ಹೋದೊಡೆ, ನಾನಾ ಭವಸಾಗರದಲಿ ತಿರುಗುವವರೇ ಹೊರತು ನಿಮ್ಮಾಣೆಯಾಗಿಯೂ ಮುಕ್ತಿ ಇಲ್ಲ ನೋಡಯ್ಯಾ ಕೋಟಿಕಲ್ಲ ಶ್ರೀ ಹೊಳೆಹುಚ್ಚೇಶ್ವರಾ॥

ಜಗದ ವೃಕ್ಷಕ್ಕೆ ಅಜ್ಞಾನವೆಂಬ ಅನೇಕ ವಿಟಪಗಳಾಗಿ ಪರಿಣಮಿಸಿದವು ನೋಡಯ್ಯಾ। ವಿಚಾರಿಸಿ ನೋಡಿದರೆ ಏನೂ ಹುರುಳಿಲ್ಲವಯ್ಯಾ। ಪಂಚತತ್ವದಿಂದುದ್ಭವಿಸಿದ ನಾವೆಲ್ಲರೂ ಭಿನ್ನರಾದರೆ, ಸರ್ವ ಜೀವ ಹೃದಯದಲ್ಲಿ ಹುದುಗಿಕೊಂಡಿಪ್ಪ ನಮ್ಮ ದೇವನೇನಾದರೂ ಭಿನ್ನವೇ ? ಇದನ್ನರಿತು ನಡೆದರೆ ಧರ್ಮದ ನಿಜವಾದ ರೀತಿಯನ್ನು ಸ್ಥಾಪಿಸಿದಂತಾಗುತ್ತದೆ ನೋಡಯ್ಯಾ। ಇಲ್ಲವಾದರೆ ಜಗತ್ತು ಅಧರ್ಮಮಯವಾಗಿ ನಾನಾ ಕಾರ್ಪಣ್ಯಗಳಿಗೀಡಾಗುವದಲ್ಲದೆ ನರಕವು ಪ್ರಮಥರಾಣಿಯಾಗಿಯೂ ತಪ್ಪುವದಿಲ್ಲ ನೋಡಯ್ಯಾ। ಕೋಟೇಕಲ್ಲ ಶ್ರೀ ಹೊಳೆಹುಚ್ಚೇಶ್ವರಾ ॥

ಬಡವರಾರೆಂಬುದು ಬಲ್ಲರೆ ಹೇಳಿರೋ, ಅರಿಯದಿದ್ದೊಡೆ ಕೇಳಿರೋ। ಶಾಂತಿಯಿಲ್ಲದವನೇ ಬಡವನಯ್ಯಾ। ಸತ್ಯವಿಲ್ಲದವನೇ ಬಡವನಯ್ಯಾ। ದಯವಿಲ್ಲದವನೇ ಬಡವನಯ್ಯಾ। ಅಹಿಂಸೆಯನ್ನು ಆಚರಿಸದೆ ಇರುವವನೇ ಬಡವನಯ್ಯಾ। ಇಷ್ಟೇ ಅಲ್ಲ. ತನ್ನತಾನರಿಯದವನೇ ಬಡವನಯ್ಯಾ। ದೇವಾ. ಶರಣರು ಸಕಲ ತತ್ವಗಳಿಂದ ಮರೆದು ಸುಖಪಡುತ್ತಿರುವವರೇ ನಿಜವಾದ ಶ್ರೀಮಂತರು ನೋಡಯ್ಯಾ ಕೋಟೇಕಲ್ಲ ಶ್ರೀ ಹೊಳೆಹುಚ್ಚೇಶ್ವರಾ।

ಸಪ್ತಾಶ್ವಗಳು ಮಾಡಿದ ಹೊನ್ನರಥದಲ್ಲಿ ಕುಳಿತು ಎದೆಸೆಟೆಸಿಕೊಂಡು ಹೋಗುವ ಅಂಣಗಳಿರಾ, ಮುಂದೆ ಕೆರೆ, ಹಳ್ಳ, ಹೊಳೆಗಳು, ತುಂಬಿ ಭೋರ್ಗರೆಯುತ್ತಿರುವವು ನೋಡಯ್ಯಾ। ಆಚೆಗೆ ಸಾಲಾಗಿ ನಿಂತಿರುವ ಮೇರುಪರ್ವತಗಳು ಝೇಂಕರಿಸುತ್ತಿರುವವು ನೋಡಯ್ಯಾ। ಅದರಾಚೆಗೆ ಸಪ್ತಸಾಗರಗಳು ಹೊರಸೂಸಿ ನಿಮ್ಮನ್ನು ನೋಡಿ ಚಪ್ಪಾಳೆ ಇಕ್ಕಿ ಗಹಗಹಿಸಿ ನಗುತ್ತಿರುವವು ನೋಡಯ್ಯಾ। ಇವೆಲ್ಲವನ್ನೂ ದಾಟಬೇಕಾದರೆ "ಶಿವ" ಮಂತ್ರವೊಂದೇ ಮಹಾ ದಾರಿ ನೋಡಯ್ಯಾ। ಅದರಾಚೆಯಲ್ಲಿರುವದೇ ಕೈಲಾಸ ನಗರ ನೋಡಯ್ಯಾ। ಅದರಲ್ಲಿ ಪ್ರಕಾಶಿಸುತ್ತಿರುವ ನಿತ್ಯ ನಿರಂಜನ ಪರಮಗುರು ಕೋಟೇಕಲ್ಲ ಶ್ರೀ ಹೊಳೆಹುಚ್ಚೇಶ್ವರ ಲಿಂಗವನ್ನು ಮನಮುಟ್ಟಿ ಪೂಜಿಸಿ ಧನ್ಯರಾಗಿರಯ್ಯಾ।

# ಅರಭಾಂವಿ ದುರದುಂಡೀ ಮಹೇಶ್ವರನ ಮಹಿಮೆ.

(ಲೇ:— ಶ್ರೀ ಪರ್ವತರಾಜ ಅಂಗಡಿ, ಸಂಗೊಳ್ಳಿ.)



ಶ್ರೀಮದ್ ವಿರಳರೂಪ ನಿರುಪಾಧಿಜಂಗಮಂ । ಹೇಮ ಗಿರಿ
ಯಿಂದಿಳಿದು ಶಿವಲಿಂಗನಾಮದಿಂ ಭೂಮಿಯಲಿ ಬಂದು
ನಿಜಲೀಲೆಯಿಂ ಮೆರೆದಿರ್ದನರಭಾವಿ ಸುಕ್ಷ್ಯಾದ್ರಿಯೊಳ್ ॥

ಗೋಕಾವಿ ತಾಲೂಕಿನಲ್ಲಿ, ಅರಭಾವಿ ಶ್ರೀ ದುರದುಂಡೀ ಮಹೇಶ್ವರನು ತಮ್ಮ ಜೀವಮಾನದಲ್ಲಿ ಅನೇಕ ಭಾಗಗಳಲ್ಲಿ ಲೀಲೆ ಮಾಡಿ ತೋರಿಸಿದ್ದಾರೆ. ಇವುಗಳಲ್ಲಿ ಅನೇಕ ಲೀಲಾಭಾಗಗಳು ಇವೆ. ಇದರಲ್ಲಿ ಒಂದನ್ನು ಆರಿಸಿ ಬರೆಯುವೆ. ಇವರು ಮಹಾ ಪವಾಡಪುರುಷರು, ಗಣಪುರುಷನ ಅವತಾರಿಗಳು ಇದ್ದರು. ಈಗಲೂ ಇದ್ದಾರೆ. ಇವರು "ಜಂಗಮೋ ಜಗನ್ಬರಿತ:" ಎಂಬುದನ್ನು ದೃಢಗೊಳಿಸಿದರು. ಒಮ್ಮೆ ದುರದುಂಡೀ ಮಹೇಶ್ವರನು ಗೋಗಾವಿಯಲ್ಲಿ ಭಕ್ತರ ಮನೆಗಳ ಬಿನ್ನಹವನ್ನು ತೀರಿಸಲಿಕ್ಕೆ ಹೋಗಿದ್ದರಂತೆ, ಆವಾಗ್ಗೆ ಘಟಪ್ರಭಾ ನದಿಗೆ ಮಹಾಪೂರ ಬಂದಿತ್ತು. ನಿರುಪಾಧಿ ಜಂಗಮನಾದ ದುರದುಂಡೇಶ್ವರನು ಬಿನ್ನಹ ತೀರಿಸಿ, ನದಿಯ ದಂಡೆಗೆ ಬಂದನು. ನದಿಯನ್ನು ದಾಟಬೇಕಾಯಿತು. ಗೋಕಾವಿಯ ನಾವಿಕರು ಹಾಗು ಕೆಲವು ಜನರು ಈ ಮಹಿಮನನ್ನು ಬಯ್ದು, ನಿಂದಿಸಿ, ಹೊರದೂಡಿ, ತಮ್ಮ ನಾವೆಗಳಲ್ಲಿ ಹತ್ತಗೊಡಲಿಲ್ಲ. ಕೊನೆಗೆ ಘಟಪ್ರಭಾ ಮಹಾಪೂರದಲ್ಲಿ ತಮ್ಮ ಕಂಬಳಿಯ ಗದ್ದಿಗೆಯನ್ನು ಹಾಸಿ, ಅದರ ಮೇಲೆ ಕುಳಿತು "ಹರಹರ ಮಹಾದೇವ" ಎಂದರು. ಅದು ಮಹಾಪೂರದಿಂದ ತುಂಬಿದ ನದಿಯ ಆಚೆಯ ದಡದಲ್ಲಿ ಒಯ್ದು ಮುಟ್ಟಿಸಿತು. ಇತ್ತಕಡೆ ನಾವಿಕರು ನಾವೆಗಳ ಕಟ್ಟು ಕಡೆಯುತ್ತ, ನಡುಹೊಳೆಯಲ್ಲಿ ಬಂದರೂ ನಾವೆಗಳು ನಿಂತಲ್ಲಿ ನಿಂತವು. ಎಷ್ಟು ಪ್ರಯತ್ನಿಸಿದರೂ ನಾವೆಗಳು ಮುಂದೆ ಸಾಗಲಿಲ್ಲ. ನಮ್ಮ ಜೀವನಕ್ಕೆ ಗಂಡಾಂತರಬಂದಿತೆಂದು ಆ ನಿರು ಪಾಧಿ ಜಂಗಮನ ಕಡೆಗೆ ನೋಡಿದರು. "ಪರಮಾಶ್ಚರ್ಯ. ಈ ಮಹಿಮನು ನಮ್ಮಕಿಂತ ಮುಂದೆಹೋಗಿ, ಆಚೆಯ ದಡದಲ್ಲಿ ಇದ್ದಾನೆ. ಇವರು ಸಾಮಾನ್ಯ ಪುರುಷರಲ್ಲ." ಎಂದು ತಿಳಿದು— ತಮ್ಮ ತಪ್ಪನ್ನು ಒಪ್ಪಿ

ಕೊಂಡು, ಈ ಮಹಿಮನನ್ನು ಕರೆದರು. ಕರೆದರೂ, ತಿರುಗಿ ಬರಲಿಲ್ಲ. ಈ ಮಹೇಶ್ವರನು— "ಭಕ್ತರೇ! ನಾನು ಇನ್ನೂ ತಿರುಗಿ ಬರಲಿಕ್ಕೆ ಸಾಧ್ಯವಿಲ್ಲ, ನೀವು ಶೀಘ್ರ ನಾವೆಗಳನ್ನು ತೆಗೆದುಕೊಂಡು ಬನ್ನಿರಿ. ಅವುಗಳ ಬರುವವು" ಎಂದು ಅಪ್ಪಣೆಕೊಡಿಸಿದರು. ಇದರಿಂದ ದಂಡೆಯನ್ನು ಬಂದು ಸೇರಿವವು. ಈ ಲೀಲಾ ಭಾಗದಿಂದ ಗೋಕಾವಿಯ ಶರಣರ ಸಂಶಯವನ್ನು ಹರಿದ ವಿಷಯವು ಸುಗಮವಾಗಿದೆ. ಗೋಕಾವಿಯ ಘಟಪ್ರಭಾ ನದಿಯ ದಡದಲ್ಲಿ ಇವನ ಗುಡಿಯನ್ನು ಕಟ್ಟಿಸಿದ್ದಾರೆ. ಈಗಲೂ ಕಾಣಬಹುದು. ಇದೇ ಭಾಗವು ಕೆಳಗಿನ ಗದ್ಯ-ಪದ್ಯಗಳಿಂದ ರಚಿಸಿದ ಭಾಗದಲ್ಲಿ ಒಡಮೂಡಿಸಿದ್ದೇನೆ.

ಅರಭಾವಿ ಕ್ಷೇತ್ರದಲಿ ದುರದುಂಡಿ ಜಂಗಮಂ | ಮೆರೆದಿರಲ್ಬಳಿಕೊಂದು ವಾಸರದೆ ಗೋಕಾವಿ | ಹರ ಶರಣ ಸಂತತಿಯು ಮೀ ಮಹಿಮನ ಕೇಳ್ದು ಮನದೊಳಗೆ ಸಂದೇಹದಿಂ || ನಿರುಪಾಧಿ ಜಂಗಮಗೆ ನಿಲುಕಡೆಯಿದೇಂ ಜಗದೆ | ವರ ವಿಶ್ವತೋ ರೂಪದಿಂದಿರುವ ಕಜ್ಜನಿದು | ಪರಿಣಾಮವಲ್ತೆಂದು ತಮ್ಮೊಳಗೆ ಮಾತಾಡುತ್ತಿರುತಿರ್ದರೊಂದೊಂದನು ||೧||

ಪರಮವರ ವೀರಶೈವದ ಮಾರ್ಗಸಮ್ಮತವೆ? | ಪರಿಕಿಪಡೆ ಷಟ್ಸ್ಥಲ ಬ್ರಹ್ಮರಿಗಿದೇಂ ಹಿತವೆ! | ತುರುಗಳಂ ಕರುಗಳಂ ಕುರಿಹಿಂಡುಗಳ ಕಾಯ್ದು ಕಂಬಳಿಯ ಪೊದ್ದಿರ್ಪುದು || ಚರಕುಲೋತ್ತಮರಿಂಗೆ ತಾನುಚಿತವಲ್ಲೆಂದು | ಶರಣ ಸಂತತಿ ಕೂಡಿ ಸರ್ವ ಮಯನಿಂಗಿತವ- | ನರಿಯದಲೆ ತಮತಮಗೆ ಮಾತಾಡುತಾಕ್ಷಣದೊಳನುಭವದ ಮಂಟಪದೊಳು ||೨||

ಒಂದೊಂದು ಮಾತುಗಳನಾಡುತ್ತೆ ಮನದೊಳಗೆ | ಸಂದೇಹಗೊಳುತಿರಲು | ಸರ್ವಾತ್ಮಗತನಿತ್ತ | ಸಂದೆಗದ ವರಶರಣಂ "ಪಾಲಿಸುವೆನೆಂದು ತನ್ನೊಳಗೆ ತಾನರಿಯುತೆ || ಮಂದಹಸಿತಂಗೆಯ್ಯುತರ ಭಾವಿಕ್ಷೇತ್ರದಿಂ | ಬಂದು ತತ್ಪುರದ ಮುಂದೆಸೆಯಲ್ಲಿ ನಿಂದಿರಲು | ಸಂದ ಘಟಪಾನದಿಯು ಪರಿಪೂರ್ಣ ಭಾವದಿಂ ಮೆರೆದಿರ್ದುದಾ ವೇಳೆಯೊಳ್ ||೩||

ದಂಡೆಯಿಂ ಪೊರಸೂಸಿ ಘನಜಲಂ ಬಿಡದೆ ಭೂ-| ಮಂಡಲದೆ ಪರಿಕಲಿಸಿ ಪರಿಯುತ್ತಿರೆ ಪರಮದುರ- | ದುಂಡಿ ಜಂಗಮನಿರವ ಕಂಡು ನದ್ಯಂಗನೆಯು ಭಯಭಕ್ತಿಯಂ ತೋರುತೆ || ದಿಂಡುಗೆಡೆದಂತಿರ್ದ ತೆರೆಗೈಗಳಂ ಮುಗಿದು | ಮಂಡಿತೋತ್ತಮನಡಿಗೆ ಬಿನ್ನೈಸೆ ಕರುಣದಿಂ | ಮಂಡಿಸಿದನೆಂಬಂತೆ ಸರ್ವರುಂ ನೋಡುತಿರಲಾ ಮಹಿಮನಾ ನದಿಯೊಳು ||೪||

ವಿರುಪ ವ್ಯಾಘ್ರಾ ಜಿನದ ಪರಿಯಂತೆ ಕಂಗೊಳಿಸು | ತಿರುವ ತತ್ಕಂಬಲಾಸನದಲ್ಲಿ ಮಂಡಿಸುತೆ । ಕರಿಕಮಂಡಲು ವೇತ್ರವರ ಭಸ್ಮರುದ್ರಾಕ್ಷಿ ಮಾಲಾಳಿಗಳನೆಸೆಯುತೆ | ತೊರೆಯಲ್ಲಿ ಮನದೊಳಗೆ ಪಂಚಾಕ್ಷರೀ ಮನುವ | ಸ್ಮರಿಸುತ್ತೆ ಬರುತಿರ್ದ ನಿಳಿಯರಿಯೆ ಜಂಗಮಂ || ಧರಣಿಯೊಳಗಿದು ಚಿತ್ರ ಮರಿಯಲ್ಕ ಸಾಧ್ಯಮತ್ಯಾನಂದದಂ ಮಹಿಮೆಯು ||೫||

ಇಂತತುಳ-ನದ್ಯುದಕವನ್ನುಳಿದು ತತ್ಪುರಕೆ | ಕಂತುಹರ-ನಿಜಾರ್ಚಿತ ಶಿವಯೋಗಿ ನಡೆದಲ್ಲಿ | ಸಂತಸದೆ ಪ್ರಮಥ ಗೀತಾವಳಿಯ ಪೇಳುತ್ತೆ ಕಾಳಿ ತಿರ್ಪ ಶಿವಶರಣರ || ಸಂತತಿಯು ಮಂಟಪಕೆ ನಿಜರೂಪದಿಂ ಬರಲು | ಮುಂತಿರ್ದ ಮಹಿಮನಂ ಕಂಡೆರಗಿ ತವುತವುಗೆ | ಭ್ರಾಂತಿಯಿಂ ಬೆರಗಾಗುತಿಲೆ ದೇವದೇವೇಶ ದುರದುಂಡಿ ಶಿವಜಂಗಮಾ ||೬||

ಕೀರ್ತಿಸುವಪರಿದೆಂದು ಕರಕಂಜಮಂ ಮುಗಿದು । ಮೂರ್ತಿಗೊಳಿಸುತ್ತಲ್ಲಿ ಘನನದಿಯು ದಾಂಟಿರ್ದ | ವಾರ್ತೆಯಂ ಕೇಳುತ್ತೆ ಗುಣದೊಳಭಿಮಾನಿ | ಶಿವಗಣದೊಳಭಿಮಾನಿ, ಶಿವನಂ || ಸ್ಫೂರ್ತಿಯಿಂ ಪೂಜಿಸುವದಾಭಿಮಲಕಾಖ್ಯನುಂ । ಪ್ರೀತಿಯಿಂ ಗುರು-ಲಿಂಗ-ಜಂಗಮಕೆ ಬಳುವಳಿಯ । ಕೂರ್ತೀವ ಬಳ್ಳೊಳ್ಳಿ ಶಿವಶರಣ ಮುಖ್ಯ ವ್ಯಾಡಭಕ್ತಾಗ್ರರಾಕ್ಷಣದೊಳು ||೭||

ಪೆರ್ದೊರೆಯ ದಂಡೆಯಲಿ ನಾವೆಗಳು ಕಟ್ಟಾಗಿ । ಮೂರ್ದಿನ ಮದಾಯ್ತೀಗ ತಡೆದಿಹುದು ಸರ್ವರ- । ನ್ನಾದಿನದ ಪರ್ಯಂತರಂ ಮಾರ್ಗವಿಲೆನುತೆ ಮಾತಾಡುತಿರ್ಪರಾರ್ಯರ್ । ತೋರ್ದ್ದ ನಿಜರೂಪಮಂ ಗಂಗೆಯ ಕುಮಾರಕರ | ಮೀರ್ದ ಬಂದಿರ್ದದೀ|ಜಗದೊಳಗ-ಪೂರ್ವಮಿದು | ಸಾರ್ದಿಲ್ಲಿ ಶರಣಾಳಿ-ಸಂದೇಹವಂ ಬಿಡಿಸಲೋಸುಗದೆ ನೀಂ ದಯದಲಿ ||೮||

ಬಂದಿರ್ದ ಕಜ್ಜಮಿದು ಗುಣಮಾಯ್ತು ಭಾವಿಪಡೆ । ಸಂದೇಹವೇಂ ದೇವ ಜಗದೊಳಗೆ ಕೂರ್ತಿರ್ಪ । ಸುಂದರಿಯ ಮಂದಿರಕೆ ಮನದಾಣ್ಮನೇ ಬಂದರೇಂ ಕುಂದು ತಾನಪ್ಪುದೇ? । ಕುಂದುಗೊರಲನ ರೂಪವೇಯಾದ ಜಂಗಮಕೆ । ಕುಂದದೇಂ? ಭಕ್ತಾಂಗ ಭೂಮಿಯೊಳ್ಸನ್ನಾಥ । ಮಂಚಮತಿಗಳು ನಾವು ಮರೆಯೆಮ್ಮ ಕರ್ಮವಂ ಮೆರೆಸಿನ್ನ ಧರ್ಮಂಗಳಂ ||೯||

ಇನಿತೆಲ್ಲವಂ ಕಂಡು ಪಾರಾಶರಂ ತನ್ನ । ವಿನುತ ಶಾರ್ದೂಲಾಜಿನ ಕರದಂಡಾದಿಗಳ- | ನನುಗೊಳಿಸುತಾ ನದಿಯ ತೋಷದಿಂ ಜಗಮರಿಯೆ

ದಾಂಟುತ್ತೆ ಭರದಿಂದಲಾ॥ ಮುನಿಪತಿಯು ಶಿವಭಕ್ತಿಯಿಂ ಮೆರೆದನೆಂದೆನ್ನು । ವನು ಪಮದ ಕಥನವನು ಕೇಳ್ದು ಬಲ್ಲೆವದೀಗ । ಘನದಯಾನಿಧಿ-ಪರಮ ಶಿವಲಿಂಗ ಜಂಗಮನೆ ಪ್ರತ್ಯಕ್ಷಮಂ ಕಂಡೆವು ॥೧೦॥

ಅದನೀಕ್ಷಿಸುತೆ ಭಯುಗೊಂಡು ಮನದೊಳ್ನೊಂದು । ಮುದುವಳಿದು ಭಕ್ತ-ವರ್ಗವ ಬಿಟ್ಟು ಕೈಮುಗಿದು । ಮದನಾರಿ ಶಿವಲಿಂಗ ಜಂಗಮೋ ತ್ರಮ ನಿಮಗೆ ಮೃದುವತ್ತಿ ಕಾಯಾರ್ಪಣಂ ॥ ಒದಗಿರ್ದ ಮರವಿನಿಂ ಮಾಡಿರ್ದ ತಪ್ಪುಗಳ । ಹೃದಯಾಂತರಾಳದೊಳ್ತರದೀಗ ಪಾಲಿಪುದು । ಪದುಳದಿಂದೆನುತೆರಗಿ ಬಿನ್ನೈಸೆ ದುರದುಂಡಿ ಜಂಗಮನು ನಗುತೆ ಮತ್ತಂ ॥೧೧॥

ನೂನಂ ಹಸಿವು ನೀಗಿತೇನುಂಟು ಸಂದೇಹ-। ಮಾನಂದವಾಯ್ತೆಂದು ನಲಿದನಾಯತಿವರನು । ಮಾಸಂದನಾರಿ ದುರದುಂಡಿ ಜಂಗಮನಿಂತುಘನ ಮಹಿಮೆಗಳ ತೋರುತೆ । ತಾನೊಂದು ದಿನದಲ್ಲಿ ಗೋಪಾಲ ಪಟ್ಟಣದ । ಶ್ರೀನಂದನಾಂತರದೆ ಶಿವಯೋಗದಿಂದಿರ್ದ-। ನೇನೆಂದು ವರ್ಣಿಪೆನು ಘಟಪಾನದೀ ತೀರ ತಳದೊಳಗೆ ಕಂಗೊಳಿಸುತೆ ॥೧೨॥

ಇಂದುಮುಖಿ ಕೇಳೆಂದು ಕೈಲಾಸ ಮಂದಿರದೆ ।
ನಂದಿ ಮುಖ್ಯ ಪ್ರಮಥರಾಲಿಸುತಿರಲ್ಮುದದೊ-।
ಳಿಂದುಶೇಖರನು ತತ್ಶಿವಲಿಂಗ ಮಹಿಮೆಯಂ
ಮನನೊಲ್ದು ತಿಳುಹುತಿರ್ದಂ ॥೧೩॥

ಇದು ಬಸವ ಸುಕುಮಾರನತಿ ಭಕ್ತಿಯಿಂ ಗೈದ ।
ಸದಮಲದ ಶಿವಲಿಂಗ ಜಂಗಮಂ ವಿಲಾಸವಿದು ॥೧೪॥

ಇತಿ ನಿರುಪಾದಿ ಜಂಗಮ ಮಹಿಮೆಯಂ ॥

# —: ಸದ್ಭಕ್ತಿ :—

( ಲೇಖಕ:— ಶ್ರೀ ಸಿ. ನಾ. ಮಹಾಂತಣ್ಣವರ ಹೂಸೂರ )

ಪರಮ ಸುಜ್ಞಾನಿಗಳಾದ ವೀರಶೈವ ಸದ್ಭಕ್ತರು ಮಾರ್ಗಕ್ರಿಯೆ ಮೀರಿದ ಕ್ರಿಯೆಗಳಿಂದ ಅಂತಜ್ಞಾನದ ಬಹಿಃಕ್ರಿಯೆಗಳೊಂದಾಗಿ ಆಚರಿಸಿದ ಸದಾಚಾರ ಸದ್ಭಕ್ತಿಯ ಸಾಚರಣೆಯೆಂತೆಂದೊಡೆ, ಗುರುಲಿಂಗ ಜಂಗಮದಲ್ಲಿ ವಂಚನೆಯಿಲ್ಲದೆ, ಸಹಜ ಭಾವದಿಂದ ಒಳ ಹೊರಗೆ ಒಂದೇ ಆಗಿ, ತನಗೆ ಶಿವಾಗಮಂಗಳೇ ಧರ್ಮಶಾಸ್ತ್ರಂಗಳಾಗಿ, ಅಂತರಂಗ ಬಹಿರಂಗವ ಜ್ಞಾನ ಕ್ರಿಯೆಗಳಲ್ಲಿ ಗುರುಲಿಂಗ ಜಂಗಮವೇ ಪ್ರಾಣವಾಗಿ, ಗುರುಭಕ್ತಿ, ಲಿಂಗ ಭಕ್ತಿ, ಜಂಗಮಭಕ್ತಿಯಲ್ಲಿ ಅರ್ಥ ಪ್ರಾಣಾಭಿಮಾನವನೊಪ್ಪಿಸಿ, ತನುಮನ ಧನವನು ನಿರ್ವಂಚಕತ್ವದಿ ಕೊಟ್ಟು ಕೊಳ್ಳುವ ಸೂಕ್ಷ್ಮ ಸಕೀಲವನು ಗುರುಮುಖದಿಂದ ಅರಿದು ಆದ್ಯರ ಆಚರಣೆಯಂತೆ ನಡೆಗಲಿತು ಡಾಂಭಿಕತ್ವವಿಲ್ಲದೆ, ಸಹಜ ಭಕ್ತರಾಗಿ ಇದ್ದಕ್ಕಿದ್ದಹಾಗೆ ಆಚರಿಸುವದೇ ಸದ್ಭಕ್ತಿಯೆನಿಸುವದು.

" ಕಿಂಕುರ್ವಾಣಮುಂಬಲಿದು ಗುರುಲಿಂಗಮುಖಂ ಚರಲಿಂಗವೆಂದು ನಿ: ।
ಶ್ಶಂಕತೆಯಿಂ ಸುವರ್ಣವಸನಾನ್ನ ಪುರಸ್ಸರ ವಸ್ತು ವಾಹನಾ ॥
ಲಂಕರಣಂಗಳಂ ಸಲೆ ಸಮರ್ಪಿಸಿ ವೀರಶಿವಾಗಮೋಕ್ತ ಚಿ
ಹ್ನಾಂಕಿತರ್ಗೆ ಮಣಿವಂತುಟೆ ಭಕ್ತಿಪದಂ ಶಿವಾಧವಾ ॥ ೧ ॥

ಪರಮ ಸುಜ್ಞಾನಿಯಾದ ಸದ್ಭಕ್ತನು ಇರುವಂಥ ಲೋಕವೇ ಶಿವ ಲೋಕವು- ಆ ಭಕ್ತನ ಹಿನ್ನೆರೆ ಮುನ್ನೆರೆಯಲ್ಲಿಪ್ಪವರೇ ಪ್ರಮಥಗಣಂಗಳು. ಆ ಸದ್ಭಕ್ತನ ಹಿತ್ತಿಲು ಅಂಗಳಗಳಲ್ಲಿಪ್ಪ ಜಾಲಿ ಬೊಬ್ಬುಲಿ ವೃಕ್ಷಗಳೇ ಕಲ್ಪ ವೃಕ್ಷಗಳು. ಆ ಭಕ್ತನಿರ್ದ ಕಲ್ಮರ·ಮಟ್ಟ ಬೆಟ್ಟ ಮೊರಡಿಗಳೇ ಅವಿಮುಕ್ತ ಕ್ಷೇತ್ರವು. ಆತನ ಅಂಗಣವೇ ವಾರಣಾಸಿ ಆತನ ಬಚ್ಚಲ ಹೊಂಡಗಳೇ ಪುಣ್ಯ ತೀರ್ಥಂಗಳು. ಆ ಭಕ್ತನ ಸತಿಯರೇ ಪಾರ್ವತಿ ದೇವಿಯರು. ಆತನ ಸುತರೇ ವೀರಭದ್ರ ಗಣನಾಯಕರು. ಆ ಭಕ್ತನೇ ಸಕಲ ಲೋಕದಲ್ಲಿ ಪೂಜ್ಯನಾಗಿಪ್ಪನು.

ಸದ್ಭಕ್ತಿಯು ಮಹಿಮಾತಿಶಯಕ್ಕೆ ಎಣೆಯಿಲ್ಲವಾಗಿ ಸಕಲ ಕ್ಷುದ್ರ ಪದಂಗಳೆಲ್ಲ ಭಕ್ತಿ ಸತ್ಪಥಕ್ಕೆ ಸಮುಬಾರವು. ಅಣಿಮಾದ್ಯಷ್ಟ ಮಹಾ ಸಿದ್ಧಿಗಳೆಲ್ಲವು ಆ ಭಕ್ತನ ಮಹಾದ್ವಾರವನ್ನು ಕಾಯ್ದುಕೊಂಡಿರುವವು.

ಸದ್ಭಕ್ತನ ಸ್ಥಿತಿಯು ಲೋಕದ ಕರ್ಮಿಗಳಂತಲ್ಲ, ಹೇಗಂದರೆ "ನಯೋಗೋ ನತಪೋ ನಾರ್ಚಾ ನೋ ಕ್ರಮಃ ಕೋಪಿ ನವಿದ್ಯತೇ । ಅಮಾಯ ಶಿವಮಾರ್ಗೇಸ್ಮಿನ್ ಭಕ್ತಿರೇಕಾ ಪ್ರದರ್ಶ್ಯತೇ" ಎಂಬ ಪ್ರಮಾಣದಂತೆ, ಆ ಭಕ್ತನು ಭಿನ್ನ ಕರ್ಮಿಗಳಂತೆ ಯೋಗ ತಪ ಅರ್ಚನೆ ಮೊದಲಾದ ಕರ್ಮಗಳನ್ನು ಭಿನ್ನವಿಟ್ಟಾಚರಿಸದೆ, ಶಿವಾದ್ವೈತ ಭಕ್ತಿಯುಕ್ತನಾಗಿ, ನಿತ್ಯ ನಿರ್ಮಲನಾಗಿ, ಸತ್ಯವಾಚಕನಾಗಿ ಪರಮಾರೂಢನಾಗಿ ತಾನೆಂಬುದಿಲ್ಲದೆ ಏನೆಂಬುದಿಲ್ಲದೆ, ಶಿವಾಜ್ಞೆಯೆಂದು ಸಕಲ ಕಾರ್ಯಗಳಲ್ಲಿ ಶಿವಜ್ಞಾನ ಮುಂದುಗೊಂಡು ಭೃತ್ಯತ್ವದಿಂದಿದ್ದರೂ ಕರ್ತನಾಗಿ ತೋರುವಂತೆ, ಸರ್ವವೂ ಶಿವಮಯವಾಗಿರ್ಪನು ಹೇಗೆಂದರೆ "ಶಿವನು ಶಿವಾರ್ಚನೈಕರತನಾಗಿರಲೋ ಸುಗಮಾತ್ಮಲೋಕದಿಂ । ದವತರಿಸಿ ಸ್ವಕೀಯ ಘನಲೀಲೆಯೊಳೊಯ್ಯನೆ ಮಾನುಷಮಪ್ಪ ವಿಮಳ ವೇಷಮಂ ಧರಿಸಿ ಸಕಲ ಜಗದ್ಧಿತೆ ದಿವ್ಯಚೇಷ್ಟೆಯಿಂದವೆ ಪರಿರಂಜಿಪಂ ಪರಮ ಭಕ್ತಿಮಯ ಸ್ಥಳದೊಳ್ ಶಿವಾಧವಾ" ॥ ಎಂದುಂಟಾಗಿ ಸದ್ಭಕ್ತನು ಶಿವರೂಪಿಯಾಗಿಪ್ಪನು.

ಸಂಕಲ್ಪಂಚ ವಿಕಲ್ಪಂಚ ವರ್ಜಯೇತ್ ಶಿವಭಕ್ತಿಮಾನ್ । ರಾಂಚನೇನ ಶರಣ್ಯಂಚ ಭಕ್ತಸ್ಥಲ ಸುಬುದ್ಧಿಮಾನ್ ॥ ಎಂಬ ಆಗಮ ಪ್ರಮಾಣವಿಹುದಾಗಿ, ಆ ಸದ್ಭಕ್ತಂಗೆ ಸಂಕಲ್ಪ ವಿಕಲ್ಪಂಗಳಿಲ್ಲ. ಹೇಗೆಂದರೆ—ನಾನು ಶಿವತತ್ವವಹುದೋ ಅಲ್ಲವೋ. ಎಂಬ ಸಂಕಲ್ಪ ವಿಕಲ್ಪಗಳಿಲ್ಲವು. ಅತನು ಶಿವನನಿಜಸ್ವರೂಪವಾದ ಲಾಂಛನವ ಕಂಡಲ್ಲಿ ಭೃತ್ಯಭಾವದಿಂದ ಶರಣಾಗತನಾಗುತ್ತಿಹನು. ಆದಾಗ್ಯೂ ಭೃತ್ಯಾಚಾರಿಯಲ್ಲ. ಎಂತೆಂದೊಡೆ, ಸ್ವಸ್ವರೂಪಕ್ಕೆ ತಾನೇ ಅರ್ಚಿಸಿಕೊಂಬ ಹಾಗೆ, ತನ್ನ ಅಂತರಂಗದ ಚಿತ್ಕಲಾ ಮೂರ್ತಿಯೇ ಬಹಿರಂಗದಲ್ಲಿ ನಿಜವಾಗಿ ನಿಂದುದಲಾ ಎಂದು ಗುರುಲಿಂಗ ಜಂಗಮದಲ್ಲಿ ಪೂಜಾ ವಂದನಾದಿ ಅರ್ಚನಾರ್ಪಣ ಕ್ರಿಯೆಯೊಳು ಭೃತ್ಯಾಚಾರಿ ದಾಸಭಾವದ ಸೇವೆಯಂತೆ ಮಾಡದೆ ಮತ್ತು ಅಹಂ ಬ್ರಹ್ಮವೆಂಬ ಅಹಂ ಭಾವವಿಲ್ಲದೆ,ಸ್ವಯಮೇವ ನಮಸ್ಕಾರವೆಂಬಂತೆ ತನ್ನ ತಾ ಅರ್ಚಿಸಿಕೊಂಬುವಹಾಗೆ ಅಭೇದ ಭಾವನೆಯಿಂದ ಆಚರಿಸುವ ಶರಣಂಗೆ ಸಕಲ

ಕ್ರಿಯಾ ಕರ್ಮಂಗಳಲ್ಲಿ ತಾನೆದುರೆಂಬ ಸಂಕಲ್ಪವಿಲ್ಲವಾಗಿ ತಾನೇ ಬ್ರಹ್ಮ ವೆಂದು ಅಹಂ ಭಾವದ ಹುಚ್ಚು ತಲೆಗೇರಿದ ಶುಷ್ಕ ವೇದಾಂತಿಗಳಂತೆ ವಾಗ್ಬ್ರಹ್ಮಿಯಾಗಿ ನಿತ್ಯ ಕ್ರಿಯಾರ್ಚನೆಗಳಂ ಬಿಟ್ಟು ಭ್ರಷ್ಟನಾಗದೆ, ಸಕಲ ಕ್ರಿಯಾ ಅರ್ಚನಾದಿಗಳಲ್ಲಿ ಸ್ವಸ್ವರೂಪ ಸಾಕ್ಷಾತ್ಕಾರವನೀಕ್ಷಿಸುತ್ತ ಅಭೇದ ಭಾವನೆಯಿಂದ ಇರುವವನು.

ಗುರುಲಿಂಗ ಜಂಗಮಕ್ಕೆ ಕೊಟ್ಟುಕೊಂಬಲ್ಲಿ ಪೂರ್ವ ಕ್ರಿಯೆ ಮೀರಿದ ಕ್ರಿಯೆಗಳೆಂಬ ಮೇಲು ವಿಚಾರದಲ್ಲಿ ಅಂತರ್ಜ್ಞಾನ, ಬಹಿಃಕ್ರಿಯೆಗಳಿಂದ ಸ್ವಲ್ಪಾದರೂ ಭೇದವಿಲ್ಲ. ಸಕಲ ಪದಾರ್ಥಗಳನ್ನು ಶಿವಾರ್ಪಿತಕ್ಕೆ ಸಲ್ಲಿಸು ವಲ್ಲಿ, ತನ್ನ ಪ್ರಸಾದವನ್ನು ಶಿವನಿಗೆ ಕೊಡುವಲ್ಲಿ ಶಿವಪ್ರಸಾದವ ತಾನು ಕೊಂಬಲ್ಲಿ, ತಾ ಬೇರೆ, ಶಿವಬೇರೆನ್ನದೆ ತಾನೆಂಬ ಇದಿರೆಂಬ ಸಂಕಲ್ಪವಿಲ್ಲದೆ ಪ್ರಸಾದ ಕಾಯಃಸ್ವರೂಪನಾಗಿ ವರ್ತಿಸುವನು.

ಇಂತಪ್ಪ ಜ್ಞಾನಮಯನಾದ ಪರಮ ಸದ್ಭಕ್ತನ ಮಹತ್ವಾತಿಶಯ ವನ್ನು ಎಷ್ಟು ವರ್ಣಿಸಬಹುದು ? "ಪರಮಾದ್ವೈತ ವಿಜ್ಞಾನ ನಿಷ್ಠಸ್ಯಾಸ್ಯ ಮಹಾತ್ಮನಃ । ಶುಶ್ರೂಷಾ ಕ್ರಿಯತೇ ಏನ ತತ್ಪಾದೌ ಮಮ ಮಸ್ತಕೇ" ಎಂದು ಪರಮ ರಹಸ್ಯದಲ್ಲಿ ಹೇಳುತ್ತಿಹುದಾಗಿ ಮತ್ತು "ಕರ್ಮಾವಲಂಬನಂ ॥ ವಯಂತು ಶಿವಭಕ್ತಾನಾಂ ಪಾದುಕಸ್ಯಾವಲಂಬನಂ" ಎಂಬೀ ಈಶ್ವರ ವಾಕ್ಯ ವುಂಟಾಗಿ, ಇಂತಪ್ಪ ಸದ್ಭಕ್ತನ ಚಾರಿತ್ರ್ಯಕ್ಕೆ ಮೂರು ಲೋಕದಲ್ಲಿಯೂ ಸಮಾನವಿಲ್ಲ

"ಪೂಜಕೋ ಬಹವಃಸಂತಿ, ಭಕ್ತಿ ಶತ ಸಹಸ್ರತಾ ॥ ಪ್ರಸಾದೇನೈವ ಪಾತ್ರಂತು ದ್ವಿತ್ರೇಣೈವ ಪಂಚಷಟ್ ॥ ಎಂಬ ಗ್ರಂಥಾರ್ಥಾನುಸಾರವಾಗಿ ಲೋಕದಲ್ಲಿ ಪರಮೇಶ್ವರನ ಪೂಜೆಮಾಡತಕ್ಕಂಥವರು ಬಹುಜನರುಂಟು, ಮತ್ತು ಭಕ್ತರೆನಿಸಿಕೊಂಬವರೂ ಕೋಟ್ಯವಧಿ ಇದ್ದವರುಂಟು. ಆದಾಗ್ಯೂ ಇವರೆಲ್ಲರು ಶಿವಪ್ರಸಾದಕ್ಕೆ ಯೋಗ್ಯರಲ್ಲ. ಇವರಲ್ಲಿ ಭೇದಭಾವನೆಯಾದ ಭಿನ್ನತ್ವವಿರುವದರಿಂದ ಶಿವಪ್ರಸನ್ನತ್ವವನ್ನು ಅವರು ಪಡೆಯಲರಿಯರು.

ಒಬ್ಬಾನೊಬ್ಬ ರಾಜಭೋಗವುಳ್ಳ ಸ್ತ್ರೀಯಳು ಸಕಲಾಭರಣಗಳಿಂದ ಅಲಂಕರಿಸಿಕೊಂಡು ನಿರ್ಮಲ ದರ್ಪಣವನ್ನು ಕೈಯಲ್ಲಿ ಹಿಡಿದುಕೊಂಡು ಆ ದರ್ಪಣವನ್ನು ನಿರೀಕ್ಷಿಸುತ್ತಿರಲು, ಆ ಸಮಯದಲ್ಲಿ ಆ ಸ್ತ್ರೀಯಳ ಬಳಿಯುಲ್ಲಿರ್ದವರೆಲ್ಲರಿಗೂ ತಿಳಿಯಬರುವದೇನಂದರೆ ಈ ಸ್ತ್ರೀಯಳು ದರ್ಪಣ ವನ್ನು ನೋಡುತ್ತಿಹಳೆಂದು ಕಾಣುವರಲ್ಲದೆ, ತನ್ನ ನೋಡುವಳೆಂದು ತಿಳಿ

ಯರು. ಆದರೆ ಆ ಸ್ತ್ರೀಯಳು ತನ್ನನ್ನೇ ನೋಡುವಳಲ್ಲದೆ, ಕನ್ನಡಿಯನ್ನು ನೋಡಳು. ಕನ್ನಡಿಯು ಕೈಗೆ ಬರುವವರೆಗೂ ಕನ್ನಡಿಯನ್ನು ನೋಡಬೇಕೆಂಬ ಭಾವವಿರುವದು. ಆ ದರ್ಪಣವು ಕೈಗೆ ಬಂದಾಕ್ಷಣವೇ ದರ್ಪಣದ ಭಾವ ಜಾರಿ ಸ್ವಸ್ವರೂಪದೊಳು ದೃಷ್ಟಿ ನಟ್ಟು. ತನ್ನ ಮುಖ, ಲಾವಣ್ಯ, ಹಾವಭಾವ, ವಿಲಾಸ ವಿಭ್ರಮಂಗಳನೆ ನೋಡುತ್ತ ಪರಿಣಾಮಿಸುತ್ತಿಹಳೆಂಬಹಾಗೆ, ಸದ್ಭಕ್ತರಾದ ಶಿವಶರಣರು ನಿಜವನರಿಯದೆ ಮುನ್ನ ಕ್ರಿಯೆಯೆಂಬ ಮಾಯಾಜಾಡ್ಯದಲ್ಲಿ ಸಿಲುಕರಲ್ಲದೆ, ನಿಜವನರಿತಬಳಿ, ಮಾಯಾರಹಿತರಾಗಿ, ಆನೆಯು ರಾಜ್ಯವೈಭವವಲ್ಲಿರ್ದರೂ ಕಾನನವನ್ನು ಲಕ್ಷವಿಟ್ಟಂತೆ ಶರಣರು ಸದ್ಭಕ್ತಿ ಪ್ರಯೋಜನವನ್ನು ಮುಂದುಗೊಂಡು ಸಂಸಾರದೊಳಗಿರ್ದು ಷಟ್ ಕೃಷಿ ಲೋಕ ವ್ಯವಹಾರದೊಳಗಿದ್ದರೂ ಮಾಯಾರಹಿತರಾಗಿರ್ಪರು.

ಸದ್ಭಕ್ತಿ ಚಾರಿತ್ರ್ಯಕ್ಕೆ ಭಿನ್ನ ಭಕ್ತಿಯೇ ಕೇಡು. ಹೇಗೆಂದರೆ— ಲೌಕಿಕರು ಕೃಷಿಯ ಮಾಡುವಲ್ಲಿ ಮೈಗಳ್ಳತನವು ಹೇಗೆ ದರಿದ್ರತ್ವಕ್ಕೆ ಮುಖ್ಯ ಕಾರಣವೋ ಹಾಗೆ ಈ ಪಾರಮಾರ್ಥ ಕೃಷಿಯಾದ ಸದ್ಭಕ್ತಿ ಚರಿತ್ರಕ್ಕೆ ಭಿನ್ನ ಭಕ್ತಿಯು ಸಲ್ಲದು. ಈ ಭಿನ್ನ ಭಕ್ತಿಯು ಭವಾಂತರಕ್ಕೆ ಕಾರಣವು. ಅದು ಕಾರಣ ಸದ್ಭಕ್ತರು ಭಿನ್ನತ್ವವನ್ನು ಬಿಟ್ಟು ಅಭಿನ್ನ ಕ್ರಿಯಾಚಾರದಿಂದಿರ್ದರೂ ಸತ್ಕ್ರಿಯೆಗಳಾದ ನಿತ್ಯ ಕ್ರಿಯೆಗಳನು ಬಿಡದೆ ಮಾಡುತ್ತಿರುವರು. "ದಿನದಿನದುಚಿತವೇಳೆಯೊಳುಪಚರಿಸುದು ನಿನಗೆ ಕುಳವೆಲೆ ಯೋಗಿ ನೀನೆ ಬಿಡದಿದನು." ಎಂದು ನಿಜಗುಣ ಶಿವಯೋಗಿಗಳ ವಾಕ್ಯವಿಹುದು. ಇದರಂತೆ ಅಭಿನ್ನ ಭಾವನೆಯಿಂದ ಸ್ವಯಮೇವ ಬ್ರಹ್ಮವಾಗಿ ಶಿವಲಿಂಗಾರ್ಚನಾಪೂರ್ಣ ಕ್ರಿಯೆಗಳಂ ಮಾಡುತ್ತಿದ್ದಾಗ್ಯಾದರೂ ಆತನ ಅಂತರಂಗವನರಿಯದ ಲೌಕಿಕರ ಕಣ್ಣಿಗೆ ಕರ್ಮಿಯಂತೆ ಕಾಣುತ್ತಿಹನು. ಆದಾಗ್ಯೂ ಆತನು ಕರ್ಮಿಯಲ್ಲವು, "ಅವ ಬಾಧೆಯನುಂಟುಮಾಡಬಹುದಖಿಳ ಭೋಗಾವಲಂಬನದೊಳಿರೆ ಶಿವಯೋಗಿಗೆ" ಎಂದು ನಿಜಗುಣರ ವಾಕ್ಯವಿಹುದು.

ಪಾರಮಾರ್ಥ ಕೃಷಿಕರಾದ ಸಹಜ ಸದ್ಭಕ್ತರಾಚರಣೆಯಾದ ಷಟ್ ಸ್ಥಲದ ವರ್ತನೆಯು ಎಂತೆಂದೊಡೆ— ಗುರುಲಿಂಗ ಜಂಗಮದಲ್ಲಿ ಭೇದವಿಲ್ಲದೆ, ತ್ರಿವಿಧ ಮೂರ್ತಿಗಳು ಒಂದೇ ಎಂದು ಗುರುಲಿಂಗದ ಮುಖವೇ ಜಂಗಮವೆಂದು ನಿಃಸಂಶಯದಿಂದ ಸುವರ್ಣವಸನಾನ್ನ ಮೊದಲಾದ ಸಮಸ್ತ

ಭೋಗ ಪದಾರ್ಥಗಳನ್ನೆಲ್ಲ ಸದ್ಭಕ್ತಿಪೂರ್ವಕದಿಂದ ಚೆನ್ನಾಗಿ ಸಮರ್ಪಿಸಿ ವೀರಶೈವಾಗಮಂಗಳಲ್ಲಿ ಹೇಳಿದ ಸದ್ವೀರ ಮಾಹೇಶ್ವರ ಕುರುಹಂ ಕಂಡು ಶರಣಾಗತನಾಗುವದೇ ಭಕ್ತಿಲಕ್ಷಣವು. ಆ ಆಚರಣೆಯಲ್ಲಿ ಆಚರಿಸುತಿಪ್ಪ ಸಹಜ ಸದ್ಭಕ್ತನಾಚರಣೆಯೇ ಭಕ್ತಸ್ಥಲವೆನಿಸುವದು.

ಈ ಭಕ್ತಸ್ಥಲವು ನಿಜವಾದಲ್ಲಿ ಆ ಸದ್ಭಕ್ತಗೆ ಮುಂದಿನ ಐದು ಸ್ಥಲಗಳು ತನ್ನಿಂದ ತಾನೇ ಸಾಧ್ಯವಾಗುವವು. "ಪರವಧುವಂ ಪರದ್ರವಿಣಮಂ ಪರಹಿಂಸೆಯುನ್ನೆದೆ ದೂರದಿಂ। ಪರಿಹರಿಸಿ ಸ್ವದೇಶಿಕ ನಿರೂಪಿತಮಪ್ಪ ಷಡರ್ಥ ಸಂಗ್ರಹಾ ॥ ಚರಣೆಯೊಳೇಕ ಲಿಂಗ ನಿಜನಿಷ್ಠೆ ಸಮಾಹಿತಮಾದಡಂತದೇ। ಪರಮ ಮಹೇಶ್ವರ ಸ್ಥಲದ ಲಕ್ಷಣವೃತ್ತಿ ಪದಂ ಶಿವಾಧವಾ॥" ಎಂಬ ಪದ್ಯದ ಅನುಸಾರವಾಗಿ, ಸಹಜ ಸದ್ಭಕ್ತರ ವರ್ತನೆಯಲ್ಲಿ ಪರಸತಿ, ಪರಾರ್ಥ ಪರಹಿಂಸೆಗಳಂ ಬಿಟ್ಟು, ಸದ್ಗುರುನಾಥನ ಉಪದೇಶ ಕ್ರಮದಂತೆ ಷಡರ್ಥ ಸಂಗ್ರಹಾಚರಣೆಯಲ್ಲಿ "ಏಕಮೂರ್ತಿ ಸ್ತ್ರಯೋಭಾಗಂ ಗುರು ಲಿಂಗಂತು ಜಂಗಮಂ । ಜಂಗಮಂ ಗುರುಲಿಂಗಂಚ ತ್ರಿವಿಧಂ ಲಿಂಗ ಮುಚ್ಯತೇ ॥" ಎಂಬಾಗಮ ಪ್ರಮಾಣದಂತೆ ಏಕಲಿಂಗ ನಿಜನಿಷ್ಠೆಯಿಂದ ಕೂಡಿದ ಭಕ್ತಸ್ಥಲಾಚರಣೆಯಲ್ಲಿ ಮಹೇಶ್ವರ ಸ್ಥಲವಡಗಿಪ್ಪುದು. ಸದ್ಭಕ್ತರಲ್ಲಿ ಅನ್ಯ ಸ್ತ್ರೀಯರ ವ್ಯಸನ, ಅನ್ಯ ದ್ರವ್ಯದ ಕಾಂಕ್ಷೆ ಅನ್ಯ ಪ್ರಾಣ ಹಿಂಸೆ, ಅನ್ಯದೈವದ ಭಜನೆಗಳಂ ತಿರಸ್ಕರಿಸುತ್ತ, ಸದ್ಗುಣಗಳಿಂದ ಲೋಕೋಪಕಾರಿಯಾಗಿ ವರ್ತಿಸಬೇಕೆಂಬಾಶೆಯುಂಟಾಗಿ, ಜಗದೋಪಕಾರಿಗಳಾಗುತ್ತ ದುಷ್ಟರಾದ ದುರ್ಜನರಂ ತಿರಸ್ಕರಿಸಿ, ಹಿಡಿದಾಚಾರವಂ ಬಿಡದೆ ನಡೆಯಿಸಬೇಕೆಂಬ ಛಲದ ನಿಷ್ಠೆಯಲ್ಲಿ ಪಂಚಾಚಾರವೇ ಪ್ರಾಣವಾಗಿ ವರ್ತಿಸುವ ವೀರಮಾಹೇಶ್ವರಾಚರ್ಯಾ ಸ್ಥಿತಿಯೇ ಮಹೇಶ್ವರ ಸ್ಥಲವೆನಿಸುವದು.

ಆ ಮಾಹೇಶ್ವರ ಸ್ಥಲದಲ್ಲಿ ಪ್ರಸಾದಿಸ್ಥಲವಡಗಿಪ್ಪುದು. ಹೇಗೆಂದರೆ— ಮಹೇಶ್ವರ ಸ್ಥಲದಾಚರಣೆಯು ನಿಜವಾಗಿ ಸಕಲ ಪದಾರ್ಥಗಳನ್ನು ಅಂತರಂಗ ಬಹಿರಂಗದಲ್ಲಿ ಜ್ಞಾನಕ್ರಿಯಾರೂಪ ಸಕಲ ಭೋಗೋಪಭೋಗಗಳನ್ನೆಲ್ಲ ಲಿಂಗವಿರಹಿತವಾಗಿ ಅಣುಮಾತ್ರವಾವರೂ ಕೊಳ್ಳದೆ, ಸಕಲವೆಲ್ಲವನು ಲಿಂಗಕ್ಕರ್ಪಿಸಿ, ಲಿಂಗ ಭೋಗೋಪಭೋಗಿಯಾಗಿರ್ದಲ್ಲಿ ಆ ಭಕ್ತನೇ ಅನಾದಿ ಪ್ರಸಾದಿಯೆನಿಸಿಕೊಂಬುವನು.

ಆ ಪ್ರಸಾದಿಯ ಸ್ಥಲದಲ್ಲಿ ಪ್ರಾಣಲಿಂಗಿಸ್ಥಲವಡಗಿಪ್ಪುದು. ಹೇಗೆಂದರೆ, "ಪರಿಪೂರ್ಣ ಪ್ರಸನ್ನೇತಿ" ಎಂದುಂಟಾಗಿ, ತಾನು ಪೂರ್ಣ ಪ್ರಸಾದ

ಕಾಯನಾದಲ್ಲಿ, ಲಿಂಗ ಬೇರೆ ತಾ ಬೇರೆಂಬ ಭಿನ್ನತ್ವವಿಲ್ಲ. ಸರ್ವಾಂಗ ಲಿಂಗಮಯವಾಗಿ, ವಾಯು ಪ್ರಾಣವಳಿದು, ಲಿಂಗಪ್ರಾಣವಾಗಿಪ್ಪಲ್ಲಿ ಆ ಭಕ್ತನೇ ಪ್ರಾಣಲಿಂಗಿಯೆನಿಸಿರ್ಪನು.

ಪ್ರಾಣಲಿಂಗಿ ಸ್ಥಲದಲ್ಲಿ ಶರಣಸ್ಥಲವಡಗಿಪ್ಪುದು. ಹೇಗೆಂದರೆ— ಪಂಚೇಂದ್ರಿಯ ಸುಖಭೋಗಗಳನ್ನೆಲ್ಲ ಲಿಂಗಕ್ಕೆ ಕೊಟ್ಟು ಭೋಗಿಸುವಲ್ಲಿ ಶರಣ ಸತಿ ಲಿಂಗ ಪತಿ ಭಾವದಿಂದ ನಿರವಂಚಕ ನಿರಭಿಮಾನದಿಂದ ಲಿಂಗ ಸಹ ಭೋಗದಲ್ಲಿ ತೆರೆಮರೆಯಿಲ್ಲದೆ ಪರಮ ಪತಿವ್ರತಾಂಗನೆಯು ತನ್ನಂಗ ಸುಖವನ್ನು ಪುರುಷಂಗಿತ್ತು, ಮಮಕಾರದಿಂದಪ್ಪಿದಲ್ಲಿ ನಿಜವಲ್ಲಭನು ಅಂಗ ಭೋಗದ ಸರ್ವ ಸುಖವು ತನಗುಪಭೋಗದಾನಂದವಾಗುವಂತೆ ಶರಣನ ಲಿಂಗಭೋಗೋಪಭೋಗದ ಪರಿ ಇಪ್ಪುದಾಗಿ, ಈ ರೀತಿಯಿಂದ ಸಕಲ ಸುಖ ಭೋಗಗಳನ್ನೆಲ್ಲ ಸರ್ವೇಂದ್ರಿಯ ಮುಖಗಳಿಂದ ವೀರಶೈವಾಗಮೋಚಿತ ಕ್ರಮದಿಂದ ಅರ್ಪಿಸುತ್ತ ಲಿಂಗದ ಸರ್ವಾನಂದವೇ ತನಗೆ ಪ್ರಸಾದ ಭೋಗವಾಗಿ ಸರ್ವಾಂಗ ಲಿಂಗಮಯನಾಗಿ ವರ್ತಿಸುವ ಭಕ್ತನೇ ಶರಣನೆನಿಸುವನು.

ಶರಣ ಸ್ಥಲದಲ್ಲಿ ಐಕ್ಯಸ್ಥಲವಡಗಿಪ್ಪುದು. ಹೇಗೆಂದರೆ, ತನಗವಸಾನ ಭೂಮಿಯೇ ಶ್ರೀಶಿವಲಿಂಗ. ಆ ಶಿವಲಿಂಗಕ್ಕವಸಾನ ಭೂಮಿಯೇ ತಾನಾಗಿ, ಸಕಲ ಪ್ರಪಂಚ ರಚನಾಕ್ರಿಯೆಯುಂ ನೆರೆಬಿಟ್ಟು ಅಷ್ಟವಿಧಾರ್ಚನ ಷೋಡಶೋಪಚಾರ ಕ್ರಿಯೆಗಳನೆಲ್ಲವ ಸಪ್ಪವ ಮಾಡಿ, ನಿರ್ಭಾವ ಸ್ವರೂಪನಾಗಿ ಶಿಖಿ ಕರ್ಪೂರ ಸಂಯೋಗದಂತೆ, ಸ್ವಯಂಜ್ಯೋತಿ ಸ್ವರೂಪನಾಗಿ, ಲಿಂಗದೊಳ್ ಬೆರೆದು ಲಿಂಗಾಂಗ ಸಾಮರಸ್ಯನಾಗಿರ್ಪಲ್ಲಿ ಆ ಭಕ್ತನೇ ಐಕ್ಯನಾಗಿರ್ಪನು.

ಈ ಷಟ್‌ಸ್ಥಲ ಜ್ಞಾನಪೂರ್ಣನಾದ ಸದ್ಭಕ್ತನ ಸಹಜ ಭಕ್ತಿಯ ನಿಲವ ತಿಳಿಯಬೇಕಾದರೆ, ಬಹು ಜನ್ಮಾರ್ಜಿತ ಪುಣ್ಯದಿಂದಲ್ಲದೆ ತಿಳಿಯದು. "ಏಕೇನ ಜನ್ಮ ಸಂಪ್ರಾಪ್ಯ ಕರ್ಮಜ್ಞಾನ ಸಮಾಧಿಭಿಃ । ನರಾಣಾಂ ಕ್ಷೀಣ ಪಾಪಾನಾಂ ಶಿವಭಕ್ತಿಃ ಪ್ರಜಾಯತೇ ॥ ಎಂಬದಾಗಿ ಮತ್ತು "ದುರ್ಲಭಂ ನರಜನ್ಮಾನಿ ವಿವೇಕ ಮತಿ ದುರ್ಲಭಂ ॥ ಶಿವಭಕ್ತಾನಾಂ ಜ್ಞಾನೀತ್ವೈ ಲೋಕ್ಯದುರ್ಲಭಂ ॥" ಎಂದುಂಟಾಗಿ, ಈ ಶಿವ ಸದ್ಭಕ್ತಿಯು ಪ್ರಾಪ್ತಿಸಬೇಕಾದರೆ ಬಹುಜನ್ಮದ ಸುಕೃತದಿಂದಲ್ಲದೆ ಪ್ರಾಪ್ತಿಸದು.

ಸದ್ಭಕ್ತರಾದವರು ಸತ್ಯಶುದ್ಧ ಕಾಯಕದಿಂದ ಮಾಡಿ ನೀಡಿ ಮುಕ್ತರಾಗಬೇಕು. ಈ ಸತ್ಯಶುದ್ಧ ಕಾಯಕವೇ ಕೈಲಾಸವೆಂದರಿಯದೆ, ಕೆಲವು ಕೆಲವು ಭಿನ್ನವ್ರತನೇಮಾಚಾರದಿಂದಾಚರಿಸಿ ಪೂರ್ಣ ಭಕ್ತಿಗೆ ವಿಲಕ್ಷಣರಾಗಿ, ಕೈಲಾಸಾದಿ ಚತುರ್ವಿಧ ಫಲಗಳ ಧರ್ಮಾಚಾರ ಪದಗಳಾದ ಧರ್ಮಾದಿ ಮೋಕ್ಷಾಂತಮಾದ ಚತುರ್ವಿಧ ಫಲಂಗಳ ಪಡೆವ ಭಿನ್ನ ಭ್ರಾಂತರಾಗಿದ್ದವರು ಕೈಲಾಸದಲ್ಲಿರ್ದರೂ ಭಿನ್ನ ಭವಿತ್ವವೇ ಮುಂದುಗೊಂಡ ಕಾರಣ ಆ ಕೈಲಾಸದಲ್ಲಿರ್ದರೂ ಶಿವನ ಸಾನ್ನಿಧ್ಯವಿಲ್ಲದ ಕಾರಣ ಭವಹಿಂಗದು. ಅದು ಹೇಗಂದರೆ, ಒಬ್ಬಾನೊಬ್ಬ ರಾಜನ ಪಟ್ಟಣದಲ್ಲಿ ಒಬ್ಬ ದರಿದ್ರನು ನೆಲೆಗೊಂಡಿದ್ದರೂ ರಾಜಬಹುಮಾನವಿಲ್ಲದೆ, ರಾಜಸಂಗಸಮರಸವಿಲ್ಲದೆ ದಾರಿದ್ರ್ಯವನನುಭವಿಸುತಲಿರ್ಪಂತೆ, ಆ ಷಟ್‌ಸ್ಥಲಜ್ಞಾನಹೀನರಾಗಿದ್ದವರು ಕೈಲಾಸದಲ್ಲಿರ್ದರೂ ನಿಜಸುಖಸಾಧ್ಯವಾಗದೆ ಭವದುಃಖಿಗಳಾಗಿಯೇ ಇರ್ಪರು.

ಷಟ್‌ಸ್ಥಲ ಜ್ಞಾನಸಂಬಂಧಮಾದ ಸದ್ಭಕ್ತಗಣಂಗಳು ಈ ಲೋಕದಲ್ಲಿರ್ದರೂ ಪರಶಿವನ ಸ್ವಯಾನಂದ ಮೂರ್ತಿಗಳು "ಭಾಸಿತೇ ರಾಜಪುತ್ರವತ್" ಎಂಬಂತೆ ರಾಜನಿಗೆ ಮಗನಾಗಿ ಪುಟ್ಟಿದಲ್ಲಿ ಲೋಕದ ಭಿನ್ನಾತ್ಮರಿಗೆ ರಾಜಭಯ ರಾಜಮಾನ್ಯಗಳುಂಟಲ್ಲದೆ, ರಾಜಕುಮಾರನಿಗೆ ರಾಜಭಯಾದಿಗಳುಂಟೇ? ಹಾಗೆ ಸದ್ಭಕ್ತರು ಶಿವನಿಗೆ ಸಲುಗೆಗರಾಗಿರುವದರಿಂದ ಮತ್ತು ಶಿವನಿಂ ಪುಟ್ಟಿ, ಮತ್ತು ಶಿವನಂ ಮುಟ್ಟಿದ ಕಾರಣ ದಾಸಿಯಂತೆ ಭಿನ್ನಕ್ರಿಯಾದಿಗಳ ಭಯವಿಲ್ಲದೆ ಸ್ವತಂತ್ರರಾಗಿ ಸ್ವಲೀಲಾನಂದ ಭಕ್ತಿಯನಾಚರಿಸುತ್ತಿಪ್ಪರು.

ಆ ಸದ್ಭಕ್ತನಿಪ್ಪ ಲೋಕವೇ ಕೈಲಾಸ. ಆತನಿರ್ದಲ್ಲಿರುವುದೇ ಸಾಲೋಕ್ಯ ಆತನ ಸಮೀಪದಲ್ಲಿರ್ದ ಸೇವಕರಾದವರೇ ಸಾಮೀಪ್ಯಪದಸ್ಥರು. ಆ ಭಕ್ತನ ಆಚರಣೆಯಂತೆ ಆಚರಣೆಯುಳ್ಳವರೇ ಸಾರೂಪ್ಯಪದಸ್ಥರು. ಆ ಸದ್ಭಕ್ತನ ಸಾಮರಸ್ಯಾನಂದ ಗೋಷ್ಠಿಯಲ್ಲಿಪ್ಪವರೇ ಸಾಯುಜ್ಯಪದಸ್ಥರು. ಇದನರಿಯದೆ ಧರ್ಮಾರ್ಥಕಾಮಾದಿಗಳಂ ಬಯಸಿ ಕರ್ಮನಿಷ್ಠರಾದವರು ಭವಿಗಳೆನಿಸುವರು. "ಕೈಲಾಸಾದಿ ಪದೇಷ್ವಾಶಾಯಸ್ಯ ಭವಿನೋ ಭವೇತ್ । ಭವಿಶ್ಚೈವ ಇದಂ ಸರ್ವಂ ತದ್ಗಣೋ ಭವಿನೋಗಣಾಃ" ॥ ಎಂದುಂಟಾಗಿ, ಧರ್ಮದಿಂದ ಅರ್ಥ, ಅರ್ಥ ಪ್ರಯೋಜನವಾದುದೇ ಕಾಮ, ಕಾಮದಲ್ಲಿ

ಜ್ಞಾನೋದಯದಿಂದ ಮೋಕ್ಷಾಪೇಕ್ಷೆ ಅದು ಈ ಚತುರ್ವಿಧ ಫಲಪದತ್ವಂಗಳ ನಿಚ್ಛೈಸದೆ ಶಿವಧರ್ಮದಿಂದಿರ್ಪುದೇ ಧರ್ಮ. ಆ ಶಿವಧರ್ಮಭಕ್ತಿಯಿಂದ ಪಾರಮಾರ್ಥ ಜ್ಞಾನಿಯಾಗಿಪ್ಪುದೇ ಅರ್ಥ ಮತ್ತು ಕಾಮಾದಿ ಅರಿಷಡ್ವರ್ಗಂಗಳಿಗೆ ವಿಲಕ್ಷಣ ಬ್ರಹ್ಮನಪ್ಪ ನಿಷ್ಕಾಮಿಯಾಗಿಪ್ಪೆನೆಂಬ ಅಪೇಕ್ಷೆಯೇ ಕಾಮ. ಸ್ವಸ್ವರೂಪ ಸಾಕ್ಷಾತ್ಕಾರದಿಂದ ಭಕ್ತನ ಸಾಮರಸ್ಯವೇ ಮೋಕ್ಷ. ಈ ಪ್ರಕಾರವಾದ ಆಚರಣೆಯಿಂದಿರ್ಪುದೇ ಸದ್ಭಕ್ತಿಯೆನಿಸುವದು.

ವ್ಯಷ್ಟಿ ಸಮಷ್ಟಿಗಳ ಭೇದಾಭೇದಗಳ ಮೀರಿದ, ಮಾರ್ಗಕ್ರಿಯೆ ಮೀರಿದ ಕ್ರಿಯೆಗಳನುಭವಿಸಿ, ಲಿಂಗಾಂಗಸಾಮರಸ್ಯದೊಳಗಿದ್ದ ಶ್ರೀ ಘನಮಹೇಶರು ಪರಮವಿರಕ್ತರಾಗಿ ಲೋಕೋಪಕಾರಿಗಳಾಗಿ "ಕೃಷಿದೀಪಿಕೆ" ಎಂಬ ಗ್ರಂಥವನು ರಚಿಸಿ, ಶರಣಗಣಂಗಳ ಹಾಗು ಭಕ್ತಗಣಂಗಳ ಹಿತಕ್ಕಾಗಿ ಆ ಕೃಷಿದೀಪಿಕೆಯಷ್ಟಯೇ ವೀರಶೈವ ಮಹಾಜ್ಞಾನದೀಪಿಕೆಯನ್ನು ರಚಿಸಿದ್ದೂ ಕೆಲವು ಹನೀಯರಿಗೆ ಗೊತ್ತಿರಬಹುದು. ಅವರು ವೀರಶೈವ ಷಟ್‌ಸ್ಥಲಾನುವರ್ತಿಗಳಾಗಿ ತಮಗಿದ್ದ ಪಾರಮಾರ್ಥ ಪ್ರಕಾಶಾನುಭಾವದ ಪ್ರಸಾದ ವಾಣಿಯು ಭಕ್ತಿರಸದ ಆಚರಣೆಯು ಶಿವಾನುಭಾವಿಗಳಿಗೆ ಅಂತರ್ಬಾಹ್ಯಗಳಲ್ಲಿ ಅಳವಡಲೆಂದು ಶಿವಾನುಭವ ಪತ್ರಿಕೆಯಲ್ಲಿ ಪ್ರಕಾಶಗೊಳಿಸಿದ್ದಾಗಿದೆ. ಅಂತಹ ಮಹಾತ್ಮರ ಮಹಾಪಾದವನ್ನು ಸ್ಮರಿಸಿ ಸದ್ಯದ ವಿಷಯ ಸಂಪೂರ್ತಿಗೊಳಿಸುವೆ.

ಊರ್ಧ್ವಾಮ್ನಾಯ ಗುರೂಪದೇಶ ಭವನಂ ಓಂಕಾರ ಸಿಂಹಾಸನಂ। ಶುದ್ಧಾಚಾರ ಸಮಸ್ತವೇದ ಮಥನಂ ಷಟ್‌ಚಕ್ರ ಸಂಚಾರಿಣಂ ॥ ಪಶ್ಚಾದ್ವೈತಸ್ಫುಲಿಂಗ ಜ್ಯೋತಿರಮಲಂ ಪೂರ್ಣ ಪ್ರಭಾಶೋಭಿತಂ। ಶಾಂತಂ ಸದ್ಗುರುಪಾದುಕಾಂ ಭಜ ಮನಶ್ಚೈತನ್ಯ ಚಂದ್ರೋದಯೆ ॥೧॥

ಕಂದ॥ ಕಡು ಬೆಡಗಿನ ಕಾಯಕದಿಂ।
ಪಡೆದಿಹ ಸದಮಲ ಪಡರ್ಥಸಾಹಿತದಿಂದಂ॥
ತಡೆಯುತೆ ಮಾಡಿದ ಪಾಕವ।
ಮೃಡಶರಣಂಗಿತ್ತು ಕೊಳ್ಳುವವನೇ ಭಕ್ತಂ ॥೧॥

ಭವದುಃಖಂಗಳ ಬಿಡಿಸುವ।
ಶಿವಸನ್ನಿಧಿಯಂ ಪಡೆಯುವ ಸನ್ಮಾರ್ಗಗಳಂ ॥

ಶಿವನವತಾರದ ಗುರುವಿಗೆ ।
ತವೆ ತನುಮನಧನ ಸವೆಸುದೆ ಭಕ್ತ್ಯಾಚಾರಂ ॥೨॥

ಭಕ್ತಿಯೆ ಮುಕ್ತಿಯ ಮೂಲಂ ।
ಭಕ್ತಿಯೇ ಸತ್ಕ್ರಿಯೆ ಸಕಲ ಸುಜ್ಞಾನಕ್ಕಂ ॥
ಭಕ್ತಿಯೆ ಶಕ್ತಿಯರೂಪೈ ।
ಭಕ್ತಿಯೆ ಪಂಚಪ್ರಸಾದ ಸ್ಥಾನುಭಾನಂ ॥೩॥ (ಸ್ಥಾನಂ)

ಲಿಂಗಾನಂದದೊಳಿರುತಿಹ ।
ಮಂಗಳಮಯ ಶಿವಶರಣರ ಪಾದವ ಪಿಡಿಯಲ್ ॥
ಲಿಂಗದ ಕರುಣಾರಸದಿಂ ।
ಕಂಗೊಳಿಸುವ ಭಕ್ತಿಭಾವ ಬಾರದೆ ಪೇಳೈ ॥೪॥

ಭಕ್ತಿಯು ಭವದಾಶೂಲಂ ।
ಭಕ್ತಿಯು ನಿಗಮಾಗಮಗಳ ಜ್ಞಾನದ ಫಲಂ ॥
ಭಕ್ತಿಯು ಪ್ರೇಮದ ಜಾಲಂ ।
ಭಕ್ತಿಯು ವರವೀರಶೈವ ಮತಾನುಕೂಲಂ ॥೫॥

# ಎಲ್ಲರವ ನಮ್ಮಣ್ಣ ಕಲ್ಯಾಣ ಬಸವಣ್ಣ.

ಎಲ್ಲರವ ನಮ್ಮಣ್ಣ ಕಲ್ಯಾಣ ಬಸವಣ್ಣ ||ಪ||
ಎಲ್ಲರೆದೆಗಳ ತುಂಬಿ ತುಳುಕಿಸುವ ಹಿರಿಯಣ್ಣ ||ಅ||

ಬಾಗೇವಾಡಿಯೊಳುದಿಸಿ ಕಲ್ಯಾಣದೊಳು ನೆಲಸಿ
ತ್ಯಾಗ ಜೀವನಕಾಗಿ ನೀಲಾಂಬಿಕೆಯ ವರಿಸಿ
ಲೋಕ ಜನ ಹಿತಕಾಗಿ ಬಿಜ್ಜಳನಿಗಾಳಾಗಿ
ಭಕುತಿ ಭಂಡಾರವನು ಒಡೆದನದನೆಲ್ಲರಿಗೆ ||೧||

ವಿಶ್ವಮಾನವ ಧರ್ಮ ರಾಜಕೀಯದೊಳೆಣೆದು
ಘೋಷಿಸಿದ ಕಾಯಕವ ಕೈಲಾಸವೆಂದೆನುತ
ಈ ಸಕಲ ಜನಮನಕೆ ಏಕ ದೇವನ ತೋರಿ
ಆ ಸಿರಿಯ ಕೈಲಾಸವಿಲ್ಲಿಳುಹ ಲೆಳಸಿದವ ||೨||

ಅನುಭವದ ಮಂಟಪದಿ ಜಾತಿ ಮತ ಪಂಥಗಳ-
ನೆಣಿಸದೊಂದೇ ಜಾತಿ ಮಾನವರು ನಾವೆಂದು
ಕೈನೆಗಹಿ ಬೋಧಿಸಿದ ವಿಶ್ವಾತ್ಮ ಭಾವವನು
ಮನುಜ ದೇವನು ನಮ್ಮ ಭಾಗ್ಯದಾ ಬಸವಣ್ಣ ||೩||

ನುಡಿದಂತೆ ನಡೆದವನು ನಡೆದಂತೆ ನುಡಿದವನು
ನಡೆ–ನುಡಿಗಳೊಂದಾಗಿ ಜೋಡಿಸಿದ ಜೀವನದಿ
ಕೂಡಲಸಂಗಯ್ಯಾ "ರಾಮೇಶ" ನೊಳು ಸೇರಿ
ಹೊಡವಿಯೊಳು ಬೆಳಗಿದನು ವರ ಭಕುತಿ ಜ್ಯೋತಿಯನು ||೪||

—ಶ್ರೀ. ಜೋಳದರಾಶಿ ಕೆ. ದೊಡ್ಡನಗೌಡರು

# ರಾಮರಾಜ್ಯ.

[ಲೇಖಕರುಃ- ಶ್ರೀಯುತ ಭೀ. ಶ್ರೀ. ಕುಲಕರ್ಣಿ, ವಿಜಾಪುರ.]



ನಮ್ಮ ಭರತಖಂಡವು ಅನೇಕ ಶತಮಾನಗಳಿಂದಲೂ ವೈಭವದಿಂದ ಮೆರೆದ ದೇಶವಾಗಿದೆ. ನಮ್ಮ ದೇಶದ ಸಂಪತ್ತನ್ನು ಮತ್ತು ಜನತೆಯ ಅಜ್ಞಾನವನ್ನು ಕಂಡು ಯಾರು ಅಪಹರಣಮಾಡಲಿಕ್ಕಿಲ್ಲ ? ಅನೇಕ ಜನ ಪರ ರಾಜರು ನಮ್ಮ ದೇಶದ ಸಂಪತ್ತನ್ನು ದೋಚಿಕೊಂಡು ತೆರಳಿದರು. ಹಾಗು ಹಲವು ಜನ ರಾಜರು ವೈಭವ ಸಂಪತ್ತಿನಿಂದಲೂ, ಸೃಷ್ಟಿಸೌಂದರ್ಯದಿಂದಲೂ ವೈಭವಶಿಖರಕ್ಕೇರಿದಂತಹ ನಮ್ಮ ದೇಶವನ್ನು ಕಂಡು ಸ್ವರ್ಗಸುಖವನ್ನು ಸವಿದಿದ್ದಾರೆ. ಆ ಕಾಲದಲ್ಲಿ ರಾಜರೇದರೆ ಬಹುಶಃ ವಿಲಾಸಿಗಳಾದ ರಾಜರೇ ಬಹುಜನರಾಗಿರುವರೆಂಬುದು ಹಿಂದಿನ ಇತಿಹಾಸಗಳಿಂದ ತಿಳಿದುಬರುವದು. ಇದೆಲ್ಲವೂ ಪ್ರಜೆಗಳ ಅಜ್ಞಾನತನದಿಂದಲೇ. ನಮ್ಮ ಅಜ್ಞಾನವನ್ನು ತಿಳಿದು ಅಂದಿನ ರಾಜರಲ್ಲಿ ಬಹುಜನ ರಾಜರು ಹೀಗೆ ವಿಲಾಸದಿಂದ ವರ್ತಿಸಿದ್ದಾರೆ. ಅವರು ಮಾತ್ರ ರಾಜರೆಂದು ಯಾರೂ ತಿಳಿಯತಕ್ಕದ್ದಲ್ಲ.

ರಾಜರೆಂದರೆ ವಿಲಾಸದಿಂದ ಕಾಲಕಳೆಯುವದಕ್ಕಲ್ಲ. ಪ್ರಜೆಗಳ ಹಿತಕ್ಕಾಗಿ ಕಷ್ಟ ಸಹಿಸಿ, ಅಡಳಿತವನ್ನು ಸುವ್ಯವಸ್ಥಿತವಾಗಿ ಸಾಗಿಸುವದಕ್ಕಾಗಿ. ಪ್ರಜೆಗಳೇ ರಾಷ್ಟ್ರದ ಆಧಾರ ಸ್ಥಂಬರು, ಪ್ರಜೆಗಳೇ ರಾಷ್ಟ್ರದ ಸಂಪತ್ತು, ಪ್ರಜೆಗಳೇ ಮಕ್ಕಳೆಂದು ತಿಳಿದುಕೊಳ್ಳುವದು ರಾಜರ ಕರ್ತವ್ಯ. ಇಂಥ ಅಮೌಲ್ಯವಾದ ರಾಷ್ಟ್ರದ ಸಂಪತ್ತು ಪ್ರಜೆಗಳಾದಮೇಲೆ ತಮ್ಮ ಅಮೌಲ್ಯತ್ವನರಿಯದೇ ಇದ್ದುದಕ್ಕೆ ಪ್ರಜೆಗಳೇ ಕಾರಣರು. ಏಕೆಂದರೆ ಒಕ್ಕಟ್ಟು ಎಂಬುದು ಹಿಂದಿನ ಕಾಲದಲ್ಲಿ ನಮ್ಮಲ್ಲಿ ಎನಿತೂ ಇಲ್ಲದೆ ಅಜ್ಞಾನದಲ್ಲಿದ್ದುದೇ ಇದಕ್ಕೆ ಕಾರಣವಾಗಿದೆ. ಹಾಗು ಅದು ಇಂದಿನವರೆಗೂ ನಮ್ಮಲ್ಲಿ ಕಂಡುಬರುತ್ತಿದೆ.

ಇಂತು ಅಜ್ಞಾನದಿಂದ ಕಾಲಹರಣಮಾಡುತ್ತಿರುವಾಗ ನಾವೆಲ್ಲರೂ ಒಟ್ಟಿಗೆ ಸೇರಿ, ಇದಕ್ಕೆ ಯಾವ ಉಪಾಯವಾದರೆ ನಮ್ಮ ಕಷ್ಟಗಳು ಹೋಗಲಾಗುವವು ಎಂಬುದನ್ನು ಕುರಿತು ವಿಚಾರಿಸಿ, ಒಕ್ಕಟ್ಟುತನವೇ ಎಲ್ಲದಕ್ಕೂ

ಮುಖ್ಯ ಮಾರ್ಗವೆಂದು ತಿಳಿದು ಆ ಒಕ್ಕಟ್ಟಿನಿಂದಲೇ ಹಲವು ಜನ ಹಿಂದೂ ರಾಜರು ಸಹ ರಾಜ್ಯವಾಳಿದರು. ಆದರೆ ರಾಜ್ಯಾಡಳಿತದಲ್ಲಿ ಅಷ್ಟೊಂದು ಸುಧಾರಣೆಯನ್ನು ಯಾವ ರಾಜಾಧಿರಾಜರೂ ಮಾಡಿರಲಿಲ್ಲ. ನಮ್ಮ ದೇಶದಲ್ಲಿ ಪ್ರಜೆಗಳ ಹಿತಕ್ಕಾಗಿ ಹಾಗೂ ತಾನಾದರೂ ಪ್ರಜೆಗಳ ಸಮಾನನಾಗಿ, ಪ್ರಜೆಗಳ ನುಡಿಯಂತೆ ನಡೆದು ಕಾಲಹರಣಮಾಡಿದ ರಾಜನೆಂದರೆ ಶ್ರೀರಾಮನೊರ್ವನೇ ಎಂದು ಹೆಮ್ಮೆಯಿಂದ ಹೇಳಬಹುದು. ಶ್ರೀರಾಮನು ರಾಜ್ಯವಾಳಿದುದು ಹಿಂದುಸ್ಥಾನದ ಒಂದು ವಿಶಿಷ್ಟ ರಾಜಕೀಯವೆಂದು ಹೇಳಬಹುದು. ಆದರೆ ಇಂದಿನ ಯುಗದಲ್ಲಿ ಅದು ಎಷ್ಟರಮಟ್ಟಿಗೂ ಸಾಧ್ಯವಾಗದೆ ಹೋಗಿದೆ.

ಶ್ರೀರಾಮನು ರಾಜ್ಯವಾಳುವಾಗಿನ ಕೆಲವೊಂದು ಉದಾಹರಣೆಗಳನ್ನು ಕೇಳಿದರೆ ಆತನ ರಾಜ್ಯಾಡಳಿತದ ಮರ್ಮವು ಹೊಳೆಯುವದು. ಆತನ ಒಂದೇ ಒಂದು ವಿಶಿಷ್ಟ ವಿಚಾರವಾವುದೆಂದರೆ "ಯಥಾ ರಾಜಾ ತಥಾ ಪ್ರಜಾ" ಇದುವೇ ಆತನ ಉನ್ನತಿಯ ಹಾಗು ರಾಷ್ಟ್ರದ ಉನ್ನತಿಯ ಉಚ್ಚ ವಿಚಾರ. ಶ್ರೀರಾಮನು ಪ್ರಜಾಭಕ್ತನಾಗಿ ಕಾಲಕಳೆದಿದ್ದಾನೆ ಅಂದಮೇಲೆ ಪ್ರಜೆಗಳ ಪ್ರೇಮ ರಾಜನಲ್ಲಿ ಒಡಮೂಡಿದುದು ಸೋಜಿಗವಲ್ಲ. ಅಂತೆಯೇ ಆ ಪ್ರಜಾಪ್ರೇಮವು ಇನ್ನೂವರೆಗೆ ಅಳಿಯದೆ ಉಳಿದಿದೆ. ಆತನನ್ನು ದೇವತಾ ಪುರುಷನೆಂದು ತಿಳಿದು ಆತನನ್ನು ಅಂದಿನಿಂದ ಇಂದಿನವರೆಗೂ ಪೂಜಿಸುತ್ತಿದೆ. ಆತನು ಪ್ರಜೆಗಳ ಸಮಾನನಾಗಿ ನಡೆದ ಅನೇಕ ಉದಾಹರಣೆಗಳಿವೆ. ಅವುಗಳಲ್ಲಿ ಒಂದು ಉದಾಹರಣೆಯನ್ನು ಇಲ್ಲಿ ಪಡೆಯಬಹುದು.

ಒಂದಾನೊಂದು ದಿನ ಶ್ರೀರಾಮನನ್ನು ಭೆಟ್ಟಿಯಾಗಲು ಒಬ್ಬ ಮಹಾ ಯತಿಗಳು ಬಂದರು. ಶ್ರೀರಾಮನು ಆ ಯತಿವರ್ಯರಿಗೆ ಆದರ ಸತ್ಕಾರಗಳಿಂದ ಕರೆದುಕೊಂಡು ತನ್ನ ಆಸನದಲ್ಲಿ ಕುಳ್ಳಿರಿಸಿ ಮಾತುಗಳನ್ನಾಡುತ್ತಿರಲು ಆ ಯತಿವರ್ಯನು ಶ್ರೀರಾಮನನ್ನು ಕುರಿತು– "ನಾನು ನಿಮ್ಮ ಕೂಡ ಕೆಲವು ವಿಚಾರಗಳನ್ನು ಮಾಡಬೇಕಾಗಿದೆ ಕಾರಣ ತಾವು ಮತ್ತು ನಾನು ಮಾತುಗಳನ್ನಾಡುವಾಗ್ಗೆ ಯಾರೂ ಇಲ್ಲಿ ಆಗಮಿಸದಂತೆ ದ್ವಾರಪಾಲಕನಿಗೆ ಅಪ್ಪಣೆ ಕೊಡಿ" ಎಂದೊಡನೆ ಶ್ರೀರಾಮನು ಸಮೀಪದಲ್ಲಿಯೇ ನಿಂತಿರುವ ತನ್ನ ಸಹೋದರನಾದ ಲಕ್ಷ್ಮಣನಿಗೆ ದ್ವಾರದಲ್ಲಿ ನಿಲ್ಲಲು ಹೇಳಿ, ಇತರ ಯಾರಿಗೂ ಒಳಗೆ ಪ್ರವೇಶವನ್ನೀಯದಿರಲು ಎಚ್ಚರಿಕೆಯನ್ನಿತ್ತು, ಆ ಮುನಿಗಳ ಕೂಡ ಮಾತನಾಡುತ್ತಿರಲು ಶ್ರೀರಾಮನ ಗುರುಗಳಾದ ವಶಿಷ್ಠಮುನಿಗಳು ಶ್ರೀರಾಮನನ್ನು ಕಾಣಲು ಒಳಗೆ ಪ್ರವೇಶಿಸಿದರು. ಲಕ್ಷ್ಮಣನು ಗುರುಗಳ ಆಗಮನ

ದಿಂದ ಸಂತುಷ್ಟನಾಗಿ ಹಾಗು ಗುರುಗಳ ಪ್ರವೇಶಕ್ಕೆ ತಡೆಯನ್ನುಂಟುಮಾಡುವದು ತರವಲ್ಲವೆಂದು ಸುಮ್ಮನಾದನು. ವಶಿಷ್ಠರು ಶ್ರೀರಾಮನು ಹಾಗು ಆ ಯತಿಗಳು ಕುಳಿತಲ್ಲಿಗೆ ಬರಲು, ಆ ಯತಿಯು ಸಿಟ್ಟಿನಿಂದ ಶ್ರೀರಾಮನನ್ನು ತೆಗಳಿದನು. ಅದೇ ವೇಳೆಯಲ್ಲಿ ಶ್ರೀರಾಮನು ಲಕ್ಷ್ಮಣನನ್ನು ಕುರಿತು ವಿಚಾರಿಸಲು ಲಕ್ಷ್ಮಣನು-"ಗುರುಗಳ ಪ್ರವೇಶಕ್ಕೆ ತಡೆಮಾಡುವರುಂಟೇ ? ಎಷ್ಟಾದರೂ ಅವರು ಗುರುಗಳಲ್ಲವೇ ? ಗುರುಗಳ ಪ್ರವೇಶಕ್ಕೆ ತಡೆಮಾಡಿದರೆ ಗುರುದ್ರೋಹ ಬಗೆದಂತಲ್ಲವೇ ?" ಎಂದು ನುಡಿಯಲು, ಶ್ರೀರಾಮನು-'ಗುರುಗಳಿರಲಿ, ರಾಜನಿರಲಿ. ಕಾಯುದೆಯು ಎಲ್ಲರಿಗೂ ಒಂದಲ್ಲವೇ ? ಅಪ್ಪಣೆ ಪಾಲಿಸದಿರುವ ನಿನಗೆ ಶಿಕ್ಷೆಯೇ ಯೋಗ್ಯವೆಂದು ಶಿಕ್ಷೆಯನ್ನೀಯಲು, ಲಕ್ಷ್ಮಣನು ಶಿಕ್ಷೆಯನ್ನು ಅನುಭೋಗಿಸಬೇಕಾಯಿತು. ಹೀಗೆ ತನ್ನ ರಾಜ್ಯಾಡಳಿತದಲ್ಲಲ್ಲದೆ ಗೃಹವಿಚಾರದಲ್ಲಿಯೂ ಕೂಡ ಪ್ರಜೆಗಳ ಅನುಮತಿಯಂತೆ ನಡೆದಿದ್ದನೆಂಬುದಕ್ಕೆ ತನ್ನ ಸತಿ ಸೀತಾದೇವಿಯನ್ನು ತ್ಯಜಿಸಿದ ಕಥೆಯಿಂದ ತಿಳಿದುಬರುವದು. ಬಾಗಿ ನಡೆದರೆ ಡೂಗನೆಂದೂ, ಸೆಟೆದು ನಡೆದರೆ ಗರ್ವವುಳ್ಳವನೆಂದೆನ್ನುವ ಜಗದ ಜನತೆಗೆ ಆದರ್ಶಪ್ರಿಯನಾದುದು ಬಹು ಆಶ್ಚರ್ಯಕರವಾದ ಸಂಗತಿ.

ಇಂದು ನಾವೆಲ್ಲರು ರಾಮರಾಜ್ಯದ ಸವಿಯನ್ನುಣ್ಣಬೇಕೆಂದು ಇಚ್ಛಿಸಿ ರಾಮರಾಜ್ಯವೆಂಬ ನಾಮಕರಣದಿಂದ ರಾಜ್ಯಾಡಳಿತಕ್ಕೆ ಮನ್ನಣೆ ಕೊಟ್ಟಿದ್ದೇವೆ. ಆದರೆ ಇಂದಿನ ರಾಮರಾಜ್ಯ ಸೋಗಿನ ರಾಮರಾಜ್ಯವಾಗಿದೆ. ನಮ್ಮ ದೇಶಿಗರೇ ಇದನ್ನು ಅರಿಯಬಹುದು. ಆದರೆ ಪರದೇಶಿಗರು ನಮ್ಮಲ್ಲಿಯ ಈ ದೊಡ್ಡಾಟದಲ್ಲಿಯ ಕಾಯದೆಗಳನ್ನು ಕೇಳಿ ಸಂತೋಷವನ್ನು ವ್ಯಕ್ತಮಾಡುವರು. ಇಂದು ಜನತೆ ಹಾಗು ಸರಕಾರದಲ್ಲಿ ಸಹಕಾರವಿಲ್ಲದಿರುವದು ಹಾಗು ಜನತೆಯ ಅಜ್ಞಾನತನ, ಹೆಮ್ಮೆ, ರಾಷ್ಟ್ರದಮೇಲಿನ ಪ್ರೇಮತ್ವವಿಲ್ಲದಿರುವನು, ವ್ಯಸನ ಮುಂತಾದವುಗಳು ರಾಮರಾಜ್ಯ ನಾಮಕ್ಕೆ ಕುಂದುತರುವಂತಾಗಿವೆ.

ಇಂದಿನ ನಮ್ಮ ರಾಜ್ಯಾಧಿಕಾರಿಗಳು ಒಮ್ಮೆಲೇ ಭಯಂಕರವಾದ ಕಾಯದೆಗಳನ್ನು ಅಮಲಿನಲ್ಲಿ ತಂದಿರುವರು. ಆದರೆ ಮುಂದಾಗುವ ಪರಿಣಾಮವೇನನ್ನೂ ಅವರು ಅರಿಯಲಿಲ್ಲ. ಎಲ್ಲಕ್ಕೂ ಮೊದಲು ಕೈಕೊಂಡ ವಿಷಯ ಮದ್ಯಪಾನದ ವಿಷಯವಾಗಿ. ಆದರೆ ಇದನ್ನು ಸರಕಾರವು ಸೂಕ್ಷ್ಮರೀತಿಯಿಂದ ಅರಿಯಬಹುದಾಗಿತ್ತು. ಪಾನನಿರೋಧವೇನೋ ಹೆಸರಿಗೆ ಮಾತ್ರ ನಿಲ್ಲಿಸಿದ್ದಾಯಿತು. ಆದರೆ ಅದರ ಉತ್ಪತ್ತಿಯೇನೂ ಕಡಿಮೆಯಾಗಲಿಲ್ಲ. ನಮ್ಮ ಹಿಂದೂ ಸಮಾಜದಲ್ಲಿ ಕುಡುಕರಿಗೆ ಸಮಾಜದಲ್ಲಿ ಸ್ಥಾನಮಾನವಿದ್ದಿರಲಿಲ್ಲ.

ಇದಾದರೂ ಕುಡಿಯುವ ಮನುಷ್ಯನಿಗೆ ಭಯವಲ್ಲದೇ ಕುಡುಕರ ಸ್ಥಿತಿಯನ್ನು ಕಂಡಾದರೂ ತಿಳಿದುಕೊಂಡು ಕುಡಿಯುವ ಚಟಕ್ಕೆ ಸಿಲುಕದೇ ಇರುತ್ತಿದ್ದರು.

ಆದರೆ ಮುಖ್ಯವಾಗಿ ಯಾವುದನ್ನು ನಿರ್ಬಂಧ ಮಾಡಬೇಕಾಗಿತ್ತೋ ಅದನ್ನೇ ಸಂಕಾರವು ಮರೆತುಬಿಟ್ಟಿದೆ. ಅದಾವುದೆಂದರೆ ಕಲಿಯುಗದ ಕಾಮಧೇನುವಾದ "ಚಹಾ." ಎಲ್ಲಿ ನೋಡಿದಲ್ಲಿ ಚಹದ ಹೊಗೆ ಹಾರುತಿದೆ. ಹಿಂದಿನ ಕಾಲದಲ್ಲಿ ಎಲ್ಲಿನೋಡಿದಲ್ಲಿ ಹವಳ ಮುತ್ತುಗಳು ರಾಶಿ ರಾಶಿಯಾಗಿ ಪೇಟೆಯಲ್ಲಿ ಮಾರಾಟಕ್ಕೆ ಇರುತ್ತಿತ್ತಂತೆ. ಆದರೆ ಇಂದು ನಾವು ಹವಳು, ಮುತ್ತು, ವಜ್ರ, ವೈಢೂರ್ಯಗಳೆಂಬ ಶಬ್ದಗಳನ್ನೇ ಮಾತ್ರ ವರ್ಣನಾತ್ಮಕ ಕಾದಂಬರಿ ಮುಂತಾದ ಕಥೆಗಳಿಂದ ಓದಿ ತಿಳಿದುಕೊಂಡಿದ್ದೇವೆ. ಆದರೆ ಅವುಗಳು ಹೇಗಿದ್ದವೆಂಬುದನ್ನು ಹೇಳುವಜನರಿಲ್ಲ. ಅಂದಮೇಲೆ ಅಂಥ ಸಂಪತ್ತಿನ ಕಾಲ ಬಹು ಪುರಾತನಕಾಲವಾಗಿರಬಹುದು. ಆದರೆ ಇತ್ತಿತ್ತ ನಾವು ನೋಡುತ್ತಿದ್ದ ಬೆಳ್ಳಿ ಬಂಗಾರಗಳೂ ಮಾಯವಾಗಹತ್ತಿವೆ. ಏಕೆಂದರೆ ಅದರಮೇಲಿನ ಮಮತೆಯು ನಮ್ಮಲ್ಲಿಲ್ಲ.ಮೇಲಾಗಿ ಆಡಂಬರಕ್ಕೆ ಮೆಚ್ಚಿದ್ದೆವೆ. ನಮ್ಮಲ್ಲಿ ಬ್ರಿಟಿಶರ ಆಳಿಕೆಯ. ಕಾಲದಿಂದ ಅವರ ಆಡಂಬರದ ಉಡುಪು ತೊಡಪು ಮತ್ತು ಸ್ನೋ ಪಾವಡರ ಮುಂತಾದವುಗಳೇ ನಮ್ಮಲ್ಲಿ ಬೀಳವೆ ಇದಲ್ಲದೆ ಮೋಟಾರು ಹಾಗು ರೇಡಿಯೋ ಮುಂತಾದವುಗಳಿಗಾಗಿ ಜನರ ಮನ ಧಾವಿಸಿದೆ. ಹಾಗು ಅವುಗಳನ್ನು ಕೊಳ್ಳಲು ಧಾರಾಳವಾಗಿ ಹಣವನ್ನು ಸುರಿಸುತ್ತಿದ್ದಾರೆ. ಅಂದಮೇಲೆ ನಿಜವಾದ ಸಂಪತ್ತು ನಾಶವಾಗುವದಕ್ಕೆ ಸಂದೇಹವಿಲ್ಲ. ಇದರಿಂದ ತಿಳದುಬರುವದೇನೆಂದರೆ ನಮ್ಮ ದೇಶದ ಸಂಪತ್ತು ನಾಶವಾಗಿಲ್ಲ, ನಾವು ಆಡಂಬರಕ್ಕೆ ಸಿಲುಕಿ ನಾಶವಾಗಿದ್ದೇವೆ. ಇಂದು ಪ್ರತಿಯೊಬ್ಬ ಸ್ತ್ರೀಯರ ಮೈಮೇಲೆ ಮಂಗಲಸೂತ್ರವೆಂದು ಲಗ್ನಕಾಲದಲ್ಲಿ ವರನು ವಧುವಿಗೆ ಕಟ್ಟುವ ಮಾಂಗಲ್ಯದಹೊರತಾಗಿ ಇನ್ನುಳಿದ ವಸ್ತ್ರಾಭರಣಗಳನ್ನು ಕಾಣುವದು ವಿರಳವಾಗಿದೆ.

ಇಂದು ಸರ್ವರ ಜೀವವೂ ಚಹದಲ್ಲಿದೆ. ಯಾರಾದರೂ ಮಿತ್ರರನ್ನಾಗಿ ಮಾಡಿಕೊಳ್ಳಬೇಕಾದರೆ ಇಲ್ಲವೆ ಯಾವದಾದರೊಂದು ಮಾತಿನ ಚರ್ಚೆಗಾಗಿ ಮೊದಲು ಚಹಾಮಂದಿರಕ್ಕೇ ಹೋಗಬೇಕು. ಯಾರನ್ನಾದರೂ ಮೊಸಗೊಳಿಸಬೇಕಾದರೆ ಅವರನ್ನು ಕರೆದುಕೊಂಡು ಚಹಾಮಂದಿರಕ್ಕೇ ಹೋಗ

ಬೇಕು. ಚಹಾಮಂದಿರವೇಕೆ ಮನೆಮಾರು ಕೊಂಪೆಗಳಲ್ಲಿಯೂ ಇಂದು ಚಹದ ಮಡಿಕೆಗಳು ಉರಿಯುವ ಒಲೆಗಳಮೇಲೆ ಕುದಿಯುತ್ತಿವೆ. ಅದರಾತಿಥ್ಯಕ್ಕಾಗಿ ಚಹಾ. ಮಂತ್ರತಂತ್ರಗಳಿಗಾಗಿ ಚಹಾ. ಮದುವೆ ಮುಂಜಿಗಳಿಗಾಗಿ ಚಹಾ. ವ್ಯಾಪಾರಿವರ್ಗಕ್ಕೆ ಲಾಭಮಾಡಿಕೊಡುವದು ಈ ಚಹವೇ. ಅಂದಮೇಲೆ ಈ ಚಹವು ಕಲಿಯುಗದ ಕಾಮದೇನುವಲ್ಲದೆ ಇನ್ನೇನು ? ಯಾವನಾದರೊಬ್ಬ ವ್ಯಾಪಾರಸ್ಥನು ಗಿರಾಕಿಗಳಿಗೆ ಮೊದಲು ಚಹಮಂದಿರಕ್ಕೆ ಕರೆದುಕೊಂಡು ಹೋಗಿ, ಒಂದೆರಡು ಹಿತವಚನಗಳಿಂದ ಕೂತಿಕೊಂಡು ಚಹದೇವಿಯ ದರ್ಶನಮಾಡಿಸಿದರೆ ತೀರಿತು. ಆ ಚಹದ ಹಣವನ್ನು ಸಹ ಗಿರಾಕಿಯು ತಾನೇ ಕೊಟ್ಟು, ವ್ಯಾಪಾರಸ್ಥನು ಹೇಳಿದ ಮಾಲಿನ ಬೆಲೆಯನ್ನು ಕೊಟ್ಟು ಗಿರಾಕಿಯು ವ್ಯಾಪಾರಸ್ಥನಿಗೆ ವಿನಯದಿಂದ ನಮಸ್ಕರಿಸಿ ಹೋಗುವನು. ಇಂಥ ಚಹಕ್ಕೆ ಮಹತ್ವ ಕೊಟ್ಟು, ಸರಕಾರವು ಬಡವರ ಹಿತವನ್ನುಮಾಡದೇ ಮೋಸುಗಾರರಿಗೆ ಆಸ್ಪದವಿತ್ತಿದೆ. ನಮ್ಮ ದೇಶ ಮೋಸುಗಾರಭರಿತವಾಗಹತ್ತಿದೆ.

ಇನ್ನು ಎರಡನೆಯದಾಗಿ ಬೀಡಿ, ಸಿಗಾರೇಟುಗಳು. ಎಲ್ಲಿ ನೋಡಿದಲ್ಲಿ ಪೇಟೆಯಲ್ಲಿ ಬೀಡಿ ಸಿಗಾರೇಟುಗಳ ಜಾಹಿರಾತುಗಳೇ ಜಾಹಿರಾತುಗಳು. ಜಾಹಿರಾತುಮಾಡುವದೊಂದೇಇರಲಿ, ನಮ್ಮ ಮುಖಂಡರ ನಾಮಕರಣದಿಂದ ಬೀಡಿಗಳು ತಯಾರಾಗುತ್ತಲಿವೆ. ಎಲ್ಲಿ ನೋಡಿದಲ್ಲಿ ಪಟೀಲ ಬೀಡಿ, ನೆಹರೂ ಬೀಡಿ ಮುಂತಾದ ಬೀಡಿಗಳು ತಯಾರಾಗುತ್ತಿವೆ. ಇವುಗಳಾದರೂ ಒಂದುವೇಳೆಯಲ್ಲಿ ಬಹು ಮಹತ್ವದ ಸ್ಥಾನವನ್ನು ಪಡೆಯುತ್ತಿವೆ. ಇವಾದರೂ ಹಿತಕಾರಿ ವಸ್ತುಗಳೇ ಸರಿ. ಯಾವುದಾದರೊಂದು ಪ್ರವಾಸವನ್ನು ಕೈಕೊಂಡಾಗ್ಗೆ ರೇಲ್ವೆಯಲ್ಲಾಗಲಿ, ಮೋಟಾರಿನಲ್ಲಾಗಲಿ, ಸಿನೇಮಾಮಂದಿರದಲ್ಲಾಲಿ, ಜನದಟ್ಟನೆಯ ಸ್ಥಾನಗಳಲ್ಲಿ ಜನರಲ್ಲಿ ಕೂಡ್ರಬೇಕಾದರೆ ಹಾಗೇ ಕೂಡ್ರಲು ಅವಕಾಶ ಸಿಗದಿದ್ದಲ್ಲಿ ತನ್ನ ಎಡಬಲ ಕುಳಿತ ಯಾರಾದರೊಬ್ಬರಿಗೆ ಒಂದೇ ಒಂದು ಬೀಡಿಯನ್ನಾಗಲಿ ಇಲ್ಲವೆ ಬೆಂಕೀ ಪೆಟ್ಟಿಗೆಯನ್ನಾಗಲಿ ಬೇಡಿದಲ್ಲಿ, ಕೊಟ್ಟರೆ ನಾವು ಕೂಡ್ರಬಹುದಾದ ಸ್ಥಳಕ್ಕಿಂತಲೂ ಹೆಚ್ಚು ಸ್ಥಳ ಸುಲಭವಾಗಿ ದೊರೆಯುವದು. ಇಂತಹ ಚಟಗಳಿಗೆ ಮನಸೋತು ಜನ ಮೋಸುಹೋಗಹತ್ತಿದೆ.

ಚಹದ ಮಹಿಮೆಯಂತೂ ಎಷ್ಟು ವರ್ಣಿಸಿದರೂ ಇನ್ನೂ ಹೆಚ್ಚು ಹೆಚ್ಚಾಗಿ ವರ್ಣನೆಯನ್ನು ಪಡೆಯುತ್ತಾ ಇದೆ. ನೌಕರಿ ವಗೈರೆ ಬೇಕಾದಲ್ಲಿ ಇದುವೇ ಸೂಚನೆ. ಇದು ಕೇವಲ ಪುರುಷರಿಗಾಗಿಯಲ್ಲ. ಸ್ತ್ರೀಯರಿಗೆ

ಕುಂಕುಮದ ಸಮಾನವಾಗಿದೆ. ಕುಂಕುಮ ಹಚ್ಚಿಕೊಳ್ಳುವದನ್ನು ಮರೆಯ ಬಹುದು, ಆದರೆ ಮೊದಲು ಈ ಚಹ ತಯಾರಿಸದೆ ಇರರು. ಯಾರಾದರೂ ಗೆಳತಿಯರು ಮನೆಗೆ ಬಂದಲ್ಲಿ ಚಹವಿಲ್ಲದೆ ಕಳಿಸರು. ಮೊದಲಿನಕಾಲದಲ್ಲಿ ಮನೆಗೆಬಂದು ಹೋಗುವ ಹೆಣ್ಣುಮಕ್ಕಳಿಗೆ ಕುಂಕುಮಹಚ್ಚುವ ಹಿಂದೂ ಸ್ತ್ರೀಪದ್ಧತಿಯುಸಹ ಇಂದು ವಿರಳವಾಗಿದೆ. ಒಟ್ಟನಮೇಲೆ ನಮ್ಮ ಸಾಂಸ್ಕೃತಿಯೇ ನಾಶವಾಗಿದೆ. ನಮ್ಮ ಭಾರತೀಯ ಸಾಂಸ್ಕೃತಿಯು ಬಹು ಉಚ್ಚಮಟ್ಟಿನ ದೆಂಬುದನ್ನು ಮರೆತಿದ್ದೇವೆ. ಆದಿಕಾಲದಿಂದಲೂ ವೈಭವಶಿಖರಕ್ಕೇರಿದ ನಮ್ಮ ದೇಶವು ಇಂದು ಯಾವ ಸ್ಥಿತಿಯಲ್ಲಿದೆ ಎಂಬುದನ್ನು ಅರಿತುಕೊಳ್ಳು ವದು ಸರ್ವರ ಕರ್ತವ್ಯ. ಎರಡು ಗಾಲಿಗಳಿಂದಲೇ ರಥವು ಮುಂದಕ್ಕೆ ಹೇಗೆ ಸಾಗುತ್ತದೋ ಹಾಗೆ ಸರಕಾರ ಹಾಗು ಜನತೆಯು ಒಂದಾದಲ್ಲಿ ರಾಜ್ಯವು ಸುಸೂತ್ರವಾಗಿ ಸಾಗುವಲ್ಲಿ ಸಂದೇಹವಿಲ್ಲ. ಇಂದು ನಮ್ಮಲ್ಲಿ ಏಕಭಾವನೆ ಇಲ್ಲದಿರುವದೇ ರಾಜ್ಯಾಡಳಿತಕ್ಕೆ ತೊಂದರೆಯಾಗಿದೆ ಒಂದಲ್ಲ, ಎರಡಲ್ಲ ಅನೇಕ ಪಕ್ಷಗಳು ಅನೇಕತೆರನಾಗಿ ಇಂದಿನ ರಾಜ್ಯಾಡಳಿತಕ್ಕೆ ಹಾಗು ಮುಖಂಡರಿಗೆ ತೆಗಳುವದುಂಟು. ಹಾಗೆ ತೆಗಳುವವರು ನಿಜವಾಗಿ ಸ್ವಾರ್ಥಸಾಧಕರು ಹಾಗು ರಾಷ್ಟ್ರದ್ರೋಹಿಗಳೆಂದರೆ ತಪ್ಪಾಗದು. ಇಂದು ಪ್ರಜಾರಾಜ್ಯವಿದೆಯೆಂದು ಪ್ರಜೆಗಳಾದ ನಾವು ಬೇಕಾದಹಾಗೆ ವರ್ತಿಸುವದು ತಪ್ಪು. ಇಂಥ ಅಜ್ಞಜನರಿರುವದರಿಂದಲೇ ಸರಕಾರವು ನಮ್ಮಮೇಲೆ ಒತ್ತಾಯದ ಕಾಯದೆಗಳನ್ನು ಕೈಕೊಳ್ಳಹತ್ತಿದ್ದಾರೆ. ಇದನ್ನು ತಿಳಿಯದೇ ಸರಕಾರಕ್ಕೆ ದೋಷಕೊಡುವದು ತಪ್ಪು. ಹಾಗು ನಮ್ಮ ರಾಜಕಾರಣಿಗಳು ರಾಜಕೀಯ ವಿಷಯಗಳನ್ನು ಮನನಮಾಡಿಕೊಂಡು ಒಳ್ಳೆಯ ಆಚರಣೆಯಿಂದ ನಡೆದರೆ ದೇಶದ ಉನ್ನತಿಯ ಸ್ಥಾನವು ನಮ್ಮ ರಾಜಕಾರಣಿಗಳಿಗೇ ಸಲ್ಲುವದು.

ಶಿಕ್ಷಣವನ್ನು ಕಲಿತು ಅದರ ದುರುಪಯೋಗವನ್ನು ನಾವು ಮಾಡಿಕೊಳ್ಳು ತ್ತಿದ್ದೇವೆ. ಇದೆಲ್ಲವೂ ಸರಕಾರದ ತಪ್ಪೆನ್ನಲಿಕ್ಕಾಗದು. ಈಗ್ಗೆ ನಾವು ನಡೆಯುತ್ತಿರುವದು ರಾಮರಾಜ್ಯ ಮಾರ್ಗವಲ್ಲ. ಬ್ರಿಟಿಶ ಮಾರ್ಗ. ಈ ಮಾರ್ಗದಿಂದ ನಡೆದರೆ ನಮ್ಮ ದೇಶವು ಪರಕೀಯವಾಗಲು ಇಲ್ಲವೆ ಸಂಪೂರ್ಣ ನಾಶಹೊಂದುವದರಲ್ಲಿ ಸಂದೇಹವಿಲ್ಲ.

# ಬಸವಣ್ಣನವರ ನೆನಹು.



ಶಿವಪರಾತ್ಪರ ವಸ್ತು ಬಸವನು
ಶಿವನ ಚಿದ್ಧರ್ಮಸಾಕಾರವು
ಶಿವನೆ ಈ ಜಗ ಲಿಂಗರೂಪನು
ಶಿವನೆ ಸಂಗನ ಬಸವನು ॥

ಜಗದವಸುವೀ ಬಸವನಾಗಿಹ
ಯುಗದ ಶಿವನೀ ಬಸವನಾಗಿಹ
ಸೊಗಸು ಜಂಗಮ ಲಿಂಗ ಸಮರಸ
ಮಿಗಿಲು ಶರಣ ಕುಟುಂಬಿಯು

ಬಸವನಾಮವೆ ಕಲ್ಪವೃಕ್ಷವು
ಬಸವ ದೇಹವೆ ಪುರುಷಶಿಲೆಯು
ಬಸವ ಹೃದಯವೆ ಕಾಮಧೇನುವು
ಬಸವ ಜನ್ಮವೆ ಸಫಲವು

ಕವಿಯು ಬಸವನು ರವಿಯು ಬಸವನು
ಶಿವನು ಬಸವನು ಸಿದ್ಧಬಸವನು
ದಿವದ ಸವಿಯನುಭವದಿ ತೋರಿದ
ಶಿವ ಸುಧಾಮಯ ಬಸವನು

ಚಂಡ ಬಸವನು ವೃಷಭನಹುದು
ಕೊಂಡಿ ಮಂಚಣ್ಣದೇವ ನಾರದ
ಚನ್ನಬಸವ ಕುಮಾರ ಸ್ವಾಮಿಯು
ಇನ್ನು ಶರಣರೆ ಗಣಗಳು

ಕಪ್ಪೆ ಚಿಪ್ಪಲಿ ಮುತ್ತು ಜನಿಸುವ
ತೆರದಲುದಯಿಸಿ ಗಣಗಳೆಲ್ಲರು
ಒಪ್ಪಿ ಕಂಕಣಕಟ್ಟಿ ನಿಂದರು
ಶರಣ ಬಸವನ ಸಂಗಡ

ಗುರುವಿನ ಹೃತ್ಕಮಲದಲ್ಲಿಹ
ವರದ ನಂದಿಯು ಅವನ ಜಿಹ್ವೆಯ
ಲಿರುವುದೈ ನಿನ್ನಿಷ್ಟ ಲಿಂಗವು
ಶರಣ ಮಾನ್ಯನೆ ಪಡೆಯದ

ಇಷ್ಟ ಲಿಂಗವ ಗುರುವಿನಿಂ ಪಡೆ
ಶ್ರೇಷ್ಠ ಭಕ್ತ ಮಹೇಶನಾಗಿರು
ನಿಷ್ಠನಾಗಿರೆ ಶರಣನೆನಿಸಿರೆ
ಕಷ್ಟವೆ ಶಿವನೈಕ್ಯವು!

ಬಸವ ಮತವೆ ಶಿವನ ಮತವು
ಬಸವ ಮತವೆ ಶ್ರೇಷ್ಠ ಮತವು
ಬಸವ ತತ್ವವೆ ಧರೆಯನಾಳ್ವುದು
ಅಸಮವೆನಿಸುತ ಧರೆಯಲೀ

ಎಲ್ಲರಲ್ಲಿ ಸ್ವತಂತ್ರ ಶಕ್ತಿಯ
ಸಲ್ಲಿಸುವುದೈ ಬಸವ ಮತವು

ಎಲ್ಲ ಸೃಷ್ಟಿಯು ಸಮವು ಶಿವನಲಿ
ಎಲ್ಲವೂ ಶಿವಸತ್ವವು

ಎಲ್ಲರೆಲ್ಲರು ಮಾಡಿ ಕಾಯಕ
ಎಲ್ಲರರ್ಚಿಸಿ ಇಷ್ಟಲಿಂಗವ
ಎಲ್ಲ ಕಾಯಲು ಶಿವನ ಸಮಯವ
ಇಲ್ಲಿ ಜನತೆಯು ಉನ್ನತಿ

ಶಿವನ ಭಕ್ತಗೆ ಇಲ್ಲ ತನು ಸಂಖ
ಶಿವನ ಸಂಗಿಗೆ ಇಲ್ಲ ಸೂತಕ
ಶಿವನು ವಹಿಸಿದ ನರನು ಭುವಿಯಲಿ
ಜವಗೆ ಮಣಿಯನು ಸೋಲನು

ನರರು ನಾರಿಯರೆಲ್ಲರೊಂದೆ
ಗುರುವು ಲಿಂಗ ವಿಭೂತಿ ಮಂತ್ರವು
ಹರಗೆ ಭಕ್ತಾಚಾರವೆಲ್ಲವ
ಧರೆಯಲಿರುವರು ಸಲಿಸಲಿ

ಹರನ ಧರೆ ಇದು ಅವನ ಸಾಲವ
ಹರಿಸಬೇಕೈ ವೀರಶೈವರು
ಧರೆಯ ಕಾಯಕ ಮಾಡಿ ಜಂಗಮ
ಗೆಸಗುತಲಿ ದಾಸೋಹವ

ಅಂಪವೀಧರೆ ಋಣವ ಹರಿಸಲು
ಲಿಂಗಸಮರಸ ಸುಲಭವೊಪ್ಪುದು
ಭಂಗಬಾರದು ಐಕ್ಯಕೆನ್ನುತ
ಅಂಗಕಾಯಕ ವಿಧಿಸಿದ

ವಚನ ಬಸವನ ಮಲ್ಲಿ ಸುರಗಿಯು
ಸುಚಿಯು ಸುರಭಿಯು ಸುಲಭ ಮೋಹಕ
ವಚನ ಜ್ಞಾನದ ಸುರಭಿ ಕ್ಷೀರವು
ವಚನ ಚೇತನ ಜ್ಯೋತಿಯು

ಹೊಯ್ದರೆಲ್ಲವ ಹೊರೆದರೆಂದನು
ಬೈದರೆಲ್ಲರ ಬಂಧುವೆಂದನು
ಕೊಯ್ದು ಹಿಂಸೆಯ ಮೂಲವೆಲ್ಲವ
ಬಸವನುರು ಸತ್ಯಾಗ್ರಹಿ

ವೇದವೆಂಬುವ ತುಹಿನ ಶೈಲದ
ಮೋದವಾಹಿನಿ ಸಂಗಬಸವನ
ಕಾದ ಕನ್ನಡ ನಾಡ ಹೃದಯಕೆ
ನಾದಬ್ರಹ್ಮನು ಬಸವನೂ

ಸ್ಥಾವರನು ಗುಡಿಯೊಳಗೆ
ಜಂಗಮನು ಬಯಲೊಳಗೆ
ಸಂಗಮನು ಜಾತ್ರೆಯಲಿ
ಶಿವನಾತ್ಮ ಕೈಲಾಸದಲ್ಲಿ
ಇವನು ಬಸವ! ಶರಣು ಬಸವ

—ಶ್ರೀ ಲಕ್ಷ್ಮಣರಾವ್ ಹೊಯಿಸಳರು
ಬೆಂಗಳೂರು

# ಭಕ್ತಿಯೋಗ.

(ಲೇ.: – ಶ್ರೀ. ಬಂಥನಾಳ ಶಿವಯೋಗಿಗಳ ಬಾನುಲಿ ಭಾಷಣ)

ಮಾನವನು ಮಾಯಾಬಂಧನದಿಂದ ಮುಕ್ತನಾಗಲು, ಮತ್ತು ಸತ್ಯವಾದ, ಶಾಶ್ವತವಾದ ಸುಖಶಾಂತಿ ಸಮಾಧಾನಗಳನ್ನು ಹೊಂದಲು, ಹಿಂದೂ ಧರ್ಮದಲ್ಲಿ ಮಾರ್ಗತ್ರಯಗಳೇ ಮುಖ್ಯವಾದವುಗಳೆಂದು ಶ್ರುತಿಯು ಸಾರಿದೆ. ವೇದದಲ್ಲಿ ಈ ಮಾರ್ಗತ್ರಯಗಳಿಗೆ, ಕರ್ಮಕಾಂಡವೆಂತಲೂ ಉಪಾಸನಾಕಾಂಡವೆಂತಲೂ, ಜ್ಞಾನಕಾಂಡವೆಂತಲೂ, ಅರ್ಥಾತ್ ಕರ್ಮಯೋಗ, ಭಕ್ತಿಯೋಗ, ಜ್ಞಾನಯೋಗಗಳೆಂದು ಸಂಬೋಧಿಸಲಾಗಿದೆ. ಈ ಮೂರೂ ಮಾರ್ಗಗಳಲ್ಲಿ ಭಕ್ತಿಯೋಗವು ಅತಿಶಯ ಸುಲಭ ಹಾಗೂ ಸರಳವಾಗಿರುವದಲ್ಲದೆ, ಮಾನವನು ಕೊನೆಗೆ ಯಾವ ಧ್ಯೇಯವನ್ನು ಮುಟ್ಟಬೇಕಾಗಿರುವದೋ ಅಂಥ ಪರಂಧಾಮಕ್ಕೆ ಕೈಹಿಡಿದು ಕರೆದೊಯ್ಯುವ ಸ್ವಾಭಾವಿಕವಾದ ಮಾರ್ಗವಾಗಿದೆ.

ಭಕ್ತಿಯೋಗವೆಂದರೆ ಪರಮೇಶ್ವರನನ್ನು ಅಂತಃಕರಣಪೂರ್ವಕವಾಗಿ ಶೋಧಿಸುವದು. ಈ ಶೋಧನೆಯು ಪ್ರೇಮದಲ್ಲಿ ಪ್ರಾರಂಭವಾಗಿ ಪ್ರೇಮದಲ್ಲಿ ಬೆಳೆದು, ಕಡೆಗೆ ಪ್ರೇಮದಲ್ಲಿಯೇ ಕೊನೆಗೊಳ್ಳುವದು. ಇದನ್ನೇ ಆರ್ಷೇಯ ಋಷಿಯಾದ ಶಾಂಡಿಲ್ಯನು "ಸಾ ಪರಾನುರಕ್ತಿರೀಶ್ವರೆ" ಎಂದು ತನ್ನ ಭಕ್ತಿಸೂತ್ರದಲ್ಲಿ ಹೇಳಿದ್ದಾನೆ. ನಾರದ ಋಷಿಯು ಕೂಡ, "ಸಈಶ್ವರಃ ಅನಿರ್ವಚನೀಯ ಪ್ರೇಮಸ್ವರೂಪಃ" ಎಂದು ತನ್ನ ಭಕ್ತಿಸೂತ್ರದಲ್ಲಿ ಹೇಳಿರುವನು. ಅಂದರೆ ದೇವರು ಪ್ರೇಮಸ್ವರೂಪನಾಗಿದ್ದು, ಆತನಲ್ಲಿ ತ್ರಿಕರಣಪೂರ್ವಕವಾಗಿ ಉಚ್ಚತಮ ಪ್ರೇಮವನ್ನಿಡುವದೇ ಭಕ್ತಿಯೋಗವೆಂದು ಹೇಳಿರುವರು.

ಈ ಪ್ರಪಂಚವೆಲ್ಲವೂ ಪ್ರೇಮದ ಆಕರ್ಷಣ ಶಕ್ತಿಯಿಂದಲೇ ನಿಂತಿದೆ. ಸಮಾಜದಲ್ಲಿ ಯಾವದು ಉದಾತ್ತವಾದದ್ದು, ಉತ್ತಮವಾದದ್ದು ಮತ್ತು ಉತ್ಕರ್ಷಕವಾದದ್ದಿದೆಯೋ, ಅದೆಲ್ಲವೂ ಪ್ರೇಮದಲ್ಲಿಯೇ ಉದ್ಭವವಾಗಿದೆ

ಅದರಂತೆ ಕೀಳಾದ, ಕೆಡುಕಾದ ರಾಕ್ಷಸೀವೃತ್ತಿಯೂ ಕೂಡ ಪ್ರೇಮದಲ್ಲಿಯೇ ಉಗಮವಾಗಿದೆ. ಆದರೆ ವ್ಯತ್ಯಾಸವಿಷ್ಟೇ. ಎರಡನೆಯ ಪ್ರಕಾರದಲ್ಲಿ ಪ್ರೇಮದ ದುರುಪಯೋಗವಾಗಿರುತ್ತದೆ. ಒಬ್ಬನು ಬಹು ಪರೋಪಕಾರಿಯಾಗಿದ್ದಾನೆ; ತನ್ನಲ್ಲಿದ್ದುದನ್ನೆಲ್ಲವನ್ನೂ ಬಡವರಿಗೂ, ಅನಾಥರಿಗೂ, ದಾನಮಾಡುವ ಭಾವದವನಾಗಿರುವನೆಂದು ತಿಳಿಯುವಾ. ಮತ್ತೊಬ್ಬನು ಅನ್ಯರಿಗೆ ಅನ್ಯಾಯ ಬಗೆದು, ಮೋಸಮಾಡಿ, ತನ್ನ ಸ್ವಾರ್ಥವನ್ನೇ ಸಾಧಿಸುತ್ತಿರುವನೆಂದು ತಿಳಿಯುವಾ. ಹೀಗೆ ಪರಸ್ಪರ ವಿರೋಧವಾದ ಈ ಕೃತಿಗಳಿಗೆ, ಮೂಲ ಭಾವನೆಯು ಮಾತ್ರ ಒಂದೇ ಆಗಿರುವದು. ಪರೋಪಕಾರಿಯಾದ ಮನುಷ್ಯನ ಪ್ರೇಮವು ಅನ್ಯರ ಮೇಲಿದ್ದರೆ, ಸ್ವಾರ್ಥಸಾಧಕನ ಪ್ರೇಮವು ತನ್ನ ಮೇಲಿರುವದು. ಅಂತೂ ಈ ಎರಡೂ ಕಾರ್ಯಗಳಿಗೂ ಮೂಲಕಾರಣವಾಗಿರುವ ಪ್ರೇಮವು ಒಂದೇ ಆಗಿರುವದು. ಸಚ್ಛೀಲ ಮನುಷ್ಯನಲ್ಲಿರುವ ಪ್ರೇಮವು ಯೋಗ್ಯದಿಶೆಯಲ್ಲಿ ಸಾಗಿದರೆ, ದುಶ್ಶೀಲ ಮನುಷ್ಯನಲ್ಲಿಯ ಪ್ರೇಮವು ತಪ್ಪು ದಿಶೆಯಲ್ಲಿ ಸಾಗಿರುವದು. ಈ ಪ್ರಕಾರವಾಗಿ ಮಾನವನಲ್ಲಿ ಸ್ವಾಭಾವಿಕವಾಗಿರುವ ಪ್ರೇಮದ ಪ್ರಮೇಯವನ್ನು ತಿಳಿದುಕೊಂಡು ಅದರ ಸದುಪಯೋಗ ಮಾಡಿಕೊಳ್ಳುವದೇ ಭಕ್ತಿಯೋಗವಾಗಿರುವದು.

ಮನುಷ್ಯನಲ್ಲಿ ನೈಸರ್ಗಿಕವಾಗಿರುವ ಮತ್ತು ಸಹಜವಾಗಿರುವ ಪ್ರೇಮವನ್ನೇ ಹೆಂಡತಿಯ ಮೇಲೆ ಇಟ್ಟಿದ್ದಾದರೆ, ಅದಕ್ಕೆ ಮೋಹವೆನ್ನುವರು. ಅದೇ ಪ್ರೇಮವನ್ನೇ ತನ್ನ ಮನೆ, ಹೊಲ, ದನಕರ ಮೊದಲಾದ ಸ್ಥಾವರ ಜಂಗಮ ಆಸ್ತಿಗಳ ಮೇಲೆ ಇಟ್ಟಿದ್ದಾದರೆ, ಅದಕ್ಕೆ ಮಮಕಾರವೆನ್ನುವರು. ಅದೇ ಪ್ರೇಮವನ್ನೇ ಮಕ್ಕಳ ಮೇಲೆ ಇಟ್ಟಿದ್ದಾದರೆ, ಅದಕ್ಕೆ ವಾತ್ಸಲ್ಯವೆನ್ನುವರು. ಅದೇ ಪ್ರೇಮವನ್ನೇ ಗೆಳೆಯರ ಮೇಲೆ ಇಟ್ಟಿದ್ದಾದರೆ, ಅದಕ್ಕೆ ಸ್ನೇಹವೆನ್ನುವರು. ಅದೇ ಪ್ರೇಮವನ್ನೇ ಬಡವರ ಮೇಲೆ ಇಟ್ಟಿದ್ದಾದರೆ, ಅದಕ್ಕೆ ದಯೆಯೆನ್ನುವರು. ಅದೇ ಪ್ರೇಮವನ್ನೇ ತನ್ನ ದೊಡ್ಡಸ್ತಿಕೆಯ ಮೇಲೆ ಇಟ್ಟಿದ್ದಾದರೆ ಅದಕ್ಕೆ ಅಹಂಕಾರವೆನ್ನುವರು. ಅದೇ ಪ್ರೇಮವನ್ನೇ ದುಡ್ಡಿನ ಮೇಲೆ ಇಟ್ಟಿದ್ದಾದರೆ, ಅದಕ್ಕೆ ಲೋಭವೆನ್ನುವರು. ಅದೇ ಪ್ರೇಮವನ್ನೇ ಚಹಾ, ಕಾಫಿ, ಬೀಡಿ, ಸಿಗರೇಟ, ನಶ್ಯ ಮೊದಲಾದವುಗಳ ಮೇಲೆ ಇಟ್ಟಿದ್ದಾದರೆ, ಅವಕ್ಕೆ ಚಟವೆನ್ನುವರು. ಅದೇ ಪ್ರೇಮವನ್ನೇ ಸಿಂದಿ, ಶರೆ, ಗಾಂಜಾ, ಅಫೀಮ ಮೊದಲಾದವುಗಳ ಮೇಲೆ ಇಟ್ಟಿದ್ದಾದರೆ ಅದಕ್ಕೆ ವ್ಯಸನವೆನ್ನುವರು. ಅದೇ ಪ್ರೇಮವನ್ನೇ ಸ್ವಸ್ತ್ರೀಯಳ ಬಿಟ್ಟು

ಪರಸ್ತ್ರೀಯಲ್ಲಿಟ್ಟಿದ್ದಾದರೆ, ಅದಕ್ಕೆ ವ್ಯಭಿಚಾರವೆನ್ನುವರು. ಅದೇ ಪ್ರೇಮವನ್ನೇ ಪರಮಾತ್ಮನ ಮೇಲೆ ಇಟ್ಟಿದ್ದಾದರೆ, ಅದಕ್ಕೆಯೇ ಭಕ್ತಿ, ಭಕ್ತಿ ಎಂದೆನ್ನುವರು.

ಭಕ್ತಿಯೋಗವು ಉಚ್ಚಪ್ರೇಮದ ಶಾಸ್ತ್ರವಾಗಿದೆ. ಪ್ರೇಮಸೂತ್ರದ್ವಾರದಿಂದ ಕೊನೆಗೆ ವಿಶ್ವವ್ಯಾಪಿ ಪ್ರೇಮವನ್ನು ಹಾಗೂ ಬ್ರಹ್ಮಾನಂದವನ್ನು ಹೇಗೆ ಪ್ರಾಪ್ತಿಮಾಡಿಕೊಳ್ಳಬೇಕೆಂಬದನ್ನು ತೋರಿಸಿಕೊಡುವದೇ ಭಕ್ತಿಯೋಗದ ಗುರಿಯಾಗಿದೆ.

ಮಹಾನುಭಾವನಾದ ನಿಜಗುಣಿ ಶಿವಯೋಗಿಯು, ತನ್ನ ಕೈವಲ್ಯಪದ್ಧತಿಯೊಳಗೆ, "ಆವಕಾಲದೊಳು ಬಳಿಕಾವ ದೇಶದೊಳು ಬೇರಾವ ವಸ್ತುವಿನೊಳಿಡೆ ಮರೆಯದತಿ ಮಮತೆ" ಆವ ಪರಿಯೊಳು ತನ್ನ ಮೇಲಿರ್ಪುದಂತೆ ಗುರುದೇವತೆಯೊಳನುರಾಗವಿಹುದೆ ನಿಜಭಕ್ತಿ." ಅಂದರೆ ಹಗಲು ರಾತ್ರಿ ಮೊದಲಾದ ಯಾವ ಕಾಲದಲ್ಲಿಯೇ ಆಗಲಿ, ಬಾಲ್ಯ, ತಾರುಣ್ಯ, ಮುಪ್ಪುತನದಲ್ಲಿ ವಾರ್ಧಿಕ್ಯಾದಿ ಆವ ಅವಸ್ಥೆಯಲ್ಲಿಯೇ ಇರಲಿ, ಸ್ವಸ್ಥಲ ಪರಸ್ಥಲಾದಿಯಾಗಿ ಆವ ದೇಶದಲ್ಲಿಯೇ ಇರಲಿ, ಪ್ರಪಂಚದ ಯಾವ ವಸ್ತುವಿನೊಡನೆ ಬೆರತಿದ್ದರೂ ಸಹ ಮಾನವನು ತನ್ನ ಮೇಲಿನ ಪ್ರೀತಿಯನ್ನು ಹೇಗೆ ಮರೆತಿರುವದಿಲ್ಲವೋ, ಹಾಗೆಯೇ ಸತತವಾಗಿ ಪರಮಾತ್ಮನ ಮೇಲೆ ಪ್ರೇಮವನ್ನಿಟ್ಟಿರುವದೇ ಭಕ್ತಿಯೆಂದು ಹೇಳಿರುವನು.

ಹೀಗೆ ಪರಮೇಶ್ವರನಲ್ಲಿ ಅಹೇತುಕವಾಗಿ, ಅಖಂಡವಾಗಿ ಪ್ರೇಮವನ್ನಿಡುವದೇ ಭಕ್ತಿಯೋಗವಾಗಿದ್ದರೂ, ಸ್ವಾಮಿ ವಿವೇಕಾನಂದರು ಹೇಳಿದಂತೆ ಈ ಮಾರ್ಗದಲ್ಲಿಯೂ ಒಂದು ಭೀತಿಯ ಸ್ಥಾನವಿದೆ. ಕೆಳಮಟ್ಟದ ಭಕ್ತಿಯಲ್ಲಿ ಅಥವಾ ಗೌಣೀಯ ಭಕ್ತಿಯಲ್ಲಿ, ಸಂಕುಚಿತ ಭಾವನೆಯ ಭಕ್ತರು ವಿಶೇಷವಾಗಿ ಉದಯಿಸುವ ಸಂಭವವಿದೆ. ಜಗತ್ತಿನೊಳಗಿನ ಎಲ್ಲ ಧರ್ಮಗಳಲ್ಲಿಯೂ ಇಂಥ ಸಂಕುಚಿತ ಭಾವನೆಯ ಭಕ್ತರು ಧರ್ಮದ ಹೆಸರಿನ ಮೇಲೆ ಅತ್ಯಾಚಾರಗಳನ್ನು ಮಾಡಿದ ಉದಾಹರಣೆಗಳು ಇತಿಹಾಸದಲ್ಲಿ ವಿಪುಲವಾಗಿ ಸಿಗುತ್ತವೆ. ಅವೆಲ್ಲ ಗೌಣೀಭಕ್ತಿಯಲ್ಲಿದ್ದವರ ಕೃತಿಗಳಾಗಿವೆ. ತನ್ನ ಪ್ರೀತಿಯ ವಿಷಯವಾದ ಇಷ್ಟದೇವತೆಯಲ್ಲಿ ಪೂಜ್ಯಭಾವನೆಯನ್ನು ಮತ್ತು ದೃಢವಾದ ನಿಷ್ಠೆಯನ್ನು ಇಡದ ಹೊರತು ಭಕ್ತಿಯು ನಿರ್ಮಾಣವಾಗಲು ಸಾಧ್ಯವಿಲ್ಲ. ಆದರೆ ತನ್ನ ಇಷ್ಟದೇವತೆಯಲ್ಲಿರುವ ಪೂಜ್ಯಭಾವವು ಅನ್ಯರ ಪೂಜ್ಯವಸ್ತುಗಳ ವಿಷಯದಲ್ಲಿ ಅನಾ

ಪರತೆಯನ್ನುಂಟು ಮಾಡುವದಕ್ಕೆ ಕಾರಣವಾಗಿರುವದು ಕಂಡುಬರುತ್ತದೆ. ಯಾವ ಸಾಧಕನಲ್ಲಿ ಪರಾಭಕ್ತಿಯು ಇನ್ನೂ ಪ್ರಾರಂಭವಾಗಿರುವದಿಲ್ಲವೋ ಅಂಥ ಗೌಣೀ ಭಕ್ತಿಯ ಜನರು ಸ್ವಕೀಯ ದೇವತಾ ವಿಷಯದಲ್ಲಿ ಧರ್ಮದ ವಿಷಯದಲ್ಲಿ ದ್ವೇಷವನ್ನೂ, ತಿರಸ್ಕಾರವನ್ನೂ, ತೋರಿಸುತ್ತಿರುತ್ತಾರೆ. ಇಂಥವರು ಶ್ವಾನನಿಗಿಂತ ಅಲ್ಪ ಬುದ್ಧಿಯವರೆಂದು ಹೇಳಬಹುದು.

ಶ್ವಾನವು ತನ್ನ ಒಡೆಯನ ವಸ್ತುಗಳನ್ನು ಯಾರೂ ಸ್ಪರ್ಶವೂ ಕೂಡ ಮಾಡದಂತೆ ದಕ್ಷತೆ ವಹಿಸಲು ಯಾವ ಪ್ರೇಮವನ್ನು ತೋರಿಸುತ್ತಿರುವದೋ, ಅದು ಅವರ ಜನ್ಮಜಾತ ಗುಣವಾಗಿರುತ್ತವೆ. ಆದರೆ ಶ್ವಾನಿನ ಈ ಹುಟ್ಟುಗುಣವು ಸಂಕುಚಿತಭಾವನೆಯ ಭಕ್ತರಗಿಂತಲೂ ಶ್ರೇಷ್ಠವಾದುದೆಂದು ಹೇಳಬಹುದಾಗಿದೆ. ತನ್ನ ಯಜಮಾನನು ಯಾವ ವೇಷದಲ್ಲಿಯೇ ಇರಲಿ, ಅಥವಾ ವೇಷವಿಲ್ಲದೆ ತೆರೆದ ಮೈಯಿಂದಿರಲಿ, ಅತಏವ, ಆತನು ಬೇಕಾದ ರೀತಿಯಲ್ಲಿದ್ದರೂ ಆತನನ್ನು ಅದು ಎಂದೂ ಶತ್ರುಭಾವದಿಂದ ನೋಡುವದಿಲ್ಲ ತನ್ನ ಒಡೆಯನೆನ್ನುವ ಭಾವವನ್ನು ಮರೆಯುವದಿಲ್ಲ. ಆದರೆ ಸಂಕುಚಿತ ಭಾವನೆಯ ಭಕ್ತರು, "ಏಕಂ ಸದ್ವಿಪ್ರಾ ಬಹುಧಾ ವದಂತಿ ಎಂಬ ಶ್ರುತಿವಾಕ್ಯದಂತೆ, ಹರ, ಹರಿ, ಅಲ್ಲಾ, ಗಾಡ್ ಮೊದಲಾದ ಎಲ್ಲ ನಾಮಗಳು ಒಬ್ಬ ಪರಮೇಶ್ವರನನ್ನು ಕುರಿತು ಹೇಳಿದವುಗಳಾಗಿವೆಯೆಂಬದನ್ನು ತಿಳಿಯದೆ, ಪರರ ಧರ್ಮ ಹಾಗೂ ದೇವತೆಗಳ ಬಗೆಗೆ ಅನಾಚಾರಗಳನ್ನೂ ಅತ್ಯಾಚಾರಗಳನ್ನೂ ಮಾಡುತ್ತಿರುವದನ್ನು ನೋಡಿದರೆ ಶ್ವಾನನಗಿಂತಲೂ ಇವರ ಬುದ್ಧಿ ಹೀನವಾದುದೆಂದು ಸ್ಪಷ್ಟವಾಗಿ ತಿಳಿಯುವದಿಲ್ಲವೆ? ಸಮಾಜದಲ್ಲಿ ಇಂಥ ಸಂಕುಚಿತ ಭಾವನೆಯ ಭಕ್ತರೇ ವಿಶೇಷವಾಗಿರುವರು. ಪೂರ್ಣ ಭಕ್ತನು ಅಥವಾ ಪರಾಭಕ್ತಿಯುಳ್ಳವನು ಒಬ್ಬ ಪರಮಾತ್ಮನ ಸ್ವರೂಪವೇ ಅನೇಕರಿಗೆ ಅವರವರ ಭಾವನೆಗನುಸರಿಸಿ ಅನೇಕರಿಗೆ ಅವರವರ ಭಾವನೆಗನುಸರಿಸಿ ಅನೇಕ ಪ್ರಕಾರವಾಗಿ ಪ್ರತೀತಿಯಾಗಿದೆಯೆಂದೂ, ಮತ್ತು ಈಶ್ವರನ ವಿಷಯದಲ್ಲಿರುವ ಅನೇಕ ಪ್ರಕಾರವಾದ ವರ್ಣನೆಗಳು ಒಬ್ಬ ಪರಮೇಶ್ವರನ ವರ್ಣನೆಯೇ ಆಗಿದೆಯೆಂದೂ ನಂಬಿರುತ್ತಾನೆ. ಒಬ್ಬ ದೇವನೇ ಅನೇಕ ನಾಮಗಳಿಂದಲೂ, ರೂಪಗಳಿಂದಲೂ ಭಕ್ತರ ಇಚ್ಛಾನುಸಾರವಾಗಿ ಹೇಳಿಸಿಕೊಳ್ಳುವನೆಂದೂ, ಕಾಣಿಸಿಕೊಳ್ಳುವನೆಂದೂ ತಿಳಿದ ಭಕ್ತನು ಅನ್ಯರ ಧರ್ಮ ಹಾಗೂ ದೇವತೆಗಳ ಬಗೆಗೆ

ತಿಲಮಾತ್ರವಾದರೂ ದ್ವೇಷ, ಅಸೂಯಾದಿಗಳನ್ನು ತೋರಿಸದೆ, ಆದರತೆಯನ್ನೇ ವ್ಯಕ್ತಮಾಡುತ್ತಿರುತ್ತಾನೆ. ಆದರೆ ಕೆಲವು ಡಾಂಭಿಕರು ಅನ್ಯಧರ್ಮಗಳ ವಿಷಯದಲ್ಲಿ ತಾವು ಬಹು ಉದಾರಭಾವವುಳ್ಳವರೆಂದು ತೋರಿಸುವದಕ್ಕಾಗಿ ಮೂರ್ಖತನದಿಂದ ಅನೇಕ ಮಾರ್ಗಗಳಲ್ಲಿ ಈ ಕಡೆಯಿಂದ ಆ ಕಡೆಗೆ, ಆ ಕಡೆಯಿಂದ ಈ ಕಡೆಗೆ ಯಾವದೊಂದು ಧ್ಯೇಯವಿಲ್ಲದೆ ಓಡಾಡುತ್ತಿದ್ದರೆ ಇವರು ನಿಜವಾದ ಭಕ್ತರಾಗಲು ಯೋಗ್ಯರಲ್ಲವೆಂದು ತಿಳಿಯಬೇಕು. ಕಾರಣವೇನೆಂದರೆ, ಆಗ ತಾನೇ ಭೂಮಿಯಿಂದ ಅಂಕುರಿಸುತ್ತಿರುವ ವೃಕ್ಷದಸುತ್ತಲೂ ಬೇಲಿಯನ್ನಿಡುವದು ಅವಶ್ಯಕವಾಗಿರುವಂತೆ, ಭಕ್ತಿಮಾರ್ಗದಲ್ಲಿ ಸಾಗುತ್ತಿರುವ ಸಾಧಕನ ಸೂಕ್ಷ್ಮ ಮನಸ್ಸು, ಅನೇಕ ಪ್ರಕಾರವಾದ ಕಲ್ಪನೆಗಳಲ್ಲಿ, ಧ್ಯೇಯಗಳಲ್ಲಿ ತೊಡಗುವದು ಅಪಾಯಕರವಾದುದು. ಒಂದು ಸ್ಥಲದಲ್ಲಿ ಬಿತ್ತಿದ ಬೀಜವನ್ನು ಅಲ್ಲಿಯೇ ಇಟ್ಟರೆ ಅದು ಮೊಳೆತು, ಸಸಿಯಾಗಿ, ಬೇರುಬಿಟ್ಟು ಹೇಗೆ ಗಿಡವಾಗಿ ಫಲವನ್ನು ಕೊಡುತ್ತಿದೆಯೋ ಹಾಗೆಯೇ ಭಕ್ತಿಯೆಂಬ ಬೀಜವನ್ನು ಇಷ್ಟಮೂರ್ತಿಯೆಂಬ ಒಂದೇ ಸ್ಥಳದಲ್ಲಿ ಇರಿಸಿದರೇನೇ ಆ ಭಕ್ತಿಯು ಅಂಕುರಿಸಿ ಫಲವನ್ನುಂಟುಮಾಡುವದು. ಎಲ್ಲ ಭೂಮಿಯು ಒಂದೇಯೆಂದು, ಒಂದು ಸ್ಥಳದಲ್ಲಿ ಬಿತ್ತಿದ ಬೀಜವನ್ನು ತೆಗೆದು ಮತ್ತೊಂದು ಸ್ಥಳದಲ್ಲಿಟ್ಟು, ಮತ್ತೆ ಅಲ್ಲಿಂದ ತೆಗೆದುಕೊಂಡು ಇನ್ನೊಂದು ಸ್ಥಳಕ್ಕೆ ಹಾಕುತ್ತಹೋದರೆ ಹೇಗೆ ಆ ಬೀಜವು ಮೊಳೆತು ಸಸಿಯಾಗಿ ಫಲವನ್ನು ಕೊಡುವದಿಲ್ಲವೋ, ಹಾಗೆಯೇ ಭಕ್ತಿಯ ಬೀಜವನ್ನು ನಾನಾ ಮೂರ್ತಿಗಳೆಂಬ ಬೇರೆ ಬೇರೆ ಸ್ಥಳದಲ್ಲಿಡುತ್ತ ಹೋದರೆ, ಆ ಭಕ್ತಿಯಿಂದ ಮೋಕ್ಷವೆಂಬ ಫಲವು ದೊರೆಯುವದಿಲ್ಲ. ಆದಕಾರಣ ಒಂದೇ ಮೂರ್ತಿಯಲ್ಲಿಯೇ ಭಕ್ತಿಯನ್ನಿಡುವದು ವಿಹಿತವಾಗಿದೆ. ಆದಕ್ಕಾಗಿಯೇ ಬಸವೇಶ್ವರನು,—

"ದೇವನೊಬ್ಬ ನಾಮ ಹಲವು। ಪರಮಪತಿವ್ರತೆಗೆ ಗಂಡನೊಬ್ಬ
ಮತ್ತೊಂದಕ್ಕೆರಗಿದರೆ ಕಿವಿ ಮೂಗು ಕೊಯ್ಯುವನು। ಹಲವು ದೇವ
ರೆಂಜಲತಿಂಬುವರನೇನೆಂಬೆ ಕೂಡಲಸಂಗಮದೇವಾ॥

ಅಂದರೆ ಒಬ್ಬ ಮನುಷ್ಯನಿಗೆಯೇ ಪತ್ನಿಯು ಪತಿಯೆಂತಲೂ, ತಮ್ಮನು ಅಣ್ಣನೆಂತಲೂ, ಅಣ್ಣನು ತಮ್ಮನೆಂತಲೂ, ಮಗನು ತಂದೆಯೆಂತಲೂ, ತಂದೆಯು ಮಗನೆಂತಲೂ, ಸೊಸೆಯು ಮಾವನೆಂತಲೂ ಹೀಗೆ ಅನೇಕ ಹೆಸರುಗಳಿಂದ ಕರೆಯುತ್ತಾರೆಯೋ ಹಾಗೆಯೇ ವಿಶ್ವವ್ಯಾಪಿಯಾದ ಪರಮಾತ್ಮ

ನೊಬ್ಬನಿಗೇನೇ ಅನೇಕ ಹೆಸರುಗಳಿಂದ ಕರೆಯುತ್ತಾರೆ. ಯಾರು ಯಾವ ಹೆಸರಿನಿಂದ ಪ್ರಾರ್ಥಿಸಿದರೂ ಆ ಪ್ರಾರ್ಥನೆಯು ಪರಬ್ರಹ್ಮಕ್ಕೇನೇ ಮುಟ್ಟುತ್ತದೆ. ಆದರೂ ಭಕ್ತನು ತನ್ನ ಇಷ್ಟಮೂರ್ತಿಯಲ್ಲಿಯೇ ನಿಷ್ಠೆಯುಳ್ಳವನಾಗಿರಬೇಕು. ಲೋಕದಲ್ಲಿರುವ ಎಲ್ಲ ಪುರುಷರು ತನ್ನ ಪತಿಯಂತೆಯೇ ಪುರುಷರಾಗಿದ್ದರೂ ಪತಿವ್ರತೆಯಾದ ಸ್ತ್ರೀಯಳು ಹೇಗೆ ತಾನು ಲಗ್ನವಾದ ಪುರುಷನನ್ನು ಮಾತ್ರ ಪತಿಯೆಂದು ಭಾವಿಸಿ ಪತಿಭಕ್ತಿಯನ್ನು ಆತನಲ್ಲಿ ಮಾತ್ರ ಇಡುತ್ತಾಳೆಯೋ ಹಾಗೆಯೆ ಭಕ್ತನು ತನ್ನ ಇಷ್ಟದೇವತೆಯಂತೆ ಅನ್ಯರ ಇಷ್ಟಮೂರ್ತಿಗಳು ದೇವತೆಗಳೇ ಎಂದು ತಿಳಿದುಕೊಂಡರೂ, ತನ್ನಿಷ್ಟಮೂರ್ತಿಯಲ್ಲಿಯೇ ನೈಷ್ಠಿಕ ಭಕ್ತಿಯನ್ನು ನೆಲೆಗೊಳಿಸಬೇಕು ಎಂದು ಹೇಳಿರುವನು.

ತುಲಸಿ ರಾಮಾಯಣದಲ್ಲಿ ಹನುಮಂತನು "ಜಾನಕೀನಾಥನು ಮತ್ತು ಶ್ರೀನಾಥನು ಒಂದೇ ರೂಪದ ಎರಡು ಅವತಾರಗಳೆಂದು ನನಗೆ ಪೂರ್ಣವಾಗಿ ಗೊತ್ತಿದೆ. ಆದರೂ ಕಮಲನಯನನಾದ ರಾಮನ ಮೂರ್ತಿಯೇ ನನ್ನ ಹೃದಯದಲ್ಲಿ ವಾಸವಾಗಿರುವದೆಂದೂ, ಸರ್ವರ ರಾಮ ರೂಪವೇ ನನಗೆ ಕಾಣುತ್ತಿರುವದೆಂದೂ" ಹೇಳಿರುವ ಮಾತು ಭಕ್ತಿಯೋಗದ ಮೂಲ ಸೂತ್ರವೇ ಆಗಿದೆ. ಸರ್ವರ ಕೂಡ ಸರ್ವರ ಹೆಸರು ತಕ್ಕೊಳ್ಳಬೇಕು. ಎಲ್ಲದಕ್ಕೂ ಹೌದು, ಹೌದು ಅನ್ನಬೇಕು. ಆದರೆ ಸ್ವಕೀಯವಾದ ಧ್ಯೇಯವನ್ನು ಮಾತ್ರ ಯಾವಾಗಲೂ ಬಿಟ್ಟಿರಬಾರದು. ಇದೇ ಭಕ್ತಿಯೋಗದ ರಹಸ್ಯವಾಗಿದೆ.

ಭಕ್ತಿಯೋಗವು ಪರಿಪೂರ್ಣತೆಯನ್ನು ಹೊಂದಬೇಕಾದರೆ ಭಕ್ತನಲ್ಲಿ ಪರಮಾತ್ಮನ ಬಗೆಗೆ ಇನ್ನೊಂದು ಭಾವವು ಪ್ರಕಟವಾಗುವದು. ಅದಕ್ಕೆ ವಿರಹ ಭಕ್ತಿಯೆಂತಲೂ, ಮಧುರ ದುಃಖವೆಂತಲೂ ಕರೆಯುವರು. ಪರಮೇಶ್ವರನ ದರ್ಶನವಾಗಲೊಲ್ಲದೆಂಬುವ ವಿರಹದಿಂದ ಭಕ್ತನು ಅತ್ಯಂತ ವ್ಯಾಕುಲನಾಗುವನು; ದುಃಖಿಯಾಗುವನು; ದುಮ್ಮಾನಗೊಳ್ಳುವನು. ಆವನಿಗ ಯಾವ ವಿಷಯದಲ್ಲಿಯೂ ಸುಖವೆನಿಸುವದಿಲ್ಲ. ಪರಮಾತ್ಮನ ಹೊರ್ತು ಅನ್ಯ ಯಾವ ವಸ್ತುವಿನ ದರ್ಶನವಾದರೂ ಅವನ ಸಮತೋಲನವು ತಪ್ಪಿಬಿಡುತ್ತದೆ. ಲೌಕಿಕರ ಪ್ರೇಮದಲ್ಲಿಯೂ ಕೂಡ ಈ ಪ್ರಕಾರವಾದ ವಿರಹವು ನಮಗೆ ಕಾಣುತ್ತಿರುವದು. ಒಬ್ಬ ಪುರುಷನು ಒಬ್ಬ ಸ್ತ್ರೀಯಲ್ಲಿ ಅಥವಾ ಒಬ್ಬ ಸ್ತ್ರೀಯಳು ಒಬ್ಬ ಪುರುಷನಲ್ಲಿ ಅತಿಶಯವಾದ

ಅನುರಾಗವನ್ನಿಟ್ಟಿದ್ದಾದರೆ ತನ್ನ ಪ್ರೀತಿಯ ವ್ಯಕ್ತಿಗಳ ವಿನಾ ಇತರರ ದರ್ಶನವು ಅವರಿಗೆ ಅಸಹ್ಯವಾಗಿ ತೋರುತ್ತದೆ. ಅದರಂತೆ ಪರಾಭಕ್ತಿಯ ಉದ್ರೇಕವು ಮನಸ್ಸಿನಲ್ಲುಂಟಾದರೆ ಪರಮಾತ್ಮನ ವಿನಾ ಬೇರೆ ಯಾವ ವಸ್ತುವಿನ ಸಂಪರ್ಕವೂ ಕೂಡ ಆ ಭಕ್ತನಿಗೆ ಸಹಿಸುವದಾಗುವದಿಲ್ಲ. ಅವನು ನೆಸಿಸಿದಲ್ಲಿಯೂ, ಕನಸಿನಲ್ಲಿಯೂ ಪರಮಾತ್ಮನ ಚಿಂತನೆಯನ್ನೇ ಮಾಡು ತ್ತಿರುವನು. ಶ್ರವಣ, ಕೀರ್ತನ, ಸ್ಮರಣೆ ಮೊದಲಾದ ನವವಿಧ ಭಕ್ತಿ ಯಲ್ಲಿಯೇ ಕಾಲಕಳೆಯುವನು. ಚೈತನ್ಯ, ಬಸವ, ಅಕ್ಕ ಮಹಾದೇವಿ, ಮೀರಾಬಾಯಿ ರಾಮಕೃಷ್ಣ ಪರಮಹಂಸ ಮೊದಲಾದವರು ಈ ಪರಾ ಭಕ್ತಿಗೆ ಆದರ್ಶಮೂರ್ತಿಗಳಾಗಿರುತ್ತಾರೆ. ಇದೇ ಭಕ್ತಿಯೋಗದ ಕೊನೆಯ ಮೆಟ್ಟಲು.

•

ಇಂಥ ಭಗವದ್ಭಕ್ತರಿಗೆ ಲೋಕದ ಜನರು "ಹುಚ್ಚರು" ಎಂದು ಸಂಬೋಧಿಸುವರು. ಆದರೆ ಚನ್ನಾಗಿ ವಿಚಾರಮಾಡಿ, ವಿಮರ್ಶೆ ಮಾಡಿ ನೋಡಿದರೆ ಇಡೀ ಪ್ರಪಂಚವೇ ಹುಚ್ಚರ ಆಸ್ಪತ್ರೆಯಾಗಿದೆಯೆಂದು ನಿಚ್ಚಳ ವಾಗಿ ಕಂಡುಬರುವದು. ಪ್ರಪಂಚದಲ್ಲಿರುವ ಪ್ರತಿಯೊಬ್ಬ ಮಾನವನಿಗೂ ಒಂದಿಲ್ಲೊಂದು ಪ್ರಕಾರದ ಹುಚ್ಚು ಹಿಡಿದೇ ಇರುವದು. ಕೆಲವರಿಗೆ ಹೆಂಣಿನ ಹುಚ್ಚು, ಕೆಲವರಿಗೆ ಗಂಡಿನ ಹುಚ್ಚು, ಕೆಲವರಿಗೆ ಹೊನ್ನಿನ ಹುಚ್ಚು, ಕೆಲವರಿಗೆ ಮಂಣಿನ ಹುಚ್ಚು, ಕೆಲವರಿಗೆ ಮಕ್ಕಳ ಹುಚ್ಚು, ಕೆಲವರಿಗೆ ಅಧಿಕಾರದ ಹುಚ್ಚು, ಕೆಲವರಿಗೆ ಉಡುಪಿನ ಹುಚ್ಚು, ಕೆಲವ ರಿಗೆ ಕೀರ್ತಿಯ ಹುಚ್ಚು, ಕೆಲವರಿಗೆ ಚಟಗಳ ಹುಚ್ಚು, ನನಗೆ ರೇಡಿಯೋ ದಲ್ಲಿ ಭಾಷಣಮಾಡುವ ಹುಚ್ಚು, ನಿಮಗೆ ರೇಡಿಯೋದಲ್ಲಿ ಕೇಳಬೇಕೆಂಬುವ ಹುಚ್ಚು ಅಂತೂ ಮನುಷ್ಯಮಾತ್ರಕ್ಕೆಲ್ಲ ಒಂದಿಲ್ಲೊಂದು ರೀತಿಯ ಹುಚ್ಚು ತನ ಬಡಕೊಂಡದ್ದೇ ಕಂಡುಬರುವದರಿಂದ ಭಗವದ್ಭಕ್ತರಿಗೆ ದೇವರ ಹುಚ್ಚುಹಿಡಿದಿದೆಯೆನ್ನುವದರಲ್ಲಿ ಯಾವ ದೋಷವೂ ಇಲ್ಲ. ಆದರೆ ಉಳಿ ದವರ ಹುಚ್ಚು ಕ್ಷಣಿಕ ಸುಖದಾಯಕವಾದ ಮಿಥ್ಯ ವಸ್ತುಗಳಿಗಾಗಿರುವದು. ಭಕ್ತರ ಹುಚ್ಚು ಮಾತ್ರ, ಅತ್ಯಂತ ದುಃಖನಿವೃತ್ತಿ ಪರಮಾನಂದ ಪ್ರಾಪ್ತಿಗೆ ಕಾರಣನಾದ ಪರಮಾತ್ಮನ ಕೂಡುವದಾಗಿರುವದು.

ಇಂಥ ಹುಚ್ಚುಹಿಡಿದ ಜೀವನವೇ ಪುಣ್ಯಜೀವನವು; ಪವಿತ್ರ ಜೀವ ನವು; ಕಡೆಯ ಜೀವನವು. ಹೀಗೆ ದೇವರ ಹುಚ್ಚುಹಿಡಿದ ಭಕ್ತನನ್ನು

ಕುರಿತು ಶ್ರೀಕೃಷ್ಣನು ಗೀತೆಯ ೯ನೇ ಅಧ್ಯಾಯದ ೩೧ನೇ ಶ್ಲೋಕದಲ್ಲಿ "ಕ್ಷಿಪ್ರಂ ಭವತಿ ಧರ್ಮಾತ್ಮಾ ಶಶ್ವಚ್ಛಾಂತಿಂ ನಿಗಚ್ಛತಿ.। ಕೌಂತೇಯ ಪ್ರತಿಜಾನೀಹಿ ನಮೆ ಭಕ್ತಃ ಪ್ರಣಶ್ಯತಿ ॥"

ಅಂದರೆ ಭಗವದ್ಭಕ್ತನು ಭಕ್ತಿಯ ಸಮಕಾಲದಲ್ಲಿಯೇ ಧರ್ಮಾತ್ಮನಾಗಿ ಶಾಶ್ವತವಾದ ಅಮರ ಶಾಂತಿಯನ್ನು ಹೊಂದುವನೆಂದು ಪ್ರತಿಜ್ಞಾ ಪೂರ್ವಕವಾಗಿ ತಿಳಿದುಕೊಳ್ಳು ಎಂದು ಹೇಳಿದ್ದಾನೆ. ಅದರಂತೆ ಬಸವೇಶ್ವರನೂ ಸಹ "ವೇದಪ್ರಿಯನೆಂಬರು ಶಿವನು ವೇದಪ್ರಿಯನಲ್ಲವಯ್ಯ; ನಾದಪ್ರಿಯನೆಂಬರು ಶಿವನು ನಾದಪ್ರಿಯನಲ್ಲವಯ್ಯ! ವೇದವನೋದಿದ ಬ್ರಹ್ಮನ ತಲೆ ಹೋಯಿತ್ತು। ನಾದವ ನುಡಿಸಿದ ರಾವಣಂಗೆ ಅರೆ ಆಯುಷ್ಯ ಆಯಿತ್ತು। ವೇದಪ್ರಿಯನು ಅಲ್ಲ ನಾದಪ್ರಿಯನು ಅಲ್ಲ ಭಕ್ತಿಪ್ರಿಯ ನಮ್ಮ ಕೂಡಲಸಂಗಮದೇವಾ। ಎಂಬುದಾಗಿ ಡಂಗುರ ಸಾರಿದ್ದಾನೆ.

## ಕೊನೆಯ ಮಾತು

ಒಬ್ಬ ಮಹಾನುಭಾವರ ಅನುಭವದುಕ್ತಿಯಂತೆ ಭಕ್ತಿಯ ಶಕ್ತಿಯೆಂದರೆ ದೇವರಿಗೆ ಶರಣಾಗುವದು. ಆತ್ಮವು ಭಕ್ತಿಯಾಗಬೇಕು. ತನ್ನನ್ನು ಮರೆತು ದೇವನಲ್ಲಿ ಬೆರೆತುಕೊಳ್ಳಬೇಕು. ಅಂದರೆ ಎಲ್ಲವೂ ಸರಿಹೋಗುವದು. ಕಷ್ಟನಷ್ಟಗಳು ಕಾಣವು. ಅಸಾಧ್ಯವು ಸಾಧ್ಯವಾಗುವದು. ನಮ್ರವಾಗಿ ನಡೆಯಬೇಕು. ಸೊಕ್ಕು ಠಕ್ಕುಗಳು ತಕ್ಕುದಲ್ಲ ದೇವನಲ್ಲಿ. ಹೊಳೆಯಲ್ಲಿ ಹೊಳೆಯುವ ಮತ್ಸ್ಯವನ್ನು ನೋಡಬೇಕು. ಜಲವೇ ಅದರ ಜೀವನವಾಗಿರುವದು. ಮೀನು ನೀರಿಲ್ಲದೆ ನಲಿಯದು. ಜಲವಿಲ್ಲದೆ ಜೀವಿಸದು. ಇಷ್ಟೇ ಅಲ್ಲ, ನೀರಿಲ್ಲದ ನೆಲದಲ್ಲಿ ತೊಳಲುವದು, ಬಳಲುವದು, ವಿಲಿವಿಲಿ ಒದ್ದಾಡುವದು ಕಡೆಗೆ ನೀರಿಗಾಗಿ ತಡವಿಲ್ಲದೆ ಮಡಿಯುವದು. ಇದೇ ಜಲದಲ್ಲಿಯ ಮೀನಿನ ಭಕ್ತಿ. ಅಂತೆಯೇ ಹೊಳೆಯಾದರೂ ಮೀನಿಗೆ ಮನಬಂದಂತೆ ಬಳಿಕೆ ಮಾಡಿಕೊಡುವದು. ಮೀನು ಮಹಾ ಪ್ರವಾಹದಲ್ಲಿಯೂ ನೀರಿನ ಇದಿರು ಈಸುವದು. ಅದೇ ಗುಡ್ಡದಂಥ ಮದ್ದಾನೆಯು ನದಿಯಲ್ಲಿ ಇದಿರು ಈಸಲು ಹೋಗಿ, ತೆರೆಯ ಹೊಡೆತಕ್ಕೆ ಕಾಲುಮೇಲಾಗಿ, ಸೊಂಡಿಲು ಕೆಳಗಾಗಿ, ಹೊರಳುತ್ತ ಉರುಳುತ್ತ,

ಹೊಳೆಯ ತಳಕ್ಕೆ ಸಿಕ್ಕು ಸಾಯುವದು. ಇದು ಸೊಕ್ಕಿನ ಸಾವು; ಗರ್ವ ಗಂಡಾಂತರ. ಮೀಸಿನದು ವಿನಯದ ವಿಜಯವು; ಭಕ್ತಿಯೋಗದ ಭಾಗ್ಯವು ಇಂಥ ಭಕ್ತಿಯೋಗದ ಅನುಭವವನ್ನು ಭಾರತೀಯರೆಲ್ಲರಿಗೂ ಭಗವಂತನು ಅನುಗ್ರಹ ಮಾಡಲೆಂದು ಪ್ರಾರ್ಥಿಸಿ ಭಾಷಣ ಪೂರೈಸುವೆನು.

( ಧಾರವಾಡ ಬಾನುಲಿ ಒಡೆಯರ ಅನುಮತಿಯಿಂದ ಲೇಖಕರಿಂದ ಪ್ರಸಿದ್ಧಿಸಲ್ಪಟ್ಟದೆ. )

---

# ಏಳುನೂರಾ ಎಪ್ಪತ್ತು ಅಮರಗಣಂಗಳ ಪೂಜಾಮಹೋತ್ಸವ

**ಯದಾಯದಾಹಿ ಧರ್ಮಸ್ಯ ಗ್ಲಾನಿರ್ಭವತಿ ಭೂತಲೇ।**
**ತದಾತದಾವತಾರೋಯಂ ಗಣೇಶಸ್ಯ ಮಹೀತಲೇ॥**
**(ಶಿವಾಗಮ)**

ಶ್ರೀಮನ್ನಿರಂಜನ ಪರಮಪೂಜ್ಯ ಶ್ರೀ ಬಂಥನಾಳ ಮಹಾ ಶಿವಯೋಗಿಗಳವರ ಕೃಪಾಶೀರ್ವಾದ ಬಲದಿಂದ ವಿಜಾಪೂರ ಜಿಲ್ಲಾ ಲಿಂಗಾಯತ ವಿದ್ಯಾವರ್ಧಕ ಸಂಘದ ಪರವಾಗಿ ಹೊರಡಿಸಿದಪ್ರಕಟನೆ.



ಸಾಮೂಹಿಕ ಜೀವನವನ್ನು ಸಾಗಿಸುತ್ತಿರುವ ಮಾನವ ಜನಾಂಗವು ಉದಾತ್ತವಾದ ನೈತಿಕ, ಧಾರ್ಮಿಕ, ಸಾಮಾಜಿಕ ಬಲವನ್ನು ಸಾಧಿಸಬೇಕಾದರೆ ಪುಣ್ಯಪುರುಷರ, ಮಹಾವಿಭೂತಿಗಳ ಸ್ಮರಣೆಯು ಮೇಲಿಂದ ಮೇಲೆಬೇಕು. ಕಾಲ ಕಾಲಕ್ಕೆ ಅವರು ನಿರೂಪಿಸಿ ಹೋದ ತತ್ವಾವಬೋಧೆಯೋ ಜೀವನಶ್ರೇಯೋ ಮಾರ್ಗದಲ್ಲಿ ಜನಜಂಗುಳಿಯನ್ನು ಕೈಹಿಡಿದುಕರೆದೊಯ್ಯುವ ಕರುಣಾಳು ಬೆಳಕಾಗಬೇಕು. ಹಿಂದಿನ ಆದರ್ಶ ಜೀವಿಗಳೇ ಇಂದಿನವರ ಬಾಳಬಟ್ಟೆಯ ಕೈಪಿಡಿಯಾಗಬೇಕಲ್ಲವೇ? ಜಾಗತಿಕ ಧಾರ್ಮಿಕ ದರ್ಶನಗಳೆಲ್ಲ ಒಂದು ದೃಷ್ಟಿಯಿಂದ ಈ ರೀತಿಯಾದ ಕೈಪಿಡಿಗಳೇ ಸರಿ.

ಧರ್ಮವೆಂದರೆ ಮಾನವನನ್ನು ಉಚ್ಚಸಂಸ್ಕಾರದಿಂದ ಉದಾತ್ತಗೊಳಿಸುವ—ಮಾನವ ಹೃದಯವನ್ನು ವಿಕಾಸಗೊಳಿಸಿ, ಪರಿಪಕ್ವಗೊಳಿಸಿ, ಸಂಪೂರ್ಣ ಪರಿವರ್ತನೆಯನ್ನು ಹೊಂದುವಂತೆ ಮಾಡಿ—ಆತ್ಮವಿಕಾಸವನ್ನು ಸಾಧಿಸಲು ಸಹಾಯಕಾರಿಯಾಗುವ ಒಂದು ಸಾಧನವೆಂದು ಹೇಳಬಹುದು. ಅದರಲ್ಲಿ ಭಕ್ತಿ, ನಿಷ್ಠೆ, ಸತ್ಯ. ಜ್ಞಾನ, ವೈರಾಗ್ಯ ಮೊದಲಾದುವುಗಳೆಲ್ಲ ಅಡಕವಾಗಿರುತ್ತವೆ. ಇಂತಹ ಉದಾತ್ತ ತಳಹದಿಯುಳ್ಳ ಧರ್ಮಗಳಲ್ಲಿ ಲಿಂಗಾಂಗ ಸಾಮರಸ್ಯದ ತತ್ವವನ್ನು ಎತ್ತಿಹೇಳುವ ಷಟ್‌ಸ್ಥಲ-ಅಷ್ಟಾವರಣಗಳ, ಪಂಚಾಚಾರಗಳ ಕಲ್ಪನೆಯುಳ್ಳ ವೀರಶೈವ ಧರ್ಮವೂ ಒಂದೆಂದು ಹೇಳಬೇಕಾಗುತ್ತದೆ. ಈ ಧರ್ಮಕ್ಕೆ ಕಾರಣಪುರುಷರೆನಿಸಿಕೊಂಡ ಬಸವಾದಿ ಏಳನೂರಾ ಎಪ್ಪತ್ತು ಅಮರಗಣಂಗಳನ್ನು ಮಾನವರಾದ ನಾವು ಎಷ್ಟು ಹೊಗಳಿದರೂ ಎಷ್ಟು ಪೂಜಿಸಿದರೂ ತೀರದು.

೧೧–೧೨ನೆಯ ಶತಮಾನಗಳಲ್ಲಿ, ಸಂಸ್ಕಾರ ವಿರಹಿತರಾದ ಮಾನವರನ್ನು ಅಂದರೆ ಭವಿಗಳನ್ನು ಭಕ್ತರನ್ನಾಗಿಮಾಡಿ, ಕಾಯಕತತ್ವವನ್ನು ಬೆಳಗಿಸಿ, ಸತ್ಯ; ಅಹಿಂಸೆ, ನೀತಿ, ನಿಷ್ಠೆ, ತ್ಯಾಗಬುದ್ಧಿಗಳು ಮಾನವ ಸಮಾಜದಲ್ಲಿ ನೆಲೆಗೊಂಡು ನಿಲ್ಲುವಂತೆ ಮಾಡಿದ ಪ್ರಮಥರು ಜಗತ್ತಿನ ಯಾವ ಮಹಾಪುರುಷರಿಗಿಂತಲೂ ಕಡಿಮೆ ತರಗತಿಯವರಲ್ಲ. ಅಬ್ರಾಹಂಲಿಂಕನ್ನನು ಪ್ರಾಣಿ ದಾಸ್ಯದಲ್ಲಿ ತಳಮಳಿಸುತ್ತಲಿದ್ದ ನಿಗ್ರೋಜನರನ್ನುದ್ಧರಿಸಿದರೆ, ಕರ್ಮಕಾಂಡದಲ್ಲಿ, ಅಂಧಪರಂಪರೆಯಲ್ಲಿ, ಮೂಢಧರ್ಮದಲ್ಲಿ ಹೊರಳಾಡುತ್ತಲಿದ್ದ ಪಾಮರರನ್ನು ಶಿವಶರಣರು ಪಾವನರನ್ನಾಗಿ ಮಾಡಿದ್ದಾರೆ. ಕ್ರೈಸ್ತ, ಪೈಗಂಬರರಂತೆ ಕೀಳು ದೇವತೆಗಳ ಪೂಜೆಯನ್ನು ಅಲ್ಲಗಳೆದು, ಕ್ರೂರಪದ್ಧತಿಯ ಬಲಿಕರ್ಮಾದಿಗಳನ್ನು ಹಳಿದು ಶಿವಶರಣರೂ ನಿರಾಕಾರ ಪರಶಿವನ ಏಕೇಶ್ವರೀ ಪಂಥವನ್ನು ಸ್ಥಾಪಿಸಿದ್ದಾರೆ. ಲೋಕಮಾನ್ಯ ಟಿಳಕರು ಅಜ್ಞಾನಿಗಳಿಗೆ ಅವಶ್ಯವಾದ ಜ್ಞಾನದೀಕ್ಷೆಯನ್ನು ದಯಪಾಲಿಸಿ ಜನತೆಯನ್ನು ಜಾಗೃತಗೊಳಿಸಿದ್ದರೆ ಅಮರಗಣಂಗಳು ಮತಜಾತಿಗಳ ತಿಕ್ಕಾಟದಿಂದ ನುಚ್ಚುನೂರಾದ ಮಾನವ ಜನಾಂಗವನ್ನು “**ಶಿವಭಕ್ತರಲ್ಲಿ ಕುಲವನೆಣಿಸದ**” ಮಹಾ ಮಾನವ ಧರ್ಮದಿಂದ ಜಾಗೃತಗೊಳಿಸಿ ಸಮಾಜದ ಕಟ್ಟನ್ನು ಬಿಗಿಮಾಡಿದ್ದಾರೆ. ಭಾರತರಾಷ್ಟ್ರ-ಪಿತಾಮಹನೆನಿಸಿಕೊಂಡ ಮಹಾತ್ಮಾ ಗಾಂಧೀಜಿಯವರು ಸತ್ಯ, ಅಹಿಂಸೆ, ಹರಿಜನೋದ್ಧಾರ ಕಾರ್ಯಗಳಿಂದ ಮಾನವಸಮಾಜಕ್ಕೆ ಎಂದೂ ಮರೆಯದ ಮಹಾ

ಸೇವೆಯನ್ನು ಸಲ್ಲಿಸಿದ್ದರೆ, ಹಿಂದಿನ ದಿನಮಾನಗಳಲ್ಲಿ, ವೈಜ್ಞಾನಿಕ ವಿಕಾಸವು ಮುಂದುವರಿಯದಿದ್ದ ಕಾಲದಲ್ಲಿ "**ದಯವೇ ಧರ್ಮದ ಮೂಲ,**" "**ಸತ್ಯವ ನುಡಿವುದೇ ಸ್ವರ್ಗಲೋಕ,**" **ಮಾದಾರನೆಂಬನೇ ಚನ್ನಯ್ಯನ**" ಎಂದು ಮೊದಲಾಗಿ ವಚನ ಸಾಹಿತ್ಯದಲ್ಲಿ ಪ್ರಚಾರಿಸಿ, ಅದರಂತೆ ಆಚರಿಸಿ, ಬಸವಾದಿ ಪ್ರಮಥರು ನಮ್ಮ ನಾಡಿನ ಮುತ್ತಜ್ಜರಾಗಿದ್ದಾರೆ. ಇಂತಹ ಶಿವಶರಣರ ಮತಧರ್ಮವು ಕೇವಲ ಒಂದು ಪಂಗಡದವರ ಮತಧರ್ಮವೆಂದು ಕಲ್ಪಿಸುವುದು ಕೇವಲ ಸಂಕುಚಿತ ದೃಷ್ಟಿಯೇ ಸರಿ. ಇಂತಹ ಧರ್ಮಕ್ಕೆ ಮೂರ್ತಸ್ವರೂಪಕರಾಗಿ ಅವತರಿಸಿದರೆಂದು ಪ್ರಖ್ಯಾತಿ ಇರುವ ಏಳುನೂರಾ ಎಪ್ಪತ್ತು ಅಮರಗಣಂಗಳ ಆರಾಧನೆ, ಸ್ವಾರ್ಥದಿಂದ ಪಕ್ಷಪಂಗಡಗಳಿಂದ ವ್ಯಾಮರೆತ ಇಂದಿನ ಮಾನವ ಸಮಾಜದ ಜಾಗೃತಿಗೆ ಅತ್ಯವಶ್ಯವೆನಿಸದಿರದು.

ಮಾಯಾವಿಕಾರಿಯಾದ ಮಾನವನ ಕಾಯಶುದ್ಧಿಯನ್ನು ಮಾಡಿ, ಪ್ರಾಣಕ್ಕೆ ಅರಿವನ್ನು ತೋರಿ, ಸುಜ್ಞಾನವು ಪ್ರಭಾವಿಸುವಂತೆ ಮಾಡಿ ಜೀವತ್ರಯಗಳ ಪ್ರಪಂಚವನ್ನು ನಿವೃತ್ತಮಾಡಿ, ಪೂರ್ವಾಶ್ರಯವನ್ನು ಕಳಿಸುಭವಿಯನ್ನು ಭಕ್ತನನ್ನಾಗಿಮಾಡಿ, ಪಂಡತತ್ವದಲ್ಲಿದ್ದೇ ಪರತತ್ವವನ್ನರಿಯಬೇಕೆಂದು, ಅರಿವುದಕ್ಕೊಂದು ಕುರುಹು ಬೇಕೆಂದು, ಭಕ್ತನ ಅಂಗದಲ್ಲಿ ಲಿಂಗಸಾಹಿತ್ಯವನ್ನು ಮಾಡಿ ವಿಷಯಸಂಗರಾಹಿತ್ಯವನ್ನುಂಟುಮಾಡುವನು; ಆಗ ಭಕ್ತನು ಆಶಾಪಾಶವನ್ನು ನಾಶಮಾಡಿ, ತ್ರಿವಿಧಲಿಂಗಸ್ಥಿತಿ, ತ್ರಿವಿಧದಾಸೋಹಂ ಭಾವನೆಗಳಿಂದ ವರ್ತಿಸುವದರಿಂದ ಷಟ್‌ಸ್ಥಲಗಳನ್ನು ಸಾಧಿಸುತ್ತಾನೆ. ಆಗ ಆತನಿಗೆ ದೇಹಭಾವ ನಷ್ಟವಾಗಿ, ಶಿವಭಾವ ಪ್ರಾಪ್ತವಾಗಿ, ಸ್ಥಿರಗೊಂಡು, ನಾದ-ಬಿಂದು-ಕಳಾತೀತನಾಗಿ ಪರತತ್ವದಲ್ಲಿ ಸಮರಸನಾಗುತ್ತಾನೆ. ಇದೇ ಅಮರಗಣಂಗಳು, ಶಿವಶರಣರು ನಿರೂಪಿಸಿದ ಲಿಂಗಾಂಗ ಸಾಮರಸ್ಯದ ಸ್ಪಷ್ಟವಾದ ಮಾನವಧರ್ಮ. ಗತಕಾಲದ ಆದರ್ಶಗಳನ್ನು ಪದೇಪದೇ ಮರೆಯುವುದು ಪ್ರಪಂಚದ ಹೊಂಚಿನಲ್ಲಿ ಸಿಲುಕಿ ನರಳುವ ಮಾನವನ ಸಹಜ ಸ್ವಭಾವವಾದುದರಿಂದ, ಆತ್ಮಾನುಭಾವ-ಶಿವಾನುಭಾವಗಳ ಸಮನ್ವಯ ಸ್ವರೂಪನಿದರ್ಶನದಿಂದ ಜನತೆಯಲ್ಲಿ ನೈತಿಕ, ಧಾರ್ಮಿಕ ಜಾಗೃತಿಯನ್ನುಂಟು ಮಾಡುವ ಸದುದ್ದೇಶದಿಂದ, ವಿಜಯಪುರ ನಗರದಲ್ಲಿ, ವಿಜಯಕಾಲೇಜದ ಹೊಸಕಟ್ಟಡದ ಬಯಲಲ್ಲಿ, ಬರಲಿರುವ ಕಾರ್ತಿಕ ಮಾಸದಲ್ಲಿ, **ಏಳುನೂರಾ ಎಪ್ಪತು ಅಮರಗ**

೫೦ಗಳ, ಏಳನೂರಾ ಎಪ್ಪತ್ತು ಮಂಟಪಗಳ ಮಹಾಪೂಜೆಯ ಏರ್ಪಾಡು ಮಾಡಬೇಕೆಂದು ಭಕ್ತವೃಂದವು ಬಲವಾಗಿ ಬಿನ್ನವಿಸಿಕೊಂಡ ಮೂಲಕ ಈ ಮಹಾತ್ಕಾರ್ಯಕ್ಕೈಕೊಳ್ಳಲಾಗಿದೆ ಒಂದೊಂದು ಮಂಟಪದ ಪೂಜಾವ್ಯವಸ್ಥೆಯನ್ನು ವಹಿಸಿಕೊಂಡ ಭಕ್ತನು ೧೫೧ ರೂ (ಒಂದು ನೂರಾ ಐವತ್ತೊಂದು ರೂಪಾಯಿ) ನಿಧಿಯನ್ನು ಸಲ್ಲಿಸಬೇಕಾಗುವುದು. ಈ ೧೫೧ ರೂ. ಗಳಲ್ಲಿ ೫೧ ರೂ, ಕಾಲೇಜನಿಧಿಗೆ, ೫೦ ರೂ ಮಂಟಪಪೂಜೆ ಆಗಮಿಸುವ ಸ್ವಾಮಿಗಳವರ ಪೂಜೋಪಕರಣ ಆಗಮನ-ನಿರ್ಗಮನ ಸಹಿತ ವೆಚ್ಚಕ್ಕೆ, ಇನ್ನುಳಿದ ೫೦ ರೂ. ಅನ್ನ ಸಂತರ್ಪಣಾದಿ ಸಕಲ ವ್ಯವಸ್ಥೆಗೆ ವಿನಿಯೋಗಿಸಲಾಗುವುದು. ಹೀಗೆ ಏರ್ಪಡಿಸಲಾದ ಮಂಟಪಪೂಜೆಗಳಾಗಿಯನ್ನು ವಹಿಸಿಕೊಂಡ ಭಕ್ತರು ವಿದ್ಯಾದಾನದ ಧರ್ಮಪೋಷಣೆಯ, ಅನ್ನದಾನದ ಫಲಗಳನ್ನು ಏಕಕಾಲಕ್ಕೆ ಪಡೆದಂತಾಗುತ್ತಿದೆ. ಒಂದೊಂದು ಮಂಟಪಪೂಜೆಯ ವ್ಯವಸ್ಥೆಯನ್ನು ಒಬ್ಬೊಬ್ಬ ಭಕ್ತನು ವಹಿಸಿಕೊಳ್ಳುವದೆಂದರೆ ಒಟ್ಟಿಗೆ ಏಳನೂರಾ ಎಪ್ಪತ್ತು ಜನ ಭಕ್ತರಿಗೆ ಮಾತ್ರ ಅಮರಗಣ-ಮಂಟಪಪೂಜಾ ಸುಸಂಧಿ ದೊರೆಯುತ್ತದೆ. ಆದುದರಿಂದ ಒಂದೊಂದು ಮಂಟಪಪೂಜೆಯನ್ನು ವಹಿಸಿಕೊಳ್ಳಲಿಚ್ಛೆಯುಳ್ಳ ಧರ್ಮಬಂಧುಗಳು ಮುಂಚಿತವಾಗಿ ಪತ್ರಬರೆದು ಅದನ್ನು ನಿರ್ದಿಷ್ಟ ಪಡಿಸಿಕೊಳ್ಳಬೇಕಾಗಿ ವಿನಂತಿ.

ಎಸ್. ಬಿ ಪಾಟೀಲ.

ಚೇರಮನ್,

ಜಿಲ್ಲಾ ಲಿಂಗಾಯತ ವಿದ್ಯಾವರ್ಧಕ ಸಂಘ, ವಿಜಾಪುರ.



ಸಂಪುಟ ೨೮

ಸಂಚಿಕೆ ೬-೭

# ಶ್ರೀ ಶಿವಾನುಭವ

-: ಸಂಪಾದಕರು :-

ಫ. ಗು. ಹಳಕಟ್ಟಿ,
ಬಿ. ಎ. ಎಲ್ ಎಲ್. ಬಿ.

## ವಿಜಾಪೂರ

ವಾ. ಚ. ೫-೧೨-೦ ]

[ ಜುನ-ಜುಲೈ ೧೯೫೪

---

# ಶಿವಾನುಭವ.



ಈ ಪತ್ರಿಕೆಯಲ್ಲಿ ಸಂಚಿಕೆ ೬ ಮತ್ತು ೭ ಇವೆರಡೂ ಸಮಾವೇಶವಾಗಿದ್ದು,
ಆ ಪ್ರಕಾರ ತಿದ್ದಿಕೊಂಡು ವಾಚಕರು ಈ ಪತ್ರಿಕೆಯನ್ನು ಉಪಯೋಗಿಸಿಕೊಳ್ಳ
ಬೇಕೆಂದು ನಮ್ಮ ನಮ್ರ ವಿನಂತಿ ಇದೆ.

೧೫- ಜುಲೈ ೧೯೫೪.

ಸಂಪಾದಕ-**ಶಿವಾನುಭವ**,

---

# ವಿಷಯಾನುಕ್ರಮಣಿಕೆ

# ಶಿವಾನುಭವ

| ವರ್ಷ ೨೮ | ಜೂನ ೧೯೫೪ | ಸಂಚಿಕೆ ೬ |
| --- | --- | --- |

## ವಚನಶಾಸ್ತ್ರ ಪ್ರಪಿತಾಮಹ

[ ಲೆ :- ಶ್ರೀಯುತ ಮ. ಮಲ್ಲಪ್ಪ. ಜ್ಞಾನಮಂದಿರ, ಹಲಗೂರು. ]



ಕನ್ನಡೇತರರು ಬಂದು ಕನ್ನಡಿಗರನ್ನು ನಿಮ್ಮ ಸಾಹಿತ್ಯದಲ್ಲಿ ವಿಶೇಷಾಂಶವೇನಿದೆಯೆಂದು ಕೇಳಿದಾಗ, ವಚನಶಾಸ್ತ್ರವನ್ನು ಎತ್ತಿ ತೋರಿಸಿ, ಕನ್ನಡದಲ್ಲಿನ ಸಾರಭೂತವಾದ ವಿಶೇಷಾಂಶವು ವಚನಶಾಸ್ತ್ರವು. ಇದರಲ್ಲಿ ಒಂದು ವಿಶೇಷವಾದ ಮಾನುಷಾನುಭವ, ಮಾನುಷ ಪರಿಶ್ರಮ ಮತ್ತು ಮಾನುಷ ಹಿತಚಿಂತನೆಯು ಕಾಣಬರುತ್ತದೆ.

—ಡಿ. ವಿ. ಗುಂಡಪ್ಪ

ಕನ್ನಡ ಸಾಹಿತ್ಯದ ತಪೋವನದಲ್ಲಿ ತಪಸ್ವಿಗಳಂತಿರುವ ಮಹಾ ಶಿವಶರಣರ ಉಪನಿಷತ್ ಸದೃಶವಾದ ವಚನ ಪರಿಚಯವು ಬಹುವಾಗಿ ಬಹಳ ದಿವಸಗಳ ವರೆಗೆ ಕನ್ನಡಿಗರಿಗೆ ಆಗದೆ ಇದ್ದಿತು. ಕನ್ನಡ ನಾಡು ಋಷಿಗಳ ನೆಲೆವೀಡು. ನಮ್ಮ ದೇಶಕ್ಕಾಗಿ, ಸಂಸ್ಕೃತಿಗಾಗಿ, ಸಾಹಿತ್ಯಕ್ಕಾಗಿ, ಧರ್ಮಕ್ಕಾಗಿ ಇಡೀ ಆಯುಷ್ಯವನ್ನು ಮೀಸಲು ಮಾಡಿ, ಪುನೀತರಾದ ಪುಣ್ಯಪುರುಷರಿಗೆ ಏನೂ ಕಡಿಮೆಯಿಲ್ಲ ಎಂಬುದು ಹಿಂದಿನ ಹಾಗೂ ಇಂದಿನ ಚರಿತ್ರೆಗಳಿಂದ ತಿಳಿಯುವುದು. ನ್ಯಾಯವಾದಿಗಳ ಜೀವನವನ್ನು ನೂಕುತ್ತಿದ್ದಂತೆಯೇ ಹಳ್ಳಿಗಳಿಗೆ ಹೋಗಿಬರುವ ಪ್ರಸಂಗಗಳು ಮೇಲಿಂದ ಮೇಲೆ ವಿಜಾಪುರ ಜಿಲ್ಲೆಯವರಿಗೊಬ್ಬರಿಗೆ ಲಭ್ಯವಾಯಿತು. ಹಾಗೆಯೇ ಹೋಗು ಹೋಗುತ್ತಿದ್ದಂತೆಲ್ಲ ಕೈಬರಹದ ಗ್ರಂಥ ಹಾಗು ತಾಳಿಯೋಲೆಗಳನ್ನು ಸಂಗ್ರ

ಹಿಸಿ, ಪರಿಶೋಧಿಸುತ್ತ ಇರುವಲ್ಲಿ ವಚನಶಾಸ್ತ್ರದತ್ತ ದೊಡ್ಡ ಗೀಳು ಗುಟ್ಟುವಂತಾಯಿತು. ಗಣಭಾಷ್ಯ ರತ್ನಮಾಲೆಯನ್ನು ನೋಡು ನೋಡುತ್ತ ವಚನಶಾಸ್ತ್ರದಲ್ಲಿ ಉಚ್ಚ ತತ್ವಗಳಿವೆ ಎಂಬ ಅರಿವನ್ನು ಆರ್ಜಿಸಿ, ಮೂರ ನೂರು ವಚನಕಾರರ ಸಮಗ್ರ ಇತಿಹಾಸವನ್ನು ಸಿದ್ಧಪಡಿಸಿ, ಆ ವಚನ ಶಾಸ್ತ್ರ ಪ್ರಚಾರಕ್ಕಾಗಿಯೇ ೧೯೨೬ರಲ್ಲಿ ಶಿವಾನುಭವ ಪತ್ರಿಕೆಯನ್ನು ಆರಂಭಿಸಿ, ಅದರ ಮೂಲಕ ವಚನಶಾಸ್ತ್ರದ ಗ್ರಂಥಗಳನ್ನು ಪ್ರಕಟಿಸಿ, ಉಪಕಾರ ಮಾಡಿ, ದುಡಿದು ಗಣ್ಯಪುರುಷರಾಗಿ ಸೇವೆ ಸಲ್ಲಿಸುತ್ತಿರುವ ಮಹನಿಯರೊಬ್ಬರು ವಚನಶಾಸ್ತ್ರ ಪ್ರಪಿತಾಮಹರಾಗಿ ಕನ್ನಡಿಗರಿಂದ ಗಣಿಸಲ್ಪಟ್ಟಿದ್ದಾರೆ. ಇವರೇ ರಾವಬಹದ್ದೂರ ಫಕೀರಪ್ಪ ಗುರುಬಸವಪ್ಪ ಹಳಕಟ್ಟಿಯವರು.

ಇವರ ವಾಸಸ್ಥಳ ಬಿಜಾಪುರವು. ತಂದೆಯವರು ಗುರುಬಸವಪ್ಪ. ಶ್ರೀ ಹಳಕಟ್ಟಿಯವರು ವಿಶ್ವವಿದ್ಯಾನಿಲಯದ ಪದವೀಧರರೂ ಅಲ್ಲದೆ, ವಕೀಲಿ ಪರೀಕ್ಷೆಯಲ್ಲಿಯೂ ಉತ್ತೀರ್ಣರಾಗಿದ್ದಾರೆ. ಆಧುನಿಕದಲ್ಲಿ ಪಳಗಿದ್ದರೂ ಪ್ರಾಚೀನ ಪರಂಪರಾಕಲ್ಪವನ್ನು ಮಾತ್ರ ಬಿಡುವಂತಿಲ್ಲ. ೧೯೨೬ರಲ್ಲಿ ಬಳ್ಳಾರಿಯಲ್ಲಿ ನಡೆದ ಸಾಹಿತ್ಯ ಸಮ್ಮೇಳನದಲ್ಲಿ ಅಧ್ಯಕ್ಷ ಪೀಠವನ್ನು ಅಲಂಕರಿಸಿ, ಸಮ್ಮೇಳನಕ್ಕೆ ಕಳೆ ತುಂಬಿ ಅಮೌಲ್ಯ ಸಲಹೆಗಳಿಂದ ಜನಜಾಗೃತಿಯನ್ನುಂಟು ಮಾಡಿದರು. ಇವರು ಕೆಲವು ವರ್ಷ ಬೆಳಗಾವಿಯಲ್ಲಿ ವಕೀಲಿ ಕೆಲಸ ಮಾಡಿ ಪ್ರಸಿದ್ಧಿಗೆ ಬಂದರು. ಬೆಳಗಾವಿಯಿಂದ ಬಿಜಾಪುರಕ್ಕೆ ಬಂದವೇಲೆ ಇವರಿಗೆ ಸಾಹಿತ್ಯದ ಕಡೆಗೆ ಪ್ರೀತಿಯು ಹೆಚ್ಚಿಗೆ ತಿರುಗಿತು. ಇದರಿಂದಲಾಗಿ ಪ್ರಾಚೀನ ಗ್ರಂಥದ ಕಟ್ಟುಗಳಿಗೆ ಗುಂಬಲ ಬರುವುದರ ಮೂಲಕ ಕರ್ನಾಟಕಕ್ಕೆ ಮಹದುಪಕಾರವಾಯಿತು. ಮುಂಬಯಿಯ ಶಾಸನ ಸಭಾಸದಸ್ಯರಾಗಿ, ಕರ್ನಾಟಕ ಏಕೀಕರಣ ಸಮ್ಮೇಳನದ ಅಧ್ಯಕ್ಷರಾಗಿ, ಧಾರವಾಡದಲ್ಲಿದ ಅಖಿಲಭಾರತ ವೀರಶೈವ ಮಹಾ ಸಭಾಧ್ಯಕ್ಷರಾಗಿ, ಪುಣೆಯಲ್ಲಾದ ಕೈಗಾರಿಕಾ ಸಮ್ಮೇಳನಾಧ್ಯಕ್ಷರಾಗಿ, ಬಿಜಾಪುರದಲ್ಲಾದ ಸಾಹಿತ್ಯ ಸಮ್ಮೇಳನದ ಸ್ವಾಗತಾಧ್ಯಕ್ಷರಾಗಿ ಸೇವೆ ಸಲ್ಲಿಸಿದರು. ಬಿಜಾಪುರದ ಸಿದ್ಧೇಶ್ವರ ಸಂಸ್ಥೆ, ಬಂಗಾಲ ಪರಿಹಾರಕ ಸಂಸ್ಥೆ, ಶಿಕ್ಷಣ ಸಮಿತಿ ಇವುಗಳ ಬಂಧುಗಳಾಗಿ ಬಾಳಿ, ವಿಶಾಲ ಜೀವನಾದರ್ಶಕ್ಕೆ ಇವರು ಉದಾಹರಣೆಯಾಗಿಲ್ಲವೇ ? ಇಂತಹವರಿಂದ ತಾನೇ 'ಉದಾರ ಚರಿತಾನಾಂ ತು ವಸುಧೈವ ಕುಟುಂಬಕಂ' ಎಂಬ ತತ್ವವು ಜನಿಸಿರುವುದು. ಶಿವಾನುಭವ ಪತ್ರಿಕೆ, ಶಿವಾನುಭವ ಗ್ರಂಥಮಾಲೆ ಮತ್ತು ನವ ಕರ್ನಾಟಕ ಪತ್ರಿಕೆಗಳನ್ನು ನಡೆಯಿಸಿಕೊಂಡು ಹೋಗುತ್ತ, ಕಷ್ಟನಷ್ಟಗಳನ್ನು

ಗಣನೆಗೆ ತಂದುಕೊಳ್ಳದೆ ನಾಡು ನುಡಿಗಳ ಸೇವೆಯನ್ನು ನಿಷ್ಕಾಮಕರ್ಮ ಯೋಗದಿಂದ ಸಲ್ಲಿಸುತ್ತ ಬಂದಿರುವ ಇವರು ಪತ್ರಿಕೋದ್ಯೋಗಿಗಳಿಗೂ ಸಾಹಿತ್ಯ ಸೇವಕರಿಗೂ ಆದರ್ಶರಾಗಿರುವರು. ರಾಜಕಾರಣಿಗಳಾಗಿ, ಸಮಾಜ ಸುಧಾರಕರಾಗಿ, ಗ್ರಂಥಕಾರರಾಗಿ, ಪತ್ರಿಕಾ ಸಂಪಾದಕರಾಗಿ, ಶಿಕ್ಷಣ ಪ್ರಚಾರಕರಾಗಿ, ವಾಙ್ಮಯ ತಪಸ್ವಿಗಳಾಗಿ, ಮೇಲಾಗಿ ಹಿರಿಯ ವಚನಶಾಸ್ತ್ರ ಪರಿಶೋಧಕರಾಗಿ, ಸಂಯಮ ಜೀವನವನ್ನು ನಡೆಯಿಸುತ್ತ, ಲೌಕಿಕ ವ್ಯಾಪಾರಗಳಲ್ಲಿ ನಿರತರಾಗಿ ವಕೀಲವೃತ್ತಿಯ ಹೊರೆಯನ್ನು ಹೊತ್ತಿದ್ದರೂ ಸೇವಾ ಪುರುಷ ಪುಂಗವರಾಗಿ, ಇವರು ಈಗಲೂ ದುಡಿಯುತ್ತಿರುವರು.

ವೀರಶೈವ ಧರ್ಮ, ಸಂಸ್ಕೃತಿ, ಸಾಹಿತ್ಯ ಹಾಗೂ ಇತಿಹಾಸಗಳು ಇವರಿಂದ ಉದಾತ್ತವಾದವು ಲಿಂಗಾಯಿತ ಕವಿಗಳು ನಿರ್ಮಿಸಿರುವ ಅಪಾರ ಗ್ರಂಥಸಮೂಹವು ಹೊರಬಂದು ಬೆಳಕು ಕಾಣುವ ಪ್ರಮೇಯ ಪ್ರವಹಿಸುತ್ತಿತ್ತು. ಈ ಕಾರ್ಯವನ್ನು ಈಗ್ಗೆ ಕಾಲು ಶತಮಾನದ ಹಿಂದೆಯೇ ಶ್ರೀ ಹಳಕಟ್ಟಿಯವರು ಶಿವಾನುಭವ ಪತ್ರಿಕೆಗಳ ಮೂಲಕ ಕೈಕೊಂಡರು. ಇದಕ್ಕಾಗಿಯೇ ಸ್ವತಂತ್ರವಾಗಿ ಹಿತಚಿಂತಕ ಮುದ್ರಣಾಲಯವನ್ನು ಸ್ಥಾಪಿಸಿ ನಿಂತರು. ಕನ್ನಡ ಸಾಹಿತ್ಯದಲ್ಲಿ ವಚನಗಳು ಅತ್ಯಂತ ಉತ್ತಮ ಮಟ್ಟಕ್ಕೆ ಸೇರಿದವುಗಳೆಂದೂ, ಭಾರತದ ಮತ್ತಿನ್ನಾವ ಪ್ರಾಂತದ ಭಾಷೆಯಲ್ಲಿಯೂ ಈ ಬಗೆಯ ಸಾಹಿತ್ಯವಿಲ್ಲವೆಂದೂ ಸಂಸ್ಕೃತಭಾಷೆಯ ಉಪನಿಷತ್ತುಗಳಿಗೆ ಸರಿಸಾಟಿಯಾಗಿರುವವು. ಮೈಸೂರು, ಮುಂಬಯಿ ವಿಶ್ವವಿದ್ಯಾನಿಲಯಗಳಲ್ಲಿ ವಚನಗ್ರಂಥಗಳು ಪಠ್ಯಪುಸ್ತಕವಾಗಿ ನಿಯಮಿತವಾದುದೇ ಈ ಸಾಹಿತ್ಯದ ಮೇಲ್ಮೆಗೆ ಸಲೆಸಾಕ್ಷಿಯಾಗಿದೆ. ಈ ಬಗೆಯ ಉತ್ಕೃತರ ವಚನಸಾಹಿತ್ಯವನ್ನು ಬಾಲ್ಯದಿಂದೂ ಚನ್ನಾಗಿ ಅಭ್ಯಾಸ ಮಾಡಿ ಅದರಲ್ಲಿ ಅನುಭವವನ್ನೂ, ಪಾಂಡಿತ್ಯವನ್ನೂ ಪಡೆದು, 'ವಚನಶಾಸ್ತ್ರಸಾರ' ಎಂಬ ಹೆಸರಿನಿಂದ ನಾಲ್ಕು ಭಾಗಗಳನ್ನೂ, 'ಶಿವಶರಣರ ಚರಿತ್ರೆಗಳು' ಎಂಬ ಪರಿಶೋಧನಾ ಜ್ಞಾನದ ಗ್ರಂಥಗಳನ್ನೂ ಹೊರಡಿಸಿರುವದರ ಜೊತೆಗೆ 'ಶಿವಾನುಭವ ಸತ್ಯಮಾರ್ಗ' ಹಾಗೂ 'ಶ್ರೀ ಬಸವೇಶ್ವರನ ತತ್ವಗಳು' ಬರಹ ಸಂಕಲನ ಕೃತಿಗಳನ್ನು ಇವರು ಕನ್ನಡಿಗರಿಗೆ ಕೊಟ್ಟರು. ಬಸವೇಶ್ವರ ಚರಿತ್ರೆ, ಶಿವಾನುಭವ ಶಬ್ದಕೋಶ, ಶೂನ್ಯ ಸಂಪಾದನೆ ನೈತಿಕ ಮತ್ತು ಭಕ್ತಿಯ ವಚನಗಳು, ಲಿಂಗ ಮತ್ತು ಪರಮಾತ್ಮ ಎಂಬ ಉದ್ಗ್ರಂಥಗಳನ್ನು ಸಂಪಾದಿಸಿ ಪ್ರಕಟಣೆ ಮಾಡಿ ನಾಡಿನಲ್ಲಿ ನವಜ್ಯೋತಿಯನ್ನು

ಪ್ರಕಾಶಿಸಿರುವರು- ನಿರಂಜನವಂಶ ರತ್ನಾಕರ, ಕಾಲಜ್ಞಾನ ವಚನ, ಬಸವೇಶ್ವರರ ಷಟ್ಸ್ಥಲ ವಚನದ ಕಥಾಸಾರ ಎಂಬ ಗ್ರಂಥಗಳು ವಚನ ವಾಙ್ಮಯದಂತೆ ಕಂಡರೂ, ಚರಿತ್ರ ಸಂಶೋಧಕರಿಗೆ ಅತ್ಯಂತ ಉಪಯುಕ್ತವಾಗಿವೆ. ಬಸವೇಶ್ವರ, ಪ್ರಭುದೇವರು, ಚನ್ನಬಸವೇಶ್ವರ, ಸಿದ್ಧರಾಮ, ಅಕ್ಕಮಹಾದೇವಿ, ದೇವರ ದಾಸಿಮಯ್ಯ, ಅಂಬಿಗರ ಚೌಡಯ್ಯ, ಮಡಿವಾಳ ಮಾಚಿದೇವ, ಸಕಲೇಶ ಮಾದರಸ, ಉರಿಲಿಂಗಪೆದ್ದಿ, ಘನಲಿಂಗದೇವ, ಗಣದಾಸಿ ವೀರಣ್ಣ, ಆದಯ್ಯ, ಸಂಗನ ಬಸವೇಶ್ವರ, ಹಡಪದ ಅಪ್ಪಣ್ಣ ಎಂಬ ಶಿವಶರಣರ ವಚನ ಗ್ರಂಥಗಳ ಪ್ರಕಟಣೆಯು ಇವರಿಂದ ನಡೆದು, ವೀರಶೈವ ಸಾಹಿತ್ಯ ಸಂಶೋಧಕರಿಗೂ, ಶರಣ ಜೀವನ ಚರಿತ್ರಕಾರರಿಗೂ ಅಮೌಲ್ಯವಾದ ಆಕರವು ಲಭಿಸಿದೆ. ಈ ಪತ್ರಿಕೆಯಲ್ಲಿ ಷಟ್ಸ್ಥಲ ವಿವರಣೆ ಮೊದಲಾದ ಕ್ಲಿಷ್ಟ ವಿಚಾರಗಳ ಬಗ್ಗೆ ಇವರು ಬರೆದಿರುವ ನೂರಾರು ಬರಹಗಳಿಂದ ಇವರ ಶಾಸ್ತ್ರ ಜ್ಞಾನವು ಜಗದುಪಕಾರವಾಗಿ ಪರಿಣಮಿಸಿದೆ. ಶರಣ ಪಂಥದ ವಿಷಯದಲ್ಲಿ ಅನೇಕ ಸಂದೇಹಗಳು ಪರಿಹಾರವಾಗಿವೆ.

ಶಿವಾನುಭವ ಪತ್ರಿಕೆಯು ವೀರಶೈವ ಸಮಾಜಕ್ಕೆ ಅತ್ಯಂತ ಮಹದುಪಕಾರವನ್ನು ಮಾಡಿದೆ. ವೀರಶೈವ ಮತದ ಇತಿಹಾಸವನ್ನು ಅರಿಯಲು ಸಾಧನವಾದ ಶಾಸನಗಳನ್ನೂ, ಗ್ರಂಥಗಳನ್ನೂ ಪ್ರಕಟಿಸಿ, ಸಮಾಜದಲ್ಲಿ ರೂಢಿಯಾಗಿದ್ದ ಅನೇಕ ಕುರುಡು ಕಂಡಾಚಾರದ ಪದ್ಧತಿಗಳನ್ನು ನಿವಾರಿಸಲು ಸಹಾಯ ಮಾಡಿದೆ. ದೇವರ ದಾಸಿಮಯ್ಯ, ಬಸವೇಶ್ವರ, ರೇವಣಸಿದ್ಧ, ಏಕಾಂತದರಾಮಯ್ಯ, ಸಿಮ್ಮಲಿಗೆದೇವ ಮುಂತಾದವರ ವಿಚಾರವಾಗಿ ಬರೆದ ಬರಹಗಳು ಸಂಶೋಧನ ದೃಷ್ಟಿಯಲ್ಲಿ ಗಮನಾರ್ಹವಾಗಿವೆ. ಈ ಪತ್ರಿಕೆಯಲ್ಲಿ ಈ ಬಗೆಯಾಗಿ ಪ್ರಕಟವಾದ ಲೇಖನಗಳು ಕರ್ನಾಟಕದ ಸಂಪತ್ತನ್ನು ಹೆಚ್ಚಿಸಿದುದರ ಜೊತೆಗೆ ಸಂಶೋಧಕರಿಗೆ ದಾರಿಮಾಡಿಕೊಟ್ಟಿವೆ. ಬಿಳಗಿ ದೊರೆಗಳ ವಂಶಾವಳಿ, ಕೊಡಗಿನ ವೀರರಾಜೇಂದ್ರನಾಮೆ ಇತ್ಯಾದಿ ಗ್ರಂಥಗಳು ಅಪಾರ ಉಪಕಾರವನ್ನು ನೀಡದಿರದು. ವೀರಶೈವ ರಾಜರು, ವೀರಶೈವ ಮಠಗಳು, ವೀರಶೈವ ಗ್ರಂಥಗಳು, ವೀರಶೈವ ವಿಭೂತಿಗಳು ಇವರ ಬಗ್ಗೆ ಅನೇಕ ಮಹತ್ವಪೂರಿತವಾದ ಲೇಖನಗಳಲ್ಲದೆ, ಡಾ. ನಂದೀಮಠ, ಪಂಡಿತರತ್ನ ಬಿ. ಶಿವಮೂರ್ತಿಶಾಸ್ತ್ರಿ, ಹಲಸಂಗಿ ಚನ್ನಮಲ್ಲಪ್ಪ ಇವರಿಂದ ಬಂದ ಬರಹಗಳೂ ಗಣನೀಯವಾಗಿವೆ.

ವೇದವಾಙ್ಮಯದಲ್ಲಿನ ಮುಖ್ಯ ತತ್ವಗಳನ್ನು ವೀರಶೈವ ತತ್ವವು ಅಂಗೀಕರಿಸಿದೆ. ವೀರಶೈವ ಷಟ್ಸ್ಥಲಸಿದ್ಧಾಂತದಲ್ಲಿ ಉಪನಿಷತ್ತು, ಭಗವದ್ಗೀತೆ, ಸಾಂಖ್ಯಶಾಸ್ತ್ರ, ಯೋಗಶಾಸ್ತ್ರಾದಿ ತತ್ವಗಳನ್ನು ನಾವು ನೋಡುತ್ತೇವೆ. ಶಿವಶರಣರು ಈ ಗ್ರಂಥಗಳಲ್ಲಿರುವ ಉನ್ನತ ತತ್ವಗಳನ್ನು ತಮ್ಮ ಸಿದ್ಧಾಂತದಲ್ಲಿ ಹೆಣೆದಿದ್ದಾರೆ. ಬಾಹ್ಯಸನ್ನಿವೇಶಗಳು ಕೇವಲ ಬಾಹ್ಯಕಾರಣವಾಗಿ ಕಾವ್ಯವಸ್ತುವೆಲ್ಲ ಮೇಲಿನ ಜಗತ್ತಿನಿಂದಲೇ ಬರುತ್ತವೆ ಎಂಬ ಅರವಿಂದ ವಾಣಿಯು ಈ ಶರಣಸಾಹಿತ್ಯದಿಂದ ಅರಿವಾಗುತ್ತದೆ. ಈ ಮತತತ್ವಗಳು ಬಹಳ ಸೂಕ್ಷ್ಮವಾಗಿದ್ದು ಇದರ ಹೆಚ್ಚಿನ ಭಾಗದ ಗ್ರಂಥವು ಪ್ರಕಟವಾಗದೆ ಇದ್ದುದರಿಂದಲೂ, ಈ ಸಮಾಜದಲ್ಲಿ ತತ್ವವ್ಯಾಸಂಗಿಗಳ ಸಂಖ್ಯೆ ಕಮ್ಮಿಯಾಗಿರುವುದರಿಂದಲೂ ಈ ತತ್ವವು ಕೊಳಚಿಯಲ್ಲಿ ನಿಂತುನಾರುವ ಸಮಯದಲ್ಲಿ ಶಿವಾನುಭವ ಪತ್ರಿಕೆಯಲ್ಲಿ ವೀರಶೈವ ಮತತತ್ವದ ಬಗ್ಗೆ ಪಂಡಿತರಿಂದ, ತಜ್ಞರಿಂದ ಅನೇಕ ನಿಂತತತ್ವಗಳು ಪ್ರಕಟವಾಗಿ ನಾರುವುದು ಮರೆತುಹೋಯಿತು. ವಿದ್ವಾನ್ ನಾಗೇಶಶಾಸ್ತ್ರಿ, ಪಾವಟೆ ಸಿದ್ಧರಾಮಪ್ಪ, ಯಗಟಿ ವಕೀಲರು ಇತ್ಯಾದಿ ಮಹನೀಯರು ಹಲವು ಗೂಢತಮ ವಿಚಾರಗಳನ್ನು ಈ ಪತ್ರಿಕೆಯಮೂಲಕ ಪ್ರಕಟಿಸಿದರು. ಲಿಂಗಧಾರಣೆ; ಶಿವದೀಕ್ಷೆ, ಅಷ್ಟಾವರಣ. ಪಂಚಾಚಾರ, ಷಟ್ಸ್ಥಲ, ಶಿವಯೋಗ, ಶಿವಾನುಭವ, ಕಾಯಕ, ಲಿಂಗವಂತ ಸಂಸ್ಕೃತಿ ಇತ್ಯಾದಿ ವಿಷಯಗಳು ಅತ್ಯಂತ ಸ್ವಾರಸ್ಯವಾಗಿ ಇದರಲ್ಲಿ ವಿವರಿಸಲ್ಪಟ್ಟಿವೆ. ವೀರಶೈವರಿಗೆ ಬೇಕಾದ ಅನೇಕ ಜ್ಞಾನವನ್ನು ಶಿವಾನುಭವ ಪತ್ರಿಕೆಯು ಒದಗಿಸಿಕೊಟ್ಟು ವೀರಶೈವರ ವಸ್ತುಕೋಶವೆನಿಸಿಕೊಂಡಿದೆ. ಯಾವ ನಿಂದೆ ಕುಂದಿಗೂ ಶಿವಾನುಭವ ಪತ್ರಿಕೆಯು ಗುರಿಯಾಗದೆ ನಿಷ್ಪಕ್ಷಪಾತವೂ, ಸತ್ಯಸಂಶೋಧಕವೂ ಪ್ರಗತಿಪರವೂ, ಉದಾರವೂ ಆದ ಹಾದಿಯಲ್ಲಿ ಹೋಗುವಂತೆ ಮಾಡಿನ ಮಹಾಸಾಹಸಿಗಳು ಶ್ರೀ ಹಳಕಟ್ಟಿಯವರು.

ಕನ್ನಡ ಸಾಹಿತ್ಯದಲ್ಲಿ ವಚನ ಸಾಹಿತ್ಯದಂತೆ ರಘಟಾ ಸಾಹಿತ್ಯವೂ ಕೂಡ ಸ್ವಾರಸ್ಯವಾಗಿ, ಕ್ರಾಂತಿಕಾರಕವಾಗಿ ಇದೆ. ಮನೋಹರವಾದ ಈ ರಘಟಾ ಛಂದಸ್ಸಿನಲ್ಲಿ ವೀರಶೈವ ಕವಿಗಳು ಗ್ರಂಥ ನಿರ್ಮಾಣ ಮಾಡಿದ್ದಾರೆ. ಈ ಬಗೆಯ ಕವಿಗಳಲ್ಲಿ ಮಹಾನುಭಾವನೂ, ಮಹಾಕವಿಯೂ ಆದ ಹಂಪೆಯ ಹರಿಹರನು ಅಗ್ರಗಣ್ಯನಾಗಿದ್ದಾನೆ. ಶ್ರೀ ಹಳಕಟ್ಟಿಯವರು ಪಂಡಿತರತ್ನ ಬ. ಶಿವಮೂರ್ತಿ ಶಾಸ್ತ್ರಿಗಳ ಸಾಹಸದಿಂದಲೂ, ಶ್ರೀ. ವಿ. ಬ. ಹಾಲಭಾವಿಯವರ ಸಹಾಯದಿಂದಲೂ ಹರಿಹರನ ರಗಳೆಗಳನ್ನು ಸಂಗ್ರ

ಹಿಸಿ ಪ್ರಕಟಿಸಿ ಮಹದುಪಕಾರ ಮಾಡಿದ್ದಾರೆ. ಶ್ರೀ ಹಳಕಟ್ಟಿಯವರ ಸೇವೆಯು ಸರ್ವತೋಮುಖವಾದುದಲ್ಲದೆ ಸರ್ವಬಗೆಯ ಗ್ರಂಥಗಳು ಹೊರಬರಲು ಸಹಾಯವಾಗಿದೆ. ಶಿವಾನುಭವ ದರ್ಪಣ, ಸಿದ್ಧಲಿಂಗೇಶ್ವರ ಏಕೋತ್ತರ ಶತಸ್ಥಲ, ಸಟೀಕ ಮಹಿಮ್ನ ಸ್ತೋತ್ರ, ವರದಾನಿ ಗುಡ್ಡಮ್ಮ ಚರಿತೆ, ಆದಿಶೆಟ್ಟಿ ಪುರಾಣ, ಶಿವಾನುಭವ ಸೂತ್ರಸಾರ, ಡೆಪ್ಯುಟಿ ಚನ್ನಬಸವಪ್ಪನವರ ಚರಿತ್ರೆ ಇತ್ಯಾದಿ ಗ್ರಂಥಗಳನ್ನು ಇವರು ಪ್ರಕಟಿಸಿರುವದನ್ನು ನೋಡಿದರೆ ಇವರ ವೈವಿಧ್ಯ ಜ್ಞಾನಕ್ಕೆ ಕುರುಹು ಆಗಿದೆ.

ಇಲ್ಲಿಯವರೆಗೆ ಇವರು ಮಾಡಿದ ಸಾಹಿತ್ಯಸೇವೆಯಿಂದ ಕನ್ನಡ ಸಾಹಿತ್ಯಾಭ್ಯಾಸಿಗಳಿಗೆ ಮಹದುಪಕಾರವಲ್ಲದೆ ಆಧುನಿಕ ಕನ್ನಡ ಸಾಹಿತ್ಯಕ್ಕೆ ನೂತನ ಜೀವಕಳೆಯನ್ನು ಕೊಟ್ಟದುದರ ಜೊತೆಗೆ ಅನೇಕ ಪ್ರಕಟನೆಗಳಿಗೆ ಸ್ಫೂರ್ತಿಯನ್ನು ಕೊಟ್ಟಿದೆ. ವೀರಶೈವ ಸಾಹಿತ್ಯದಲ್ಲಿ ಪಂಡಿತರಿಗೆ ಉಂಟಾಗಿರುವ ಅಕ್ಕರೆ ಆದರಣೆಗಳಿಗೆ ಶ್ರೀ ಹಳಕಟ್ಟಿಯವರ ಸಾಹಿತ್ಯಸೃಷ್ಟಿಯೇ ಎನ್ನಬಹುದು. ವಚನಶಾಸ್ತ್ರ ರಹಸ್ಯ, ಭಕ್ತಿಭಾಂಡಾರಿ ಬಸವಣ್ಣ, ಅಕ್ಕಮಹಾದೇವಿ ನಾಟಕ, ಅಕ್ಕಮಹಾದೇವಿ ಚರಿತ್ರೆ, ವೈರಾಗ್ಯನಿಧಿ ಅಕ್ಕಮಹಾದೇವಿ ಹರಿಹರನ ರಗಳೆಯ ಕಥೆಗಳು, ಮಹಾತ್ಮ ಬಸವೇಶ್ವರನ ವಚನ. *Songs of Basaveswara, Musings of Basava* ಇತ್ಯಾದಿ ಗ್ರಂಥಗಳಿಗೆ ಇವರ ಕೃತಿಗಳು ಪ್ರಚೋದಕವಾಗಿವೆ. *There is no more fruitful souree than the enchanting eseploration of the great literatures of the past* ಎಂದಿರುದ ಸಾಮರ್ಸೆಟ್ ಮೋಗಾಮನ ನುಡಿಯು ಇವರ ಬಾಳಿನಲ್ಲಿ ಬಗೆಗೊಂಡಿದೆ. ಈಗಾಗಲೇ ಇವರ ತಪಸ್ಸು ಅನೇಕರನ್ನು ಆನಂದಗೊಳಿಸಿ, ಸಾಹಸ ಪ್ರೋತ್ಸಾಹನನ್ನು ಸ್ವೀಕರಿಸುತ್ತಲಿದೆ. ಇವರು ವಯಸ್ಸಿನಲ್ಲಿ ಹಿರಿಯವನ್ನು ಹಾದಿದ್ದರೂ, ಇವರ ಉತ್ಸಾಹವೂ, ಉದ್ಯೋಗಪ್ರಿಯತೆಯೂ ಪ್ರಾಯಸ್ಥರನ್ನು ನಾಚಿಸುವಂತಲಿದೆ. ಇವರು ವ್ಯಕ್ತಿಯೋರ್ವರಾದರೂ ಸಂಸ್ಥೆಯಂತೆ ಅನೇಕ ಮಹತ್ಕಾರ್ಯಗಳನ್ನು ನಡೆಯಿಸುತ್ತಿದ್ದಾರೆ. ಅಲ್ಲಲ್ಲಿ ಅನುಭವ ಮಂಟಪಗಳನ್ನು ಸ್ಥಾಪಿಸಲು ಪ್ರಚೋದಿಪ ಹಿರಿಯ ಶಿವಾನುಭಾವಿಗಳಾಗಿ, ನಿಜವಾದ ಜ್ಞಾನಿಗಳಾಗಿ ಮೆರೆಯುತ್ತಿದ್ದಾರೆ.

ಶ್ವಾನ ಜ್ಞಾನ ಗಜಜ್ಞಾನ ಕುಕ್ಕುಟಜ್ಞಾನವೆಂಬ
ಜ್ಞಾನತ್ರಯಂಗಳೇನಾದವು?
ಕೂಡಲಸಂಗಮದೇವಾ, ನಿಮ್ಮನರಿಯದ ಜ್ಞಾನವೆಲ್ಲ ಅಜ್ಞಾನ!

ಕರ್ನಾಟಕ ಏಕೀಕರಣ ಚಟುವಟಿಕೆಯಲ್ಲಿ, ಕನ್ನಡ ಭಾಷೆಯ ಸಂರಕ್ಷಣೆಯಲ್ಲಿ ಸರಿ ಸುಮಾರು ನಲವತ್ತಾರು ವರ್ಷಗಳಿಂದ ಅಗ್ರಗಣ್ಯರಾಗಿ ಇವರು ಕೆಲಸ ಮಾಡುತ್ತಲಿದ್ದಾರೆ. ಭಕ್ತಿಭಾಂಡಾರಿ ಬಸವಣ್ಣನವರ ಬಾಗೇವಾಡಿಯ ಸಮೀಪಸ್ಥರೂ, ಪ್ರಾಚೀನ ವಿಜಯಪುರದ ನಿವಾಸಿಗಳೂ ಆಗಿ ಹೆಸರಿಗೆ ಕರೆಯನ್ನು ತರದಂತಹ ಕಾರ್ಯವನ್ನು ಮಾಡುತ್ತಿದ್ದಾರೆ. ಸ್ವಮತೀಯರನ್ನೂ, ಪರಮತೀಯರನ್ನೂ ಸಂಕೋಚತೆಯಿಂದ ಸಡಿಲಿಸಿ ಸರ್ವರೂ ಪರಮತ ಸಹಿಷ್ಣುರಾಗುವಂತೆ ಆದರ್ಶವನ್ನು ಮುಂದಿಟ್ಟು ಆಚಾರ್ಯರಾಗಿದ್ದಾರೆ. ಕರ್ಮ ಹಾಗೂ ಜ್ಞಾನ ಎರಡಕ್ಕೂ ಸರಿಸಮಾನ ಸ್ಥಾನಗಳನ್ನು ಕೊಟ್ಟು ಐಹಿಕ ಪಾರಮಾರ್ಥಿಕಗಳೆರಡನ್ನೂ ಸಾಧಿಸಲಿಕ್ಕೆ ದೀಕ್ಷಾಬದ್ಧರಾಗಿ ನಿಂತ ಶರಣರಾಗಿದ್ದಾರೆ. ಸಾಧಕರಿಗೆ ಅನುಕರಣೀಯವಾದ ಆದರ್ಶಗಳು ಕರ್ತವ್ಯನಿಷ್ಠೆ, ಗುರಿಯಲ್ಲಿ ಅಚಲವಿಶ್ವಾಸ, ದೃಢಸತ್ಯಪ್ರಿಯತೆ, ಸೌಜನ್ಯ ಮತ್ತು ಸಾತ್ವಿಕತೆಗಳು ಇವರಲ್ಲಿ ನೆಲೆಗೊಂಡಿವೆ. ಭಗವದ್ಭಕ್ತಿ ಧರ್ಮಶ್ರದ್ಧೆ, ಸಾಹಿತ್ಯಪ್ರೇಮ ದೇಶಾಭಿಮಾನ, ಆತ್ಮಸಂಯಮ, ಸ್ನೇಹಪರತೆ, ಸತತೋದ್ಯೋಗ, ಕಾಯಕನಿಷ್ಠೆ ಇತ್ಯಾದಿ ಹಿರಿಯ ಗುಣಗಳಿಂದ ಪರಿಶೋಭಿತರಾಗಿ ಋಷಿತುಲ್ಯರಾದ ಇವರು ವೀರಶೈವ ಸಮಾಜಕ್ಕೆ ಅಲಂಕಾರಪ್ರಾಯರಾಗಿಯೂ, ಕರ್ನಾಟಕ ಚೂಡಾರತ್ನರಾಗಿಯೂ ಇದ್ದಾರೆ ಎಂಬುದು ಇವರ ಸೇವಾತಪಸ್ಸಿನಿಂದ ನಿದರ್ಶಿತವಾಗಿದೆ ವಿಜಾಪುರಕ್ಕೆ ಹೋದವರು ಗೋಳಗುಮ್ಮಟವನ್ನು ನೋಡಿ ಆನಂದಹೃದಯಿಗಳಾಗುವಂತೆಯೇ, ಸಂಪ್ರದಾಯಸ್ಥರಿಗೆ ಅಹಿತವಾದರೂ ಸತ್ಯವನ್ನೇ ಎತ್ತಿಹಿಡಿದು ಸಂಶೋಧನೆಯನ್ನು ಸಾಗಿಸಿ ನಡೆಸುವವರಿಗೆ ಬೆಂಬಲವನ್ನು ನೀಡುವ ಈ ಶಿವಶರಣರನ್ನು ಕೂಡ ನೋಡಿ ಸಂತೋಷಮನಸ್ಕರಾಗುವುದರಲ್ಲಿ ಯಾವ ಸಂಶಯವೂ ಇಲ್ಲ.

# ಪ್ರಾರ್ಥನೆ

[ ಕವಿ: ಷ॥ಬ್ರ॥ ಶ್ರೀ ಗುರುಸಿದ್ಧ ಶಿವಾಚಾರ್ಯ ಸ್ವಾಮಿ ನಿರಂಜನಾಲಯ ]

ಗುರುವಿನಪುರಮಠ.

***

ಜೀವ ಮೂಶೆಯಲಿ ಕುದಿದು ಕುದಿದು
ಬೇಸತ್ತು ಬಂದೆ ನಿನ್ನ ಅಡಿಗೆ !
ನಮ್ಮ ಜೀವನವು ಸೌಮ್ಯ ಭಾವನೆಯ-
ಹೊಂದಲು ಬಂದೆ ನಿನ್ನ ಗುಡಿಗೆ !! ॥೧॥

ಸೌಮ್ಯಸಿದ್ಧನಹ ನಮ್ಮ ಬುದ್ಧನಹ
ವಿಶ್ವತೇಜ ಗುರುವೆ !
ಬೆಂದೊಡಲ ನೋಡು ಸಂತಸವ ನೀಡು
ಶಾಂತಿದೂತ ಮಹವೆ ! ॥೨॥

ಷಡ್ವರ್ಗಗಳ ಸೆಡೆತ ಬಿರುಗಾಳಿ ಬಡಿತ
ತ್ರಿತಾಪಗಳ ತಾಕಲಾಟ !
ಬಡತನದ ಬಾಳು: ಇದು ನಮ್ಮ ಗೋಳು
ಸ್ತುತಿ–ನಿಂದೆ ಜೀಕಲಾಟ !! ॥೩॥

ಮನಕಿಲ್ಲ ಶಾಂತಿ ಗೂಡೆಲ್ಲ ದಾಂತಿ
ಹೃದಯದಿ ನೆಲೆಸೊ ಜ್ಯೋತಿ !
ಶಾಂತಿ ಶಾಂತಿ, ಋತ, ಸತ್ಯ, ಪ್ರೀತಿಗಳ
ಇರಿಸು ನಮ್ಮ ಪ್ರೀತಿ ! ॥೪॥

ನಿನ್ನ ನಾಮವೆ, ನಿನ್ನವರ ಸೇವೆಯೆ
ಎನಗೆ ಅಮೃತಧಾಮ !
ತತ್ವ ಬೋಧೆಯಲಿ ನಿತ್ಯ ಸಿದ್ಧಿಯಲಿ
ಇರಿಸು ನಮ್ಮ ಸೋಮ ! ॥೫॥

ಸಂಪುಟ ೨೮

ಸಂಚಿಕೆ [illegible]

# ಶ್ರೀ
# ವಾ
# ಶಿವಾನುಭವ
# ಭ
# ವ

-: ಸಂಪಾದಕರು :-

ಫ. ಗು. ಹಳಕಟ್ಟಿ,
ಬಿ. ಎ. ಎಲ್. ಎಲ್. ಬಿ.

ವಿಜಾಪೂರ

[illegible] ೫-೧೨-೮ ]

[ಜುನ-ಜುಲೈ ೧೯೫೪

ಬ್ರಹ್ಮರು ಹುಟ್ಟುವದಕ್ಕಿಂತ ಮೊದಲು ಮತ್ತು ಪಾರ್ವತಿಯನ್ನು ಶಿವನು ಲಗ್ನವಾಗುವದಕ್ಕಿಂತ ಮೊದಲು ಪರಮಾತ್ಮನಿದ್ದನು ಎಷ್ಟು ಮೊದಲು ಇದ್ದನೆಂಬ ಪ್ರಶ್ನೆಗೆ ಬಸವೇಶ್ವರನು ಉತ್ತರ ಕೊಡುವಲ್ಲಿ ಅದಕ್ಕೂ ಮೊದಲು ಅದಕ್ಕೂ ಮೊದಲು, ಅದಕ್ಕೂ ಮೊದಲು ಎಂದು ಮೂರು ಬಾರಿ ಹೇಳುತ್ತಾನೆ. ಅಂದರೆ ಎಷ್ಟು ಕಾಲ ಮೊದಲು ಎಂಬುವದು ಹೇಳುವದು ಶಕ್ಯವಲ್ಲವೆಂಬ ಭಾವವನ್ನು ಹೀಗೆ ಅವನು ವ್ಯಕ್ತಮಾಡಿದ್ದಾನೆ. ಹೀಗೆ ಪರಮಾತ್ಮನು ಅನಾದಿಯಿಂದಲೂ ಇದ್ದು ಅವನು ಸೃಷ್ಟಿಯನ್ನುಂಟು ಮಾಡುವ ಕಾರ್ಯದಕ್ಷ ಬಸವೇಶ್ವರನು ಅವನನ್ನು ಕುರಿತು 'ಗಳಿಯು ನೀನು ಹಳಿಯು ನಾನು' ಎಂದು ಹೇಳುತ್ತಾನೆ. 'ಗಳಿಯು ನೀನು' ಎಂಬುವದರಿಂದ ಪರಮಾತ್ಮ ಸ್ವರೂಪವಾದ ಲಿಂಗವನ್ನು ಮತ್ತು ಹಳಿಯು ನಾನು' ಎಂಬುದರಿಂದ ಅಂಗ ಲಿಂಗವು ಪ್ರಕಟವಾಗಲು ಅವಶ್ಯವಾಗಿರುವ ಅಂಗವನ್ನು ಸೂಚಿಸುತ್ತಾನೆ. ಪರಮಾತ್ಮನಲ್ಲಿ ಚಿತ್‌ಶಕ್ತಿಯು ಮೊದಲು ತೋರುತ್ತದೆ ಆ ಶಕ್ತಿಯಲ್ಲಿ ಲಿಂಗವಿದೆ ಅದು ದೃಶ್ಯವಾಗಲು ಅದಕ್ಕೆ ಆಧಾರವಾಗಿ ಒಂದು ವಸ್ತುವು ಇರುವದು ಅವಶ್ಯವು. ಅದೇ ಅಂಗವು. ಹೀಗೆ ಒಬ್ಬ ಪರಮಾತ್ಮನು ಅಂಗ ಲಿಂಗವೆಂದು ಎರಡಾಗುತ್ತಾನೆ. ಈ ಎರಡರ ಮೂಲಕವೇ ವಿಶ್ವವು ಪ್ರಕಟವಾಗುತ್ತದೆ. ಮತ್ತು ಅದರ ಕಾರ್ಯಗಳು ಜರಗುತ್ತವೆಂದು ಬಸವೇಶ್ವರನು ಇಲ್ಲಿ ಹೇಳಿದ್ದಾನೆ.

(೨೨) ಜಲ. ಕೂರ್ಮ. ನಾಗ. ಮೇದಿನಿ. ಸಪ್ತಸಾಗರ. ಅಪಾಂಡ. ಖಂಡ ಹರಿವಿರಿಂಚಿಗಳು ನಿಮ್ಮ ಉದರದ ಕೊನೆಯ ಪ್ರದೇಶಗಳಯ್ಯ ಕೂಡಲ ಸಂಗನ ಮಹಾಮನೆಯಲ್ಲಿ ಅಸ್ತಿಗ್ರಾಹಕನೆಂಬ ಗಣೇಶ್ವರನ ಇಚ್ಛಾ ಮಾತ್ರದಿಂದ ಯುಗಜುಗವಯ್ಯ.

ಹಿಂದಿನ ವಚನದಲ್ಲಿ ಬಸವೇಶ್ವರನು ಪರಮಾತ್ಮನು ಅನಾದಿಯಿಂದಲೂ ಇದ್ದಾನೆಂದು ಹೇಳಿ ಈಗಿನ ವಚನದಲ್ಲಿ ಅವನು ಪರಮಾತ್ಮನ ವಿಸ್ತಾರವನ್ನು ಕುರಿತು ಹೇಳುತ್ತಾನೆ. ಹೀಗೆ ಹೇಳುವಲ್ಲಿ ಅವನು ಜನರಿಗೆ ಸಾಮಾನ್ಯವಾಗಿ ಗೊತ್ತಿರುವ ಪೌರಾಣಿಕ ಕಥೆಗಳನ್ನು ಹಿಂದಿನ ವಚನದಲ್ಲಿಯಂತೆಯೇ ಉಪಯೋಗಿಸಿ ಹೇಳಿದ್ದಾನೆ. ಪರಮಾತ್ಮನು ಒಂದು ವಿರಾಟ ಮೂರ್ತಿಯು ಮತ್ತು ಅವನಿರುವ ಸ್ಥಳದ ಹೆಸರು 'ಮಹಾಮನೆ' ಎಂದು ಹೇಳಿ ಈ ಮಹಾಮನೆಯಲ್ಲಿ ಅತ್ಯದ್ಭುತವಾದ ಜೀನಸುಗಳಿವೆ. ಅವು ಯಾವವೆಂದರೆ— ಅದರಲ್ಲಿ ಜಲವಿದೆ. ಈ ಜಲವು ಆಕಾಶ, ಭೂಮಿ, ಮೊದಲ್ಗೊಂಡು ಜಗತ್ತಿನ

ತುಂಬಿಲ್ಲ. ಇದೆ. ಜೀವವನ್ನು ಹುಟ್ಟಿಸಲು ಅದು ಮೊದಲು ಕಾರಣವಾಗು ತ್ತದೆ. ಆದ್ದರಿಂದ ಅದು ಒಂದು ಅದ್ಭುತವಾದ ವಸ್ತುವು. ಈ ಜಲ ದಲ್ಲಿ ದಶಕೋಟಿ ಯೋಜನ ಬೆನ್ನಗಲುಳ್ಳ ಒಂದು ಆಮೆಯು ಇದೆ- ಅದರ ಬೆನ್ನಿನ ಮೇಲೆ ಜಗತ್ತು ನಿಂತಿರುತ್ತದೆ. ಅಲ್ಲದೆ ಈ ಜಗತ್ತು ಅತ್ತಿತ್ತ ಅಲು ಗಾಡದಂತೆ ದಿಗ್ಗಜಗಳು ಎಂಟು ದಿಕ್ಕುಗಳಲ್ಲಿ ನಿಂತುಕೊಂಡಿವೆ. ಅಲ್ಲದೆ ಮಹಾ ಶೇಷನು ತನ್ನ ಬಾಲದಿಂದ ದಿಗ್ಗಜಗಳನ್ನೂ ಅಷ್ಟಕುಲ ಪರ್ವತಗಳನ್ನೂ ಸುತ್ತಿ ಹಾಕಿ ಅವುಗಳನ್ನು ಬಿಗಿಯಾಗಿ ಹಿಡಿದು ಕೊಂಡಿದ್ದಾನೆ. ಇಂಥ ಸ್ಥಿರವಾದ ಕಳಹದಿಯಮೇಲೆ ಮಹಾಶೇಷನು ಮಲಗಿದ್ದು ಅವನ ಹೆಡೆಯಲ್ಲಿರುವ ಮಣಿ ಯನ್ನು ತನಗೆ ಆಧಾರವಾಗಿಟ್ಟುಕೊಂಡು ಭೂಮಿಯು ನಿಂತಿದೆ. ಇಂಥ ಭೂಮಿಯ ಮೇಲೆ ಸಪ್ತಸಾಗರಗಳು ಹರಿಯುತ್ತಿವೆ. ಮತ್ತು ಬ್ರಹ್ಮಾಂಡವೂ ನವಖಂಡಗಳೂ ನಿಂತುಕೊಂಡಿವೆ. ಈ ಮೇದಿನಿಯನ್ನು ಬ್ರಹ್ಮ ವಿಷ್ಣುಗಳು ಕಾಯುತ್ತನಿಂತಿದ್ದಾರೆ. ಈ ಯೂವತ್ತರು ಮಹಿಮರು, ಅಲ್ಲದೆ ಅವರು ಬಹು ಮಹತ್ತರವಾದ ವಿಸ್ತಾರವುಳ್ಳವರು. ಆದರೂ ಕೂಡ ಅವರು ಮಹಾಲಿಂಗ, ಅಥವಾ ಪರಶಿವಲಿಂಗನ ಅಥವಾ ಸಾದಾ ಶಿವಲಿಂಗನ ಉದರದ ಒಂದು ಕೊನೆಯ ಲ್ಲಿರುವಪ್ರಾಣಿಗಳಂತೆ ಇದ್ದಾರೆಂದುಬಸವೇಶ್ವರನು ಹೇಳುತ್ತಾನೆ. ಅಂದರೆ ಪರಮಾ ತ್ಮನ ವಿಸ್ತಾರವು ಬಹು ಅಗಾಧವಾದುದೆಂದು ಹೇಳುವುದೇ ಅವನ ಅಭಿಪ್ರಾಯವು. ಇಂಥ ಪರಮಾತ್ಮನ ಮನೆಯಲ್ಲಿ ಗಣಾಧೀಶ್ವರರಿದ್ದು ಅವರಲ್ಲಿ ಅಸ್ತಿಗ್ರಾಹಕ ನೆಂಬುವವನೊಬ್ಬನು ಇದ್ದಾನೆ. ಅವನ ಇಚ್ಛಾಮಾತ್ರದಿಂದ ಎಣಿಸಲು ಬಾರ ದಷ್ಟು ಕಾಲದ ಹಿಂದೆ. ಜಗತ್ತು ಆಗಿರುತ್ತದೆ. ನಾಲ್ಕುಯುಗಗಳು ಮತ್ತು ಈ ನಾಲ್ಕು ಯುಗಗಳು ೧೮ ವೇಳೆ ತಿರುಗಿದಲ್ಲಿ ಜುಗವೆನಿಸುತ್ತದೆ. ಹೀಗೆ ಅಸಂಖ್ಯ ಯುಗಜುಗಗಳಿಂದಲೂ ಜಗತ್ತು ಈ ಗಣಾಧೀಶ್ವರನ ಮೂಲಕ ನಡೆದು ಬಂದಿದೆ. ಪರಮಾತ್ಮನು ನಿರ್ಮಿಸಿದ ಜಗತ್ತಿನ ಕ್ರಿಯೆಗಳು ತಪ್ಪಿ ದಲ್ಲಿ ಅವು ಸುವ್ಯವಸ್ಥೆಯಿಂದ ಪುನಃ ನಡಿಸಲು ಪರಮಾತ್ಮನು ಗಣಾಧೀ ಶ್ವರರನ್ನು ಜೊತೆಗಳಿಸಿದ್ದಾನೆ. ಈ ಪರಮಾತ್ಮನು ಕಠಿಣ ಸಮಯಗಳಲ್ಲಿ ಕಾರ್ಯಗಳನ್ನು ಗಣಾಧೀಶ್ವರರ ಮೂಲಕವೇ ಮಾಡಿಸುವದುಂಟು. ಇವರು ಕಾಲ ಕಾಲಕ್ಕೆ ಅವತಾರ ತಾಳಿ ಜಗತ್ತನ್ನು ಉದ್ಧಾರಮಾಡುತ್ತಾರೆ. ಹೀಗೆ ಪರಮಾತ್ಮನ ವಿಸ್ತಾರವು ಗಣಿಸಲು ಬಾರದಷ್ಟು ದೊಡ್ಡದಿದೆ. ಮತ್ತು ಅವನ ಇರುವಿಕೆಯಾದರೂ ಬಹು ಅಗಾಧವಾದದ್ದು. ಎಂಬ ಭಾವವನ್ನು ಬಸವೇಶ್ವ ರನು ಈ ವಚನದಲ್ಲಿ ವ್ಯಕ್ತಮಾಡಿದ್ದಾನೆ.

(೨೩) ಅಯ್ಯಾ, ನೀನು ನಿರಾಕಾರವಾಗಿರ್ದಲ್ಲಿ ನಾನು ಜ್ಞಾನವೆಂಬ ವಾಹನವಾಗಿರ್ದೆ ಕಾಣಾ! ಅಯ್ಯಾ ನೀನು ನಾಟ್ಯಕ್ಕೆ ನಿಂದಲ್ಲಿ ನಾನು ಚೈತನ್ಯವೆಂಬ ವಾಹನವಾಗಿರ್ದೆಕಾಣಾ! ಅಯ್ಯಾ ನೀನು ಆಕಾರವಾಗಿರ್ದಲ್ಲಿ ನಾನು ವೃಷಭನೆಂಬ ವಾಹನವಾಗಿರ್ದೆ ಕಾಣಾ! ಅಯ್ಯಾ, ನೀನೆನ್ನ ಭವವ ಕೊಂದಿಹೆನೆಂದು ಜಂಗಮ ಲಾಂಛನವಾಗಿ ಬಂದರೆ ನಾನು ಭಕ್ತನೆಂಬ ವಾಹನವಾಗಿರ್ದೆ ಕಾಣಾ ಕೂಡಲಸಂಗಮದೇವಾ.

ನಿರಾಕಾರವಾದ ಪರಮಾತ್ಮಲಿಂಗದಲ್ಲಿ ಜ್ಞಾನವೆಂಬ ಶಕ್ತಿಯು ಅಥವಾ ಚಿತ್ ಶಕ್ತಿಯು ಮೊದಲು ಉದಯವಾಗುತ್ತದೆ. ಈ ಶಕ್ತಿಯೇ ಈ ಲಿಂಗಕ್ಕೆ ವಾಹನ ಅಥವಾ ಆಧಾರವಾಗಿರುತ್ತದೆ. ಅಂದರೆ ಈ ಲಿಂಗಕ್ಕೆ ಅದು ಅಂಗ ವಾಗಿರುತ್ತದೆ. ಆ ಮೇಲೆ ಈ ಪರಮಾತ್ಮ ಲಿಂಗವು ಜಗತ್ತು ಪ್ರಕಟವಾಗಲೆಂದು ವಿಶ್ವದಲ್ಲಿ ನಾಟ್ಯವನ್ನು ಪ್ರಾರಂಭಿಸುವದುಂಟು. ಆಗ ಅದರಿಂದ ಉಂಟಾದ ಚಿತ್ ಶಕ್ತಿಯು ನಾನ ವಿಧಗತಿಯುಳ್ಳದಾಗಿ ಜಗತ್ತಿನ ತುಂಬೆಲ್ಲ ಪಸರಿಸುತ್ತದೆ. ಹೀಗೆ ಪಸರಿಸಲು ನಾನಾವಿಧ ಜಗತ್ತು ಉಂಟಾಗುತ್ತದೆ. ಆಗ ಪರಮಾತ್ಮನಿಗೆ ಚೈತನ್ಯವೇ ವಾಹನವು ಅಥವಾ ಆಧಾರವು ಈ ಸ್ಥಿತಿ ಯಲ್ಲಿ ಈ ಪರಮಾತ್ಮ ಲಿಂಗಕ್ಕೆ ವಚನಶಾಸ್ತ್ರದಲ್ಲಿ ನಿಷ್ಕಲಲಿಂಗವೆಂಬ ಹೆಸರು ಇದೆ. ಮುಂದೆ ಈ ನಂತರದ ಮೂಲಕ ಈ ಲಿಂಗವು ಆಕಾರ ವನ್ನು ಹೊಂದಲಾಗಿ ಅದು ಮಹಾಲಿಂಗವೆನಿಸಿಕೊಳ್ಳುತ್ತದೆ. ಆಗ ಈ ಮಹಾ ಲಿಂಗಕ್ಕೆ ವಾಹನ ಅಥವಾ ಅಂಗವಾಗಿರುವವನು ವೃಷಭನು ಆತನು ಸದ್ಧರ್ಮ ಸ್ವರೂಪನು ಈ ಮಹಾಲಿಂಗವು ಓಂ ಓಂ ಎಂಬ ಪ್ರಣವಸ್ವರೂಪನಾಗಿ ಜಗತ್ತಿನಲ್ಲಿ ತುಂಬಿರುತ್ತದೆ. ಈ ಲಿಂಗದೊಳಗಿಂದಲೇ ಈ ದೃಶ್ಯ ಜಗತ್ತು ಪ್ರಕಟವಾಗುತ್ತದೆ. ಮತ್ತು ಮನುಷ್ಯನೂ ಕೂಡ ನಿರ್ಮಾಣವಾಗುತ್ತಾನೆ. ಆದರೆ ಈ ಸ್ಥಿತಿಯಲ್ಲಿ ಅವನು ಭವವುಳ್ಳವನಾಗಿದ್ದು ಅವನು ಸಂಸಾರ ದಲ್ಲಿ ತೊಳಲಾಡುತ್ತ ಕಷ್ಟಪಡುತ್ತಿರುತ್ತಾನೆ. ಆಗ ಪರಮಾತ್ಮನು ಅವನ ಈ ಸ್ಥಿತಿಯನ್ನು ನೋಡಿ ಕನಿಕರಪಟ್ಟು ಅವನ ಭವವನ್ನು ದೂರ ಮಾಡಬೇ ಕೆಂದು ಜಂಗಮರೂಪನಾಗಿ ಅಂದರೆ— ಜ್ಞಾನರೂಪನಾಗಿ ಬಂದು ಅವ ನಿಗೆ ಸಹಾಯವಾಗುತ್ತಾನೆ. ಈ ಜಂಗಮಕ್ಕೆ ಭಕ್ತನೇ ವಾಹನವು. ಅಂದರೆ ಅಂಗನು. ಜಂಗಮ ಲಿಂಗವು ಹೀಗೆ ಭಕ್ತನಲ್ಲಿ ಪ್ರಕಟವಾಗಲಾಗಿ ಅದರ ಪರಿಣಾಮವಾಗಿ ಆ ಭಕ್ತನು ತನ್ನ ಭವವನ್ನು ಕಳೆದು ಪುನಃ ತನ್ನ ಮೊದ

...ನ ನಿರಾಕಾರ ಸ್ಥಿತಿಯನ್ನು ಅಂದರೆ ಪರಮಾತ್ಮನಲ್ಲಿ ಸಾಮರಸ್ಯ ಅಥವಾ ಐಕ್ಯವನ್ನು ಹೊಂದುತ್ತಾನೆ. ಈ ಭಾವವು ಈ ವಚನದಲ್ಲಿರುತ್ತದೆ.

ಈ ಪ್ರಕಾರ ಬಸವೇಶ್ವರನು ಈ ವಚನದಲ್ಲಿ ಸೃಷ್ಟಿಯು ಪ್ರಕಟವಾಗುವದನ್ನು ಬಹಳ ಸಂಕ್ಷಿಪ್ತವಾಗಿ ಹೇಳಿದ್ದಾನೆ. ಅವನು ಆರಂಭದ ಸರ್ವಶೂನ್ಯ ನಿರಾಲಂಬ ಸ್ಥಲ ಮತ್ತು ಅದರ ತರುವಾಯ ಬರುವ ನಿಷ್ಕಲಲಿಂಗ ಸ್ಥಲ ಇವುಗಳ ಮಧ್ಯದಲ್ಲಿ ಶೂನ್ಯಲಿಂಗವೆಂದು ಇನ್ನೊಂದು ಲಿಂಗಸ್ಥಲವಿದೆಂದು ವಚನಶಾಸ್ತ್ರದಲ್ಲಿ ಹೇಳಿದೆ. ಇದನ್ನು ಅವನು ಇಲ್ಲಿ ಉಲ್ಲೇಖಿಸಿಲ್ಲ. ನಿಷ್ಕಲಲಿಂಗದ ತರುವಾಯ ಮಹಾಲಿಂಗವು ಇದ್ದು ಇದನ್ನು ಅವನು ಈ ವಚನದಲ್ಲಿ ಹೇಳಿದ್ದಾನೆ. ಮುಂದೆ ಈ ಮಹಾಲಿಂಗದೊಳಗಿಂದ ಪಂಚಸಾದಾಖ್ಯಗಳು ಪ್ರಕಟವಾಗುತ್ತವೆ. ಈ ಸಾದಾಖ್ಯಗಳಲ್ಲಿ ಜಗತ್ತಿಗೋಸ್ಕರ ಬೇಕಾಗುವ ಸಾಮಗ್ರಿಗಳೆಲ್ಲವು ಇರುತ್ತವೆ. ಈ ಸಾದಾಖ್ಯಗಳು ಶಿವಸಾದಾಖ್ಯ, ಅಮೂರ್ತಿಸಾದಾಖ್ಯ, ಮೂರ್ತಿಸಾದಾಖ್ಯ, ಕರ್ತೃಸಾದಾಖ್ಯ ಮತ್ತು ಕರ್ಮಸಾದಾಖ್ಯ ಎಂಬವು ಇವೆ. ಇವುಗಳಲ್ಲಿ ಪಂಚಶಕ್ತಿಗಳು ಪಂಚಮಹಾಭೂತಗಳು ಪಂಚಕಲೆಗಳು ಪಂಚಪ್ರಣವುಗಳು ೩೬ ತತ್ವಗಳು ಮಹಾಲಿಂಗ ಸಹಿತ ಷಡ್ಲಿಂಗಗಳು ಉತ್ಪನ್ನವಾಗುತ್ತವೆ. ಇವೆಲ್ಲವು ಜಗತ್ತಿಗೆ ಬಹು ಆವಶ್ಯಕ ಪದಾರ್ಥಗಳಿವೆ. ಇವೆಲ್ಲವುಗಳ ಕಾರ್ಯಗಳು ಸರಿಯಾಗಿ ನಡೆಯಬೇಕಾದರೆ ಅಧಿದೇವತೆಗಳು ಅವಶ್ಯವಿದ್ದು ಇವರು ಸದಾಶಿವ, ಈಶ್ವರ, ರುದ್ರ, ವಿಷ್ಣು, ಬ್ರಹ್ಮ ಎಂಬವರು ಅನುಕ್ರಮವಾಗಿ ಈ ಸಾದಾಖ್ಯಗಳಿಗೆ ಇದ್ದಾರೆ. ಈ ಅಧಿದೇವತೆಗಳ ನಿಯಂತ್ರಣದಲ್ಲಿ ಜಗತ್ತಿನ ಕಾರ್ಯಗಳು ಸುವ್ಯವಸ್ಥೆಯಿಂದ ನಡೆದಿರುತ್ತವೆ. ಬಸವೇಶ್ವರನು ವಚನಶಾಸ್ತ್ರದಲ್ಲಿ ಬರುವ ಇವೆಲ್ಲ ವಸ್ತುಗಳನ್ನು ಇಲ್ಲಿ ವಿವರವಾಗಿ ವರ್ಣಿಸದೆ ಜಂಗಮ ಮತ್ತು ಭಕ್ತ ಇವರನ್ನು ಮಾತ್ರ ಉಲ್ಲೇಖಿಸಿ ಜ್ಞಾನಸ್ವರೂಪನಾದ ಜಂಗಮವನ್ನು ಭಕ್ತನು ತನ್ನಲ್ಲಿ ಕ್ರಮೇಣ ಒಳಗು ಮಾಡಿಕೊಳ್ಳುತ್ತ ಹೋದಲ್ಲಿ ಅವನು ಕಡೆಗೆ ಪರಮಾತ್ಮನಲ್ಲಿ ಸಾಮರಸ್ಯವನ್ನು ಹೊಂದಿ ನಿವೃತ್ತನಾಗುತ್ತಾನೆಂದು ಬಹು ಸಂಕ್ಷಿಪ್ತವಾಗಿ ಇಲ್ಲಿ ಹೇಳಿದ್ದಾನೆ.

**(೨೪)** ಎನ್ನ ಗುಣವ ಅವಗುಣವ ಸಂಪಾದಿಸುವೆ ಅಯ್ಯ! ಪ್ರೀತಿಯೇ ಅಪ್ರತಿಮ ಮಹಿಮ. ನಿಮಗಾನು ಪ್ರತಿಯೇ! ಕೂಡಲಸಂಗಮದೇವಾ ನೀವು ಮಾಡಲಾನಾದೆನು.

ಸಂಪಾದಿಸು = ತಿಳಿ, ಕಂಡುಹಿಡಿ, ತೂಗಿ ನೋಡು.

ತೆಗಳು ಬರುತ್ತವೆ. ಏಳನೆಯ ಭವಾಂತರದಲ್ಲಿ ವೃಷಭನೇ ಬಸವೇಶ್ವರನಾಗಿ ಅವತರಿಸಿ ಪರಮಾತ್ಮನಿಗೆ ತನ್ನದನ್ನೆಲ್ಲ ಅರ್ಪಣೆಮಾಡಿ ಪರಮಾತ್ಮನಿಂದ ಪ್ರಸಾದವನು ಪಡೆದು ಆಚರಿಸುವವನಾದನು. ಹೀಗೆ ಬಸವೇಶ್ವರನು ತಾನು ಏಳೇ ು ಜನ್ಮದಲ್ಲಿ ಶಿವಭಕ್ತನಾಗಿ ಜನ್ಮ ತಾ ುವೆನೆಂತಲೂ ಒಂದು ವೇಳೆ ಹೀಗೆಜನ್ಮ ತಾಳಿ ಶಿವಭಕ್ತಿಯುಳ್ಳವನಾಗಿ ಆಚರಿಸದೆ ಹೋದರೆ ನಿಮ್ಮ ಪ್ರಮಥರಾಣೆ ಎಂತಲೂ ಈ ವಚನದಲ್ಲಿ ಪರಮಾತ್ಮನಲ್ಲಿ ಪ್ರತಿಜ್ಞೆಮಾಡಿ ಹೇಳಿದ್ದಾನೆ.

**(೫) ಸಂಸಾರವು ದುಃಖಮಯವು, ಮೋಕ್ಷವನ್ನು ಬಯಸು.**

(೨೬) ಸಂಸಾರವೆಂಬ ಬಲೆಯಲ್ಲಿ ಶಿಲುಕಿದೆನಯ್ಯ. ಎನ್ನುವನು ಕಾಯಯ್ಯಾ ಹುರುಳಿಲ್ಲ. ಕೂಡಲ ಸಂಗಮದೇವಾ ಶಿವಧೋ. ಶಿವಧೋ.

ಈ ಸಂಸಾರದಲ್ಲಿ ಮೋಹಗೊಳಿಸುವ ಅನೇಕ ವಸ್ತುಗಳಿವೆ. ಅವುಗಳ ಬಲೆಯಲ್ಲಿ ನಾನು ಸಿಕ್ಕಿಬಿದ್ದಿದ್ದೇದೆ. ಈ ಸಂಸಾರವು ಅವುಗಳ ಮೂಲಕ ಮನೋಹರವಾಗಿ ತೋರುತ್ತದೆ. ಆದರೂ ಅದರಲ್ಲಿ ಹುರುಳಿಲ್ಲ. ಹುರುಳಿಲ್ಲ. ಎಲೋ ಕೂಡಲ ಸಂಗಮನೇ ನನ್ನನ್ನು ನೀನು ಕಾಯು ಎಂದು ಪರಮಾತ್ಮನನ್ನು ಕುರಿತು ಬಸವೇಶ್ವರನು ಬೇಡಿಕೊಳ್ಳುತ್ತಾನೆ.

(೨೭) ನಾನೊಂದ ನೆನೆವರೆ ತಾನೊಂದ ನೆನೆವುದು. ನಾನಿತ್ತ ಲೆಳೆದಡೆ ತಾನತ್ತಲೆಳೆವುದು. ತಾ ಬೇರೆ ಎನ್ನನಳಲಿಸಿ ಕಾಡಿತ್ತು. ತಾ ಬೇರೆ ಎನ್ನ ಬಳಲಿಸಿ ಕಾಡಿತ್ತು. ಕೂಡಲ ಸಂಗನ ಕೂಡಿಹೆನೆಂದರೆ ತಾನೆನ್ನ ಮುಂದುಗೆಡಿಸಿತ್ತು ಮಾಯೆ.

ಅಳಲಿಸು = ಅಳಲುವಂತೆ ಮಾಡು.

ಸಂಸಾರದಲ್ಲಿ ಮಾಯೆಯೆಂಬುದಿದೆ. ನಾನು ಒಂದು ವಸ್ತುವಿನ ಸಲುವಾಗಿ ಮನಸ್ಸು ಮಾಡಿದರೆ ಈ ಮಾಯೆಯು ನಾನು ಬೇರೊಂದನ್ನು ನೆನೆಯುವಂತೆ ಮಾಡುತ್ತದೆ. ನಾನು ಒಂದು ಕಡೆಗೆ ಹೋಗಬೇಕೆಂದರೆ ಅದು ನನ್ನನ್ನು ಬೇರೆ ಕಡೆಗೆ ಎಳೆಯುತ್ತದೆ. ನಾನು ಅಳುವಂತೆ ಮಾಡಿ ನನ್ನನ್ನು ಪೀಡಿಸುತ್ತದೆ. ನನಗೆ ಕಷ್ಟಗಳನ್ನುಂಟುಮಾಡಿ ಕಾಡುತ್ತದೆ. ನಾನು ಪರಮಾತ್ಮನನ್ನು ಕೂಡಬೇಕೆಂದು ಹೋದರೆ ಅದು ನನಗೆ ಮುಂದಿನದೇನೂ ತಿಳಿಯದಂತೆ ಮಾಡಿಬಿಡುತ್ತದೆ. ಈ ಪ್ರಕಾರ ಬಸವೇಶ್ವರನು ಮಾಯೆಯು ಕೊಡುವ ತೊಂದರೆಗಳನ್ನು ವರ್ಣಿಸಿದ್ದಾನೆ.

(೨೮) ಇಂದಿಗೆಂತು, ನಾಳಿಂಗೆಂತು ಎಂದು ಬೆಂದೊಡಲ ಹೋಯಿತ್ತೆನ್ನ ಸಂಸಾರ. ಹಿಂದೆ ನಾನಾ ಯೋನಿಯಲ್ಲಿ ಬಂದೆನೆಂಬ ಹೇಯವಿಲ್ಲ. ಮುಂದೆ ಮುಕ್ತಿಯಾಗಬೇಕೆಂಬ ಯುಕ್ತಿ ಇಲ್ಲ. ಎಂದೆಂದು ಸದಾಶಿವನ ಕುಂದದೆ ನೆನೆಯಲೀಯ್ಯದೆ ಕೊಂದುದೀ ಮಾಯೆ ಕೂಡಲ ಸಂಗಮ ದೇವಾ.

ಹೊರೆ = ರಕ್ಷಣೆ ಮಾಡು; ಹೇಯ = ಹೇಸಿಕೆ; ಜಿಗುಪ್ಸೆ = ಒಲ್ಲೆನೆಂಬ ಇಚ್ಛೆ; ನೆನೆಯಲೀಯದೆ = ನೆನೆಯಗೊಡದೆ.

ಇವೊತ್ತ ನನಗೆ ಹೇಗೆ, ನಾಳೆಗೆ ಹೇಗೆ ಎಂಬ ಚಿಂತೆಯಿಂದ ನನ್ನ ಶರೀರವು ಬೆಂದುಹೋಗಿದೆ. ಇಂಥ ಶರೀರವನ್ನು ರಕ್ಷಣೆ ಮಾಡುವಲ್ಲಿ ನಾನು ತೊಡಗಿದ್ದೇನೆ. ನನ್ನ ಸಂಸಾರವು ಈ ರೀತಿಯದಾಗಿದೆ. ಈ ವರೆಗೆ ನಾನು ಕ್ರಿಮಿಕೀಟಕಗಳು ಮೊದಲ್ಗೊಂಡು ಹೀನ ಜನ್ಮಗಳಲ್ಲಿ ಬಂದಿದ್ದೇನೆ. ಆದರೂ ನನ್ನ ಜನ್ಮದ ವಿಷಯವಾಗಿ ನನ್ನಲ್ಲಿ ಹೇಸಿಕೆಯುಂಟಾಗಿಲ್ಲ. ಮುಂದೆ ಮುಕ್ತಿಯನ್ನು ಹೇಗೆ ಹೊಂದಬೇಕೆಂಬ ವಿಷಯವಾಗಿಯೂ ನಾನು ಯಾವ ಹಂಚಿಕೆಯನ್ನು ಮಾಡಿಕೊಂಡಿಲ್ಲ. ನಾನು ಮಾಯೆಯಲ್ಲಿ ಸಿಲುಕಿಕೊಂಡಿದ್ದೇನೆ ಪರಮಾತ್ಮನನ್ನು ಯಾವಾಗಲೂ ತಪ್ಪದೆ ನೆನೆಯಬೇಕೆಂದರೆ ಈ ಮಾಯೆಯು ಹಾಗೆ ನನಗೆ ಮಾಡಗೊಡುವದಿಲ್ಲ ಅದು ನನ್ನನ್ನು ಹಿಂಸಿಸುತ್ತಾ ಇದೆ, ಎಂದು ಹೇಳುತ್ತಾನೆ.

(೨೯) ತುಪ್ಪದ ಸವಿಗೆ ಅಲಗ ನೆಕ್ಕುವ ಸೊಣಗನಂತೆ ಎನ್ನ ಬಾಳುವೆ. ಸಂಸಾರ ಸಂಗವ ಬಿಡದು. ನೋಡೆನ್ನ ಮನವು. ಈ ನಾಯಿತನವ ಮಾಣಿಸು. ಕೂಡಲ ಸಂಗಯ್ಯಾ ನಿಮ್ಮ ಧರ್ಮ.

ಕತ್ತಿಯನ್ನು ಸಾಣೀಹಿಡಿಸಿ ಅದನ್ನು ಹದನಮಾಡಿದ ಬಳಿಕ ಅದಕ್ಕೆ ಜಂಗು ಹತ್ತಬಾರದೆಂದು ಜನರು ತುಪ್ಪವನ್ನು ಅದಕ್ಕೆ ಸವರುವದುಂಟು. ಒಂದು ನಾಯಿಯು ಆ ತುಪ್ಪದ ವಾಸನೆಗೆ ಮೆಚ್ಚಿ ಆ ಅಲಗನ್ನು ನೆಕ್ಕುತ್ತಿದೆ. ಆಗ ಅದರ ನಾಲಿಗೆಗೆ ಗಾಯವಾಗಿ ರಕ್ತಬರಲು ಆ ರಕ್ತವು ಆ ತುಪ್ಪದಲ್ಲಿ ಬೆರೆದು ಅದಕ್ಕೊಂದು ಸ್ವಾದವಾಗುತ್ತದೆ. ಆಗ ನಾಯಿಯು ಪುನಃ ಅದನ್ನು ನೆಕ್ಕಹತ್ತಲು ನಾಲಿಗೆಯು ಹರಿದು ಹೋಗುತ್ತದೆ. ಹೀಗೆ ನನ್ನ ಬಾಳ್ವೆಯಾಗಿದೆ. ನನ್ನ ಮನಸ್ಸಿಗೆ ಇಂಥ ಸಂಸಾರದ ರುಚಿಯು ಹತ್ತಿ ಅದು ನನ್ನನ್ನು ತೊಂದರೆ ಪಡಿಸಿದರೂ ಅದರ ಸಂಗವನ್ನು ಬಿಡದು. ಎಲೋ ಕೂಡಲಸಂಗನೇ, ನಾನು ಹೀಗೆ ನಾಯಿಯಂತೆ ನಡಿಯುತ್ತಿದ್ದು

ರ

ಇದನ್ನು ಬಿಡಿಸೆಂದು ಬಸವೇಶ್ವರನು ದೇವರನ್ನು ಕುರಿತು ಪ್ರಾರ್ಥಿಸುತ್ತಾನೆ.

(೩೦) ನಿಮಿಷದ ನಿಮಿಷವೆಂಬೋ. ಕ್ಷಣದೊಳ ಗರ್ಧವೆಂಬೋ ಕಣ್ಣು ಮುಚ್ಚಿ ಬಿಚ್ಚುವೈಸು ಬೇಗೆಂಬೋ. ಸಂಸಾರದಾಗೆಂಬೋ. ಸಂಸಾರದ ಹೋಗೆಂಬೋ. ಸಂಸಾರದೊಪ್ಪೆಂಬೋ. ಕೂಡಲಸಂಗಮದೇವ ನೀ ಮಾಡಿದ ಮಾಯೆಂಬೋ. ಅಭ್ರಚ್ಛಾಯೆಂಬೋ

ಕ್ಷಣ= ಶಿರ. ಪೋಷಣೆ ಅಂದರೆ ತಲೆಯು ಸುತ್ತಲು ಒಮ್ಮೆ ಕೈಯ್ಯಾಡಿಸುವದಕ್ಕೆ ಹತ್ತುವ ವೇಳೆ. ಮತ್ತು ಅರ್ಧಶಿರ ಪೋಷಣೆ ಕೈಯ್ಯಾಡಿಸಲು ಹತ್ತುವ ವೇಳೆಯು. ಅರ್ಧಕ್ಷಣ; ಆಗು = ಪ್ರಕಟನೆ, ಹೊರಬೀಳುವದು; ಒಪ್ಪು = ಸೌಂದರ್ಯ, ಹೊಳಪು. ಅಭ್ರಚ್ಛಾಯೆ=ಮೋಡದ ನೆರಳು.

ಸಂಸಾರವು ನಿಮಿಷಮಾತ್ರ ಇರುವಂತಹದು. ಇಲ್ಲವೆ ಅದು ಅರ್ಧಕ್ಷಣ ಇರಬಹುದು. ಅಥವಾ ಕಣ್ಣು ಮುಚ್ಚಿ ಕಣ್ಣು ತೆರೆಯುವಷ್ಟು ಕಾಲ ಅದರ ಇರುವಿಕೆಯು ಇರಬಹುದು. ಆಯುಷ್ಯದ ಆರಂಭವು ಮತ್ತು ಅದರ ಅಂತ್ಯವು ಈ ಪ್ರಕಾರ ಇವೆ, ಎಂದು ತಿಳಿ. ಈ ಆರಂಭವು ಮತ್ತು ಅಂತ್ಯ ಇವುಗಳ ಮಧ್ಯ ಎಷ್ಟು ಕಾಲವೋ ಅಷ್ಟೇ ಮನುಷ್ಯನ ಆಯುಷ್ಯದ ಅವಧಿಯು. ಅಂದರೆ ಅದಕ್ಕೆ ಇಂತಿಷ್ಟು ಕಾಲ ಎಂಬುದು ಇಲ್ಲ. ಆಯುಷ್ಯವು ಹೀಗೆ ಸಂಸಾರದ ಹೊಳಪು ಮಾತ್ರ. ಎಲೋ ಪರಮಾತ್ಮನೇ ಸಂಸಾರವು ನೀನು ಮಾಡಿದ ಮಾಯೆಯು. ಇದು ಮೋಡದ ನೆರಳು ಮಾತ್ರ, ಎಂದು ತಿಳಿದುಕೊಳ್ಳಬೇಕೆಂದು ಬಸವೇಶ್ವರನು ಮನುಷ್ಯನ ಆಯುಷ್ಯವು ಎಷ್ಟಿದೆ, ಅದು ಹೇಗಿದೆ. ಎಂಬುದನ್ನು ಇಲ್ಲಿ ಹೇಳುತ್ತಾನೆ. ಅಂದರೆ ಅದು ಶಾಶ್ವತವಲ್ಲ, ಅದು ಯಾವಾಗ್ಗೆ ತೀರುತ್ತದೆಂಬುದನ್ನು ಹೇಳುವದು ಶಕ್ಯವಿಲ್ಲವೆಂಬ ಭಾವವು ಈ ವಚನದಲ್ಲಿ ಇದೆ.

(೩೧) ಜನಿತಕ್ಕೆ ತಾಯಾಗಿ ಹೆತ್ತಳು ಮಾಯೆ. ಮೋಹಕ್ಕೆ ಮಗುವಾಗಿ ಹುಟ್ಟಿದಳು ಮಾಯೆ. ಕೂಟಕ್ಕೆ ಸ್ತ್ರೀಯಾಗಿ ಕೂಡಿದಳು ಮಾಯೆ. ಇದಾವಾವ ಪರಿಯಲ್ಲಿ ಕಾಡಿಹಿತು ಮಾಯೆ. ಈ ಮಾಯೆಯ ಕಳೆವರೆ ಎನ್ನಳವಲ್ಲ ನೀವೇ ಬಲ್ಲಿರಿ ಕೂಡಲಸಂಗಮದೇವಾ.

ಜನಿತಕ್ಕೆ = ಹುಟ್ಟುವದಕ್ಕೆ

ಮಾಯೆಯು ಅನೇಕ ತರದ ಸ್ವರೂಪಗಳನ್ನು ತಾಳಿ ಅವುಗಳ ಮೂಲಕ ಮನುಷ್ಯನು ಈ ಜಗತ್ತನ್ನು ಪ್ರೀತಿಸುವಂತೆ ಅದು ಮಾಡುತ್ತದೆಂದು ಬಸವೇಶ್ವರನು ಇಲ್ಲಿ ಹೇಳಿದ್ದಾನೆ. ನಾನು ಇಲ್ಲಿ ಜನನ ತಾಳುವದಕ್ಕೆ ಈ ಮಾಯೆಯು ನನಗೆ ತಾಯಿಯಾದಳು. ಕೂಟಕ್ಕೆ ಸ್ತ್ರೀಯಾದಳು. ಹೀಗೆ ಈ ಮಾಯೆಯು ಅನೇಕ ರೀತಿಯಿಂದ ಈ ಸಂಸಾರವನ್ನು ನಾನು ಪ್ರೀತಿಸುವಂತೆ ಮಾಡುತ್ತದೆ. ಈ ಮಾಯೆಯನ್ನು ಹೋಗಲಾಡಿಸುವದು ನನ್ನ ಕೈಯಲ್ಲಿಲ್ಲ. ಅದನ್ನು ದೂರಮಾಡುವ ರೀತಿಯನ್ನು ಎಲೋ ಕೂಡಲಸಂಗನೇ ನೀನೇ ಬಲ್ಲೆ, ಎಂದು ಬಸವೇಶ್ವರನು ಪರಮಾತ್ಮನನ್ನು ಕುರಿತು ಪ್ರಾರ್ಥಿಸುತ್ತಾನೆ.

(೩೨) ಸಂಸಾರ ಸಾಗರದ ತೆರೆ ಕೊಬ್ಬಿ ಮುಖದ ಮೇಲೆ, ಅಲೆವುತ್ತಿದ್ದುದೇ ನೋಡಾ ? ಸಂಸಾರ ಸಾಗರ ಉರದುದ್ದವೇ ಹೇಳಾ ? ಸಂಸಾರ ಸಾಗರ ಕೊರಳುದ್ದವೇ ಹೇಳಾ? ಸಂಸಾರ ಸಾಗರ ಸಿರದುದ್ದವಾದ ಬಳಿಕ ಏನ ಹೇಳುವೆನಯ್ಯ? ಅಯ್ಯಾ ಅಯ್ಯಾ ಎನ್ನ ಹುಯ್ಯಲ ಕೇಳಯ್ಯ ಕೂಡಲಸಂಗಮದೇವಾ ನಾನೇವೆನೇವೆನಯ್ಯಾ?

ಅಲೆ= ಅಲುಗಾಡು. ಹುಯ್ಯಲ= ಚಿರಾಟ ದುಃಖದ ಧ್ವನಿ

ಏವೆನಯ್ಯ=ಏನುಮಾಡಲಿ.

ಸಂಸಾರವೆಂಬ ಸಮುದ್ರದಲ್ಲಿ ಕಾಮ ಕ್ರೋಧಾದಿಗಳೆಂಬ ತೆರೆಗಳು ಹೊಯ್ದಾಡುತ್ತಿವೆ. ಅವು ನನ್ನನ್ನು ಸಮುದ್ರದಲ್ಲಿ ಮುಳುಗಿ ಹೋಗುವಂತೆ ಮಾಡುತ್ತವೆ. ಆದರೆ ಈ ಸಮುದ್ರವು ಎಷ್ಟು ಆಳವಾಗಿದೆ ಎಂಬುದು ನನಗೆ ತಿಳಿಯದು. ಅದು ಎದೆ ವರೆಗೋ ಕೊರಳಿನ ವರೆಗೋ ಎಂಬುದು ನನಗೆ ಗೊತ್ತಾಗದು. ಅದು ಒಂದುವೇಳೆ ಸಿರದುದ್ದವಾಗಿದ್ದರೆ ನಾನು ಮುಳುಗಿ ಸತ್ತು ಹೋಗುವದೇ ನಿಶ್ಚಯವು. ಆದ್ದರಿಂದ ನನ್ನಂಥವನನ್ನು ಸಾಗರದಿಂದ ಪಾರು ಮಾಡಬೇಕೆಂದು ನಾನು ದುಃಖದ ದನಿಯಿಂದ ಕೂಗುತ್ತಲಿದ್ದೇನೆ. ಎಲೋ ಪರಮಾತ್ಮನೇ ನನ್ನ ಈ ಮೊರೆಯನ್ನು ಕೇಳು. ಎಲೋ ಕೂಡಲಸಂಗಮದೇವನೇ ನಾನೇನು ಮಾಡಲಿ? ನಾನೇನು ಮಾಡಲಿ? ಎಂದು ಪರಮಾತ್ಮನಲ್ಲಿ ಬಸವೇಶ್ವರನು ಶೋಕಿಸುತ್ತಾನೆ. ಇಂಥ ಸಂಸಾರ ಸಾಗರದೊಳಗಿಂದ ಪಾರಾಗಬೇಕಾದರೆ ಕಾಮ ಕ್ರೋಧಾದಿಗಳಿಂದ ದೂರಿರಬೇಕು. ದೂರವಿರದಿದ್ದರೆ ನಾವು ಸಮುದ್ರ

ದೊಳಗೆ ಮುಳುಗಿ ಸತ್ತು ಹೋಗುವದೇ ನಿಶ್ಚಯವೆಂಬ ಭಾವವು ಈ ವಚನದಲ್ಲಿ ಇದೆ.

(೩೩) ಆದಿತ್ಯ ಸೋಮರು ಆಗಿ ಹೋಗುತ್ತಿದ್ದಹರು. ಬ್ರಹ್ಮ ಪ್ರಳಯಕ್ಕೊಳಗಾದ. ಹರಿಯ ಸಿಂಹಾಸನವಡಗಿತ್ತು. ಅಂತೋ ನಾಸ್ತಿ ಇಂತೋನಾಸ್ತಿ. ರೋಮಜರೆಂಬವರು ಸಿಟ್ಟುಗುಟ್ಟಿ ತರುಮಶನಡಿಯಲಿದ್ದರು. ಮಾರ್ಕಂಡೇಯ ಮಹಾ ಮುನಿ ಸ್ವೇಚ್ಛಾಮರಣಿ ಎನಿಸಿಕೊಂಡನಲ್ಲದೆ, ಲಿಂಗದ ನಿಜವನರಿಯನು- ಇದು ಕಾರಣ ಕೂಡಲ ಸಂಗಮ ದೇವಾ, ನೀವು ಮಾಡಿದ ಬಯಲು ಭಕ್ಷಿಸಿತ್ತು ಅನಂತ ಹಿರಿಯರನು.

ಮಾಯೆಯು ಕೇವಲ ಮಾನವರನ್ನು ಮಾತ್ರವಲ್ಲ. ದೇವತೆಗಳನ್ನೂ ಸಹ ಕಂಗೆಡಿಸಿದೆ ಎಂದು ಬಸವೇಶ್ವರನು ಈ ವಚನದಲ್ಲಿ ಹೇಳಿದ್ದಾನೆ. ಅಷ್ಟ ತನು ಮೂರ್ತಿಗಳಲ್ಲಿ ಸೂರ್ಯ ಚಂದ್ರರು ಬರುತ್ತಾರೆ. ಆದರೆ ಸೃಷ್ಟಿಯ ನಿಯಮಗಳಂತೆ ಅವರಿಗೆ ಹುಟ್ಟೂ ಸಾವುಗಳೂ ಉಂಟು. ಜಗತ್ತನ್ನೆಲ್ಲ ಸೃಷ್ಟಿಸಿದ ಬ್ರಹ್ಮನಿಗೆ ಸಹ ಪ್ರಳಯವು ಇದೆ. ಹರಿಯು ಕುಳ್ಳಿರುವ ಸಿಂಹಾಸನವು ಎಲ್ಲಿಯೋ ಮಾಯವಾಗಲು, ಅವನು ಸಮುದ್ರ ಸೇರಿದನು. ಹೀಗೆ ಅವೂ ಉಳಿಯುವದಿಲ್ಲ. ಇವೂ ಉಳಿಯುದದಿಲ್ಲ. ರೋಮಜ ಮೀನಜರೆಂಬ ಋಷಿಗಳು ಮಾಯೆಯ ಮೇಲೆ ಕೋಪಗೊಂಡು ಪ್ರಪಂಚವನ್ನು ಬಿಟ್ಟು ಅರಣ್ಯವನ್ನು ಸೇರಿಕೊಂಡರು. ಅವರಂತೆಯೇ ಮಾರ್ಕಂಡೇಯನು ಮಹಾ ಋಷಿಯೆನಿಸಿಕೊಂಡು ತಾನು ಬಯಸಿದಾಗ ಮರಣವನ್ನು ಹೊಂದಲು ಸಮರ್ಥನೆಂದು ಪ್ರಸಿದ್ಧಿಯನ್ನು ಹೊಂದಿದನು. ಆದರೆ ಅವನು ಪರಮಾತ್ಮನ ನಿಜವನ್ನು ಅರಿಯಲಾರದೆ ಹೋದನು- ಇದು ಕಾರಣ ಕೂಡಲ ಸಂಗಮ ದೇವನೇ ನೀನು ಮಾಡಿದ ಮಾಯೆಯು ದೊಡ್ಡವರೆನಿಸಿಕೊಂಡ ಇಂಥ ಅಸಂಖ್ಯ ಹಿರಿಯರನ್ನು ಬಲಿಗು ಮಾಡಿ ಎತ್ತಿದೆಂದ, ಬಸವೇಶ್ವರನು ಇಲ್ಲಿ ಹೇಳಿದ್ದಾನೆ.

(೩ ) ಕೊಡೆವಿಡಿಯೆ ಕುದುರೆಯ ದೃಢವುಳ್ಳ ರಾವುತನೇರಿ ಕೊಡೆ ಕೋಟಿ ಶೂರರು ಹನ್ನಿಬ್ಬರಯ್ಯ. ಚಂದ್ರಕಾಂತದ ಗಿರಿಯ ಗಜ ಬಂದು ಮೂದಲಿಸಿ ಅರಿದು ಕೊಲುವರೆ, ರಿಪುಗಳ ಕಲಿತನವ ನೋಡಾ- ಅವಿಗೆಯುಲೊದವಿದ ಪುತ್ಥಳಿಯ ರೂಹಿನಂತೆ ಆಯಿತ್ತು- ಕೂಡಲ ಸಂಗಮ ದೇವಾ, ನಿಮ್ಮ ಹೆಸರಿಲ್ಲದ ಹೆಸರು.

ಟೀಕು:— ಅರ್ಥವು ಸ್ಪಷ್ಟವಾಗುವದಿಲ್ಲ.

(೩೫) ಹಬ್ಬಕ್ಕೆ ತಂದ ಹರಿಕೆಯ ಕುರಿ, ತೋರಣಕ್ಕೆ ತಂದ ತಳಿರು ಮೇಯಿತ್ತು. ಕೊಂದಹರೆಂಬುದನರಿಯದೆ, ಬೆಂದ ಒಡಲ ಹೊರೆಯ ಹೋಯಿತ್ತಲ್ಲದೆ; ಅಂದಂದೆ ಹುಟ್ಟಿತ್ತು- ಅಂದಂದೆ ಹೊಂದಿತ್ತು. ಕೊಂದವರುಳಿವರೇ ಕೂಡಲ ಸಂಗಮದೇವಾ.

ಕೀಳ ಜನರು ಮಾರಿ ಮಸಣಿಗಳೆಂಬ ಕ್ಷುದ್ರ ದೇವತೆಗಳಿಗೆ ಬಲಿ ಕೊಡುವೆನೆಂದು ಬೇಡಿಕೊಂಡು ಒಂದು ಕುರಿಯನ್ನು ತಂದು ಮನೆಯ ಮುಂದೆ ಕಟ್ಟುತ್ತಾರೆ. ಆಗ ಈ ಕುರಿಯು ತೋರಣದ ಸಲುವಾಗಿ ತಂದ ಮಾವು, ನೇರಿಲೆ ಇವುಗಳ ಎಲೆಗಳು ಬಾಗಿಲಲ್ಲಿ ಬಿದ್ದವುಗಳನ್ನು ನೋಡಿ ಅದಕ್ಕೆ ಹಸಿವೆಯಾದದ್ದರಿಂದ ಅವುಗಳನ್ನು ಅದು ತಿನ್ನಹತ್ತುತ್ತದೆ. ಆದರೆ ಸ್ವಲ್ಪ ಹೊತ್ತಿನಲ್ಲಿ ತನ್ನನ್ನು ಕೊಂದುಹಾಕುತ್ತಾರೆಂಬುದರ ಯೋಚನೆಯು ಅದಕ್ಕಿಲ್ಲ. ಹಾಗೆಯೇ ಮಾಯೆಗೆ ಒಳಗಾದ ಮನುಷ್ಯನಾದರೂ ಈ ಕುರಿಯಂತೆಯೇ ವರ್ತಿಸುತ್ತಾನೆ. ಅವನು ತನ್ನ ಆಯುಷ್ಯವು ಯಾವಾಗ್ಗೆ ತೀರುವದೆಂಬುದನ್ನು ಲಕ್ಷಿಸುವದಿಲ್ಲ. ಅವನು ತನ್ನ ಹೊಟ್ಟೆಯನ್ನು ಹೊರೆಯುವದರಲ್ಲಿ ತೊಡಗಿರುತ್ತಾನೆ. ಆದರೆ ಕುರಿಯು ಯಾವಾಗ್ಗೆ ಜನ್ಮ ತಾಳಿತೋ ಆಗ್ಗೆಯೇ ಅದರ ಮರಣವು ಎಂದು ನಾವು ತಿಳಿಯಬೇಕು. ಮನುಷ್ಯನಾದರೂ ಹಾಗೆಯೇ ತನ್ನ ವಿಷಯವಾಗಿ ತಿಳಿದುಕೊಂಡು ವರ್ತಿಸಬೇಕು. ಬಲಿ ಕೊಡುವಂಥವರಾವರೂ ತಾವಾದರೂ ಬಹಳ ದಿವಸ ಬಾಳುವೆವೋ ಹೇಗೆಂಬುದನ್ನು ವಿಚಾರ ಮಾಡಬೇಕು. ಅವರೂ ಕೂಡ ಯಾವಾಗಲೋ ಏನೋ ಸತ್ತು ಹೋಗಿಬಿಡುತ್ತಾರೆ. ಜಗತ್ತಿನಲ್ಲಿರುವ ಮನುಷ್ಯರ ಬಾಳುವೆಯ ರೀತಿಯು ಹೀಗಿದೆ ಎಂದು ಬಸವೇಶ್ವರನು ಈ ವಚನದಲ್ಲಿ ಹೇಳಿದ್ದಾನೆ.

(೩೬) ಇಲಿ ಗಡಹನೊಡ್ಡಿದಲ್ಲಿ ಇರ್ಪಂತೆ ಎನ್ನ ಸಂಸಾರ ಕೆಡುವನ್ನಕ್ಕ ಮಾಣದು, ಹೆರರ ವಿದಿಸುವದನು, ತನು ಕೆಡುವನ್ನಕ್ಕ ಮಾಣದು. ಅಕಟಕಟಾ ಸಂಸಾರಕ್ಕೆ ಆಸತ್ತೆ ಕೂಡಲ ಸಂಗಮ ದೇವಾ.

ಇಲಿಗಡಹ = ಇಲಿ ಬಲಿ, ಆಸತ್ತೆನು = ಬೇಸರಬಟ್ಟೆನು.

ಇಲಿಬಲಿಯ ಸಮೀಪದಲ್ಲಿ ಇಲಿಯು ಇದ್ದಂತೆ ನನ್ನ ಸಂಸಾರವಾಗಿದೆ. ಅಂದರೆ ನಾನು ಎಂದು ನಾಶಹೊಂದುವೆನೆಂಬುದನ್ನು ಹೇಳಲು ಬಾರದಂತಾಗಿದೆ. ನಾನು ಸತ್ತುಹೋಗುವ ವರೆಗೂ ನನ್ನ ಸಂಸಾರವು ನನ್ನನ್ನು ಬಿಡುವದಿಲ್ಲ. ನನ್ನ ಶರೀರವು ಬಿದ್ದು ಹೋಗುವವರೆಗೂ ಎರ

ಡಸೆಯುವರನ್ನು ಬಾಧಿಸುವದನ್ನು ನಾನು ಬಿಡುವದಿಲ್ಲ. ನನ್ನ ಶರೀರವು ಬಿದ್ದು ಹೋಗುವ ವರೆಗೂ ನಾನು ಎರಡನೆಯುವರ ದೋಷಗಳನ್ನು ಎತ್ತಿ ನುಡಿಯುವದನ್ನು ಬಿಡುವದಿಲ್ಲ. ಎಲೋ ಕೂಡಲ ಸಂಗಮ ದೇವನೇ, ನಾನು ಇಂಥ ಸಂಸಾರದ ಸಲುವಾಗಿ ಬೇಸತ್ತಿದ್ದೇನೆ.

(೩೭) ಎಂದೋ ಸಂಸಾರದ ದಂದುಗ ಹಿಂಗುವದು ? ಎಂದೋ ಮನದಲ್ಲಿ ಪರಿಣಾಮವಹುದೆನಗಿನ್ನೆಂದೋ ? ಎಂದೋ ಕೂಡಲ ಸಂಗಮ ದೇವಾ. ಇನ್ನೆಂದೋ ಪರಮ ಸಂತೋಷದಲ್ಲಿಹುದೆನಗೆಂದೋ ?

ದಂದುಗ = ತೊಂದರೆ; ಪರಿಣಾಮ = ಸಂತೋಷ.

ಎಲೋ ಪರಮಾತ್ಮನೇ, ಸಂಸಾರದ ತೊಂದರೆಗಳು ಎಂದು ನನ್ನಿಂದ ದೂರಾಗಿ ಹೋಗುವವು ? ಅವೆಲ್ಲವೂ ದೂರಾಗಿ ಎಂದು ನನ್ನ ಮನಸ್ಸಿಗೆ ಸಂತೋಷವಾಗುವದು? ಎಲೋ ಕೂಡಲ ಸಂಗಮ ದೇವನೇ, ನನಗೆ ಪರಮ ಸಂತೋಷವಾಗುವದು, ಎಂದಿಗೋ, ಎಂದಿಗೋ ಎಂದು ಬಸವೇಶ್ವರನು ಪರಮಾತ್ಮನನ್ನು ಕುರಿತು ಇಲ್ಲಿ ಬೇಡಿಕೊಳ್ಳುತ್ತಾನೆ.

(೩೮) ಚಂದ್ರಮನಂತೆ ಕಳೆಸಮನಿಸಿತ್ತೆನಗೆ. ಸಂಸಾರವೆಂಬ ರಾಹು ಸರ್ವ ಗ್ರಾಸಿಯಾಗಿ ನುಂಗಿತ್ತಯ್ಯ. ಇಂದೆನ್ನ ದೇಹಕ್ಕೆ ಗ್ರಹಣವಾಯಿತ್ತು. ಇನ್ನೆಂದಿಗೆ ಮೋಕ್ಷವಹುದೋ ಕೂಡಲ ಸಂಗಮ ದೇವಾ?

ಸಮನಿಸು = ದೊರೆಕೊಳ್ಳು, ಗ್ರಾಸ = ತುತ್ತು.

ಚಂದ್ರನಲ್ಲಿ ಹದಿನಾರು ಕಲೆಗಳು ಪೌರ್ಣಿಮೆಯ ದಿವಸ ಪೂರ್ಣವಾಗಲು ಅವನು ತುಂಬ ಹೊಳಪುಳ್ಳವನಾಗಿ ಆಕಾಶದಲ್ಲಿ ಹೊಳೆಯುತ್ತಾನೆ ಆದರೆ ಆಗ ರಾಹುವು ಅಕಸ್ಮಾತಾಗಿ ಅವನ ಮೇಲೆ ಬಿದ್ದು ನುಂಗಿ ಬಿಡುತ್ತಾನೆ. ಹಾಗೆಯೇ ನನ್ನಲ್ಲಿ ಜ್ಞಾನವು ಉದಿಸಿದರೂ ಕೂಡ ಸಂಸಾರದಲ್ಲಿರುವ ಕಷ್ಟನಷ್ಟಗಳು ನನ್ನನ್ನು ನುಂಗಿಬಿಡುತ್ತವೆ. ಈದಿನ ನನಗೆ ಗ್ರಹಣವು ಹಿಡಿಯಿತು. ಎಲೋ ಕೂಡಲಸಂಗನೇ ಈ ಗ್ರಹಣದಿಂದ ನಾನು ಎಂದಿಗೆ ಮುಕ್ತನಾಗುವೆನು.? ಹೀಗೆ ಬಸವೇಶ್ವರನು ಪರಮಾತ್ಮನಲ್ಲಿ ಮೊರೆ ಇಡುತ್ತಾನೆ.

(೩೯) ಒಂದು ಮೊಲಕ್ಕೆ ನಾಯನೊಂಬತ್ತ ಬಿಟ್ಟಂತೆ, ಎನ್ನಬಿಡು ತನ್ನ ಬಿಡೆಂಬುದು ಕಾಯವಿಕಾರ, ಎನ್ನ ಬಿಡು, ತನ್ನಬಿಡೆಂಬುದು ಮನವಿಕಾರ- ಕರಣೇಂದ್ರಿಯಂಗಳೆಂಬ ಸೊಣಗ ಮುಟ್ಟದಮುನ್ನ, ಮನ ನಿಮ್ಮನ್ನೈದುಗೆ ಕೂಡಲಸಂಗಮದೇವಾ.

ಸೊಣಗ = ನಾಯಿ, ಐದುಗೆ = ಹೊಂದಲಿ.

ಕಿರಾತರು ಬೇಟೆಯಾಡಲು ಹೋದಾಗ್ಗೆ ಅವರು ಅರಣ್ಯವನ್ನು ಸುತ್ತಲೂ ಬಡಿಯುತ್ತ ಮುಂದುವರಿಯುತ್ತಾ ಹೋಗುತ್ತಾರೆ. ಆಗ ಒಂದು ಮೊಲವು ಒಂದು ಕೊಂಪೆಯೊಳಗಿಂದ ಹೊರಬಿದ್ದು ಓಡಹತ್ತುತ್ತದೆ. ಅದು ಅತ್ಯಂತ ದುರ್ಬಲ ಪ್ರಾಣಿಯು. ಆದರೂ ಅದರ ಮೇಲೆ ಆ ಕಿರಾತರು ಒಂಭತ್ತು ನಾಯಿಗಳನ್ನು ಬಿಡುತ್ತಾರೆ. ಮೊಲವನ್ನು ಹಿಡಿಯಲು ಈ ನಾಯಿಗಳಲ್ಲಿ ಸ್ಪರ್ಧೆಯು ನಡಿಯುತ್ತದೆ. ಆದರಂತೆಯೇ ನನ್ನ ಮನಸ್ಸೆಂಬ ಮೊಲದ ಮೇಲೆ ನಾನಾ ತರದ ವಿಕಾರಗಳು ಬೆನ್ನು ಹತ್ತಿರುತ್ತವೆ. ಅವು ಕಾಯ ವಿಕಾರ, ಮನ ವಿಕಾರ, ಇಂದ್ರಿಯ ವಿಕಾರ, ಇವುಗಳು ಇರುತ್ತವೆ. ಇವುಗಳಲ್ಲಿ ಇಂದ್ರಿಯ ವಿಕಾರವೆಂಬ ನಾಯಿಯು ನನ್ನ ಮನಸ್ಸನ್ನು ಹಿಡಿಯುವ ಮೊದಲು ಅದು ಪರಮಾತ್ಮನಲ್ಲಿ ಅಡಗುವಂತೆ ಮಾಡೆಂದು ಬಸವೇಶ್ವರನು ಕೂಡಲಸಂಗಮನನ್ನು ಕುರಿತು ಪ್ರಾರ್ಥಿಸುತ್ತಾನೆ.

## ಪರಮಾತ್ಮನಲ್ಲಿ ಸಾಮರಸ್ಯವು

(೪೦) ಭಕ್ತನೆನಿಸುವೆನಯ್ಯ ಮೆಲ್ಲಮೆಲ್ಲನೆ. ಯುಕ್ತನೆನಿಸುವೆನಯ್ಯ ಮೆಲ್ಲಮೆಲ್ಲನೆ. ಶರಣನೆನಿಸುವೆನಯ್ಯ ಮೆಲ್ಲಮೆಲ್ಲನೆ. ಎಡಹು ಗಾಳಿಗಳ ದಾಂಟಿ ಬರಬರ ಲಿಂಗೈಕ್ಯನೆನಿಸುವೆನಯ್ಯ. ಕೂಡಲಸಂಗಮದೇವಯ್ಯ ನಿಮ್ಮಿಂದಧಿಕನೆನಿಸುವೆನಯ್ಯ.

ಯುಕ್ತ= ಯೋಗ್ಯ. ಗಾಳಿ= ತಗ್ಗು. ಬರಬರ = ತೀವ್ರವಾಗಿ.

ಬಸವೇಶ್ವರನು ತಾನು ಹೇಗೆ ಮುಕ್ತನಾಗುವೆನೆಂಬುದನ್ನು ಈ ವಚನದಲ್ಲಿ ಹೇಳಿದ್ದಾನೆ. ಲಿಂಗದ ಪಥವು ಬಿಕ್ಕಟ್ಟಿನದಾಗಿದೆಂದು ಅವನ ಅಭಿಪ್ರಾಯವು. ಷಟ್ ಸ್ಥಲಗಳಲ್ಲಿ ಭಕ್ತ ಸ್ಥಲವು ಮೊದಲಿನದಾಗಿದೆ. ನಾನು ಈ ಸ್ಥಲವನ್ನು ಮೆಲ್ಲ ಮೆಲ್ಲನೆ ಹೊಂದುವೆನೆಂದು ಅವನು ಇಲ್ಲಿ ಹೇಳಿದ್ದಾನೆ. ಇದು ಸದಾಚರಣೆಯಿಂದ ಮಾತ್ರ ಸಾಧ್ಯವು. ಇಂಥ ಆಚರಣೆಯ ಮೂಲಕ ನಾನು ಯುಕ್ತ ಎಂದರೆ ಶ್ರೇಷ್ಠ ಪದವಿಗೆ ಯೋಗ್ಯನೆಂದೆನಿಸಿಕೊಳ್ಳುವೆನು. ಹೀಗೆ ಮಹೇಶ್ವರ ಪ್ರಸಾದಿ ಮೊದಲಾದ ಮುಂದಿನ ಸ್ಥಲಗಳನ್ನು ಹೊಂದುತ್ತ ಮೆಲ್ಲ ಮೆಲ್ಲನೆ ಶರಣ ಸ್ಥಲಕ್ಕೆ ಬರುವೆನು. ಹೀಗೆ ಬರುತ್ತಿರುವಾಗ್ಗೆ ದಾರಿಯಲ್ಲಿ ಅನೇಕ ಗಾಳಿಗಳು ಅಂದರೆ ತಗ್ಗುಗಳು ಅಥವಾ ಕಂಟಕಗಳು ಬರುವವು. ಅವುಗಳನ್ನು ನಾನು ದಾಟಿದಲ್ಲಿ ನನ್ನ ಮುಂದಿನ ಮಾರ್ಗವು ಹಗುರಾಗುವದೆಂದು ಬಸವೇಶ್ವರನು ಹೇಳುತ್ತಾನೆ.

ಹಡೆ ಕಾಣಬಾರದ ಘನವು. ನಿಮ್ಮನೆಂತು ಕರಸ್ಥಲದಲ್ಲಿ ಧರಿಸುವೆ ? ಚನ್ನಮಲ್ಲಿಕಾರ್ಜುನಯ್ಯ ನಿಮ್ಮ ನೋಡಿ ನೋಡಿ ಸೈವೆರಗಾಗುತಿರ್ದೆನು"

ಈ ಸ್ಥಿತಿಯು ಪ್ರಾಪ್ತವಾಗಲು ಮನುಷ್ಯನು ಈ ಜಗತ್ತಿನಲ್ಲಿ ಇದ್ದರೂ ಅವನು ಅದರಲ್ಲಿ ಇಲ್ಲದಂತೆ ಇರುತ್ತಾನೆ. ಈತನು ನಿರ್ಮುಕ್ತನು, ಶರಣನು ಎಂದು ವಚನಕಾರರು ಹೇಳುತ್ತಾರೆ.

ಮಹಾದೇವಿಯಕ್ಕನು ಬಸವೇಶ್ವರನ ಮಂದಿರದಲ್ಲಿ ಇದ್ದಾಗ್ಗೆ ತಾನು ಹೇಗೆ ವೇಳೆಗಳೆಯುತ್ತಿದ್ದೆನೆಂಬುದನ್ನು ಕುರಿತು ಅವಳು ಕೆಲವು ಸುಂದರ ವಾದ ವಚನಗಳನ್ನು ರಚಿಸಿದ್ದಾಳೆ. ಅವುಗಳಲ್ಲಿ ಅವಳು ಹೇಳುವದೇನೆಂದರೆ:-

೧. ಉದಯದಲೆದ್ದು ನಿಮ್ಮ ನೆನೆವೆನಯ್ಯ. ನಿಮ್ಮ ಬರವ ಹಾರು ತ್ತಿರ್ಪೆನಯ್ಯ. ಹಸಿ ಹಂದರವನಿಕ್ಕಿ ನಿಮ್ಮಡಿಗಳಿಗೆಡೆಮಾಡಿಕೊಂಡಿಪ್ಪೆನಯ್ಯಾ. ಚನ್ನಮಲ್ಲಿಕಾರ್ಜುನಾ ನೀನಾವಾಗ ಬಂದಿಹೆ ಎಂದು.

೨. ಹಗಲು ನಾಲ್ಕುಜಾವ ನಿಮ್ಮ ಕಳವಳದಲ್ಲಿಪ್ಪೆ ನೋಡಯ್ಯ; ಇರುಳು ನಾಲ್ಕು ಜಾವ ನಿಮ್ಮ ವಿಕಳಾವಸ್ಥೆಯಲ್ಲಿರ್ಪೆ ನೋಡಯ್ಯ; ಇರುಳು ಹಗಲು ನಿಮ್ಮ ಕಳವಳದಲ್ಲಿ ಮರೆದೊರಗಿದೆನಯ್ಯ ಚನ್ನಮಲ್ಲಿಕಾರ್ಜುನಾ ನಿಮ್ಮೊಲುಮೆ ನಟ್ಟು ಹಸಿವು ತೃಷೆ ನಿದ್ರೆಯ ಮರೆತೆನು.

ಈ ಪ್ರಕಾರ ಅವಳು ಲಿಂಗಸಂಧಾನದಲ್ಲಿರುತ್ತೇನೆಂದು ಅವಳು ತನ್ನ ಈ ವಚನಗಳಲ್ಲಿ ಹೇಳಿದ್ದಾಳೆ. ಇದರಿಂದ ಅವಳು ಮಾನಸಿಕ ಉಚ್ಚಸ್ಥಿತಿಯ ಮೇಲ್ಮಟ್ಟನ್ನು ಹೊಂದಿದ್ದಳೆಂದು ತೋರಬರುತ್ತದೆ.

ಈ ಭಾವನೆಯನ್ನಿಟ್ಟುಕೊಂಡು ಅವಳು ತನ್ನ ಇಷ್ಟಲಿಂಗದಲ್ಲಿ ಲೋಲು ಪಳಾಗುತ್ತಾಳೆ. ಇಷ್ಟಲಿಂಗದ ಧ್ಯಾನವಿಲ್ಲದೆ ಪ್ರಾಣಲಿಂಗ, ಭಾವಲಿಂಗಗಳು ಸಾಧಿಸಲಾರವೆಂದು ಶಿವಶರಣರ ವಿಚಾರಗಳಿರುತ್ತವೆ. ಮಹಾದೇವಿಯಕ್ಕನು ಈ ತತ್ವದಂತೆಯೇ ವರ್ತಿಸುತ್ತಾಳೆ. ಅವಳು ತನ್ನ ೧೫೩ ನೇ ವಚನದಲ್ಲಿ ಹೇಳುವದೇನೆಂದರೆ:—

ಅಯ್ಯಾ, ದೂರದಲಿರ್ದಿಹೆ ಎಂದು ಬಾಯಾರಿ ಬಳಲುತ್ತಿರ್ದೆನಯ್ಯ ನಾನು. ಅಯ್ಯಾ. ಸಾರಿ ಬಂದು ನೀನೆನ್ನ ಕರಸ್ಥಲದಲ್ಲಿ ಮೂರ್ತಿಗೊಂಡರೆ ಇನ್ನಾರತಿ ಎಲ್ಲವೂ ಲಿಂಗ. ಆಲಿ ನಿಮ್ಮಲ್ಲಿ ನಟ್ಟವು ನೋಡಯ್ಯ. ಚನ್ನ ಮಲ್ಲಿಕಾರ್ಜುನಯ್ಯ ನಿಮ್ಮನೆನ್ನ ಕರಸ್ಥಲದಲ್ಲಿ ನೋಡಿ ನೋಡಿ ಕಂಗಳೇ ಪ್ರಾಣವಾಗಿರ್ದೆನಯ್ಯ

ಇಷ್ಟಲಿಂಗದಲ್ಲಿ ಧ್ಯಾನಾಸಕ್ತನಾದಲ್ಲಿ ಪ್ರಾಣಲಿಂಗದಲ್ಲಿ ಹೇಗೆ ಅದು ರೂಪುಗೊಳ್ಳುತ್ತದೆಂಬುದನ್ನು ಮಹಾದೇವಿಯಕ್ಕನು ಇಲ್ಲಿ ಹೇಳಿದ್ದಾಳೆ ಮುಂದೆ ಅವಳು ಪುನಃ ಹೇಳುವದೇನೆಂದರೆ:—

ಸ್ವೇಚ್ಛೆಯುಪ್ಪರಿಸಿ ಶಿವಲಿಂಗ ನೀನೆನ್ನ ಕರಸ್ಥಲಕ್ಕೆ ಬರೆ ಪ್ರಜ್ವಲಿಸಿ ತೊಳತೊಳಗಿದೆ ಬೆಳಗುತ್ತಿಹ ಕಾಂತಿಯಲ್ಲಿ ಜಜ್ಜರಿಸಿ, ತನುಮನ ದೃಷ್ಟಿ ನಟ್ಟು ಲಿಂಗದಲ್ಲಿ ಜಜ್ಜರಿಸಿ ಸುರಿವ ಶಿವಸುಖ ರತಿಯೊಳೋಲಾಡುತ್ತ ಸಜ್ಜನ ಸದ್ಭಕ್ತಿ ರತಿಯೊಡನೆ ಕೂಡಿಯಾಡಿ ಲಜ್ಜೆಗೆಟ್ಟು ನಿಮ್ಮ ನೆರೆವೆ ಚನ್ನ ಮಲ್ಲಿಕಾರ್ಜುನಾ.

ಇಷ್ಟಲಿಂಗದಲ್ಲಿ ಧ್ಯಾನವನ್ನಿಟ್ಟಲ್ಲಿ ಮನಸ್ಸಿನಲ್ಲಿ ಯಾವ ಹೊಳಹು ಉಂಟಾಗುತ್ತದೆಂಬುದನ್ನು ಮಹಾದೇವಿಯಕ್ಕನು ತನ್ನ ಅನುಭವದಿಂದ ಇಲ್ಲಿ ಹೇಳಿದ್ದಾಳೆ. ಭಕ್ತರು ಇದರ ರೀತಿಯನ್ನು ಸ್ವತಃ ಪ್ರಯೋಗದಲ್ಲಿ ತಂದು ಕಾಣಬೇಕು, ಎಂದು ನಾವು ಹೇಳದಿರಲಾರೆವು. ಇದರಿಂದ ಯಾವ ಪರಿಣಾಮ ವಾಗುವದೆಂಬುದನ್ನು ಮಹಾದೇವಿಯಕ್ಕನು ಕೆಳಗಿನ ವಚನಗಳಲ್ಲಿ ಹೇಳಿ ದ್ದಾಳೆ. ಅವಳು ಒಂದು ವಚನದಲ್ಲಿ ಹೇಳುವದೇನೆಂದರೆ:—

ಗಿರಿಯೊಳು ವನದೊಳು ಗಿಡಗಿಡದತ್ತ ದೇವ, ಎನ್ನ ದೇವ ಬಾರಯ್ಯಾ: ತೋರಯ್ಯಾ ನಿಮ್ಮ ಕರುಣವನೆಂದು ನಾನು ಅರಸುತ್ತ ಅಳಲುತ್ತ ಕಾಣದೆ ಸುಳಿದುಬಂದು ಕಂಡೆ ಶರಣರ ಸಂಗದಿಂದ. ಅರಸಿ ಹಿಡಿದಿಹೆನೆಂದು ನೀ ನಡಗುವ ಠಾವ ಹೇಳಾ ಚನ್ನಮಲ್ಲಿಕಾರ್ಜುನಾ. (ವಚನ ೧೪೯.)

ಮಹಾದೇವಿಯಕ್ಕನು ತನ್ನ ಪ್ರಾಣಲಿಂಗಾನುಸಂಧಾನದಿಂದ ಜಗತ್ತಿನಲ್ಲಿ ಪರಮಾತ್ಮನು ತುಂಬಿಕೊಂಡಿರುವನೆಂದು ಭಾವವುಳ್ಳವಳಾಗಿ ತಾನು ನೋಡಿದ ವೃಕ್ಷ, ಪಶು, ಪಕ್ಷ್ಯಾದಿಗಳನ್ನು ದೇವರು ಎಲ್ಲಿದ್ದಾನೆಂಬುದನ್ನು ಅವಳು ಅವುಗಳಿಗೆ ಕೇಳುತ್ತಾಳೆ. ಇದು ಕೇವಲ ಕಾಲ್ಪನಿಕವಾದ ಸಂಗತಿಯಲ್ಲ. ಇದು ಅವಳಿಗೆ ಹಾಗೆ ನಿಜವಾಗಿ ತೋರುತ್ತಿದ್ದುದರಿಂದ ಅವಳು ಈ ರೀತಿ ಅವುಗಳಿಗೆ ಪ್ರಶ್ನೆಯನ್ನು ಮಾಡುತ್ತ ಸಂಚರಿಸುತ್ತಾಳೆ.

ಅವಳು ಒಂದು ಕಡೆಗೆ ಗಿಳಿಗಳ ಹಿಂಡು ನೋಡುತ್ತಾಳೆ. ಮಾವಿನ ಮರ, ಕೋಗಿಲೆಗಳನ್ನು ನೋಡುತ್ತಾಳೆ. ಚೆಲುವಾದ ಬೆಳುದಿಂಗಳನ್ನು ನೋಡುತ್ತಾಳೆ. ಅವುಗಳಲ್ಲಿರುವ ಸೌಂದರ್ಯವು ಪರಮಾತ್ಮನೆಂದು ಅವ ಳಿಗೆ ಭಾಸವಾಗಿ ಚನ್ನಮಲ್ಲಿಕಾರ್ಜುನನು ಎಲ್ಲಿದ್ದಾನೆಂದು ಅವುಗಳಿಗೆ ಅವಳು ಪ್ರಶ್ನೆಮಾಡುತ್ತಾಳೆ. ಅದು ಹೇಗೆಂದರೆ:—

ಅಳಿಸಂಕುಲವೇ, ಮಾಮರವೇ, ಬೆಳುದಿಂಗಳೇ, ಕೋಗಿಲೆಯೇ ನಿಮ್ಮ ನಿಮ್ಮನೆಲ್ಲರನು ಒಂದ ಬೇಡುವೆನು, ಎನ್ನೊಡೆಯ ಚನ್ನಮಲ್ಲಿಕಾರ್ಜುನ ದೇವರ ಕಂಡರೆ ಕರೆದು ತೋರಿರೇ. (ವಚನ ೧೪೨.)

ಚಿಲಿಮಿಲಿ ಎಂದೋದುವ ಗಿಳಿಗಳಿರಾ ನೀವು ಕಾಣಿರೆ, ನೀವು ಕಾಣಿರೆ. ಸರಮೆತ್ತಿ ಪಾಡುವ ಕೋಗಿಲೆಗಳಿರಾ ನೀವು ಕಾಣಿರೆ ನೀವು ಕಾಣಿರೆ. ಎರಗಿ ಬಂದಾಡುವ ತುಂಬಿಗಳಿರಾ ನೀವು ಕಾಣಿರೆ, ನೀವು ಕಾಣಿರೆ. ಕೊಳನ ತಡಿಯೊಳಾಡುವ ಹಂಸೆಗಳಿರಾ ನೀವು ಕಾಣಿರೆ, ನೀವು ಕಾಣಿರೆ; ಗಿರಿಗಂಹ್ವರದೊಳಗಾಡುವ ನವಿಲುಗಳಿರಾ ನೀವು ಕಾಣಿರೆ, ನೀವು ಕಾಣಿರೆ, ಚನ್ನಮಲ್ಲಿಕಾರ್ಜುನನೆಲ್ಲಿಹನೆಂದು ನೀವು ಹೇಳಿರೆ ನೀವು ಹೇಳಿರೆ.

ಈ ಪ್ರಕಾರ ಮಹಾದೇವಿಯಕ್ಕನು ಪರಮಾತ್ಮನನ್ನು ಕುರಿತು ಪ್ರಾರ್ಥಿಸುತ್ತ ಅವಳು ಒಂದು ವಚನದಲ್ಲಿ ನುಡಿದುದು ಏನೆಂದರೆ— ಪರಮಾತ್ಮನಿಗೆ ಪ್ರಿಯಕರವಾದದ್ದೇ ಸುಖವು. ಅವನಿಗೆ ಬೇಡಾದದ್ದೇ ದುಃಖವು, ಎಂದು ಹೇಳುತ್ತಾಳೆ. ಪರಮಾತ್ಮನಿಗೆ ಒಂದುವೇಳೆ ನರಕವನ್ನು ಕಾಂಕ್ಷಿಸಿದರೆ, ಅದು ನರಕನಲ್ಲ, ಅದು ಮೋಕ್ಷವೆಂದು ಹೇಳುತ್ತಾಳೆ. ಒಂದು ವೇಳೆ ಮುಕ್ತಿಯೆಂಬಲ್ಲಿ ಪರಮಾತ್ಮನ ಜ್ಞಾನವಿರದಿದ್ದರೆ ಅದು ನರಕವೆಂದು ಹೇಳುತ್ತಾಳೆ. ಅವಳು ಸುಖ, ದುಃಖ ನರಕ, ಮೋಕ್ಷ ಇವುಗಳ ವ್ಯಾಖ್ಯೆಯನ್ನು ಮಾಡಲಿಕ್ಕೆ ಹೋಗುವದಿಲ್ಲ. ಸದ್ಗುಣಿಯಾದ ಮತ್ತು ಶೀಲವಂತನಾದ ಮನುಷ್ಯನಿಗೆ ಸುಖದುಃಖಾದಿಗಳ ಸ್ಥಿತಿಯು ಸಹಜವಾಗಿ ಸ್ವಾಭಾವಿಕವಾಗಿ ತೋರಹತ್ತುತ್ತದೆ. ಯಾವುದು ಯೋಗ್ಯ, ಯಾವುದು ಅಯೋಗ್ಯ, ಎಂಬುದರ ತಿಳವಳಿಕೆಯು ಅವನಿಗೆ ಸ್ವಯಂಸ್ಫೂರ್ತಿಯಾಗಿ ಆಗಹತ್ತುತ್ತದೆ. ಅದಕ್ಕನುಗುಣವಾಗಿ ಅವನು ಆಚರಿಸುತ್ತಾನೆ. ಈ ಬಗ್ಗೆ ಇರುವ ಒಂದು ವಚನವು ಆವುದೆಂದರೆ:—

ನಿನ್ನರಿಕೆಯ ನರಕವೇ ಮೋಕ್ಷ ನೋಡಯ್ಯಾ. ನಿನ್ನನರಿಯದ ಮುಕ್ತಿಯೇ ನರಕ ಕಂಡಯ್ಯಾ. ನೀನೊಲ್ಲದ ದುಃಖವೇ ದುಃಖ ಕಂಡಯ್ಯಾ. ನೀನೊಲಿದ ದುಃಖವೇ ಪರಮಸುಖವು ಕಂಡಯ್ಯಾ. ಚೆನ್ನಮಲ್ಲಿಕಾರ್ಜುನಯ್ಯಾ ನೀ ಕಟ್ಟಿಕೆಡಹಿದ ಬಂಧನವೇ ನಿರ್ಬಂಧನವೆಂದಿಪ್ಪನು. (ವಚನ ೧೫೬.)

ಈ ವರೆಗೆ ನಾವು ಮಹಾದೇವಿಯಕ್ಕನು ಚಿಕ್ಕಂದಿನಿಂದ ಹಿಡಿದು ಮಧ್ಯವಯಸ್ಕಳಾಗುವ ವರೆಗೆ ನಡೆದ ಸಂಗತಿಗಳನ್ನು ವಿವರಿಸಿದೆವು. ಇದರಮೇಲಿಂದ ಮಹಾದೇವಿಯಕ್ಕನು ಒಬ್ಬ ಉಚ್ಚ ತರಗತಿಯ ಶಿವಶರಣೆಯಾಗಿ ಪರಮಾತ

ನನ್ನು ಪ್ರಸನ್ನ ಮಾಡಿಕೊಂಡು ಅವನ ಪ್ರಕಾಶದಲ್ಲಿ ವರ್ತಿಸುವವಳಿದ್ದಾಳೆಂಬುದು ವಾಚಕರಿಗೆ ಗೋಚರವಾಗದೆ ಇರದು. ಆದರೆ ಅವಳು ತನಗೆ ಉಂಟಾದ ಜ್ಞಾನವನ್ನು ಅರಿಯದವರು ಸಹ ಅರಿಯಬೇಕೆಂದು ಇಚ್ಛಿಸಿ, ಸುಂದರವಾದ ನುಡಿಗಳಲ್ಲಿ ತನ್ನ ಅನುಭವವನ್ನು ಯಾವಾಗಲೂ ಹೇಳುತ್ತಾಳೆ. ಈ ಪ್ರಕಾರ ಕಾರ್ಯಮಾಡಿದ ಹೆಂಗಳೆಯರ ಸಂಖ್ಯೆಯು ನಾಡಿನಲ್ಲಿ ಅತ್ಯಲ್ಪವಾದುದೆಂದು ಹೇಳಬಹುದು. ಇದರಿಂದ ಮಹಾದೇವಿಯಕ್ಕನು ಶರಣ ಶರಣೆಯರೆಂಬ ನಭೋಮಂಡಳದಲ್ಲಿ ಪ್ರಕಾಶಿಸುತ್ತ ತನ್ನ ಪ್ರಕಾಶವನ್ನು ಪೃಥ್ವಿಯಲ್ಲೆಲ್ಲ ಹರಹುತ್ತ ತನ್ನ ಕಾಲಕ್ಕೆ ಮಾತ್ರವಲ್ಲ, ಶಾಶ್ವತವಾಗಿ ನಾಡಿನಲ್ಲಿ ಬೆಳಗುತ್ತಿದ್ದಾಳೆ. ಆಕೆಯ ನುಡಿಗಳನ್ನು ಆಸ್ವಾದಿಸುವವರು ಧನ್ಯರೆಂದು ತಿಳಿಯಲು ಯಾವ ಸಂದೇಹವೂ ಇರಲಾರದು.

ಈ ಪ್ರಕಾರ ಮಹಾದೇವಿಯಕ್ಕನು ವಚನಗಳನ್ನು ಮಾತ್ರವಲ್ಲದೆ ಸ್ವತಂತ್ರ ವಿಷಯಗಳ ಬಗ್ಗೆಯೂ ಕೂಡ ತನ್ನ ವಿಚಾರಗಳನ್ನು ಪ್ರಕಟಮಾಡಿದ್ದಾಳೆ. ಅವಳು ಸೃಷ್ಟಿಯ ನಿರ್ಮಾಣ ಮತ್ತು ಅದರ ಸ್ವರೂಪದ ಬಗ್ಗೆ ಒಂದು ದೀರ್ಘ ವಚನವನ್ನು ಹೇಳಿದ್ದಾಳೆ. ಮಹಾದೇವಿಯಕ್ಕನ 'ಸೃಷ್ಟಿಯ ವಚನ'ವೆಂದು ಅದು ನಾಡಿನಲ್ಲಿ ಪ್ರಸಿದ್ಧವಾಗಿದೆ. ಈ ವಚನವನ್ನು ನಾವು ವಚನಶಾಸ್ತ್ರ ಸಾರ ಭಾಗ ೨. ಈ ಗ್ರಂಥದಲ್ಲಿ ಪ್ರಕಟಮಾಡಿದ್ದೇವೆ. ವಾಚಕರು ಅದನ್ನು ಅವಲೋಕಿಸಬಹುದು.

ಮಹಾದೇವಿಯಕ್ಕನು ಶಿವಶರಣೆಯರಲ್ಲಿ ಉಚ್ಚ ಸ್ಥಾನವನ್ನು ಹೊಂದಿ ಅವಳನ್ನು ಕುರಿತು ಮಾಡಿದ ಸ್ತೋತ್ರಗಳನ್ನು ವೀರಶೈವ ವಾಙ್ಮಯದಲ್ಲಿ ಅನೇಕವುಗಳನ್ನು ಕಾಣಬಹುದು. ಆಕೆಯ ವಿಷಯವಾಗಿ ಒಂದು ಸಾಂಗತ್ಯವೂ ಇದೆ. ಅದು ಲಲಿತವೂ ಸುಲಭವೂ ಇದ್ದು, ಅತ್ಯಂತ ಆದರಣೀಯವಾಗಿರುತ್ತದೆ.

ಈ ಪ್ರಕಾರ ಮಹಾದೇವಿಯಕ್ಕನು ಬಸವೇಶ್ವರನ ಗೃಹದಲ್ಲಿ ಕಾಲ ಕಳೆಯುತ್ತಿರಲು ಹರಳಯ್ಯ ಮಧುವಯ್ಯಗಳ ಪ್ರಸಂಗವು ಕಲ್ಯಾಣದಲ್ಲಿ ಒದಗಿ ಬಂದಿತು. ಬಿಜ್ಜಳನು ಅವರಿಬ್ಬರನ್ನು ಕೊಲೆಬಡಿಸಿದನು. ಹೀಗೆ ಇಬ್ಬರು ಶಿವಶರಣರು ಬಿಜ್ಜಳನಿಂದ ಘಾತಿಸಲ್ಪಡಲಾಗಿ ಪುರಾಣಮತವಾದಿಗಳು ಸಂತೋಷಬಟ್ಟರು. ಶಿವಾನುಭವವನ್ನು ಹೀಯಾಳಿಸುತ್ತಿದ್ದ ಅನೇಕ ಧರ್ಮೀಯರು ನಾಡಿನಲ್ಲಿದ್ದು ಇವರೆಲ್ಲರು ಒಮ್ಮುಖವಾಗಿ ಶಿವಶರಣ ಶರಣೆಯರನ್ನು ಹಿಂಸಿಸುವ ಕಾರ್ಯಗಳನ್ನು ಪ್ರಾರಂಭಿಸಿದರು. ಇದರಿಂದ ವೀರಶೈವರಿಗೂ ಇತರ ಮತಸ್ಥರಿಗೂ ದ್ವೇಷಭಾವವು ದಿನೇ ದಿನೇ ಹೆಚ್ಚುತ್ತ

ಬಂದಿತು. ಹೀಗೆ ಕಲ್ಯಾಣ ಪಟ್ಟಣದಲ್ಲಿ ಶಾಂತ ವಾತಾವರಣವು ಉಳಿಯದಂತೆ ಆಯಿತು. ಕ್ರೋಧಾವೇಶಗಳು ಬೆಳೆದವು. ಈ ಸ್ಥಿತಿಯುಂಟಾಗಲು ಶಿವಶರಣರು ತಮ್ಮ ಶಿವಾನುಭವದ ನಡೆಯಂತೆ ನಡೆಯುವದು ಮತ್ತು ಬಿಜ್ಜಳನ ರಾಜ್ಯದಲ್ಲಿ ಅವರು ಸುರಕ್ಷಿತವಾಗಿ ಇರುವದು ಅಶಕ್ಯವೆಂಬು ಬಸವೇಶ್ವರನಿಗೆ ತೋರಿತು. ಆದ್ದರಿಂದ ಅವನು ಶಿವಶರಣರು ಕಲ್ಯಾಣದಲ್ಲಿ ಇರದೆ ತಮಗೆ ಯೋಗ್ಯ ಕಂಡ ಸ್ಥಳಗಳಿಗೆ ಹೋಗಿ ಗುಪ್ತವಾಗಿ ಅಥವಾ ಪ್ರಕಟವಾಗಿ ತಮ್ಮ ತಮ್ಮ ಆಚರಣೆಗಳನ್ನು ಅನುವರ್ತಿಸಬೇಕೆಂದು ಸಾರಿದನು. ಹೀಗೆ ಸಾರಿ ತಾನು ಕಲ್ಯಾಣ ಪಟ್ಟಣವನ್ನು ಬಿಟ್ಟು ಕೃಷ್ಣಾ ಮತ್ತು ಮಲಾಪಹಾರೀ ನದಿಗಳು ಕೂಡಿದ ಕೂಡಲಸಂಗಮ ಕ್ಷೇತ್ರಕ್ಕೆ ಚಿತ್ತೈಸಿ ಅಲ್ಲಿಯೇ ಇರಹತ್ತಿದನು.

ಹೀಗಾಗಲು ಕಲ್ಯಾಣದ ರಾಜ್ಯದಲ್ಲಿ ಅಲ್ಲೋಲ ಕಲ್ಲೋಲವಾಯಿತು. ಕಲ್ಯಾಣದಲ್ಲಿದ್ದ ಶಿವಶರಣರು ತಮಗೆ ತಿಳಿದತ್ತ ಹೊರಟು ಹೋಗಹತ್ತಿದರು. ಅಲ್ಲಿ ಉಳಿದ ಕೆಲವು ಶಿವಶರಣರು ಭದ್ರವಾದ ಸ್ಥಳದಲ್ಲಿದ್ದುಕೊಂಡು ಆತ್ಮಸಂರಕ್ಷಣೆಯಲ್ಲಿ ತೊಡಗಿದರು. ಈ ಕಾಲಕ್ಕೆ ಶಿವಶರಣರ ವಿರೋಧಿಗಳು ಬಹುಸಂಖ್ಯಾಕರಾಗಿದ್ದರು. ಅವರಿಗೆ ರಾಜನ ಬೆಂಬಲವಿದ್ದದರಿಂದ ಶಿವಶರಣರನ್ನು ದೂಷಿಸುತ್ತ ಅವರು ನಾಡಿನಲ್ಲಿ ಸಂಚರಿಸಹತ್ತಿದರು. ಈ ಪ್ರಕಾರ ನಾಡಿನಲ್ಲಿ ಎಲ್ಲೆಲ್ಲಿಯೂ ಪರಸ್ಪರ ಅವಿಶ್ವಾಸದ ನಡೆಗಳೂ ಅಪ್ರೀತಿ ವೈಮನಸ್ಸುಗಳೂ ಬೆಳೆಯುತ್ತಹೋದವು.

ಈ ಸ್ಥಿತಿಯಲ್ಲಿ ಅಬಲೆಯಾದ ಮಹಾದೇವಿಯಕ್ಕನು ಯಾವ ಮಾರ್ಗವನ್ನು ಸ್ವೀಕರಿಸಬೇಕೆಂಬುದು ಅವಳಿಗೆ ಒಂದು ದೊಡ್ಡ ಸಮಸ್ಯೆಯಾಯಿತು. ಅವಳು ತನ್ನ ತಾಯಿತಂದೆಗಳ ಗ್ರಾಮವಾದ ಬನವಾಸಿಗೆ ತಿರುಗಿ ಹೋಗುವದು ಶಕ್ಯವಿರಲಿಲ್ಲ. ಅವಳಂಥ ಪ್ರಸಿದ್ಧಿಗೆ ಬಂದ ಶರಣೆಯು ಕಲ್ಯಾಣದಲ್ಲಿ ಸುರಕ್ಷಿತವಾಗಿ ಇರುವದೂ ಸಂಭವವಿದ್ದಿದ್ದಿಲ್ಲ. ಆದ್ದರಿಂದ ಅವಳು ಬಸವೇಶ್ವರನಂತೆ ದೇಶತ್ಯಾಗ ಮಾಡಬೇಕೆಂದು ನಿಶ್ಚಯಿಸಿದಳು.

ಈ ಕಾಲದಲ್ಲಿ ಕಲ್ಯಾಣದಲ್ಲಿದ್ದ ಬಹುಜನ ಶಿವಶರಣರು ತಮಗೆ ತೋಚಿದಂತೆ ಬೇರೆ ಬೇರೆ ಕಡೆಗೆ ಚಲ್ಲಾಪಿಲ್ಲಿಯಾಗಿ ಹೋಗಹತ್ತಿದರು. ಈ ಕಾಲದಲ್ಲಿ ಕಲ್ಯಾಣಪಟ್ಟಣದ ಸುತ್ತಲೂ ಅರಣ್ಯಗಳೂ, ಗುಹೆಗಳೂ

ಹೇರಳವಾಗಿ ಪಸರಿಸಿದ್ದವು. ಅಲ್ಲಿಗೆ ಬಹುಜನರು ಹೋಗಿ ಅವಿತುಕೊಂಡು ಕಾಲಕಳೆಯಹತ್ತಿದರು. ಆವುಗ ದೇವಯ್ಯನು ಭೀಮಾತೀರದಲ್ಲಿ ಇರುವ ಈಗಿನ ಮುಳುಜ ಗ್ರಾಮಕ್ಕೆ ತೆರಳಿದನು. ಹೀಗೆ ಬಹುಜನರು ತಮ್ಮ ತಮ್ಮ ಪರಿಚಿತ ಸ್ಥಳಗಳಿಗೆ ಹೋಗಿ ಗುಪ್ತವಾಗಿ ವಾಸಮಾಡಹತ್ತಿದರು. ಕೂಡಲ ಸಂಗಮ ಕ್ಷೇತ್ರವು ಒಂದು ಪುಣ್ಯ ಸ್ಥಳವು. ಇಂಥ ಸ್ಥಳದಲ್ಲಿ ಹೋದರೆ ತಮಗೆ ಹಿಂಸೆಯಾಗುವದೆಂದು ಬಹುಜನರು ದೇವಾಲಯಗಳಿದ್ದ ಸ್ಥಳಗಳಿಗೆ ತೆರಳಿದರು. ಚನ್ನಬಸವೇಶ್ವರ, ನೀಲಾಂಬಿಕೆ, ನಾಗಲಾಂಬಿಕೆ, ಮಹಾದೇವಿ ಯಕ್ಕಗಳು ಬಸವೇಶ್ವರನು ಇರುತ್ತಿದ್ದ ಮಂದಿರವು ಭದ್ರವಾದದ್ದೆಂದು ತಿಳಿದು ಅಲ್ಲಿಯೇ ಇರಹತ್ತಿದರು. ಬೇರೆ ಕೆಲವರು ಬಿಜ್ಜಳನ ರಾಜಧಾನಿಯಿಂದ ಬಹು ದೂರವಿರುವ ಅರಣ್ಯ ಪ್ರದೇಶಗಳಿಗೆ ಹೊರಟು ಹೋಗಹತ್ತಿದರು. ಶ್ರೀಶೈಲ ಪ್ರಾಂತವು ಕಲ್ಯಾಣದಿಂದ ದೂರದಲ್ಲಿದ್ದು ಅದು ಪರರಾಜರ ಆಧೀನದಲ್ಲಿತ್ತು. ಆದ್ದರಿಂದ ಸಾವಿರಾರು ಜನ ಶಿವಶರಣರು ಈ ಪ್ರಾಂತದ ಕಡೆಗೆ ಹೋಗಿ ವಾಸಮಾಡಹತ್ತಿದರು. ಇಲ್ಲಿ ಒಂದು ಪುರಾತನ ಸಿಂಹಾಸನ ಮಠವು ಇದ್ದು ಇದರ ಆಶ್ರಯದಲ್ಲಿ ಇರತೊಡಗಿದರು. ಇವರು ಶಸ್ತ್ರಾಸ್ತ್ರ ಸಜ್ಜಿತರಾಗಿ ಸುಸಂಘಟಿತರಾಗಿ ಆತ್ಮಸಂರಕ್ಷಣೆಯಲ್ಲಿ ತೊಡಗಿದವ ರಾದರು. ಆದ್ಧರಿಂದ ಬಹುಜನ ಶಿವಶರಣರು ಈ ಸ್ಥಾನಕ್ಕೆಯೇ ಬರುವವ ರಾದರು. ಅಲ್ಲಮಪ್ರಭುವು ಒಬ್ಬ ಪ್ರಸಿದ್ಧ ವ್ಯಕ್ತಿಯು. ಅವನೂ ಮಹಾ ದೇವಿಯಕ್ಕನೂ ಇಲ್ಲಿಗೆ ಬಂದು ದೇವಸ್ಥಾನಕ್ಕೆ ಸಮೀಪವಾಗಿ ಇರುವವ ರಾದರು. ಆದರೆ ಅಲ್ಲಿ ಬಹುಜನರ ದಟ್ಟಣೆ ಇದ್ದುದರಿಂದ ಅದು ಅವರಿಗೆ ಸುರಕ್ಷಿತವೆನಿಸಲಿಲ್ಲ. ಆದರೆ ಈ ಸ್ಥಾನದ ಕೆಳಗಡೆ ಕೃಷ್ಣಾನದಿಯು ಹರಿಯು ತ್ತಿದ್ದು ಅಲ್ಲಿ ಅದು ಬಹಳ ಆಳವಾಗಿದೆ. ಅದರ ಆಚೆಯ ದಂಡೆಯಲ್ಲಿ ಕದಳೀ ಬನವೆಂದು ಒಂದು ನಿಬಿಡವಾದ ಅರಣ್ಯ ಪ್ರದೇಶವಿದೆ. ಈ ಸ್ಥಾನವು ಸುರಕ್ಷಿತಕ್ಕೋಸ್ಕರ ಮಾತ್ರವಲ್ಲ ತಮ್ಮ ಶಿವಾನುಭವ ಆಚರಣೆಗೋಸ್ಕರ ಬಹಳ ಅನುಕೂಲವೆಂದು ಅಲ್ಲಮಪ್ರಭು ಮಹಾದೇವಿಯಕ್ಕಗಳಿಗೆ ತೋರಿತು. ಆದ್ದ ರಿಂದ ಅವರಿಬ್ಬರು ಈ ವನವನ್ನು ಪ್ರವೇಶಮಾಡಿ ಅಲ್ಲಿ ಇರತೊಡಗಿದರು. ಅವರು ಅಲ್ಲಿ ಎಷ್ಟುದಿನ ಕಾಲಕಳೆದರೆಂಬುದು ಯಾರಿಗೂ ಗೊತ್ತಾಗಿರುವ ದಿಲ್ಲ. ಆದರೆ ಅಲ್ಲಿಗೆ ಹೋದಬಳಿಕ ಅವರು ಎಂದೂ ಹಿಂದಿರುಗಿ ಬರಲಿ ಲ್ಲೆಂಬುದು ನಿಶ್ಚಯಾತ್ಮಕವು. ಅವರು ಅಲ್ಲಿಯೇ ಸಮಾಧಿಸ್ಥರಾದರೆಂದು ಯಾವತ್ತರ ನಂಬಿಗೆ ಇದೆ.

ಈ ಪ್ರಕಾರ ಮಹದೇವಿಯಕ್ಕನ ಚರಿತ್ರೆ ಇರುತ್ತದೆ. ಅವಳು ಅತ್ಯಂತ ಪವಿತ್ರಜೀವಿಯಾಗಿದ್ದಾಳೆ. ಅವಳು ತನ್ನ ಜೀವಿತಾವಧಿಯಲ್ಲಿ ಉಚ್ಚ ಶಿವಾನುಭವಿ ಎಂದೆನಿಸಿಕೊಂಡು ಕಾಲಕಳೆದಳು. ಆಕೆಯ ಚರಿತ್ರೆಯು ಬಹುಜನರ ಲಕ್ಷ್ಯವನ್ನು ಸ್ವಾಭಾವಿಕವಾಗಿ ಎಳೆದಿರುತ್ತದೆ. ಅವಳ ವಚನಗಳು ಆಕೆಯ ಹೆಸರನ್ನು ನಿರಂತರವಾಗಿ ಉಳಿಸಿರುವವು. ಆಕೆಯು ಒಬ್ಬ ಮಾದರಿ ಸ್ತ್ರೀಯಳೆಂದೆನಿಸಿಕೊಂಡು ವೈರಾಗ್ಯಮೂರ್ತಿಯಾಗಿ ಯಾವಾಗಲೂ ಬಸವೇಶ್ವರನ ಸನ್ನಿಧಿಯಲ್ಲಿ ಇದ್ದುಕೊಂಡು ಶಿವಶರಣರಲ್ಲಿ ಹೆಸರುವಾಸಿಯಾಗಿದ್ದಾಳೆ.

---

## ರೇವಣಸಿದ್ಧ

ರೇವಣಸಿದ್ಧೇಶ್ವರನು ಬಸವೇಶ್ವರ, ಅಲ್ಲಮಪ್ರಭು, ಸಿದ್ಧರಾಮೇಶ್ವರ ಇವರಕಿಂತಲೂ ಮೊದಲಿನವನು. ಈ ಮೂವರು ಮಹಾನುಭಾವರಂತೆಯೇ ರೇವಣಸಿದ್ಧೇಶ್ವರನಾದರೂ ವೀರಶೈವ ಧರ್ಮವನ್ನು ಪ್ರಚಾರಪಡಿಸಿದ್ದಾನೆ. ಅವನು ಬಹುಶಃ ೧೨ನೇ ಶತಮಾನದ ಆದಿಭಾಗದಲ್ಲಿ ಪ್ರಸಿದ್ಧಿಗೆ ಬಂದಿರಬಹುದೆಂದು ಅವನ ಚರಿತೆಯಿಂದ ತಿಳಿದುಬರುತ್ತದೆ. ಅವನಕಿಂತಲೂ ಮೊದಲು ಕೆಲವು ಶಿವಶರಣರು ಕರ್ನಾಟಕಾಂಧ್ರದೇಶಗಳಲ್ಲಿ ಆಗಿ ಹೋಗಿದ್ದಾರೆ. ಇವರಲ್ಲಿ ದೇವರದಾಸಿಮಯ್ಯ ಕೊಂಡಗುಳಿಯ ಕೇಶಿರಾಜ ಇವರು ಮುಖ್ಯರು. ಇವರಲ್ಲದೆ ಕೆಂಭಾವಿ ಭೋಗಣ್ಣ, ಬಾಹೂರು ಬ್ರಹ್ಮಯ್ಯ, ತೆಲಗು ಜೊಮ್ಮಯ್ಯ ಹೀಗೆ ಬೇರೆ ಕೆಲವು ಶಿವಶರಣರು ಕರ್ನಾಟಕದ ಉತ್ತರಭಾಗದಲ್ಲಿ ಪ್ರಾದುರ್ಭವಿಸಿದ್ದಾರೆ. ಇವರಲ್ಲಿ ಕೆಲವರು ವಚನಗಳನ್ನು ಸಹ ರಚಿಸಿದ್ದಾರೆ. ಇವರಲ್ಲಿ ದೇವರದಾಸಿಮಯ್ಯನು ಅತ್ಯಂತ ಉಚ್ಚ ಸ್ಥಾನವನ್ನು ಪಡೆದಿದ್ದಾನೆ. ಈತನು ೧೧ ನೇ ಶತಮಾನದ ಮಧ್ಯಭಾಗದಲ್ಲಿ ಮುದುನೂರು ಎಂಬಲ್ಲಿ ವಾಸಿಸುತ್ತಿದ್ದನು. ಮುದನೂರು ಕಲಬುರ್ಗಿ ಜಿಲ್ಹೆಯಲ್ಲಿದೆ. ಇವನನಂತರ ಸುಮಾರು ೫೦-೬೦ ವರುಷಗಳಾದಮೇಲೆ ರೇವಣಸಿದ್ಧೇಶ್ವರನು ವೇಂಗಳವಾಡ ಅಥವಾ ತರ್ದವಾಡಿ ಪ್ರಾಂತಕ್ಕೆ ಬಂದು ಇಲ್ಲಿ ಶರಣರ ಧರ್ಮವನ್ನು ಪ್ರಕಾಶಪಡಿಸಿದ್ದಾನೆ.

ರೇವಣಸಿದ್ಧೇಶ್ವರನ ಮೂಲ ಗ್ರಾಮವು ಆಂಧ್ರದೇಶವಾಗಿರುವ ಕೊಲ್ಲಿಪಾಕಿ ಎಂಬುದಾಗಿತ್ತೆಂದು ಅವನ ಚರಿತ್ರೆಯಿಂದ ತಿಳಿದುಬರುತ್ತದೆ.

ಕೊಲ್ಲಿಪಾಕಿ, ಪೊಟ್ಟಲಕೆರೆ ಮತ್ತು ಶ್ರೀಶೈಲ ಈ ಸ್ಥಾನಗಳಲ್ಲಿ ವೀರಶೈವ ಧರ್ಮವು ಮೊದಲು ಪ್ರಸಾರಹೊಂದಿರಬೇಕೆಂಬ ಅನುಮಾನವು ಶಿವಶರಣರ ಚರಿತ್ರೆಗಳಿಂದ ತೋರಬರುತ್ತದೆ. ಶ್ರೀಶೈಲ ಪ್ರಾಂತವೇ ಶೈವ ಧರ್ಮದ ಉಗಮಸ್ಥಾನವೆಂದು ಹೇಳಬಹುದು. ಶ್ರೀಶೈಲವು ಒಂದುಕಾಲದಲ್ಲಿ ನಿಬಿಡ ವಸತಿಯುಳ್ಳ ಪಟ್ಟಣವಾಗಿತ್ತು. ಆದರೆ ಮುಂದೆ ಜನರು ಇಲ್ಲಿ ಇರಲಿಕ್ಕೆ ಶಕ್ಯವಾಗದ್ದರಿಂದ ಇಲ್ಲಿಯ ಜನರ ದಟ್ಟ ವಸ್ತಿಯು ಕಡಿಮೆಯಾಗುತ್ತ ಹೋಗಿ ಮುಂದೆ ಅದು ನಿರ್ಜನ ಪ್ರದೇಶವಾಯಿತು.

ರೇವಣಸಿದ್ಧೇಶ್ವರನು ಶ್ರೀಶೈಲದಿಂದ ಅನತಿ ದೂರದಲ್ಲಿರುವ ಕೊಲ್ಲಿ ಪಾಕಿ ಎಂಬ ಗ್ರಾಮದಲ್ಲಿ ಒಂದು ಸೋಮೇಶ್ವರ ದೇವಾಲಯವಿದ್ದು ಈ ಸೋಮೇಶ್ವರಲಿಂಗದಿಂದ ಅವನು ಉದ್ಭವಿಸಿದನೆಂದು ಜನರ ತಿಳವಳಿಕೆ ಇದೆ. ಮುಂದೆ ಅವನು ಈ ಗ್ರಾಮದಲ್ಲಿ ಎಷ್ಟು ದಿವಸ ವಾಸವಾಗಿದ್ದನೆಂಬುದು ಗೊತ್ತಾಗುವದಿಲ್ಲ. ಆದರೆ ಕೆಲವು ವರ್ಷಗಳ ತರುವಾಯ ಅವನು ಈ ಪ್ರಾಂತವನ್ನು ಬಿಟ್ಟು ವಿಜಾಪುರ ಜಿಲ್ಲೆಯ ಉತ್ತರ ಭಾಗದಲ್ಲಿರುವ ಮಂಗಳ ವಾಡ ಗ್ರಾಮಕ್ಕೆ ಬಂದು ಅಲ್ಲಿ ವಾಸಮಾಡಹತ್ತಿದನೆಂದು ಕಂಡುಬರುತ್ತದೆ.

ಈ ತರ್ದೆವಾಡಿ ಪ್ರಾಂತದಲ್ಲಿಯೂ ಅದಕ್ಕೆ ಸಮೀಪವರ್ತಿಯಾದ ಐಹೊಳೆ, ಮುದುನೂರು ಗ್ರಾಮಗಳಿದ್ದ ಭಾಗಗಳಲ್ಲಿಯೂ ಅನೇಕ ಶಿವ ಶರಣರು ಇದಕ್ಕೂ ಪೂರ್ವದಲ್ಲಿ ಉತ್ಪನ್ನರಾಗಿ ಶರಣರ ಧರ್ಮವನ್ನು ಪ್ರಚಾರಪಡಿಸುವವರಾಗಿದ್ದರು. ಈ ಸಂಗತಿಯನ್ನು ರೇವಣಸಿದ್ಧೇಶ್ವರನು ಅರಿತುಕೊಂಡು ಇಲ್ಲಿದ್ದ ಮಹಾನುಭಾವರ ಸಹವಾಸದಲ್ಲಿ ಕಾಲಕಳೆಯಬೇಕೆಂದು ಬಯಸಿ ಅವನು ಇತ್ತಕಡೆಗೆ ಬಂದಿರಬಹುದೆಂದು ತೋರುತ್ತದೆ. ಆದ್ದರಿಂದ ಅವನು ಕೊಲ್ಲಿಪಾಕಿಯಲ್ಲಿ ಬಹಳ ದಿವಸ ಇರದೆ ಮಂಗಳ ವಾಡ ಪ್ರಾಂತಕ್ಕೆ ಬಂದು ಅಲ್ಲಿ ವಾಸ ಮಾಡಿರಬಹುದು.

ರೇವಣಸಿದ್ಧೇಶ್ವರನು ಕರ್ನಾಟಕದ ಈ ಭಾಗಕ್ಕೆ ಬಂದ ಕಾಲದಲ್ಲಿ ಅವನು ಪಾಶುಪತ ಧರ್ಮದ ತತ್ವಗಳನ್ನು ಪರಿಶೀಲಿಸಿದವನಾಗಿದ್ದನೆಂದು ತೋರುತ್ತದೆ. ಈ ಸಂಗತಿಯು ಹರಿಹರನು ರಚಿಸಿದ ರೇವಣಸಿದ್ಧೇಶ್ವರನ ರಗಳೆಯಿಂದ ಕಂಡುಬರುತ್ತದೆ. ಆದರೆ ಅವನು ಈ ಪ್ರಾಂತದಲ್ಲಿ ಸಂಚರಿಸಿದ ಬಳಿಕ ಅವನು ಶಿವಾನುಭವದ ತತ್ವಗಳನ್ನು ಪಾಲಿಸುವವನಾದನೆಂದು ತೊರುತ್ತದೆ. ಇಲ್ಲಿ ಅವನು ಅನೇಕ ಶಿವಶರಣರನ್ನು ಕಂಡು ವಚನ

ಷಡ್ವಿಧ ಹಸ್ತಂಗಳುತ್ಪತ್ಯವನು ಷಡ್ವಿದ ಹಸ್ತಂಗಳ ನೆಲೆಯನು, ಷಡ್ವಿಧ ಹಸ್ತಂಗಳ ನಿವೃತ್ತಿಯ ನೆಲೆಯನು, ನವಭಕ್ತಿಯ ಉತ್ಪತ್ಯವನು, ನವ ಭಕ್ತಿಯ ನೆಲೆಯನು. ನವಭಕ್ತಿಯ ನಿವೃತ್ತಿಯನು ನವಅಧಿ ದೇವತೆಗಳು ತ್ಪತ್ಯವನು ನವ ಅಧಿದೇವತೆಗಳ ನೆಲೆಯನು ನವಅಧಿದೇವತೆಗಳ ನಿವೃತ್ತಿಯನು ಅಷ್ಟನಾದದುತ್ಪತ್ಯವನು, ಅಷ್ಟ ನಾದದ ನೆಲೆಯನು. ಅಷ್ಟನಾದದ ನಿವೃತ್ತಿಯನು, ಷಡ್ವಿಧ ಭಕ್ತಿಯುತ್ಪತ್ಯವನು ಷಡ್ವಿಧ ಭಕ್ತಿಯ ನೆಲೆಯನು ಷಡ್ವಿಧ ಭಕ್ತಿಯ ನಿವೃತ್ತಿಯನು. ಷಡ್ವಿಧ ಪರಿಣಾಮದುತ್ಪತ್ಯವನು, ಷಡ್ವಿಧ ಪರಿಣಾಮದ ನೆಲೆಯನು, ಷಡ್ವಿಧ ಪರಿ ಣಾಮದ ನಿವೃತ್ತಿಯನು. ಚತುರ್ವೇದದುತ್ಪತ್ಯವನು, ಚತುರ್ವೇದದ ನೆಲೆಯನು, ಚತುರ್ವೇದದ ನಿವೃತ್ತಿಯನು. ಅಜಪಗಾಯತ್ರಿ ಉತ್ಪತ್ಯ ವನು, ಅಜಪ ಗಾಯತ್ರಿಯ ನೆಲೆಯನು, ಅಜಪ ಗಾಯತ್ರಿಯ ನಿವೃ ತ್ತಿಯನು. ಷಡ್ವಿಧ ಚಕ್ರದ ಭೇದವನು, ಇಷ್ಟ ಪ್ರಾಣಭಾವಲಿಂಗದ ಭೇದ ವನು, ಇಷ್ಟಪ್ರಾಣಭಾವಲಿಂಗದಲ್ಲಿ ತಾರಕ ಸ್ವರೂಪ, ದಂಡಕ ಸ್ವರೂಪ ಕುಂಡಲಾಕಾರ, ಅರ್ಧಚಂದ್ರಾಕಾರ, ದರ್ಪಣಾಕಾರ ಜ್ಯೋತಿಸ್ವರೂಪವು ಅಡಗಿಹ ಭೇದವನು, ಅಕಾರ ಉಕಾರ ಮಕಾರ ಈ ಮೂರು ಕೂಡಿ ಏಕಾರ್ಥವಾಗಿ ಅಖಂಡ ಜ್ಯೋತಿರ್ಮಯ ಲಿಂಗವಾದ ಭೇದವನು, ಆತ್ಮ ನುತ್ಪತ್ಯವನು, ಆತ್ಮನ ನೆಲೆಯನು, ಆತ್ಮನ ನಿವೃತ್ತಿಯನು. ಪೃಥ್ವಿ, ಅಪ್ಪು, ತೇಜ, ವಾಯು, ಆಕಾಶದ ನಿವೃತ್ತಿಯನು. ಭಕ್ತ, ಮಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯರ ನೆಲೆಯನು- ಭಕ್ತ, ಮಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯರ, ನಿವೃತ್ತಿಯನು. ಷಡ್ವಿಧ ಹಸ್ತದುತ್ಪತ್ಯವನು. ಷಡ್ವಿಧ ಹಸ್ತಂಗಳ ನೆಲೆಯನು, ಷಡ್ವಿಧ ಹಸ್ತಂಗಳ ನಿವೃತ್ತಿಯನು. ಷಡ್ವಿಧ ಲಿಂಗದುತ್ಪತ್ಯವನು, ಷಡ್ವಿಧ ಲಿಂಗದ ನೆಲೆ ಯನು, ಷಡ್ವಿಧ ಲಿಂಗದ ನಿವೃತ್ತಿಯನು. ಷಡ್ವಿಧ ಮುಖಂಗಳುತ್ಪತ್ಯ ವನು, ಷಡ್ವಿಧ ಮುಖಂಗಳ ನೆಲೆಯನು, ಷಡ್ವಿಧ ಮುಖಂಗಳ ನಿವೃತ್ತಿ ಯನು. ಷಡ್ವಿಧ ಪರಿಣಾಮದುತ್ಪತ್ಯವನು, ಷಡ್ವಿಧ ಪರಿಣಾಮದ ನೆಲೆ ಯನು, ಷಡ್ವಿಧ ಪರಿಣಾಮದ ನಿವೃತ್ತಿಯನು, ಷಡ್ವಿಧ ಅರ್ಪಿತಾವಧಾ ನದ ಭೇದವನು, ನಿರಾಳ ಚಕ್ರಂಗಳ ಭೇದವನು, ನಿರಾಮಯ ಷಟ್ ಸ್ಥಲದ ಭೇದವನು, ಷಟ್‌ಸ್ಥಲ ಬ್ರಹ್ಮದುತ್ಪತ್ಯವನು, ಷಟ್‌ಸ್ಥಲ ಬ್ರಹ್ಮ ದಲ್ಲಿ ಮೂವತ್ತಾರು ತತ್ವಂಗಳುತ್ಪತ್ಯವನು, ಷಟ್‌ಶಕ್ತಿಗಳುತ್ಪತ್ಯವನು,

ಷಡಂಗಂಗಳುತ್ಪತ್ತ್ಯವನು, ಶಿವಶಕ್ತಿಗಳುತ್ಪತ್ತ್ಯವನು, ಪ್ರೇರಕಾವಸ್ಥೆಯ ದರುಶನವನು, ಮಧ್ಯಾವಸ್ಥೆಯ ದರುಶನವನು, ಮೇಲಾದವಸ್ಥೆಯ ದರುಶನದ ಭೇದವನು, ಕೆಳಗಾದವಸ್ಥೆಯ ದರ್ಶನದ ಭೇದವನು, ಸಕಲಾವಸ್ಥೆಯ ದರ್ಶನದ ಭೇದವನು, ಶುದ್ಧಾವಸ್ಥೆಯ ದರ್ಶನದ ಭೇದವನು, ಪಂಚವು ಲಿಂಗಗಳ ದರ್ಶನವನು, ನಿರ್ಮಲಾವಸ್ಥೆಯ ದರ್ಶನದ ಭೇದವನು, ನಿಃಕಳವಸ್ಥೆಯ ದರ್ಶನವನು, ನಿರಂಜನಾವಸ್ಥೆಯ ದರ್ಶನವನು, ಜ್ಞಾನಾವಸ್ಥೆಯ ದರ್ಶನವನು, ಶಿವಾವಸ್ಥೆಯ ದರುಶನವನು, ಮಂತ್ರಾಧ್ವದುತ್ಪತ್ತ್ಯವನು, ಮಂತ್ರಾಧ್ವದ ವರ್ತನೆಯನು ಪದಾಧ್ವದುತ್ಪತ್ತ್ಯವನು, ಪದಾಧ್ವದ ವರ್ತನೆಯುನು, ವರ್ಣಾಧ್ವದುತ್ಪತ್ತ್ಯವನು, ವರ್ಣಾಧ್ವದ ವರ್ತನೆಯುನು, ಭುವನಾಧ್ವದುತ್ಪತ್ತ್ಯವನು, ಭುವನಾಧ್ವದ ವರ್ತನೆಯನು, ತತ್ವಾಧ್ವದುತ್ಪತ್ತ್ಯವನು, ತತ್ವಾಧ್ವದ ವರ್ತನೆಯನು, ಕಲಾಧ್ವದುತ್ಪತ್ತ್ಯವನು, ಕಲಾಧ್ವದ ವರ್ತನೆಯನು, ಗುರುಲಿಂಗಜಂಗಮವೆಂದು ಸುಳಿವ ಅಣ್ಣಗಳ ತಾಮಸ ನಿರಸನವ ಮಾಡಿ ನುಡಿದವನದಭೇದವನು, ತತ್‌ಪದ ತ್ವಂ ಪದ ಅಸಿ ಪದಂಗಳ ಭೇದವನು, ಆ ತತ್ಪದ, ತ್ವಂಪದ, ಅಸಿ ಪದಗಳು ಅಕಾರ ಉಕಾರ, ಮಕಾರಂಗಳಲ್ಲಿ ಅಡಗಿದ ಭೇದವನು ಆ ಅಕಾರ, ಉಕಾರ, ಮಕಾರ ಏಕವಾಗಿ ಷಟ್‌ಸ್ಥಲ ಬ್ರಹ್ಮವಾದ ಭೇದವನು, ವಚನಾನುಭಾವದ ಭೇದವನು, ಅರಿಯೆನೆಲೆ ಸದ್ಗುರು ಸ್ವಾಮಿ ನಿರೂಪಿಸೆಂದು, ಆ ಶಿಷ್ಯನು ಬೆಸಗೊಳಲು, ಆ ಸದ್ಗುರುಸ್ವಾಮಿ ನಿರೂಪಿಸಿದ ವಚನ, ಲೋಕಾದಿ ಲೋಕಂಗಳೇನೂ ಏನೂ ಇಲ್ಲದಂದು ಶಿವ ಹೇಂಗಿರ್ದನೆಂದರೆ ವಚನ|| ಪರಾಪರವಿಲ್ಲದಂಡು, ಆ ಪರಾಪರವು ಪರವಾಗಿಹ ಪರಬ್ರಹ್ಮವಿಲ್ಲದಂದು, ಪರಶಿವರಿಲ್ಲದಂದು, ಊರ್ಧ್ವ ಶೂನ್ಯ, ಮಧ್ಯಶೂನ್ಯವಾಗಿಹ ನಿರಾಮಯ ಬ್ರಹ್ಮವಿಲ್ಲದಂಡು, ಶಂಕರ, ಶಶಿಧರ, ವೃಷಭ, ವಾಹನರಿಲ್ಲದಂದು, ಸುರಾಳ, ನಿರಾಳವಿಲ್ಲದಂದು, ಹಮ್ಮು ಬಿಮ್ಮುಗಳಿಲ್ಲದಂದು, ಬ್ರಹ್ಮ, ವಿಷ್ಣು, ರುದ್ರ, ಈಶ್ವರ, ಸದಾಶಿವರಿಲ್ಲದಂದು, ಪೃಥ್ವಿ, ಅಪ್ಪು, ತೇಜ, ವಾಯು ಆಕಾಶವಿಲ್ಲದಂದು ಚಂದ್ರ ಸೂರ್ಯ ಆತ್ಮರಿಲ್ಲದಂದು ಏನು ಏನೂ ಇಲ್ಲದಂದು ನಿರಂಜನಾತೀತನಾಗಿರ್ದನಯ್ಯ ಇಲ್ಲದಂತೆ, ನಮ್ಮ ಅಪ್ರಮಾಣ ಕೂಡಲಸಂಗಮದೇವಾ.

೮೨. ಅನಂತ ಕೋಟಿ ಸೂರ್ಯ ಚಂದ್ರಾಗ್ನಿಮಯವಾಗಿಹ ಪರಂಜ್ಯೋತಿ ಉದಯವಾಗದಂದು, ರಾಜಸ ತಾಮಸ ಸಾತ್ವಿಕ ಗುಣತ್ರಯ

ಗಳುತ್ಪತ್ಯವಾಗದಂದು, ಅಕ್ಷರತ್ರಯಂಗಳು ತ್ಪತ್ಯವಾಗದಂದು, ಸರ್ಪನ ಮೇಲೆ ಪೃಥ್ವಿಹಾಸದಂದು, ಮಹಾಮೇರು ಕೈಲಾಸವಿಲ್ಲದಂದು, ಗಂಗೆ ಪಾಳು ಸಮ ರುದ್ರರಿಲ್ಲದಂದು ಸ್ವರ್ಗ ಮರ್ತ್ಯ ಪಾತಾಳಲೋಕ ವಿಲ್ಲ ಪಂದು, ಭೂಲೋಕ ಭುವರ್ಲೋಕ ವಿಲ್ಲದಂದು, ಮಹರ್ಲೋಕ ಜನ ಲೋಕ, ತಪರ್ಲೋಕ, ಸತ್ಯಲೋಕ, ಗೋಲೋಕ, ಇಂತೇಳು ಲೋಕಂ ಗಳಿಲ್ಲದಂದು ಅತಳ, ವಿತಳ, ಸುತಳ; ತಳಾತಳ, ರಸಾತಳ, ನಿರಾತಳ, ಪಾತಾಳ, ಲೋಕಂಗಳೆಂಬ ಕೆಳಗೇಳು ಲೋಕಂಗಳು ಇಲ್ಲದಂದು ಮಲ ಯಶಕ್ತಿ ವಿದ್ಯ ಮಹೇಂದ್ರ ರುಕ್ಷವಂತ ಸಹ್ಯವೆಂಬ ಸಪ್ತಕುಲ ಪರ್ವತಂ ಗಳಿಲ್ಲದಂದು ನಾಲ್ವತ್ತೆಂಟುಸಾವಿರ ಮುನಿಗಳಿಲ್ಲದಂದು ಮೂವತ್ತುಮೂರು ಕೋಟಿ ದೇವತೆಗಳಿಲ್ಲದಂದು ಸರ್ವಶೂನ್ಯ ನಿರಾಲಂಬವಾಗಿರ್ದಲ್ಲಿ ನಿರಂಜ ನಾತೀತನಾಗಿರ್ದನಯ್ಯಾ ಇಲ್ಲದಂತೆ ನಮ್ಮ ಅಪ್ರಮಾಣ. ಕೂಡಲಸಂಗಮ ದೇವಾ.

೮೩. ತತ್ವವಾಚ್ಯ ಅವಾಚ್ಯ ಪ್ರಣವ ತಲೆದೋರದಂದು, ಕಲಾ ತತ್ವ ತಲೆದೋರದಂದು, ಅನಾದಿತ್ವ ತಲೆದೋರದಂದು, ಚಿನ್ನಾದ, ಚಿದ್ಬಿಂದು ಚಿತ್ಕಳೆ ತಲೆದೋರದಂದು, ನಾದ ಸುನಾದ ತಲೆದೋರದಂದು, ಮಹಾ ನಾದ ಗುಹ್ಯನಾದ ತಲೆದೋರದಂದು, ಇವೇನು ಏನೂ ಎನಲಿಲ್ಲದಂದು, ನಿರಂಜನಾತೀತನಾಗಿರ್ದನಯ್ಯಾ ಇಲ್ಲದಂತೆ, ನಮ್ಮ ಅಪ್ರಮಾಣ ಕೂಡಲ ಸಂಗಮದೇವಾ

೮೪. ನಿರಂಜನ ಪ್ರಣವ, ಅವಾಚ್ಯ ಪ್ರಣವ,ಉತ್ಪತ್ಯವಾಗದತ್ತ,ಕಲಾ ಪ್ರಣವ, ನಾದಿ ಪ್ರಣವ ಉತ್ಪತ್ಯವಾಗದತ್ತ, ಅಕಾರ ಉಕಾರ ಮಕಾರ ವೆಂಬ ಬೀಜ ಉತ್ಪತ್ಯವಾಗದತ್ತ, ನಾದ ಬಿಂದು ಕಳೆಗಳುತ್ಪತ್ಯವಾಗದತ್ತ, ಪ್ರಕೃತಿ ಪ್ರಾಣ ಓಂಕಾರ ಉತ್ಪತ್ಯವಾಗದತ್ತತ್ತ, ಲೋಕಾದಿ ಲೋಕಂಗ ಳೇನೂ ಉತ್ಪತ್ಯವಾಗದತ್ತ ನಿರಂಜನ ಪ್ರಣವ ಅತೀತನಾಗಿರ್ದನಯ್ಯಾ ಇಲ್ಲ ದಂತೆ ನಮ್ಮ ಅಪ್ರಮಾಣ ಕೂಡಲಸಂಗಮದೇವಾ.

೮೫. ಸಕಲ ತತ್ವವಿಲ್ಲದಂದು, ನಿಃಕಲ ತತ್ವವಿಲ್ಲದಂದು, ಸಕಲ ನಿಃಕಲ ತತ್ವವಿಲ್ಲದಂದು, ಪರಶಿವತತ್ವ ವಿಲ್ಲದಂದು, ನಿರಂಜನ ತತ್ವವಿಲ್ಲ ದಂದು, ಈ ತತ್ವಂಗಳೇನೂ ಇಲ್ಲದಂದು, ನಿರಂಜನಾತೀತನಾಗಿರ್ದನಯ್ಯಾ ಇಲ್ಲದಂತೆ ನಮ್ಮ ಅಪ್ರಮಾಣ ಕೂಡಲಸಂಗಮದೇವಾ.

೮೬. ಏನು ಏನು ಏನಲಿಲ್ಲದ ಮಹಾ ಘನ ನಿರಂಜನಾತೀತನಾಗಿಹ ವಸ್ತು ಲೋಕಾದಿ ಲೋಕಂಗಳ ಸೃಜಿಸಬೇಕೆಂದು ನೆನಹುಮಾತ್ರದಲ್ಲಿಯೆ ನಿರಂಜನಪ್ರಣವ ಉತ್ಪತ್ಯವಾಯಿತ್ತು. ಇನ್ನು ನಿರಂಜನ ಪ್ರಣವದ ಸ್ಥಲದ ವಚನ ಅದೆಂತೆಂದೊಡೆ ಮಂತ್ರಾಧ್ವ, ಪದಾಧ್ವ, ಜನನಕ್ಕೆ ಬಾರದಂದು ವರ್ಣಾಧ್ವ, ಭುವನಾಧ್ವ ಜನನಕ್ಕೆ ಬಾರದಂದು ತತ್ವಾಧ್ವ, ಕಲಾಧ್ವ ಜನನಕ್ಕೆ ಬಾರದಂದು, ನಿರಂಜನಪ್ರಣವವಾಗಿರ್ದನಯ್ಯ ಇಲ್ಲದಂತೆ ನಮ್ಮ ಅಪ್ರಮಾಣ ಕೂಡಲಸಂಗಮದೇವಾ.

೮೭. ಆಧಾರ, ಸ್ವಾಧಿಷ್ಠಾನ ಚಕ್ರ ಉತ್ಪತ್ಯವಾಗದ ಮುನ್ನ ಮಣಿಪೂರಕ ಅನಾಹತ ಚಕ್ರ ಉತ್ಪತ್ಯವಾಗದ ಮುನ್ನ, ವಿಶುದ್ಧಿಚಕ್ರ, ಆಜ್ಞಾಚಕ್ರ ಉತ್ಪತ್ಯವಾಗದ ಮುನ್ನ, ಬ್ರಹ್ಮಚಕ್ರ ಶಿಖಾಚಕ್ರ ಉತ್ಪತ್ಯವಾಗದ ಮುನ್ನ, ಪಶ್ಚಿಮಚಕ್ರ ಅಣುಚಕ್ರ ಉತ್ಪತ್ಯವಾಗದ ಮುನ್ನ, ನಿರಂಜನ ಪ್ರಣವವಾಗಿರ್ದನಯ್ಯಾ ಇಲ್ಲದಂತೆ, ನಮ್ಮ ಅಪ್ರಮಾಣ ಕೂಡಲ ಸಂಗಮದೇವಾ.

೮೮. ನಿರಾಳಜಾಗ್ರ, ನಿರಾಳಸ್ವಪ್ನ, ಇವಿಲ್ಲದತ್ತತ್ತ ನಿರಾಳಸುಷುಪ್ತಿ ನಿರಾಳತೂರ್ಯವಿಲ್ಲದತ್ತತ್ತ. ನಿರಾಳವ್ಯೋಮ ನಿರಾಳ ವ್ಯೋಮಾತೀತವಿಲ್ಲದತ್ತತ್ತ. ನಿರಂಜನಪ್ರಣವವಾಗಿದ್ದನಯ್ಯ ಇಲ್ಲದಂತೆ ನಮ್ಮ ಅಪ್ರಮಾಣ ಕೂಡಲಸಂಗಮದೇವಾ.

೮೯. ನಿರ್ಮಲಜಾಗ್ರ, ನಿರ್ಮಲಸ್ವಪ್ನವಿಲ್ಲದಂದು, ನಿರ್ಮಲ ಸುಷುಪ್ತಿ ನಿರ್ಮಲ ತೂರ್ಯವಿಲ್ಲದಂದು, ನಿರ್ಮಲವ್ಯೋಮ, ನಿರ್ಮಲವ್ಯೋಮಾತೀತ ವಿಲ್ಲದಂದು ನಿರಂಜನಪ್ರಣವವಾಗಿದ್ದನಯ್ಯ ಇಲ್ಲದಂತೆ ನಮ್ಮ ಅಪ್ರಮಾಣ ಕೂಡಲಸಂಗಮದೇವಾ.

೯೦. ಶಿವಜಾಗ್ರ ಶಿವಸ್ವಪ್ನವಿಲ್ಲದಂದು ಶಿವಸುಷುಪ್ತಿ ಶಿವತೂರ್ಯ ವಿಲ್ಲದಂದು ಶಿವವ್ಯೋಮ ಶಿವವ್ಯೋಮಾತೀತ ವಿಲ್ಲದಂದು ನಿರಂಜನ ಪ್ರಣವವಾಗಿದ್ದನಯ್ಯ ಇಲ್ಲದಂತೆ ನಮ್ಮ ಅಪ್ರಮಾಣ ಕೂಡಲಸಂಗಮದೇವಾ.

೯೧. ಜ್ಞಾನಜಾಗ್ರ ಜ್ಞಾನಸ್ವಪ್ನ ವಿಲ್ಲದಂದು ಜ್ಞಾನಸುಷುಪ್ತಿ ಜ್ಞಾನತೂರ್ಯವಿಲ್ಲದಂದು ಜ್ಞಾನವ್ಯೋಮ ಜ್ಞಾನವ್ಯೋಮಾತೀತವಿಲ್ಲದ ಮುನ್ನ ನಿರಂಜನ ಪ್ರಣವವಾಗಿದ್ದನಯ್ಯಾ ಇಲ್ಲದಂತೆ ನಮ್ಮ ಅಪ್ರಮಾಣ ಕೂಡಲಸಂಗಮದೇವಾ.

೯೨. ಶಿವತತ್ವವಿಲ್ಲದಂದು ಸದಾಶಿವ ತತ್ವವಿಲ್ಲದಂದು ಮಹೇಶ್ವರ ತತ್ವವಿಲ್ಲದಂದು ಕೇವಲ ತತ್ವವಿಲ್ಲದಂದು ಸಕಲತತ್ವವಿಲ್ಲದಂದು ಶುದ್ಧ ತತ್ವವಿಲ್ಲದಂದು ಈ ತತ್ವಂಗಳೇನೂ ಏನೂ ಎನಲಿಲ್ಲದಂದು ನಿರಂಜನ ಪ್ರಣವವಾಗಿದ್ದನಯ್ಯ ಇಲ್ಲದಂತೆ ನಮ್ಮ ಅಪ್ರಮಾಣ ಕೂಡಲಸಂಗಮ ದೇವಾ.

೯೩. ನಿರಂಜನ ಪ್ರಣವದ ನೆನಹು ಮಾತ್ರ ಬಿಂದು ವಾಚ್ಯ ಪ್ರಣವ ಉತ್ಪತ್ಯವಾಯಿತ್ತು ಇನ್ನು ಅವಾಚ್ಯ ಪ್ರಣವದ ಸ್ಥಲದ ವಚನ ಅದೆಂತೆಂದಡೆ ನಿರಾಳ ಶಾಂತ್ಯತೀತೋತ್ತರ ಕಲೆ ನಿರಾಳ ಶಾಂತ್ಯತೀತ ಕಲೆಗಳಲ್ಲಿದಂದು ನಿರಾಳ ಶಾಂತಿಕಲೆ ನಿರಾಳ ವಿದ್ಯಾಕಲೆಗಳಿಲ್ಲದಂದು ನಿರಾಳ ಪ್ರತಿಷ್ಠಾಕಲೆ ನಿರಾಳ ನಿವೃತ್ತಿ ಕಲೆಗಳಿಲ್ಲದಂದು ನಿರಾಳ ಮಹಾ ಸಾದಾಖ್ಯ ನಿರಾಳ ಶಿವಸಾದಾಖ್ಯವಿಲ್ಲದಂದು ನಿರಾಳ ಅಮೂರ್ತಿ ಸಾದಾಖ್ಯ ವಿಲ್ಲದಂದು ನಿರಾಳಮೂರ್ತಿ ಸಾದಾಖ್ಯ ವಿಲ್ಲದಂದು ನಿರಾಳ ಕರ್ತೃಸಾ ದಾಖ್ಯವಿಲ್ಲದಂದು ನಿರಾಳ ಕರ್ಮಸಾದಾಖ್ಯ ವಿಲ್ಲದಂದು ಅಜಪಗಾಯತ್ರಿ ಇಲ್ಲದಂದು ಅವಾಚ್ಯ ಪ್ರಣವವಾಗಿದ್ದನು ನೋಡಾ ಇಲ್ಲದಂತೆ ನಮ್ಮ ಅಪ್ರಮಾಣ ಕೂಡಲಸಂಗಮದೇವಾ.

೯೪. ಆದಿಯನಾದಿ ಇಲ್ಲದಂದು, ಅಜಾಂಡ ಬ್ರಹ್ಮಾಂಡವಿಲ್ಲದಂದು, ವ್ಯೋಮವ್ಯೋಮಾಕಾಶವಿಲ್ಲದಂದು, ಜೀವ ಪರಮರಿಲ್ಲದಂದು, ಅಜಪ ಗಾಯತ್ರಿ ಇಲ್ಲದಂದು ಅನೇಕ ಕೋಟಿ ವೇದಾಗಮ ಶಾಸ್ತ್ರ ಪುರಾಣಾದಿ ಗಳಿಲ್ಲದಂದು, ದ್ವೈತಾದ್ವೈತವಿಲ್ಲದಂದು, ಶೂನ್ಯ ನಿಶ್ಶೂನ್ಯವಿಲ್ಲದಂದು, ಅವಾಚ್ಯಪ್ರಣವವಾಗಿರ್ದನು ನೋಡಾ, ಇಲ್ಲದಂತೆ ನಮ್ಮ ಅಪ್ರಮಾಣ ಕೂಡಲಸಂಗಮದೇವಾ.

೯೫. ಬ್ರಹ್ಮ, ವಿಷ್ಣು, ರುದ್ರರಿಲ್ಲದಂದು, ಈಶ್ವರ ಸದಾಶಿವರಿಲ್ಲ ದಂದು, ಉಮೆಯ ಕಲ್ಯಾಣವಾಗದಂದು, ರವಿ ಶಶಿಗಳ ಗಂಗೆಯ ಧರಿಸ ದಂದು, ಸಚರಾಚರಂಗಳು ರಚನೆಗೆ ಬಾರದಂದು, ಅವಾಚ್ಯ ಪ್ರಣವ ತಾನೆಯಾಗಿದ್ದನು ನೊಡಾ ಇಲ್ಲದಂತೆ ನಮ್ಮ ಅಪ್ರಮಾಣ ಕೂಡಲ ಸಂಗಮದೇವನು.

೯೬. ಮಹಾ ಸಾದಾಖ್ಯ, ಶಿವಸಾದಾಖ್ಯವಿಲ್ಲದಂದು, ಅಮೂರ್ತಿ ಸಾದಾಖ್ಯವಿಲ್ಲದಂದು, ಮೂರ್ತಿಸಾದಾಖ್ಯವಿಲ್ಲದಂದು, ಕರ್ತೃಸಾದಾಖ್ಯ

ಕವರ್ಗ ಸಾದಾಖ್ಯವಿಲ್ಲದಂದು, ಶಾಂತತೀತೋತ್ತರ ಕಲೆ, ಶಾಂತತೀತ ಕಲೆಗ ಳಿಲ್ಲದಂದು, ಶಾಂತಿಕಲೆ, ವಿದ್ಯಾಕಲೆಗಳಿಲ್ಲದಂದು, ಪ್ರತಿಷ್ಠಾಕಲೆ ನಿವೃತ್ತಿ ಕಲೆಗಳಿಲ್ಲದಂದು, ನಿಃಕಲ ಶಕ್ತಿ, ಪರಶಕ್ತಿ ಜನನಕ್ಕೆ ಬಾರದಂದು ಆದಿ ಶಕ್ತಿ, ಇಚ್ಛಾಶಕ್ತಿ, ಜನನಕ್ಕೆ ಬಾರದಂದು, ಜ್ಞಾನಶಕ್ತಿ, ಕ್ರಿಯಾಶಕ್ತಿ ಜನನಕ್ಕೆ ಬಾರದಂದು, ಅವಾಚ್ಯ ಪ್ರಣವವಾಗಿರ್ದನು ನೋಡಾ ಇಲ್ಲದಂತೆ ನಮ್ಮ ಅಪ್ರಮಾಣ ಕೂಡಲಸಂಗಮದೇವನು.

೯೭. ಅವಾಚ್ಯ ಪ್ರಣವದ ನೆನಹು ಮಾತ್ರದಲ್ಲಿ, ಕಲಾಪ್ರಣವ ಉತ್ಪತ್ಯ, ಇನ್ನು ಕಲಾಪ್ರಣವದ ಸ್ಥಲದ ವಚನ ಅದೆಂತೆಂದಡೆ, ಅವಾಚ್ಯ ಪ್ರಣವದ ನೆನಹು ಮಾತ್ರದಲ್ಲಿ, ಚಿನ್ನಾದ, ಚಿದ್ಬಿಂದು, ಚಿತ್ಕಳೆ ಉತ್ಪತ್ಯ, ಚಿನ್ನಾದ ಕಲೆ, ದ್ವಾದಶಕಲೆ, ಚಿದ್ಬಿಂದುಕಲೆ, ಷೋಡಶ ಕಲೆ, ಚಿತ್ಕಲೆಯು ಕಲೆ, ದಶಕಲೆ, ಆ ಮೂವ್ವತ್ತೆಂಟು ಕಲೆಗಳು ಏಕವಾಗಿ, ಕಲಾಪ್ರಣವ ಉತ್ಪತ್ಯನೋಡಾ ಅಪ್ರಮಾಣ ಕೂಡಲಸಂಗಮದೇವಾ.

೯೮. ಆ ಕಲಾಪ್ರಣವದ ಮೂವ್ವತ್ತೆಂಟು ಕಾಂತಿಯದೆಂತೆಂದಡೆ ಒಂದೊಂದು ಕಲೆಗಳು ಕಾಲಾಗ್ನಿಯೋಪಾದಿಯ ಕಾಂತಿಯನುಳ್ಳದು. ಒಂದೊಂದು ಕಲೆಗಳು ಕೋಟಿ ಮಿಂಚುಗಳಿಗೆ ಸಮಾನವಹ, ಪ್ರಭೆಯ್ನ ಮುಳ್ಳದು ಜ್ಞಾನಸ್ವರೂಪವಾಗಿಹ, ಸೂಕ್ಷ್ಮ ಕಲೆಗಳೇಕವಾಗಿ ಮೂವ ತ್ತೆಂಟು ಕೋಟಿ ಮಿಂಚುಗಳಿಗೆ ಸಮಾನವಾಹ ಪ್ರಭೆಯನುಳ್ಳ ಚಿತ್ಕಲಾ ಪ್ರಣವವು ಶಿಖಾಗ್ರದಲ್ಲಿಹುದು ನೋಡಾ ಅಪ್ರಮಾಣ ಕೂಡಲ ಸಂಗಮದೇವಾ.

೯೯. ರಹಸ್ಯೆ ॥ ಜ್ವಲತ್ಕನಲಾಭಾಸ। ತಟಿತ್ಕೋಟಿ ಸಮಪ್ರಭಃ ತತ್ಸೋರ್ದ್ಧ್ವಂಚ ಶಿಖಾಸೂಕ್ಷ್ಮಂ। ಚಿದ್ರೂಪಂ ಪರಮಂಕಳಾ ಎಂದುದಾಗಿ, ಅಪ್ರಮಾಣ ಕೂಡಲಸಂಗಮದೇವಾ.

೧೦೦. ಚಿತ್ಕಳಾಪ್ರಣಮವನುಪಮಿಸಬಾರದ ಉಪಮಾತೀತವು,ಮನಾ ತೀತವು, ವರ್ಣಾತೀತವು, ತತ್ವಾತೀತವು, ಜ್ಞಾನಾತೀತವು ನಿರಂಜನ ಕಲಾ ಪ್ರಣವ ಸೂಕ್ಷ್ಮವಾಗಿಹುದು ನೋಡಾ ಅಪ್ರಮಾಣ ಕೂಡಲ ಸಂಗಮದೇವಾ.

೧೦೧. ರಹಸ್ಯ ॥ ವಾಚಾತೀತಮನಾತೀತಂ । ವರ್ಣಾತೀತಂ ಚ ಶತ್ವರಃ । ಜ್ಞಾನಾತೀತ ನಿರಂಜನಂ ।' ಕಳಾಯಾಂ ಸೂಕ್ಷ್ಮ ಭಾವಯೇತ್ ಎಂದುದಾಗಿ, ಅಪ್ರಮಾಣ ಕೂಡಲಸಂಗಮದೇವಾ.

೧೦೨. ವಚನ ॥ ಅಷ್ಟಕುಲ ಪರ್ವತಂಗಳುತ್ಪತ್ಯವಾಗದಂದು! ಅಷ್ಟದಿಕ್ಪಾಲಕರುತ್ಪತ್ಯವಾಗದಂದು, ಮಹಾ ಮೇರು ಕೈಲಾಸ ಉತ್ಪತ್ಯ ವಾಗದಂದು, ಅಷ್ಟ ವಸುಗಳು ದ್ವಾದಶಾದಿತ್ಯರೇಕಾದಶ ರುದ್ರರುತ್ಪತ್ಯವಾಗ ದಂದು, ದ್ವಾದಶ ರಾಶಿ ನಕ್ಷತ್ರ ನವಗ್ರಹಂಗಳಿಲ್ಲದಂದು, ಅಗ್ನಿಮಂಡ ಲಾದಿತ್ಯಮಂಡಲ ಉತ್ಪತ್ಯವಾಗದಂದು, ಚಂದ್ರಮಂಡಲ ತಾರಾಮಂಡಲು ತ್ಪತ್ಯವಾಗದಂದು ಏನು ಏನು ಎನಲಿಲ್ಲದಂದು, ಚಿತ್ಕಳಾಪ್ರಣವವಾಗಿ ರ್ದನು ನೋಡಾ ಇಲ್ಲದಂತೆ ನಮ್ಮ ಅಪ್ರಮಾಣ ಕೂಡಲಸಂಗಮದೇವಾ.

೧೦೩. ಏನೂ ಏನೂ ಎನಲಿಲ್ಲದ ಮಹಾ ಘನ ಚಿತ್ಕಳಾಪ್ರಣವದ ನೆನಹುಮಾತ್ರದಲ್ಲಿ ಅನಾದಿಪ್ರಣವ ಉತ್ಪತ್ಯ, ಇನ್ನು ಅನಾದಿ ಪ್ರಣವದ ಸ್ಥಲದ ವಚನವದೆಂತೆಂದಡೆ, ಆದಿ ಅಕಾರ ಉಕಾರ ಮಕಾರ ವಿಲ್ಲದಂದು, ಆದಿ ನಾದಬಿಂದು ಕಳೆಗಳಿಲ್ಲದಂದು, ಆದಿ ಪ್ರಕೃತಿಪ್ರಾಣವಿಲ್ಲದಂದು, ಅಖಂಡ ಜ್ಯೋತಿರ್ಮಯವಾಗಿಹ ಗೋಳಕಾಕಾರ ಪ್ರಣವವೆಂಬ ಜ್ಯೋತಿ ರ್ಲಿಂಗವಿಲ್ಲದಂದು, ಓಂಕಾರವೆಂಬ ಅನಾದಿ ಪ್ರಣವವಾಗಿದ್ದನು ನೋಡಾ ಇಲ್ಲದಂತೆ ನಮ್ಮ ಅಪ್ರಮಾಣ ಕೂಡಲಸಂಗಮದೇವಾ.

೧೦೪. ಆದಿರುದ್ರ, ಆದಿಈಶ್ವರ, ಆದಿಸದಾಶಿವರಿಲ್ಲದ ಮುನ್ನ ಮುನ್ನ, ಆದಿ ಅಕಾರ ಉಕಾರ ಮಕಾರಕ್ಕೆ, ಆದಿ ನಾದಬಿಂದು ಕಳೆಗಳಾದರವಾಗದ ಮುನ್ನ ಮುನ್ನ, ಆ ಆದಿ ನಾದಬಿಂದು ಕಳೆಗೆ, ಆ ಆದಿ ಪ್ರಕೃತಿಗಳಾಧಾರ ವಾಗದ ಮುನ್ನ ಮುನ್ನ, ಆ ಆದಿ ಪ್ರಕೃತಿಗೆ ಪ್ರಾಣಾಧಾರವಾಗದ ಮುನ್ನ ಮುನ್ನ ಆ ಲಿಂಗಕ್ಕೆ ಲಿಂಗವಾಧ್ಯಾವಾಗದ ಮುನ್ನ ಮುನ್ನವೆ ಓಂಕಾರವೆಂಬ ಅನಾದಿ ಪ್ರಣವವಾಗಿದ್ದನು ನೋಡಾ ಇಲ್ಲದಂತೆ ನಮ್ಮ ಅಪ್ರಮಾಣ ಕೂಡಲಸಂಗಮದೇವಾ.

೧೦೫. ಆದಿ ಅಕಾರದಲ್ಲಿ ತಾರಕಾಸ್ವರೂಪ, ದಂಡಕಾಸ್ವರೂಪ ಉತ್ಪತ್ಯವಾಗದ ಮುನ್ನ ಮುನ್ನವೆ, ಆದಿ ಉಕಾರದಲ್ಲಿ ಕುಂಡಲಾಕಾರ ಅರ್ಧ

ಚಂದ್ರಕ ಉತ್ಪತ್ಯವಾಗದ ಮುನ್ನ ಮುನ್ನಲೆ ಆದಿ ಮಕಾರದಲ್ಲಿ ದರ್ಪಣಾಕಾರ ಜ್ಯೋತಿ ಸ್ವರೂಪ ಉತ್ಪತ್ಯವಾಗದ ಮುನ್ನ ಮುನ್ನವೆ, ಆದಿ ಅಕಾರ ಉಕಾರ ಮಕಾರ ಈ ಮೂರು ಏಕವಾಗಿ, ಅಖಂಡ ಜ್ಯೋತಿರ್ಮಯವಾಗಿಹ ಗೋಳಕಾಕಾರ ಪ್ರಣವ ಉತ್ಪತ್ಯವಾಗದ ಮುನ್ನ ಮುನ್ನವೆ ಓಂಕಾರವೆಂಬ ಅನಾದಿ ಪ್ರಣವವಾಗಿದ್ದನು ನೋಡಾ ಇಲ್ಲದಂತೆ ನಮ್ಮ ಅಪ್ರಮಾಣ ಕೂಡಲಸಂಗಮದೇವಾ.

೧೦೬. ಮಂತ್ರ ಹನ್ನೊಂದು ವೈಶಾಲ್ಯವಾಗದಂದು, ಪದತ್ತೊಂಭತ್ತು ನಾಲ್ಕು ವೈಶಾಲ್ಯವಾಗದಂದು, ವರ್ಣ ಐವತ್ತೆರಡು ವೈಶಾಲ್ಯವಾಗದಂದು, ಇನ್ನೂರು ಇಪ್ಪತ್ತುನಾಲ್ಕು ಭುವನ ವೈಶಾಲ್ಯವಾಗದಂದು, ತೊಂಭತ್ತಾರು ತತ್ವ ವೈಶಾಲ್ಯವಾಗದಂದು, ಅರುವತ್ತು ನಾಲ್ಕು ಕಳೆ ವೈಶಾಲ್ಯವಾಗದಂದು ಓಂಕಾರವೆಂಬ ಅನಾದಿ ಪ್ರಣವವಾಗಿದ್ದನು ನೋಡಾ ಇಲ್ಲದಂತೆ ನಮ್ಮ ಅಪ್ರಮಾಣ ಕೂಡಲಸಂಗಮದೇವಾ.

೧೦೭. ಓಂಕಾರವೆಂಬ ಅನಾದಿಪ್ರಣವದ ನೆನಹುಮಾತ್ರದಲ್ಲಿ ಆದಿ ಅಕಾರ, ಉಕಾರ, ಮಕಾರ, ಉತ್ಪತ್ಯವಾಯಿತ್ತು. ಇನ್ನು ಆದಿ ಅಕಾರ ಉಕಾರ ಮಕಾರದಲ್ಲಿ ಆ ಆದಿ ನಾದ ಬಿಂದು ಕಳೆ ಈ ಮೂರು ಏಕವಾಗಿ ಅಖಂಡ ಜ್ಯೋತಿರ್ಮಯವಾಗಿಹ ಗೋಳಕಾಕಾರ ಪ್ರಣವವಾಯಿತ್ತು. ಅದೆಂತೆಂದಡೆ, ಓಂಕಾರವೆಂಬ ಅನಾದಿ ಪ್ರಣವದ ನೆನಹುಮಾತ್ರದಲ್ಲಿ ಆದಿ ಅಕಾರ, ಉಕಾರ, ಮಕಾರ ಉತ್ಪತ್ಯ. ಆ ಆದಿ ಅಕಾರ ಉಕಾರ ಮಕಾರ ಈ ಮೂರು ಬೀಜಾಕ್ಷರ ಅಕಾರವೇ ಆದಿನಾದ ಉಕಾರವೇ ಆದಿಬಿಂದು ಮಕಾರವೇ ಆದಿಕಳೆ, ಅಕಾರವೇ ಆದಿರುದ್ರ, ಉಕಾರವೇ ಆದಿ ಈಶ್ವರ, ಮಕಾರವೇ ಆದಿಸದಾಶಿವ, ಇಂತೀ ಆದಿ ಅಕಾರ-ಉಕಾರ, ಮಕಾರಕ್ಕೆ ಆದಿನಾದ ಬಿಂದುಕಳೆಯೇ ಆಧಾರ ಆ ಆದಿನಾದ ಬಿಂದುಕಳೆಗೆ ಆ ಆದಿ ಪ್ರಕೃತಿಗೆ ಪ್ರಣಮವಂತ್ರಯೇ ಆಧಾರ ಅಪ್ರಣವು ಮಾತ್ರಿಕೆಗೆ ಅಖಂಡ ಜ್ಯೋತಿರ್ಮಯ ಲಿಂಗವೇ ಆಧಾರ, ಅ ಎಂದರೆ ಅನಾಹತ, ಉ ಎಂದರೆ ಆದಿ ನಾದ ಇಳಿಯಿತ್ತು. ಮಾ ಎಂಬಲ್ಲಿ ತಿಂದು ಬಂದು ಕೂಡಲು, ಶಿವಶಕ್ತಿಯಾಗುತ್ತಿಹಂತಾ ಓಂಕಾರವಾಯಿತ್ತು. ನೋಡಾ ಅಪ್ರಮಾಣ ಕೂಡಲಸಂಗಮದೇವ.

ಇನ್ನು ವೀರಶೈವ ಸಂಸ್ಕೃತ ಗ್ರಂಥಗಳ ವಿಚಾರ ಪ್ರಸ್ತಾಪಿಸಿ ಅವು ೧೩ನೇ ಶತಮಾನದವೆಂದು ಅನೇಕರು ಸಿದ್ಧಾಂತ ಮಾಡಿದ್ದಾರಂತೆ! ಇದಕ್ಕೆ ಅವರು ಕೊಟ್ಟ ಕಾರಣಗಳನ್ನು ವಾದಿಗಳು ಖಂಡಿಸಿಲ್ಲವಂತೆ! ಹಾಗೆ ಖಂಡಿಸಲಿಕ್ಕೆ ಆಗಿಲ್ಲವಂತೆ! ಶ್ರೀಕರ ಭಾಷ್ಯದ ಮೇಲೆ ಕೈಯೆತ್ತಿದ ಶ್ರೀ ಹಯಾವದನರಾಯರ ಮತ್ತು ಶಿವಕುಮಾರರ ಹೆಸರುಗಳನ್ನು ಉಲ್ಲೇಖಿಸಿದ್ದಾರೆ ಶ್ರೀ ಕಾಶೀನಾಥ ಶಾಸ್ತ್ರಿಗಳೇ ಮೊದಲಾದವರು ಶ್ರೀಕರನ ಕಾಲನಿರ್ಣಯವನ್ನು ಮಾಡಿದ್ದಾರೆ. ಶ್ರೀಕರನ ಕಾಲನಿರ್ಣಯವಾದಮೇಲೆ ಆತನ ಭಾಷ್ಯದ ಕಾಲನಿರ್ಣಯವೂ ಆದಂತೆಯೆ ಅಲ್ಲವೆ? ಮೂಲ ಕೃತಿಯಲ್ಲಿಲ್ಲದ ಮತ್ತೊಬ್ಬರಿಂದ ಇತ್ತೀಚಿಗೆ ಸೇರಿಸಿದ ಅಂಶಗಳನ್ನು ಎತ್ತಿ ಕಾಲನಿರ್ಣಯಕ್ಕೆ ಹೊರಟ ಹಯವದನರಾಯರು ನಿಮಗೆ ಪ್ರಮಾಣಪುರುಷರಾದರೆ? ಶಿವಕುಮಾರರು ಯಾವ ಬುದ್ಧಿಯಿಂದ ಆ ಲೇಖಾಂಕವನ್ನು ಬರೆದರೆಂಬುದನ್ನು ನೀವು ತಿಳಿಯಬೇಕಾದರೆ ಇನ್ನೂ ಕೆಲವು ಕಾಲ ಕಳೆಯಬೇಕು. ಅದೂ ಸನ್ನಿಹಿತವಾಗಲಿದೆ. ಇದೀಗ ಆ ಪ್ರಸ್ತಾಪ ಇಲ್ಲಿ ಬೇಕಿಲ್ಲ.

"ಸಿದ್ಧಾಂತ ಶಿಖಾಮಣಿ ಮತ್ತು ನೀಲಕಂಠ ಭಾಷ್ಯಗಳು ೧೩-೧೪ನೇ ಶತಮಾನದವುಗಳೆಂದು ಅನೇಕರು ಶಾಸ್ತ್ರೀಯ ರೀತಿಯಾಗಿ ಸಿದ್ಧಪಡಿಸಿರ್ಯ ವದನ್ನು ವಾದಿಗಳಿಗೆ ಅಲ್ಲಗಳೆಯಲು ಶಕ್ಯವಾಗಿಲ್ಲ." ಎಂದಿದ್ದಾರೆ. ಅನೇಕರು ಯಾರಾರು? ಶಾಸ್ತ್ರೀಯ ರೀತಿ ಯೆಂಥದು? ಇದಾವುದೂ ಧರ್ಮಾಭಿಮಾನಿಗಳಿಂದ ತಿಳಿದುಬರುವದಿಲ್ಲ. ಶ್ರೀಶೈಲ ಶ್ರೀ ನಿಡುಮಾಮಿಡಿ ಜಗದ್ಗುರುಗಳಾದ ಶ್ರೀ ಚನ್ನಬಸವರಾಜ ದೇಶಿಕೇಂದ್ರ ಶಿವಾಚಾರ್ಯರವರಿಂದ ಅನುವಾದಿತವಾದ 'ಮಣಿಕಾಂತಿ' ಎಂಬ ಸಿದ್ಧಾಂತ ಶಿಖಾಮಣಿಯ ಕೃತಿಯ ಮುನ್ನುಡಿಯನ್ನು ಈ ಧರ್ಮಾಭಿಮಾನಿಗಳು ನೋಡಿದಂತಿಲ್ಲ. ಇನ್ನಾದರೂ ಇವರು ನೋಡಿದರೆ ಲೇಸು.

ಶ್ರೀ ರೇವಣಸಿದ್ಧರ ಇಷ್ಟಲಿಂಗಧಾರಣೆ, ಶ್ರೀ ರುದ್ರಮುನಿ ಶಿವಾಚಾರ್ಯರ ಪೀಠ ಸ್ಥಾಪನೆ ಪ್ರಸ್ತಾಪ ಮಾಡಿದ್ದಾರೆ. ಇವುಗಳಿಂದ ಇವರಿಗೆ ಬಂದ ಲಾಭವೇನೋ ತಿಳಿಯದು ಯಾರೇ ಆಗಲಿ ಎಲ್ಲರೂ ಒಬ್ಬೊಬ್ಬರಿಂದ ಇಷ್ಟಲಿಂಗಧಾರಣೆಯನ್ನು ಮಾಡಿಯೇ ಆಗಬೇಕಿಲ್ಲವೇ? ಯಾರು ಪೀಠ ಸ್ಥಾಪಿಸಿದರೆ ಏನು? "ಕಾಶೀ ಶ್ರೀಶೈಲ ಕೇದಾರ ಪೀಠಗಳ ಕ್ಷೇತ್ರಾಧಿಪತಿಗಳು ಬಸವನ ಕಾಲದಲ್ಲಿ ಇಷ್ಟಲಿಂಗಧಾರಿಗಳಾದರು." ಎಂದು ನಿರಾಧಾರವಾಗಿ ಧರ್ಮಾ

ಭಿಮಾನಿಗಳು ನುಡಿದು ಸಂತಸಗೊಂಡಿದ್ದಾರೆ. ಇವರ ಧರ್ಮಾಭಿಮಾನಕ್ಕೆ ಇದುವೇ ದೊಡ್ಡ ಕುರುಹು. ಬಸವನ ಕಾಲದಲ್ಲಿ ಯಾರು ಯಾರಿಂದ ಎಂಬುದು ಇವರಿಗೆ ತಿಳಿದಂತಿಲ್ಲ. 'ಬಸವನ ಕಾಲ' ವೊಂದೇ ಇವರಿಗೆ ಬೇಕಾದುದು. ಇದುವೇ ಇವರ ಧರ್ಮಾಭಿಮಾನ. ಈ ಧರ್ಮಾಭಿಮಾನಿಗಳ ಈ ಅಭಿಮಾನವೂ ಸಹ ಈ ಕೆಳಗಿನ ಅವರ ನುಡಿಗಳಿಂದ ಕಳಚಿ ಬಿದ್ದಿದೆ. ಇವರ ಈ ವಿಚಿತ್ರ ಪ್ರಸ್ತಾಪವನ್ನು ನೋಡಿರಿ.

"ಆದರೆ ಬಸವನ ಕಾಲದಲ್ಲಿ ಮೂರ್ತೀಭವಿಸಿದ ಅಷ್ಟಾವರಣಾಂತರ್ಗತ ವೀರಶೈವದ ಕುರುಹುಗಳೆಲ್ಲವೂ ದೇವರದಾಸಿಮಯ್ಯನ ವಚನಗಳಲ್ಲಿ ಬಂದಿರುವವು. ಅವನು ಜಂಬೂಸಿಂಹನ ಹೆಂಡತಿ ಮುಂತಾದ ಸಾವಿರಾರು ಜನರಿಗೆ ಇಷ್ಟಲಿಂಗ ದೀಕ್ಷೆಯನ್ನು ಕೊಟ್ಟನು.

ಅಂದಮೇಲೆ ದೇವರದಾಸಿಮಯ್ಯನಲ್ಲದೆ ಮತ್ತ್ಯಾರಿಂದ ಮತ್ತು ಯಾವಾಗ ಶೈವವು ಉತ್‌ಕ್ರಾಂತಿಯಾಗಿ ವೀರಶೈವವಾಗಿ ಮಾರ್ಪಟ್ಟಿತು?"

ಈ ಪ್ರತಿಪಾದನೆಯಿಂದ ಈ ಧರ್ಮಾಭಿಮಾನಿಗಳೇ ತಾವೇ ಹೇಳಿರುವಂತೆ ಪ್ರತಿವಾದಿಗಳಾಗಿ ಮೂರ್ತೀಭವಿಸಿದ್ದಾರೆ. ಈ ಧರ್ಮಾಭಿಮಾನಿಗಳು ಹೊರಟದ್ದೆಲ್ಲಿಗೆ; ಹೋಗಿ ನಿಂತುದೆಲ್ಲಿಗೆ? ೮ನೆ ಶತಮಾನಕ್ಕೆ ಹೊರಟು ೧೧ನೇ ಶತಮಾನಕ್ಕೆ ಬಂದು ನೆಲೆನಿಂತಿದ್ದಾರೆ. ಇದೂ ಒಂದು ಅಭಿಮಾನದ ಸಮಾಚಾರವೆ!

ಇಲ್ಲಿಯ ವರೆಗಿನ ವಿವೇಚನೆಯಿಂದ ಈ ಧರ್ಮಾಭಿಮಾನಿಗಳು ಪ್ರತಿವಾದಿಗಳ ಪಕ್ಷದವರೂ ಆಗಿದ್ದಾರೆ. ಮುಂದಕ್ಕೆ ಹೋಗಿ ನೋಡಿದರೆ ವಾದಿಗಳ ಪಕ್ಷದವರೂ ಆಗಿದ್ದಾರೆ ನಿಜಾಂಶ ಹೀಗಿದ್ದು "ವಚನಧರ್ಮ ಅರ್ಥಾತ್ ಲಿಂಗವಂತ ಧರ್ಮವು." ಎಂದು ಏಕೆ ಮೊದಲು ಮಾಡಬೇಕಾಗಿತ್ತೋ ತಿಳಿಯದು. ಇವರು ತಿಳಿಸುವ ತಿರುಳೇನೊ ಇವರು ನಿಂತ ನಿಲುವು ಯಾವುದೋ ವಾಚಕರೇ ಗುರುತಿಸಬೇಕು. ಇವರು ನಿಜವಾಗಿಯೂ ಧರ್ಮಾಭಿಮಾನಿಗಳಾಗಬೇಕಾದಲ್ಲಿ ಇವರ ಬುದ್ಧಿ ವಿಶಾಲವಾಗಬೇಕು; ಇವರ ಕಣ್ಣು ಇನ್ನೂ ದೂರ ಹರಿಯಬೇಕು.

ಇವರ ಸಂಕುಚಿತ ದೃಷ್ಟಿಗೆ ಇವರ ಅನನುಭವಕ್ಕೆ ಇನ್ನೊಂದು ನಿದರ್ಶನ. ಷಟ್‌ಸ್ಥಲಗಳಲ್ಲಿ ಕೊನೆಯ ಪ್ರಾಣಲಿಂಗಿ, ಶರಣ, ಐಕ್ಯಸ್ಥಲಗಳಿಗೆ ಕ್ರಮವಾಗಿ ಗುರು, ಭಕ್ತ, ವಿರಕ್ತರನ್ನು ಅಧಿಕಾರಿಗಳನ್ನಾಗಿ ಕಲ್ಪಿ

ಸಿದ್ದಾರೆ. ಇದಾವ ಶಾಸ್ತ್ರದಲ್ಲಿದೆಯೊ? ಇದಾವ ತತ್ವವೊ? ಇವರ ದೃಷ್ಟಿಯಲ್ಲಿ ಗುರುಗಳನ್ನು ಬಿಟ್ಟರೆ ಉಳಿದವರಿಗೆ ಪ್ರಾಣಲಿಂಗಿಸ್ಥಲವಿಲ್ಲ. ಭಕ್ತರನ್ನು ಬಿಟ್ಟರೆ ಉಳಿದವರಿಗೆ ಶರಣಸ್ಥಲವಿಲ್ಲ. ವಿರಕ್ತರನ್ನು ಬಿಟ್ಟರೆ ಐಕ್ಯಸ್ಥಲವಿಲ್ಲ. ವಿರಕ್ತರಿಗೆ ಉಳಿದ ಯಾವ ಸ್ಥಲದ ಅಧಿಕಾರವಿಲ್ಲ. ಭಕ್ತ, ಮಹೇಶ, ಪ್ರಸಾದಿಸ್ಥಲಗಳು ಯಾರಾರಿಗೋ ತಿಳಿಸಲಿಲ್ಲ. ವಿರಕ್ತರೇ ಐಕ್ಯಸ್ಥಲಾಧಿಕಾರಿಗಳಾದುದರಿಂದ ವೀರಶೈವವು ಎನೆಯ ಶತಮಾನದಿಂದೀಚಿನದಂತೆ! ಇದು ಇವರ ತೀರ್ಮಾನ. ಇದೊಂದು ಹೊಸ ಸಾಧನೆ. ಇದಕ್ಕೆ ಉತ್ತರಿಸುವರಾರು?

ಧರ್ಮಾಭಿಮಾನಿಗಳು ಮತ್ತೆ ಸಿದ್ಧಾಂತಶಿಖಾಮಣಿಯ ಮಾತೆತ್ತಿದ್ದಾರೆ. ಇದು ವಚನಗಳಿಂದೀಚಿನದೆಂದು ವಾದಿಸಿದ್ದಾರೆ. ಆಧಾರವಿಲ್ಲ. ಶಿವಯೋಗಿ ಶಿವಾಚಾರ್ಯರು ಸೊಲ್ಲಾಪುರದ ಸಿದ್ಧರಾಮೇಶ್ವರ ಶಿವಯೋಗಿಗಳ ತರುವಾಯದವರಂತೆ ವಂಶಜರಂತೆ! ಇವರು ತಮ್ಮನ್ನೇ ರೇಣುಕಾಚಾರ್ಯರೆಂದು ಕರೆದುಕೊಂಡಿದ್ದಾರಂತೆ! ಈ ಮಾತುಗಳಿಂದ ಈ ಧರ್ಮಾಭಿಮಾನಿಗಳಿಗೆ ಧರ್ಮದ ಮೂಲ ಸಿದ್ಧಾಂತ ಗ್ರಂಥವಾದ ಸಿದ್ಧಾಂತ ಶಿಖಾಮಣಿಯ ಗಂಧವೇ ಗೊತ್ತಿಲ್ಲ. ಈ ಕೃತಿಯ ಮೇಲೆ ಇವರಿಗೆ ಒರೆದ ಯಾವ ಯೋಗ್ಯತೆಯೂ ಇಲ್ಲೆಂಬುದನ್ನು ಸ್ಪಷ್ಟಪಡಿಸಿದ್ದಾರೆ. ಶಿವಯೋಗಿ ಶಿವಾಚಾರ್ಯರು ತಾವೇ ರೇಣುಕರೆಂದು ಅದೆಲ್ಲಿ ಹೇಳಿಕೊಂಡಿರುವರೋ ತಿಳಿಯದು. ಧರ್ಮಾಭಿಮಾನಿಗಳು ತಿಳಿಸಿದರೆ ಲೇಸು. ಸೊನ್ನಲಾಪುರದ ಸಿದ್ಧರಾಮೇಶ್ವರನ ವಂಶಜರೆಂದು ಎಲ್ಲಿಯೂ ಉಲ್ಲೇಖವಿಲ್ಲ. ಕೃತಿಯು ಈಚಿನದೆಂದು ಸಾಧಿಸಲು ಸುಳ್ಳು ಮಾತುಗಳನ್ನು ಬಳಸಿದ್ದಾರೆ. ಈ ವಿಷಯದಲ್ಲಿ ಇನ್ನೊಂದು ಪ್ರತ್ಯೇಕ ಲೇಖವನ್ನೇ ಬರೆಯಲಾಗುತ್ತದೆ. ಇವೆಲ್ಲವುಗಳಿಂದ ಧರ್ಮಾಭಿಮಾನಿಗಳ ಧೋರಣೆ ಎಂತಹದೆಂಬುದು ಎಗ್ಗಳವಾಗಿ ತೋರುತ್ತದಲ್ಲವೆ? ದ್ವೇಷದೂಷಿತವಾದ ಇವರ ದೃಷ್ಟಿ ತಿಳಿಯಾಗಲಿ. ಎರಡು ತತ್ವಗಳೂ ಸಮಾಜದ ಎರಡು ಕಣ್ಣುಗಳೆಂಬುದನ್ನು ಅರಿತು ಅಳವಡಿಸಿಕೊಳ್ಳಲಿ. ಆಗ ಇವರು ನಿಜವಾದ ಸಂಪೂರ್ಣವಾದ ಧರ್ಮಾಭಿಮಾನಿಗಳಾಗಬಲ್ಲರು; ಆಗುವರು.

—

# ಭಕ್ತಿಯೋಗ

[ ಲೇಖಕರು:- ಶ್ರೀ ಶಿವಾನಂದರು ಗವಿಮಠ, ತೆಗ್ಗಿಹಳ್ಳಿ. ತಾ॥ ಇಂಡಿ. ]



ಭಕ್ತಿಯೋಗವೆಂದರೆ ಪ್ರೇಮ ವಿಶ್ವಾಸ, ನಂಬಿಕೆಗಳಿಂದ ಸರ್ವ ಸಮರ್ಪಣ ಮಾಡಿ ಪರಮಾತ್ಮನೊಡಗೂಡಿ ಶರಣನಾಗುವದು. ಪೀಪಿಲಕ ದಿಂದ ಬೆಳೆಯುತ್ತ ಏರುತ, ಪ್ರಗತಿ ಹೊಂದುತ್ತ ಕ್ರಾಂತಿ ಉತ್ಕ್ರಾಂತಿ ಯಾಗುತ್ತ ಪೂರ್ಣ ಪರಿಪೂರ್ಣವಾಗುತ್ತ ಮಾನವನಾಗಿ ದೇವಮಾನವ ನಾಗುವದೇ ಈ ಜೀವಿತದ ಉದ್ದೇಶವಾಗಿದೆ. ದೇವ ಮಾನವನಾಗಲಿಕ್ಕೆ ಭಕ್ತಿ, ಕರ್ಮ, ಜ್ಞಾನ, ರಾಜ, ಮಂತ್ರ ಎಂದು ಮುಂತಾದ ಮಾರ್ಗಗಳಿ ರುವವು. ಈ ಎಲ್ಲವುಗಳಲ್ಲಿ ಭಕ್ತಿಯೋಗವೇ ಶ್ರೇಷ್ಠವೆನಿಸುವದು.

ಕರ್ಮಯೋಗವೆಂದರೆ ನಿಷ್ಕಾಮಕರ್ಮ ಮಾಡಿ ಅಂದರೆ ಯಾವತ್ತೂ ಕರ್ಮಗಳನ್ನು ದಾಸೋಹಂ ಭಾವದಿಂದ ಪರಮಾತ್ಮನಿಗೆ ಅರ್ಥಾತ್ ಪರ ರಿಗೆ ಅದರ ಫಲಗಳನ್ನೆಲ್ಲ ಅರ್ಪಿಸುತ್ತ ಕರ್ಮಮಾಡುವದು. ಇದು ಶಿವ ಶರಣರ ಕಾಯಕ ಮಾರ್ಗವೆಂದು ಹೇಳಬಹುದು. "ನಾನು ಆರಂಭವ ಮಾಡುವೆನಯ್ಯ ಗುರುಪೂಜೆಗೆಂದು; ಬೇವ ಹಾರವ ಮಾಡುವೆನಯ್ಯ ಲಿಂಗಾರ್ಚನೆಗೆಂದು; ಪರಸೇವೆಯ ಮಾಡುವೆನಯ್ಯ ಜಂಗಮ ದಾಸೋಹ ಕ್ಕೆಂದು ನಾನಾ ಕರ್ಮ ಮಾಡಿದರೂ ಆ ಕರ್ಮದ ಫಲಭೋಗವ ನೀ ಕೊಡುವೆ ಎಂಬುದು ನಾ ಬಲ್ಲೆ. ನೀ ಕೊಟ್ಟ ದ್ರವ್ಯವ ನಿಮಗಲ್ಲದೆ ಮತ್ತೊಂದಕ್ಕೆ ಮಾಡೆನು. ನಿಮ್ಮ ಸೊಮ್ಮು ನಿಮಗೆ ಸಲ್ಲಿಸುವೆನು. ನಿಮ್ಮಾಣೆ ಕೂಡಲ ಸಂಗಮದೇವ" ಕಾಯಕದ ಫಲಗಳನ್ನೆಲ್ಲ ಪಂಹಿತಕ್ಕೆ ದೇಶ ಸೇವೆಗೆ ಸಲ್ಲಿಸಬೇಕೆಂದೇ ಅದೆ. ಕಾಯಕದ ಫಲಗಳನ್ನು ತಾನು ಭೋಗಿಸದೆ ಎಲ್ಲವನ್ನು ಶಿವಾರ್ಪಣ ಭಾವದಿಂದ ಪರರಿಗೆ ಕೊಡುವದು ಬಹು ಕಠಿಣ. ಅಲ್ಲದೆ ಅಕರ್ಮ, ವಿಕರ್ಮ, ಕುಕರ್ಮ, ನಿಯತಕರ್ಮ, ನಿಷ್ಕಾಮಕರ್ಮಗಳ ಸೂಕ್ಷ್ಮ ಭೇದ ತಿಳಿದು ಮಾಡತಕ್ಕ ಕರ್ಮಗಳನ್ನು ನಿಷ್ಕಾಮವಾಗಿ ಮಾಡುವದು ಕಠಿಣ. ಹೀಗೆ ಸಾಧಿಸಿದ್ದಾರೆ. ಅದೇ ಕಾಯ ಕವೇ ಕೈಲಾಸವಾಗುವದು. ಕರ್ಮ ಮಾರ್ಗವು ಬಹು ಗಹನವೆಂದು ಗೀತೆಯಲ್ಲಿ ಹೇಳಿದೆ.

# ವಿಷಯಾನುಕ್ರಮಣಿಕೆ

# ಶಿವಾನುಭವ


| ವರ್ಷ ೨೮ | ಜೂನ ೧೯೫೪ | ಸಂಚಿಕೆ ೬ |
| --- | --- | --- |


## ವಚನಶಾಸ್ತ್ರ ಪ್ರಪಿತಾಮಹ

[ ಲೇ:- ಶ್ರೀಯುತ ಮ. ಮಲ್ಲಪ್ಪ. ಜ್ಞಾನಮಂದಿರ, ಹಲಗೂರು. ]



ಕನ್ನಡೇತರರು ಬಂದು ಕನ್ನಡಿಗರನ್ನು ನಿಮ್ಮ ಸಾಹಿತ್ಯದಲ್ಲಿ ವಿಶೇಷಾಂಶವೇನಿದೆಯೆಂದು ಕೇಳಿದಾಗ, ವಚನಶಾಸ್ತ್ರವನ್ನು ಎತ್ತಿ ತೋರಿಸಿ, ಕನ್ನಡದಲ್ಲಿನ ಸಾರಭೂತವಾದ ವಿಶೇಷಾಂಶವು ವಚನಶಾಸ್ತ್ರವು. ಇದರಲ್ಲಿ ಒಂದು ವಿಶೇಷವಾದ ಮಾನುಷಾನುಭವ, ಮಾನುಷ ಪರಿಶ್ರಮ ಮತ್ತು ಮಾನುಷ ಹಿತಚಿಂತನೆಯು ಕಾಣಬರುತ್ತದೆ.

—ಡಿ. ವಿ. ಗುಂಡಪ್ಪ

ಕನ್ನಡ ಸಾಹಿತ್ಯದ ತಪೋವನದಲ್ಲಿ ತಪಸ್ವಿಗಳಂತಿರುವ ಮಹಾ ಶಿವಶರಣರ ಉಪನಿಷತ್ ಸದೃಶವಾದ ವಚನ ಪರಿಚಯವು ಬಹುಮಟ್ಟಿಗೆ ಬಹಳ ದಿವಸಗಳ ವರೆಗೆ ಕನ್ನಡಿಗರಿಗೆ ಆಗದೆ ಇದ್ದಿತು. ಕನ್ನಡ ನಾಡು ಋಷಿಗಳ ನೆಲೆವೀಡು. ನಮ್ಮ ದೇಶಕ್ಕಾಗಿ, ಸಂಸ್ಕೃತಿಗಾಗಿ, ಸಾಹಿತ್ಯಕ್ಕಾಗಿ, ಧರ್ಮಕ್ಕಾಗಿ ಇಡೀ ಆಯುಷ್ಯವನ್ನು ಮೀಸಲು ಮಾಡಿ, ಪುನೀತರಾದ ಪುಣ್ಯಪುರುಷರಿಗೆ ಏನೂ ಕಡಿಮೆಯಿಲ್ಲ ಎಂಬುದು ಹಿಂದಿನ ಹಾಗೂ ಇಂದಿನ ಚರಿತ್ರೆಗಳಿಂದ ತಿಳಿಯುವುದು. ನ್ಯಾಯವಾದಿಗಳ ಜೀವನವನ್ನು ನೂಕುತ್ತಿದ್ದಂತೆಯೇ ಹಳ್ಳಿಗಳಿಗೆ ಹೋಗಿಬರುವ ಪ್ರಸಂಗಗಳು ಮೇಲಿಂದ ಮೇಲೆ ವಿಜಾಪುರ ಜಿಲ್ಲೆಯವರಿಗೊಬ್ಬರಿಗೆ ಲಭ್ಯವಾಯಿತು. ಹಾಗೆಯೇ ಹೋಗುವ ಹೋಗುತ್ತಿದ್ದಂತೆಲ್ಲ ಕೈಬರಹದ ಗ್ರಂಥ ಹಾಗು ತಾಳಿಯೋಲೆಗಳನ್ನು ಸಂಗ್ರ

ಹಿಸಿ, ಪರಿಶೋಧಿಸುತ್ತ ಇರುವಲ್ಲಿ ವಚನಶಾಸ್ತ್ರದತ್ತ ದೊಡ್ಡ ಗೀಳು ಗುಟ್ಟು ಗುಟ್ಟುವಂತಾಯಿತು. ಗಣಭಾಷ್ಯ ರತ್ನಮಾಲೆಯನ್ನು ನೋಡು ನೋಡುತ್ತ ವಚನಶಾಸ್ತ್ರದಲ್ಲಿ ಉಚ್ಚ ತತ್ವಗಳಿವೆ ಎಂಬ ಅರಿವನ್ನು ಅರ್ಜಿಸಿ, ಮೂರ ನೂರು ವಚನಕಾರರ ಸಮಗ್ರ ಇತಿಹಾಸವನ್ನು ಸಿದ್ಧಪಡಿಸಿ, ಆ ವಚನ ಶಾಸ್ತ್ರ ಪ್ರಚಾರಕ್ಕಾಗಿಯೇ ೧೯೨೬ರಲ್ಲಿ ಶಿವಾನುಭವ ಪತ್ರಿಕೆಯನ್ನು ಆರಂಭಿಸಿ, ಅದರ ಮೂಲಕ ವಚನಶಾಸ್ತ್ರದ ಗ್ರಂಥಗಳನ್ನು ಪ್ರಕಟಿಸಿ, ಉಪಕಾರ ಮಾಡಿ, ದುಡಿದು ಗಣ್ಯಪುರುಷರಾಗಿ ಸೇವೆ ಸಲ್ಲಿಸುತ್ತಿರುವ ಮಹನೀಯ ರೊಬ್ಬರು ವಚನಶಾಸ್ತ್ರ ಪ್ರಪಿತಾಮಹರಾಗಿ ಕನ್ನಡಿಗರಿಂದ ಗಣಿಸಲ್ಪಟ್ಟಿದ್ದಾರೆ. ಇವರೇ ರಾವಬಹದ್ದೂರ ಫಕೀರಪ್ಪ ಗುರುಬಸಪ್ಪ ಹಳಕಟ್ಟಿಯವರು.

ಇವರ ವಾಸಸ್ಥಳ ಬಿಜಾಪುರವು. ತಂದೆಯವರು ಗುರುಬಸವಪ್ಪ. ಶ್ರೀ ಹಳಕಟ್ಟಿಯವರು ವಿಶ್ವವಿದ್ಯಾನಿಲಯದ ಪದವೀಧರರೂ ಅಲ್ಲದೆ ವಕೀಲಿ ಪರೀಕ್ಷೆಯಲ್ಲಿಯೂ ಉತ್ತೀರ್ಣರಾಗಿದ್ದಾರೆ. ಆಧುನಿಕದಲ್ಲಿ ಪಳಗಿದ್ದರೂ ಪ್ರಾಚೀನ ಪರಂಪರಾಕಲ್ಪವನ್ನು ಮಾತ್ರ ಬಿಡುವಂತಿಲ್ಲ. ೧೯೨೬ರಲ್ಲಿ ಬಳ್ಳಾರಿ ಯಲ್ಲಿ ನಡೆದ ಸಾಹಿತ್ಯ ಸಮ್ಮೇಳನದಲ್ಲಿ ಅಧ್ಯಕ್ಷ ಪೀಠವನ್ನು ಅಲಂಕರಿಸಿ, ಸಮ್ಮೇಳನಕ್ಕೆ ಕಳೆ ತುಂಬಿ ಅನರ್ಘ್ಯ ಸಲಹೆಗಳಿಂದ ಜನಜಾಗೃತಿಯನ್ನುಂಟು ಮಾಡಿದರು. ಇವರು ಕೆಲವು ವರ್ಷ ಬೆಳಗಾವಿಯಲ್ಲಿ ವಕೀಲಿ ಕೆಲಸ ಮಾಡಿ ಪ್ರಸಿದ್ಧಿಗೆ ಬಂದರು. ಬೆಳಗಾವಿಯಿಂದ ಬಿಜಾಪುರಕ್ಕೆ ಬಂದವೇಳೆ ಇವರಿಗೆ ಸಾಹಿತ್ಯದ ಕಡೆಗೆ ಪ್ರೀತಿಯು ಹೆಚ್ಚಿಗೆ ತಿರುಗಿತು. ಇದರಿಂದಲಾಗಿ ಪ್ರಾಚೀನ ಗ್ರಂಥದ ಕಟ್ಟುಗಳಿಗೆ ಗುರುಬಲ ಬರುವುದರ ಮೂಲಕ ಕರ್ನಾ ಟಕಕ್ಕೆ ಮಹದುಪಕಾರವಾಯಿತು. ಮುಂಬಯಿಯ ಶಾಸನ ಸಭಾಸದಸ್ಯರಾಗಿ, ಕರ್ನಾಟಕ ಏಕೀಕರಣ ಸಮ್ಮೇಳನದ ಅಧ್ಯಕ್ಷರಾಗಿ, ಧಾರವಾಡದಲ್ಲಾದ ಅಖಿಲಭಾರತ ವೀರಶೈವ ಮಹಾ ಸಭಾಧ್ಯಕ್ಷರಾಗಿ, ಪುಣೆಯಲ್ಲಾದ ಕೈಗಾರಿಕಾ ಸಮ್ಮೇಳನಾಧ್ಯಕ್ಷರಾಗಿ, ಬಿಜಾಪುರದಲ್ಲಾದ ಸಾಹಿತ್ಯ ಸಮ್ಮೇಳನದ ಸ್ವಾಗ ತಾಧ್ಯಕ್ಷರಾಗಿ ಸೇವೆ ಸಲ್ಲಿಸಿದರು. ಬಿಜಾಪುರದ ಸಿದ್ಧೇಶ್ವರ ಸಂಸ್ಥೆ, ಬರಗಾಲ ಪರಿಹಾರಕ ಸಂಸ್ಥೆ, ಶಿಕ್ಷಣ ಸಮಿತಿ ಇವುಗಳ ಬಂಧುಗಳಾಗಿ ಬಾಳಿ, ವಿಶಾಲ ಜೀವನಾದರ್ಶಕ್ಕೆ ಇವರು ಉದಾಹರಣೆಯಾಗಿಲ್ಲವೇ ? ಇಂತಹವರಿಂದ ತಾನೇ 'ಉದಾರ ಚರಿತಾನಾಂ ತು ವಸುಧೈವ ಕುಟುಂಬಕಂ' ಎಂಬ ತತ್ವವು ಜನಿಸಿರು ವುದು. ಶಿವಾನುಭವ ಪತ್ರಿಕೆ, ಶಿವಾನುಭವ ಗ್ರಂಥಮಾಲೆ ಮತ್ತು ನವ ಕರ್ನಾಟಕ ಪತ್ರಿಕೆಗಳನ್ನು ನಡೆಯಿಸಿಕೊಂಡು ಹೋಗುತ್ತ, ಕಷ್ಟನಷ್ಟಗಳನ್ನು

ಗಣನೆಗೆ ತಂದುಕೊಳ್ಳದೆ ನಾಡು ನುಡಿಗಳ ಸೇವೆಯನ್ನು ನಿಷ್ಕಾಮಕರ್ಮ ಯೋಗದಿಂದ ಸಲ್ಲಿಸುತ್ತ ಬಂದಿರುವ ಇವರು ಪತ್ರಿಕೋದ್ಯೋಗಿಗಳಿಗೂ ಸಾಹಿತ್ಯ ಸೇವಕರಿಗೂ ಆದರ್ಶರಾಗಿರುವರು. ರಾಜಕಾರಣಿಗಳಾಗಿ, ಸಮಾಜ ಸುಧಾರಕರಾಗಿ, ಗ್ರಂಥಕಾರರಾಗಿ, ಪತ್ರಿಕಾ ಸಂಪಾದಕರಾಗಿ, ಶಿಕ್ಷಣ ಪ್ರಚಾರಕರಾಗಿ, ವಾಙ್ಮಯ ತಪಸ್ವಿಗಳಾಗಿ, ಮೇಲಾಗಿ ಹಿರಿಯ ವಚನಶಾಸ್ತ್ರ ಪರಿಶೋಧಕರಾಗಿ, ಸಂಯಮ ಜೀವನವನ್ನು ನಡೆಯಿಸುತ್ತ, ಲೌಕಿಕ ವ್ಯಾಪಾರಗಳಲ್ಲಿ ನಿರತರಾಗಿ ವಕೀಲವೃತ್ತಿಯ ಹೊರೆಯನ್ನು ಹೊತ್ತಿದ್ದರೂ ಸೇವಾ ಪುರುಷ ಪುಂಗವರಾಗಿ, ಇವರು ಈಗಲೂ ದುಡಿಯುತ್ತಿರುವರು.

ವೀರಶೈವ ಧರ್ಮ, ಸಂಸ್ಕೃತಿ, ಸಾಹಿತ್ಯ ಹಾಗೂ ಇತಿಹಾಸಗಳು ಇವರಿಂದ ಉದಾತ್ತವಾದವು ಲಿಂಗಾಯಿತ ಕವಿಗಳು ನಿರ್ಮಿಸಿರುವ ಅಪಾರ ಗ್ರಂಥಸಮೂಹವು ಹೊರಬಂದು ಬೆಳಕು ಕಾಣುವ ಪ್ರಮೇಯ ಪ್ರವಹಿಸುತ್ತಿತ್ತು. ಈ ಕಾರ್ಯವನ್ನು ಈಗ್ಗೆ ಕಾಲು ಶತಮಾನದ ಹಿಂದೆಯೇ ಶ್ರೀ ಹಳಕಟ್ಟಿಯವರು ಶಿವಾನುಭವ ಪತ್ರಿಕೆಗಳ ಮೂಲಕ ಕೈಕೊಂಡರು. ಇದಕ್ಕಾಗಿಯೇ ಸ್ವತಂತ್ರವಾಗಿ ಹಿತಚಿಂತಕ ಮುದ್ರಣಾಲಯವನ್ನು ಸ್ಥಾಪಿಸಿ ನಿಂತರು. ಕನ್ನಡ ಸಾಹಿತ್ಯದಲ್ಲಿ ವಚನಗಳು ಅತ್ಯಂತ ಉತ್ತಮ ಮಟ್ಟಕ್ಕೆ ಸೇರಿದವುಗಳೆಂದೂ, ಭಾರತದ ಮತ್ತಿನ್ನಾವ ಪ್ರಾಂತದ ಭಾಷೆಯಲ್ಲಿಯೂ ಈ ಬಗೆಯ ಸಾಹಿತ್ಯವಿಲ್ಲವೆಂದೂ ಸಂಸ್ಕೃತಭಾಷೆಯ ಉಪನಿಷತ್ತುಗಳಿಗೆ ಸರಿಸಾಟಿಯಾಗಿರುವುವು. ಮೈಸೂರು, ಮುಂಬಯಿ ವಿಶ್ವವಿದ್ಯಾನಿಲಯಗಳಲ್ಲಿ ವಚನಗ್ರಂಥಗಳು ಪಠ್ಯ ಪುಸ್ತಕವಾಗಿ ನಿಯಮಿತವಾದುದೇ ಈ ಸಾಹಿತ್ಯದ ಮೇಲ್ಮೆಗೆ ಸಲೆಸಾಕ್ಷಿಯಾಗಿದೆ. ಈ ಬಗೆಯ ಉತ್ಕೃತರ ವಚನಸಾಹಿತ್ಯವನ್ನು ಬಾಲ್ಯದಿಂದೂ ಚನ್ನಾಗಿ ಅಭ್ಯಾಸ ಮಾಡಿ ಅದರಲ್ಲಿ ಅನುಭವವನ್ನೂ, ಪಾಂಡಿತ್ಯವನ್ನೂ ಪಡೆದು, 'ವಚನಶಾಸ್ತ್ರಸಾರ' ಎಂಬ ಹೆಸರಿನಿಂದ ನಾಲ್ಕು ಭಾಗಗಳನ್ನೂ, 'ಶಿವಶರಣರ ಚರಿತ್ರೆಗಳು' ಎಂಬ ಪರಿಶೋಧನಾ ಜ್ಞಾನದ ಗ್ರಂಥಗಳನ್ನೂ ಹೊರಡಿಸಿರುವದರ ಜೊತೆಗೆ 'ಶಿವಾನುಭವ ಸತ್ಯಮಾರ್ಗ' ಹಾಗೂ 'ಶ್ರೀ ಬಸವೇಶ್ವರನ ತತ್ವಗಳು' ಬರಹ ಸಂಕಲನ ಕೃತಿಗಳನ್ನು ಇವರು ಕನ್ನಡಿಗರಿಗೆ ಕೊಟ್ಟರು. ಬಸವೇಶ್ವರ ಚರಿತ್ರೆ, ಶಿವಾನುಭವ ಶಬ್ದಕೋಶ, ಶೂನ್ಯ ಸಂಪಾದನೆ ನೈತಿಕ ಮತ್ತು ಭಕ್ತಿಯ ವಚನಗಳು, ಲಿಂಗ ಮತ್ತು ಪರಮಾತ್ಮ ಎಂಬ ಉದ್ಗ್ರಂಥಗಳನ್ನು ಸಂಪಾದಿಸಿ ಪ್ರಕಟಣೆ ಮಾಡಿ ನಾಡಿನಲ್ಲಿ ನವಜ್ಯೋತಿಯನ್ನು

ಪ್ರಕಶಿಸಿರುವರು- ನಿರಂಜನವಂಶ ರತ್ನಾಕರ, ಕಾಲಜ್ಞಾನ ವಚನ, ಬಸವೇಶ್ವರರ ಷಟ್ಸ್ಥಲ ವಚನದ ಕಥಾಸಾರ ಎಂಬ ಗ್ರಂಥಗಳು ವಚನ ವಾಙ್ಮಯದಂತೆ ಕಂಡರೂ, ಚರಿತ್ರ ಸಂಶೋಧಕರಿಗೆ ಅತ್ಯಂತ ಉಪಯುಕ್ತವಾಗಿವೆ. ಬಸವೇಶ್ವರ, ಪ್ರಭುದೇವರು, ಚನ್ನಬಸವೇಶ್ವರ, ಸಿದ್ಧರಾಮ, ಅಕ್ಕ ಮಹಾದೇವಿ, ದೇವರ ದಾಸಿಮಯ್ಯ, ಅಂಬಿಗರ ಚೌಡಯ್ಯ, ಮಡಿವಾಳ ಮಾಚಿದೇವ, ಸಕಲೇಶ ಮಾದರಸ, ಉರಿಲಿಂಗಪೆದ್ದಿ, ಘನಲಿಂಗದೇವ, ಗಣದಾಸಿ ವೀರಣ್ಣ, ಆದಯ್ಯ, ಸಂಗನ ಬಸವೇಶ್ವರ, ಹಡಪದ ಅಪ್ಪಣ್ಣ ಎಂಬ ಶಿವಶರಣರ ವಚನ ಗ್ರಂಥಗಳ ಪ್ರಕಟಣೆಯು ಇವರಿಂದ ನಡೆದು, ವೀರಶೈವ ಸಾಹಿತ್ಯ ಸಂಶೋಧಕರಿಗೂ, ಶರಣ ಜೀವನ ಚರಿತ್ರಕಾರರಿಗೂ ಅಮೌಲ್ಯವಾದ ಆಕರವು ಲಭಿಸಿದೆ. ಈ ಪತ್ರಿಕೆಯಲ್ಲಿ ಷಟ್ಸ್ಥಲ ವಿವರಣೆ ಮೊದಲಾದ ಕ್ಲಿಷ್ಟ ವಿಚಾರಗಳ ಬಗ್ಗೆ ಇವರು ಬರೆದಿರುವ ನೂರಾರು ಬರಹಗಳಿಂದ ಇವರ ಶಾಸ್ತ್ರ ಜ್ಞಾನವು ಜಗದುಪಕಾರವಾಗಿ ಪರಿಣಮಿಸಿದೆ. ಶರಣ ಪಂಥದ ವಿಷಯದಲ್ಲಿ ಅನೇಕ ಸಂದೇಹಗಳು ಪರಿಹಾರವಾಗಿವೆ.

ಶಿವಾನುಭವ ಪತ್ರಿಕೆಯು ವೀರಶೈವ ಸಮಾಜಕ್ಕೆ ಅತ್ಯಂತ ಮಹದುಪಕಾರವನ್ನು ಮಾಡಿದೆ. ವೀರಶೈವ ಮತದ ಇತಿಹಾಸವನ್ನು ಅರಿಯಲು ಸಾಧನವಾದ ಶಾಸನಗಳನ್ನೂ, ಗ್ರಂಥಗಳನ್ನೂ ಪ್ರಕಟಿಸಿ, ಸಮಾಜದಲ್ಲಿ ರೂಢಿಯಾಗಿದ್ದ ಅನೇಕ ಕುರುಡು ಕಂಡಾಚಾರದ ಪದ್ಧತಿಗಳನ್ನು ನಿವಾರಿಸಲು ಸಹಾಯ ಮಾಡಿದೆ. ದೇವರ ದಾಸಿಮಯ್ಯ, ಬಸವೇಶ್ವರ, ರೇವಣಸಿದ್ಧ, ಏಕಾಂತದರಾಮಯ್ಯ, ಸಿಮ್ಮಲಿಗೆದೇವ ಮುಂತಾದವರ ವಿಚಾರವಾಗಿ ಬರೆದ ಬರಹಗಳು ಸಂಶೋಧನ ದೃಷ್ಟಿಯಲ್ಲಿ ಗಮನಾರ್ಹವಾಗಿವೆ. ಈ ಪತ್ರಿಕೆಯಲ್ಲಿ ಈ ಬಗೆಯಾಗಿ ಪ್ರಕಟವಾದ ಲೇಖನಗಳು ಕರ್ನಾಟಕದ ಸಂಪತ್ತನ್ನು ಹೆಚ್ಚಿಸಿದುದರ ಜೊತೆಗೆ ಸಂಶೋಧಕರಿಗೆ ದಾರಿಮಾಡಿಕೊಟ್ಟಿವೆ. ಬಿಳಗಿ ದೊರೆಗಳ ವಂಶಾವಳಿ, ಕೊಡಗಿನ ವೀರರಾಜೇಂದ್ರನಾಮೆ ಇತ್ಯಾದಿ ಗ್ರಂಥಗಳು ಅಪಾರ ಉಪಕಾರವನ್ನು ನೀಡಬಲ್ಲವು. ವೀರಶೈವ ರಾಜರು, ವೀರಶೈವ ಮಠಗಳು, ವೀರಶೈವ ಗ್ರಂಥಗಳು, ವೀರಶೈವ ವಿಭೂತಿಗಳು ಇವರ ಬಗ್ಗೆ ಅನೇಕ ಮಹತ್ವಪೂರಿತವಾದ ಲೇಖನಗಳಲ್ಲದೆ, ಡಾ. ನಂದೀಮಠ, ಪಂಡಿತರತ್ನ ಬಿ. ಶಿವಮೂರ್ತಿಶಾಸ್ತ್ರಿ, ಹಲಸಂಗಿ ಚನ್ನಮಲ್ಲಪ್ಪ ಇವರಿಂದ ಬಂದ ಬರಹಗಳೂ ಗಣನೀಯವಾಗಿವೆ.

ವೇದವಾಙ್ಮಯದಲ್ಲಿನ ಮುಖ್ಯ ತತ್ವಗಳನ್ನು ವೀರಶೈವ ತತ್ವವು ಅಂಗೀಕರಿಸಿದೆ. ವೀರಶೈವ ಷಟ್ಸ್ಥಲಸಿದ್ಧಾಂತದಲ್ಲಿ ಉಪನಿಷತ್ತು, ಭಗವದ್ಗೀತೆ, ಸಾಂಖ್ಯಶಾಸ್ತ್ರ, ಯೋಗಶಾಸ್ತ್ರಾದಿ ತತ್ವಗಳನ್ನು ನಾವು ನೋಡುತ್ತೇವೆ. ಶಿವಶರಣರು ಈ ಗ್ರಂಥಗಳಲ್ಲಿರುವ ಉನ್ನತ ತತ್ವಗಳನ್ನು ತಮ್ಮ ಸಿದ್ಧಾಂತದಲ್ಲಿ ಹೆಣೆದಿದ್ದಾರೆ. ಬಾಹ್ಯಸನ್ನಿವೇಶಗಳು ಕೇವಲ ಬಾಹ್ಯಕಾರಣವಾಗಿ ಕಾವ್ಯ ವಸ್ತುವೆಲ್ಲ ಮೇಲಿನ ಜಗತ್ತಿನಿಂದಲೇ ಬರುತ್ತವೆ ಎಂಬ ಅರವಿಂದ ವಾಣಿಯು ಈ ಶರಣಸಾಹಿತ್ಯದಿಂದ ಅರಿವಾಗುತ್ತದೆ. ಈ ಮತತತ್ವಗಳು ಬಹಳ ಸೂಕ್ಷ್ಮವಾಗಿದ್ದು ಇದರ ಹೆಚ್ಚಿನ ಭಾಗದ ಗ್ರಂಥವು ಪ್ರಕಟವಾಗದೆ ಇದ್ದುದರಿಂದಲೂ, ಈ ಸಮಾಜದಲ್ಲಿ ತತ್ವವ್ಯಾಸಂಗಿಗಳ ಸಂಖ್ಯೆ ಕಮ್ಮಿಯಾಗಿರುವುದರಿಂದಲೂ ಈ ತತ್ವವು ಕೊಳಚಿಯಲ್ಲಿ ನಿಂತುನಾರುವ ಸಮಯದಲ್ಲಿ ಶಿವಾನುಭವ ಪತ್ರಿಕೆಯಲ್ಲಿ ವೀರಶೈವ ಮತತತ್ವದ ಬಗ್ಗೆ ಪಂಡಿತರಿಂದ, ತಜ್ಞರಿಂದ ಅನೇಕ ನಿಂತತತ್ವಗಳು ಪ್ರಕಟವಾಗಿ ನಾರುವುದು ಮರೆತುಹೋಯಿತು ವಿದ್ವಾನ್ ನಾಗೇಶಶಾಸ್ತ್ರಿ, ಪಾವಟೆ ಸಿದ್ಧರಾಮಪ್ಪ, ಯಗಟಿ ವಕೀಲರು ಇತ್ಯಾದಿ ಮಹನೀಯರು ಹಲವು ಗೂಢತಮ ವಿಚಾರಗಳನ್ನು ಈ ಪತ್ರಿಕೆಯಮೂಲಕ ಪ್ರಕಟಿಸಿದರು. ಲಿಂಗಧಾರಣೆ, ಶಿವದೀಕ್ಷೆ, ಅಷ್ಟಾವರಣ. ಪಂಚಾಚಾರ, ಷಟ್ಸ್ಥಲ, ಶಿವಯೋಗ, ಶಿವಾನುಭವ, ಕಾಯಕ, ಲಿಂಗವಂತ ಸಂಸ್ಕೃತಿ ಇತ್ಯಾದಿ ವಿಷಯಗಳು ಅತ್ಯಂತ ಸ್ವಾರಸ್ಯವಾಗಿ ಇದರಲ್ಲಿ ವಿವರಿಸಲ್ಪಟ್ಟಿವೆ. ವೀರಶೈವರಿಗೆ ಬೇಕಾದ ಅನೇಕ ಜ್ಞಾನವನ್ನು ಶಿವಾನುಭವ ಪತ್ರಿಕೆಯು ಒದಗಿಸಿಕೊಟ್ಟು ವೀರಶೈವರ ವಸ್ತುಕೋಶವೆನಿಸಿಕೊಂಡಿದೆ. ಯಾವ ನಿಂದೆ ಕುಂದಿಗೂ ಶಿವಾನುಭವ ಪತ್ರಿಕೆಯು ಗುರಿಯಾಗದೆ ನಿಷ್ಪಕ್ಷಪಾತವೂ, ಸತ್ಯಸಂಶೋಧಕವೂ ಪ್ರಗತಿಪರವೂ, ಉದಾರವೂ ಆದ ಹಾದಿಯಲ್ಲಿ ಹೋಗುವಂತೆ ಮಾಡಿನ ಮಹಾಸಾಹಸಿಗಳು ಶ್ರೀ ಹಳಕಟ್ಟಿಯವರು.

ಕನ್ನಡ ಸಾಹಿತ್ಯದಲ್ಲಿ ವಚನ ಸಾಹಿತ್ಯದಂತೆ ರಘಟಾ ಸಾಹಿತ್ಯವೂ ಕೂಡ ಸ್ವಾರಸ್ಯವಾಗ, ಕ್ರಾಂತಿಕಾರಕವಾಗಿ ಇದೆ. ಮನೋಹರವಾದ ಈ ರಘಟಾ ಛಂದಸ್ಸಿನಲ್ಲಿ ವೀರಶೈವ ಕವಿಗಳು ಗ್ರಂಥ ನಿರ್ಮಾಣ ಮಾಡಿದ್ದಾರೆ. ಈ ಬಗೆಯ ಕವಿಗಳಲ್ಲಿ ಮಹಾನುಭಾವನೂ, ಮಹಾಕವಿಯೂ ಆದ ಹಂಪೆಯ ಹರಿಹರನು ಅಗ್ರಗಣ್ಯನಾಗಿದ್ದಾನೆ. ಶ್ರೀ ಹಳಕಟ್ಟಿಯವರು ಪಂಡಿತ ರತ್ನ ಬ. ಶಿವಮೂರ್ತಿ ಶಾಸ್ತ್ರಿಗಳ ಸಾಹಸದಿಂದಲೂ, ಶ್ರೀ. ವಿ. ಬ. ಹಾಲಭಾವಿಯವರ ಸಹಾಯದಿಂದಲೂ ಹರಿಹರನ ರಗಳೆಗಳನ್ನು ಸಂಗ್ರ

ಹಿಸಿ ಪ್ರಕಟಿಸಿ ಮಹದುಪಕಾರ ಮಾಡಿದ್ದಾರೆ. ಶ್ರೀ ಹಳಕಟ್ಟಿಯವರ ಸೇವೆಯು ಸರ್ವತೋಮುಖವಾದುದಲ್ಲದೆ ಸರ್ವಬಗೆಯ ಗ್ರಂಥಗಳು ಹೊರಬರಲು ಸಹಾಯವಾಗಿದೆ. ಶಿವಾನುಭವ ದರ್ಪಣ, ಸಿದ್ಧಲಿಂಗೇಶ್ವರ ಏಕೋತ್ತರ ಶತಸ್ಥಲ, ಸಟೀಕ ಮಹಿಮ್ನ ಸ್ತೋತ್ರ, ವರದಾನಿ ಗುಡ್ಡಮ್ಮ ಚರಿತೆ, ಆದಿಶೆಟ್ಟಿ ಪುರಾಣ, ಶಿವಾನುಭವ ಸೂತ್ರಸಾರ, ಡೆಪ್ಯುಟಿ ಚನ್ನಬಸವಪ್ಪನವರ ಚರಿತ್ರೆ ಇತ್ಯಾದಿ ಗ್ರಂಥಗಳನ್ನು ಇವರು ಪ್ರಕಟಿಸಿರುವವನ್ನು ನೋಡಿದರೆ ಇವರ ವೈವಿಧ್ಯ ಜ್ಞಾನಕ್ಕೆ ಕುರುಹು ಆಗಿದೆ.

ಇಲ್ಲಿಯವರೆಗೆ ಇವರು ಮಾಡಿದ ಸಾಹಿತ್ಯಸೇವೆಯಿಂದ ಕನ್ನಡ ಸಾಹಿತ್ಯಾಭ್ಯಾಸಿಗಳಿಗೆ ಮಹದುಪಕಾರವಲ್ಲದೆ ಆಧುನಿಕ ಕನ್ನಡ ಸಾಹಿತ್ಯಕ್ಕೆ ನೂತನ ಜೀವಕಳೆಯನ್ನು ಕೊಟ್ಟಿದುದರ ಜೊತೆಗೆ ಅನೇಕ ಪ್ರಕಟನೆಗಳಿಗೆ ಸ್ಫೂರ್ತಿಯನ್ನು ಕೊಟ್ಟಿದೆ. ವೀರಶೈವ ಸಾಹಿತ್ಯದಲ್ಲಿ ಪಂಡಿತರಿಗೆ ಉಂಟಾಗಿರುವ ಅಕ್ಕರೆ ಆದರಣೆಗಳಿಗೆ ಶ್ರೀ ಹಳಕಟ್ಟಿಯವರ ಸಾಹಿತ್ಯಸೃಷ್ಟಿಯೇ ಎನ್ನಬಹುದು. ವಚನಶಾಸ್ತ್ರ ರಹಸ್ಯ, ಭಕ್ತಿಭಾಂಡಾರಿ ಬಸವಣ್ಣ, ಅಕ್ಕಮಹಾದೇವಿ ನಾಟಕ, ಅಕ್ಕಮಹಾದೇವಿ ಚರಿತ್ರೆ, ವೈರಾಗ್ಯನಿಧಿ ಅಕ್ಕಮಹಾದೇವಿ, ಹರಿಹರನ ರಗಳೆಯ ಕಥೆಗಳು, ಮಹಾತ್ಮ ಬಸವೇಶ್ವರನ ವಚನ. *Songs of Basaveswara*, *Musings of Basava* ಇತ್ಯಾದಿ ಗ್ರಂಥಗಳಿಗೆ ಇವರ ಕೃತಿಗಳು ಪ್ರಚೋದಕವಾಗಿವೆ. *There is no more fruitful souree than the enchanting eseploration of the great literatures of the past* ಎಂದಿರುದ ಸಾಮರ್ಸೆಟ್ ಮೋಗಾಮನ ನುಡಿಯು ಇವರ ಬಾಳಿನಲ್ಲಿ ಒಗೆಗೊಂಡಿದೆ. ಈಗಾಗಲೇ ಇವರ ತಪಸ್ಸು ಅನೇಕರನ್ನು ಆನಂದಗೊಳಿಸಿ, ಸಾಹಸ ಪ್ರೋತ್ಸಾಹನನ್ನು ಸ್ವೀಕಲಿಸುತ್ತಲಿದೆ. ಇವರು ವಯಸ್ಸಿನಲ್ಲಿ ಹರಿಯವನ್ನು ಹಾದಿದ್ದರೂ, ಇವರ ಉತ್ಸಾಹವೂ, ಉದ್ಯೋಗಪ್ರಿಯತೆಯೂ ಪ್ರಾಯಸ್ಥರನ್ನು ನಾಚಿಸುವಂತಲಿದೆ. ಇವರು ವ್ಯಕ್ತಿಯೋರ್ವರಾದರೂ ಸಂಸ್ಥೆಯಂತೆ ಅನೇಕ ಮಹತ್ಕಾರ್ಯಗಳನ್ನು ನಡೆಯಿಸುತ್ತಿದ್ದಾರೆ. ಅಲ್ಲಲ್ಲಿ ಅನುಭವ ಮಂಟಪಗಳನ್ನು ಸ್ಥಾಪಿಸಲು ಪ್ರಚೋದಿಸಿ ಹಿರಿಯ ಶಿವಾನುಭಾವಿಗಳಾಗಿ, ನಿಜವಾದ ಜ್ಞಾನಿಗಳಾಗಿ ಮೆರೆಯುತ್ತಿದ್ದಾರೆ.

ಶ್ವಾನ ಜ್ಞಾನ ಗಜಜ್ಞಾನ ಕುಕ್ಕುಟಜ್ಞಾನವೆಂಬ
ಜ್ಞಾನತ್ರಯಂಗಳೇನಾದವು?
ಕೂಡಲಸಂಗಮದೇವಾ, ನಿಮ್ಮನರಿಯದ ಜ್ಞಾನವೆಲ್ಲ ಅಜ್ಞಾನ !

ಕರ್ನಾಟಕ ಏಕೀಕರಣ ಚಟುವಟಿಕೆಯಲ್ಲಿ, ಕನ್ನಡ ಭಾಷೆಯ ಸಂರಕ್ಷಣೆಯಲ್ಲಿ ಸರಿ ಸುಮಾರು ನಲವತ್ತಾರು ವರ್ಷಗಳಿಂದ ಅಗ್ರಗಣ್ಯರಾಗಿ ಇವರು ಕೆಲಸ ಮಾಡುತ್ತಲಿದ್ದಾರೆ. ಭಕ್ತಿಭಾಂಡಾರಿ ಬಸವಣ್ಣನವರ ಬಾಗೇವಾಡಿಯ ಸಮೀಪಸ್ಥರೂ, ಪ್ರಾಚೀನ ವಿಜಯಪುರದ ನಿವಾಸಿಗಳೂ ಆಗಿ ಹೆಸರಿಗೆ ಕಳೆಯನ್ನು ತಂದಂತಹ ಕಾರ್ಯವನ್ನು ಮಾಡುತ್ತಿದ್ದಾರೆ. ಸ್ವಮತೀಯರನ್ನೂ, ಪರಮತೀಯರನ್ನೂ ಸಂಕೋಚತೆಯಿಂದ ಸಡಿಲಿಸಿ ಸರ್ವರೂ ಪರಮತ ಸಹಿಷ್ಣುರಾಗುವಂತೆ ಆದರ್ಶವನ್ನು ಮುಂದಿಟ್ಟು ಆಚಾರ್ಯರಾಗಿದ್ದಾರೆ. ಕರ್ಮ ಹಾಗೂ ಜ್ಞಾನ ಎರಡಕ್ಕೂ ಸರಿಸಮಾನ ಸ್ಥಾನಗಳನ್ನು ಕೊಟ್ಟು ಐಹಿಕ ಪಾರಮಾರ್ಥಿಕಗಳೆರಡನ್ನೂ ಸಾಧಿಸಲಿಕ್ಕೆ ದೀಕ್ಷಾಬದ್ಧರಾಗಿ ನಿಂತ ಶರಣರಾಗಿದ್ದಾರೆ. ಸಾಧಕರಿಗೆ ಅನುಕರಣೀಯವಾದ ಆದರ್ಶಗಳು ಕರ್ತವ್ಯನಿಷ್ಠೆ, ಗುರಿಯಲ್ಲಿ ಅಚಲವಿಶ್ವಾಸ, ದೃಢಸತ್ಯಪ್ರಿಯತೆ, ಸೌಜನ್ಯ ಮತ್ತು ಸಾತ್ವಿಕತೆಗಳು ಇವರಲ್ಲಿ ನೆಲೆಗೊಂಡಿವೆ. ಭಗವದ್ಭಕ್ತಿ ಧರ್ಮಶ್ರದ್ಧೆ, ಸಾಹಿತ್ಯ ಪ್ರೇಮ ದೇಶಾಭಿಮಾನ, ಆತ್ಮಸಂಯಮ, ಸ್ನೇಹಪರತೆ, ಸತತೋದ್ಯೋಗ, ಕಾಯಕನಿಷ್ಠೆ ಇತ್ಯಾದಿ ಹಿರಿಯ ಗುಣಗಳಿಂದ ಪರಿಶೋಭಿತರಾಗಿ ಋಷಿತುಲ್ಯರಾದ ಇವರು ವೀರಶೈವ ಸಮಾಜಕ್ಕೆ ಅಲಂಕಾರಪ್ರಾಯರಾಗಿಯೂ, ಕರ್ನಾಟಕ ಚೂಡಾರತ್ನರಾಗಿಯೂ ಇದ್ದಾರೆ ಎಂಬುದು ಇವರ ಸೇವಾತಪಸ್ಸಿನಿಂದ ನಿದರ್ಶಿತವಾಗಿದೆ. ವಿಜಾಪುರಕ್ಕೆ ಹೋದವರು ಗೋಳಗುಮ್ಮಟವನ್ನು ನೋಡಿ ಆನಂದಹೃದಯಿಗಳಾಗುವಂತೆಯೇ, ಸಂಪ್ರದಾಯಸ್ಥರಿಗೆ ಅಹಿತವಾದರೂ ಸತ್ಯವನ್ನೇ ಎತ್ತಿಹಿಡಿದು ಸಂಶೋಧನೆಯನ್ನು ಸಾಗಿಸಿ ನಡೆಸುವವರಿಗೆ ಬೆಂಬಲವನ್ನು ನೀಡುವ ಈ ಶಿವಶರಣರನ್ನು ಕೂಡ ನೋಡಿ ಸಂತೋಷಮನಸ್ಕರಾಗುವುದರಲ್ಲಿ ಯಾವ ಸಂಶಯವೂ ಇಲ್ಲ.

# ಪ್ರಾರ್ಥನೆ

[ಕವಿ: ಷ॥ಬ್ರ॥ ಶ್ರೀ ಗುರುಸಿದ್ಧ ಶಿವಾಚಾರ್ಯ ಸ್ವಾಮಿ ನಿರಂಜನಾಲಯ]

ಗುರುವಿನಹುರಮಠ.

***

ಜೀವ ಮೂಶಿಯಲಿ ಕುದಿದು ಕುದಿದು
ಬೇಸತ್ತು ಬಂದೆ ನಿನ್ನ ಅಡಿಗೆ !
ನವ್ಯ ಜೀವನವು ಸೌಮ್ಯ ಭಾವನೆಯ-
ಹೊಂದಲು ಬಂದೆ ನಿನ್ನ ಗುಡಿಗೆ !! ॥೧॥

ಸೌಮ್ಯಸಿದ್ಧನಹ ನವ್ಯ ಬುದ್ಧನಹ
ವಿಶ್ವತೇಜ ಗುರುವೆ !
ಬೆಂದೊಡಲ ನೋಡು ಸಂತಸವ ನೀಡು
ಶಾಂತಿದೂತ ಮಹವೆ ! ॥೨॥

ಷಡ್ವರ್ಗಗಳ ಸೆಡೆತ ಬಿರುಗಾಳಿ ಬಡಿತ
ತ್ರಿತಾಪಗಳ ತಾಕಲಾಟ !
ಬಡತನದ ಬಾಳು: ಇದು ನಮ್ಮ ಗೋಳು
ಸ್ತುತಿ-ನಿಂದೆ ಜೀಕಲಾಟ !! ॥೩॥

ಮನಕಿಲ್ಲ ಶಾಂತಿ ಗೂಡೆಲ್ಲ ದಾಂತಿ
ಹೃದಯದಿ ನೆಲೆಸೊ ಜ್ಯೋತಿ !
ಶಾಂತಿ ಶಾಂತಿ, ಋತ, ಸತ್ಯ, ಪ್ರೀತಿಗಳ
ಇರಿಸು ನಮ್ಮ ಪ್ರೀತಿ ! ॥೪॥

ನಿನ್ನ ನಾಮವೆ, ನಿನ್ನವರ ಸೇವೆಯೆ
ಎನಗೆ ಅಮೃತಧಾಮ !
ತತ್ವ ಬೋಧೆಯಲಿ ನಿತ್ಯ ಸಿದ್ಧಿಯಲಿ
ಇರಿಸು ನಮ್ಮ ಸೋಮ ! ॥೫॥

ನಿನ್ನ ಕೀರ್ತಿಯೆ ದಿವ್ಯ ಸ್ಫೂರ್ತಿಯು-
ಇದುವೆ ನಮಗೆ ಯುದಧಿ !
ಜನನ ಮರಣಗಳ ದುರಿತ ಹರಿತ
ಪರಬ್ರಹ್ಮ ಜ್ಞಾನ ಬೋಧಿ ! ||೬||

ದಿವ್ಯ ಪುರುಷನೆ ಭವ್ಯ ಪುರುಷನೆ
ಕಲಿಯುಗದ ಪರುಷ ನೀನೇ !
ಯುಗ ಯುಗಗಳಿಂದಲೂ ಬಸವಳಿದ ಜನತೆಗೆ
ನೀನೆ ಅಮೃತ ಸೋನೆ !! ||೭||

ಹಾರುವುದು ಜೀವ ಕೋರುವೆನು ನಲವ-
ಒಲವಿಂದೆ ನೋಡು ಮಲ್ಲೇಶ !
ಸಿದ್ಧ ಮಲ್ಲೇಶ ಭವವಿಪಾಶ ಕಾಪಿಡಯ್ಯ
"ಮಳೆಯ ಮಲ್ಲೇಶ !!" ||೮||

---

# ಭಕ್ತಿ.

( ಲೇಖಕ:— ಶ್ರೀ. ಗೌರೀಶಂಕರದೇವರು ಚಂದ್ರಶೇಖರಮಠ ಬೆಳಗಾವ. )

---

ಜಗತ್ತಿನಲ್ಲಿ ಮನುಷ್ಯನು ಮೋಕ್ಷವನ್ನು ಹೊಂದಬೇಕಾದರೆ ಅತ್ಯಂತ ಸುಲಭವಾದ ಶ್ರೇಷ್ಠವಾದ ಉಪಾಯವೆಂದರೆ ಭಕ್ತಿಮಾರ್ಗವು ಒಂದಾಗಿರುತ್ತದೆ. ಮಾನವನು ಭಕ್ತಿಯನ್ನು ಮಾಡಬೇಕಾದರೆ ಅದಕ್ಕೇನಾದರು ಖರ್ಚು ಮತ್ತು ಎರಡನೇಯವರ ಸಹಾಯ ಹಣ ಮುಂತಾದವು ಏನೂ ಬೇಡ. ತನ್ನ ಮನಸ್ಸನ್ನು ತನ್ನ ಆಧೀನದಲ್ಲಿ ಇಟ್ಟುಕೊಳ್ಳುವದು, ಹೊರತಾಗಿ ಬೇರೆಯವರ ಅಧೀನದಲ್ಲಿ ಏನೂ ಇರುವದಿಲ್ಲ. ಆದ್ದರಿಂದ ತನ್ನ ಚಂಚಲವಾದ ಮನಸ್ಸನ್ನು ತನ್ನ ಹಿಡಿತದಲ್ಲಿ ಇಡಲು ತಾನೇ ಕಾರಣನು. ಮೊದಲು ಮಾನವನು ಮನಶ್ಸನ್ನು ಶುದ್ಧವಾಗಿ ಅತ್ಯಂತ ಪವಿತ್ರವಾಗಿ ಇಟ್ಟುಕೊಳ್ಳತಕ್ಕದ್ದು. ಮನಸ್ಸು ಶುದ್ಧವಾದರೆ ಆತ್ಮಶುದ್ಧಿಯಾಗುವದು. ಭಕ್ತಿಗೆ ಮೂಲಕಾರಣವಾದದ್ದು ಮನಸ್ಸೇ ಇರುವದು. ನಾವು ಶುದ್ಧವಾದ ಮನಸ್ಸಿನಿಂದ ಆ ಪರಮಾತ್ಮನ ನಾಮಸ್ಮರಣೆಯನ್ನು ಮಾಡುವದು. ಮನಸ್ಸಿನಿಂದ ಮಾಡಿದರೆ ಪರಮಾತ್ಮನು ನಮ್ಮಗಳ ಮೇಲೆ ಕೃಪಾಶೀರ್ವಾದ ಮಾಡುವನು. ಇದರಲ್ಲಿ ಏನೂ ಸಂದೇಹವಿಲ್ಲ.

ಆ ಪರಶಿವನ ನಾಮಸ್ಮರಣೆಯನ್ನು ಮಾಡಲು ವೇದ ಘೋಷ ಮಾಡಲು ಕಾರಣವಿಲ್ಲ. ಬರೀ ಶಿವ ಶಿವ ಎಂದು ಎರಡು ಅಕ್ಷರದಿಂದ ಕೂಡಿದ ಈ ಶುದ್ಧವಾದ ಪವಿತ್ರವಾದ ನಾಮಸ್ಮರಣೆಯನ್ನು ಮಾಡಿದರೆ ಸಾಕು; ಆ ಕರುಣಾಳುವಾದ ದಯಾಘನನಾದ ಶಿವನಿಗೆ ನಾವು ಮಾಡಿದ ನಾಮಸ್ಮರಣೆಯು ಮುಟ್ಟುವದು. ಎಷ್ಟೋ ಅಸಂಖ್ಯಾತ ನಾಮಗಳಿಂದ ಕೂಡಿದ ಪರಶಿವನ ಸಹಸ್ರಾರು ನಾಮಗಳನ್ನು ಉಚ್ಚರಿಸಿದರೂ ಅಷ್ಟೇ ಇರುವದು. ಎಲ್ಲವೂ ಆ ಪರಮಾತ್ಮನ ನಾಮವೇ ಆಗಿರುವದು. ಆದರೆ ನಾಮಸ್ಮರಣೆಯನ್ನು ಮಾಡಬೇಕಾದರೆ ಮತ್ತು ಪೂಜಾದಿ ಕರ್ಮಗಳನ್ನೂ ಮಾಡಬೇಕಾದರೆ ಮನಸ್ಸಿನಿಂದ ಮಾಡಬೇಕು. ಇದು ಮೊದಲನೆಯ ಮಾತಾಗಿರುವದು.

ನಮ್ಮದು ಆ ಪರಶಿವನಲ್ಲಿ ದೃಢವಾದ ನಂಬಿಗೆಬೇಕು. ನಮಗೇನಾದರೂ ಕಷ್ಟಗಳು ಬಂದರೆ ಅಸಂತೋಷ ಪಡುವದು ಮತ್ತು ಆತನ ಮೇಲೆ ಸಿಟ್ಟಾಗುವದು. ಇದರಂತೆ ಸುಖಾನಂದಗಳು ಬಂದರೆ ಹಿಗ್ಗಿ ಪರಶಿವನನ್ನು ಆನಂದದಿಂದ ಸ್ಮರಿಸುವದು ಹೀಗೆ ಮಾಡಬಾರದು. ಆತನು ಕಷ್ಟಗಳನ್ನು ಒದಗಿಸಿದರೆ ನಮ್ಮಗಳ ಹಿತದ ಸಲುವಾಗಿ ಮತ್ತು ಸುಖಾನಂದಗಳನ್ನು ಒದಗಿಸಿದರೆ ನಮ್ಮಗಳ ಹಿತದ ಸಲುವಾಗಿ ಎಂದು ಮನದಲ್ಲಿ ಅಸಂತೋಷವನ್ನು ಹೊಂದದೆ ಭಾವಿಸುವದು. ನಾವು ಹೀಗೆ ಭಾವಿಸಿ ದೃಢವಾದ ಮನಸ್ಸಿನಿಂದ ನಾಮಸ್ಮರಣೆಯನ್ನು ಮಾಡುವದು. ಆ ದಯಾಳುವಾದ ಕರುಣಸಾಗರನು ನಮಗೆ ಕಷ್ಟ ಸುಖಾದಿಗಳನ್ನು ಕೊಟ್ಟು ನಮ್ಮಗಳ ಮನಸ್ಸನ್ನು ಪರೀಕ್ಷಿಸುವದಕ್ಕೋಸ್ಕರ ಈ ರೀತಿ ಮಾಡುವನು. ಆದ್ದರಿಂದ ಆತನ ಭಕ್ತಿ ಪರೀಕ್ಷೆಯು ಯಾವ ರೀತಿ ಇರುವದು? ಎಂಬುದರ ಬಗ್ಗೆ ನಮ್ಮ ವೀರಶೈವರಲ್ಲಿ ಈಗ್ಗೆ ಎಂಟನೂರು ವರ್ಷಗಳ ಹಿಂದೆ ಆಗಿಹೋದ ಆ ಮಹಾನುಭಾವರಾದ, "ಭಕ್ತಿಭಾಂಡಾರಿ ಬಸವಣ್ಣನವರು" ತಮ್ಮ ಸರಳವಾದ ಶೈಲಿಯಲ್ಲಿ ಒಂದು ವಚನವನ್ನು ಹೀಗೆ ಹೇಳಿರುವರು.

"ತನುವನಲ್ಲಾಡಿಸಿ ನೋಡುವೆ ನೀನು, ಮನವನಲ್ಲಾಡಿಸಿ ನೋಡುವೆ ನೀನು, ಧನವನಲ್ಲಾಡಿಸಿ ನೋಡುವೆ ನೀನು, ಇದಕ್ಕೆಲ್ಲಕಂಜದಿದ್ದರೆ ಭಕ್ತಿಕಂಪಿತ ನಮ್ಮ ಕೂಡಲಸಂಗಮದೇವಾ."

ಆ ದಯಾಸಾಗರನು ನಮ್ಮಗಳಿಗೆ ಶರೀರದಿಂದ ಏನಾದರು ರೋಗಾದಿಗಳನ್ನು ಕೊಟ್ಟು ನೋಡುವನು. ಒಮ್ಮೆ ಮನಸ್ಸನ್ನು ಚಂಚಲವನ್ನಾಗಿ ಮಾಡಿ ನೋಡುವನು. ಮತ್ತೊಮ್ಮೆ ದ್ರವ್ಯವನ್ನು ಅಲ್ಲಾಡಿಸಿ ನೋಡುವನು, ದ್ರವ್ಯದಲ್ಲಿ ಅತ್ಯಂತ ಶ್ರೀಮಂತನನ್ನಾಗಿ ಒಮ್ಮೆ ಅತ್ಯಂತ ದರಿದ್ರನನ್ನಾಗಿ ಮಾಡಿ ಪರೀಕ್ಷಿಸಿ ನೋಡಿದರೂ ಕೂಡಾ ಮಾನವನು ತಾನು ಹಿಡಿದಿದ್ದ ನಿಶ್ಚಿತವಾದ ಭಕ್ತಿಯನ್ನು ತ್ಯಜಿಸದಿದ್ದರೆ ಇವನೇ ನಿಜವಾದ ನನ್ನ ಪ್ರೇಮದ ಭಕ್ತನೆಂದು ಆ ಮಾನುಷ್ಯ ಪ್ರಾಣಿಯನ್ನುದ್ಧರಿಸುವನು.

ಆ ಜಗದ್ ವ್ಯಾಪಕನಾದ ಪರಮಾತ್ಮನು ಕೆಲವು ದಿವಸಗಳ ಹಿಂದೆ ಭಕ್ತರನ್ನು ಹೇಗೆ ಪರೀಕ್ಷಿಸಿದನೆಂಬ ಬಗ್ಗೆ ಒಂದು ಚಿಕ್ಕ ಅನುಭವಸಿದ್ಧವಾದ ಕಥೆಯಾಗಿರುವದು. ಅದರ ಅನುಭವ ಇಂತಿರುವದು.

"ಒಂದು ಗ್ರಾಮದ ಹೊರಗೆ ಮಹಾದೇವನ ದೇವಾಲಯವಿತ್ತು. ಆ ದೇವಾಲಯದ ಪೂಜೆಯಗೋಸ್ಕರ ಕಟ್ಟು ಶಿವಭಕ್ತರಿಬ್ಬರು ಬರುತ್ತಿದ್ದರು. ಒಬ್ಬ ಭಕ್ತನು ವೈದಿಕನು ಇದ್ದನು. ಅವನು ತನ್ನ ವೈದಿಕ ಕರ್ಮಕ್ಕನುಸರಿಸಿ ಸ್ನಾನ ಮಾಡಿ ಮಡಿಯಿಂದ ಭಸ್ಮ, ಗಂಧ, ಹೂವು, ಪತ್ರಿ ಮೊದಲಾದ ಪೂಜಾ ಸಾಹಿತ್ಯಗಳನ್ನು ತೆಗೆದುಕೊಂಡು ಬಂದು ಪ್ರತಿನಿತ್ಯ ಆ ಮಹಾದೇವನ ಪೂಜೆಯನ್ನು ವಿಧ್ಯುಕ್ತವಾಗಿ ಮಾಡುತ್ತಿದ್ದನು. ಇನ್ನೊಬ್ಬ ಭಕ್ತನು ಕಣ್ಣಪ್ಪನೆಂಬ ಬೇಡಳವನು ಇದ್ದನು. ಅವನು ಪ್ರತಿನಿತ್ಯ ದೇವರಿಗೆ ತಾನು ಬೇಟೆಯಾಡಿ ಬಂದು, ತಾನು ತಂದ ಮಾಂಸವನ್ನು ಮೊದಲು ತಾನು ರುಚಿ ನೋಡಿ, ಉತ್ತಮವೆಂದು ತನಗೆ ಅನಿಸಿದರೆ ನೈವೇದ್ಯವೆಂದು ಒಂದು ಕೈಯ್ಯಲ್ಲಿ ತೆಗೆದುಕೊಂಡು, ಮತ್ತು ದೇವರಿಗೆ ಪತ್ರಿಗಳೆಂದು ಕಾಡು ಪತ್ರಿಗಳನ್ನು ತನ್ನ ಮಸ್ತಕದ ಜಡೆಯಲ್ಲಿಟ್ಟುಕೊಂಡು, ದೇವರಿಗೆ ನೀರು ಎಂದು ಬಾಯಿಯಲ್ಲಿ ನೀರನ್ನು ತೆಗೆದ್ಯುಕೊಂಡು, ಮತ್ತೊಂದು ಕೈಯ್ಯಲ್ಲಿ ತನಗೆ ಬೇಟೆಯಾಡಲು ಬೇಕಾಗುವ ಸಾಹಿತ್ಯಗಳಾದ ಬಾಣಬತ್ತಳಿಕೆಗಳನ್ನು ತೆಗೆದುಕೊಂಡು, ಈ ರೀತಿಯಾಗಿ ಪೂಜೆಗೆ ಬಂದು, ಆ ವೈದಿಕನು ಮಾಡಿದ ಪೂಜೆಯನ್ನೂ, ತಾನು ಕಾಲುಗಳಲ್ಲಿ ಹಾಕಿಕೊಂಡಿದ್ದ ಪಾದರಕ್ಷೆಗಳಿಂದಲೇ ಸರಿಸಿ, ತನ್ನ ಬಾಯಿಯೊಳಗಿದ್ದ ನೀರನ್ನು ದೇವರ ಮೇಲೆ ಉಗುಳಿ, ತಲೆಯ ಮೇಲಿದ್ದ ಕಾಡು ಪತ್ರಿಗಳನ್ನು ದೇವರ ಮೇಲೆ ಚಲ್ಲಿ, ಕೈಯ್ಯೊಳಗಿದ್ದ ಮಾಂಸವನ್ನು ನೈವೇದ್ಯವೆಂದು ಮುಂದೆ ಇಟ್ಟು, ನಮಸ್ಕರಿಸಿ ಶಿವ ಶಿವ ಎಂದು ಮನಸ್ಸಿನಿಂದ ನಾಮಸ್ಮರಣೆಯನ್ನು ಮಾಡಿ ಹೋಗುತ್ತಿದ್ದನು.

ಇಬ್ಬರು ಹೀಗೆ ಕೆಲವು ದಿವಸ ಪೂಜೆ ಮಾಡುತ್ತಿದ್ದರು. ಒಂದು ದಿವಸ ಬೇಡರ ಕಣ್ಣಪ್ಪನು ಬಂದು ಪೂಜೆ ಮಾಡುತ್ತಿದ್ದನು. ಅಷ್ಟರಲ್ಲಿಯೇ ಆ ವೈದಿಕನು ಬಂದು ಇವನು ಪೂಜೆ ಮಾಡುವದನ್ನು ನೋಡುತ್ತ ದೂರ ನಿಂತಿದ್ದನು. ಶ್ರೀ ನಿರಂಜನನಾದ ಪರಮಾತ್ಮನು ಈರ್ವರಲ್ಲಿ ನಿಜವಾದ ಪ್ರೇಮರವಾದ ಭಕ್ತಿಯನ್ನು ಪರೀಕ್ಷಿಸುವದಕ್ಕೋಸ್ಕರ ಗುಡಿಯನ್ನು ಸ್ವಲ್ಪ ಕೆಡವಿದನು. ಆ ವೈದಿಕನು ತನ್ನ ಮೇಲೆ ಕಲ್ಲುಗಳು ಬಿದ್ದು ಏನಾದರೂ ಪ್ರಾಣಹೋದಿತೆಂದು ತಿಳಿದು ತನ್ನ ಪೂಜಾಸಾಹಿತ್ಯಗಳ ಪರಿವೆ ಇಲ್ಲದೆ ಚಲ್ಲಿ ಓಡಿಹೋದನು. ಆ ಬೇಡರ ಕಣ್ಣಪ್ಪನು ಮಾತ್ರ ಹೀಗೆ ಮಾಡದೆ ಗಾಬರಿಯಿಂದ ನನ್ನಪ್ಪ ದೇವರಿಗೆ ಏನಾದರೂ ಪೆಟ್ಟು ತಗಲೀ

ತೆಂದು ಭಾವಿಸಿ ದೇವರ ಮೇಲೆ ಡಬ್ಬುಬಿದ್ದನು. ಆ ಕಣ್ಣಪ್ಪನ ಇಂಥ ದೃಢವಾದ ಪ್ರೇಮದ ಭಕ್ತಿಗೆ ಮೆಚ್ಚಿ ಪರಮಾತ್ಮನು ಪ್ರಸನ್ನನಾಗಿ ಹರುಷದಿಂದ ಆ ಕಣ್ಣಪ್ಪನನ್ನು ಹಿಡಿದೆಬ್ಬಿಸಿದನು, ಮತ್ತು ಅವನಿಗೆ ಬೇಡಿದ ವರಗಳನ್ನು ಕೊಟ್ಟು ಕಾಪಾಡಿದನು.

ನಾವು ಮಾಡತಕ್ಕ ಭಕ್ತಿಯು ನಿಜವಾದ, ನಿತ್ಯವಾದ, ಪ್ರೇಮದ, ಪರಿಪೂರ್ಣವಾದ ಭಕ್ತಿಯು ನಮ್ಮಲ್ಲಿರಬೇಕು. ನಾವು ಸದ್ಗತಿ (ಮೋಕ್ಷ) ವನ್ನು ಹೊಂದಬೇಕಾದರೆ, ಮೇಲೆ ಹೇಳಿದ ನಿಜವಾದ ಭಕ್ತನಂತೆ ಭಕ್ತಿಯು ಇರಬೇಕು ಇದೇ ಭಕ್ತಿಯು ಮೋಕ್ಷಕ್ಕೆ ಕಾರಣವಾದ ಮಾರ್ಗಗಳಲ್ಲಿ ಎಲ್ಲಕ್ಕೂ ಹೆಚ್ಚಿನದು. ಇದೇ ತರದ ಭಕ್ತಿಯನ್ನು ನಮ್ಮಂಥ ಮಾನವ ಪ್ರಾಣಿಗಳಲ್ಲಿ ಕೊಟ್ಟು ಕಾಪಾಡಲಿ ಎಂದು ಆ ದಯಾಘನನಾದ ನಿತ್ಯವಾದ ಜಗತ್ಕರ್ತನಾದ, ಪರಿಪೂರ್ಣವಾದ ಆ ಪರಮಾತ್ಮನಲ್ಲಿ ಅನನ್ಯಭಾವದಿಂದ ಬೇಡೋಣ.

---

# "ಆತ್ಮನಿಗೂ-ದೇಹಕ್ಕೂ ಸಂವಾದ"

(ಲೇಖಕರು:— ಪರ್ವತರಾಜ ಜಿ. ಅಂಗಡಿ [ಸಂಗೊಳ್ಳಿ] ಬೆಳಗಾವ)

---

ದೇಹಃ— ಎಲೈ-ಆತ್ಮನೇ? ವಸ್ತುತಃ ವಿಚಾರದಲ್ಲಿ ನಾನು ಅಜ್ಞಾನ ರೂಪನು, ಆದರೂ ನಾನು ನಿನಗಿರಲಿಕ್ಕೆ ಸದನವಾಗಿ ಅನೇಕ ಸುಖಗಳನ್ನು ಕೊಡುತಿರಲಿಕ್ಕೆ ನನ್ನನ್ನು ಯಾಕೆ ಹಳಿಯುವಿ.....

ಆತ್ಮ:— ಎಲೋ! ನೀನು ಸದನವಾಗಿ ಆಗಿರುವಿ, ಸುಖವಾಗಿ ಕೊಡುವಿ, ಯಾರಿಗೆ ಉಪಕಾರ ಮಾಡುವಿ, ನಾನು ನಾಮರೂಪ ಹೀನನು, ಸರ್ವಮಂಗಳನು, ಪರಮಾತ್ಮನೇ ಇರುವೆನು.

ದೇಹಃ— ನಿನಗೆ ಛಳಿ ಮಳೆ ಬಿಸಿಲು ತಗಲದಂತೆ ಹೊದಿಕೆಯಾಗಿರುವೆನು, ನಡಿಯಲಿಕ್ಕೆ ಚರಣವಾಗಿರುವೆನು, ಭುಂಜಿಸಲಿಕ್ಕೆ ವದನವಾಗಿರುವೆನು, ಗ್ರಹಿಸಲಿಕ್ಕೆ ಕರವಾಗಿರುವೆನು, ಹೀಗಿದ್ದು ಯಾಕೆ ಹಳಿಯುವಿ?

ಆತ್ಮ:— ಮಂದಮತಿಯೇ? ನಾನು ಛಳಿಯಿಂದ ಬಳಲೆನು, ನೀರಿನಿಂದ ನೆನೆಯನು, ಅಗ್ನಿಯಿಂದ ದಹಿಸೆನು, ಸದಾತೃಪ್ತನು, ನಿರಾಕಾರನಾದ ನನಗೆ ಅವಯವಗಳೆಲ್ಲಿರುವವು?

ದೇಹ:— ಎಲೈ ಎನ್ನಿಂದಲೇ ನಿನಗೆ ಪೂಜ್ಯತೆಯು ಬಂದಿತು, ನನ್ನಿಂದಲೇ ನಿನ್ನನ್ನು ತಿಳದರು, ನನ್ನಿಂದ ಪ್ರತಿಷ್ಠೆಯನ್ನು ಹೊಂದಿದ ನೀನು ಹೀಗೆ ನುಡಿಯುವದು ಆಶ್ಚರ್ಯವಲ್ಲವೇ?

ಆತ್ಮ:— ಪ್ರತಿಷ್ಠೆಯು, ಪೂಜ್ಯತೆಯು, ಮಾಯಾಗುಣಾತ್ಮಕವಾದದ್ದರಿಂದ ಮಾಯಿಕವಾದ ನಿನಗೇ ಸಲ್ಲುವದಲ್ಲದೇ ಮಾಯಾತೀತನಾದ ನನಗೇನಿಲ್ಲವು.

ದೇಹ:— ಎನ್ನ ನೇತ್ರದಿಂದ ನೋಡುವಿ, ಎನ್ನ ಕರ್ಣದಿಂದ ಕೇಳುವಿ ಎನ್ನ ಜಿಹ್ವೆಯಿಂದ ನುಡಿಯುವಿ, ಎನ್ನ ನಾಸಿಕೆಯಿಂದ ಘ್ರಾಣಿಸುವಿ, ಹೀಗಿದ್ದೂ ನನ್ನ ಮೇಲೆ ತಿರುಗಿ ಬೀಳುವಿಯಾ!

ಆತ್ಮ:— ಮೂಢ ದೇಹವೇ! ನಾನು ನೇತ್ರವಿಲ್ಲದೇ ನೋಡುವೆನು, ನಾಲಿಗೆಯಿಲ್ಲದೇ ನುಡಿಯುವೆನು, ಕಿವಿಯಿಲ್ಲದೇ ಕೇಳುವೆನು, ನಾಸಿಕವಿಲ್ಲದೇ ಘ್ರಾಣಿಸುವೆನು, ಹೀಗಿದ್ದು ಪೌರುಷ್ಯವನ್ನು ಹೇಳುವಿಯಾ! ಈಗಲೇ ನಿನ್ನನ್ನು ಭಸ್ಮ ಮಾಡುವೆನು.

ದೇಹ:— ಇಡುವದು, ತೊಡುವದು, ಕೊಡುವದು, ಕೊಂಬುವದು, ಪರಿಮಳ ಗಂಧವನ್ನು ಹಚ್ಚುವದು, ಮಂಚದಲಿ ಮಲಗುವದು, ಸರ್ವ ಸುಖವನ್ನು ನನ್ನಿಂದಲೇ ಪಡಿಯುತ್ತಿದ್ದು ನನ್ನನ್ನೇ ನಿಂದಿಸುವಿಯಾ?

ಆತ್ಮ:— ಎಲೈ-ಪಾಪಿಯೇ! ಎಲ್ಲವೂ ಎನ್ನಿಂದೆಂಬ ನಿನ್ನ ನುಡಿಯನ್ನು ಕೇಳಿ ಕೋಪ ಬರುವದು, ವಿಷಯ ಸುಖಕ್ಕೆ ನೀನೇ ಭಾಗಿಯಲ್ಲದೇ, ಸದಾಸುಖಿಯಾದ ನನಗೆ ನಿನ್ನ ಸಂಬಂಧವೇನು?

ದೇಹ:— ಎನ್ನಿಂದ ತಪ್ಪು ಏನಿರುವದು? ಸದಾ ನಿನ್ನ ಸೇವೆಯಲ್ಲೇ ನಾನು ತತ್ಪರನು. ನಾನು ನಿನಗೆ ಉಪಕಾರ ಮಾಡುವನಲ್ಲದೇ ಅಪಕಾರ ಮಾಡುವವನಲ್ಲ. ನನ್ನ ಚರಣವನ್ನು ತೊಳೆದು ಶರಣನ ಪಾದ ತೀರ್ಥವೆಂದು ನಿನಗೆ ಮರಿಯಾದೆ ಕೊಡುವರು. ಹೀಗಿದ್ದು ನನ್ನ ಮೇಲೆ ಕೋಪಿಸುವಿಯಾಕೆ?

ಆತ್ಮ:— ದೇಹವೇ? ನೀನು ಸೇವೆಯಲ್ಲಿ ಯೋಗ್ಯನಿರುವಿ, ಪರಂತು ಮೃಷೋಕ್ತಿಯನ್ನು, ಬಹಳಾಡುವಿ. ಜ್ಞಾನವಿಲ್ಲದೇ ನಿನ್ನ ತೀರ್ಥದಿಂದ ಪ್ರಯೋಜನವೇನು? ನೀನು ನೀಚನಾದ ಕಾರಣ ಯೋಗ್ಯ ಶಿಕ್ಷೆ ಮಾಡುವೆನು.

ದೇಹ:— ಶುದ್ಧಾತ್ಮನೇ? ನನ್ನ ಕೆಟ್ಟ ಬುದ್ಧಿಗೆ ಕೋಪಿಸಬೇಡ, ನಿನಗೆ ಬೇಡಿಕೊಳ್ಳುವೆನು. ನನ್ನನ್ನು ಶಿಕ್ಷಿಸಬೇಡ. ನೀನು ಯೋಗ ಪುರುಷನು ಸತ್ಯವು.

ಆತ್ಮ:— ಎಲೋ- ಮೂರ್ಖನೇ? ನನ್ನನ್ನು ಅನೇಕ ವಿಷಯಗಳಲ್ಲಿ ಕೆಡವಿ ಅನೇಕ ಜನ್ಮಗಳಿಗೆ ಗುರಿಮಾಡಿದಿ. ಕಾರಣ ನಿನ್ನನ್ನು ಚಳಿಮಳಿಗಳಲ್ಲಿ ಕೆಡವಿ ದುಃಖಗೊಳಿಸುವೆನು.

ದೇಹ:— ಎಲೈ-ಮಹಾತ್ಮನೇ! ನಿನ್ನ ತೇಜದಿಂದಲೇ ನಾನು ಜನಿಸಿರುವೆನು. ನೀನೇ ಕೈಬಿಟ್ಟರೆ ನನ್ನನ್ನು ಸಲಹುವರಾರು? ನೀನೇ ಕೋಪಿಸಿದರೆ ನನ್ನ ಗತಿಯೇನು? ದಯಮಾಡಿ ಎನ್ನಲ್ಲಿ ಕರುಣಿಸು.

ಆತ್ಮ:— ಎಲೈ— ನಿನಗೆ ಹೀನ ಪದಾರ್ಥಗಳನ್ನು ತಿನಿಸುವೆನು, ಬಟ್ಟೆಗಳನ್ನು ಕಸೆದುಕೊಳ್ಳುವೆನು. ಎಲ್ಲರಿಂದಲೂ ಹೀಯಾಳಿಸುವೆನು, ಅನೇಕ ಸಂಕಟ ಕೊಡುವೆನು. ನೀನು ಹ್ಯಾಗೆ ನನಗೆ ಮಾಡಿರುವಿಯೋ ಹಾಗೇ ಮಾಡುವೆನು.

ದೇಹ:— ಮಹನಿಯನೇ! ನಿನ್ನಾಜ್ಞೆಯಂತೆ ನಡಿಯುವೆನು, ನಿನ್ನ ಚರಣಗಳಿಗೆರಗುವೆನು. ದಯ ಮಾಡು.

ಈ ಪ್ರಕಾರ ದೇಹವು ಬೇಡಿಕೊಳ್ಳಲಾಗಿ, ದೇಹಿಯು ಹರ್ಷಿತನಾಗಿ ಎಲೈ ದೇಹವೇ ನೀನು ಯಾವ ಉಪದ್ರವಗಳನ್ನು ಮಾಡದೇ ಅಹಂಭಾವ ವನ್ನು ತೊರಿದು, ಆತ್ಮನನ್ನು ಹೊಂದುವನಾಗೆನಲು ದೇಹವು ಆತ್ಮನೇ ಮದಮೋಹ ಶೋಕಾದಿಗಳನ್ನು ಇರಿಸದೇ ಅಹಮಸ್ಮಿಯೆಂಬು ನಿನ್ನಲ್ಲಿ ಲೀನವಾಗುವೆನು. ಆತ್ಮನೇ ನಿನ್ನಲ್ಲೇ ಎನ್ನ ಜನನ ಲಯವಿದ್ದ ಬಳಿಕ ನಿನ್ನ ವ್ಯತಿರಿಕ್ತ ಅನ್ಯಗತಿ ಇಲ್ಲವು. ಕಾರಣ ನಿತ್ಯದಲ್ಲಿಯೂ ಬ್ರಹ್ಮಾಸ್ಮಿ ಯೆಂದು ಭಜಿಸುವೆನು. ದಯಮಾಡಿ ಕರುಣಿಸೆನಲು, ದೇಹಿಯು ಹರುಷಿ ತನಾಗಿ ತನಗೂ ದೇಹಕ್ಕೂ ಭೇದವಿಲ್ಲೆಂದು ದೇಹಾತ್ಮ ಸಾಮರಸ್ಯ ಮಾಡಿ, ಪರಂಜ್ಯೋತಿ ರೂಪನಾಗಿ, ದಗ್ಧಪಟದಂತೆ ದೇಹಧಾರಿಯೆನಿಸಿ ದನು. ಈ ಪ್ರಕಾರ ಸಾಧುಗಳು ದೇಹಸಹಿತ ತಾವು ಆತ್ಮರೆನಿಸಿ ನಿಶ್ಚಿಂತ ಪದವನ್ನು ಹೊಂದಿ ಸಾಕ್ಷೀಭೂತರೆನಿಸುವರು.

---

ಶಿವಾನುಭವಕ್ಕೆ ಇದೇ ಕಟ್ಟಕಡೆಯ ಭೆಟ್ಟಿಯು.

# ನನ್ನ ಲೇಖಗಳು.

[ಶ್ರೀಯುತ ಬ. ಚೆ. ಪಟ್ಟೇದ, ವಂಟಮುರಿ.]



ನನ್ನ ಲೇಖಗಳು ಮುಖ್ಯವಾಗಿ ವಿಜಾಪುರ "ಶಿವಾನುಭವ" ಮಾಸಿಕದಲ್ಲಿ ಪ್ರಸಿದ್ಧವಾಗಿವೆ. ಅವಕ್ಕೆ ನನ್ನ ಲೇಖಗಳೆಂಬುದಕ್ಕಿಂತ, ಶಿವಪ್ರೇರಣೆಯಿಂದುಂಟಾದ ಲೇಖಗಳೆನ್ನುವದು ಹೆಚ್ಚು (ಸಮಂಜಸ) ಸಯುಕ್ತವಾಗಿರುತ್ತದೆ. ಅವನ್ನು ನಾನು ನನ್ನ ಜಾಣತನವನ್ನು ಮೆರೆಸುವದಕ್ಕೆ ಬರೆದಿಲ್ಲ. ನಾನು ಅಂತಹ ಜ್ಞಾನಿಯೂ ಅಲ್ಲ. ಅಲ್ಪ ಸ್ವಲ್ಪ ಅರಿತವನು. ಹೀಗಿದ್ದು ಅವನ್ನು ಬರೆದುದೇಕೆಂದರೆ, ತನಗೆ ಗೊತ್ತಾಗಿರುವದನ್ನು ತನ್ನಲ್ಲಿಯೇ ಇಟ್ಟುಕೊಂಡು ಸಾಯುವದು ಸರಿಯಲ್ಲ. ಅದು ವಿನಾಕಾರಣ ವ್ಯರ್ಥವಾಗಿ ಹೋಗುವದು. ಹೀಗೇನು ಪೂರ್ವಜರು ಮಾಡಿಲ್ಲ. ತಾವು ಅರಿತುದು ಮುಂದಿನವರಿಗೆ ತಿಳಿಯಲಿ; ಅದರಲ್ಲಿಯ ಸ್ವೀಕರಿಸಲು ಯೋಗ್ಯವಾದ ವಿಷಯಗಳು ಅವರಿಗೆ ಗೊತ್ತಾಗಲಿ; ಅದರಿಂದ ಅವರದೂ ಮುಂದಿನವರದೂ ಪ್ರಗತಿ ಸಾಧಿಸಲಿ ಎಂದು ಗ್ರಂಥರೂಪದಲ್ಲಿ ಬರೆದು ಇಟ್ಟಿರುವರು. ಈ ರೀತಿ ಅವರು ಮಾಡದಿದ್ದರೆ, ಜ್ಞಾನವು ಪ್ರಗತಿ ಹೊಂದುತ್ತ ಹೊಂದುತ್ತ ಅದು ವಿಜ್ಞಾನ ಇಲ್ಲವೆ ಸಮ್ಯಗ್‌ಜ್ಞಾನದ ಸ್ವರೂಪಕ್ಕೆ ಬರುತ್ತಿದ್ದಿಲ್ಲ. ನಮ್ಮಲ್ಲಿ ಕೆಲವರಿಗೆ ಎಷ್ಟೋ ವನಸ್ಪತಿಗಳ ಸದುಪಯೋಗದ ಜ್ಞಾನವಿದ್ದರೂ ಅವರು ಅದನ್ನು ಬೇರೆ ಜನರಿಗೆ ತಿಳಿಸುವದಿಲ್ಲ. ತಾವೇ ಅದರ ಲಾಭ ಪಡೆಯಬೇಕೆಂಬ ದುರಾಸೆಗೆ ಬಿದ್ದು ಸತ್ತು ಹೋಗುವದನ್ನು ನಾವು ಪ್ರತ್ಯಕ್ಷ ನೋಡುತ್ತಿದ್ದೇವೆ. ಅಷ್ಟೇಕೆ, ತಮ್ಮ ಮಕ್ಕಳಿಗೂ ಕೂಡ ಅವರು ಹೇಳುವದಿಲ್ಲ. ನೋಡಿರಿ ಇದೆಂತಹ ದಡ್ಡತನ! ಇದರಿಂದ ಅವರಿಗೆ ತಿಳಿದುದು ಅವರಷ್ಟಕ್ಕೇನೇ ಮಣ್ಣುಗೂಡಲಿಲ್ಲವೇ? ಈ ರೀತಿ ವಿಚಾರ ಕೈಕೊಳಗಾಗಿ, ನಾನು ನನ್ನ ಲೇಖಗಳನ್ನು ಯಾವಾಗಲೂ ಪ್ರಸಿದ್ಧಿಸುತ್ತಿರುವೆನು. ಅದರಲ್ಲಿ ಯಾರ ನಿಂದೆಯನ್ನೂ ಸಹಸಾ ಮಾಡುವ ಉದ್ದೇಶವಿರುವದಿಲ್ಲ. "ನಿಂದಿಸಿ ನುಡಿಯದಿರಾರನು. ಮನಸಿಗೆ ಬಂದಂತೆ ನಡೆಯದಿರು" ಎಂದು ಮಹನೀಯರು ಹೇಳಿದುದನ್ನು ನಾನು ಬಲ್ಲೆ. ನನ್ನಿಂದ

ಅನ್ಯರಿಗೇನಾದರೂ ಸೇವೆ ಸಲ್ಲಲೆಂದು ನಾನು ಹಾತೊರೆಯುತ್ತಿರುವೆನು. "ಪರೋಪಯೋಗಾಯ ಇದಂ ಶರೀರಂ॥" ಎಂದು ಹೇಳಿದುದನ್ನು ಎಲ್ಲರೂ ನೆನಿಸಬೇಕಲ್ಲದೆ ನೀಚ ಸ್ವಾರ್ಥಕ್ಕೆ ಬಿದ್ದು ತಮಗೆ ಗೊತ್ತಾದುದನು ಮುಚ್ಚಿಕೊಂಡು ಕೂಡ್ರಬಾರದು. ಅದನ್ನು ತಿಳಿಯಲಪೇಕ್ಷಿಸುವವರಿಗೆ ಅವಶ್ಯವಾಗಿ ಹೇಳಲೇಬೇಕು. "ಯಾರ ದುಡಿತ (ಶ್ರಮ) ಸೇವೆ ಪರರಿಗೋಸ್ಕರ ಸಲ್ಲುವದೋ ಅವರೇ ಧನ್ಯರು." ಹೀಗೆ ಉದಾರ ಬುದ್ಧಿಯಿಂದ ವರ್ತಿಸುವದೇ ಜನ್ಮ ಸಾರ್ಥಕ್ಯದ ಗುರಿಯು. ಮನುಷ್ಯರಾಗಿ ಹುಟ್ಟಿ ಇಂತಹ ಗುರಿಯನ್ನಿಟ್ಟುಕೊಳ್ಳದಿದ್ದರೆ, ಅದಾವಾಗ ಅದನ್ನು ಅನುಸರಿಸುವದು ? ಇರಲಿ.

ನಾನು ಶಿವಾನುಭವದಲ್ಲಿ ಬರೆದ ಲೇಖಗಳನ್ನು ಓದಿದ ಕೆಲವರು ಸರಳ ಹೃದಯರು, ಅವನ್ನು ಶ್ಲಾಘಿಸುವರು; ಪತ್ರ ಮುಖದಿಂದ ಉದ್ಗಾರ ತೆಗೆದಿರುವರು; ಸಮಕ್ಷಮ ಹೇಳಿರುವರು ಆದರೂ ಅವನ್ನು ಬಹುಜನ ಮುಂದಾಳುಗಳು (ಗುರುವರ್ಗದವರು) ಸಮ್ಮತಿಸುವದಿಲ್ಲ. "ನಿಮ್ಮ ಮತಗಳು ಅವರಿಗೆ ತಿರಸ್ಕೃತವಾಗಿ ತೋರುತ್ತಿವೆ" ಎಂಬ ಉಲಿಯೂ ನನ್ನ ಕಿವಿಯಮೇಲೆ ಬಂದಿದೆ. ಅವರು ಹೀಗೆ ತಮ್ಮೊಳಗೇ ಆ ಅಭಿಪ್ರಾಯವನ್ನು ಇಟ್ಟುಕೊಂಡು ಸುಮ್ಮನೇ ಕೂಡ್ರದೆ; ಅವನ್ನು ಬರೆದು ಪ್ರಸಿದ್ಧಿಸಿ ನನ್ನ ತಪ್ಪು ತಿದ್ದಬೇಕು. ಅದರಿಂದ ಅವರು ನನ್ನ ಉದ್ಧಾರಕ್ಕೆ ಕೈ ಚಾಚಿದಂತಾಗುವದು. ಉದಾರಧೀಗಳಾಗುವರು, ಪುಣ್ಯಭಾಜನರಾಗುವರು. ಬರಿಯ ಹಿಂದೆಯೇ ಮನಸ್ಸಿನಲ್ಲಿ ಸಂತಾಪಿಸುವದು ಅವರಿಗೆ ಭೂಷಣವಲ್ಲ. ಮುಂದೆ ಬರಲು ಧೈರ್ಯಪಡದಿದ್ದರೆ, ಅವರು ಹೀನವೃತ್ತಿಯವರು. ತಮ್ಮ ಜನ್ಮೋದ್ಧಾರವನ್ನು ಸಹ ಅಲಕ್ಷಿಸುವವರು, ಎಂಬುದು ಸ್ಪಷ್ಟವದೆ.

ನಾನು ನನ್ನ ಲೇಖಗಳನ್ನು ಒಳಿತಾಗಿ ವಿಂಗಡಿಸಿ, ಸ್ಪಷ್ಟೀಕರಿಸಿ, ಸಾಮಾನ್ಯ ಬುದ್ಧಿಯವರಿಗೂ ಸಹ, ಮನಂಬುಗುವಂತೆ ಬರೆಯುತ್ತಿರುವೆನು. ಹೀಗೆ ಯಾವದೊಂದು ಮುಚ್ಚು ಮರೆಯಿಲ್ಲದೆ, ತೀರ ತೆರೆದು ಬರೆಯುವದು, ಆ ಮುಂದಾಳು ವರ್ಗದವರ ಮನಸ್ಸಿಗೆ ಬರುವದಿಲ್ಲೆಂದು ತೋರುತ್ತದೆ. ಹಾಗೆ ಮಾಡಿದರೆ, ವಿಷಯದ ಅತಿ ಪರಿಚಯವಾಗಿ, ಆ ಬಗೆಗೆ ಜನರಲ್ಲಿ ಅವಜ್ಞೆಯುಂಟಾಗುವದೆಂಬುದು ಅವರ ಮತ. ಗೂಢ ವಿಷಯಗಳನ್ನು ಯಾವಾಗಲೂ ಮುಚ್ಚಿಯೇ ಇಡಬೇಕು. ಬೇಕಾದವರು 'ತಮಗೆ ಶರಣು ಬಂದು ತನು-ಮನ ಧನಗಳನ್ನು ಸಾಷ್ಟಾಂಗ ನಮಸ್ಕಾರಪೂರ್ವಕ

ಗುರುವಿಗೆ (ತನುಗೆ) ಸಮರ್ಪಿಸಿ, ಅವನ್ನು ಅರಿಯಬೇಕು. ಸರ್ವ ರೀತಿಯಲ್ಲಿ ಅವರು ತಮಗೆ ಅಂಕಿತರಾಗಿ, ಪರಂಪರಿಯಿಂದ ತನುಗೆ ಸೇವೆಯನ್ನು ಒದಗಿಸುತ್ತಿರಬೇಕು.' ಎಂದು ಅವರ ಮನ್ನಿಃಷೆ ನನ್ನ ಲೇಖಗಳು ಅವರ ಈ ಅಪೇಕ್ಷೆಗೆ ಅಡ್ಡಾಗುತ್ತವೆ. ಅಂತೇ ಅವರು ಅವನ್ನು ತಿರಸ್ಕರಿಸುತ್ತಿರಬಹುದೆಂದು ನನಗನಿಸುತ್ತಿದೆ. ಅವುಗಳಲ್ಲಿ ಯಾರದೇನೂ ನಿಂದೆಯಿಲ್ಲ. ಅರಿಯದವರಿಗೆ ತಿಳಿಯುವಂತೆ ವಿವರವಾಗಿ ಮಾತ್ರ ಬರೆಯಲ್ಪಟ್ಟಿವೆ. ತಪ್ಪುಗಳಿದ್ದರೆ ತಿಳಿಸಬೇಕು. ನಾನು ಅದರ ಉಪಕಾರ ನೆನೆಸುವುದಲ್ಲದೆ ಅಭಿನಂದನವನ್ನೂ ಮಾಡುವೆನು. ಬರೇ ನನ್ನ ಸೇವೆಯನ್ನು ಸಲ್ಲಿಸುವ ಉದ್ದೇಶವೇ ಅವುಗಳಲ್ಲಿರುವದು.

ಗೂಢ ವಿಷಯಗಳನ್ನು ಮುಚ್ಚಿಯೇ ಇಡಬೇಕೆಂದರೆ, "ಪುರಾ ಸಾನಂದ ಯೋಗೀಶ: ಶಿವಜ್ಞಾನ ಪರಾಯಣ: । ಪಂಚಾಕ್ಷರಂ ಸಮುಚ್ಚಾರ್ಯ ನರಕಾತ್ತಾನ್ (ನರಕಾತ + ತಾನ್ ನರಕ ವಾಸಿಗಳನ್ನು) ಅದಾರಯತ್॥" ಎಂದು ನಿಜಗುಣ ಶಿವಯೋಗಿಗಳ ಕೈವಲ್ಯ ಪದ್ಧತಿಯಲ್ಲಿರುವದು. ಸದಾನಂದ ಯೋಗೀಶನು (ಆನಂದದಿಂದ ಕೂಡಿಕೊಂಡ ಶಿವನಲ್ಲಿ ಬೆರೆದಿರುವ ಮಹಿಮನು) ಸತ್ಪುರುಷನು, ಶರಣನು ನರಕ-ದುಃಖದ ಹೊರತು ಬೇರೊಂದಲ್ಲ.) ಪ್ರಪಂಚದಲ್ಲಿ ನಿಮಗ್ನರಾಗಿರುವ ಜನರೆಲ್ಲರೂ ನರಕಿಗಳೇ! ಅವರು ಸದಾ ದುಃಖದಲ್ಲಿಯೇ ಕೊಳೆಯುತ್ತಿರುವರು. ಇಂತಹರ ಉದ್ಧಾರವಾಗಬೇಕೆಂದು ಆ ಯೋಗೀಶನು ಪ್ರಸಿದ್ಧವಾಗಿಯೇ ಎಲ್ಲರಿಗೂ ತಿಳಿಯುವಂತೆಯೇ ಶಿವಪಂಚಾಕ್ಷರಿ ಮಂತ್ರವನ್ನು ಒದರಿ ಉಚ್ಚರಿಸಿದನು. ಅದು ಆ ದುಃಖತರ ಕಿವಿಗೆ ಬಿದ್ದು, ಸ್ಮರಣದಲ್ಲುಳಿದು, ತಾವೂ ಅದರಂತೆ ಉಚ್ಚರಿಸಿ, (ಜಪಗಯ್ದು) ನರಕದಿಂದ ಬಿಡುಗಡೆಹೊಂದಿ ಮುಕ್ತರಾದರು, ಎಂದು ಅಲ್ಲಿ ಬರೆಯಲಾಗಿದೆ. ಇದು ಏಕೆ ಅವಜ್ಞೆಗೆ ಕಾರಣವಾಗಲಿಲ್ಲ! ಸಿದ್ಧಾರೂಢರು ಸದ್ಗುರುಗಳಾದರೂ ಸದಾನಂದ ಯೋಗೀಶ್ವರರೇ! ಅವರೂ ಜನರ ಉದ್ಧಾರಕ್ಕಾಗಿ, ಪಂಚಾಕ್ಷರಿ ಮಂತ್ರವನ್ನು ಜನಸಮುದಾಯಕ್ಕೇ ಒತ್ತಿ ಹೇಳಿರುವರು. ಅದನ್ನು ಕೇಳಿದ ಅವರ ಶಿಷ್ಯರು ಕೂಡ ಈಗಲೂ ಆ ಮಂತ್ರವನ್ನು ಮುಚ್ಚು ಮರೆಯಿಲ್ಲದೆ ಪ್ರಸಿದ್ಧವಾಗಿ ಭಜನೆಯಲ್ಲಿ ಕುಣಿಕುಣಿದು ಅನ್ನುತ್ತಿರುವರು. ಇದು ಸರಿಯಲ್ಲವೆಂದೇ ಗುರುವರ್ಗದವರ ಮತವು. ಅಂತಹ ಜನರನ್ನೆಲ್ಲ ಇದರು ಕಟುವಾಗಿ ಟೀಕಿಸುವರು; ತಿರಸ್ಕರಿಸುವರು. ಆದರೂ "ಭಾವನೆಯಂತಿಹುದಂತೆ ಫಲಂಗಳ್" ಎಂಬುದು

ಸುಪ್ರಸಿದ್ಧವಿರುವದು. ಆ ಪ್ರಕಾರ ಅವರ ಭಾವನೆಯಂತೆ ಅವರಿಗೆ ಫಲ ಪ್ರಾಪ್ತಿಯಾಗಲೇಬೇಕು. ಅಂತೇ ಅವರು "ಸಿದ್ಧಾರೂಢ ಸದ್ಗುರು ತಂದೆ ಉದ್ಧಾರಾದೆವು ನಿನ್ನಿಂದೆ" ಎಂದು ಭಕ್ತಿಪೂರ್ವಕವಾಗಿ ತಮ್ಮ ಜಗದ್ಗುರ್ರು ಗಳನ್ನು ಸ್ಮರಿಸುವರು. ಇದೆಲ್ಲ ಯೋಗ್ಯವು. ಆದರೆ ಅವರು ಅಪೇಯ ಪಾನಾದಿಗಳಿಗೆ ಒಳಗಾಗುವದು ಮಾತ್ರ ಅಪರಾಧ.

ಇದರಂತೆಯೇ ನಾಗಲಿಂಗಪ್ಪನೆಂಬ ಒಬ್ಬ ಸತ್ಪುರುಷನು ಸವದತ್ತೀ ತಾಲೂಕಿನಲ್ಲಿ ಸುಮಾರು ೧೦|೭೦ ವರ್ಷಗಳ ಹಿಂದೆ ಆಗಿ ಹೋದನು. ಆತನು ಮಹಾ ಸತ್ಪುರುಷನೇ! ಆದರೆ ಇವರೀರ್ವರನ್ನು ಯಾರೂ ಪುರಸ್ಕರಿಸುವದಿಲ್ಲ. ಗುರುವರ್ಗದವರ ಅವಹೇಳನೆಗೇನೇ ಅವರು ತಕ್ಕವ ರಾದರು.

ನಿಜಗುಣಶಿವಯೋಗಿಗಳು ಮೂಲತಃ ಆರಾಧ್ಯರೇ! ಆದರೂ ಅವರು ತಮ್ಮ ಆರಾಧ್ಯ ಮತಕ್ಕಿಂತ, ಪ್ರಮಥರಿಂದ ಸ್ಥಾಪಿತವಾದ ವೀರಶೈವ (ಲಿಂಗವಂತ) ಮತವು ಪ್ರಗತಿಪರವಾದದೆಂಬುದನ್ನು ಗಮನಿಸಿ, ಆರಾಧ್ಯ ತ್ವದ ಒಣ ಅಭಿಮಾನಕ್ಕೊಳಗಾಗದೇ, ಬಹು ಅಂಶದಿಂದ, (೧೦೦ಕ್ಕೆ ೯೦/೯೫ ಪಾಲು) ಪ್ರಮಥರ ಮಾರ್ಗವನ್ನೇ ಅವಲಂಬಿಸಿ, ಬೆಳಕಿಗೆ ಬಂದು, "ಶಿವಯೋಗಿ' ಗಳೆಂದು ಹೆಸರಾದರು. ಅವರ ಗ್ರಂಥಗಳನ್ನು ನೋಡಿದ ವರಿಗೆ ಇದು ಸ್ಪಷ್ಟವಾಗಿ ಹೊಳೆಯುವದು. ಅವರನ್ನು ಬ್ರಾಹ್ಮಣಾಚಾರಿ ಗಳು ಸ್ವಲ್ಪವೂ ಪುರಸ್ಕರಿಸುವದಿಲ್ಲ. ಆದರೆ ನಿಜಗುಣರೇನು ಅಜ್ಞಾನಿ ಗಳಲ್ಲ; ಅಪಾರ ಜ್ಞಾನಿ ನಿಧಿಗಳು. ಹೀಗಿದ್ದು ತಿರಸ್ಕಾರವೇಕೆಂದರೆ, ಅವರು ಪ್ರಮಥಾನುಯಾಯಿಗಳಾಗಿ, ಆ ರೀತಿ ಗ್ರಂಥಗಳನ್ನು ರಚಿಸಿದರು.

ಈಗೀಗ ನಮ್ಮ ಗುರುವರ್ಗದವರು, ನಿಜಗುಣ ಶಿವಯೋಗಿಗಳ ವಾರ್ಷಿಕ ಮಹೋತ್ಸವಗಳು, ಎಲ್ಲೆಡೆಗೂ ನಡೆಯಬೇಕೆಂದು ಯತ್ನಿಸು ತ್ತಿರುವರು. ಇದು ಸ್ತುತ್ಯವೇ ಸರಿ! ಆದರೆ ಇವರ ಶಿವಯೋಗಿತ್ವ ವನ್ನು ಹಿಂದಕ್ಕೆ ಸರಿಸಿ ತಮ್ಮಂತೆ ಆರಾಧ್ಯರೆಂಬುದನ್ನು ಮುಂದಿಟ್ಟು ಕೊಂಡು, ಅವರ ವಾರ್ಷಿಕೋತ್ಸವದ ಸಿದ್ಧತೆ ನಡೆದಿದ್ದರೆ ಮಾತ್ರ, ಅದು ಗೌಣ! ಅವರ ಬೆಳಕಿನಲ್ಲಿಯೇ ತಾವು ಬೆಳಗಬಹುದೆಂದು, ತಿಳಿದಿದ್ದರೆ ಅದು ತಪ್ಪು! ಅದರಂತೆಯೇ ತಾವು ಆರಾಧ್ಯತ್ವವನ್ನು ಸರಿಸಿ, ಪ್ರಮ ಥರ ಮಾರ್ಗವನ್ನನುಸರಿಸಿದರೆ ಮಾತ್ರ, ಪ್ರಕಾಶವಂತರಾಗುವರು. ನಾನು

ಗುರುವರ್ಗದವರಿಗೆ ಇದನ್ನೇ ಮೇಲಿಂದ ಮೇಲೆ ಹೇಳುತ್ತ ಬಂದಿರುವೆನು. "ನ ಬ್ರೂಯಾತ್ ಸತ್ಯಮಪ್ರಿಯಮ್" ಎಂಬಂತೆ ನಾನು ಅವರಿಗೆ ಅಪ್ರಿಯನೂ ತಿರಸ್ಕೃತನೂ, ಆಗಿರುವೆನು. ಇದಕ್ಕೆ ನನ್ನ ಉಪಾಯವಿಲ್ಲ. ಆದರೂ ಅವರು—"ಅಪ್ರಿಯಸ್ಯ ತು ಪಥ್ಯಸ್ಯ ವಕ್ತಾಶ್ರೋತಾ ಚ ದುರ್ಲಭಃ" ಎಂಬುದನ್ನು ನೆನೆಸಬೇಕೆಂದು ; ನಾನು ನಮ್ರತೆಯಿಂದ ಬೇಡಿಕೊಳ್ಳುವೆನು.

ಅಥಣಿಯ ಶ್ರೀ ಮುರಿಗೆಪ್ಪನವರೂ, ಮುಳುಗುಂದದ ಬಾಲಮುಕುಂದಸ್ವಾಮಿಗಳೂ ಮೊದಲಾದವರು ಗುರುವರ್ಗದವರೇ ಆಗಿದ್ದು, ಅವರು ಒಳ್ಳೇ ಬೆಳಕಿಗೆ ಬಂದು, ಶಿವಸಾಯುಜ್ಯವನ್ನೈದಿದರು. ಆದರೆ ಅದು ಯಾವಾಗ! ಅವರು ತಮ್ಮ ಆರಾಧ್ಯತ್ವಕ್ಕೆ ಶರಣು ಹೊಡೆದು, ಪ್ರಮಥರ ಮಾರ್ಗಾನುಯಾಯಿಗಳಾಗಿ, ಹೊನ್ನು ಹೆಣ್ಣು ಮಣ್ಣುಗಳನ್ನು ಅಲ್ಲಗಳೆದು, ಷಟ್‌ಸ್ಥಲ ಮಾರ್ಗವನ್ನು ಸ್ವೀಕರಿಸಿದಾಗ! ಈಗ ಬಹುಕಡೆಗೆ ಮುಪ್ಪಿನವರಾದ ವಿರಕ್ತರು, ತಮ್ಮ ಶಿಷ್ಯರಿಗೆ ಮಠಾಧಿಕಾರವನ್ನು ಸ್ವೀಕರಿಸಿ, ತಾವು ಆ ಜಂಜಡದಿಂದ ಅಥಣಿಯ ಸ್ವಾಮಿಗಳಂತೆ ಮುಕ್ತರಾಗಿ, ಪ್ರಮಥರ ಮಾರ್ಗವನ್ನೇ (ಶ್ರೀ ಪ್ರಭುದೇವರ ಪದ್ಧತಿಯನ್ನೇ) ಅನುಸರಿಸುತ್ತಿರುವದು ಕಂಡುಬರುತ್ತಿದೆ. ಇತ್ತ ಗುರುವರ್ಗದವರು ಗಮನಿಸುವರೇ!

ಇಲ್ಲಿಗೆ ಈ ಮುಖ್ಯ ಲೇಖವು ಮುಗಿಯಿತು. ಇನ್ನು ನನ್ನ ಆ ಹಿಂದಿನ ಲೇಖಗಳಲ್ಲಿ ತಿಳಿಯದೆ ಬಿದ್ದಿರುವ, ಎದ್ದುಕಾಣುವ, ತಪ್ಪುಗಳನ್ನು ತಿದ್ದಿ, ಒಪ್ಪಾದುವನ್ನು ಬರೆದು, ಈ ಲೇಖವನ್ನು ಸಮಾಪ್ತಿಗೊಳಿಸುವೆನು. ಅವುः—

೧. ಏಕಾದಶ ಪ್ರಸಾದ ಲೇಖದೊಳಗೆ, ಹತ್ತನೆಯದಾದ ಸಮತಾ ಪ್ರಸಾದವುಃ— ಇಲ್ಲಿ ಸಮತಾ ಪ್ರಸಾದವೆಂದರೆ, ಸಮತ್ವದ ಪ್ರಸಾದವೆಂದು ತಿಳಿದಿರುವೆನು. ಅದು ತಪ್ಪು. ಸಮತೆ (=ಸ+ಮತ= ಮತದಿಂದೊಡಗೂಡಿದ) ವೆಂದರೆ ವೀರಶೈವ ಮತಕ್ಕೆ ಸಮ್ಮತವಾದ ಪ್ರಸಾದವೆಂದರಿಯಬೇಕು. ಹಿಂದಿನ ಒಂಬತ್ತು ಪ್ರಸಾದಗಳನ್ನು ಸರಿಯಾಗಿ ಆಚರಿಸುವದೇ ಸಮತಪ್ರಸಾದವು.

೨. ಏಕೋತ್ತರಶತಸ್ಥಲದೊಳಗಿನ, ಪ್ರಾಣಲಿಂಗಿಯ ಅಂಗಸ್ಥಲದೊಳಗಿನ, ೪ನೆಯ ಹಾಗೂ ೫ನೆಯ ಸ್ಥಲಗಳು ತಪ್ಪಿರುವವು. ಅವುಗಳ ವಿಶದೀಕರಣವುಃ— ನಾಲ್ಕನೆಯದು ಲಿಂಗ ನಿಜಸ್ಥಳಃ— ಮಹೇಶ್ವರನ ಅಂಗಸ್ಥಳಗಳಲ್ಲಿ ಒಂಬತ್ತನೆಯದು, "ಭಕ್ತದೇಹಿಕ ಲಿಂಗಸ್ಥಳ"ವೆಂಬುದಿದೆ.

ಅದಕ್ಕೂ ಮುಂದೆ ಹೋಗಿ, ಈ ಲಿಂಗ ನಿಜಸ್ಥಳವನ್ನು ಹೇಳಿದ್ದಾರೆ. ಭಕ್ತನ ದೇಹದಲ್ಲಿಯೇ ಅಂಗಗಳೆಂಬ ವಿಭಾಗಗಳನ್ನು ಮಾಡಿದ್ದಾರೆ. ಅವು ಕೆಳಗೆ ಬರುವವು:—

ಐದನೆಯದಾದ ಅಂಗ ಲಿಂಗಸ್ಥಳ:— ಅಂಗಗಳು ಹನ್ನೆರಡು:— (೧) ತ್ಯಾಗಾಂಗ; (೨) ಭೋಗಾಂಗ; (೩) ಯೋಗಾಂಗ; (೪) ಭಕ್ತಾಂಗ (ಈಶ್ವರಾಂಗ); (೫) ಮಹೇಶ್ವರಾಂಗ; (೬) ಪ್ರಸಾದ್ಯಂಗ; (೭) ಪ್ರಾಣಲಿಂಗ್ಯಂಗ; (೮) ಶರಣಾಂಗ (೯) ಐಕ್ಯಾಂಗ; (೧೦) ಸ್ಥೂಲಾಂಗ; (೧೧) ಸೂಕ್ಷ್ಮಾಂಗ; (೧೨) ಕಾರಣಾಂಗ. ಇನ್ನು ಲಿಂಗಗಳಾದರೂ ಹನ್ನೆರಡು ಅವೆ:— ಅವು ಈ ಅಂಗಗಳಲ್ಲಿ ಕ್ರಮವಾಗಿ ವಾಸಿಸುವವು.

(೧) ಇಷ್ಟಲಿಂಗ; (೨) ಪ್ರಾಣಲಿಂಗ; (೩) ಭಾವಲಿಂಗ; (೪) ಆಚಾರಲಿಂಗ; (೫) ಗುರುಲಿಂಗ; (೬) ಶಿವಲಿಂಗ; (೭) ಚರ (ಜಂಗಮ) ಲಿಂಗ; (೮) ಪ್ರಸಾದಲಿಂಗ; (೯) ಮಹಾಲಿಂಗ; (೧೦) ನಿಷ್ಕಲಲಿಂಗ; (೧೧) ನಿಃಶೂನ್ಯಲಿಂಗ; (೧೨) ನಿರಂಜನಲಿಂಗ. ಹೀಗೆ ತಿಳಿಯುವದೇ ಅಂಗ-ಲಿಂಗಸ್ಥಳವು.

೩. ಷಟ್-ತ್ರಿಂಶತ್‌ಸ್ಥಲದೊಳಗಿನ ಐಕ್ಯಸ್ಥಳದ ಲಿಂಗಸ್ಥಳಗಳು ತಪ್ಪಿರುವವು. ಅವುಗಳ ಸ್ಪಷ್ಟೀಕರಣವು—

ಪಿಂಡಜ ಲಿಂಗ:— ಅನೇಕ ಜನ್ಮಗಳಲ್ಲಿ ಮಾಡಿದ ಪುಣ್ಯಪರಿಪಾಕದಿಂದ, ಪಾಪವೆಲ್ಲ ನಷ್ಟವಾಗಿ, ಕೇವಲ ಪುಣ್ಯಮಯನಾದ ಜೀವನೇ ಪಿಂಡವು. ಇಂಥಹ ಪಿಂಡದಿಂದ ಜನಿಸಿದ ಲಿಂಗವೇ ಪಿಂಡಜ ಲಿಂಗವು.

ಅಂಡಜ ಲಿಂಗ:— ಜಗತ್ತಿನ ಇಡಿ ಸ್ವರೂಪವೇ ಬ್ರಹ್ಮಾಂಡವು. ಬ್ರಹ್ಮನ ಅಂಶಗಳು (ಬಿಂದುಗಳು) ಸಿಡಿದು ಹೋಗಿ, ಜಗದೊಳಗಿನ ಬೇರೆ ಬೇರೆ ಪದಾರ್ಥಗಳಲ್ಲಿ, ಚೈತನ್ಯ ರೂಪದಿಂದ ವಾಸಿಸುತ್ತವೆ. ಅದರಂತೆ ಮನುಷ್ಯನ ಶರೀರವೊಳಗೂ, ಜೀವರೂಪದಿಂದ ಇರುತ್ತದೆ. ಆದುದರಿಂದ ಪರಮಾತ್ಮನ ಸ್ವರೂಪವಾದ ಈ ಜೀವವೇ ಅಂಡಜ ಲಿಂಗವು.

ಬಿಂದ್ವಜಲಿಂಗ:— ಬಿಂದು+ಅ-ಜ=ಬಿಂದ್ವಜ. (ಬಿಂದುವಿನಿಂದ ಹುಟ್ಟದೆ ಇದ್ದುದು) ಇಂತಹ ಲಿಂಗವೇ ಬಿಂದ್ವಜ ಲಿಂಗವು. ಬಿಂದುವಿ

ನಿಂದ ಹುಟ್ಟದೆ ಇದ್ದುದು ಅಂದರೆ, ಅದರಾಚೆ ಇರುವ ನಾದದಿಂದ ಜನಿಸಿದುದೆಂದು ತಿಳಿಯಬೇಕು. ಮಂತ್ರವೆಲ್ಲ ನಾದಮಯ—ಆ ಕಾರಣ, ಗುರುಮುಖದಿಂದ ಮಂತ್ರವನಾಲಿಸಿ, ಅದನ್ನು ಜಪಿಸಿ, ತತ್‌ಸ್ವರೂಪವಾದುದೇ (ಮನೋರ್ಲಯವಾದುದೇ) ಬಿಂದ್ವಜಲಿಂಗವು.

೪. ಅವಸ್ಥೆಗಳನ್ನು ಕುರಿತು ಬರೆದ ಲೇಖದಲ್ಲಿ, ನಾಲ್ಕನೆಯದಾದ ತುರೀಯಾವಸ್ಥೆಯು ತಪ್ಪಿದೆ. "ಲಿಂಗವು ಕಮಲದಿಂದ ಹೊರಬಿದ್ದರೆ" ಎಂಬುದನ್ನು, "ಲಿಂಗವು ಜಗತ್ತಿನಲ್ಲಿ ಸೇರಿದರೆ" ಎಂದು ಆಗ ತಿಳಿದದೆ. ಅದು ಜಗದಲ್ಲಿ ಅಲ್ಲ! ಲಿಂಗವು (ಮಹಾಲಿಂಗವು—ಇದು ಕಲಾಲಿಂಗ) ಕಮಲ. (ಆಜ್ಞಾಚಕ್ರ) ದಿಂದ ಹೊರಬಿದ್ದರೆ; ಅಂದರೆ ಕಲೆಯು ಬಿಂದುವಿನಲ್ಲಿ ಸೇರಿದರೆ, ಅದು ತುರೀಯಾವಸ್ಥೆಯಾಗುವದು. ಮುಂದೆ ಲಿಂಗವು ನಾದದಲ್ಲಿ ಬೆರೆದರೆ ತುರೀಯಾತೀತ ಅವಸ್ಥೆಯು.

೫. ಹಿಂದೆ ಜಪಗಳ ಲೇಖದೊಳಗೆ 'ಸೋಹಂ' ದ ಬಗೆಗೆ ಬರೆದುದು ಅಷ್ಟೇನು ಸ್ಪಷ್ಟವಾಗಿಲ್ಲ. ಆದುದರಿಂದ ಇಲ್ಲಿ ಅದನ್ನೇ ಮತ್ತಿಷ್ಟು ವಿಶದವಾಗಿ ಕೆಳಗೆ ಬರೆದದೆ—

ಸೋಹಂ
- (೧) ಸಃ + ಹಂ =
  - ಸಃ = ಅವನು. ಇಲ್ಲವೆ ಶಿವನು.
  - ಹಂ = "ಹ" ಕಾರವು. ಇಲ್ಲವೆ ನಿರಂಜನಲಿಂಗವು. / ಪ್ರಣವವು.
- (೨) ಸಃ + ಅಹಂ
  - ಸಃ = ಅವನು ಇಲ್ಲವೆ ಶಿವನು.
  - ಅಹಂ = ನಾನು / ಜೀವನು ಇಲ್ಲವೆ 'ಹ'ಕಾರವಲ್ಲದ-ಅಸತ್ತದ ಅಲ್ಲವೆ ಬದಲಾಗುವ ಸತ್ತು ಎನಿಸುವ ಜಗತ್ತು. / ಶಕ್ತಿ

ಇನ್ನು ಹಲಕೆಲವು ಚಿಕ್ಕಪುಟ್ಟ ದೋಷಗಳು ಹೊರಡಬಹುದು. ಅವನ್ನು ಸುಜ್ಞ ವಾಚಕರು ತಾವೇ ದಯವಿಟ್ಟು ತಿದ್ದಿಕೊಳ್ಳುವರೆಂದು ನಂಬಿ ಈ ಲೇಖವನ್ನು ಮುಗಿಸುವೆನು. ಶಿವಾನುಭವದ ವಾಚಕ ವೃಂದಕ್ಕೂ, ಸನ್ಮಾನ್ಯ ಸಂಪಾದಕರಿಗೂ ಲೋಭವಿರಲೆಂದು ಪ್ರಾರ್ಥಿಸುತ್ತೇನೆ.

# ವೇದಪೂರ್ವ ವೀರಶೈವ ಧರ್ಮ.

[ಲೇ:- ಶ್ರೀಯುತ ಎನ್. ಎಸ್. ವಿರೂಪಾಕ್ಷಯ್ಯ, ಬೆಂಗಳೂರು]

"ವಚನಧರ್ಮ ಅರ್ಥಾತ್ ಲಿಂಗವಂತ ಧರ್ಮವು" ಈ ತಲೆಬರಹದಿಂದ "ಶಿವಾನುಭವ" ಮಾರ್ಚ-ಎಪ್ರೀಲ ಸಂಚಿಕೆಯಲ್ಲಿ 'ಧರ್ಮಾಭಿಮಾನಿ' ಎಂಬ ಗುಟ್ಟು ಹೆಸರಿನವರು ಒಂದು ಲೇಖವನ್ನು ಬರೆದಿದ್ದಾರೆ. ಅದು ತುಂಬಾ ವಿಚಿತ್ರವಾಗಿದೆ; ವಿತರ್ಕಮೂಲವಾಗಿದೆ. ಬರೀ ಕಲ್ಪಿತವಾಗಿದೆ; ಕಲ್ಪಿತವಾಗಿದೆ.

'ವೀರಶೈವವು ಅನಾದಿಕಾಲದ್ದೆಂದು ವಾದಿಗಳು; ಹನ್ನೊಂದನೆಯ ಶತಮಾನದ ದೇವರದಾಸಿಮಯ್ಯನಿಂದ ಉಗಮವಾಯಿತೆಂದು ಪ್ರತಿವಾದಿಗಳು' ಎಂದು ಧರ್ಮಾಭಿಮಾನಿಗಳು ಪ್ರಾರಂಭಿಸಿದ್ದಾರೆ. ವಾದಿಗಳು ಯಾರೆಂಬುದನ್ನು ಹೆಸರಿಸಿಲ್ಲ. ಪ್ರತಿವಾದಿಗಳು ಇವರ ಕಲ್ಪನಾಸೃಷ್ಟಿಯವರು. ಇಲ್ಲವಾದರೆ ಇವರ ಹೆಸರನ್ನು ಏಕೆ ಉಲ್ಲೇಖಿಸಬಾರದಾಗಿತ್ತು?

ವಚನ ಧರ್ಮವೇ ಲಿಂಗಾಯತ ಧರ್ಮವೆಂದು ಹೇಳ ಹೊರಟ ಧರ್ಮಾಭಿಮಾನಿಗಳು ತಮ್ಮ ಈ ಅಭಿಪ್ರಾಯವನ್ನು ಸಮರ್ಥನೆ ಮಾಡದೆ ಕೃತಿಯಾಗಿ ವೀರಶೈವ ಧರ್ಮ ವೇದಕ್ಕೆ ಪೂರ್ವದಲ್ಲಿದ್ದುದೆಂಬ ವಾಸ್ತವ ವಿಷಯವನ್ನು ಹೃದಯಾರೆ ಒಪ್ಪಿ ಹೀಗೆ ಸಮರ್ಥನಗೊಳಿಸಿದ್ದಾರೆ.

"ವಾದಿಗಳು ಉದಹರಿಸುವ ಮಹೆಂಜೋದಾರೋ ಅವಶೇಷಗಳಿಂದ ಆರ್ಯರು ಭರತಖಂಡಕ್ಕೆ ಬರುವದಕ್ಕೆ ಮುಂಚೆ ಅಲ್ಲಿ ಅತಿ ಶ್ರೇಷ್ಠವಾದ ದ್ರಾವಿಡ ಸಂಸ್ಕೃತಿ ಇತ್ತೆಂದು ತಿಳಿದುಬರುತ್ತದೆ. ಈ ಅವಶೇಷಗಳಲ್ಲಿ ಲಿಂಗ ನಂದಿ ವಿಗ್ರಹಗಳು ದೊರೆತಿರುವದರಿಂದಲೂ ಇಜಿಪ್ತ, ಗ್ರೀಸ್, ಬೆಬಿಲೋನಿಯಾ, ಬ್ರಿಟನ್‌ದ ಡ್ರೂಯಿಡ್ಸ (ದ್ರಾವಿಡರು) ಅಸ್ಸಿರಿಯ ಮುಂತಾದ ದೇಶಗಳಲ್ಲಿ ಈ ಲಿಂಗ ಮೂರ್ತಿಗಳು ದೊರೆಯುತ್ತಿರುವದರಿಂದ ಲಿಂಗ ಪೂಜೆಯು ಆರ್ಯರಿಗಿಂತಲೂ ಮುಂಚೆಯೇ ವಿಶ್ವವ್ಯಾಪ್ತಿ ಹೊಂದಿತ್ತೆಂದು ತಿಳಿಯಬಾರದೇ ಇರದು. ಆದುದರಿಂದ ಲಿಂಗಾರಾಧನೆಯು ಅವೈದಿಕ ಧರ್ಮವು ಎಂದು ವಾದಿಗಳು ಎಷ್ಟು ಬೇಗನೆ ತಿಳಿದುಕೊಳ್ಳುವರೋ ಅಷ್ಟು ಬೇಗನೆ ಮೇಲ್ಕಂಡ ವಿವಾದವು ಬಗೆಹರಿಯುವದು. ಲಿಂಗಾರಾಧನೆಯು

ವೇದಾಗಮೋಕ್ತವೆಂದು ವಾದಿಗಳು ತಿಳಿದುಕೊಂಡರೆ ಮುಹಂಜೆಾದಾರೋ ಅವಶೇಷಗಳು ಸಳ್ಳಾಗಿಬಿಡುವವು. ವೇದಗಳಲ್ಲಿ ಲಿಂಗಾರಾಧನೆಯನ್ನು ಶಿಶ್ನದೇವತಾರಾಧನೆಯೆಂದು ಅವಹೇಳನ ಮಾಡಿರುವದನ್ನು ವಾದಿಗಳು ಅವಶ್ಯವಾಗಿ ಗಮನಿಸಬೇಕು."

ಧರ್ಮಾಭಿಮಾನಿಗಳು ಹೀಗೆ ಬರೆದು ವೀರಶೈವ ಧರ್ಮವು ವೇದ ಕಾಲಕ್ಕೆ ಪೂರ್ವದ್ದೆಂದು ಸ್ಪಷ್ಟವಾಗಿ ಒಪ್ಪಿಕೊಂಡಿದ್ದಾರೆ ಇದುವೇ ಸತ್ಯ; ಸ್ತುತ್ಯ.

ಎರಡನೆಯದಾಗಿ ಈ ಲೇಖಕರು ವಚನಧರ್ಮದ ಉಗಮವನ್ನು ವಿಚಾರಿಸುತ್ತ "ಸತಿಯರ ಸಂಗವನು ಅತಿಶಯದ ಗ್ರಾಸವನು...." ಎಂಬ ದೇವರದಾಸಿಮಯ್ಯನ ವಚನವನ್ನೇ ಉದಹರಿಸಿದ್ದಾರೆ. ಪರ್ಯಾಯವಾಗಿ ಹನ್ನೊಂದನೆಯ ಶತಮಾನವನ್ನೇ ಒಪ್ಪಿಕೊಂಡಿದ್ದಾರೆ.

ಮೂರನೆಯದಾಗಿ ಧರ್ಮಾಭಿಮಾನಿಗಳು ಗುರುವನ್ನು ಎಲ್ಲ ಧರ್ಮಗಳಿಗೆ ಸಮನ್ವಯ ಮಾಡಿ, ಸರ್ವಮಾನ್ಯನನ್ನಾಗಿ ಮಾಡಿ ಗುರುಭಕ್ತರಾಗಿದ್ದಾರೆ. ಪಾದೋದಕ, ಪ್ರಸಾದ, ಮಂತ್ರ, ರುದ್ರಾಕ್ಷಿ, ಭಸ್ಮ ಇವಕ್ಕೂ ಎಲ್ಲ ಶೈವ ಪಂಥಗಳಲ್ಲಿ ಅವಕಾಶ ಕಲ್ಪಿಸಿಕೊಟ್ಟಿದ್ದಾರೆ. ಆದರೆ ಉಳಿದ 'ಜಂಗಮ' ಪದಕ್ಕೆ ಶ್ರೀ ಜಿ. ಗಿ ಜಾನುಸಾಹೇಬರ ವಿಶಾಲಾರ್ಥವನ್ನು ತೋರಿಸಿ, ಜಂಗಮದ ಸ್ಥಾನವನ್ನು ಒಂದು ಮತದ ಎಲ್ಲೆ ಕಟ್ಟಿಗೆ ಮಾತ್ರ ತಂದು ನಿಲ್ಲಿಸಿದ್ದಾರೆ. ಇದು ವಿಚಿತ್ರವಲ್ಲವೇ ? ಈ ಲೇಖಕರ ದೃಷ್ಟಿಯಲ್ಲಿ ಯಾವುದು ವಿಶಾಲವಾಗಬೇಕಾಗಿತ್ತೋ ಅದು ಸಂಕುಚಿತವಾಗಿ, ಸಂಕುಚಿತಗೊಳಿಸಬೇಕಾದವು ವಿಶಾಲವಾಗಿ ವಿವರಿಸಲ್ಪಟ್ಟಿದ್ದು ವಿಚಿತ್ರವಲ್ಲದೆ ಮತ್ತೇನು ?

ಇಷ್ಟಲಿಂಗೋಪಾಸನೆಯ ವಿಷಯವನ್ನು ಎತ್ತಿ ಇಲ್ಲದ ಸಲ್ಲದ ವಿವರಣೆಯನ್ನು ಇಷ್ಟಾಗೋಷ್ಠಿಯಾಗಿ ಮಾಡಿದ್ದಾರೆ ಧರ್ಮಾಭಿಮಾನಿಗಳು. ದೇವರದಾಸಿಮಯ್ಯನ ಕಾಲದಲ್ಲಿ ಮತ್ತು ಅವನಿಗೆ ಮುಂಚೆ ಕಾಳಾಮುಖ ಲಕುಲೀಶ ಪಾಶುಪತ ಶುದ್ಧಶೈವ ಮುಂತಾದ ಶೈವ ಪಂಥಗಳಿದ್ದವಂತೆ! ವೀರಶೈವವಿರಲಿಲ್ಲವಂತೆ! ಶ್ರೀಶೈಲ ಕಾಳೇ, ಹೂಲಿ ಮುಂತಾದ ಕ್ಷೇತ್ರಗಳಲ್ಲಿ ಕ್ಷೇತ್ರಾಧಿಪತಿಗಳು ಕಾಳಾಮುಖರೋ ಲಕುಲೀಶರೋ ಆಗಿದ್ದರಂತೆ ! ಇದಕ್ಕೆ ಆಧಾರಗಳಿಲ್ಲ- "ದೇವರದಾಸಿಮಾರ್ಯ ಪ್ರಶಸ್ತಿ ಗ್ರಂಥದ ೭೫ನೇ

ಪುಟದಲ್ಲಿ ನೆಪಮಾತ್ರಕ್ಕೆ ಅವನು ಲಿಂಗ ಧರಿಸಲಿಲ್ಲ. ಲಿಂಗದೀಕ್ಷೆಯನ್ನು ಪಡೆಯಲಿಲ್ಲ ಎಂದು ಹೇಳಲಾಗಿದೆ." ಎಂದು ಧರ್ಮಾಭಿಮಾನಿಗಳು ಅರ್ಧ ವಾಕ್ಯಗಳನ್ನು ಉದ್ಧರಿಸಿದ್ದಾರೆ. ಆಳವಾದ ಲಿಂಗದೀಕ್ಷೆಯನ್ನು ಪಡೆದಿದ್ದನೆಂದು ಹೇಳಲಿರುವ ಆ ವಾಕ್ಯಗಳನ್ನು ಉದ್ಧರಿಸಿ ಯಾವ ಸಾಳನೆಯನ್ನು ಮಾಡಿ ಮುಕ್ತರಾಗಿರುವರೊ ಧರ್ಮಾಭಿಮಾನಿಗಳು ತಿಳಿಯರು ದೇವರ ದಾಸಿಮಯ್ಯನ ಗುರುಗಳಾದ "ಶ್ರೀ ಚಂದ್ರಗುಂಡರು ಕಾಳಾಮುಖರಾಗಿರಬೇಕು. ಏಕೆಂದರೆ ಅವರ ತರುವಾಯ ಆ ಪೀಠಕ್ಕೆ ಬಂದ ಕಾಶೀವಿಲಾಸ ಕ್ರಿಯಾಶಕ್ತಿಯವರು ಕಾಳಾಮುಖರೆಂದು ಅದೇ ಗ್ರಂಥದ ೨ನೇ ಭಾಗದ ಒಂದು ಲೇಖದಲ್ಲಿ ಉಲ್ಲೇಖವಾಗಿದೆ." ಆ ಲೇಖವಾವುದು ? ಆ ಲೇಖಕರು ಯಾರು ? ಎಂಬುದನ್ನು ಅದೇಕೆ ಎತ್ತಿ ಬರೆಯಲಿಲ್ಲವೊ ಬೇರೆ ತಿಳಿಯದು. ಶ್ರೀ ಜಗದ್ಗುರು ಚಂದ್ರಗುಂಡ ಶಿವಾಚಾರ್ಯರನ್ನು ಕಾಳಾಮುಖರನ್ನಾಗಿ ಮಾಡ ಹೊರಟ ಈ ಧರ್ಮಾಭಿಮಾನಿಗಳಿಗೆ ನಿಜವಾಗಿಯೂ ಕಣ್ಣಿಲ್ಲ; ಧರ್ಮಾಭಿಮಾನವಿಲ್ಲ ಐತಿಹಾಸಿಕ ಬುದ್ಧಿಯಿಲ್ಲ. ಇಂತಹ ಜವಾಬ್ದಾರಿ ವಿಷಯಗಳನ್ನು ಆಧಾರವಿಲ್ಲದೆ ಬರೆಯುವವರಿಗೆ ಕಣ್ಣಿದೆಯೆಂದು ಹೇಗೆ ಹೇಳೋಣ ? ವೀರಶೈವ ಪಂಚ ಪೀಠಗಳಲ್ಲಿ ಒಂದಾದ ಶ್ರೀಶೈಲ ಪೀಠದ ಮೂರನೆಯ ಜಗದ್ಗುರುಗಳಾದ ಶ್ರೀ ಚಂದ್ರಗುಂಡ ಶಿವಾಚಾರ್ಯರನ್ನು ವೀರಶೈವ ಮಠಗುರುವರ್ಯರನ್ನು ಕಾಳಾಮುಖರೆಂದು ಸಲ್ಲದ ಸಾಧನೆಯನ್ನು ಮಾಡಲೆಳೆಸುವ ಇವರು ನಿಜವಾಗಿಯೂ ಧರ್ಮಾಭಿಮಾನಿಗಳೆ ? ಒಂದಕ್ಕೂ ಆಧಾರ ಕೊಡದೆ ಮನಸಿಗೆ ಬಂದಂತೆಲ್ಲ ಬರೆಯಹೊರಟ ಇವರಿಗೆ ಅದಾವ ಐತಿಹಾಸಿಕ ವಿವೇಚನೆಯಿದೆ ?

ಶ್ರೀ ಜಗದ್ಗುರು ಚಂದ್ರಗುಂಡ ದೇಶಿಕೇಂದ್ರರು ಶ್ರೀ ದೇವರದಾಸಿಮಯ್ಯನಿಗೆ ಉಪದೇಶಮಾಡಿದುದು ಇಷ್ಟಲಿಂಗೋಪಾಸನೆ, ವೀರಶೈವ ಲಿಂಗದೀಕ್ಷೆ, ಗುರುಕಾರುಣ್ಯ. ದೇವರದಾಸಿಮಯ್ಯನ ಕಾಲದಲ್ಲಿ ವೀರಶೈವವಿರಲಿಲ್ಲೆಂದು ಹೇಳುವ ಈ ಧರ್ಮಾಭಿಮಾನಿಗಳು, "...ಗುರುಚರಣದ ಮೇಲೆ ತನುವೆಂಬ ತೃಣವ ಕಂಬಿರಿಸಿದರೆ ಆತನ (ಶಿಷ್ಯನ) ಸರ್ವಾಂಗವೆಲ್ಲ ಲಿಂಗ ಕಾಣಾ ರಾಮನಾಥಾ" ಎಂಬ ಅದೇ ದೇವರದಾಸಿಮಯ್ಯನ ಲಿಂಗವಂತಿಕೆಯನ್ನು ಕಣ್ಣಾರಳಿಸಿ ಕಾಣಲಿ ಅದರಲ್ಲಿಯೂ ಸರ್ವಾಂಗಲಿಂಗದ ಸಂಪೂರ್ಣ ಲಿಂಗವಂತಿಕೆಯನ್ನು ಚನ್ನಾಗಿ ದಿಟ್ಟಿಸಿ ನೋಡಿ ತಮಗಿರುವ ಅರ್ಧ ಧರ್ಮಾಭಿಮಾನವನ್ನು ಇನ್ನು ಮುಂದೆ ತಾಳಲಿ.

ಇನ್ನು ವೀರಶೈವ ಸಂಸ್ಕೃತ ಗ್ರಂಥಗಳ ವಿಚಾರ ಪ್ರಸ್ತಾಪಿಸಿ ಅವು ೧೩ನೇ ಶತಮಾನದವೆಂದು ಅನೇಕರು ಸಿದ್ಧಾಂತ ಮಾಡಿದ್ದಾರಂತೆ! ಇದಕ್ಕೆ ಅವರು ಕೊಟ್ಟ ಕಾರಣಗಳನ್ನು ವಾದಿಗಳು ಖಂಡಿಸಿಲ್ಲವಂತೆ! ಹಾಗೆ ಖಂಡಿಸಲಿಕ್ಕೆ ಆಗಿಲ್ಲವಂತೆ! ಶ್ರೀಕರ ಭಾಷ್ಯದ ಮೇಲೆ ಕೈಯೆತ್ತಿದ ಶ್ರೀ ಹಯಾವದನರಾಯರ ಮತ್ತು ಶಿವಕುಮಾರರ ಹೆಸರುಗಳನ್ನು ಉಲ್ಲೇಖಿಸಿದ್ದಾರೆ ಶ್ರೀ ಕಾಶೀನಾಥ ಶಾಸ್ತ್ರಿಗಳೇ ಮೊದಲಾದವರು ಶ್ರೀಕರನ ಕಾಲನಿರ್ಣಯವನ್ನು ಮಾಡಿದ್ದಾರೆ. ಶ್ರೀಕರನ ಕಾಲನಿರ್ಣಯವಾದಮೇಲೆ ಆತನ ಭಾಷ್ಯದ ಕಾಲನಿರ್ಣಯವೂ ಆದಂತೆಯೆ ಅಲ್ಲವೆ? ಮೂಲ ಕೃತಿಯಲ್ಲಿಲ್ಲದ ಮತ್ತೊಬ್ಬರಿಂದ ಇತ್ತೀಚಿಗೆ ಸೇರಿಸಿದ ಅಂಶಗಳನ್ನು ಎತ್ತಿ ಕಾಲನಿರ್ಣಯಕ್ಕೆ ಹೊರಟ ಹಯವದನರಾಯರು ನಿಮಗೆ ಪ್ರಮಾಣಪುರುಷರಾದರೆ? ಶಿವಕುಮಾರರು ಯಾವ ಬುದ್ಧಿಯಿಂದ ಆ ಲೇಖಾಂಕವನ್ನು ಬರೆದರೆಂಬುದನ್ನು ನೀವು ತಿಳಿಯಬೇಕಾದರೆ ಇನ್ನೂ ಕೆಲವು ಕಾಲ ಕಳೆಯಬೇಕು. ಅದೂ ಸನ್ನಿಹಿತವಾಗಲಿದೆ. ಇದೀಗ ಆ ಪ್ರಸ್ತಾಪ ಇಲ್ಲಿ ಬೇಕಿಲ್ಲ.

"ಸಿದ್ಧಾಂತ ಶಿಖಾಮಣಿ ಮತ್ತು ನೀಲಕಂಠ ಭಾಷ್ಯಗಳು ೧೩-೧೪ನೇ ಶತಮಾನದವುಗಳೆಂದು ಅನೇಕರು ಶಾಸ್ತ್ರೀಯ ರೀತಿಯಾಗಿ ಸಿದ್ಧಪಡಿಸಿರುವದನ್ನು ವಾದಿಗಳಿಗೆ ಅಲ್ಲಗಳೆಯಲು ಶಕ್ಯವಾಗಿಲ್ಲ." ಎಂದಿದ್ದಾರೆ. ಅನೇಕರು ಯಾರಾರು? ಶಾಸ್ತ್ರೀಯ ರೀತಿ ಯೆಂಥದು? ಇದಾವುದೂ ಧರ್ಮಾಭಿಮಾನಿಗಳಿಂದ ತಿಳಿದುಬರುವದಿಲ್ಲ. ಶ್ರೀಶೈಲ ಶ್ರೀ ನಿಡುಮಾಮಿಡಿ ಜಗದ್ಗುರುಗಳಾದ ಶ್ರೀ ಚನ್ನಬಸವರಾಜ ದೇಶಿಕೇಂದ್ರ ಶಿವಾಚಾರ್ಯರವರಿಂದ ಅನುವಾದಿತವಾದ 'ಮಣಿಕಾಂತಿ' ಎಂಬ ಸಿದ್ಧಾಂತ ಶಿಖಾಮಣಿಯ ಕೃತಿಯ ಮುನ್ನುಡಿಯನ್ನು ಈ ಧರ್ಮಾಭಿಮಾನಿಗಳು ನೋಡಿದಂತಿಲ್ಲ. ಇನ್ನಾದರೂ ಇವರು ನೋಡಿದರೆ ಲೇಸು.

ಶ್ರೀ ರೇವಣಸಿದ್ಧರ ಇಷ್ಟಲಿಂಗಧಾರಣೆ, ಶ್ರೀ ರುದ್ರಮುನಿ ಶಿವಾಚಾರ್ಯರ ಪೀಠ ಸ್ಥಾಪನೆ ಪ್ರಸ್ತಾಪ ಮಾಡಿದ್ದಾರೆ. ಇವುಗಳಿಂದ ಇವರಿಗೆ ಬಂದ ಲಾಭವೇನೋ ತಿಳಿಯದು ಯಾರೇ ಆಗಲಿ ಎಲ್ಲರೂ ಒಬ್ಬೊಬ್ಬರಿಂದ ಇಷ್ಟಲಿಂಗಧಾರಣೆಯನ್ನು ಮಾಡಿಯೇ ಆಗಬೇಕಿಲ್ಲವೇ? ಯಾರು ಪೀಠ ಸ್ಥಾಪಿಸಿದರೆ ಏನು? "ಕಾಶೀ ಶ್ರೀಶೈಲ ಕೇದಾರ ಪೀಠಗಳ ಕ್ಷೇತ್ರಾಧಿಪತಿಗಳು ಬಸವನ ಕಾಲದಲ್ಲಿ ಇಷ್ಟಲಿಂಗಧಾರಿಗಳಾದರು." ಎಂದು ನಿರಾಧಾರವಾಗಿ ಧರ್ಮಾ

ಪುಟದಲ್ಲಿ ನೆಪಮಾತ್ರಕ್ಕೆ ಅವನು ಲಿಂಗ ಧರಿಸಲಿಲ್ಲ. ಲಿಂಗದೀಕ್ಷೆಯನ್ನು ಪಡೆಯಲಿಲ್ಲ ಎಂದು ಹೇಳಲಾಗಿದೆ." ಎಂದು ಧರ್ಮಾಭಿಮಾನಿಗಳು ಅರ್ಧ ವಾಕ್ಯಗಳನ್ನು ಉದ್ಧರಿಸಿದ್ದಾರೆ. ಆಳವಾದ ಲಿಂಗದೀಕ್ಷೆಯನ್ನು ಪಡೆದಿದ್ದ ನೆಂದು ಹೇಳಲಿರುವ ಆ ವಾಕ್ಯಗಳನ್ನು ಉದ್ಧರಿಸಿ ಯಾವ ಸಾಳನೆಯನ್ನು ಮಾಡಿ ಮುಕ್ತರಾಗಿರುವರೊ ಧರ್ಮಾಭಿಮಾನಿಗಳು ತಿಳಿಯರು ದೇವರ ದಾಸಿಮಯ್ಯನ ಗುರುಗಳಾದ "ಶ್ರೀ ಚಂದ್ರಗುಂಡರು ಕಾಳಾಮುಖರಾಗಿರ ಬೇಕು. ಏಕೆಂದರೆ ಅವರ ತರುವಾಯ ಆ ಪೀಠಕ್ಕೆ ಬಂದ ಕಾಶೀವಿಲಾಸ ಕ್ರಿಯಾಶಕ್ತಿಯವರು ಕಾಳಾಮುಖರೆಂದು ಅದೇ ಗ್ರಂಥದ ೨ನೇ ಭಾಗದ ಒಂದು ಲೇಖದಲ್ಲಿ ಉಲ್ಲೇಖವಾಗಿದೆ." ಆ ಲೇಖವಾವುದು ? ಆ ಲೇಖಕರು ಯಾರು ? ಎಂಬುದನ್ನು ಅದೇಕೆ ಎತ್ತಿ ಬರೆಯಲಿಲ್ಲವೊ ಬೇರೆ ತಿಳಿಯದು. ಶ್ರೀ ಜಗದ್ಗುರು ಚಂದ್ರಗುಂಡ ಶಿವಾಚಾರ್ಯರನ್ನು ಕಾಳಾಮುಖರನ್ನಾಗಿ ಮಾಡ ಹೊರಟ ಈ ಧರ್ಮಾಭಿಮಾನಿಗಳಿಗೆ ನಿಜವಾಗಿಯೂ ಕಣ್ಣಿಲ್ಲ; ಧರ್ಮಾಭಿಮಾನವಿಲ್ಲ ಐತಿಹಾಸಿಕ ಬುದ್ಧಿಯಿಲ್ಲ. ಇಂತಹ ಜವಾಬ್ದಾರಿ ವಿಷಯಗಳನ್ನು ಆಧಾರವಿಲ್ಲದೆ ಬರೆಯುವವರಿಗೆ ಕಣ್ಣಿದೆಯೆಂದು ಹೇಗೆ ಹೇಳೋಣ ? ವೀರಶೈವ ಪಂಚ ಪೀಠಗಳಲ್ಲಿ ಒಂದಾದ ಶ್ರೀಶೈಲ ಪೀಠದ ಮೂರನೆಯ ಜಗದ್ಗುರುಗಳಾದ ಶ್ರೀ ಚಂದ್ರಗುಂಡ ಶಿವಾಚಾರ್ಯರನ್ನು ವೀರ ಶೈವ ಮತಗುರುವರ್ಯರನ್ನು ಕಾಳಾಮುಖರೆಂದು ಸಲ್ಲದ ಸಾಧನೆಯನ್ನು ಮಾಡಲೆಳೆಸುವ ಇವರು ನಿಜವಾಗಿಯೂ ಧರ್ಮಾಭಿಮಾನಿಗಳೆ ? ಒಂದಕ್ಕೂ ಆಧಾರ ಕೊಡದೆ ಮನಸಿಗೆ ಬಂದಂತೆಲ್ಲ ಬರೆಯಹೊರಟ ಇವರಿಗೆ ಅದಾವ ಐತಿಹಾಸಿಕ ವಿವೇಚನೆಯಿದೆ ?

ಶ್ರೀ ಜಗದ್ಗುರು ಚಂದ್ರಗುಂಡ ದೇಶಿಕೇಂದ್ರರು ಶ್ರೀ ದೇವರದಾಸಿ ಮಯ್ಯನಿಗೆ ಉಪದೇಶಮಾಡಿದುದು ಇಷ್ಟಲಿಂಗೋಪಾಸನೆ, ವೀರಶೈವ ಲಿಂಗ ದೀಕ್ಷೆ, ಗುರುಕಾರುಣ್ಯ. ದೇವರದಾಸಿಮಯ್ಯನ ಕಾಲದಲ್ಲಿ ವೀರಶೈವವಿರ ಲಿಲ್ಲೆಂದು ಹೇಳುವ ಈ ಧರ್ಮಾಭಿಮಾನಿಗಳು, "...ಗುರುಚರಣದ ಮೇಲೆ ತನುವೆಂಬ ತೃಣವ ತಂದಿರಿಸಿದರೆ ಆತನ (ಶಿಷ್ಯನ) ಸರ್ವಾಂಗವೆಲ್ಲ ಲಿಂಗ ಕಾಣಾ ರಾಮನಾಥಾ" ಎಂಬ ಅದೇ ದೇವರದಾಸಿಮಯ್ಯನ ಲಿಂಗವಂತಿಕೆ ಯನ್ನು ಕಣ್ಣಾರಳಿಸಿ ಕಾಣಲಿ ಅದರಲ್ಲಿಯೂ ಸರ್ವಾಂಗಲಿಂಗದ ಸಂಪೂರ್ಣ ಲಿಂಗವಂತಿಕೆಯನ್ನು ಚೆನ್ನಾಗಿ ದಿಟ್ಟಿಸಿ ನೋಡಿ ತಮಗಿರುವ ಅರ್ಧ ಧರ್ಮಾಭಿಮಾನವನ್ನು ಇನ್ನು ಮುಂದೆ ತಾಳಲಿ.

ಇನ್ನು ವೀರಶೈವ ಸಂಸ್ಕೃತ ಗ್ರಂಥಗಳ ವಿಚಾರ ಪ್ರಸ್ತಾಪಿಸಿ ಅವು ೧೩ನೇ ಶತಮಾನದವೆಂದು ಅನೇಕರು ಸಿದ್ಧಾಂತ ಮಾಡಿದ್ದಾರಂತೆ! ಇದಕ್ಕೆ ಅವರು ಕೊಟ್ಟ ಕಾರಣಗಳನ್ನು ವಾದಿಗಳು ಖಂಡಿಸಿಲ್ಲವಂತೆ! ಹಾಗೆ ಖಂಡಿಸಲಿಕ್ಕೆ ಆಗಿಲ್ಲವಂತೆ! ಶ್ರೀಕರ ಭಾಷ್ಯದ ಮೇಲೆ ಕೈಯೆತ್ತಿದ ಶ್ರೀ ಹಯಾವದನರಾಯರ ಮತ್ತು ಶಿವಕುಮಾರರ ಹೆಸರುಗಳನ್ನು ಉಲ್ಲೇಖಿಸಿದ್ದಾರೆ ಶ್ರೀ ಕಾಶೀನಾಥ ಶಾಸ್ತ್ರಿಗಳೇ ಮೊದಲಾದವರು ಶ್ರೀಕರನ ಕಾಲನಿರ್ಣಯವನ್ನು ಮಾಡಿದ್ದಾರೆ. ಶ್ರೀಕರನ ಕಾಲನಿರ್ಣಯವಾದಮೇಲೆ ಆತನ ಭಾಷ್ಯದ ಕಾಲನಿರ್ಣಯವೂ ಆದಂತೆಯೆ ಅಲ್ಲವೆ? ಮೂಲ ಕೃತಿಯಲ್ಲಿಲ್ಲದ ಮತ್ತೊಬ್ಬರಿಂದ ಇತ್ತೀಚಿಗೆ ಸೇರಿಸಿದ ಅಂಶಗಳನ್ನು ಎತ್ತಿ ಕಾಲನಿರ್ಣಯಕ್ಕೆ ಹೊರಟ ಹಯವದನರಾಯರು ನಿಮಗೆ ಪ್ರಮಾಣಪುರುಷರಾದರೆ? ಶಿವಕುಮಾರರು ಯಾವ ಬುದ್ಧಿಯಿಂದ ಆ ಲೇಖಾಂಕವನ್ನು ಬರೆದರೆಂಬುದನ್ನು ನೀವು ತಿಳಿಯಬೇಕಾದರೆ ಇನ್ನೂ ಕೆಲವು ಕಾಲ ಕಳೆಯಬೇಕು. ಅದೂ ಸನ್ನಿಹಿತವಾಗಲಿದೆ. ಇದೀಗ ಆ ಪ್ರಸ್ತಾಪ ಇಲ್ಲಿ ಬೇಕಿಲ್ಲ.

"ಸಿದ್ಧಾಂತ ಶಿಖಾಮಣಿ ಮತ್ತು ನೀಲಕಂಠ ಭಾಷ್ಯಗಳು ೧೩-೧೪ನೇ ಶತಮಾನದವುಗಳೆಂದು ಅನೇಕರು ಶಾಸ್ತ್ರೀಯ ರೀತಿಯಾಗಿ ಸಿದ್ಧಪಡಿಸಿರುವದನ್ನು ವಾದಿಗಳಿಗೆ ಅಲ್ಲಗಳೆಯಲು ಶಕ್ಯವಾಗಿಲ್ಲ." ಎಂದಿದ್ದಾರೆ. ಅನೇಕರು ಯಾರಾರು? ಶಾಸ್ತ್ರೀಯ ರೀತಿ ಯೆಂಥದು? ಇದಾವುದೂ ಧರ್ಮಾಭಿಮಾನಿಗಳಿಂದ ತಿಳಿದುಬರುವದಿಲ್ಲ. ಶ್ರೀಶೈಲ ಶ್ರೀ ನಿಡುಮಾಮಿಡಿ ಜಗದ್ಗುರುಗಳಾದ ಶ್ರೀ ಚನ್ನಬಸವರಾಜ ದೇಶಿಕೇಂದ್ರ ಶಿವಾಚಾರ್ಯರವರಿಂದ ಅನುವಾದಿತವಾದ 'ಮಣಿಕಾಂತಿ' ಎಂಬ ಸಿದ್ಧಾಂತ ಶಿಖಾಮಣಿಯ ಕೃತಿಯ ಮುನ್ನುಡಿಯನ್ನು ಈ ಧರ್ಮಾಭಿಮಾನಿಗಳು ನೋಡಿದಂತಿಲ್ಲ. ಇನ್ನಾದರೂ ಇವರು ನೋಡಿದರೆ ಲೇಸು.

ಶ್ರೀ ರೇವಣಸಿದ್ಧರ ಇಷ್ಟಲಿಂಗಧಾರಣೆ, ಶ್ರೀ ರುದ್ರಮುನಿ ಶಿವಾಚಾರ್ಯರ ಪೀಠ ಸ್ಥಾಪನೆ ಪ್ರಸ್ತಾಪ ಮಾಡಿದ್ದಾರೆ. ಇವುಗಳಿಂದ ಇವರಿಗೆ ಬಂದ ಲಾಭವೇನೋ ತಿಳಿಯದು ಯಾರೇ ಆಗಲಿ ಎಲ್ಲರೂ ಒಬ್ಬೊಬ್ಬರಿಂದ ಇಷ್ಟಲಿಂಗಧಾರಣೆಯನ್ನು ಮಾಡಿಯೇ ಆಗಬೇಕಿಲ್ಲವೇ? ಯಾರು ಪೀಠ ಸ್ಥಾಪಿಸಿದರೆ ಏನು? "ಕಾಶೀ ಶ್ರೀಶೈಲ ಕೇದಾರ ಪೀಠಗಳ ಕ್ಷೇತ್ರಾಧಿಪತಿಗಳು ಬಸವನ ಕಾಲದಲ್ಲಿ ಇಷ್ಟಲಿಂಗಧಾರಿಗಳಾದರು." ಎಂದು ನಿರಾಧಾರವಾಗಿ ಧರ್ಮಾ

ಭಿಮಾನಿಗಳು ನುಡಿದು ಸಂತಸಗೊಂಡಿದ್ದಾರೆ. ಇವರ ಧರ್ಮಾಭಿಮಾನಕ್ಕೆ ಇದುವೇ ದೊಡ್ಡ ಕುರುಹು. ಬಸವನ ಕಾಲದಲ್ಲಿ ಯಾರು ಯಾರಿಂದ ಎಂಬುದು ಇವರಿಗೆ ತಿಳಿದಂತಿಲ್ಲ. 'ಬಸವನ ಕಾಲ' ವೊಂದೇ ಇವರಿಗೆ ಬೇಕಾದುದು. ಇದುವೇ ಇವರ ಧರ್ಮಾಭಿಮಾನ. ಈ ಧರ್ಮಾಭಿಮಾನಿಗಳ ಈ ಅಭಿಮಾನವೂ ಸಹ ಈ ಕೆಳಗಿನ ಅವರ ನುಡಿಗಳಿಂದ ಕಳಚಿ ಬಿದ್ದಿದೆ. ಇವರ ಈ ವಿಚಿತ್ರ ಪ್ರಸ್ತಾಪವನ್ನು ನೋಡಿರಿ.

"ಆದರೆ ಬಸವನ ಕಾಲದಲ್ಲಿ ಮೂರ್ತೀಭವಿಸಿದ ಅಷ್ಟಾವರಣಾಂತರ್ಗತ ವೀರಶೈವದ ಕುರುಹುಗಳೆಲ್ಲವೂ ದೇವರದಾಸಿಮಯ್ಯನ ವಚನಗಳಲ್ಲಿ ಬಂದಿರುವವು. ಅವನು ಜಂಬೂಸಿಂಹನ ಹೆಂಡತಿ ಮುಂತಾದ ಸಾವಿರಾರು ಜನರಿಗೆ ಇಷ್ಟಲಿಂಗ ದೀಕ್ಷೆಯನ್ನು ಕೊಟ್ಟನು.

ಅಂದಮೇಲೆ ದೇವರದಾಸಿಮಯ್ಯನಲ್ಲದೆ ಮತ್ತ್ಯಾರಿಂದ ಮತ್ತು ಯಾವಾಗ ಶೈವವು ಉತ್ಕ್ರಾಂತಿಯಾಗಿ ವೀರಶೈವವಾಗಿ ಮಾರ್ಪಟ್ಟಿತು?"

ಈ ಪ್ರತಿಪಾದನೆಯಿಂದ ಈ ಧರ್ಮಾಭಿಮಾನಿಗಳೇ ತಾವೇ ಹೇಳಿರುವ ಪಂತೆ ಪ್ರತಿವಾದಿಗಳಾಗಿ ಮೂರ್ತೀಭವಿಸಿದ್ದಾರೆ. ಈ ಧರ್ಮಾಭಿಮಾನಿಗಳು ಹೊರಟದ್ದೆಲ್ಲಿಗೆ; ಹೋಗಿ ನಿಂತುದೆಲ್ಲಿಗೆ? ೮ನೆ ಶತಮಾನಕ್ಕೆ ಹೊರಟು ೧೧ನೇ ಶತಮಾನಕ್ಕೆ ಬಂದು ನೆಲೆನಿಂತಿದ್ದಾರೆ. ಇದೂ ಒಂದು ಅಭಿಮಾನದ ಸಮಾಚಾರವೆ!

ಇಲ್ಲಿಯ ವರೆಗಿನ ವಿವೇಚನೆಯಿಂದ ಈ ಧರ್ಮಾಭಿಮಾನಿಗಳು ಪ್ರತಿವಾದಿಗಳ ಪಕ್ಷದವರೂ ಆಗಿದ್ದಾರೆ. ಮುಂದಕ್ಕೆ ಹೋಗಿ ನೋಡಿದರೆ ವಾದಿಗಳ ಪಕ್ಷದವರೂ ಆಗಿದ್ದಾರೆ ನಿಜಾಂಶ ಹೀಗಿದ್ದೂ "ವಚನಧರ್ಮ ಅರ್ಥಾತ್ ಲಿಂಗವಂತ ಧರ್ಮವು." ಎಂದು ಏಕೆ ಮೊದಲು ಮಾಡಬೇಕಾಗಿತ್ತೋ ತಿಳಿಯದು. ಇವರು ತಿಳಿಸುವ ತಿರುಳೇನೊ ಇವರು ನಿಂತ ನಿಲುಮೆ ಯಾವುದೋ ವಾಚಕರೇ ಗುರುತಿಸಬೇಕು. ಇವರು ನಿಜವಾಗಿಯೂ ಧರ್ಮಾಭಿಮಾನಿಗಳಾಗಬೇಕಾದಲ್ಲಿ ಇವರ ಬುದ್ಧಿ ವಿಶಾಲವಾಗಬೇಕು; ಇವರ ಕಣ್ಣು ಇನ್ನೂ ದೂರ ಹರಿಯಬೇಕು.

ಇವರ ಸಂಕುಚಿತ ದೃಷ್ಟಿಗೆ ಇವರ ಅನನುಭವಕ್ಕೆ ಇನ್ನೊಂದು ನಿದರ್ಶನ. ಷಟ್‌ಸ್ಥಲಗಳಲ್ಲಿ ಕೊನೆಯ ಪ್ರಾಣಲಿಂಗಿ, ಶರಣ, ಐಕ್ಯಸ್ಥಲಗಳಿಗೆ ಕ್ರಮವಾಗಿ ಗುರು, ಭಕ್ತ, ವಿರಕ್ತರನ್ನು ಅಧಿಕಾರಿಗಳನ್ನಾಗಿ ಕಲ್ಪಿ

ಸಿದ್ದಾರೆ. ಇದಾವ ಶಾಸ್ತ್ರದಲ್ಲಿದೆಯೊ? ಇದಾವ ತತ್ವವೊ? ಇವರ ದೃಷ್ಟಿಯಲ್ಲಿ ಗುರುಗಳನ್ನು ಬಿಟ್ಟರೆ ಉಳಿದವರಿಗೆ ಪ್ರಾಣಲಿಂಗಿಸ್ಥಲವಿಲ್ಲ; ಭಕ್ತರನ್ನು ಬಿಟ್ಟರೆ ಉಳಿದವರಿಗೆ ಶರಣಸ್ಥಲವಿಲ್ಲ. ವಿರಕ್ತರನ್ನು ಬಿಟ್ಟರೆ ಐಕ್ಯಸ್ಥಲವಿಲ್ಲ. ವಿರಕ್ತರಿಗೆ ಉಳಿದ ಯಾವ ಸ್ಥಲದ ಅಧಿಕಾರವಿಲ್ಲ. ಭಕ್ತ, ಮಹೇಶ, ಪ್ರಸಾದಿಸ್ಥಲಗಳು ಯಾರಾರಿಗೋ ತಿಳಿಸಲಿಲ್ಲ. ವಿರಕ್ತರೇ ಐಕ್ಯಸ್ಥಲಾಧಿಕಾರಿಗಳಾದುದರಿಂದ ವೀರಶೈವವು ಅನೆಯ ಶತಮಾನದಿಂದೀಚಿನದಂತೆ! ಇದು ಇವರ ತೀರ್ಮಾನ. ಇದೊಂದು ಹೊಸ ಸಾಧನೆ. ಇದಕ್ಕೆ ಉತ್ತರಿಸುವರಾರು?

ಧರ್ಮಾಭಿಮಾನಿಗಳು ಮತ್ತೆ ಸಿದ್ಧಾಂತಶಿಖಾಮಣಿಯ ಮಾತೆತ್ತಿದ್ದಾರೆ. ಇದು ವಚನಗಳಿಂದೀಚಿನದೆಂದು ವಾದಿಸಿದ್ದಾರೆ. ಆಧಾರವಿಲ್ಲ. ಶಿವಯೋಗಿ ಶಿವಾಚಾರ್ಯರು ಸೊಲ್ಲಾಪುರದ ಸಿದ್ಧರಾಮೇಶ್ವರ ಶಿವಯೋಗಿಗಳ ತರುವಾಯದವರಂತೆ ವಂಶಿಜರಂತೆ! ಇವರು ತಮ್ಮನ್ನೇ ರೇಣುಕಾಚಾರ್ಯರೆಂದು ಕರೆದುಕೊಂಡಿದ್ದಾರಂತೆ! ಈ ಮಾತುಗಳಿಂದ ಈ ಧರ್ಮಾಭಿಮಾನಿಗಳಿಗೆ ಧರ್ಮದ ಮೂಲ ಸಿದ್ಧಾಂತ ಗ್ರಂಥವಾದ ಸಿದ್ಧಾಂತ ಶಿಖಾಮಣಿಯು ಗಂಥವೇ ಗೊತ್ತಿಲ್ಲ. ಈ ಕೃತಿಯು ಮೇಲೆ ಇವರಿಗೆ ಬರೆದ ಯಾವ ಯೋಗ್ಯತೆಯೂ ಇಲ್ಲೆಂಬುದನ್ನು ಸ್ಪಷ್ಟಪಡಿಸಿದ್ದಾರೆ. ಶಿವಯೋಗಿ ಶಿವಾಚಾರ್ಯರು ತಾವೇ ರೇಣುಕರೆಂದು ಅದೆಲ್ಲಿ ಹೇಳಿಕೊಂಡಿರುವರೋ ತಿಳಿಯದು. ಧರ್ಮಾಭಿಮಾನಿಗಳು ತಿಳಿಸಿದರೆ ಲೇಸು. ಸೊನ್ನಲಾಪುರದ ಸಿದ್ಧರಾಮೇಶ್ವರನ ವಂಶಜರೆಂದು ಎಲ್ಲಿಯೂ ಉಲ್ಲೇಖವಿಲ್ಲ. ಕೃತಿಯು ಈಚಿನದೆಂದು ಸಾಧಿಸಲು ಸುಳ್ಳು ಮಾತುಗಳನ್ನು ಬಳಸಿದ್ದಾರೆ. ಈ ವಿಷಯದಲ್ಲಿ ಇನ್ನೊಂದು ಪ್ರತ್ಯೇಕ ಲೇಖವನ್ನೇ ಬರೆಯಲಾಗುತ್ತದೆ. ಇವೆಲ್ಲವುಗಳಿಂದ ಧರ್ಮಾಭಿಮಾನಿಗಳ ಧೋರಣೆ ಎಂತಹದೆಂಬುದು ಎಗ್ಗಳವಾಗಿ ತೋರುತ್ತದಲ್ಲವೆ? ದ್ವೇಷದೂಷಿತವಾದ ಇವರ ದೃಷ್ಟಿ ತಿಳಿಯಾಗಲಿ. ಎರಡು ತತ್ವಗಳೂ ಸಮಾಜದ ಎರಡು ಕಣ್ಣುಗಳೆಂಬುದನ್ನು ಅರಿತು ಅಳವಡಿಸಿಕೊಳ್ಳಲಿ. ಆಗ ಇವರು ನಿಜವಾದ ಸಂಪೂರ್ಣವಾದ ಧರ್ಮಾಭಿಮಾನಿಗಳಾಗಬಲ್ಲರು; ಆಗುವರು.

# ಭಕ್ತಿಯೋಗ

[ ಲೇಖಕರು:- ಶ್ರೀ ಶಿವಾನಂದರು ಗವಿಮಠ, ತೆಗ್ಗಿಹಳ್ಳಿ. ತಾ॥ ಇಂಡಿ. ]



ಭಕ್ತಿಯೋಗವೆಂದರೆ ಪ್ರೇಮ ವಿಶ್ವಾಸ, ನಂಬಿಕೆಗಳಿಂದ ಸರ್ವ ಸಮರ್ಪಣ ಮಾಡಿ ಪರಮಾತ್ಮನೊಡಗೂಡಿ ಶರಣನಾಗುವದು. ಪಿಪಿಲಕ ದಿಂದ ಬೆಳೆಯುತ್ತ ಏರುತ, ಪ್ರಗತಿ ಹೊಂದುತ್ತ ಕ್ರಾಂತಿ ಉತ್ಕ್ರಾಂತಿ ಯಾಗುತ್ತ ಪೂರ್ಣ ಪರಿಪೂರ್ಣವಾಗುತ್ತ ಮಾನವನಾಗಿ ದೇವಮಾನವ ನಾಗುವದೇ ಈ ಜೀವಿತದ ಉದ್ದೇಶವಾಗಿದೆ. ದೇವ ಮಾನವನಾಗಲಿಕ್ಕೆ ಭಕ್ತಿ, ಕರ್ಮ, ಜ್ಞಾನ, ರಾಜ, ಮಂತ್ರ ಎಂದು ಮುಂತಾದ ಮಾರ್ಗಗಳಿ ರುವವು. ಈ ಎಲ್ಲವುಗಳಲ್ಲಿ ಭಕ್ತಿಯೋಗವೇ ಶ್ರೇಷ್ಠವೆನಿಸುವದು.

ಕರ್ಮಯೋಗವೆಂದರೆ ನಿಷ್ಕಾಮಕರ್ಮ ಮಾಡಿ ಅಂದರೆ ಯಾವತ್ತೂ ಕರ್ಮಗಳನ್ನು ದಾಸೋಹಂ ಭಾವದಿಂದ ಪರಮಾತ್ಮನಿಗೆ ಅರ್ಥಾತ್ ಪರ ರಿಗೆ ಅದರ ಫಲಗಳನ್ನೆಲ್ಲ ಅರ್ಪಿಸುತ್ತ ಕರ್ಮಮಾಡುವದು. ಇದು ಶಿವ ಶರಣರ ಕಾಯಕ ಮಾರ್ಗವೆಂದು ಹೇಳಬಹುದು. "ನಾನು ಆರಂಭವ ಮಾಡುವೆನಯ್ಯ ಗುರುಪೂಜೆಗೆಂದು; ಬೇವ ಹಾರವ ಮಾಡುವೆನಯ್ಯ ಲಿಂಗಾರ್ಚನೆಗೆಂದು; ಪರಸೇವೆಯ ಮಾಡುವೆನಯ್ಯ ಜಂಗಮ ದಾಸೋಹ ಕ್ಕೆಂದು ನಾನಾ ಕರ್ಮ ಮಾಡಿದರೂ ಆ ಕರ್ಮದ ಫಲಭೋಗವ ನೀ ಕೊಡುವೆ ಎಂಬುದು ನಾ ಬಲ್ಲೆ. ನೀ ಕೊಟ್ಟ ದ್ರವ್ಯವ ನಿಮಗಲ್ಲದೆ ಮತ್ತೊಂದಕ್ಕೆ ಮಾಡೆನು. ನಿಮ್ಮ ಸೊಮ್ಮ ನಿಮಗೆ ಸಲ್ಲಿಸುವೆನು. ನಿಮ್ಮಾಣೆ ಕೂಡಲ ಸಂಗಮದೇವ" ಕಾಯಕದ ಫಲಗಳನ್ನೆಲ್ಲ ಸಂಹಿತಕ್ಕೆ ದೇಶ ಸೇವೆಗೆ ಸಲ್ಲಿಸಬೇಕೆಂದೇ ಅದೆ. ಕಾಯಕದ ಫಲಗಳನ್ನು ತಾನು ಭೋಗಿಸದೆ ಎಲ್ಲವನ್ನು ಶಿವಾರ್ಪಣ ಭಾವದಿಂದ ಪರರಿಗೆ ಕೊಡುವದು ಬಹು ಕಠಿಣ. ಅಲ್ಲದೆ ಅಕರ್ಮ, ವಿಕರ್ಮ, ಸುಕರ್ಮ, ನಿಯತಕರ್ಮ, ನಿಷ್ಕಾಮಕರ್ಮಗಳ ಸೂಕ್ಷ್ಮ ಭೇದ ತಿಳಿದು ಮಾಡತಕ್ಕ ಕರ್ಮಗಳನ್ನು ನಿಷ್ಕಾಮವಾಗಿ ಮಾಡುವದು ಕಠಿಣ. ಹೀಗೆ ಸಾಧಿಸಿದ್ದಾರೆ. ಅದೇ ಕಾಯ ಕವೇ ಕೈಲಾಸವಾಗುವದು. ಕರ್ಮ ಮಾರ್ಗವು ಬಹು ಗಹನವೆಂದು ಗೀತೆಯಲ್ಲಿ ಹೇಳಿದೆ.

ಜ್ಞಾನಯೋಗವು ಅತಿ ಬುದ್ಧಿಬಲವುಳ್ಳವರಿಗೆ ಸಾಧಿಸಬಹುದು. ಇದು ಕೋಟಿ ಜನರಲ್ಲಿ ಒಬ್ಬನಿಗೆ ಸಾಧಿಸುವದೋ ಇಲ್ಲೋ ಹೇಳಲಿಕ್ಕಾಗದೆಂದು ಶ್ರೀ ವಿವೇಕಾನಂದರು ಹೇಳಿದ್ದಾರೆ. ಅವರೇ ಜ್ಞಾನಯೋಗವು ತಮಗೆ ಸಾಧಿಸಲಿಲ್ಲ. ಅದಕ್ಕೆ ಭಕ್ತಿಮಾರ್ಗಕ್ಕೆ ಶರಣುಹೋದೆನೆಂದು ಅಂದಿದ್ದಾರೆ. ಇದು ನೇತಿ, ನೇತಿ. ಇಲ್ಲ ಇದಲ್ಲ ಎಂದು ನೋಡಿದ್ದಕ್ಕೆ ಕೇಳಿದ್ದಕ್ಕೆ ಮೂಸಿದ್ದಕ್ಕೆ ಮುಟ್ಟಿ ತಟ್ಟಿದಕ್ಕೆ ರುಚಿಸಿದ್ದಕ್ಕೆ ಅನ್ನುತ್ತ ಧ್ಯಾನಿಸುತ್ತ ಕೂಡ್ರುವ ಮಾರ್ಗ. ಇಂಥ ಕಠಿಣ ಮಾರ್ಗಕ್ಕಾಗಿ ಹಳ್ಳಿಯಲ್ಲಿ ಪಂಚೀಕರಣ, ಪಂಚರತ್ನ ವಿಚಾರ, ಚಂದ್ರೋದಯ, ವಿಚಾರಸಾಗರಗಳನ್ನು ಓದುತ್ತ ಜ್ಞಾನಿಗಳಾಗಬೇಕೆಂದು ಬಯಸುವರು.ಆದರೆ ಇವರು ಬರೇ ವಾಚಾಳಿಗಳೇ ಆಗಿ ಬಿಡುವರು. ಈ ಮಾರ್ಗವೂ ಅತ್ಯಂತ ಕಠಿಣ ಮಾರ್ಗವು ಇವರು ಅಹಂಕಾರಿಗಳಾಗುವದೇ ಹೆಚ್ಚು. ಇವರಲ್ಲಿ ಭಕ್ತಿಯು ಲವಲೇಶವೂ ಕೂಡ ಇರುವದಿಲ್ಲ.

ರಾಜಯೋಗವು ಸಶಾಸ್ತ್ರೀಯವಾದ ಮಾರ್ಗ. ಶಾಸ್ತ್ರೀಯ ಪ್ರಯೋಗ ಶಾಲೆಯಲ್ಲಿ ಪ್ರಯೋಗ ಮಾಡಿ ಪ್ರತ್ಯಕ್ಷ ಉತ್ತರ ದೊರಕಿಸುವಂತೆ ದೇವನಲ್ಲಿ ಪ್ರೇಮ ವಿಶ್ವಾಸವಿಲ್ಲದೆ ಹೋದರೂ ಸರಿಯಾದ ಉತ್ತರಗಳನ್ನು ದೊರಕಿಸುವ ಮಾರ್ಗ. ದೇವನನ್ನು ಕಾಣಬೇಕೆಂದು ಹಂಬಲಿಸದೆ ದೇವನಿದ್ದಾನೆಂದು ವಿಶ್ವಾಸವಿಡದೆ ಆಸನ ಪ್ರಾಣಾಯಾಮ ವಗೈರೆ ಮಾಡುತ್ತ ಹೋದರೆ ದೇವನಿದ್ದಾನೆ. ಶಕ್ತಿ ಅದೆ ಎಂದು ಪೂರ್ಣ ಅನುಭವ ಮಾಡಿ ಕೊಡುವ ಮಾರ್ಗವಿದು. ಆದರೆ ಇಲ್ಲಿಯ ಉಷ್ಣ ಹವಾಮಾನಕ್ಕೆ ಇದು ಸಾಧಿಸುವದಿಲ್ಲ. ಆಚಾರ ವಿಚಾರಗಳಲ್ಲಿ ನಿಯಮಬದ್ಧವಾಗಿರಬೇಕು. ಇದು ಹಿಮಾಲಯದಂಥ ಪ್ರದೇಶದಲ್ಲಿ ಹಣ್ಣುಹಂಪಲ ಗಡ್ಡೆ ಗೆಣಸುಗಳನ್ನು ಸೇವಿಸಿದರೆ ಸಾಧಿಸುವದು ಕಾರಣ ನಮ್ಮ ಉಷ್ಣ ನಾಡಿಗೆ ಇದು ಶಕ್ಯವಿಲ್ಲ. ಕಾರಣ ಇದೂ ಕೂಡ ಬಹು ಕಠಿಣ. ಇದಕ್ಕೆ ಸದಾ ರಾಜಯೋಗದಿಂದ ಪರಮಾತ್ಮನ ದರ್ಶನ ಮಾಡಿಕೊಂಡ ಗುರುಗಳು ಶಿಷ್ಯನ ಹತ್ತಲೇ ಇದ್ದು ಕಲಿಸುತ್ತ ಇರಬೇಕಾಗ್ಗುವದು. ಇಲ್ಲವಾದರೆ ಶಕ್ಯವಿಲ್ಲ. ಅದಕ್ಕಿಂತಲೇ ಶಿವಶರಣರಾಗಲಿ, ಸಂತರಾಗಲಿ, ಬರೇ ಭಕ್ತಿಮಾರ್ಗದಿಂದಲೇ ಹೋಗಿದ್ದಾರೆಂದು ಸಹಜ ಅನುಭವಕ್ಕೆ ಬರುವದು. ಅದರಂತೆ ಹಠಯೋಗದ ಗತಿಯೂ ಕೂಡ ಇದೆ. ಅಂತು ಎಲ್ಲ ಯೋಗಗಳಲ್ಲಿ ಭಕ್ತಿಯೋಗವೇ ಸುಲಭ ಸರಳವಾದ ರಾಜಮಾರ್ಗವೆಂದರೂ ಸಲ್ಲುವದು.

ಭಕ್ತಿಯೆಂದರೆ ಪ್ರೇಮ. ಪ್ರೇಮವೆಂದರೆ ದೇವನು ಪ್ರೇಮದಲ್ಲಿ ಸಾತ್ವಿಕ ಪ್ರೇಮ, ರಾಜಸ ಪ್ರೇಮ, ತಾಮಸ ಪ್ರೇಮಗಳೆಂದು ಮೂರು ಭೇದಗಳು. ಪರಮಾತ್ಮನಮೇಲೆ ಮಾಡುವ ಪ್ರೇಮವೆಲ್ಲ ಸಾತ್ವಿಕ ಪ್ರೇಮ. ಉಳಿದುದೆಲ್ಲ ರಾಜಸ, ತಾಮಸ, ಐಹಿಕ ವಿಷಯದ ಪ್ರೇಮ. ಇದಕ್ಕೆ ಆಶೆವಾಸನ ಬಯಕೆ ತಿಂಡಿ ಎಂದು ಅನ್ನುವರು. ಇದರಿಂದಲೇ ಅಹಂಕಾರ ಮಮಕಾರಗಳು ಹುಟ್ಟಿಸಿ ಮನುಷ್ಯನು ಅತೋಭ್ರಷ್ಟ ತತೋಭ್ರಷ್ಟನಾಗಿ ಹೋಗುವನು. ಕಾರಣ ಮಾನವನು ಇಂಥ ರಾಜಸಿಕ, ತಾಮಸಿಕ, ಪ್ರೇಮಗಳನ್ನು ಬಯಸದೆ ಸಾತ್ವಿಕ ಪ್ರೇಮವನ್ನು ಗಳಿಸಿದರೆ ಪರಮ ಭಕ್ತನಾಗಿ ಮುಕ್ತನಾಗುವನು. ಕಾರಣ ದೇವರ ಮೇಲೆ ಮಾಡುವ ಸರ್ವ ಪ್ರಕಾರದ ಪ್ರೇಮ ಅರ್ಥಾತ್ ಭಕ್ತಿಯೇ ಶ್ರೇಷ್ಠವೆನ್ನುವದರಲ್ಲಿ ಯಾವ ಸಂಶಯವೂ ಇಲ್ಲ.

ಇಂಥ ಭಕ್ತಿಯ ರೀತಿಯನ್ನು ಶ್ರೀ ಬಸವಣ್ಣನವರ ವಚನಗಳಲ್ಲಿ ನೋಡಿರಿ. "ವಚನದಲ್ಲಿ ನಾಮಾಮೃತ ತುಂಬಿ, ಮನಸಿನಲ್ಲಿ ನಿಮ್ಮ ನೆನಹುತುಂಬಿ, ಕಿವಿಯಲ್ಲಿ ನಿಮ್ಮ ಕೀರ್ತಿ ತುಂಬಿ ಕೂಡಲಸಂಗಮದೇವ, ನಿಮ್ಮ ಚರಣಕಮಲದೊಳಗಾನು ತುಂಬಿ." ಸರ್ವೇಂದ್ರಿಯಗಳನ್ನು ಸದಾ ಪರಮಾತ್ಮನ ಕಾರ್ಯ, ಧ್ಯಾನ, ನೆನಹು, ಜಪ, ಸೇವೆ ತಪಗಳಲ್ಲಿಯೇ ತೊಡಗಿಸಬೇಕೆಂದು ಇವರ ಸಾರ. ಎಲ್ಲ ಇಂದ್ರಿಯಗಳಿಂದ ಪರಮಾತ್ಮನ ಧ್ಯಾನ ನಡೆಯಲೆಂದು ಹೇಳಿದ್ದಾರೆ. ನರನಾಡಿಗಳಲ್ಲಿ ಪರಮಾತ್ಮನ ಸ್ಮರಣೆಯೇ ಹರಿಯಲೆಂದು ಹೇಳಿದ್ದಾರೆ. ಧ್ಯಾನವು ಬಲಿತರೆ ರೋಮರೋಮಗಳಲ್ಲಿ ಧ್ಯಾನ ನಡೆದಿದೆ ಎಂದು ಅನುಭವಕ್ಕೆ ಬರುವದು. ಅರ್ಜುನನಿಗೆ ಈ ಸ್ಥಿತಿಯು ಬಂದಿತ್ತೆಂದು ಹೇಳುವರು. 'ನರಹರಿದರೆ ಶಿರ ಉರುಳಿ ನೆಲ ಕುಪ್ಪಳಿಸಿದರೆ ನಾಲಿಗೆ 'ಓಂ ನಮಃ ಶಿವಾಯ' ಎಂದಿತ್ತು. ಕೂಡಲಸಂಗಮದೇವಾ. ಈ ವಚನವಾದರೂ ಅದನ್ನೇ ಹೇಳುವದು. ಶ್ರೀ. ಅರವಿಂದರು ಧ್ಯಾನವನ್ನು ಒಂದೆರಡು ಸೇಕಂದು ಮರೆತು ಬಿಡಬೇಕೆನ್ನುವೆ ಏನು ಮಾಡಿದರೂ ಅದು ಸಾಧಿಸಲೊಲ್ಲದು ಹೇಗೆ ಮಾಡಲಿ" ಎಂದು ಹೇಳುವಂತಾಗುವ ಪರಿಯಂತರ ಧ್ಯಾನ ಬೆಳೆಯಬೇಕೆಂದು ಅದನ್ನೇ ವ್ಯಂಗ್ಯ ರೀತಿಯಲ್ಲಿ ಹೇಳಿದ್ದಾರೆ. "ಅತ್ತಲಿತ್ತ ಹೋಗದಂತೆ ಹೆಳವನ ಮಾಡಯ್ಯ ತಂದೆ. ಮತ್ತೊಂದು ಕೇಳದಂತೆ ಕಿವುಡನ ಮಾಡಯ್ಯ ತಂದೆ. ನಿಮ್ಮ ಶರಣರ ಪಾದವಲ್ಲದೆ ಅನ್ಯ ವಿಷಯ ಕೇಳಿಸದಂತೆ ಇರಿಸು ಕೂಡಲಸಂಗಮ

ದೇವಾ." ಈ ವಚನವಾದರೂ ವಿಷಯದ ಕಡೆಗೆ ಯಾವ ಇಂದ್ರಿಯಗಳನ್ನು ಹೋಗದಂತೆ ಮಾಡಿ ಸರ್ವ ಇಂದ್ರಿಯಗಳನ್ನು ಪರಮಾತ್ಮನ ಧ್ಯಾನದಲ್ಲಿಯೇ ಇರಿಸೆಂದು ಬೇಡಿಕೊಂಡಿದ್ದಾನೆ. ಅಂದರೆ ಧ್ಯಾನವು ಎಷ್ಟು ಬಲಿಯಬೇಕೆಂದು ಹೇಳಿದ್ದಾನೆ. ಹೀಗೆ ಬಲಿತಾಗ ದೇವನು ಒಲಿಯುವನು, ಇಲ್ಲವಾದರೆ ಒದೆಯುವನೆಂದೇ ಸ್ಪಷ್ಟವಾಗಿದೆ.

ದೇವನ ದರ್ಶನವು ದೃಢಭಕ್ತಿಯಿಂದಲೇ ಸಾಧ್ಯ. ಉಳಿದ ಯಾವ ಉಪಾಯದಿಂದಲೂ ಶಕ್ಯವಿಲ್ಲ. ಈ ಜಗತ್ತಿನಲ್ಲಿ ಎಲ್ಲ ಅಷ್ಟೈಶ್ವರ್ಯಗಳಿದ್ದರೂ ಭಕ್ತಿಯೊಂದಿರದಿದ್ದರೆ ಅವನಂಥ ದರಿದ್ರ, ದೀನ, ಹೀನರು ಯಾರೂ ಇಲ್ಲ. ಏನೂ ಇರದಿದ್ದರೂ ಚಿಂತೆ ಇಲ್ಲ. ಭಕ್ತಿಯೊಂದಿದ್ದರೆ ಸಾಕು. ಅವನೇ ಮನುಷ್ಯರಲ್ಲಿ ಶ್ರೇಷ್ಠ. ಎಷ್ಟೋ ಶಿವಶರಣರು ಅತಿ ಬಡವರು, ಕಂಗಾಲ ಸ್ಥಿತಿಯವರೂ ಇದ್ದರೂ ಕೂಡ ಅವರೇ ಹೆಚ್ಚಿನವರೆಂದು ಶ್ರೀ ಬಸವಣ್ಣನವರು ಎಷ್ಟೋಸಲ ಹೇಳಿದ್ದಾನೆ. ಎನಗಿಂತ ಕಿರಿಯರಿಲ್ಲ. ಶಿವಶರಣರಿಗಿಂತ ಹಿರಿಯರಿಲ್ಲ, ನಿಮ್ಮ ಪಾದ ಸಾಕ್ಷಿ ನನ್ನ ಮನ ಸಾಕ್ಷಿ ಕೂಡಲಸಂಗಮದೇವ ಎನಗಿದೇ ದಿಬ್ಯ." ಅಯ್ಯ! ನಿಮ್ಮ ಶರಣರ ಚಮ್ಮಾವುಗೆಗೆ ಪೃಥ್ವಿ ಸಮಬಾರದು ಸರಿಯಲ್ಲ ನೋಡಾ ಕೂಡಲಸಂಗಮದೇವಾ ನಿಮ್ಮ ಶರಣರ ಚಮ್ಮಾವುಗೆಗೆ." "ಶರಣರ ಮನೆ ಬಡವಾದರೂ ಮನ ಘನ ಸಂಪನ್ನವಿಹುದು. ಶರಣರೆಂದರೆ ಸರ್ವವನ್ನೂ ಸರ್ವಸ್ವವನ್ನೂ ದೇವನಿಗಾಗಿ ತ್ಯಾಗಮಾಡುವದಲ್ಲದೆ ಸ್ವತ್ಯಾಗವನ್ನು ಕೂಡ ದೇವನಿಗೂ ಮಾಡಲು ಸದಾ ಸಿದ್ಧವಿದ್ದವರೆಂದು ಅರ್ಥ. ಇವರೇ ಭೆಚ್ಚಿನ ಭಕ್ತರು. ಅದಕ್ಕಾಗಿಯೇ ಶ್ರೀಕೃಷ್ಣನು ಗೀತೆಯಲ್ಲಿ "ಸರ್ವಧರ್ಮಾನ್ ಪರಿತ್ಯಜ್ಯ ಮಾಮೇವ ಶರಣಂ ವ್ರಜ। ಅಹಂತ್ವಾ ಸರ್ವ ಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾಶುಚಃ" ಎಲ್ಲ ಧರ್ಮಗಳನ್ನೂ ತ್ಯಾಗಮಾಡಿ ನನ್ನೊಬ್ಬನಿಗೇ ಶರಣು ಹೋಗು ನಾನು ನಿನ್ನ ಎಲ್ಲ ಪಾಪಗಳಿಂದಲೂ ಮುಕ್ತನನ್ನಾಗಿ ಮಾಡುವೆನು ಶೋಕಿಸಬೇಡ" ಎಂದು ಶರಣಗತಿಯ ಮಹಿಮೆಯನ್ನು ಸ್ವಲ್ಪದರಲ್ಲಿ ಹೇಳಿದ್ದಾನೆ. ಬೇಡರಕಣ್ಣಪ್ಪ, ವಾಲ್ಮೀಕಿ ಮೊದಲಾದವರು ನೀಚರಾದರೂ ತಮ್ಮ ಎಲ್ಲ ಧರ್ಮಗಳನ್ನೂ ಬಿಟ್ಟು ಪರಮಾತ್ಮನಿಗೆ ಶರಣು ಹೋದಾಗಲೇ ಉಚ್ಚ ಪದವಿಗೇರಿ ದೇವಮಾನವರಾಗಿ ಮುಕ್ತರಾದರು. ಅದಕ್ಕೆ ಭಕ್ತಿಮಾರ್ಗವು ಬಹು ಹಿರಿದೆಂದು ಹೇಳಲಿಕ್ಕೆ ಅಡ್ಡಿ ಇಲ್ಲ. ಜಗತ್ತಿನ ಕಣ್ಣುಗಳೇ ಭಕ್ತರು, ಶರಣರು,

ಅವರಿಂದಲೇ ಮಳೆ, ಬೆಳೆ, ಸುಖ-ಶಾಂತಿ ದೇಶಕ್ಕೆ ಒದಗುವದು. ಯಾಕಂದರೆ ಅವರೇ ಜೀವಂತ ದೇವರು ಲಿಂಗಗಳು. ಅವರೇ ಜಗದ ಗುರುಗಳು, ಅವರೇ ಜಂಗಮರು, ಆದರ ಪಾದೋದಕವೇ ತೀರ್ಥ, ಅವರ ಮಿಕ್ಕ ಪ್ರಸಾದವೆ ಅಮೃತ. ಇಂಥವರ ಪಾದ ಧೂಳಿ ಅಥವಾ ಇವರು ವಾಸಿಸುವ ಮನೆಯ ಧೂಳವೇ ವಿಭೂತಿ, ಅವರು ಉಪಯೋಗಿಸುವ ಪ್ರತಿಪದಾರ್ಥವೇ ರುದ್ರಾಕ್ಷಿ. ಅವರ ವಚನಗಳೇ ಮಂತ್ರಗಳು. ಬೇರೆ ಏನೂ ಇಲ್ಲ. ಭಕ್ತರೆಂದರೆ, ಇಂಥ ಜಗದ ಹಿರಿಯರಿದ್ದಾರೆ. ಜನಜಂಗುಳಿಯ ಉದ್ಧಾರಕ್ಕೆ ಜನ್ಮತಾಳಿ ಸೂಕ್ಷ್ಮವಾಗಿ ಸ್ಥೂಲವಾಗಿ ಜಗದ ಕಲ್ಮಶವನ್ನು ಸದಾ ತೊಳೆಯುತ್ತ ಮೇಲೆತ್ತುತ್ತಲೆ ನಡೆದಿದ್ದಾರೆ. ಅವರು ಯಾವ ಭೋಗಕ್ಕೂ ಆಶಿಸುವದಿಲ್ಲ. ಸದಾ ಪರರ ಹಿತಕ್ಕಾಗಿ ಬಾಳುತ್ತಿರುವರು. ಅವರು ಉಸರಾಡಿಸುವದೂ ಕೂಡ ಪರರಿಗಾಗಿ ಎಂದರೂ ಅಡ್ಡಿಯಿಲ್ಲ. ಪರರಿಂದ ದೂಷಿತವಾದ ಹವೆ ಮತ್ತು ಶರಣರು ಉಸುರಾಡಿಸಿ ಶುದ್ಧಗೊಳಿಸಿ ಬಿಡುತ್ತಿರುವರೆಂದು ತಿಳಿಯಿರಿ. ನಿಶ್ಚಲ ಭಕ್ತಿಯೇ ಪ್ರಪಂಚದಲ್ಲಿ ಶಾಶ್ವತವಾದುದು ಸತ್ಯವಾದುದು. ಇದರಿಂದಲೇ ಸರ್ವಚಿಂತೆಗಳು ದೂರಾಗುವವು. ಭಗವಂತನಲ್ಲಿ ಸಂಪೂರ್ಣವಾದ ಭಕ್ತಿಯುಳ್ಳವನಿಗೆ ಪ್ರಪಂಚದ ಯಾವ ಸುಖವೂ ರುಚಿಸುವದಿಲ್ಲ. ಅವೆಲ್ಲ ತಾನೇ ಮಾಯವಾಗುವದು. ನಿಜವಾದ ಭಗವದ್ಭಕ್ತಿಯುಂಟಾದರೆ ಸಮಸ್ತ ವೈಹಿಕ ಐಶ್ವರ್ಯಗಳ ಮೋಹಜಾಲದಲ್ಲಿ ಕೆಡಹಲು ಉಪದೇಶಿಸುವದನ್ನು ವೃಷಕೇತು ಎಂಬ ಚಿಕ್ಕ ಬಾಲಕ ಭಕ್ತಶ್ರೇಷ್ಠನು ಸೋಲಿಸಲಿಲ್ಲವೆ. ಹಿರಣ್ಯಕಶ್ಯಿಪು, ಬಾಲಕ ಭಕ್ತ ಪ್ರಲ್ಹಾದನಿಗೆ ಕೊಡುವ ಯಮಯಾತನೆಗಳು ಪರ್ವತಕ್ಕೆ ಹೂವಿನ ಪೆಟ್ಟುಗಳು ಹೇಗೇ ಹಾಗೆ ಆಗಲಿಲ್ಲವೆ? ಇದೆಲ್ಲ ಭಕ್ತನ ಭಕ್ತಿಯ ಶ್ರೇಷ್ಠತೆಗಳನ್ನು ಹೇಳುವದಿಲ್ಲವೆ?

ಭಕ್ತನು ಭಗವಂತನನ್ನು ಐದು ವಿಧವಾಗಿ ಭಾವ ಸಾಧನಗಳಿಂದ ಸಂಬಂಧಪಡಿಸಿಕೊಂಡು ನವವಿಧ ಭಕ್ತಿಯಿಂದ ಪೂಜಿಸುವನು.

(೧) ಶಾಂತ ಭಾವಃ- "ಬ್ರಹ್ಮ ಸತ್ಯ ಜಗನ್ಮಿಥ್ಯ" ಎಂದು ವೇದೋಪನಿಷತ್ತಿನ ಅಧ್ಯಯನ ಗುರುಗಳಿಂದ ಮಾಡಿಕೊಂಡು ಸತ್ಯವಾದ ಬ್ರಹ್ಮನನ್ನೇ ಧ್ಯಾನಿಸುತ, "ಎನ್ನ ವಾಮಕ್ಷೇಮ ನಿಮ್ಮದಯ್ಯ. ಎನ್ನ ಹಾನಿ ವೃದ್ಧಿ ನಿಮ್ಮದಯ್ಯ. ಎನ್ನ ಮಾನಾಪಮಾನ ನಿಮ್ಮದಯ್ಯ ಕೂಡಲ ಸಂಗಮದೇವಾ ಒಳಗೆ ಕಾಯಿ ದಿಮ್ಮಿತ್ತೆ" ಎಂದು ಸರ್ವದರಲ್ಲಿ ಸಮ

ದೃಷ್ಟಿಯ ನೆಟ್ಟು ನಡೆಯುತ್ತಾ ಸದಾ ಶಾಂತಚಿತ್ತರಾಗಿರುವದೇ ಶಾಂತ ಭಾವ ಮಾರ್ಗವು. ಇದಕ್ಕೆ ಅಲ್ಲಮಪ್ರಭು, ಬಸವಣ್ಣ ಉದಾಹರಣೆಗಳ ಹೊಂದಿಕೆಯಾಗುವವು. ಅದರಂತೆ ಕಂದಮೂಲಗಳನ್ನು ತಿಂದು ವನದಲ್ಲಿ ವಾಸಿಸಿದ ಋಷಿಗಳೂ ಇದ್ದಾರೆ.

(೨) ದಾಸ್ಯಭಾವಃ— ಸೇವಕನಿಗೆ ಒಡೆಯನಲ್ಲಿರುವ ಸಂಬಂಧ. ಪರಮಾತ್ಮನು ನಮ್ಮ ಯಜಮಾನನು ನಾವು ಅವನ ಸೇವಕರು ಎಂದು ತಿಳಿದು ಸ್ವಸುಖಾಭಿಲಾಷೆಯನ್ನು ತೊರೆದು ಸದಾ ಅವನ ಭಕ್ತಿ ಸೇವೆ ಮಾಡಿ ಆತನನ್ನು ಒಲಿಸಿಕೊಂಡು ಕೃಪೆಗೆ ಪಾತ್ರರಾಗುವರು. ಇದರಲ್ಲಿ ಸಾಮಾನ್ಯವಾಗಿ ಎಲ್ಲ ಶಿವಶರಣರೂ ಬರುವರು. ರಾಮನ ಮೇಲೆ ಹನುಮಂತನು ಮಾಡಿದ ಭಕ್ತಿಯು ಈ ತೆರ ನಾಗಿದೆ.

(೩) ಸಖ್ಯಭಾವಃ— ಗೆಳೆಯರಲ್ಲಿರುವ ಪರಸ್ಪರ ಸಂಬಂಧ. ಇದ ರಲ್ಲಿ ಭಕ್ತನು ತನ್ನ ಇಷ್ಟದೈವವನ್ನು ಗೆಳೆಯನೆಂದು ಭಾವಿಸುವನು. ದೇವರ ಸಾನಿಧ್ಯದಲ್ಲಿ ಭಯವಿಲ್ಲದೆ ಸಲುಗೆಯಿಂದ ವರ್ತಿಸುವನು. ಅರ್ಜು ನನು ಶ್ರೀಕೃಷ್ಣನ ಮೇಲೆ ಮಾಡುವ ಭಕ್ತಿಯು ಈ ತೆರ ನಾಗಿತ್ತು.

(೪) ವಾತ್ಸಲ್ಯಭಾವಃ— ತಾಯಿ ತಂದೆಗಳಿಗೆ ತಮ್ಮ ಮಗನಲ್ಲಿ ಇರುವ ಮೃದುಮಧುರವಾದ ಕೋಮಲಸಂಬಂಧ. ಭಯಭಕ್ತಿಗಳಿಗೆ ಸ್ಥಾನವಿಲ್ಲ ಭಕ್ತನು ಇಷ್ಟದೇವನನ್ನು ತನ್ನ ಮಗನೆಂದು ಭಾವಿಸಿ ಪ್ರೀತಿಯ ವಸ್ತುವಿಗಿಂತ ಭಕ್ತನೇ ಬಲಿಷ್ಠನೆನಿಸುತ್ತಾನೆ. ತನ್ನ ಮಗನಿಗೆ ಲಾಲನ ಪಾಲನ ಮಾಡಿ ಮುದ್ದುಗೈವುದೇ ಆತನ ಆಶೆ. ಶ್ರೀಕೃಷ್ಣನ ಮೇಲೆ ಎಶೋದಾ-ನಂದಗೋಪರು ಮಾಡುವ ಭಕ್ತಿ ಇಂತಹದೇ ಆಗಿತ್ತು. ಶ್ರೀರಾಮಕೃಷ್ಣರ ಕಾಲಕ್ಕೆ ಅಘೋರಮಣಿ ಎಂಬ ವಿಧವೆಯೂ ಇಂಥ ಭಕ್ತಿಯನ್ನೇ ಮಾಡಿದ್ದಳು.

(೫) ಮಧುರ ಭಾವಃ— ಸತಿಪತಿಯರಲ್ಲಿರುವ ಪರಸ್ಪರ ಅನುರಾಗದ ಸಂಬಂಧ ಪ್ರೇಮದ ಸತಿಪತಿಗಳು ಒಬ್ಬರೊಬ್ಬರ ವಿಯೋಗವನ್ನು ಸಹಿಸ ಲಾರರು. ತನ್ನ ಇಷ್ಟದೈವನು ಗಂಡನಾಗುವನು. ಇತರ ಭಾವಗಳಿ ಗಿಂತಲೂ ಇದು ಒಳ್ಳೇ ಶ್ರೇಷ್ಠತಮ ಉಚ್ಚತಮವಾದುದು. ಬೆಂಕಿ ಬೆಣ್ಣೆಗಳನ್ನು ಒಂದೆಡೆಯಲ್ಲಿ ಸೇರಿಸಿದಂತಾಗುವದು. ಹುಲಿ ಹುಲ್ಲೆಗ ಳನ್ನೂ ಕರಿ ಸಿಂಹಗಳನ್ನು ಒಂದೆಡೆಯಲ್ಲಿ ಇರಿಸಿದಂತಾಗುವದು. ಒಂದ

ರಿಂದ ಮತ್ತೊಂದು ಕೆಡಬಾರದು. ಘಾತಕವಾಗಬಾರದು, ಪೋಷಕವಾಗಬೇಕು. ರಾಧೆ ಕೃಷ್ಣನು ಗೋಪಿಕೃಷ್ಣನೂ ಮಾಡುವ ಭಕ್ತಿ ಇದಕ್ಕೆ ಬಲವಾದ ಉದಾಹರಣೆ. ಮೀರಾ ಕೃಷ್ಣ, ಅಕ್ಕಮಹಾದೇವಿ, ಮಲ್ಲಿಕಾರ್ಜುನ ಹೇಮರಡ್ಡಿಮಲ್ಲಮ್ಮ, ಮಲ್ಲಯ್ಯಾ ಇವರು ಮಾಡುವ ಸತಿಪತಿಭಾವದ ಭಕ್ತಿಯು ಮಧುರ ಭಾವಕ್ಕೆ ಉದಾಹರಣೆ. ಇವರನ್ನು ಕಂಡು ಸಾಮಾನ್ಯರು ಇಂಥ ಭಕ್ತಿಯನ್ನು ಮಾಡಿಕೊಟ್ಟ ಉದಾಹರಣೆಗಳನೇಕ ಉಂಟು. ಕಾರಣ ಇಂಥ ಕಠಿಣ ಭಾವವನ್ನು ಅನುಕರಣ ಮಾಡಬಾರದು. (ಮಲ್ಲಮ್ಮ ಮೀರಾ) ಅಕ್ಕಮಹಾದೇವಿಯರ ಪತಿ ಎನಿಸಿದ ದೇವರು ಸಜೀವ ಮಾನವ ಮೂರ್ತಿ ಇರಲಿಲ್ಲ. ಆದರೆ ಭಗವಂತನಲ್ಲಿ ಮಾತ್ರ ಪತಿಭಾವವಿರಿಸಿ ಪೂಜಿಸಿದ್ದುಂಟು. ರಾಧಾ ಗೋಪೀಯರ ಇಷ್ಟದೈವ ಪತಿಯೆಂದು ತಿಳಿದ ಸಜೀವ ನರರೂಪಿ ಕೃಷ್ಣನಾಗಿದ್ದನು. ಇವರ ನಡುವಿನ ಮಧುರಭಾವವು ಬಹು ಕಠಿಣ. ಇದನ್ನು ನಿಜವಾಗಿ ಸಾಧಿಸಿದರೆ ಮಹಾಬಲಶಾಲಿಗಳೆಂದೇ ಹೇಳಬೇಕು.

ಯಾವ ಭಾವವು ತಮಗೆ ಸ್ವಾಭಾವಿಕ ಸರಳು ಎನಿಸಿ ಸಹಜ ಒಗ್ಗುವದೋ ಅದೇ ಭಾವವನ್ನು ಅನುಸರಿಸಬೇಕು. ಅನ್ಯರು ಮಾಡುವದನ್ನು ಕಂಡು ಅನುಕರಣ ಮಾಡಿದರೆ ಭ್ರಷ್ಟರಾಗಬೇಕಾಗುವದು. ಯಾವ ಭಾವ ಮಾಡಿದರೂ ನವವಿಧ ಭಕ್ತಿಯು ಅವಶ್ಯವಾಗಿದೆ. ಶ್ರವಣ ಕೀರ್ತನ ಸ್ಮರಣೆ ವಂದನ ಪಾದಸೇವನ ಅರ್ಚನ ಸಖ್ಯ ದಾಸ್ಯ-ಆತ್ಮ ನಿವೇದನ ಮೊದಲಾದವುಗಳು ಬೇಕೇಬೇಕು. ಈ ಪಂಚಭಾವಗಳನ್ನು ಈ ಜಗದಲ್ಲಿ ಶ್ರೀರಾಮಕೃಷ್ಣ ಪರಮಹಂಸ ದೇವರೊಬ್ಬರೇ ಸಾಧಿಸಿದ್ದರೆಂದು ಅವರ ಚರಿತ್ರದಿಂದ ಗೊತ್ತಾಗುವದು. ಒಬ್ಬೊಬ್ಬರು ಒಂದೊಂದು ಭಾವವನ್ನು ಸಾಧಿಸಿ ಪರಮಾತ್ಮನ ದರ್ಶನವನ್ನು ಸಾಧಿಸಿದ್ದಾರೆ. ಮಾನವನು ತನಗನುಗುಣವಾದ ಭಾವದಿಂದ ಪರಮಾತ್ಮನ ಭಕ್ತಿ ಮಾಡಿದರೆ ಭಗವಂತನ ದರ್ಶನ ಸುಖವು ಲಭಿಸುವದು.

ಅಹೇತುಕವಾದ ನಿಷ್ಕಾಮ ಭಕ್ತಿಯು ಅತ್ಯವಶ್ಯವು. ಭಗವಂತನ ಕೂಡ ವ್ಯಾಪಾರಿ ಭಕ್ತಿ ಇರಬಾರದು. ಇಲ್ಲಿ ಕೊಡುಕೊಳ್ಳುವ ವ್ಯವಹಾರವಿರಕೂಡದು. ಬರೇ ಕೊಡುವದೇ ಇರಬೇಕು. ಭಗವಂತನಿಗೆ ತನ್ನ ಸರ್ವಸ್ವಗಳನ್ನೂ ಅರ್ಪಿಸಿ, ಪ್ರಸಂಗಬಂದರೆ ಸ್ವತ್ಯಾಗಕ್ಕೂ ಸಿದ್ಧನಿರಬೇಕು. ಸಿದ್ಧರಾಮನು ಮಲ್ಲಿಕಾರ್ಜುನನ ದರ್ಶನಕ್ಕಾಗಿ ಕಡೆಗೆ

ಸ್ವತ್ಯಾಗಕ್ಕೂ ಸಿದ್ಧನಾದನು. ಕೊಳ್ಳವನ್ನು ಹಾರಿದನು. ಕೊಳ್ಳ ಹಾರುವೆ ನೆಂಬ ಕಲ್ಪನೆಯೂ ಕೂಡ ಆಗ ಇರಲಿಲ್ಲ. ಯಾವ ಸುಖ-ದುಃಖ ಸಾವು ಮರಣಗಳ ವಿಚಾರವೂ ಕೂಡ ಇರಲಿಲ್ಲ. ಆಗ ಅಲ್ಲಿ ಶ್ರೀಮಲ್ಲಿ ಕಾರ್ಜುನನು ದರ್ಶನಕೊಟ್ಟನು. ಇದನ್ನು ಕೇಳಿ ಎಷ್ಟೋ ಮೂಢ ಭಕ್ತರು ದೇವನ ದರ್ಶನಾಪೇಕ್ಷಿಗಳಾಗಿ ಮುಕ್ತಿಹೊಂದಬೇಕೆಂಬ ಉದ್ದೇಶ ದಿಂದ ಕೊಳ್ಳದಲ್ಲಿ ಹಾರಿ ಸತ್ತ ಉದಾಹರಣೆಗಳುಂಟು. ಒಬ್ಬರನ್ನು ನೋಡಿ ಇನ್ನೊಬ್ಬರು ಅನುಕರಣ ಮಾಡಿದಂತೆ ಆಗುವದು. ಇಂಥ ಭಕ್ತಿಗೆ ದೇವರು ಮೆಚ್ಚಲಾರನು. ಭಕ್ತಿ ಮಾಡುತ್ತ ಹೋದಂತೆ ಎಲ್ಲ ಸ್ಥಿತಿಗಳು ತಾವಾಗಿಯೇ ಬರುವವು. ಕಾರಣ ಸಾವಧಾನದಿಂದ ಸಾಗ ಬೇಕು. ಗಡಬಡಿಯಿಂದ ಮಾಡಬೇಕೆಂದರೆ ಏನೂ ಸಾಧಿಸುವದಿಲ್ಲ. ಕಾರಣ ವಿಚಾರವಿಲ್ಲದ ಭಕ್ತಿ ವಿನಾಶಕ್ಕೆ ಕಾರಣವಾಗಿ ಸರ್ವವೂ ವ್ಯರ್ಥ ವಾಗುವದು ಕಾರಣ ಡಾಂಭಿಕ ಭಕ್ತಿ ಮಾಡಬಾರದು.

"ನಂಬರು ನೆಚ್ಚರು ಬರಿದೆಕರೆವರು. ನಂಬಲರಿಯರೀ ಲೋಕದ ಮನುಜರು- ನಂಬಿ ಕರೆದಡೆ 'ಓ' ಎನ್ನನೆ ಶಿವನು? ನಂಬದೆ ನೆಚ್ಚದೆ ಬರಿದೆ ಕರೆವರ ಕೊಂಬಿಮೆಟ್ಟಿ ಕೂಗೆಂದ ಕೂಡಲ ಸಂಗಮದೇವಾ."

"ನಾದಪ್ರಿಯನಲ್ಲ, ವೇದಪ್ರಿಯನಲ್ಲ, ಭಕ್ತಿಪ್ರಿಯ ನಮ್ಮ ಕೂಡಲ ಸಂಗಮದೇವಾ."

"ಮನದಲ್ಲಿ ಲೇಸಿಲ್ಲದನ್ನಕ್ಕರ ಒಂದನಾಡಹೋಗಿ ಒಂಭತ್ತು ನಾಡುವ ಢಂಬಕರ ಮೆಚ್ಚ ಕೂಡಲಸಂಗಮದೇವಾ."

ಈ ಪ್ರಕಾರ ಅನೇಕ ವಚನಗಳನ್ನು ಡಾಂಭಿಕ ಭಕ್ತಿಯ ದುಷ್ಪರಿ ಣಾಮಗಳನ್ನು ಸರಸಾಗಿ ಹಾಡಿದ್ದಾರೆ. ಕಾರಣ ನಿಜವಾದ ಭಕ್ತರಾ ದಲ್ಲಿ ಸರ್ವರಿಗೂ ಸುಖ.

ಸಾಧಿಸಿದರೆ ಇನ್ನೂ ಭಕ್ತಿಯೋಗದ ಬಗ್ಗೆ ಬರೆಯುವೆನು ಆಗ ನೋಡಿಕೊಳ್ಳಿರಿ.

---

# ಆಗಮ ವಿಶಿಷ್ಟ ಶಿವತತ್ತ್ವ.

(ಲೇ.:— ಶ್ರೀ. ಅವಧಾನಿ ಶಾಸ್ತ್ರಿ, ಗಿರಿಕುಂದ, ಕೃತಪುರ–ವಸ್ತ್ರನಿವಾಸ. ವಸತಿ ಬಳ್ಳಾರಿ. )

---

ಶೈವಾಗಮಗಳಲ್ಲಿ ಶಿವತತ್ತ್ವವನ್ನು ತಿಳುಹಿಸಿಕೊಡಲು 'ಸ್ವಭಾವ' ಎಂಬುದನ್ನು ಉಪಾದೇಯ (ಗೃಹೀತಯೋಗ್ಯ) ವಾಗಿ ಅಂಗೀಕರಿಸಲ್ಪಟ್ಟಿದೆ. ಇದನ್ನು ಶ್ರೀ ಶಿವಯೋಗಿ ಶಿವಾಚಾರ್ಯರು—

" ಶಿವಸ್ಸಂ ವಿತ್ಸ್ವರೂಪಕಃ "

ಸಿ. ಶಿ. ಪರಿ ೩–೨೫.

ಶಿವನು ಸಂವಿತ್ಸ್ವರೂಪನಾಗಿದ್ದಾನೆ, ಎಂದು ಅಂದಿರುವುದರಿಂದ ' ಸಂವಿತ್ ' ಎಂಬದಾಗಿಯೂ ಕರೆಯುವರು. ಶುದ್ಧವೂ ಸಂಪೂರ್ಣವೂ ಆದ ಅರುಕೇ ಸಂವಿತ್ತು. ಅದು ಒಂದೇ ಒಂದಾಗಿ ಅದ್ವಿತೀಯ ಪ್ರಕಾಶ ರೂಪವಾಗಿದೆ. ದೇಶ ಕಾಲ ವಸ್ತುಗಳು ಅದನ್ನು ಭೇದಿಸಲಾರವು. ಯಾಕಂದರೆ ಅವುಗಳು ಆ ಪ್ರಕಾಶದ ಕಿರಣಗಳು. ವಿಭುವಾಗಿ ನಿತ್ಯವಾಗಿ ಸ್ವತಂತ್ರವಾಗಿ ಇರುವುದೇ ಶಿವತತ್ತ್ವವು.

ಶಿವನ ಸ್ವಾತಂತ್ರ್ಯವನ್ನು ಆದಿಯಾ ಆನಂದ ಶಕ್ತಿ ಎಂದು, ವಿಸ್ಮಯಕಾರಕ ಉಲ್ಬಣವನ್ನು ಇಚ್ಛಾಶಕ್ತಿ ಎಂದು, ಪ್ರಕಾಶತೆಯನ್ನು ಚಿಚ್ಛಕ್ತಿ ಎಂದು, ವಿಮರ್ಶಕತೆಯನ್ನು ಜ್ಞಾನಶಕ್ತಿ ಎಂದು, ಸರ್ವಾಕಾರತೆಯನ್ನು ಕ್ರಿಯಾಶಕ್ತಿ ಎಂದು ಹೇಳುವರು. ಹೀಗೆ ಅದು—

"ಇಚ್ಛಾ, ಜ್ಞಾನ, ಕ್ರಿಯಾರೂಪ ಬಹುಶಕ್ತಿ ವಿಲಾಸಯಾ"

ಇಚ್ಛಾ, ಜ್ಞಾನ, ಕ್ರಿಯಾತ್ಮಕ ಅನಂತ ಶಕ್ತಿಗಳಿಂದ ಶೋಭಿಗೊಂಡಿರುವುದು. ಹೀಗಿದ್ದರೂ ಅದು ವಸ್ತುತಃ ನಿರವಚ್ಛಿನ್ನ ಪ್ರಕಾಶ, ಮತ್ತು ನಿಜಾನಂದ ವಿಶ್ರಾಂತ ಸ್ವಭಾವ ರೂಪ ವಸ್ತುವು. ಅದುವೇ ಶಿವ, ಪರಶಿವ, ಮತ್ತು ಪರಮೇಶ್ವರ ಮುಂತಾದ ಹೆಸರಿನಿಂದ ಕರೆಯಿಸಿಕೊಳ್ಳುವದು.

ಈ ಪರಮ ಪ್ರಕಾಶಮಯ ಪರಶಿವ ತತ್ತ್ವದಲ್ಲಿ, ಸ್ವಾತಂತ್ರ್ಯಮೂಲಕ ಆನಂದಶಕ್ತಿದ್ವಾರಾ ಉಂಟಾದ, ನಿರವಚ್ಛಿನ್ನ ಚಿದ್ಘನಾನಂದರೂಪ ಅಕೃತ್ರಿಮ 'ಅಹಂ' ಎಂಬ ಸ್ಫುರಣವನ್ನು, 'ಮಹತ್' ಯಾ ಶಿವತತ್ತ್ವವೆಂದು, ಅದೇ ತತ್ತ್ವವು ತನ್ನ ಸ್ವಾತಂತ್ರ್ಯ ಮೂಲಕ ತನ್ನನ್ನು ಸಂಕುಚಿತ ಭಾವಕ್ಕೆಳಸಿದಾಗ 'ಅಣು' ಎಂದು ಹೇಳಿಸಿಕೊಳ್ಳುವದು. ಇದನು ಆಗಮ ಮತ್ತು ದರ್ಶನಕಾರರು 'ಬುದ್ಗಲ' ಯಾ ಜೀವತತ್ತ್ವವೆಂದು ಕರೆಯುವರು.

"ಸ್ವಶಕ್ತಿ ಕ್ಷೋಭ ಮಾತ್ರೇಣ ಸ್ಥಲಂ ತದ್ವಿವಿಧಂ ಭವೇತ್ ।
ಏಕಂ ಲಿಂಗಸ್ಥಲಂ ಪ್ರೋಕ್ತ ಮನ್ಯದಂಗ ಸ್ಥಲಂ ಸ್ಮೃತಮ್ ।"

—ಸಿದ್ಧಾಂತಶಿಖಾಮಣಿಪರಿ.

ಶಿವತತ್ತ್ವವು, ತನ್ನ ಶಕ್ತಿದ್ವಾರಾ ವ್ಯಾಪಕ ಮತ್ತು ಸಂಕುಚಿತತೆಯನ್ನು ಧಾರಣ ಮಾಡಿ, ಎರಡು ಸ್ಥಲಗಳನ್ನು ಉಂಟು ಮಾಡುವದು. ಆಗ ವ್ಯಾಪ್ಯಭಾವ ಉಳ್ಳದ್ದನ್ನು, 'ಲಿಂಗ' ಸ್ಥಳ ಎಂತಲೂ ಸಂಕುಚಿತ ಭಾವ ತಾಳಿದುದನ್ನು 'ಅಂಗ' ಸ್ಥಳ ಎಂತಲೂ ಹೇಳುವರು. ಈ ಅಂಗಯಾ ಜೀವನು —

"ಅಮಿತಿ ಬ್ರಹ್ಮಸನ್ಮಾತ್ರಂ ಗಚ್ಛತೀತಿ ಗಮುಚ್ಯತೇ ।"

—ಅನುಭವಸೂತ್ರ.

ತನ್ನ ಸ್ವಭಾವ ಸಿದ್ಧ ಸ್ವಾತಂತ್ರ್ಯತೆಯ ಮೂಲಕ, ಶಿವ (ಬ್ರಹ್ಮ) ತ್ವದ ಕಡೆಗೆ ಹೊರಡುವ ಸ್ವಭಾವ ಉಳ್ಳವನು. ಅಂಗ (ಜೀವ) ನು. ಅದರಿಂದ ಯಾವಾಗ ಕಲ್ಪಿತ ಸ್ವಾತಂತ್ರ್ಯತೆಯನ್ನು ತ್ಯಜಿಸಿ, 'ಸರ್ವಂ ಅಹಮ್' 'ನಾನ್ಯತ್ ಕಿಂಚಿತ್' ಜಗವಾದಿ ಎಲ್ಲವೂ ನಾನೇ ಇದ್ದೇನೆ. ನನಗನ್ಯವಾಗಿ ಏನೊಂದೂ ಇಲ್ಲ. ಹೀಗೆ ಪೂರ್ಣಾತ್ಮಕರೂಪನಾಗಿ 'ತನಗೆರವೇನು ತೋರದೆಂಬರಿವಿನ ಇರವಿನಲ್ಲಿ' ನೆಲೆ ನಿಂತಾಗಲೇ ಶಿವನಾಗುವನು. ಇದೇ ಮಾತನ್ನು ಉಪನಿಷತ್ತಿನಲ್ಲಿ ರೂಪಕವಾಗಿ—

"ದ್ವಾಸುಪರ್ಣಾ ಸಯುಜಾ ಸಖಾಯಾ ಸಮಾನ ವೃಕ್ಷಂ ಪರಿಷಸ್ವ ಜಾತೇ ।
ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತ್ಯ ನಶ್ನನ್ನನ್ಯೋ ಅಭಿಚಾಕಶೀತಿ ।"

—ಶ್ವೇತಾಶ್ವತರ ಉಪ. ೪।೬.

ಈ ಮನುಷ್ಯ ಶರೀರವೆಂಬ ವೃಕ್ಷದಲ್ಲಿ ಶಿವ-ಜೀವ ಎಂಬೆರಡು ಪಕ್ಷಿಗಳು, ಒಮ್ಮೆಲೆ ಅರ್ಥಾತ್ ಒಂದುಮುಂದಾಗದೆ ಹುಟ್ಟಿಕೊಂಡು, ಒಂದನ್ನೊಂದಗಲದೆ, ಹೃದಯರೂಪ ಗೂಡಿನಲ್ಲಿ ಪರಸ್ಪರ ಸಖ್ಯ ಭಾವ ದಿಂದ ಕುಳಿತಿವೆ. ಅವುಗಳಲ್ಲೊಂದು ಪಕ್ಷಿಯು, ( ಜೀವ ಪಕ್ಷಿಯು ) ಆ ವೃಕ್ಷದ ಕಂಹಿ-ಸಿಂಹಿ ಫಲಗಳನ್ನು (ಶರೀರವಿಡಿದು ಬಂದ ಪ್ರಾರಬ್ಧ ರೂಪ ಸುಖ ದುಃಖಾತ್ಮಕ ಭೋಗ ವಿಷಯಗಳನ್ನು ) ರುಚಿಸುತ್ತದೆ. ಇನ್ನೊಂದು ಪಕ್ಷಿ ( ಶಿವಪಕ್ಷಿ ) ಯು ಅವುಗಳನ್ನು ರುಚಿಸದೆ ಸುಮ್ಮನೆ ನೋಡುತ್ತಲಿರುತ್ತಿದೆ. ಎಂಬುದಾಗಿ ವರ್ಣಿಸಿರುವುದು. ಹೀಗಿರುವಾಗ ಜೀವ ಪಕ್ಷಿಯು ಆ ವೃಕ್ಷದ ಸಿಂಹಿ-ಕಂಹಿ ಫಲಗಳನ್ನು ರುಚಿಸುವುದರಲ್ಲಿ ಬೇಜಾರುಗೊಂಡು, ಅಕಸ್ಮಾತ್ ಶಿವಪಕ್ಷಿಯ ಕಡೆಗೆ ಹೊರಳಿ ನೋಡಿ ದುದೇ ಸಾಕು. ತಾನೂ ಆ ಪಕ್ಷಿಯ ರೂಪ ಶಿವಪಕ್ಷಿಯನ್ನು ಕೂಡಿ ಕೊಳ್ಳುವುದು.

ಇದರಂತೆ ಪ್ರಕಾಶ ಸಹ ಶಿವತತ್ವವಾಗಿದೆ. ಆದರೆ ಅದು ವಿಮ ರ್ಶಾತ್ಮಕವಾಗಿದೆ. ವಿಮರ್ಶೆ ಎಂದರೆ ಜಗದ ಉತ್ಪತ್ತಿ ( ಹುಟ್ಟು ) ಸ್ಥಿತಿ (ಬಾಳು) ಲಯ (ಅಳಿ.) ಅರ್ಥಾತ್ ಸಂಹಾರ ರೂಪದಿಂದ ಪೂರ್ವದಲ್ಲಿ ಪ್ರತಿಪಾದಿಸಲ್ಪಟ್ಟ ಅಕೃತ್ರಿಮ ಅಹಮಾಕಾರತೆಯನ್ನು ಹೊಂದುವಿಕೆ. ಇದೇ ವಿಮರ್ಶೆಗೆ ಅರ್ಥ. ಇದನ್ನು ಚಿತ್, ಚೈತನ್ಯ, ಸ್ವಾತಂತ್ರ್ಯ, ಪರಮೈಶ್ವರ್ಯಯೋಗ, ಸ್ಫುರಣ, ಸ್ಪಂದ ಮುಂತಾದ ಶಬ್ದಗಳಿಂದ ಶಾಸ್ತ್ರಕಾರರು ಬಳಕೆಯಲ್ಲಿ ತಂದಿರುವರು. ಅಕೃತ್ರಿಮ ಅಹಂತಾ ಭಿನ್ನ ಸ್ವಪ್ರಕಾಶ ರೂಪ ಪರಮೇಶ್ವರನು, ತನ್ನ (ಪಾರಮೇ ಶ್ವರಿ) ಶಕ್ತಿಯಿಂದ ಶಿವ ಮೊದಲು ಭೌತಿಕ ತತ್ವವನ್ನೊಳಗೊಂಡ ಪ್ರಪಂಚ ರೂಪದಿಂದ ಸ್ಫುರಿಸುತ್ತಾನೆ. ಬೆಳಗುತ್ತಾನೆ. ಇದೇ ಶಿವತತ್ವ ಜ್ಞಾನಿ ಗಳ ಮುಖ್ಯ ವರ್ಮ-

ಭೇದವಾದಿಗಳಾದ ಸಾಂಖ್ಯ ಮೊದಲಾದ ದರ್ಶನಗಳೆಲ್ಲ, ಜಡ ತ್ವದ ಉಪಪತ್ತಿಯನ್ನು ತೋರಿಸುತ್ತಿದ್ದರೂ, ಶೈವಾಗಮಗಳಲ್ಲಿ ಪ್ರಪಂಚ ವನ್ನು ಅಜಡವೆಂದು ಅರ್ಥಾತ್ ಚಿತ್‌ಯೂ ಶಿವರೂಪವೆಂದು, ತಿಳಿಯ ಪಡಿಸಿದೆ. ಈ ಮಾತನ್ನು ಸರ್ಪಭೂಷಣ ಶಿವಯೋಗಿಗಳು—

"ಪೊರಕಲ್ಪನೆಯ ನಾಮರೂಪಿನೀ ಜಗವೆಲ್ಲ, ಪರಿಭಾವಿಸಲು ಚಿತ್ತಿಗೆರವಿಲ್ಲವೆಂದು.

—ಸ. ಭೂ. ಶಿ ಜ್ಞಾ. ಪ್ರ. ಪ. ೪೮.

ಹೊರಗೆ ತೋರುವ ನಾಮರೂಪಗಳುಳ್ಳ ಈ ನಿಖಿಲ ಪ್ರಪಂಚವು ವಿಚಾರದ್ವಾರಾ ತಿಳಿದು ನೋಡಲು, ಶಿವಸ್ವರೂಪಕ್ಕೆ ಅನ್ಯವಾಗಿ ಇಲ್ಲವು. ಎಂದು ಅಂದಿದ್ದಾರೆ. ಭಿನ್ನ ವೇದ್ಯ ಹಾಗೂ ಅಪ್ರಕಾಶ (ಜಡ) ವೆಂದು ತಿಳಿಯುವದರಿಂದ, ಯಾವ ವಸ್ತುವೂ ಸಿದ್ಧವಾಗಲಾರದು. ಎಂದು ಹೇಳಿದ್ದಾರೆ. ಮತ್ತು—

"ಪರಮಾತ್ಮನಿಂದನ್ಯ ಪರಮಾರ್ಥವಾಗಿ ಸುಸ್ಥಿರಮಿರ್ಪುದೊಂದನರಿಯಲಿಲ್ಲಾಗಿ ಯಾಪರಮಾತ್ಮನಖಿಳವೆನಬೇಕು।"

—ನಿ. ಶಿ. ಅನುಭವಸಾರ ಸಂ. ೧ ಸೂ. ೬.

ಶಿವನಿಗನ್ಯವಾಗಿ ಸತ್ಯವೂ ಸ್ಥಿರವೂ ಆದ ಇನ್ನೊಂದು ತತ್ವವು ದೊರೆಯದಾದ್ದರಿಂದ, ನಿಖಿಲ ಪ್ರಪಂಚವು, ಆ ಪರಮಾತ್ಮ ಯಾ ಶಿವನೇ ಎಂದು ತಿಳಿಯಬೇಕು. ಎಂಬದಾಗಿ ನಿಜಗುಣಯೋಗಿಗಳು ಹೇಳಿದ್ದಾರೆ. ಹಾಗೂ ಪಾರಮೇಶ್ವರಾಗಮದಲ್ಲಿ ಪರಮೇಶ್ವರನು ಪಾರ್ವತಿಯನ್ನು ಕುರಿತು—

"ಜಗತ್ ತದಾತ್ಮಕ ಜ್ಞಾನಂ ಮಹಾಜ್ಞಾನ ಮಿತೀಶ್ವರೀ।"

—ಪಾರಮೇಶ್ವರಾಗಮ ಪ- ೭-೭೭

ಹೇ ದೇವಿ! ಈ ನಿಖಿಲ ಪ್ರಪಂಚವು, ಆ ಆತ್ಮನ ಶಿವನ ಸ್ವರೂಪವೆಂದು ತಿಳಿಯುವುದೇ ಶ್ರೇಷ್ಠವಾದ ಜ್ಞಾನವೆಂದು ತಿಳಿ. ಎಂದು ಹೇಳಿದ್ದಾನೆ.

ಇನ್ನು ಕೆಳತರಗತಿಯ ಗ್ರಂಥಗಳಲ್ಲಿ, ಒಳ್ಳೇ ಪ್ರಮಾಣ ಪುಷ್ಟಿಗಳಿಂದ, ಶಿವ ಭಿನ್ನತಾ ಪ್ರತಿಪಾದನೆಯು ಮಾಡಲ್ಪಟ್ಟಿದೆಯಾದರೂ ಅವು ಭ್ರಾಂತಿಮೂಲಕವಾದುದಾಗಿವೆ. ಯಾಕೆಂದರೆ-ಪ್ರಕಾಶವನ್ನು ಆಶ್ರಯಿಸಿಯೇ ಪ್ರತ್ಯಕ್ಷಾದಿ ಪ್ರಮಾಣಗಳು ಹೊಸ ಅರ್ಥಗಳನ್ನು ಪ್ರಕಾಶಿಸುತ್ತವೆ. ಆದರೆ ಪರಮ ಪ್ರಮಾಣರೂಪ ಶಿವನ ಯಾ ಶಿವತತ್ವದ ಸಿದ್ಧಿ

ಯಲ್ಲಿ, ಈ ಪ್ರತ್ಯಕ್ಷಾದಿ ಪ್ರಮಾಣಗಳು ನಿರುಪಯೋಗಿಯಾಗುವವು. ಇವುಗಳಿಂದ ಶಿವತತ್ವದ ಪ್ರಕಾಶತೆ ಸ್ವಸಂವೇದ್ಯತೆಗಳು ಸಿದ್ಧಿಸಲಾರವು. ಶೃತಿಯು—

"ಆತ್ಮಾವಾ ಅರೇ ಕೇನ ವಿಜಾನೀಯಾತ್. ನಕೇನ ಪೀತ್ಯರ್ಥಃ ।"

ಆತ್ಮಯಾ ಶಿವತತ್ವವು ಯಾರಿಂದ ಮತ್ತು ಯಾವ ಪ್ರಮಾಣದಿಂದ ತಿಳಿಯಲ್ಪಟ್ಟೀತು? ಯಾರಿಂದಲೂ ಮತ್ತು ಯಾವ ಪ್ರಮಾಣದಿಂದಲೂ ತಿಳಿಯಲಾಗದು! ಇದರಂತೆ ಸ್ಮೃತಿಯು ಸಹ—

"ಪ್ರಮಾಣಾನ್ಯ ಪಿ ವಸ್ತೂನಾಂ ಜೀವಿತಂ ಯಾನಿ ತನ್ವತೇ ।
ತೇಷಾಮಪಿ ಪರೋ ಜೀವಃ ಸ ಏವ ಪರಮೇಶ್ವರಃ ॥"

ಪ್ರಮಾಣಗಳು-ಕಲ್ಪಿತವಾದ ಸಾಮಾನ್ಯ ವಸ್ತುಗಳ ಜೀವನವನ್ನು ಪ್ರಕಾಶಿಸುತ್ತವೆ. ಆದರೆ ಜೀವನು ಅವುಗಳಾಚೆ ಇದ್ದಾನೆ. ಮತ್ತು ಅವನೇ ಪರಮೇಶ್ವರ ಶಿವನಾಗಿದ್ದಾನೆ.

'ಅಪ್ರಮಾಣ ಕೂಡಲಸಂಗಮದೇವ' ಎಂಬ ಶರಣರ ನುಡಿಯಂತೆ ಪ್ರಮಾಣಾಸಾಧ್ಯವಾದ ಶಿವತತ್ವವನ್ನು ನಿಜಗುಣಯೋಗಿಗಳ ಉಕ್ತಿಯಂತೆ.

"ಅರಿಯದನನುಮಾನದ ಪೆಸರಿಂದ, ಅಗಳು ನುಡಿವಿಡಿದರಿವುದರಿಂದ । ಆಗಮವೆನಿಸುವುದಂತದರಿಂದ.

— ನಿ. ಶಿ. ಪರಮಾರ್ಥಗೀತೆ ಗ. ೧।೧೧

ತಿಳಿಯಲಾಗದುದನ್ನು ಅನುಮಾನಯುಕ್ತಿದ್ವಾರಾ ಶಬ್ದಗಳಿಂದ ತಿಳಿಸಿ ಹೇಳುವುದೇ ಆಗಮವು. ಇಂತಹ ಶೃತ್ಯಾಗಮೋಕ್ತಿಗಳದ್ವಾರಾ, (ಗುರುವಿನಲ್ಲಿ) ಕೇಳಿ, ತಿಳಿದು, ತಾನೇ ತನ್ನಲ್ಲಿ 'ಅಹಂ' ಪದದ ವಿಮರ್ಶೆಯನ್ನು ಮಾಡಿಕೊಂಡಲ್ಲಿ, ಆಗ ತಾನೇ ಶಿವನೆಂತಲೂ, ಶಿವನಿಗೆ ತಾನು ಮತ್ತು ಈ ಪ್ರಪಂಚವು, ಅನ್ಯವಲ್ಲವೆಂತಲೂ ಯತಾರ್ಥವಾದ ಜ್ಞಾನವಾಗುವುದು. ಇದೇ ಆಗಮವಿಶಿಷ್ಟ ಶಿವತತ್ವ.

# ದಾಸೀ ಸಂತ ಜನಾಬಾಯಿ

ಲೇಖಕರು - ಗಿರಿಕುಂದ ಅವಧಾನಿ ಶಾಸ್ತ್ರಿಗಳು ಕೃತಪುರ-ವಸ್ತ್ರ ನಿವಾಸ
ವಸತಿ ಬಳ್ಳಾರಿ.

—o●o—

ದಾಸೀ ಸಂತ ಜನಾಬಾಯಿಯು, ಶ್ರೀ ಕ್ಷೇತ್ರ ಪಂಢರಪುರದ ಪರ ಬ್ರಹ್ಮ ಲಿಂಗ ಪಾಂಡುರಂಗನ ಭಕ್ತಿ ನಿಬ್ಬರ ( ಮತ್ತ-ಯಾ-ತಲ್ಲೀನ ) ರಾದ ಸಹಸ್ರಾವಧಿ ಸಂತರಲ್ಲಿ ಮುಖ್ಯರೆಂದಿನಿಸಿದ, ಶ್ರೀ ಜ್ಞಾನದೇವ, ನಿವೃತ್ತಿಮುಕ್ತಾ, (ಸ್ತ್ರೀ) ನಾಮಾ, ಸಾಂವತಾ, ಗೋರಾ, ಚೋಖಾ, (ಅಂತ್ಯಜ) ಮುಂತಾದವರ ಸಮಕಾಲೀನಳು. ಭಕ್ತಿ, ಜ್ಞಾನ, ವೈರಾಗ್ಯ, ಯೋಗ (ಪ್ರಾಣಲಿಂಗಯೋಗ) ಗಳ ಕೊರತೆಯಿಲ್ಲದ ಸಂಪತ್ತುಳ್ಳವಳು. ಪ್ರಸಾದವಾಣಿಯಿಂದ ಸಹಸ್ರಾವಧಿ ಅಭಂಗಗಳನ್ನು ರಚಿಸಿದ ವರದ-ಕವಯಿತ್ರಿಯು. ವಯೋಮಾನದಿಂದ ಎಲ್ಲರಿಗಿಂತ ಹಿರಿಯಳಾಗಿ ಎಲ್ಲರಿಗಿಂತ ದೀರ್ಘಕಾಲ ಬಾಳಿ ಆಮರಣ ಬ್ರಹ್ಮಚಾರಿಣಿ ಎನಿಸಿದ ವೀರ ವಿರಾಗಿನಿಯು. ಇಂತು ಶ್ರೇಷ್ಠ ಸದ್ಗುಣಗಳ ಖನಿಯಾಗಿದ್ದರೂ ಆ ಎಲ್ಲ ಸಂಪತ್ತಿಗೆ 'ದಾಸಿ' ಎಂಬ ಆವರಣವನ್ನು ಹೊಂದಿಸಿ ದಾಸಿಯಾಗಿಯೇ ಸಿದ್ಧಿ ಪಡೆದ ಭಾಗ್ಯಶಾಲಿನಿಯು. ಜನಾಯಿಯನ್ನು ಭಕ್ತೆ, ಸಂತಿಣಿ, ಕವಯಿತ್ರಿ, ಕೌಮಾರಿಣಿ, ವಿರಕ್ತೆ, ಯೋಗಿನಿ ಮುಂತಾಗಿ ಸಂಬೋಧಿಸ ಬಹುದಾಗಿತ್ತು. ಆದರೆ ಅವಾವವೂ ಅವಳ ನೈಜವಾದ ಯೋಗ್ಯತೆಯನ್ನು ತೋರ್ಪಡಿಸಲಾರವು.

ವಾರಕರೀ ಸಾಂಪ್ರದಾಯದ ಸಂತ ವೃಂದವು, ಭಜನ ಸಮಾಪ್ತಿಯ ವೇಳೆಯ ವಿನವಣಿ (ವಿನಂತಿ ಯಾ ಪ್ರಾರ್ಥನೆ) ಯ ಅಭಂಗ (ಪದ) ದಲ್ಲಿ.

ತುಮಚ್ಯಾ ದಾಸೀಚಾ ದಾಸ ಕರೋನಿಯಾ ಠೇವಾ ।
ಆಶೀರ್ವಾದ ದ್ಯಾವಾ ಹಾಚಿ ಮಜ ॥ '

ಸಂತ ಮಹಾನುಭಾವರೇ ! ನೀವು ನನ್ನನ್ನು ನಿಮ್ಮ ದಾಸಿಯು ದಾಸನನ್ನಾಗಿ ನಿಯಮಿಸಿಕೊಳ್ಳುವ ಕೃಪೆಯು ಆಶೀರ್ವಾದ ನೀಡಿರಿ. ಹೀಗೆಂದು ಹಾಡಿ ಬೇಡುವರು. ಈ ಪ್ರಾರ್ಥನೆ, ಆ ಕಾಲದಲ್ಲಿ ದಾಸಿತ್ವ

ವಹಿಸಿ ಬಾಳಿದ ಜನಾಯಿಯ ಯೋಗ್ಯತೆಯ ನಿದರ್ಶನವಾಗಿದೆ ಎಂಬ ಮಾತನ್ನು ಸಂತ ಸಜ್ಜನರು ಯಾರೂ ಅಲ್ಲಗಳೆಯಲಾರರು. ಇದರ ಸತ್ಯಾಂಶವನ್ನು ಆಕೆಯ ಚರಿತ್ರೆಯಿಂದಲೇ ಕಂಡುಹಿಡಿಯುವಾ!

ಸಂತ ಶ್ರೀ ನಾಮದೇವನ ತಂದೆಯಾದ ಸಿಂಪಿ ದಾಮಾಶೇಟಿಯು ಪಂಢರಪುರದ ಪರಬ್ರಹ್ಮಲಿಂಗ ಪಾಂಡುರಂಗನ ನಿಷ್ಠಾವಂತ ವಾರಕರಿಯು* ಇವನು ಪ್ರತಿ ಏಕಾದಶಿಗೂ ತಪ್ಪದೆ ಪಂಢರೀಶನ ಭೆಟ್ಟಿ ಪಡೆಯುವವನಾಗಿದ್ದನು. ಇವನಂತೆ ಜನಾಯಿಯ ತಂದೆ (ಮರಾಠಾ ಒಕ್ಕಲಿಗ) ಯೂ ವಾರಕರಿಯಾಗಿದ್ದನು. ಅದರಿಂದ ಪಂಢರಿಯಲ್ಲಿ ಮೇಲಿಂದ ಮೇಲೆ ಉಭಯತರ ಮಿಲನವಾಗುತ್ತಿತ್ತು. ಆಗ ಪರಸ್ಪರರು ತಮ್ಮ ಯೋಗಕ್ಷೇಮವನ್ನು ಹೇಳಿಕೊಳ್ಳುತ್ತಿದ್ದರು. ಹೀಗಿರುವಾಗ ಒಂದು ಬಾರಿ ಜನಾಯಿಯ ತಂದೆಯು, ತನ್ನ ಏಳುವರುಷ ಚಿಕ್ಕ ಜನಿ (ಮಗಳು) ಯನ್ನು ಪಂಢರಿಗೆ ಕರೆತಂದನು. ಮತ್ತು ದಾಮಾಶೇಟಿಯನ್ನು ಕಂಡು-ಅಣ್ಣಾ! ನನ್ನ ಮನೆಯಲ್ಲಿ ಈ ಒಂದು ಮಗುವಿನ ಹೊರತು ಬೇರಾರೂ ಇಲ್ಲ. ನಾನು ಇಲ್ಲಿಗೆ ಬಂದಾಗ ಇವಳೊಬ್ಬಳೇ ಮನೆಯಲ್ಲಿ ಉಳಿಯುವಳು. ಜೊತೆಯಲ್ಲಿ ಕರೆತರುವದೆಂದರೆ ಇವಳಿಂದ ನಡೆಯಲು ಆಗದು. ನಾನಿನ್ನು ಶ್ರೀ ಕ್ಷೇತ್ರದಲ್ಲಿಯೇ ಕಾಲಕಳೆಯಬೇಕೆಂದಿರುವೆ. ಮಗುವನ್ನು ಹತ್ತರಿಟ್ಟುಕೊಳ್ಳಲಾರೆ. ಊರಕ್ಷ ಬಿಡಲಾರೆ; ನಮ್ಮೂರವರ ಇರವ ಬಣ್ಣಿಸಲಾರೆ. ಸುರೆಯನೀಂಟುತ ಜರೆಯ ದಾಂಟಲಾಗದೆ, ಎಂಬ ತೊರಗ ನುಡಿಯನು ಸಾಮ್ಯಕಿಡುತ, ಸಿರಿಯ ಬೆಂಬಲವಿಡಿದು ಘೋರವನು ತೆರೆಯಲಿರಿಸುತ, ಹರಿಯನೆನೆಯದೆ ಗರುವದಿಂದುರಿದು ಉರಿದೇಳ್ವರೈ, ಸರಿಬಾರದೆನಗವರ ಸಂಗ! ಹರಿಯ ಚರಣದೆ ನೆರೆಯೆ ಸಿರಿಯು ಬಾಗುವಳೊಲಿದು, ಹರಿಯ ನೆನೆವನ ಸಿರಿಯನರಿತವರೆ ಇಲ್ಲ! ಅಣ್ಣಾ ನಿನ್ನದು ನೈಜವಾದ ಸಿರಿಯು! ಇವಳನ್ನು ನಿನಗೊಪ್ಪಿಸುವೆ. ಇವಳು ನಿನ್ನ ಮನೆಯ ಊಳಿಗದವಳಾಗಿ ಬಾಳಲಿ. ಅದೇ ನನಗೆ ಸಂತೋಷವೆಂದನು. ದಾಮಾಶೇಟಿಯು ಜನಿಯನ್ನು ನಿರಕಿಸಿದನು. ಮನವು ಆಕರ್ಷಿಸಿತು.

* ಪ್ರತಿವರುಷ ಚೈತ್ರ ಆಷಾಢ ಕಾರ್ತಿಕ ಮಾಘ ಯಾತ್ರೆಗಳ ಏಕಾದಶಿ ದಿನಗಳಲ್ಲಿ ಅವುದೊಂದನ್ನು ಗುರುಸಾನಿಧ್ಯದಲ್ಲಿ ಪ್ರಣಮಪೂರ್ವಕ ದೀಕ್ಷೆಗಡೆದಂತೆ (ಪ್ರತಿ ಏಕಾದಶಿಯಾದರೂ ಆಗಬಹುದು) ಸಂಸಾರದ ಅಡಚಣೆಯೂ ಮರಣ ಶಯ್ಯೆಯಲ್ಲಿದ್ದರೂ ತಪ್ಪದೇ ಬಂದು ಭೆಟ್ಟಿಕೊಡುವವನು.

ಹೊಗೊಟ್ಟು ತನ್ನೂರಿಗೆ ಕರೆತಂದು, ಹೆಂಡತಿಯಾದ ಗೋಣಾಯಿಗೆ- ಅನಾಥೆಯಾದ ಇವಳನ್ನು ಮನೆಯಲ್ಲಿ ಇಟ್ಟುಕೊ. ಇವಳಿಂದ ಮನೆಗೆಲಸ ಮಾಡಿಸಿಕೊಂಡು ಇವಳ ಆರೋಗ್ಯ ಹೊಟ್ಟೆ ಬಟ್ಟೆಗಳನ್ನು ನೋಡಿಕೊಂಡು ಹೋಗೆಂದನು.

ಅಂದಿನಿಂದ ಜನಿಯು ದಾಮೂಶೇಟಿಯ ಮನೆಯ ಊಳಿಗದವಳಾಗಿ ನಿರಾಲಸದಿಂದ ಕೆಲಸ ಮಾಡಿ, ಒಡತಿ ನೀಡಿದುದನುಂಡು ಸಂಜೆಯಲ್ಲಿ ದಾಮೂ ಶೇಟಿಯು ಮಾಡುವ ವಿಟ್ಠಲ ಭಜನೆಯನ್ನು ಕೇಳುತ್ತ ಕೂಡ್ರುವಳು. ತಂದೆಯ ಜೊತೆಯಲ್ಲಿರುವಾಗಲೇ ಇದು ಇವಳ ಅಭ್ಯಾಸವಾಗಿತ್ತು. ದಾಮೂಶೇಟಿಯು ವಿಠ್ಠಲ ವಿಠ್ಠಲ ಎಂದು ಕುಣಿಯ ಹತ್ತಿದನೆಂದರೆ, ತಾನೂ ಗಟ್ಟಿಯಾಗಿ ಕೂಗಿ ಚಪ್ಪಾಳೆ ತಟ್ಟುವಳು. ಆವೇಶಗೊಂಡಳೆಂದರೆ—

" ಏವಂ ವ್ರತ: ಸ್ವಪ್ರಿಯ ನಾಮಕೀರ್ತ್ಯಾ ।
ಜಾತಾನುರಾಗೊ ಜಿತಚಿತ್ತ ಉಚ್ಚೈ: ॥
ಹಸತ್ಯಥೋ ರೋದಿತಿ ರೌತಿ ಗಾಯ: ।
ತ್ಯುನ್ಮಾದವ ನ್ನೃತ್ಯತಿ ಲೋಕ ಬಾಹ್ಯ: ॥

ಶ್ರೀ ಮದ್ಭಾಗವತ ೧೧।೨।೪೦

ಎಂಬ ಭಾಗವತದ ಉಕ್ತಿಯಂತೆ ಭಗವಂತನ ನಾಮವನ್ನು ದೊಡ್ಡ ದನಿಯಿಂದ ಕೂಗಿ ಉಚ್ಚರಿಸುವಳು ನಗುವಳು. ಅಳುವಳು. ಗುಣಗುಡುವಳು. ಹಾಡುವಳು. ಜನಲಜ್ಜೆಯನ್ನು ತೊರೆದು ಹುಚ್ಚಾಗಿ ಕುಣಿಯುವಳು. ಮತ್ತು-

' ಎದೆ ಬಿರಿವನ್ನಕ್ಕ ಮನದಣಿವನ್ನಕ್ಕ ನಿಮ್ಮ ನಾಮಾಮೃತವ ತಂದಿರಿಸು. ಎನ್ನ ಹೃದಯ ನಿಮ್ಮ ಶ್ರೀ ಚರಣದ ಮೇಲೆ ಬಿದ್ದು ರುಳಿಗೆ ಕೂಡಲಸಂಗಮದೇವಾ.

ಎಂಬ ಬಸವಣ್ಣನವರ ಉಕ್ತಿಗನುಸರಿಸಿ ಪ್ರಾರ್ಥಿಸುವಳು. ಭಗವಂತನಿಗಾದರೂ ಬೇಕಾದುದು ಇದೇ.

ಮಲಗಿ ಪರವಾದರದಿ ಪಾಡಲು (ಕೇಳಲು) ಕುಳಿತು ಪಾಡಲು ನಿಲುವ ನಿಲುತವಾಡಲು ಕುಣಿವ ಕುಣಿದು ಪಾಡಲು ವಲಿವ' ನೆಂಬಂತೆ ವಿಠ್ಠಲನ ಕೃಪಾದೃಷ್ಟಿಯು ಜನಿಯ ಮೇಲೆ ಬಿತ್ತು.

ಜನಿಗೆ ತಾರುಣ್ಯವು ಆವರಿಸುತ್ತ್ತ ಕೈವೈದುಂಡಾದಂತೆ ಅಂತ: ಕರಣದಲ್ಲಿ ಭಕ್ತಿಯು ರೂಪುಗೊಂಡು, ಬಾಹ್ಯ ಪ್ರಪಂಚದಲ್ಲಿ ಔದಾಸೀನ್ಯತೆ ಬೆಳೆಯತೊಡಗಿತು. ನಾಮಾಮೃತದ ರುಚಿ ಹತ್ತಿದ ಇವಳಿಗೆ ಅನ್ನದ ರುಚಿಯಲ್ಲಿ ಲಕ್ಷ್ಯವಿರಲಿಲ್ಲ. ಸಂತ ದಾಮಾಶೇಟಿಯು ಬಳಿದುಳಿದ (ಬಳಿಸಿ ಉಳಿದ) ಅನ್ನವನ್ನು ಮುಂದಿರಿಸಿಕೊಂಡು-

'ಕರೂ ಭಜನ ಭೋಜನ ದಣಿ ಘೇವೂ ನಾರಾಯಣ' ಭಜನೆಯೆಂಬ ಭೋಜನಮಾಡಿ ನಾರಾಯಣನೆಂದು ಡೇಗುವಾ, ಎಂದು ಅದನ್ನು ಪ್ರಸಾದ ಬುದ್ಧಿಯಿಂದ ಉಂಡು ತೃಪ್ತಿ ಬಡುವಳು. ಇವಳ ಪ್ರೀತಿಯ ಅಲಂಕಾರವೆಂದರೆ-ಸಮಪಾದಗಳನ್ನು ಯಿಟ್ಟಿಂಗಿಯು ಮೇಲಿಟ್ಟು, ಪಟ್ಟೆ ಪೀತಾಂಬರವನುಟ್ಟು, ಟೊಂಕದಮೇಲೆ ಕೈಗಳನ್ನಿಟ್ಟು, ಕೌಸ್ತುಭ ವನ ಮಾಲೆಗಳ ಕೊರಳಲ್ಲಿಳಬಿಟ್ಟು, ಕಿರೀಟ ಕುಂಡಲ ಧಾರಿಯಾದ ಕೋಟಿ ಸೂರ್ಯ ಪ್ರತೀಕಾಶ, ಶ್ಯಾಮಸುಂದರ ಮನೋಹರ ಮೂರ್ತಿಯನ್ನು ಕಣ್ಣಲ್ಲಿ ನಾಟಿಕೊಂಡಿರುವುದು. ಬೇರೆ ಅಲಂಕಾರವೆಂದರೆ ಜನ್ಮದಾರಭ್ಯ ತೊಡದೆ ಇರುವ ವಸ್ತ್ರಾಭರಣ ಗಳನ್ನು ಎರವಾಗಿ ತಂದು, ಅಲ ಕರಿಸಿದ ಶವದ ಅಲಂಕಾರದಂತೆಂದು ಭಾವಿಸಿದ್ದಳು. ಅದರಿಂದ ತನ್ನ ದೇಹವನ್ನು ಅಲಂಕರಿಸುವುದರಲ್ಲಿ ಅವಳಿಗೆ ಅಭಿರುಚಿ ಇರಲಿಲ್ಲ. ಹಳೆಯ ಹಾಗೂ ಹರಿದು ತೇಪೆ ಹಚ್ಚಿದ, ಮಡಿಯ ಬಟ್ಟೆಗಳನ್ನು ತೊಟ್ಟುಕೊಂಡಿರುವುದೇ ಅವಳಿಗೆ ಸೊಗಸು. ನಿಮಿತ್ತ ಮಾತ್ರವಾಗಿ ಎಂದಾದರೊಮ್ಮೆ ಒಡತಿ ಜುಲುಮೆಯಿಂದ ಕೊಟ್ಟ ಹೆಚ್ಚಿನ ಬಟ್ಟೆಯನ್ನುಟ್ಟಾಗ, ಮೈಲಿಗೆ ಬಟ್ಟೆ ಉಟ್ಟಂತಾಗಿ ಅದನ್ನು ಕಳೆದು ತನ್ನ ನಿತ್ಯದ ಬಟ್ಟೆಯನ್ನು ಉಟ್ಟು ಕೊಂಡಾಗಲೇ ಅವಳಿಗೆ ಪವಿತ್ರತೆಯ ಸಮಾಧಾನವೆನಿಸುತ್ತಿತ್ತು. ತಾರುಣ್ಯಭರದಲ್ಲಿಯೂ ವಿಷಯವಾಸನೆಯಿಂದ ಅಲಿಪ್ತಳಾಗಿದ್ದಳು. ಜನಿಯು ನಿರಾಯಾಸವಾಗಿ ಕರಣವಿಜಯ ಪಡೆದ ವೀರ ವಿರಾಗಿನಿಯು. ಕೃತಕ ನಿರಕ್ತಿಯವಳಲ್ಲ. ಮಿಗಿಲಾದ ಜಿನುಗು ಬಟ್ಟೆಯನ್ನು ಮೆರುಗು ಕಾಂವಿಯುಲದ್ದಿ, ಮೈಗೊರೆಯೆ ಹೊದೆದು, ಕೂರ ಹೊರಡುವ ಮುನ್ನ ತನ್ನೆದೆ ಭುಜಗಳನ್ನು ನೋಡಿಕೊಳ್ಳುತ್ತ, ಜನಮರೆಯಲಿ ಮಂದಸ್ಮಿತನಾಗಿ, ತುಪ್ಪೊಸರುವನ್ನದ ರಸದಿ ನಾಲಿಗೆ ತಣಿಸಿ ಕಣ್ಣಲಿ-ಲಿಂಗದ ರೂಪು ನಾಂಟಿಸಿಕೊಂಡು, ತೆರೆಯ ಮರೆಯಲಿ ಆರ್ಚಿಪರ ನಿರತಿಗಿದು ವಿಪರೀತ. "ಊಟಕ್ಕೆ ವಿಷಯಕ್ಕೆ ಮರುಗುತಿಪ್ಪಾತಂಗೆ ಕೂಡವಪ್ಪುದೆ ಶಿವಪಥದೊಳು" ಎಂಬ ನಿಜಗುಣ

ಯೋಗಿಯ ಉಕ್ತಿಯಂತೆ ಇವಳ ಭಾವನೆ. ವೈದಣಿವಂತೆ ಸಂತ ದಾಮಾಶೇಟಿಯ ಮನೆಯ ಉಡುಗುವ, ಕುಟ್ಟುವ, ಬೀಸುವ, ಬಟ್ಟೆ ತೊಳೆಯುವ, ಎಂಜಲು ಬಳಿಯುವ, ಶಗಣಿಗೂಡಿಸಿ ಬೆರಣಿ ಬಡಿಯುವ ಮುಂತಾಗಿ ಒದಗಿದ ಎಲ್ಲ ಕೆಲಸಗಳನ್ನು ಪರಮಾದರದಿಂದ ಮಾಡಿ ಮುಗಿಸುವುದೇ ಯಿವಳ ಕಾಯಕ. ಇವಳ ಈ ತಪಸ್ಸಿನ ಫಲವು ದಾಮಾಶೇಟಿ ಗೋಣಾಯಿಯವರ ಪುಣ್ಯದೊಡನೆ ಬೆರೆತು ಗೋಣಾಯಿ ಯ ಬಸುರಿನಲ್ಲಿ ಮಹಾತ್ಮನ ಉದಯದ ಚಿಹ್ನೆ ಮಾಡಿತು. ಆಗ ದಾಸೀ ಜನಿಗೆ ಹಿಡಿಸಲಾರದ ಆನಂದ.

" ಶುದ್ಧಾದೇಖೂನಿಯಾ ಭಾವ । ಪೋಟಾ ಆಲೇ ನಾಮದೇವ ॥
ದಾಮಾಶೇಟಿ ಹರುಷಲಾ । ದಾಸಿ ಜನಿಸ ಆನಂದ ಝಾಲಾ॥"

ದಾಮಾ ದಂಪತಿಗಳ ಶುದ್ಧಾ ಭಾವಕ್ಕಾಗಿ (ಭಕ್ತ) ನಾಮದೇವನ ಜನನ ಆಗ ದಾಮಾಶೇಟಿಗೆ ಆನಂದವಾಯಿತು. ಅದರ ಯಿಮ್ಮಡಿ ಆನಂದವು ದಾಸೀ ಜನಿಗೆ ಆಯಿತು. ನಾಮದೇವನು ಬಾಲಭಕ್ತನಾಗಿ ಬೆಳೆದು ಪ್ರಾಕೃತ (ತತ್ಕಾಲೀನ ವ್ಯವಹಾರಿಕ) ಭಾಷೆಯಲ್ಲಿ ಕೀರ್ತನೆ ಮಾಡಹತ್ತಿದನು. ಸಂತ ಶ್ರೀ ನಾಮದೇವನು ಕೀರ್ತನ ಸಾಂಪ್ರದಾಯ ಆದ್ಯ ಆಚಾರ್ಯನು. ಇವನ ತರುವಾಯ ಈ ಸಾಂಪ್ರದಾಯವು ದಕ್ಷಿಣೋತ್ತರಗಳಲ್ಲಿ ಹಬ್ಬಿತು. ಭಕ್ತ ನಾಮದೇವನ ಕೀರ್ತನ ಲುಬ್ಧ ದಾಸೀ ಜನಿಯ, ಭಕ್ತಿಯು ಫಲಿಸಿ ಪಕ್ವವಾಯಿತು. ಪುಂಡಲೀಕ ವರದ ವಿಠ್ಠಲನಿಗೆ ಜನೀದಾಸಿಯ ಹುಚ್ಚು ಹಿಡಿಯಿತು.

ಭಕ್ತನಾಮದೇವನ ಮನೆಗೆ ಒಮ್ಮೆ ಉದಯದಲ್ಲಿಯೇ ಸಂತ ಸಜ್ಜನರು ಅತಿಥಿಗಳಾಗಿ ನೆರೆದಿದ್ದಾರೆ.

" ಸಂತ ಆಲೇ ಘರಾ । ತೋಚಿ ದಿವಾಳಿ ದಸರಾ ॥ "

ಸಂತರು ಮನೆಗೆ ಬಂದ ದಿನವೇ ದೀಪಾವಳಿ ದಸರೆಯ ಹಬ್ಬವೆಂದು ಶ್ರೀ ನಾಮದೇವನ ಭಾವನೆ. ಅದರಿಂದ ಅತ್ಯಂತ ಆನಂದಿತನಾಗಿದ್ದಾನೆ. ದಾಸೀ ಜನಿಗೆ ಆದಿನ ನಿಬ್ಬಣದ ಐದೆಗಿತ್ತಿಯ ಪಟ್ಟಗಟ್ಟಿದಂತಾಗಿದೆ. ಉಬ್ಬಿನಲ್ಲಿ ಅವಳಿಗೆ ಕೈಗಳು ನಾಲ್ಕಾಗಿವೆ. ಅಂಗಳುಡುಗಿ ಚಳೆಯಿಟ್ಟು, ರಂಗವಲ್ಲಿಯ ಮಾಡಿಸಿ, ಒಳಗಡೆಯಲ್ಲಿ ಸಾರಣೆ ಕಾರಣೆಗಳನ್ನು, ಮಾಡಿ, ಅಲ್ಲಲ್ಲಿ ಮೊಗ್ಗುಗಳನಿಕ್ಕಿದ್ದಾಳೆ. ಧಾನ್ಯವನ್ನು ಅಳೆದುಕೊಂಡು ಬೀಸಲು ಕುಳಿತು–

"ರಾಮವೇಳೋ ವೇಳಾ ಆಮ್ಹೀ ಗಾವು ಓವಿಯೇ।
ದಳಿತಾ, ಕಾಂಡಿತಾ, ಜೇವಿತಾ ಗೇ ಬಾಯಿಯೇ॥"

ಬೀಸುವಾಗ, ಕುಟ್ಟುವಾಗ, ಉಣ್ಣುವಾಗಲೂ ನಾವು ರಾಮ (ವಿಶ್ರಾಂತಿಯ ಆವಾಸ) ನನ್ನು ನೆನೆದು, ಆತನ ನಾಮವನ್ನು ಪದಗಳ ರೂಪದಿಂದ ಪದೇ ಪದೇ ಹಾಡಿ ಪಾಡುವಾ. ಎಂಬದಾಗಿ ಹಾಡನ್ನು ಹಾಡಿ ಬೀಸಹತ್ತಿದ್ದಾಳೆ ಮುಗಿಯಿತು. ಅಷ್ಟರಲ್ಲಿ ಚಿಕ್ಕ ಒಡತಿಯು (ನಾಮದೇವನ ಹೆಂಡತಿ ರಾಜಾಯಿಯು) ತಂದಿಟ್ಟ ಮಸಾಲೆಯ ಜೀನಸುಗಳನ್ನು ಒರಳಿಗೆ ಹಾಕಿ, ವಿಠ್ಠಲ ವಿಠ್ಠಲ ಎಂಬ ತನ್ನ ಧ್ವನಿಗೆ ಒನಕೆಯ ಪೆಟ್ಟು ತಾಳಗೊಂಡು ಬೀಳುವಂತೆ ಕುಟ್ಟಹತ್ತಿದ್ದಾಳೆ. ಆ ದಿನ ಅವಳಿಗೆ ಕೆಲಸ ಎಷ್ಟಾದರೂ ಕಡಿಮೆ ಎನಿಸಹತ್ತಿದೆ. ದಣಿಯದೇ ಇದ್ದಾಳೆ ಎಲ್ಲ ಕೆಲಸ ಮುಗಿಸಿ ಅತಿಥಿಗಳಾದ ಸಂತ ಸಜ್ಜನರ ಮತ್ತು ತನ್ನ ದಿನದ ಬಟ್ಟೆಗಳನ್ನೆಲ್ಲಾ ಒಟ್ಟುಗೊಂಡು ಕಟ್ಟಿ, ತಲೆಯ ಮೇಲಿಟ್ಟುಕೊಂಡು, ಬಾಯಿಯಿಂದ ವಿಠ್ಠಲನಾಮವನ್ನು ವೈಖರಿಯಾಗಿ ನುಡಿಯುತ್ತ ನದಿಗೆ ಬಂದು, ಘಾಟನ ಮೇಲೆ ಗಂಟು ಯಿಳಿಸುತ್ತಲೇ ಪಕ್ಕನೆ ನೆನಪುಗೊಂಡು, ಮರೆತು ಬಂದೆ! ಈಗ ಇವನ್ನು ತೊಳೆಯುತ್ತ ನಿಂತರೆ ಪದತೀರ್ಥ (ಪಾದೋದಕ) ದೊರೆಯುದು ಬಿಟ್ಟು ಹೋದರೆ ಸಂತರು ಪಯಣ ಮಾಡುವ ಮುನ್ನ ಮಡಿಯ ಒಣ ಬಟ್ಟೆಗಳನು ಒದಗಿಸಿ ಕೊಡುವುದು ಕಷ್ಟ. ಏನು ಮಾಡುವುದು ಎಂದು ತುಸು ಹೊತ್ತು ಕಣ್ಣು ಮುಚ್ಚಿ ಸ್ತಬ್ಧಳಾದಳು. ಮಾಡುವ ಮತ್ತು ಬಿಡುವ ಎರಡೂ ಧರ್ಮಗಳೇ ಆಗಿ ಏನನ್ನು ಮಾಡುವದೊಳಿತೆಂದು ಚಿಂತಿಸುವ ಜನಿಯ ಧರ್ಮಸಂಕಟವನ್ನು ನೆನೆದು ಭಕ್ತ ಜನಾಯಿಯ ಕೆಲಸದಲ್ಲಿ ಭಾಗ ತೆಗೆದುಕೊಳ್ಳಲು ಇದು ಒಳ್ಳೆ ಸಮಯವೆಂದರಿತು, ಸ್ನಾನ ಗೃಹದಲ್ಲಿ ರುಕ್ಮಿಣಿಯಿಂದ ಅಭ್ಯಂಗ ಸ್ನಾನ ಮಾಡಿಸಿಕೊಂಡು ವೈಯಾರಿಸಿ ಕೊಳ್ಳುತ್ತಲಿದ್ದ ಭಗವಂತನು. ಪೀತಾಂಬರ ತರಲು ರುಕ್ಮಿಣಿ ಒಳಗೆ ಹೋದುದೇ ಸಾಕು. ಬಟ್ಟೆ ಒಯ್ಯಲು ಬಂದ ಅಗಸನು ಹಾಕಿಟ್ಟ ಸೀರೆಯನ್ನೇ ಉಟ್ಟುಕೊಂಡು, ವೃದ್ಧೆಯ ರೂಪತಾಳಿ ಮರೆಯಾದನು. ಜನಿಯು ಕಣ್ತೆರೆದಳು.

ಪಾದೋದಕದಲ್ಲಿರುವ ಜನಿಯ ಶ್ರದ್ಧೆಯು ಅಸಾಧಾರಣವಾದುದು. ಆದರಿಂದವಳು ದುರ್ಲಭವಾದ ಪದತೀರ್ಥವನ್ನು ಮೊದಲು ಪಡೆದು,

ಧಾವಿಸಿ ಬಂದು ತೊಳೆದರಾದೀತೆಂದು ನಿಶ್ಚಯಿಸಿ, ಒತ್ತರಿಸಿ ಮನೆಯತ್ತ ಹೊರಡುತ್ತಲೇ ವೃದ್ಧೆಯೊಬ್ಬಳು ಎದುರಾಗಿ, ಏನು ಜನಾ! ನದಿಯಿಂದ ಒತ್ತರಿಸಿ ಮನೆಯತ್ತ ಬೇಗ್ಗೈಲಿ ಹೊರಟಂತಿದೆ, ಏನವಸರ? ಎನಲು ಅವ್ವಾ ತೊಳೆಯಲೆಂದು ಬಟ್ಟೆತಂದೆ. ಈಗ ಸಂತಪೂಜೆಯ ಸಮಯ ನಾನಲ್ಲಿ ಇರಬೇಕಿತ್ತು. ಅಲ್ಲಿದ್ದವರಿಗೆ ಮಾತ್ರ ಪಾದತೀರ್ಥ ದೊರೆಯುತ್ತದೆ. ಅದು ಪಾರ್ಸಲ ಮಾಡಿಡುವ ವಸ್ತುವಲ್ಲ ಮಾತಿಗೆ ಸಮಯವಿಲ್ಲ ಬಂದು ತೊಳೆದರಾದೀತೆಂದು ಹೊರಟಿರುವೆ. ಅಹಲಿ ಜನಾ! ನನಗೂ ಇಂದು ಬಿಡುವಿದೆ. ನದಿಯ ಮೇಲಾದರೂ ಹೋಗಿ ಯಾರಿಗಾದರೂ ನೆರವಾಗುವಾ ಎಂದು ಬಂದೆ. ಒಳಿತಾಯಿತು. ನೀನು ಬರುವತನಕ ಬಟ್ಟೆತೊಳೆದಿಡುತ್ತೇನೆ. ಕಾಳಜೀಬೇಡ! ನಿದಾನವಾಗಿ ಬಾ. ಎಂದಳು ವೃದ್ಧೆ. ಆಗ ಜನಿಯು — ಬೇಡ ಬೇಡ! ನನಗೇನೂ ಕೆಲಸ ಒಜ್ಜೆ ಇಲ್ಲ. ಹೊತ್ತಿಗೆಂಬುದೊಂದೇ! ತಡಮಾಡದೆ ಬರುವೆ. ನೀನು ಮಾತ್ರ ತೊಳೆಯುವಗೋಜಿಗೆ ಬೀಳಬೇಡ ಎನ್ನುತ್ತಾ ಒತ್ತರಿಸಿ ಮನೆಯ ದಾರಿ ತುಳಿಯುತ್ತ.

'ಸೋನಿಯಾಚಾ ದಿವಸ ಆಜ। ಅಮೃತ ಘಳಾಲಾ।
ಸೋನಿಯಾಚ ದಿವಸ ಆಜ'

ಇಂದು ಬಂಗಾರದ (ದಸರೆಯ ಹಬ್ಬದ) ದಿನವು. ಇಂದು ನಮಗೆ ಅಮೃತವು ಕೈಸೇರುಪುದು. ಎಂದು ಹಾಡಿಕೊಳ್ಳುತ್ತ ಮನೆಗೆ ಬಂದು ಮುಟ್ಟುವಷ್ಟರಲ್ಲಿ ಸಂತಪೂಜೆಗೆ ಅಣಿಯಾಗಿದೆ. ಹಾಸಿದ ಪೀಠಗಳ ಮೇಲೆ ಸಂತರು ಒಬ್ಬೊಬ್ಬರಾಗಿ ಬಂದು ಅಧಿಷ್ಠಿತರಾಗ ಹತ್ತಿದ್ದಾರೆ. ಪಾದಪೂಜೆಯಾಯಿತು. ಗಂಧ ಮಾಲ್ಯಾದಿಗಳ ನರ್ಪಿಸುತ್ತ ಎಲ್ಲರೂ ಒಂದೇ ಧ್ವನಿಯಲ್ಲಿ —

'ಸಂತಪೂಜ್ಯಾ ಜ್ಯಾನೇಕೇಲಿ। ತ್ಯಾನೆ ಕಾಳಾಸಿ ಉಠವಿಲಿ।'

ಯಾರು ಸಂತಪೂಜೆಯನ್ನು ಮಾಡಿದರೋ ಅವರು ಮೃತ್ಯುವಿನ ದಾಳಿಯನ್ನು ಎಬ್ಬಿಸಿದರು ಎಂದು ಘೋಷಿಸುತ್ತಿದ್ದಾರೆ. ಇನ್ನು ಆರತಿ ಹಚ್ಚುವ ಸಮಯ. ಜನಮಧ್ಯದಿಂದ ಜನಿಯು ಪಾರಾಗಿ ತನ್ನ ಕೋಣೆಗೆ ಬಂದು, ಅಂದು ಬೆಳಗಿನ ಊಟಕ್ಕೆಂದು ಕೊಟ್ಟ ತಂಗುಳ ಅನ್ನವನ್ನು ಮಿದ್ದಿ, ಎರಡು ಚಿಕ್ಕ ಬಟ್ಟಲಾರತಿಗಳನ್ನು ಮಾಡಿ, ಬತ್ತಿಯನ್ನು ಹೊತ್ತಿಸಿ ತಂದು, ಸಂತವೃಂದಕ್ಕೆ ಬಲದಿಂದ ನಿವಾಳಿಸುತ್ತ ಒಯ್ದು

ಎಡಕ್ಕೆ, ಎಡದಿಂದ ನಿವಾಳಿಸ ತಂದು ಬಲಕ್ಕೆ, ಹೀಗೆ ನಿವಾಳಿ ಮಾಡಿ ಇಡುವಾಗ 'ಓಲಾಳಾವಿ ಕಾಯಾ ಚರಣಾವರೋನಿ' ತನ್ನ ದೇಹವನ್ನೇ ಸಂತಚರಣಗಳಿಗೆ ನಿವಾಳಿಸಿದಳೆಂಬಂತೆ ಕಾಣುತ್ತಿತ್ತು. ಆರತಿ ಮುಗಿಸಿ ಎಲ್ಲರಿಗೂ ತೀರ್ಥ (ಪಾದೋದಕ) ವಿಟ್ಟರು. ಜನಿಯು ಪದತೀರ್ಥವನ್ನು ಅಘ್ರಾಣಿಸಿ ಕಣ್ಣಿಗೊತ್ತಿಕೊಂಡು ಸ್ವೀಕರಿಸಿ ಧನ್ಯತೆ ಪಡೆದಳು. ಕೂಡಲೇ ಬಟ್ಟೆಯ ನೆನಪುಗೊಂಡು ನದಿಗೆ ಧಾವಿಸಿದಳು. ತೊಳೆದ ಬಟ್ಟೆಯ ಕಡೆಗೆ ನಜರು ಬಿದ್ದು, ಹುಟ್ಟಾ ನಾನು ಇಷ್ಟು ಶುಭ್ರವಾಗಿ ಬಟ್ಟೆ ತೊಳೆಯಲಿಲ್ಲ. ಯಾರೊ ಈಯಮ್ಮ! ಏನಮ್ಮಾ ನೀನೇಕೆ ಇಷ್ಟು ಶ್ರಮ ವಹಿಸಿದೆ? ನಾನುಬೇಡವೆಂದು ಹೇಳಿ ಹೋಗಲಿಲ್ಲವೇ? ಹೌದು ಜನಾ! ಯಾರಿಲ್ಲವೆನ್ನುವರು. ನಿನಗಿಂದು ನಾಲ್ವರ ಕೆಲಸ ಬೆಳಗಿನಿಂದ ಬಿಡುವಿಲ್ಲದೆ, ಬೆಳಗಿನ ಹಗುರೂಟವನ್ನೂ ಮಾಡದೆ, ಕೂತು ಉಸಿರೆಳೆಯದೆ, ಕೆಲಸದಲ್ಲಿದ್ದುದನ್ನು ಕಂಡು ನೆರವಾಗಲೆಂದು ಬಂದೆ. ತಪ್ಪೇನು? ಜನಾ ಒಳ್ಳೆಯ ಹಾದಿ ಹುಡುಕಿರುವೆ. ಮೆಲ್ಲನೆ ಕಾಲುಚಾಚಿ ನಮ್ಮಪ್ಪನ ಮನೆ ಹೊಗಬೇಕೆನ್ನುವಿಯಾ? ನಮ್ಮಪ್ಪ ನಾಮಾ ಬೊಪ್ಪನ ಮನೆ ನಾನೆಂದೂ ಬಿಟ್ಟವಳಲ್ಲ! ' ಹೊರಗಿನ ದೆವ್ವ ಬಂದು ಮನೆಯ ಅವ್ವನ ಓಡಿಸಿತಂತೆ, ಎಂದಾಗ ವೃದ್ಧೆಯ ವೇಷದಲ್ಲಿದ್ದ ಭಗವಂತನು ನಡುಗಿ ಗಾಪ್ಯವಾಗಿ ಸಂತರು ನನ್ನನ್ನು—

' ಪಂಢರೀಚೆ ಭೂತಮೋಠೆ । ಆಲ್ಯಾಗೇಲ್ಯಾ ಝಡಪೆ ವಾಟೆ। '

ಪಂಢರಪುರದ ದೆವ್ವ ದೊಡ್ಡದು (ಈ) ಮಾರ್ಗದಲ್ಲಿ ಬರುಹೋಗುವ ವರಿಗೆಲ್ಲ ಬಡಿದುಕೊಳ್ಳುತ್ತಿವೆ. ಎಂದು ಅನ್ನುವುದು ಯಿದೇ ಮಾತಿಗಾಗಿ ಯಿರಬಹುದೇ? ಅವರಂದುದೆಲ್ಲ ನನಗೆ ಸಂತೋಷವೇ! ಎಂದಂದು ಕೊಂಡು ಬಹಿರಂಗವಾಗಿ ಜನಾ! ನಾನೆಲ್ಲಿ ನಿನ್ನ ಮನೆಯ ಕಸಿಯ ಬಂದೆ? ಹಾಗೆ ತಿಳಿಯಬೇಡವಮ್ಮಾ! ನಿನಗೆ ದಣಿವೆನಿಸಿದಾಗ, ಯಿಟಾ ಎಂದು ಒದರಿ ಕರೆದರೆ ಸಾಕು ಬರುವೆ. ನಿನ್ನ ಮನೆಯ (ಮನದ) ಹಿಂದೆಯೇ ಹಿಂದೆಯೇ ಇದ್ದೇನೆ. ನೀನು ಎಲ್ಲಿದ್ದು ಕರೆದರೂ ನನಗೆ ಕೇಳಿಸುತ್ತದೆ. ಬರಲ್ಯಾ? ಎಂದವಳೇ ತೊಳೆದ ಬಟ್ಟೆಗಳ ಗಂಟನ್ನು ಜನಿಯ ತಲೆಯಮೇಲಿರಿಸಿ, ಜ್ಯಾರಿದಳು. ಎತ್ತ ಹೋದಳೆಂಬುದು ತಿಳಿಯಲಿಲ್ಲ.

ಇದರಂತೆ ಜನಿಯೊಡನೆ ಪಾಂಡುರಂಗನು ಕಾಳು ಬೀಸಿದುದುಂಟು. ಬೆರಣಿ ಬಡಿದುದುಂಟು. ಅವಳೊಡನೆ ಕೂಡಿ ಉಂಡುದುಉಂಟು. ಆದರೆ ಅವೆಲ್ಲವೂ ಶಾನೇ ಒಲಿದು ಮಾಡಿದುದಲ್ಲದೆ, ಜನಿಯು ಸಹಾಯಕ್ಕೆ ಕರೆದು ವಿಟ್ಠಲನ ಹಂಗಿನಲ್ಲಿ ಉಳಿಯಲಿಲ್ಲ. ಹೀಗೆ ಭಗವಂತನಿಗೆ ತನ್ನ ಹುಚ್ಚು ಹಿಡಿಸಿದ 'ಭಕ್ತಿ ಸಾಮ್ರಾಜ್ಞಿ' ಯಾದ ಜನಿಯು ದಾಸಿಪದ ನಿವೃತ್ತಿಯನ್ನೈಚ್ಛಿಸಲಿಲ್ಲ.

ಶ್ರೀ ಜ್ಞಾನೇಶ್ವರ, ಗೋರಾಮುಂತಾದವರ ಪ್ರೇಮದ ಬಳಕೆ ಯಿದ್ದುದರಿಂದ, ಅವರೊಡನಾಟದಲ್ಲಿ ಯೋಗ ಸಾಧನೆಯನ್ನರಿತು, ತನ್ನ ಏಕಾಂತದ ಇರವಿನಲ್ಲಿ, ಭಗವತ್ಕೃಪೆಯ ನೆರಳಿನಲ್ಲಿ, ಅದನ್ನು ಸಾಧಿಸಿ ಪುಣ್ಯ ಸಿದ್ಧಿಯನ್ನು ಹೊಂದಿದವಳು — ಯೋಗಿನಿಯು.

ಅಭಂಗ

" ರಕ್ತವರ್ಣ ತ್ರಿಕೂಟಸ್ಥಾನ। ಶ್ರೀ ಹಾಟ ಪಾಹೇಶ್ವೇತವರ್ಣ ॥೧॥
ಶಾಮವರ್ಣತೇ ಗೋಲಾಟ । ನೀಳಬಿಂದು ಔಟಪೀಠ ॥೨॥
ಪರೀಭ್ರಮರ ಗುಂಫಾಪಾಹೇ। ದಶಮದ್ವಾರೀ ಗುರು ಆಹೆ ॥೩॥
ನವದ್ವಾರಾತೇ ಭೇದೂನಿ । ದಶಮದ್ವಾರೀ ಗೇಲೀ ಜನಿ ॥೪॥

ಭ್ರೂಮಧ್ಯ ಸ್ಥಾನವೇ ತ್ರಿಕೂಟ ಅದುರಕ್ತದಂತೆ ಬಣ್ಣವುಳ್ಳದ್ದು. ಅದರಾಚೆಗೋಲಾಟವಿದ್ದು ಅದು ಮೇಘವರ್ಣದ್ದು. ಅದರನಂತರ ಔಟ ಪೀಠವೆಂಬುದು ನೀಲಜ್ಯೋತಿಯ ಪೀಠಸ್ಥಾನವು. ಅದರಾಚೆಗೆ ಭ್ರಮರ ಗುಹೆ ಎಂತಲೂ ದಶಮದ್ವಾರವೆಂತಲೂ ಒಂದು ಸ್ಥಾನವಿದೆ. ಅದುವೇ ಗುರುಸ್ಥಾನಯಾ ಪರಬ್ರಹ್ಮಲಿಂಗಸ್ಥಾನ. ಹೀಗೆ ಒಂಬತ್ತುದ್ವಾರಗಳನ್ನು ಭೇದಿಸಿ ಅದರಾಚೆಯ ದಶಮದ್ವಾರವನ್ನು ಜನಿಯು ಪ್ರವೇಶಿಸಿದಳು ಎಂಬದಾಗಿ ಹಾಡಿಕೊಂಡಿದ್ದಾಳೆ.

ಜನಿಯು ಜ್ಞಾನಮಾರ್ಗದಲ್ಲಿಯೂ ಪೂರ್ಣಳು ಈ ತನ್ನ ಇರವನ್ನು ಯಾರಿಗೂ ಗುರುತು ಹತ್ತಿಸದಂತಿದ್ದಳು. ನಿತ್ಯಸಂಪರ್ಕದಲ್ಲಿ ಅವಳ ಹೊರ ಹೊಮ್ಮುವ ಅನುಭಾವದ ನುಡಿಗಳನ್ನು ಕೇಳಿ ತಿಳಿದುದರಿಂದ, ಮತ್ತು ಪ್ರಸನ್ನಮುಖ ದರ್ಶನಾನುಭವದಿಂದ, ಶ್ರೀನಾಮದೇವನಿಗೆ ಮಾತ್ರ ಗುರುತಾಗಿತ್ತು. ಅಂತೆಯೇ ಅಂತ್ಯಜ (ಕಡೆಯದಾಗಿ ಜನ್ಮಿಸಿದವ) ನಾದ ಚೊಖಾನಿಗೆ ಜ್ಞಾನೋಪದೇಶ ನೀಡಲು ಅಪ್ಪಣೆಯಿತ್ತನು. ಜನಾಯಿಯ ಉಪದೇಶ ಪಡೆದ ಚೋಖಾ—

" ಆಕಾರಲೇ ಜಿತುಕೇ ನಾಶೇ । ಆತ್ಮಾ ಅವಿನಾಶ ವಿಟ್ಠಲ ದಿಸೇ ॥
ಐಸಾ ವಿಟ್ಠಲ ಹೃದಯಾಧ್ಯಾಯಾ । ಚೋಖಾಮೇಳಾ ಜಡಲಾ
ಪಾಯಾ ॥ "

ಆಕಾರಕ್ಕೆ ಬಂದ ಎಲ್ಲ ಪ್ರಪಂಚವು ವೃತ್ತಿಸಹಿತ ಅಳಿದಾಗಲೇ ಅವಿನಾಶ ರೂಪ ವಿಟ್ಠಲನ (ಆತ್ಮನ) ಸಾಕ್ಷಾತ್ಕಾರ (ಅನುಭವ) ವಾಗು ವುದು. ಈ ಆತ್ಮ (ವಿಠ್ಠಲ)ನ ಅನುಸಂಧಾನದಿಂದಲೇ ಚೋಖಾನು ಬೆರೆದು ಬೇರಾಗದಂತಾದನು. ಎಂಬದಾಗಿ ತನ್ನ ಇರವನ್ನು ಬಣ್ಣಿಸಿದ್ದಾನೆ. ಈ ಸ್ಥಿತಿಯ ಜ್ಞಾನಪುತ್ರನನ್ನು ಪಡೆದು ಜನಿಯು ಜನಾಯಿಯಾದಳು.

" ಯಾತಿಹೀನ ಚೋಖಾಮೇಳಾ । ತ್ಯಾಸಿ ಭಕ್ತಿಚಾಕಳವಳಾ ॥
ದೇಹ ಬಾಜವಿಲಾ ತ್ಯಾಣೇ । ಹಾಂಸೇ ಜನೀ ಗಾಯ ಗಾಣೇ॥ "

ಕುಲಹೀನನೆನಿಸಿದ ಚೊಖಾಮೇಳಾನು ಭಕ್ತಿಯ ಕಳವಳವನ್ನು ಹುಟ್ಟಿಸಿ ನನಗೆ ತಾಯ್ತನ (ಉಪದೇಶದಿಂದ ಜನನಕೊಟ್ಟು) ವಿತ್ತು ತಾನು ಜನಾ ಯಿಯ ಮಗನೆನಿಸಿ ಉಚ್ಚನಾದ. ಹಾಗೂ ನನ್ನನ್ನು ಚೋಖಾನ ಹಡೆ ದವಳೆಂದೆನಿಸಿ ಕುಲಗೆಡಿಸಿದ. ಹೀಗೆ ನಗೆ ನಗುತ್ತ ಹಾಡು ಹಾಡಿದಳು. ಈ ಮಾತಿನಲ್ಲಿ ಯಾವ ಮಟ್ಟದ ಸ್ವಾರಸ್ಯವಿದೆ ಎಂಬುದನ್ನು ಜ್ಞಾನ ದೀಕ್ಷೆಯನ್ನು ಪಡೆದ ಮಹಾನುಭಾವಿಗಳೇ ಗುರುತಿಸ ಬಲ್ಲರಲ್ಲದೆ ಇತ ರರೇನು ಬಲ್ಲರು.

ಇಂತು ಜನಾಯಿಯು, ಪೂರ್ವಜನ್ಮಗಳಲ್ಲಿಯೇ ಉಪಾಸನಾಭಕ್ತಿ ಯೋಗ, ಜ್ಞಾನ, ಮುಂತಾದವುಗಳನ್ನು ಅಭ್ಯಸಿಸಿ ಅವುಗಳು ಫಲಿಸಿ ಏಕರಸವಾದ ಸಮನ್ವಯ ಸ್ಥಿತಿಯನ್ನು ಅನುಭವಿಸಲು ಜನ್ಮಿಸಿ. ಭಕ್ತಿಯ ಖನಿಯಾಗಿ, ವಿರಕ್ತಿಯ ಆಗರವಾಗಿ ಯೋಗದ ಬೆಳಗಿನೊಳು ಜ್ಞಾನದ ಗದ್ದುಗೆಯನೇರಿ, 'ಎನಗಿಂತ ಕಿರಿಯರಿಲ್ಲ' ಎಂಬ ಭಾವದಿಂದ ದಾಸಿತ್ವ ವನ್ನು ವಹಿಸಿ, 'ದಾಸಿ' ಎಂಬ ಪದವು ಪೂರ್ಣ ಪದವೆಂಬುದನ್ನು ಜಗವರಿಯುವಂತೆ ಆಚರಿಸಿ ತೋರಿಸಿದ ಮಹಾತ್ಮೆ.

" ಪರಬ್ರಹ್ಮಲಿಂಗಂ ಭಜೇ ಪಾಂಡುರಂಗಂ "

# ಮಾನವತ್ವ.

[ ಲೇಖಕ:— ಶ್ರೀ. ಭೀ. ಶ್ರೀ. ಕುಲಕರ್ಣಿ, ವಿಜಾಪುರ. ]



ಸೃಷ್ಟಿಯಲ್ಲಿ ಮಾನವನು ಪಡಬೇಕಾದ ಕಷ್ಟಕ್ಕೆ ಮಿತಿಇಲ್ಲ. ಜೀವನದೊಳು ಮಾನವನು ಬಳಕುವದು ಹಾಗು ಬದಕುವದು ಕೇವಲ ಮೋಹದಿಂದ ಮಾತ್ರ. ಮಾನವ ಜೀವನದಲ್ಲಿ ಆ ಮೋಹವು ವ್ಯಾಪಿಸುತ್ತಲೇ ತೆರಳುವದೇ ವಿನಃ ಕಡಿಮೆಯಾಗದು. ಮೋಹವು ಬಾಲ್ಯದಲ್ಲಿಯೇ ಮಾನವನಿಗೆ ಪ್ರಾಪ್ತಿಯಾಗುವದು. ಅಜ್ಞಾನದಿಂದಿದ್ದಂತಹ ಮಗುವು ಸೃಷ್ಟಿಕರ್ತನ ಸೃಷ್ಟಿಯ ಅನೇಕ ಮೋಹಕ ವಸ್ತುಗಳನ್ನು ಕಂಡು ಅದರ ಮೇಲೆ ತನ್ನ ಮೋಹವನ್ನು ಬೀರುವದು. ತನಗೆ ಅಂದವಾಗಿ ಕಾಣುವ ವಸ್ತುಗಳನ್ನು ಕಂಡು ಅಕ್ಕರತೆಯಿಂದೆತ್ತಿಕೊಂಡು ನಲಿದಾಡುವದು. ಆದರೆ ಅವನ್ನು ಯಾರಾದರೂ ಕಸಿದುಕೊಂಡರೆ ಅದು ನನ್ನದು ಎಂದು ಅಳಲು ಪ್ರಾರಂಭಿಸುವದು. ಆ "ನನ್ನದು" ಎಂಬ ಶಬ್ದವು ಕೊನೆಯ ವರೆಗೂ ಸ್ಥಿರವಾಗಿಯೇ ಉಳಿದು ಕೊನೆಗೆ ಅಂತ್ಯಕಾಲದಲ್ಲಿ ನನ್ನದು ಹಾಗು ನಮ್ಮವರು ಯಾರು ? ನಾನು ಸೃಷ್ಟಿಯಲ್ಲಿ ಮಾನವನಾಗಿ ಜನ್ಮಿಸಿ ಸ್ವಾರ್ಥಕವೇನಾಯಿತು ಎಂಬುದು ಜ್ಞಾಪಕಕ್ಕೆ ಬಾರದೇ ಇರದು. ಇಷ್ಟೆಲ್ಲ ಅರಿತರೂ ಮಾನವನು ತನ್ನ ನೀತಿ ನಡತೆಗಳನ್ನು ಸುಧಾರಿಸಿಕೊಳ್ಳವೇ ಇರುವದು ಮಾನವತ್ವವೇ ಅಲ್ಲ. ಮಾನವನಾಗಿ ಜನ್ಮಿಸಿದುದೇ ವ್ಯರ್ಥ.

ಮಾನವ ಜೀವನದಲ್ಲಿ ಕಾಮ, ಕ್ರೋಧ, ಮದ, ಮಾತ್ಸರ್ಯ ಗುಣಗಳು ಅಲ್ಪಮಟ್ಟಿಗಾದರೂ ಆವರಿಸದೇ ಇರವು. ಅಂಥ ಗುಣಗಳನ್ನು ತ್ಯಜಿಸುವದು ಮಾನವನ ಮುಖ್ಯ ಕರ್ತವ್ಯವೆಂದು ಹಿಂದಿನ ಕಾಲದಿಂದಲೂ ಅನೇಕ ಗ್ರಂಥಗಳು ಸಾರುತ್ತಿವೆ. ಆದರೆ ಮೋಹದ ಬಲೆಯಲ್ಲಿ ಸಿಲುಕಿದ ಮಾನವನು ಆ ಬಲೆಯಿಂದ ಕಡೆಗಾಗುವದು ಹೇಗೆ? ಸಾಧ್ಯವಿಲ್ಲ. ಮೋಹವು ಯಾರನ್ನೂ ಬಿಟ್ಟಿಲ್ಲ. ಇದು ಮೋಹಮಯ ಜಗವಿದೆ. ಅಂದಮೇಲೆ ಮೋಹವು ಮಾನವನಲ್ಲಿರುವದು ಸ್ವಾಭಾವಿಕ. ಆ ಮೋಹಕ್ಕಾಗಿ ಮಾನವನು ತನ್ನ ಜೀವದ ಪರವೆಯಿಲ್ಲದೇ ದುಡಿಯುತ್ತಾನೆ, ಶ್ರಮಪಡುತ್ತಾನೆ. ತನ್ನ ಕುಟುಂಬದ ಜೀವನವನ್ನು ಸಾಗಿಸು

ತ್ತಾನೆ. ಇಲ್ಲದಿದ್ದರೆ ಜಗದಲ್ಲಿ ಯಾವ ಭೀಕರ ಪರಿಸ್ಥಿತಿಯು ಉಂಟಾಗುತ್ತಿತ್ತೆಂಬುದು ಜ್ಞಾಪಕ ಮಾಡಿಕೊಳ್ಳಿ. ಮಕ್ಕಳ ಬೆಳವಣಿಗೆಗೆ ಮಾತಾಪಿತರುಗಳ ಮೋಹವೇ ಕಾರಣ. ಆದರೆ ಆ ಮೋಹವೇ ಇಲ್ಲದಿದ್ದರೆ ಸೃಷ್ಟಿಯಲ್ಲಿ ಮಾನವ ವಂಶವೇ ಅಳಿಯುತ್ತಿತ್ತು. ಇದರಂತೆ ಇನ್ನಿತರ ಪಶುಪಕ್ಷ್ಯಾದಿಗಳಲ್ಲೂ ಕೂಡ ಮೋಹವುಂಟು. ಮೋಹವಿಲ್ಲದೇ ಯಾವ ಜೀವಿತವೂ ಸೃಷ್ಟಿಯಲ್ಲಿಲ್ಲ. ಅಂದಮೇಲೆ ಮೋಹವನ್ನು ತೊರೆದು ಸುಖಜೀವಿಗಳಾಗಿರಿ ಎಂದು ಅನೇಕ ಧರ್ಮಗ್ರಂಥಗಳು ಸಾರುವುದು ಅರ್ಥವಿಲ್ಲ. ಅಂಥ ಗ್ರಂಥಗಳನ್ನು ಓದಿ ಅದರಂತೆ ನಡೆಯಲು ನವಯವ್ವನದಲ್ಲಿ ಸಾಧ್ಯವಿಲ್ಲ. ವೃದ್ಧಾಪ್ಯದಲ್ಲಿ ಮಾತ್ರ ಉಪಯೋಗವಾಗಬಹುದು. ಆದರೆ ಅದುವಾದರೂ ನಿರರ್ಥಕವೇ ಸರಿ. ಆ ಗುಣವು ಮಾನವನ ವೃದ್ಧಾಪ್ಯದಲ್ಲಿ ತಾನಾಗಿಯೇ ತಿಳಿದುಬರುವದು. ಒಂದು ದೀಪವು ಉರಿಯಬೇಕಾದರೆ ತನ್ನಲ್ಲಿ ಎಣ್ಣೆ ಇರುವವರೆಗೆ ಉರಿಯುತ್ತದೆ. ಎಣ್ಣೆ ತೀರಿತೆಂದರೆ ತಾನಾಗಿಯೇ ಶಾಂತವಾಗುತ್ತೆ. ಇಲ್ಲದಿದ್ದರೆ ಯಾರಾದರೂ ಆರಿಸಿದರೆ ಆರುತ್ತೆ. ಹಾಗಾದರೆ ಎಣ್ಣೆ ಇರುವಾಗಲೇ ಆರಿಸಿ ಪ್ರಯೋಜನವೇನು ? ಅಂಧಕಾರದಲ್ಲಿರಬೇಕೆ ? ಇದು ದೈವವಿದ್ದೂ ದರಿದ್ರನ ಭೋಗಿಸುವ ಜನರಂತೆಯೇ ಸರಿ. ಜೀವನದೊಳು ಸುಖವಿದೆ. ಸಂತೋಷವಿದೆ. ಆದರೆ ಆ ಸುಖಸಂತೋಷಗಳನ್ನು ಪಡೆಯಲು ಮಾನವನು ಇನ್ನಿತರ ಮಾನವರನ್ನೊಡಗೂಡಿ ಸ್ನೇಹದಿಂದ ವರ್ತಿಸಬೇಕು. ಪ್ರತಿಯೊಂದು ಕ್ಷಣಕ್ಕೂ ಪ್ರತಿಯೊಂದು ನುಡಿಗೂ ವಿಚಾರ ಮಗ್ನನಾಗಿ ನುಡಿಯುತ್ತಿರಬೇಕು. ಸೃಷ್ಟಿಕರ್ತನು ಸೃಷ್ಟಿಸಿದ ಜಗದಲ್ಲಿ ಪ್ರತಿಯೊಂದು ಕ್ಷಣಕ್ಷಣಕ್ಕೂ ಮಾನವನಿಗೆ ಅರಿವನ್ನುಂಟುಮಾಡಿಕೊಡಲು ಅನೇಕ ತರದ ಉದಾಹರಣೆಗಳನ್ನು ನಿರ್ಮಿಸಿರುವನು. ಮಾನವನು ತನ್ನ ಮದದಿಂದ ಎದುರು ನೋಡುತ್ತ ಕೆಳಮೋರೆ ಮಾಡದೇ ನಡೆಯುತ್ತಿದ್ದಲ್ಲಿ ಕೆಳಗೆ ನೋಡಿ ಮಾನವನು ನಡೆಯಲಿ ಎಂದು ದಾರಿಯಲ್ಲಿ ಬಂಡೆಗಲ್ಲುಗಳನ್ನೂ ಅಡವಿಗಳಲ್ಲಿ ಅಂದವಾದಂತಹ ಗಿಡಮರ ಹೂಬಳ್ಳಿಗಳನ್ನು ನಿರ್ಮಿಸಿ, ಆ ಅಂದವಾದ ಅಡವಿಯ ಸೊಬಗನ್ನು ಮಾನವನು ಹೆಚ್ಚಾಗಿ ಸವಿಯುವಂತೆ ಕೆಳಮೋರೆ ಮಾಡುವಂತೆ ಕಾಲ್ಕೆಳಗೆ ಮುಳ್ಳಿನ ಹಾಸುಗೆಯನ್ನು ನಿರ್ಮಿಸಿದ್ದಾನೆ. ಒಂದು ವೇಳೆ ಕೆಳನೋಡದೇ ನಡೆದಲ್ಲಿ ಮಾನವನಿಗೇ ಅಪಾಯವಾಗುವದು. ಇದರಿಂದ ತಿಳಿದುಬರುವದೇನೆಂದರೆ ಆನಂದದಲ್ಲಿ

ಸೊಬಗಿಗೆ ಮೆಚ್ಚಬೇಡ. ಮಾನವನೇ ಈ ಸೃಷ್ಟಿಸೊಬಗಿನ ಹಾಗು ನಿನ್ನ ಮಾತೆಯಾಗಿಹ ಭೂದೇವಿಯು ನಾನು ನನ್ನಮೇಲೆ ಅಲ್ಪಾದರೂ ದೃಷ್ಟಿ ಚೆಲ್ಲು. ಅಂಧತೆಯು ಮಾನವಗೆ ಮಂದತೆಯನ್ನುಂಟುಮಾಡುತ್ತದೆ. ಕಣ್ಣಿದ್ದು ಕುರುಡನನ್ನಾಗಿ ಮಾಡುತ್ತದೆ. ಆ ಮಂದತ್ವಕ್ಕೆ ಮೋಸಹೋಗದಿರು, ಸಂಸಾರವೆಂಬ ಹೂವಿನ ಹಾಸುಗೆಯು ಮುಳ್ಳಿನಹಾಸುಗೆಯಾದೀತು ಎಂಬ ಹಿತವಾಕ್ಯವನ್ನು ಭೂದೇವಿಯು ನುಡಿದುದು ತಿಳಿಸದೆ ಸ್ಪರ್ಶರೂಪದಿಂದ ಜ್ಞಾನಕ್ಕೆ ತಿಳಿಸುವಳು. ಯಾವುದಾದರೊಂದು ಮರವು ಬಿಸಿಲಿನಲ್ಲಿ ನೆರಳು ಕೊಡುತ್ತದೆ. ಗಾಳಿಯನ್ನು ಬೀಸುತ್ತದೆ. ಅದುವಾದರೂ ದಣಿದುಬಂದ ಅತಿಥಿಗಳಿಗೆ ಸತ್ಕಾರ ಮಾಡುತ್ತದೆ. ಹಾಗೆ ಮಾನವನು ಇನ್ನಾವ ಎರಡನೆಯ ಮಾನವನಿಗೆ ಸಂಕಟಕಾಲಕ್ಕೆ ಎರವಾಗಬೇಕೆಂಬುದನ್ನು ಹೇಳಿಕೊಡುತ್ತದೆ. ಮಳೆ ಬರುವ ವೇಳೆಯಲ್ಲಿ ಮರವು ಆಶ್ರಯಕೊಡುತ್ತದೆ. ಆದರೆ ಅದುವೇ ಮರವು ಮಳೆ ನಿಂತನಂತರ ತನ್ನ ಆಶ್ರಯಕ್ಕೆ ನಿಲ್ಲಗೊಡುವದಿಲ್ಲ. ಮಳೆ ನಿಂತರೂ ತನ್ನಲ್ಲಿ ಆ ಮಳೆ ಹನಿಯನ್ನಿಟ್ಟುಕೊಂಡು ತನ್ನಾಶ್ರಯಕ್ಕೆ ನಿಂತ ಮಾನವನ ಮೈ ತೊಯ್ಯಿಸಿ ಆತನನ್ನು ತಾನಾಗಿಯೇ ಹೋಗುವಂತೆ ಮಾಡುತ್ತದೆ, ಇದರಿಂದ ತಿಳಿದುಬರುವದೇನೆಂದರೆ ಮಾನವನು ಇನ್ನೊಬ್ಬ ಮಾನವನಿಗೆ ಸಂಕಟಕಾಲದಲ್ಲಿಯೇ ನೆರವಾಗಬೇಕು ಎಂದು ಸೂಚಿಸುತ್ತದೆ. ಮೇಲಾಗಿ ಮರವು ಇಷ್ಟೆಲ್ಲ ಮಾನವನಿಗೆ ಬುದ್ಧಿವಾದವನ್ನು ಕಲಿಸಿ, ಹಾಗು ತನ್ನಿಂದ ಅನೇಕ ಸಹಾಯ ಮಾಡಿಯೂ ಕೂಡ ಮಾನವನು ಕಡಿಯಲು ಕಡಿತಕ್ಕೆ ತಲೆಬಾಗುತ್ತದೆ. ತನ್ನ ಹೆಮ್ಮೆಯನ್ನು ತೋರಿಸದು. ತಾನು ಉಪಕಾರ ಮಾಡಿದುದನ್ನು ಹೇಳದು. ಆ ಮರಗಳಲ್ಲಿಯೂ ಕೂಡ ಜೀವವಿದೆ. ಆದರೆ ನುಡಿಯಲು ಮಾತ್ರ ಬರುವದಿಲ್ಲ. ಆದುದರಿಂದ ನಾವು ನಿರ್ಜೀವ ವಸ್ತುವೆಂದು ತಿಳಿಯುತ್ತೇವೆ. ಅದರಿಂದ ಕಲಿಯಬೇಕಾದ ಮುಖ್ಯ ಗುಣವು ಮಾನವನ ಜೀವನದ ಜೀವಿತಕ್ಕೆ ಮುಖ್ಯ ಹೆದ್ದಾರಿಯಾಗಿದೆ. ಜಗದ ಅನೇಕ ಅಜ್ಞ ವಸ್ತುಗಳನ್ನು ನಾವು ನೋಡುತ್ತೇವೆ. ಆದರೆ ಅವುಗಳನ್ನು ದೇವನು ಏಕೆ ನಿರ್ಮಿಸಿರಬಹುದು ಎಂಬುದನ್ನು ನಾವು ಲಕ್ಷಕ್ಕೆ ತಾರೆವು. ಸೃಷ್ಟಿಯ ಪ್ರತಿಯೊಂದು ವಸ್ತುವೂ ಕೂಡ ಮಾನವನ ಬುದ್ಧಿವಿಕಾಸಕ್ಕೆ ಕಾರಣವಾಗಿವೆ. ಪ್ರತಿಯೊಂದು ವಸ್ತುವಿನ ಮೇಲೆ ಮಾನವನ ಶ್ರದ್ಧೆಯಿರಬೇಕು.

ಹಲವು ಜನ ಅಜ್ಞರು ಪರರೊಂದಿಗೇಕೆ ತನ್ನೊಂದಿಗೆ ಜನ್ಮಿಸಿದ ಬಂಧುಗಳನ್ನು ಕೂಡ ಲೆಕ್ಕಿಸದೇ ಕೊಲ್ಲಲು ತಯಾರಾಗುವರು. ಹಾಗು ಕಡಿತದಿಂದ ಅನೇಕ ಭಾಗಗಳನ್ನಾಗಿಯೂ ಕೂಡ ಮಾಡುವದುಂಟು. ಇದು ಏತಕ್ಕಾಗಿ ಗೊತ್ತೇ? ಕೇವಲ ಹೊಲ ಮನೆಗಳಿಗಾಗಿ. ಮಾನವನು ತನ್ನ ಹೊಟ್ಟೆಗಾಗಿ ಹೀನ ಕೃತಿಯನ್ನು ಕೈಕೊಳ್ಳುತ್ತಾನೆ. ಅಂಥ ಮಾನವರಿಗೆ ಮಾನವರೆನ್ನಲು ತಪ್ಪು. ಗೇಣು ಹೊಟ್ಟೆಗಾಗಿ ಒಂದು ಜೀವವನ್ನು ನಾಶಮಾಡಿದರೆ ಬರುವ ಫಲವೇನು? ಆ ಮರಣಹೊಂದಿದ ಮಾನವನು ಮರಳಿ ಬರುವನೇ? ಅಥವಾ ಆತನಿಗೆ ನನ್ನ ಬಂಧುಗಳೇ ನನ್ನ ಮರಣಕ್ಕೆ ಕಾರಣರೆಂದರೆಂದು ಗೊತ್ತಾಗುತ್ತದೆಯೇ? ಇಲ್ಲ. ಜೀವದಿಂದ ಇರುವವರೆಗೆ ಮಾತ್ರ ಆ ಕ್ರೋಧವುಂಟಾಗುತ್ತದೆ. ಕ್ರೋಧವಾದರೂ ಈ "ನನ್ನದು" ಎಂಬ ಶಬ್ದದಿಂದಲೇ. ಅಂದಮೇಲೆ "ನನ್ನದು" ಈ ಶಬ್ದವು ಎಷ್ಟು ಹೀನತ್ವಕ್ಕೆ ತರುತ್ತದೆಂಬುದನ್ನು ವಿಚಾರಿಸಿ. "ನನ್ನದು" ಎಂಬ ಶಬ್ದವು ಜಗದ ಜನತೆ ಕಲಿಸದೇ ಮೋಹವೇ ಕಲಿಸುತ್ತದೆ. ಆದರೆ ಕೈಗನ್ನಡಿಯಂತಿಹ ಜಗತ್ತಿನಲ್ಲಿ ಅರಿತು ಆಚರಿಸಿದಲ್ಲಿ ದುಃಖವೇ ಇಲ್ಲ. ಸುಖಸಂತೋಷಮಯ ಜಗವಿದೆ. ಆದರೆ ಹುಟ್ಟುವಾಗ್ಗೆ ಅಳುವು ಪ್ರಾರಂಭವಾದುದು. ಮರಳುವಾಗ್ಗೆಯಾದರೂ ಬರುವದು ಸ್ವಾಭಾವಿಕ. ಆದರೆ ಹುಟ್ಟುವಾಗ್ಗೆ ಕೂಸಿನ ಅಳುವನ್ನು ಕಂಡು ಸಂತೋಷವಾಗುತ್ತೇವೆ ಆದರಂತೆ ಮರುಳುವಾಗ್ಗೆಯಾದರೂ ಸಂತೋಷಿಸಬೇಕು. ದುಃಖಿಸಬಾರದು. ಮರಳಿ ಪೋಗುವದು ಯಾರನ್ನೂ ಬಿಟ್ಟಿಲ್ಲ. ಮರಳಿ ಪೋಗುವವರಿಗೆ ನಾವೂ ಬರುತ್ತೇವೆ ಇನ್ನು ಸ್ವಲ್ಪ ದಿನದಲ್ಲಿ ಎಂದು ಆನಂದ ವ್ಯಕ್ತಮಾಡಬೇಕು, ಮರಣಕ್ಕೆ ದೇವನು ಮೂಲಲ್ಲ. ಯಮಧರ್ಮನು ಮೂಲಲ್ಲ. ಯಮಧರ್ಮನು ಜೀವದಧಿನಾಯಕನೆಂದು ಪುರಾಣಾದಿಗಳು ಸಾರುತ್ತಿವೆ. ಆದರೆ ಇಂದಿನ ಸಂಶೋಧನದಿಂದ ಹಿಂದಿನ ಹಲವು ಪುರಾಣಾದಿಗಳು ಇಂದು ಸುಳ್ಳೆನಿಸುತ್ತಿವೆ. ಇದು ನಿಜ. ಇಂದಿನ ಭೌತಿಕ ಯುಗದ ಮರ್ಮದಂತೆ ಮಾನವನ ಅಸ್ಥಿ ಸೌಕಳಿ ಹಾಗು ಶಕ್ತಿ ಹೀನತೆಯಿಂದ ಮಾನವನಿಗೆ ಮರಣ ಉಂಟಾಗುತ್ತದೆ. ಮರಣವೆಂದರೆ ಕೇವಲ ಮಾನವನ ಜೀವಿತಕ್ಕೆ ಮುಖ್ಯ ಕಾರಣವಾದ ಹವೆಯು— ಹವೆಯಲ್ಲಿ ಕಲಿತು ಹೋಗುವದು. ಸ್ವರ್ಗ-ನರಕಗಳೆಂದರೆ ಬೇರಿಲ್ಲ. ಇಹಲೋಕದಲ್ಲಿಯೇ ಇವೆ. "ತಾನು ಒಳ್ಳೆಯವನಾದರೆ ಜಗವೆಲ್ಲ

ಒಳ್ಳೆಯದು." ಎಂಬಂತೆ ತಾನು ಒಳ್ಳೆಯವನಾದರೆ ಜಗವು ತನಗೆ ಒಳ್ಳೆಯದಾಗುವದು ಅಂದಮೇಲೆ ಆತನಿಗೆ ಕಷ್ಟವೆಲ್ಲಿ? ಅದುವೇ ಸ್ವರ್ಗ. ತಾನು ಪರರಿಗೆ ಹೀನರೆಂದು ತಿಳಿದರೆ, ದ್ರೋಹ ಬಗೆದರೆ ಜನರು ದ್ರೋಹ ಬಗೆಯುವದು ಸ್ವಾಭಾವಿಕ. ಇದುವೇ ನರಕ. ಬೇರೆ ನರಕಿಲ್ಲ, ಬೇರೆ ಸ್ವರ್ಗವಿಲ್ಲ. ಎಲ್ಲವೂ ಇಲ್ಲಿದೆ ಸುಖವೂ ಇಲ್ಲಿದೆ, ದುಃಖವೂ ಇಲ್ಲಿದೆ. ಆದರೆ ಅರಿತು ಆಚರಿಸಿದಲ್ಲಿ ಮಾತ್ರ ಸುಖವಿದೆ. ಇಲ್ಲದಿದ್ದರೆ ದುಃಖಮಯವಿದೆ. ಅರಿತು ಆಚರಿಸಲು ಜಗದ ಪ್ರತಿಯೊಂದು ಅಣುವಿನಲ್ಲಿಯೂ ಕೂಡ ಒಂದೊಂದು ಗುಣಧರ್ಮವನ್ನು ದೇವ ನಿರ್ಮಿಸಿದ್ದಾನೆ. ಅದರ ಉಪಯೋಗ ಮಾಡಿಕೊಂಡು ಮಾನವನು ಶುದ್ಧಾತ್ಮನಾದಾಗಲೇ ಆತನು ಮಾನವನು. ಅದುವೇ ಮಾನವತ್ವ.

---

# ಗ್ರಂಥ ಪರಿಚಯ.

ನಮ್ಮ ಕಡೆಗೆ ಕೆಲವು ಮಹನೀಯರು ತಾವು ಬರೆದ ಗ್ರಂಥಗಳನ್ನು ವಿಮರ್ಶೆಗೋಸ್ಕರ ಕಳಿಸಿದ್ದಾರೆ. ಅವುಗಳಲ್ಲಿ ಆಸ್ಥಾನ ವಿದ್ವಾನ ಪಂಡಿತ ರತ್ನ. ಬಿ. ಶಿವಮೂರ್ತಿ ಶಾಸ್ತ್ರಿಗಳವರು ಕಳಿಸಿದ ಗ್ರಂಥಗಳು ಮಹತ್ವದ್ದಾಗಿರುತ್ತವೆ.

**ವೀರಶೈವ ಸಾಹಿತ್ಯ ಮತ್ತು ಇತಿಹಾಸ ( ಭಾಗ ೧ ):—** ಈ ಗ್ರಂಥವು ೧೫೨ ಪುಟವುಳ್ಳದ್ದಾಗಿದೆ. ವೀರಶೈವ ವಾಙ್ಮಯ ವಿಸ್ತಾರ, ವಚನಸಾಹಿತ್ಯ, ವೀರಶೈವವೂ ವಿಶ್ವಪ್ರೇಮವು. ಲಿಂಗವಂತ ಸಂಸ್ಕೃತಿ, ವೀರಶೈವ ತತ್ವಜ್ಞಾನ ಇಂಥ ಮಹತ್ವದ ವಿಷಯಗಳನ್ನು ಕುರಿತು ಇದರಲ್ಲಿ ಗ್ರಂಥಕಾರರು ವಿಸ್ತೃತ ವಿವೇಚನೆ ಮಾಡಿರುತ್ತಾರೆ. ವೀರಶೈವ ಸಮಾಜವು ದಕ್ಷಿಣ ಹಿಂದುಸ್ಥಾನದಲ್ಲಿ ಎಲ್ಲ ಕಡೆಗೂ ಪಸರಿಸಿರುತ್ತದೆ. ಆಂಧ್ರ ಕರ್ನಾಟಕ ಭಾಷೆಗಳಲ್ಲಿ ಇದರ ವಿಶಾಲತತ್ವಗಳನ್ನು ಅನೇಕ ವಿಧ್ವಜ್ಜನರೂ, ಸಾಧುಸತ್ಪುರುಷರೂ ವಿಶದಪಡಿಸಿರುತ್ತಾರೆ. ಈ ವಾಙ್ಮಯಕ್ಕೆ ಸುಮಾರು ಒಂದು ಸಾವಿರ ವರ್ಷದ ಇತಿಹಾಸವಿದೆ. ಅನೇಕ ರಾಜರೂ ಧಾರ್ಮಿಕ ಪುರುಷರೂ ಅದನ್ನು ಪೋಷಿಸಿದ್ದಾರೆ. ನಾನಾಬಗೆಯ ಹಾಡುಗಬಗಳೂ, ಷಟ್ಪದಿಗಳೂ, ವಚನಗಳೂ, ಶತಕಗಳ್ಳೂ ಅದರಲ್ಲಿ

ಪ್ರಚಾರ ಹೊಂದಿವೆ. ವೀರಶೈವ ಮತದಲ್ಲಿರುವ ಈ ವಿಸ್ತಾರವನ್ನು ಗ್ರಂಥಕಾರರು ಬಹು ವಿಶದವಾಗಿ ಇದರಲ್ಲಿ ಸ್ಪಷ್ಟಪಡಿಸಿದ್ದಾರೆ. ಹೀಗೆ ಸ್ಪಷ್ಟಪಡಿಸುವಲ್ಲಿ ಗ್ರಂಥಕಾರರು ವೀರಶೈವ ಧರ್ಮದ ಸಾಮಾನ್ಯ ತತ್ವಗಳನ್ನು ಸಹ ನಿರೂಪಿಸಿದ್ದಾರೆ. ಅವರ ನಿರೂಪಣೆಯಿಂದ ವೀರಶೈವ ಧರ್ಮವು ಹೇಗೆ ಪಸರಿಸಿತು, ಎಂಬುದರ ಕಲ್ಪನೆಯು ವಾಚಕರಿಗೆ ಉಂಟಾಗದೆ ಇರಲಾರದು. ವೀರಶೈವ ಧರ್ಮದ ಬಗ್ಗೆ ಈಚೆಗೆ ಅನೇಕ ಗ್ರಂಥಗಳು ಉಂಟಾಗಿರುತ್ತವೆ. ಆದರೆ ವೀರಶೈವ ಸಂಸ್ಕೃತಿಯ ಅರಿವು ಒತ್ತಟ್ಟಿಗೆ ವ್ಯವಸ್ಥಿತವಾಗಿ ಎಲ್ಲಿಯೂ ಆಗದ್ದರಿಂದ ಇದರ ಸ್ಪಷ್ಟ ತಿಳುವಳಿಕೆಯು ಜನರಿಗೆ ಉಂಟಾಗುವದಿಲ್ಲ. ಆದರೆ ಗ್ರಂಥಕಾರರು ಬರೆದ ಈ ಗ್ರಂಥದಿಂದ ಈ ತೊಂದರೆಯು ದೂರಾಗದೆ ಇರಲಾರದು. ಇದು ಉಪಯುಕ್ತ ಗ್ರಂಥವಿದ್ದು ಇದನ್ನು ಕನ್ನಡಿಗರು ಆದರಿಸುವರೆಂದು ನಾವು ಭಾವಿಸಿದ್ದೇವೆ. ಇದರ ಅಚ್ಚು ಸುಂದರವಾಗಿದ್ದು ಇದಕ್ಕೆ ಉತ್ತಮ ಕಾಗದವು ಉಪಯೋಗಿಸಲ್ಪಟ್ಟಿರುತ್ತದೆ. ಪುಸ್ತಕದ ಬೆಲೆ ೨ ರೂ. ಮಾತ್ರ ಇರುತ್ತವೆ. ಗ್ರಂಥವು ಶರಣಸಾಹಿತ್ಯ ಕಾರ್ಯಾಲಯ ಬೆಂಗಳೂರು ಇಲ್ಲಿ ದೊರೆಯುತ್ತದೆ.

**ವೀರಶೈವ ಮಹಾಪುರುಷರು:**— ಈ ಗ್ರಂಥದ ಲೇಖಕರು ಆಸ್ಥಾನ ವಿದ್ವಾನ ಬಿ. ಶಿವಮೂರ್ತಿಶಾಸ್ತ್ರಿಗಳೇ ಇರುತ್ತಾರೆ, ಇದರಲ್ಲಿ ಈ ವರೆಗೆ ಗತಿಸಿಹೋದ ೨೮ ಜನ ವೀರಶೈವ ಮಹಾಪುರುಷರ ಚರಿತ್ರೆಗಳು ಬಂದಿರುತ್ತವೆ. ಈ ಚರಿತ್ರೆ ಗ್ರಂಥದಲ್ಲಿ ಸುಮಾರು ಒಂದು ಶತಮಾನದಲ್ಲಿ ವೀರಶೈವ ಸಮಾಜದಲ್ಲಿ ಸಾರ್ವಜನಿಕ ಕಾರ್ಯಗಳನ್ನು ಮಾಡಿದ ಮಹಾನುಭಾವರ ಚರಿತ್ರೆಗಳು ಬಂದಿರುತ್ತಿವೆ. ಇವುಗಳಲ್ಲಿ ಶ್ರೀ ಹಾನಗಲ್ಲ ಕುಮಾರ ಸ್ವಾಮಿಗಳು, ಸರ್ಪಭೂಷಣ ಶಿವಯೋಗಿಗಳು, ಸಕ್ಕರೆ ಕರಡಪ್ಪನವರು, ಡೆಪ್ಯೂಟಿ ಚನಬಸಪ್ಪನವರು, ತಮ್ಮಣ್ಣಪ್ಪ ಚಿಕ್ಕೋಡಿಯವರು, ಸರ್. ಕೆ. ಪಿ. ಪುಟ್ಟಣಶೆಟ್ಟರು. ಬಸವಪ್ಪ ಶಾಸ್ತ್ರಿಗಳವರು, ರಾ. ಬ. ರುದ್ರಗೌಡರು ಅರಟಾಳ ಈ ಮೊದಲಾದವರ ಚರಿತ್ರೆಗಳು ಬಂದಿರುತ್ತವೆ. ಈ ಚರಿತ್ರೆಗಳ ಮೇಲಿಂದ ವೀರಶೈವ ಸಮಾಜವು ಹೇಗೆ ಹೆಚ್ಚಳವನ್ನು ಹೊಂದುತ್ತಬಂದಿದೆಂಬುದರ ಕಲ್ಪನೆಯು ಚನ್ನಾಗಿ ಬರುತ್ತದೆ.

ವೀರಶೈವ ಸಮಾಜದಲ್ಲಿ ಶೈಕ್ಷಣಿಕ ಮತ್ತು ಧಾರ್ಮಿಕ ಮಹತ್ವದ ಚಳವಳಿಗಳು ಆಗಿಂದಾಗ್ಗೆ ಉಂಟಾಗಿರುತ್ತವೆ. ಅವುಗಳಲ್ಲಿ ಭಾಗವಹಿಸಿದ ಮಹನೀಯರ ಚರಿತ್ರೆಗಳನ್ನು ಕರ್ನಾಟಕಸ್ತರು ಅರಿಯುವದು ಬಹು ಅವಶ್ಯವಿದೆ. ಆದರೆ ಕಾಲಧರ್ಮದಿಂದ ಅವರ ಚರಿತ್ರೆಗಳು ಈಚೆಗೆ ಜನರಲ್ಲಿ ವಿಸ್ಮರಣೆಯಾಗುತ್ತ ನಡೆದಿರುತ್ತವೆ. ಈ ಸ್ಥಿತಿಯುಂಟಾಗುವದು ಸಮಾಜಕ್ಕೂ ನಾಡಿಗೂ ಹಿತಕರವಿಲ್ಲ. ಪ್ರಕೃತ ಗ್ರಂಥವು ಈ ಸ್ಥಿತಿಯನ್ನು ದೂರಮಾಡುವಂಥದು ಇದ್ದು ಇದು ಸಂಗ್ರಾಹ್ಯವಾಗಿರುತ್ತದೆ. ಗ್ರಂಥದಲ್ಲಿ ೨೫೯ ಪುಟಗಳಿದ್ದು ಇದರ ಬೆಲೆಯು ೫ ರೂ. ಇರುತ್ತದೆ. ಗ್ರಂಥವು ಶರಣಸಾಹಿತ್ಯ ಕಾರ್ಯಾಲಯ ಬೆಂಗಳೂರ ಇಲ್ಲಿ ದೊರೆಯುತ್ತದೆ.

---

## ಕರ್ನಾಟಕ ಏಕೀಕರಣ ಸಮಸ್ಯೆಯು.

ಒಂದು ನಾಡಿನ ಸರ್ವಾಂಗ ಪೂರ್ಣ ಸುಧಾರಣೆಯು ಅದರ ಆರ್ಥಿಕ ಸಾಂಸ್ಕೃತಿಕ ರಾಜಕೀಯ ಇಂಥ ವಿಷಯಗಳ ಮೇಲೆ ಅವಲಂಬಿಸಿರುತ್ತದೆ. ಶಿವಾನುಭವ ಪತ್ರಿಕೆಯು ಕೇವಲ ಧಾರ್ಮಿಕ ಮತ್ತು ಸಾಂಸ್ಕೃತಿಕ ವಿಷಯಗಳ ಬಗ್ಗೆ ಯಾವಾಗಲೂ ಚರ್ಚೆಮಾಡುತ್ತ ಬಂದಿದೆ. ಈ ವಿಷಯಗಳ ಬಗ್ಗೆ ಅದು ಕೆಲವು ಮಟ್ಟಿಗೆ ಉಪಯುಕ್ತ ಕಾರ್ಯಗಳನ್ನೂ ಮಾಡಿರುತ್ತದೆ. ಆದರೆ ಈ ಪತ್ರಿಕೆಯಲ್ಲಿ ನಾವು ರಾಜಕೀಯ ವಿಷಯಗಳ ಚರ್ಚೆಗೆ ಅನೇಕ ಕಾರಣಗಳ ಮೂಲಕ ಸ್ಥಾನವನ್ನು ಕೊಟ್ಟಿರುವದಿಲ್ಲ. ಹಿಂದುಸ್ಥಾನದ ಈಗಿನ ಪರಿಸ್ಥಿತಿಯಲ್ಲಿ ಬಹಳ ಬದಲಾವಣೆಯಾಗುತ್ತ ಬಂದಿದ್ದರಿಂದ ನಾಡಿನ ಸಮಸ್ಯೆಗಳ ಬಗ್ಗೆ ನಮ್ಮ ಅಭಿಪ್ರಾಯಗಳನ್ನು ನಾವು ಕೊಡುತ್ತಿರಲಿಲ್ಲ. ಆದರೆ ಈ ಪರಿಸ್ಥಿತಿಯು ಈಗ ಉಳಿಯದೆ ಎಲ್ಲ ಪ್ರಾಂತಗಳ ಆಡಳಿತೆಗಳು ಕೇವಲ ಒಂದು ಮಾರ್ಗವನ್ನು ಅನುಸರಿಸಹತ್ತಿರುತ್ತವೆ. ಶಿವಾನುಭವ ಪತ್ರಿಕೆಯ ಮುಖ್ಯ ಧ್ಯೇಯವು ವಾಙ್ಮಯ ಸಂಶೋಧನವಾಗಿರುವದರಿಂದ ಇತರ ವಿಷಯಗಳ ಚರ್ಚೆಗೆ ನಾವು ಪ್ರಾಮುಖ್ಯತೆಯನ್ನು ಕೊಡುತ್ತ ಬರಲಿಲ್ಲ. ಆದರೆ ಈ ಮಾರ್ಗವನ್ನು ನಾವು ಇನ್ನುಮುಂದೆ ಅನುಸರಿಸುತ್ತ ಹೋದರೆ ಜನ

ತೆಯ ಸುಧಾರಣೆಗೆ ಈ ಪತ್ರಿಕೆಯು ಸಹಾಯಕಾರಿಯಾಗಲಾರದೆಂದು ಭಾವಿಸಿ ಸಮಾಜ ಸುಧಾರಣೆಗೆ ಪೋಷಕವಾಗಿರುವ ಇತರ ವಿಷಯುಗಳ ಬಗ್ಗೆಯೂ ನಾವು ಪತ್ರಿಕೆಯಲ್ಲಿ ಚರ್ಚೆಮಾಡುವದು ಅವಶ್ಯವೆಂದು ನಮಗೆ ತೋರುತ್ತದೆ.

ಈ ಕಾಲಕ್ಕೆ ರಾಜಕೀಯ ಸಮಸ್ಯೆಗಳಲ್ಲಿ ಕರ್ನಾಟಕ ಏಕೀರಣವು ಒಂದು ಅತ್ಯಂತ ಮಹತ್ವದ ವಿಷಯವಾಗಿದೆಂಬುದು ನಿರ್ವಿವಾದವು.

ಈ ವಿಷಯದ ಬಗ್ಗೆ ಶ್ರೀ. ಬಿ ಶಿವಮೂರ್ತಿ ಶಾಸ್ತ್ರಿಗಳು ಸಂಪಾದಕರು ಶರಣ ಸಾಹಿತ್ಯ ಇವರು ಅನೇಕ ಉಪಯುಕ್ತ ಚಿಕ್ಕ ಪುಸ್ತಕಗಳನ್ನು ಪ್ರಕಟಿಸಿರುತ್ತಾರೆ. ಕರ್ನಾಟಕದ ಕೆಲವು ಪ್ರದೇಶಗಳು ಪರ ಪ್ರಾಂತಗಳಲ್ಲಿ ಸೇರ್ಪಡೆಯಾಗಿರುತ್ತವೆ. ಅವುಗಳನ್ನೆಲ್ಲ ಕರ್ನಾಟಕ ದೇಶದಲ್ಲಿ ಸಮಾವೇಶಮಾಡುವ ಸಂಧಿಯು ಈಗ ಬಂದಿರುತ್ತದೆ. ಆದರೆ ಇದಕ್ಕೆ ಅವಶ್ಯವಿರುವ ಚಳವಳಿಯನ್ನು ಮಾಡುಬೇಕೆಂಬುದೇ ಈ ಚಿಕ್ಕ ಪುಸ್ತಕಗಳ ಉದ್ದೇಶವಾಗಿರುತ್ತದೆ.

**ಹೊಸುರು ತಾಲೂಕು:—** ಈ ತಾಲೂಕು ಬೆಂಗಳೂರು ಜಿಲ್ಹೆಗೆ ಹತ್ತಿ ಸೇಲಮ ಜಿಲ್ಹೆಯಲ್ಲಿ ಸೇರ್ಪಡೆಯಾಗಿರುತ್ತದೆ. ಆದರೆ ಇದು ಪೂರ್ಣ ಕನ್ನಡ ಪ್ರಾಂತವಾಗಿರುತ್ತದೆ. ಈ ವಿಷಯುವನ್ನು ಕುರಿತು ವಿಸ್ತೃತ ವಿವರಣೆಯನ್ನು ಈ ಪುಸ್ತಕದಲ್ಲಿ ಕೊಟ್ಟಿದ್ದಾಗಿರುತ್ತದೆ. ಇಲ್ಲಿ ಆಗಿ ಹೋಗಿರುವಂಥ ಗ್ರಂಥಕಾರರ ಬೇರೆ ಬೇರೆ ಜನಾಂಗಗಳ ಮತ್ತು ವಿವರಣೆಯು ಬಂದಿರುತ್ತದೆ. ಈ ಭಾಗದ ಜನಸಂಖ್ಯೆ ೧೯೧೫೯೧ ಇರುತ್ತದೆ. ಈ ವಿಷಯುವಾಗಿ ಈ ಭಾಗದ ಜನರು ಅಧಿಕಾರಿಗಳಿಗೆ ತಮ್ಮ ಮನವಿಯನ್ನೂ ಒಪ್ಪಿಸಿರುತ್ತದೆ.

**ನೀಲಗಿರಿ ಜಿಲ್ಹೆ:—** ಈ ಜಿಲ್ಹೆಯು ಮೈಸೂರು ಜಿಲ್ಹೆಗೆ ಹೊಂದಿ ಕೊಯಿಮುತ್ತೂರು ಜಿಲ್ಹೆಯಲ್ಲಿ ಸಮಾವೇಶವಾಗಿರುತ್ತದೆ. ಆದರೆ ಈ ಭಾಗವನ್ನು ಕರ್ನಾಟಕದಲ್ಲಿ ಸೇರ್ಪಡೆ ಮಾಡುವ ವಿಷಯುವನ್ನು ಕುರಿತು ಈ ಚಿಕ್ಕಪುಸ್ತಕದಲ್ಲಿ ಚರ್ಚೆಯು ಮಾಡಲ್ಪಟ್ಟಿದೆ. ಈ ಜಿಲ್ಹೆಯ ಜನಸಂಖ್ಯೆ ೩೧೧೭೬೯. ಈ ಜಿಲ್ಲೆಯ ಚಾರಿತ್ರಿಕ ಹಿನ್ನೆಲೆಯನ್ನು ನಿರೀಕ್ಷಿ

ಸಿದರೆ ಬಹುಕಾಲದಿಂದಲೂ ಇದು ಕರ್ನಾಟಕದ ಭಾಗವಾಗಿತ್ತೆಂದ ತಿಳಿದುಬರುತ್ತದೆ. ನೀಲಗಿರಿ ಗ್ರಾಮವು ಮೈಸೂರಿಗೆ ೪೦ ಮೈಲು ದೂರದಲ್ಲಿರುತ್ತದೆ. ಈ ಜಿಲ್ಲೆಯನ್ನು ಮೈಸೂರಿಗೆ ವಿಲೀನ ಮಾಡುವದರಿಂ ಅದರ ವಾಣಿಜ್ಯ ವ್ಯಾಪಾರಗಳು ಬಹಳವಾಗಿ ಪ್ರಗತಿಹೊಂದಲು ಸಾಧ್ಯವಾಗುತ್ತದೆ, ಎಂದು ಗ್ರಂಥಕಾರರು ಸಕಾರಣವಾಗಿ ಇದರಲ್ಲಿ ಸಿದ್ಧಪಡಿಸಿರುತ್ತಾರೆ.

**ಮಡಕಸಿರಾ ತಾಲೂಕು:—** ಈ ತಾಲೂಕು ಆಂಧ್ರ ಜಿಲ್ಲೆಯಾದ ಅನಂತಪುರದಲ್ಲಿ ಸೇರ್ಪಡೆ ಯಾಗಿರುತ್ತದೆ. ಆದರೆ ಈ ತಾಲೂಕಿನ ಜನರೆಲ್ಲ ಕನ್ನಡ ಭಾಷೆಯನ್ನು ಮಾತನಾಡುವವರೇ ಇರುತ್ತಾರೆ. ಈ ಪ್ರದೇಶವು ಮೈಸೂರು ಪ್ರಾಂತದಲ್ಲಿ ಒಂದು ಪಟ್ಟಿಯಾಗಿ ಮಾತ್ರ ಉಳಿದಿರುತ್ತದೆ.

ಮೇಲ್ಕಂಡ ಎಲ್ಲ ವಿಷಯಗಳನ್ನು ಕರ್ನಾಟಕ ಪ್ರಾಂತ ರಚನಾ ಸಮಿತಿ ಬೆಂಗಳೂರು ಇವರು ಸರಕಾರದವರು ಈಗ ಕರ್ನಾಟಕ ಪ್ರಾಂತ ರಚನಾ ಆಯೋಗದವರ ಮುಂದೆ ವಿಚಾರಕ್ಕೋಸ್ಕರ ಇಟ್ಟಿರುತ್ತಾರೆ. ಆದರೆ ಸಂಬಂಧಿಸಿದ ಪ್ರಾಂತವಿಭಾಗದವರು ಎಡೆಬಿಡದೆ ಈ ಬಗ್ಗೆ ಚಳವಳಿ ನಡಿಸುವದು ಅವಶ್ಯವಿರುತ್ತದೆ. ಹೀಗೆ ಅವರು ಪ್ರಯತ್ನಿಸದೆ ಹೋದರೆ ಇಲ್ಲಿಯ ಜನರು ಸದ್ಯ ಸ್ಥಿತಿಯಲ್ಲಿಯೇ ಕಡೆತಕ ಉಳಿಯುವ ಪರಿಸ್ಥಿತಿಯು ಉಂಟಾಗುವದು.

ಈ ಉಪಯುಕ್ತ ಪುಸ್ತಕಗಳನ್ನು ಶ್ರೀ. ಬಿ. ಶಿವಮೂರ್ತಿಶಾಸ್ತ್ರಿಗಳು ಪ್ರಸಿದ್ಧಿಸಿ ನಾಡಿಗೆ ಉಪಕಾರಮಾಡಿರುತ್ತಾರೆ.

# ಜಗದೀಶನಲ್ಲಿ ?

(ಕೋರಿಕೆ)

ಲೇ— ಪರ್ವತಪ್ಪ ಗಂ. ಅಂಗಡಿ; ಸಂಗೊಳ್ಳಿ.
"ಕನ್ನಡಕಾವ ಸಾಹಿತ್ಯ ಭೂಷಣ" ಲಿಂಗರಾಜ ಕಾಲೇಜ ಬೆಳಗಾವಿ.

—o●o—

ಹುಟ್ಟಿಹೆನು ಬಡವನ ಕುಟುಂಬದಲಿ
ಬೆಳದಿಹೆನು ಬಡವನ ಸಂಸಾರದಲಿ
ವಿದ್ಯೆಯನು ಕಲಿಯುವ ಹಂಬಲ
ನಿನ್ನ ಬೆಂಬಲೊಂದ್ಹ ಸಾಕು ದೇವಾ៖ ||೧||

ಅಂತರಾತ್ಮವು ನೀನು ಜಡದೇಹ ನಾವು
ನವ್ಮೊಡನೆ ನೀ ಕೂಡಿ ತಿರುಗಿಸುತ ತಿರುಗು
ಕಡೆಗೊಮ್ಮೆ ಜಡದೇಹ ತೊರೆದು ಪೋಗುತಿದೆ
ಸುಡಗಾಡದಡೆ ಸಾಗಿ ತಿರುಗಿ ತಿರುಗಿತಿದೆ ದೇವಾ ||೨||

ಅವರಿವರನು ಹಣಕೇಳಿದೊಡೆ ಹೋಗೆನ್ನುವರು
ಸಿರಿವುಂತರನು ಕೇಳಿದರೆ ಹೋಡಿದೋಡಿಸುವರು
ಯಾರ ಬಳಿಯಲಿ ಹೋಗಿ ಹಣವನು ಕೇಳಲಿ
ನಾನಾವ ಪರಿಯಲಿ ವಿದ್ಯೆಯನು ಕಲಿಯಲ್ರಿ
ಜಗದೀಶಾ ||೩||

ಪರರಿಗುಪಕಾರವನು ವಾಡುವ
ಪರಿಯ ಪ್ರೇರಿಸು ಲೇಶಪಾಪವ
ವಿರಚಿಸದ ತೆರದಿಂದ ನಡೆಯಿಸು ಪರರ ನೋಯಿಸದೆ ||
ಸಿರಿಗೆ ಹಿಗ್ಗದೆ ಲೋಕಹಿತವನು
ನಿರುತ ವಾಡಲು ಪಥವ ತೋರಿಸು
ಪರವು ಪುರುಷನೆ ನಿನ್ನ ಭಜಿಸುವ ಮತಿಯು
ನೀಂ ಕಲಿಸ್ಸು ದೇವ್ರಾ ||೪||

ಯಾವ ಪಾಪದ ಫಲದಿಂದ ಜನಿಸಿದೆನೋ
ಹೊಟ್ಟೆತುಂಬುವ ಬಗೆಯನು ಅದೆಂದು ತಿಳಿವೆನೋ
ಹೊಸ ವಿಜ್ಞಾನ-ಯುಗದಲಿ ಜೀವಿಸುವ ಬಗೆಯನು
ಅರುಹಿ ನನ್ನನು ರಕ್ಷಿಸು ಜಗದೀಶಾ!
ಜಗದೀಶಾ ॥ ॥೫॥

ಪಿತನ ದುಡುಮೆಯ ಹಣವ ಸಾಲಲ್ಲೊದು
ಸಂಗೊಳ್ಳಿ ಕಲ್ಲಜ್ಜ ಗಳಿಸಿದ ಗಳಿಕೆಯಿಲ್ಲವಲ್ಲಾ
ಕೊಡುವವ-ತೆಗೆದುಕೊಳ್ಳುವವ ನೀನೇ ಅನ್ನದಾತನ್ಯೆ
ವಿದ್ಯೆಯ ಕರುಣಾಳ ಬೆಳಕನು ತೊರಲು
ಬಾ। ಬಾ। ಜಗದೀಶಾ ॥೬॥

ವಿದ್ಯೆ ಬಡವರಿರುವಲ್ಲಿ ಹೋಗಿ ಒಲಿಯುವದು
ಬಡವರು ಅದರ ಆಧಾರ ಸ್ತಂಭದ ಬಂಧ್ಯು
ಸಿರಿವಂತನಿಗೊಲಿಯುವದು ಬರಿ ಶೂನ್ಯ
ದುಡ್ಡೇ ದೊಡಪನನ್ನಾಗಿ ಮಾಡಿಹುದು
ಬರಿ ಬೊಬ್ಬೆ ಜಗದೀಶಾ ॥೭॥

ನೀನೆ ತಾಯಿಯು ನೀನೆ ತಂದೆಯು
ನೀನೆ ಪೂಜ್ಯನೆನಿಪ್ಪ ಗುರುವೂ
ನೀನೆ ನನ್ನಯ ಜನನಭಾಗ್ಯಕೆ ಮೂಲಕಾರಣನು ॥
ದೀನ ವಿದ್ಯಾರ್ಥಿಗಳಿಗೆ ನೀಡಿ ಸುಖ ಸು
ಜ್ಞಾನ ಸಂತೋಷಗಳ ಪೊರೆವ ವು
ಹಾನು ಭಾವನೆ ವಂದಿಪೆವು ಪೊರಯೊಮ್ಮನ
ಖಿಲೇಶ್ವ ॥ ೮॥

ನೀ ನೀನು ಇರುವವರಿಗೂ
ಅಂಜುವದಿಲ್ಲಾ ಅಳುಕುವದಿಲ್ಲಾ
ಬಡವನ ದೇಹಗುಡಿಯೊಳಡಗಿರುವಿ ನಿ
ರಾಕಾರನಾದ ಪರಶಿವಾ ನೀನೇ ಜಗದೀಶಾ ॥೯॥

———

# ಶಿವಾನುಭವ ಮಹಿಳಾ ಸಮ್ಮೇಳನ

## ಬೆಟ್ಟದಪುರಮಠ

ಬೆಟ್ಟದಪುರದ ಮಠಾಧ್ಯಕ್ಷರಾದ ಶ್ರೀಮನ್ನಿರಂಜನ ಪ್ರಣವಸ್ವರೂಪಿಗಳಾದ ಚನ್ನವೀರದೇಶಿಕೇಂದ್ರ ಮಹಾಸ್ವಾಮಿಗಳ ನೇತೃತ್ವದಲ್ಲಿ ಶಿವಾನುಭವ ಮಹಿಳಾಸಮ್ಮೇಳನವು ಮೈಸೂರು ಸಂಸ್ಥಾನ ದವೇಜರ ಮಹಾಮಾತೋಶ್ರೀ ಶ್ರೀಮಹಾರಾಣಿ ಲಕ್ಷ್ಮೀವಿಲಾಸದ ಸನ್ನಿಧಾನದವರ ಅಧ್ಯಕ್ಷತೆಯಲ್ಲಿ ಅತ್ಯಂತ ವೈಭವದಿಂದ ೧೭–೬–೫೪ ರಲ್ಲಿ ನೆರವೇರಿತು. ಆ ದಿವಸ ರುದ್ರಾಭಿಷೇಕ ಪಾದಪೂಜೆ ಮೊದಲಾದ ಕಾರ್ಯಗಳು ನೆರವೇರಿದವು. ಶ್ರೀಮತೆ ಕೊಳ್ಳೆಗಾಲದಲ್ಲಿ ಪಾರ್ವತಮ್ಮನವರಿಂದ ವಚನಗಳು ಹಾಡಲ್ಪಟ್ಟವು. ಮುಂದೆ ಮಹಾಸ್ವಾಮಿಗಳವರು ಉಪದೇಶಪರ ಭಾಷಣ ಮಾಡಿದರು. ಅನಂತರ ಡಾವೇಜರ ಮಹಾಮಾತೋಶ್ರೀಯವರು ಅಕ್ಕನ ಬಳಗದ ಮಹಿಳೆಯರು ಶಿವಶರಣೆ ಜಗನ್ಮಾತೆ ಅಕ್ಕನ ಅಧ್ಯಾತ್ಮಿಕ ತತ್ವಗಳನ್ನು ಜನತೆಯಲ್ಲಿ ಪ್ರಚಾರ ಮಾಡಿ ಜನರನ್ನು ಸುಸಂಸ್ಕೃತ ಮಾಡಲು ಶ್ರಮಿಸಬೇಕೆಂದು ಅಪ್ಪಣೆ ಕೊಡಿಸಿದರು.

——:o:——

ವಾಙ್ಮಯದ ತತ್ವಗಳನ್ನು ಅಳವಡಿಸಿಕೊಂಡು ನಡೆಯುವವನಾದನೆಂದು ಕಂಡು ಬರುತ್ತದೆ. ಮುಂದಿನ ಅವರ ಚರಿತ್ರೆಯು ಈ ಸಂಗತಿಯನ್ನು ದೃಢಪಡಿಸುತ್ತದೆ.

ರೇವಣಸಿದ್ಧೇಶ್ವರನು ಮಂಗಳವಾಡ ಪ್ರಾಂತಕ್ಕೆ ಬಂದಬಳಿಕ ಅವನು ಏಕಾಂತವಾಸಿಯಾಗಿ ವ್ಯರ್ಥ ಕಾಲಕಳೆದಿರುವದಿಲ್ಲ. ಅವನು ಶಿವಶರಣರ ತತ್ವಗಳ ಬೋಧೆ, ಶಿವಯೋಗ ಇವುಗಳಲ್ಲಿ ಮಗ್ನನಾಗಿ ಆಚರಿಸುವವನಾಗಿದ್ದನು. ಅವುಗಳನ್ನು ಅವನು ಎಲ್ಲ ಕಡೆಗೂ ಪ್ರಸಾರ ಮಾಡಿದ್ದಾನೆ ಇದರಿಂದ ಈ ಪ್ರಾಂತದಲ್ಲಿ ರೇವಣಸಿದ್ಧೇಶ್ವರನ ಹೆಸರಿನ ಮೇಲೆ ಅನೇಕ ದೇವಾಲಯಗಳೂ ಪುಣ್ಯಕ್ಷೇತ್ರಗಳೂ ಉಂಟಾಗಿರುತ್ತವೆ.

ಮಂಗಳವಾಡದಲ್ಲಿ ರೇವಣಸಿದ್ಧೇಶ್ವರನ ಒಂದು ದೇವಾಲಯವಿರುತ್ತದೆ. ಭೀಮಾನದಿಯು ೧೦ ಮೈಲುಗಳ ಮೇಲೆ ಇದ್ದು ಇದು ಇಲ್ಲಿಗೆ ಸಮೀಪವಾಗಿರುತ್ತದೆ. ಈ ಭಾಗದಲ್ಲಿ ಒಂದು ಕೆರೆಯು ಇದ್ದು ಇದನ್ನು ರೇವಣಸಿದ್ಧೇಶ್ವರನೇ ಕಟ್ಟಿಸಿದನೆಂದು ಪ್ರತೀತಿಯು ಇದೆ. ಈ ಕೆರೆಗೆ ಸಮೀಪವಾಗಿ ರೇವಣಸಿದ್ಧೇಶ್ವರನ ಒಂದು ದೇವಾಲಯವೂ ಉಂಟು. ಇದರಿಂದ ಅವನು ಇಲ್ಲಿ ಕೆಲ ಕಾಲ ವಾಸಿಸಿದನೆಂಬ ಅನುಮಾನವು ಉಂಟಾಗುತ್ತದೆ. ಭೀಮಾನದಿಯು ಮುಂದೆ ಹರಿಯುತ್ತ ಹೋದಹಾಗೆ ಅದರಲ್ಲಿ ಒಂದು ದೊಡ್ಡ ಮಡುವು ಆಗಿರುತ್ತದೆ. ಅದಕ್ಕೆ ಮಾಸನೂರು ಮಡುವು ಎಂಬ ಹೆಸರಿದೆ. ಈ ಮಡುವು ರೇವಣಸಿದ್ಧೇಶ್ವರನ ಪವಾಡದ ಮೂಲಕ ಅತ್ಯಂತ ಪ್ರಸಿದ್ಧಿಯನ್ನು ಹೊಂದಿರುತ್ತದೆ.

ರೇವಣಸಿದ್ಧೇಶ್ವರನಿದ್ದ ಸ್ಥಳಗಳು ಸಿದ್ಧೇಶ್ವರ ಎಂಬ ಹೆಸರಿನಿಂದಲೂ ಪ್ರಖ್ಯಾತಿಯನ್ನು ಹೊಂದಿರುತ್ತವೆ.

ಮಂಗಳವಾಡ ಪ್ರಾಂತದ ದಕ್ಷಿಣಕ್ಕೆ ಹೊತರ್ ಎಂಬ ಗ್ರಾಮವಿದೆ. ಇಲ್ಲಿ ರೇವಣಸಿದ್ಧೇಶ್ವರನ ಪ್ರಸಿದ್ಧ ದೇವಸ್ಥಾನವಿದೆ. ಇದು ಅತ್ಯಂತ ಜಾಗ್ರತ ಸ್ಥಾನವೆಂದು ಈಗಲೂ ಖ್ಯಾತಿಯನ್ನು ಹೊಂದಿರುತ್ತದೆ. ಇಲ್ಲಿಯ ದೇವಸ್ಥಾನವು ಒಂದು ರಮಣೀಯ ಸ್ಥಳದಲ್ಲಿ ಕಟ್ಟಲ್ಪಟ್ಟಿರುತ್ತದೆ. ಇಲ್ಲಿ ರೇವಣಸಿದ್ಧೇಶ್ವರನು ಕೆಲಕಾಲ ವಾಸಿಸಿರಬಹುದು.

ರೇವಣಸಿದ್ಧನು ಬಸವೇಶ್ವರನು ಪ್ರಸಿದ್ಧಿಗೆ ಬರುವದರಕಿಂತ ಮೊದಲು ಈ ನಾಡಿನಲ್ಲಿ ಪ್ರಸಿದ್ಧನಾಗಿದ್ದನು. ಚಾಲುಕ್ಯ ರಾಜನಾದ ೬ನೇ ವಿಕ್ರಮಾ

ದಿತ್ಯನು ಬಹುದಿವಸ ರಾಜ್ಯವಾಳಿ ಅವನು ಈ ಕಾಲದಲ್ಲಿ ತೀರಿಕೊಂಡಿದ್ದನು. ಕಲಚೂರ್ಯ ವಂಶದ ಪೇರ್ಮಾಡಿಯು ಚಾಲುಕ್ಯರ ಮಾಂಡಲಿಕನಾಗಿ ಮಂಗಳವಾಡದಲ್ಲಿ ರಾಜ್ಯವಾಳುತ್ತಿದ್ದನು. ಅವನು ಬಿಜ್ಜಳನ ತಂದೆಯು. ಪೇರ್ಮಾಡಿಗೂ ಚಾಲುಕ್ಯ ರಾಜರಿಗೂ ಬಹಳ ವರ್ಷಗಳಿಂದ ಶರೀರ ಸಂಬಂಧವಿದ್ದಿತು. ಈ ಪೇರ್ಮಾಡಿಯ ಕಾಲದಲ್ಲಿಯೇ ರೇವಣಸಿದ್ಧನು ಮಂಗಳವಾಡ ಪ್ರಾಂತಕ್ಕೆ ಬಂದಿರಬಹುದೆಂದು ಅನುಮಾನವು ಉಂಟಾಗುತ್ತದೆ.

ರೇವಣಸಿದ್ಧನು ಇಲ್ಲಿಗೆ ಬಂದಬಳಿಕ ಅವನು ಯೋಗಮಾರ್ಗದಲ್ಲಿ ವಿಶ್ವಾಸವುಳ್ಳವನಾಗಿ ಅದರಂತೆ ಆಚರಿಸುವವನಾಗಿದ್ದನು ಈ ಕಾಲಕ್ಕೆ ಮಂಗಳವಾಡ ಪ್ರಾಂತದಲ್ಲಿ ಈಗಿನಂತೆ ಕುರುಬರ ಜನಾಂಗವು ಪ್ರಬಲವೂ ಬಹಳ ದೊಡ್ಡದೂ ಆಗಿದ್ದಿತು. ಈ ಕುರುಬರು ರೇವಣಸಿದ್ಧನ ಅನುಯಾಯಿಗಳಾಗಿ ಬಹು ಕಾಲದಿಂದಲೂ ಅವನ ಸಾಂಪ್ರದಾಯದವರೆಂದು ಹೇಳಿಕೊಳ್ಳುತ್ತ ಬಂದಿದ್ದಾರೆ. ಈಗಲೂ ಅವರು ರೇವಣಸಿದ್ಧನು ತಮ್ಮ ಪೂಜ್ಯ ಗುರುವೆಂದು ತಿಳಿದಿದ್ದಾರೆ. ಆದರೆ ರೇವಣಸಿದ್ಧನು ಈ ಪ್ರಾಂತಕ್ಕೆ ಬಂದಬಳಿಕ ಇಲ್ಲಿ ಅವನು ಬಹಳ ದಿವಸ ಕಳೆದಂತೆ ತೋರುವದಿಲ್ಲ. ಅವನು ಈಗ ಸಾತಾರಾ ಜಿಲ್ಲೆಯಲ್ಲಿರುವ ವಿಟೆ ಎಂಬ ಗ್ರಾಮಕ್ಕೆ ಸಮೀಪವಿರುವ ರೇಣಾವಿ ಎಂಬಲ್ಲಿಗೆ ಮೊದಲು ತೆರಳಿ ಅವನು ಅಲ್ಲಿ ಯೋಗಮಾರ್ಗವನ್ನು ಆಚರಿಸುವವನಾಗಿದ್ದನು. ಈ ಗ್ರಾಮವು ಈಗ ರೇವಣಸಿದ್ಧನ ಹೆಸರಿನಿಂದಲೇ ಪ್ರಸಿದ್ಧವಾಗಿರುತ್ತದೆ. ಈ ಸ್ಥಳವು ಒಂದು ಪುಣ್ಯಕ್ಷೇತ್ರವೆಂದು ಈಗಲೂ ಭಾವಿಸಲ್ಪಟ್ಟಿರುತ್ತದೆ. ಅಲ್ಲಿ ಹಿಂಸಾಕರ್ಮಗಳು ಎಂದೂ ಆಚರಿಸಲ್ಪಡುವದಿಲ್ಲ. ಇಷ್ಟು ಈ ಕ್ಷೇತ್ರದ ವಿಷಯವಾಗಿ ಅಲ್ಲಿಯ ಜನರ ಆದರಬುದ್ಧಿಯು ಇರುತ್ತದೆ. ಈ ಕ್ಷೇತ್ರದ ಕಾರ್ಯಗಳನ್ನು ಅಲ್ಲಿಯ ಒಬ್ಬ ಬ್ರಾಹ್ಮಣ ಮನೆತನದವರು ನಡಿಸುತ್ತ ಬಂದಿದ್ದಾರೆ. ಅವರಲ್ಲಿ ಮರಾಠೀ ಭಾಷೆಯಲ್ಲಿ ಬರೆದಿರುವ ಒಂದು 'ಓವೀ' ಬದ್ಧ ರೇವಣಸಿದ್ಧನ ಚರಿತ್ರೆಯೂ ಇದೆ.

ಇಲ್ಲಿಂದ ಮುಂದೆ ಪಂಢರಪುರದ ಹತ್ತಿರ ಭೀಮಾ ನದಿಯು ಹರಿಯುತ್ತ ಬಂದಿರುತ್ತದೆ. ಈ ಪ್ರಾಂತದಲ್ಲಿಯೂ ರೇವಣಸಿದ್ಧನು ಸಂಚರಿಸಿರಬಹುದೆಂದು ತೋರುತ್ತದೆ. ಪಂಢರಪುರಕ್ಕೆ ಸಮೀಪವಾಗಿ ವಾಡಪುರ ಎಂಬ ಗ್ರಾಮವಿದೆ. ಅಲ್ಲಿ ಒಂದು ಶಿಲಾಶಾಸನವಿದ್ದು ಇದರಲ್ಲಿ 'ರೇವಣ ಮಡುವು'

ಎಂಬ ಹೆಸರಿನ ಒಂದು ಜಲಾಶಯದ ಉಲ್ಲೇಖವು ಇರುತ್ತದೆ. ಇದರಿಂದ ಈ ಮಡುವಿನ ಹತ್ತಿರ ರೇವಣಸಿದ್ಧನು ತನ್ನ ಯೋಗಮಾರ್ಗದಲ್ಲಿ ಕಳೆದಿರಬಹುದೆಂದು ತೋರುತ್ತದೆ.

ಇವಲ್ಲದೆ ರೇವಣಸಿದ್ಧೇಶ್ವರನು ಬಸವನ ಬಾಗೇವಾಡಿಗೆ ೫-೬ ಮೈಲು ಮಾತ್ರ ದೂರವಿರುವ ಇಂಗಳೇಶ್ವರ ಎಂಬ ಗ್ರಾಮದಲ್ಲಿ ಇದ್ದುದಾಗಿ ಕಂಡು ಬರುತ್ತದೆ. ಅಲ್ಲಿ ರೇವಣಸಿದ್ಧೇಶ್ವರನ ಒಂದು ಗುಹೆಯು ಈಗಲೂ ಇರುತ್ತದೆ. ಅದಕ್ಕೆ ಈ ಹೆಸರು ಪ್ರಾಪ್ತವಾಗಿರುವದರಿಂದ ಇಲ್ಲಿ ರೇವಣಸಿದ್ಧನು ವಾಸಿಸಿರಬಹುದೆಂದು ತೋರುತ್ತದೆ. ಈ ಗುಹೆಗೆ ಸಮೀಪವಾಗಿ ನಾಗಲಾಂಬಿಕೆಯ ಗುಹೆಯೂ ಒಂದು ಇರುತ್ತದೆ. ಇದರಲ್ಲಿ ಆಕೆಯ ಹೆಸರಿನಿಂದ ಒಂದು ಹೆಣ್ಣು ವಿಗ್ರಹವೂ ಇರುತ್ತದೆ. ನಾಗಲಾಂಬಿಕೆಗೆ ಶಿವಸ್ವಾಮಿ ಎಂಬವನ ಲಗ್ನವಾಗಿತ್ತೆಂದು ಸಿಂಗಿರಾಜ ಪುರಾಣದಿಂದ ತಿಳಿದು ಬರುತ್ತದೆ. ಈ ಶಿವಸ್ವಾಮಿಯು ಬಹುಶಃ ಇಂಗುಳೇಶ್ವರದವನಾಗಿರಬೇಕು. ನಾಗಲಾಂಬಿಕೆಯು ಇಲ್ಲಿಗೆ ಬಂದಕಾಲದಲ್ಲಿ ಅವಳು ಇಲ್ಲಿಯೇ ಯೋಗಾಭ್ಯಾಸವನ್ನು ಆಚರಿಸುತ್ತಿರಬಹುದು. ಅವಳು ರೇವಣಸಿದ್ಧೇಶ್ವರನನ್ನು ಇಲ್ಲಿ ಕಂಡು ಅವನ ಮಾರ್ಗವನ್ನು ಅನುಸರಿಸುತ್ತಿರಬಹುದು. ಆದರೆ ಈ ಗ್ರಾಮದಲ್ಲಿ ರೇವಣಸಿದ್ಧೇಶ್ವರನು ಎಷ್ಟು ದಿವಸ ಇದ್ದನೆಂಬುದು ಗೊತ್ತಾಗುವದಿಲ್ಲ.

ಈ ಇಂಗಳೇಶ್ವರ ಗ್ರಾಮವು ದೇವರ ದಾಸಿಮಯ್ಯನ ಮುದನೂರು, ಅನೇಕ ಶಿವಶರಣರಿರುತ್ತಿದ್ದ ಕೂಡಲಸಂಗಮಕ್ಷೇತ್ರ ಬಾಹೂರು ಬ್ರಹ್ಮಯ್ಯನಿದ್ದ ಬಾಹೂರು, ಕೇಶಿರಾಜನಿದ್ದ ಕೊಂಡಗುಳಿ ಈ ಅನೇಕ ಶಿವಶರಣರ ಗ್ರಾಮಗಳಿಗೆ ಸಮೀಪವಾಗಿರುತ್ತದೆ. ರೇವಣಸಿದ್ಧೇಶ್ವರನು ಈ ಭಾಗದಲ್ಲಿ ಇದ್ದಾಗ್ಗೆ ಶಿವಶರಣರ ವಚನ ವಾಙ್ಮಯಕ್ಕೆ ಅವನು ಲಕ್ಷಹಾಕಿರಬಹುದು. ಈ ಪ್ರಾಂತಕ್ಕೆ ಬರುವ ಮೊದಲು ಕೇವಲ ಶೈವ ಮಾರ್ಗವನ್ನು ಅವನು ಅನುಸರಿಸುವವನಾಗಿದ್ದನೆಂದು ಹರಿಹರನ ರಗಳೆಯಿಂದ ತೋರುತ್ತಿದೆ. ಆದರೆ ಇಂಗುಳೇಶ್ವರ ಬಾಗೇವಾಡಿ ಪ್ರಾಂತದಲ್ಲಿ ಅವನು ಬಂದಬಳಿಕ ಅಲ್ಲಿ ಪ್ರಚಲಿತವಿದ್ದ ಶಿವಶರಣರ ಮಾರ್ಗವನ್ನು ಅವನು ತಿಳಿದವನಾಗಿರಬಹುದು. ಅವನ ಮೂರ್ತಿಯು ಇಂಗಳೇಶ್ವರದಲ್ಲಿದ್ದು ಅದಕ್ಕೆ ಲಿಂಗಧಾರಣವಿರುತ್ತದೆ. ಅದ್ದರಿಂದ ರೇವಣಸಿದ್ಧನು ತರ್ದವಾಡಿ (ಮಂಗಳವಾಡ) ನಾಡಿನಲ್ಲಿ ಇದ್ದಾಗ್ಗೆ ಅವನು ಶಿವಶರಣರ ಮಾರ್ಗವನ್ನು ಕೈಕೊಂಡಿರಬಹುದೆಂಬ ಅನುಮಾನವು ಉಂಟಾಗುತ್ತದೆ.

ರೇವಣಸಿದ್ದನು ಇಂಗುಳೇಶ್ವರದಲ್ಲಿ ಕೆಲವು ಕಾಲ ಕಳೆದ ಬಳಿಕ ಅವನು ಬೋಧಕ ವೃತ್ತಿಯನ್ನು ಸ್ವೀಕರಿಸಿದನೆಂದು ತೋರುತ್ತದೆ. ಅವನು ಮುಂದೆ ವೀರಶೈವ ಧರ್ಮ ತತ್ವಗಳನ್ನು ಬೋಧಿಸುವದರಲ್ಲಿ ಕಾಲಕಳೆಯ ಹತ್ತಿದನು ಅವನು ಯಾವ ಯಾವ ದೇಶಗಳಲ್ಲಿ ಕ್ರಮವಾಗಿ ಸಂಚರಿಸಿದನೆಂಬು ದನ್ನು ತಿಳಿಯುವದು ದುಸ್ತರವೇ ಸರಿ. ಆದರೆ ಅವನು ಹೋದಲ್ಲೆಲ್ಲ ಜನರಮೇಲೆ ಅವನು ಪರಿಣಾಮ ಮಾಡಿದನೆಂಬುದು ಮಾತ್ರ ನಿಃಸಂಶಯವಾದದ್ದು. ಅವನು ಹೋದಲ್ಲೆಲ್ಲ ಅವನ ಹೆಸರಿನ ಮೇಲೆ ಭಾವಿಕರು ದೇವಾಲಯಗಳನ್ನು ನಿರ್ಮಾಣಮಾಡಿದ್ದಾರೆ. ಅವು ಈಗಲೂ ಅಸ್ತಿತ್ವದಲ್ಲಿವೆ. ಮತ್ತು ಅವು ರೇವಣ ಸಿದ್ಧನವೆಂದು ಅವುಗಳನ್ನು ಜನರು ಮನ್ನಿಸುತ್ತಿರುವದೂ ಕಂಡು ಬರುತ್ತದೆ.

ಶಿವಶರಣರ ಧರ್ಮದ ಪ್ರಭಾವವು ಮೊದಲು ಮುದನೂರು ಪ್ರಾಂತ ದಲ್ಲಿ ಉಂಟಾಗಿ, ಅದು ಮುಂದೆ ತರ್ದವಾಡಿ ನಾಡಿಗೆ ಹಬ್ಬಿತೆಂದು ತೋರುತ್ತದೆ.

ಇಂಗುಳೇಶ್ವರವು ತರ್ದವಾಡಿ ನಾಡಿನಲ್ಲಿರುತ್ತದೆಂದು ಅರ್ಜುನವಾಡ ಶಿಲಾಶಾಸನದಲ್ಲಿ ಹೇಳಿದೆ. ಇಲ್ಲಿಂದ ರೇವಣಸಿದ್ಧನು ಕಲಬುರ್ಗಿ ಜಿಲ್ಲೆಯ ಕಡೆಗೆ ಹೋಗಿರಬಹುದೆಂದು ತೋರುತ್ತದೆ. ಇಲ್ಲಿ ರಟಗಲ್ಲು ಎಂಬ ಗ್ರಾಮ ವಿದ್ದು ಇದಕ್ಕೆ ಸಮೀಪವಾಗಿ ದೇವಗಿ, ರೇಣಗಿ ಎಂಬ ಗ್ರಾಮಗಳಿವೆ. ಇಲ್ಲಿ ರೇವಣಸಿದ್ಧನ ದೇವಾಲಯಗಳಿರುತ್ತವೆ. ಆದ್ದರಿಂದ ಇಲ್ಲಿಗೆ ರೇವಣ ಸಿದ್ಧೇಶ್ವರನು ಬಂದಿರಬಹುದೆಂಬ ಅನುಮಾನವು ಉಂಟಾಗುತ್ತದೆ.

ರಾಯಚೂರ ಜಿಲ್ಲೆಯಲ್ಲಿ ಅಮಳೇಶ್ವರ ಅಥವಾ ಅಮರೇಶ್ವರ ಎಂಬ ಹೆಸರಿನ ದೇವಾಲಯವು ಬಹು ಪ್ರಸಿದ್ಧವಾಗಿದೆ. ಇಲ್ಲಿ ರೇವಣಸಿದ್ಧನ ದೇವಾಲಯವಿದೆ. ಇಲ್ಲಿ ರೇವಣಸಿದ್ಧನು ಕೆಲವು ಕಾಲ ಕಳೆದಿರಬಹುದು.

ಮುಂದೆ ಕಲಬುರ್ಗಿ ಜಿಲ್ಲೆಯಲ್ಲಿ ಸರಸಂಬಿ ಎಂಬ ಗ್ರಾಮವಿದೆ. ಅಲ್ಲಿಯೂ ರೇವಣಸಿದ್ದನ ಸ್ಥಾನವಿದೆ. ಆದ್ದರಿಂದ ಅಲ್ಲಿಯೂ ಅವನು ಕೆಲವು ಕಾಲ ಕಳೆದಿರಬಹುದು.

ಈ ಪ್ರಕಾರ ರೇವಣಸಿದ್ಧನು ಈ ಭಾಗದಲ್ಲಿ ಸಂಚರಿಸಿ ಪಶ್ಚಿಮಕ್ಕೆ ಬೆಳಗಾವ ಜಿಲ್ಲೆಯ ದಿಶೆಯಲ್ಲಿ ತೆರಳಿರಬಹುದು. ಹುಕ್ಕೇರಿ ತಾಲೂಕಿನಲ್ಲಿ ಬೆಲ್ಲದ ಬಾಗೇವಾಡಿ ಎಂಬ ಗ್ರಾಮವಿದೆ- ಇದಕ್ಕೆ ಸಮೀಪವಾಗಿ ಕಬ್ಬೂರಲ್ಲಿ, ರೇವಣಸಿದ್ಧನ ಒಂದು ಪುಣ್ಯಕ್ಷೇತ್ರವಿರುತ್ತದೆ. ಇಲ್ಲಿಗೂ ರೇವಣಸಿದ್ಧನು ಹೋಗಿ ಕೆಲವು ಕಾಲ ವಾಸಿಸಿರಬಹುದು.

ರೇವಣಸಿದ್ಧನು ಹೋದಲ್ಲೆಲ್ಲ ಅವನು ಶಿವಶರಣರ ತತ್ವಗಳನ್ನು ಪ್ರಚಾರ ಮಾಡುತ್ತ ಹೋಗಿದ್ದಾನೆಂದು ನಾವು ಊಹಿಸಬಹುದಾಗಿದೆ. ಅವನು ಇಂಗುಳೇಶ್ವರದಲ್ಲಿರುವ ವರೆಗೆ ಯೌಗಿಕ ಮಾರ್ಗವನ್ನು ಅನುಸರಿಸುತ್ತ ಬಂದನು. ಆದರೆ ಮುಂದೆ ಅವನು ಶಿವಶರಣರ ಮಾರ್ಗವನ್ನು ಕೈಕೊಂಡಬಳಿಕ ಅವನು ಯೋಗ ಸಾಧನೆಗೆ ಹೆಚ್ಚಿಗೆ ಮಹತ್ವ ಕೊಡದೆ ಲಿಂಗಧಾರಣೆಗೆ ಮಹತ್ವ ಕೊಟ್ಟಿದ್ದಾನೆ. ಶಿವಶರಣರ ರೀತಿಯ ಪ್ರಕಾರ ಯೋಗ ಪದ್ಧತಿಯು ಅವರ ಮಾರ್ಗಕ್ಕೆ ಅನ್ವಯವಾಗುವದಿಲ್ಲ. ಆದರೆ ಲಿಂಗ ಮಾರ್ಗ ಅಥವಾ ಷಟ್‌ಸ್ಥಲಗಳಂತೆ ವೀರಶೈವನು ಆತ್ಮೋನ್ನತಿಯನ್ನು ಮಾಡಿಕೊಳ್ಳತಕ್ಕದ್ದಾಗಿದ್ದು, ಈ ಮಾರ್ಗವೇ ಮಾನವನ ಸ್ವಾಭಾವಿಕ ಪ್ರಗತಿಯ ಮಾರ್ಗವೆಂದು ಅದು ವೀರಶೈವರಲ್ಲಿ ಬಹಳ ಪ್ರಸಾರ ಹೊಂದಿದೆ.

ಈ ಕಾಲದಲ್ಲಿ ಕೊಲ್ಹಾಪುರವು ಸಿದ್ಧರ ಮುಖ್ಯ ಸ್ಥಾನವಾಗಿತ್ತು. ಗೋರಕ್ಷನು ಈ ಸ್ಥಾನಕ್ಕೆ ಬಂದು ಸಿದ್ಧಿಗಳನ್ನು ಪ್ರಚಾರಪಡಿಸುವವನಾಗಿದ್ದನು. ರೇವಣಸಿದ್ಧನು ಇಲ್ಲಿಗೆ ಬಂದು ಪಟ್ಟಣದಲ್ಲಿ ಸಂಚಾರ ಮಾಡುತ್ತಿರಲು ಅವನಿಗೆ ಕಿರಿಯ ಲಕ್ಕ್ಮಾದೇವಿ ಎಂಬವಳು ಒಂದು ಕಠಾರಿಯನ್ನು ನೀಡಿದಳು. ಅದು ರೇವಣಸಿದ್ಧನ ದೃಷ್ಟಿಗೆ ಬೀಳಲು ಅದು ಕರಗಿಹೋಯಿತು. ಆಗ ಹಿರಿಯ ಲಕ್ಕ್ಮಾದೇವಿಯು ಮಹಾ ಲಕ್ಷ್ಮಿಗೆ ಹೇಳಿಕೊಳ್ಳಲಾಗಿ ಆಕೆಯು ಹೇಳಿದ ನಿರ್ಧಾರದಂತೆ ರೇವಣಸಿದ್ಧನು ಆ ಲೋಹ ರಸವನ್ನು ಮರೆಮಾಡಿ ಕಠಾರಿಯನ್ನು ಹೊರಕ್ಕೆ ಬೀಳಿಸಿದನು.

ಈ ಪ್ರಕಾರ ರೇವಣಸಿದ್ಧನು ಉತ್ತರ ಕರ್ನಾಟಕ ಪ್ರಾಂತದಲ್ಲಿ ಪವಾಡಗಳನ್ನು ಮಾಡುತ್ತ ಸಂಚರಿಸಿ ವೀರಶೈವ ಧರ್ಮವನ್ನು ಪ್ರಸಾರ ಮಾಡುತ್ತ ಪುನಃ ತನ್ನ ಮೊದಲಿನ ಮಂಗಳವಾಡಕ್ಕೆ ಬರುವವನಾದನು. ಅವನು ಅಲ್ಲಿಗೆ ಬರುವಷ್ಟರಲ್ಲಿ ಒಂದು ರಾಜಕೀಯ ಕ್ರಾಂತಿಯು ಅಲ್ಲಿ ಸಂಭವಿಸಿತ್ತು. ಆಗ ಪೆರ್ಮಾಡಿರಾಯನು ತೀರಿಕೊಂಡಿದ್ದನು. ಅವನು ತೀರಿಕೊಳ್ಳಲು ಅವನ ಮಗನಾದ ಬಿಜ್ಜಳನು ಪೆರ್ಮಾಡಿರಾಯನ ಸ್ಥಾನವನ್ನು ಹೊಂದಿದ್ದನು.

ಈ ಬಿಜ್ಜಳನು ಅತ್ಯಂತ ಮಹತ್ವಾಕಾಂಕ್ಷಿಯಾಗಿದ್ದನು. ಅವನು ಚಾಲುಕ್ಯ ರಾಜ್ಯವನ್ನೇ ಅಪಹರಣಮಾಡುವದರಲ್ಲಿ ಆಸಕ್ತನಾಗಿದ್ದನು. ಅವನು ಈ ರಾಜ್ಯದ ಸುತ್ತಲಿನ ಮಾಂಡಲಿಕರನ್ನು ತನ್ನ ಆಧೀನದಲ್ಲಿ ತೆಗೆದುಕೊಳ್ಳುವ

ಕಾರ್ಯದಲ್ಲಿ ತೊಡಗಿದ್ದನು. ಅದರಲ್ಲಿ ಅವನು ಯಶಸ್ಸನ್ನೂ ಸಂಪಾದಿಸಿದನು. ಇದರಿಂದ ಚಾಲುಕ್ಯ ರಾಜನು ಅವನ ಕೂಡ ಸ್ವಾಭಾವಿಕವಾಗಿ ವೈಮನಸ್ಸುಳ್ಳವನಾಗಿದ್ದನು. ಇದು ಬಿಜ್ಜಳನಿಗೆ ತಿಳಿದುಬರಲು ಅವನು ದೇಶದಲ್ಲಿಯ ಜನರನ್ನು ತನ್ನ ಅಧೀನದಲ್ಲಿ ತೆಗೆದುಕೊಳ್ಳುವ ಪ್ರಯತ್ನ ನಡಿಸಿದನು. ಈ ಕಾಲಕ್ಕೆ ರೇವಣಸಿದ್ಧೇಶ್ವರನು ಧಾರ್ಮಿಕ ವೃತ್ತಿಯನ್ನು ಸ್ವೀಕರಿಸಿ ಜನತೆಯಲ್ಲಿ ಬಹಳ ವರ್ಚಸ್ಸುಳ್ಳವನಾಗಿದ್ದನು. ಅವನು ಬಿಜ್ಜಳನಲ್ಲಿ ಇದ್ದಾಗ್ಗೆ ಬಿಜ್ಜಳನು ಒಂದು ದಿವಸ ಅವನನ್ನು ಪರೀಕ್ಷಿಸಬೇಕೆಂದು ಕುದಿಯುವ ಓಗರವನ್ನು ಅವನಿಗೆ ನೀಡಿಸಿದನು. ಅದನ್ನು ರೇವಣಸಿದ್ಧನು ಕಂಬಕ್ಕೆಸೆದನು. ಅದರಿಂದ ಅರಸನ ಅರಮನೆಯು ಉರಿಯತೊಡಗಿತು. ಬಿಜ್ಜಳನು ಅದನ್ನು ನೋಡಿ ಭಯಭೀತನಾಗಿ ಅವನಿಗೆ ಬೇಡಿಕೊಳ್ಳಲು. ರೇವಣಸಿದ್ಧೇಶ್ವರನು ಮಳೆ ಬರುವಂತೆ ಮಾಡಿ, ಅದನ್ನು ನಂದಿಸಿದನು.

ರೇವಣಸಿದ್ಧನು ಮಹತ್ವಿಕನೆಂಬುದು ಬಿಜ್ಜಳನಿಗೆ ತಿಳಿದು ಬರಲು ಅವನಿಗೆ ಸುಲಕ್ಷಣೆ ಎಂಬ ಹೆಸರಿನ ತನ್ನ ಮಗಳನ್ನು ಕೊಟ್ಟು ಲಗ್ನ ಮಾಡಿದನು.

ಆದರೆ ರೇವಣಸಿದ್ಧನು ಶಿವಶರಣರ ಆಚರಣೆಯಂತೆ ಆಚರಿಸುವವನಾದ್ದರಿಂದ ಅವನು ಯೋಗಮಾರ್ಗವನ್ನು ದೂರೀಕರಿಸಿ ಲಿಂಗಮಾರ್ಗವನ್ನು ಅನುಸರಿಸುವವನಾದನು. ಅವನು ತನ್ನ ಆಚರಣೆಯಲ್ಲಿ ಕಾಯಕದ ತತ್ವಗಳನ್ನು ಮೇಳಗೂಡಿಸಲು ಪ್ರಯತ್ನ ಮಾಡಿದಂತೆ ತೋರುತ್ತದೆ. ಮುಂದೆ ಅವನು ಕೆಲವು ದಿನಗಳಲ್ಲಿ ಚಾಲುಕ್ಯರ ರಾಜಧಾನಿಯಾದ ಕಲ್ಯಾಣಕ್ಕೆ ಹೋಗುವವನಾದನು. ಆದರೆ ಅವನು ಅಲ್ಲಿ ಬಹಿರಂಗವಾಗಿ ಎಲ್ಲರಿಗೂ ಪರಿಚಯವಾಗುವಂತೆ ಇರದೆ ಗುಪ್ತವಾಗಿ ಗಾಣಿಗ ಕಲ್ಲಿಶೆಟ್ಟಿ ಎಂಬ ಹೆಸರಿನ ಒಬ್ಬ ಗಾಣಿಗನಲ್ಲಿ ಕೆಲಸ ಮಾಡುತ್ತ ಇರಹತ್ತಿದನು. ಹೀಗೆ ಅವನು ಅಲ್ಲಿ ಕಾಲಕಳೆಯುತ್ತಿರಲು ಈ ಗಾಣಿಗನು ಶರಣನಾದ ರೇವಣಸಿದ್ಧನ ಪ್ರಭಾವದಿಂದ ಸಿರಿವಂತನಾದನು. ಹೀಗೆ ರೇವಣಸಿದ್ಧನು ಅಲ್ಲಿ ಕೆಲಕಾಲ ಕಳೆದು ತಿರುಗಿ ಮಂಗಳವಾಡಕ್ಕೆ ಬಂದನು. ಅಲ್ಲಿಗೆ ಅವನು ಬಂದು ಅಲ್ಲಿ ಮಾಯಾದೇವಿ ಎಂಬವಳಲ್ಲಿ ನಿಂತು ಅವಳಲ್ಲಿ ಕಾಲಕಳೆಯಹತ್ತಿದನು.

ರೇವಣಸಿದ್ಧನ ಹತ್ತಿರ ಈ ಕಾಲದಲ್ಲಿ ಕೆಲವೊಂದು ಖಡ್ಗವಿತ್ತು. ಅವನು ಅದನ್ನು ಭೀಮಾನದಿಯಲ್ಲಿ ಮಾಸನೂರು ಮಡುವಿನಲ್ಲಿ ಒಗೆದು ಬಿಟ್ಟಿದ್ದನು.

ಈ ಕಾಲದಲ್ಲಿ ಚಾಲುಕ್ಯ ರಾಜನು ಬಿಜ್ಜಳನನ್ನು ಮಂಗಳವಾಡದಲ್ಲಿ ಇರಗೊಡದೆ ಅವನನ್ನು ಬನವಾಸಿ ಪ್ರಾಂತದ ಮಾಂಡಲಿಕನನ್ನಾಗಿ ನಿಯಮಿಸಿದನು. ಬಿಜ್ಜಳನ ಮಹತ್ವಾಕಾಂಕ್ಷೆಯನ್ನು ಅವನು ಅರಿತವನಾಗಿ ಅವನನ್ನು ಹೀಗೆ ದೂರದ ಪ್ರದೇಶಕ್ಕೆ ಕಳಿಸಿರಬಹುದೆಂದು ತೋರುತ್ತದೆ. ಬಿಜ್ಜಳನು ಅರಸನ ಅಪ್ಪಣೆಯನ್ನು ಮನ್ನಿಸಿ ಬನವಾಸಿ ಪ್ರಾಂತದಲ್ಲಿ ಮಾಂಡಲಿಕನಾಗಿ ರಾಜ್ಯಭಾರವನ್ನು ನಡಿಸುವವನಾದನು. ಅವನು ಈ ನಾಡಿಗೆ ಹೋಗುವ ಕಾಲದಲ್ಲಿ ಅವನು ರೇವಣಸಿದ್ಧನನ್ನು ಸಹ ತನ್ನ ಕೂಡ ಕರೆದುಕೊಂಡು ಹೋಗಿರಬಹುದೆಂದು ತೋರುತ್ತದೆ. ರೇವಣಸಿದ್ಧನು ಈ ಪ್ರಾಂತಕ್ಕೆ ಹೋದಬಳಿಕ ಅವನು ಅಲ್ಲಿಯೂ ಅನೇಕ ಮಹತ್ವಗಳನ್ನು ಮಾಡಿದನು. ಅಲ್ಲಿ ಒಂದು ಬೆಟ್ಟವಿದ್ದು ಆದಕ್ಕೆ ರೇವಣಸಿದ್ಧೇಶ್ವರ ಬೆಟ್ಟವೆಂಬ ಹೆಸರು ಈಗಲೂ ಇದೆ. ಅಲ್ಲಿ ಅವನು ತಪಸ್ಸನ್ನಾಚರಿಸಿರಬಹುದು. ಇಲ್ಲಿ ಬಹು ಜನರು ವೀರಶೈವ ಧರ್ಮವನ್ನು ಅನುಸರಿಸಿದವರಾಗಿದ್ದಾರೆ. ಈ ಪ್ರಕಾರ ಈ ಭಾಗದಲ್ಲಿ ರೇವಣಸಿದ್ಧನು ಕೆಲವು ಕಾಲ ಕಳೆದಿದ್ದಾನೆ. ಆದ್ದರಿಂದ ಅವನ ಹೆಸರಿನ ಮೇಲೆ ಅನೇಕ ಸ್ಥಾನಗಳು ಇಲ್ಲಿ ಉಂಟಾಗಿರುತ್ತವೆ.

ಈ ಪ್ರಕಾರ ರೇವಣಸಿದ್ಧೇಶ್ವರನು ಕೆಲವುಕಾಲ ಬನವಾಸಿ ನಾಡಿನಲ್ಲಿ ಕಳೆದು ಮುಂದೆ ಅವನು ಚೋಳ ರಾಜ್ಯಕ್ಕೆ ಹೋದನು.

ಅವನು ಚೋಳರಾಜನ ರಾಜಧಾನಿಯಾದ ಕಾಂಚೀಪುರಕ್ಕೆ ಮೊದಲು ಹೋಗಿ ಅನೇಕ ಮಹತ್ವಗಳನ್ನು ಮಾಡುವವನಾದನು. ಅವನು ಆರಂಭದಲ್ಲಿ ತಾನಾರೆಂಬುದನ್ನು ಅಲ್ಲಿಯವರಿಗೆ ತಿಳಿಯಗೊಡಲಿಲ್ಲ. ಆದರೆ ಅವನು ಕರ್ನಾಟಕದಲ್ಲಿ ಮಾಡಿದ ಮಹತ್ಕೃತ್ಯಗಳ ತಿಳಿವಳಿಕೆಯು ಎಲ್ಲ ಕಡೆಗೂ ಪಸರಿಸಿತ್ತು. ಅವನು ಕಾಂಚೀಪಟ್ಟಣದಲ್ಲಿ ಮೊದಲು ಪಣ್ಯಾಂಕನೆಂಬ ಹೆಸರನ್ನಿಟ್ಟುಕೊಂಡು ಹುಚ್ಚನಂತೆ ನಟಿಸಿದನು. ಆದರೆ ಸ್ವಲ್ಪಕಾಲದಲ್ಲಿ ಅವನು ತನ್ನ ಮಹತ್ವವನ್ನು ಪ್ರದರ್ಶಿಸಹತ್ತಿದನು. ಈ ಪಟ್ಟಣದಲ್ಲಿ ಏಕಾಮ್ರನಾಥನೆಂಬ ಪ್ರಸಿದ್ಧ ದೇವಾಲಯವಿದೆ. ಅದು ಈಕಾಲದಲ್ಲಿ ವಿಷ್ಣುವಿನ ದೇವಾಲಯವಾಗಿತ್ತು. ಆದರೆ ರೇವಣಸಿದ್ಧನು ಕೆಲವೊಂದು ಪವಾಡವನ್ನು ಅಲ್ಲಿ ಮಾಡಿ ಅದನ್ನು ಶಿವಾಲಯವನ್ನಾಗಿ ಮಾಡಿದನು. ಹೀಗೆ ಈ ದೇವಾಲಯದಲ್ಲಿ ಬದಲಾವಣೆಯಾದದ್ದು ಪಟ್ಟಣಿಗರನ್ನೆಲ್ಲ ಆಶ್ಚರ್ಯಗೊಳಿಸಿತು. ಅರಸನಾದ ವೀರ ರಾಜೇಂದ್ರ ಚೋಳನು ವಿಷ್ಣುಧರ್ಮವನ್ನು ಬಿಟ್ಟು ಶೈವ ಧರ್ಮವನ್ನು ಸ್ವೀಕರಿಸಿದನು. ಇಷ್ಟೇ ಅಲ್ಲ, ಅವನಿಗೆ ಸುಂದರ ನಾಚಿ ಎಂಬ

ಮಗಳಿದ್ದು ಅವಳನ್ನು ಅವನು ರೇವಣಸಿದ್ಧೇಶ್ವರನಿಗೆ ಕೊಟ್ಟು ಲಗ್ನಮಾಡಿದನು. ಇದರಿಂದ ರೇವಣಸಿದ್ಧೇಶ್ವರನ ಮಹತ್ವವು ನಾಡಿನಲ್ಲಿ ಎಲ್ಲಕಡೆಗೂ ಬಹಳ ಬೆಳೆಯಿತು. ಆಮೇಲೆ ಅವನು ಕರ್ನಾಟಕಕ್ಕೆ ಹಿಂದಿರುಗಿ ಬರುವವನಾದನು. ಬರುವ ಕಾಲದಲ್ಲಿ ಬೆಂಗಳೂರಿನ ಸಮೀಪದಲ್ಲಿರುವ ಕ್ಲೋಸಪೇಟೆ ಎಂಬ ಗ್ರಾಮದಲ್ಲಿ ಕೆಲವು ಕಾಲ ವಾಸಿಸಿದನು. ಅಲ್ಲಿ ಒಂದು ಪರ್ವತ ಪ್ರದೇಶವಿದ್ದು ಅಲ್ಲಿ ಅವನು ತನ್ನ ಆಚರಣೆಗಳನ್ನು ಮುಂದುವರಿಸಿದಂತೆ ತೋರುತ್ತದೆ. ಆದ್ದರಿಂದ ಈ ಸ್ಥಾನದಲ್ಲಿ ರೇವಣಸಿದ್ಧನ ದೇವಾಲಯವಾಗಿರುತ್ತದೆ. ಈ ಭಾಗವು ಈಗಲೂ ಪುಣ್ಯಸ್ಥಳವೆಂದು ಜನರಿಂದ ಆದರಿಸಲ್ಪಡುತ್ತದೆ. ಈ ಭಾಗದಲ್ಲಿ ಬಹುಜನರು ವೀರಶೈವ ಧರ್ಮವನ್ನು ಸ್ವೀಕರಿಸಿದ್ದರಿಂದ ರೇವಣಸಿದ್ಧೇಶ್ವರನ ಮಹತ್ವವು ಈ ನಾಡಿನಲ್ಲಿಯೂ ಬೆಳೆಯಿತು. ಮುಂದೆಯಾದರೂ ರೇವಣಸಿದ್ಧೇಶ್ವರನು ಕಾಲ ಕಾಲಕ್ಕೆ ಈ ಸ್ಥಳಕ್ಕೆ ಬರುತ್ತಿರಬಹುದೆಂದು ತೋರುತ್ತದೆ. ರೇವಣಸಿದ್ಧೇಶ್ವರನಿಗೆ ರುದ್ರಮುನಿ ಎಂಬ ಒಬ್ಬ ಮಗನಾಗಿದ್ದು ಅವನೂ ಕೂಡ ಈ ಸ್ಥಳಕ್ಕೆ ಮೇಲಿಂದ ಮೇಲೆ ಬರುತ್ತಿದ್ದನೆಂದು ತೋರುತ್ತದೆ. ಆದ್ದರಿಂದ ಇಲ್ಲಿ ರುದ್ರಮುನಿಯ ದೇವಾಲಯವೂ ಉಂಟಾಗಿರುತ್ತದೆ. ಉತ್ತರ ದೇಶದಲ್ಲಿ ಹೇಗೆ ಮಂಗಳವಾಡವು ವೀರಶೈವರ ಕೇಂದ್ರಸ್ಥಾನವಾಗಿತ್ತೋ ಹಾಗೆಯೇ ಈ ದಕ್ಷಿಣದೇಶದಲ್ಲಿ ಕ್ಲೋಸಪೇಟೆ ವೀರಶೈವರಿಗೆ ಕೇಂದ್ರಸ್ಥಾನವಾಯಿತು.

ಈ ಪ್ರಕಾರ ರೇವಣಸಿದ್ಧೇಶ್ವರನು ಮೈಸೂರು ಪ್ರಾಂತದ ದಕ್ಷಿಣ ಭಾಗ ಮತ್ತು ದ್ರಾವಿಡ ದೇಶಗಳಲ್ಲಿ ತನ್ನ ಮಹತ್ವವನ್ನು ಪ್ರಚುರಗೊಳಿಸಿ ಮರಳಿ ಉತ್ತರ ದೇಶಕ್ಕೆ ಬರುವವನಾದನು. ಅವನು ತನ್ನ ಮೊದಲಿನ ಗ್ರಾಮವಾದ ಮಂಗಳವಾಡಕ್ಕೆ ಬಂದನು. ಅವನು ಇಲ್ಲಿಗೆ ಬಂದ ಬಳಿಕ ಅವನು ಇಲ್ಲಿಂದ ೧೦-೧೨ ಮೈಲು ದೂರವಿರುವ ಸಿದ್ಧನ ಕೆರೆ ಎಂಬ ಹೆಸರಿನ ಒಂದು ಜಲಾಶಯವಿದ್ದು ಇದನ್ನು ರೇವಣಸಿದ್ಧೇಶ್ವರನೇ ನಿರ್ಮಾಣ ಮಾಡಿದ್ದಾನೆಂಬ ಪ್ರತೀತಿ ಇದೆ. ಇಲ್ಲಿ ಅವನು ಅಸಂಖ್ಯ ಜನ ಕೂಲಿಕಾರರನ್ನು ನಿಯಮಿಸಿ ಈ ಕೆರೆ ಕಟ್ಟಿಸುವ ಕಾರ್ಯವನ್ನು ಆರಂಭಿಸಿದನು. ಅವನು ತನ್ನ ಹೆಂಡಿರನ್ನು ಸಹ ಈ ಕೆಲಸಕ್ಕೆ ಹಚ್ಚಿದನು. ರೇವಣಸಿದ್ಧೇಶ್ವರನ ಕೂಡ ಅವನ ಹೆಂಡತಿಯಾದ ಸುಂದರನಾಚಿಯೂ ಬಂದಿದ್ದಳು. ಕೆರೆಯ ಕೆಲಸಕ್ಕೆ ಅವಳನ್ನು ಸಹ ರೇವಣಸಿದ್ಧೇಶ್ವರನು ನಿಯೋಜಿಸಲಾಗಿ ಅವಳು ಮಣ್ಣು ಹೊರುವ ಇಂಥ ಕೆಲಸವನ್ನು ನಾನು ಎಂದೂ

ಮಾಡಿಲ್ಲ, ಈ ಕೆಲಸ ನನ್ನಿಂದಾಗದು. ನಾನು ನನ್ನ ತಂದೆಯ ಮನೆಗೆ ತಿರುಗಿ ಹೋಗುವೆನೆಂದು ರೇವಣಸಿದ್ಧೇಶ್ವರನಿಗೆ ತಿಳಿಸಿದಳು. ಆಗ ಅವಳು ಗರ್ಭಿಣಿಯಾಗಿದ್ದರಿಂದ ರೇವಣಸಿದ್ಧೇಶ್ವರನು ಅವಳಿಗೆ ನೀನು ನಿನ್ನ ತವರೂರಿಗೆ ಹೋಗಬಹುದು. ಆದರೆ ನನ್ನದೊಂದು ವಸ್ತುವು ನಿನ್ನ ಗರ್ಭದಲ್ಲಿ ಇದೆ. ಅದನ್ನು ನನಗೆ ತಿರುಗಿ ಕೊಡಬೇಕೆಂದು ಅಜ್ಞಾಪಿಸಿದನು. ಆಗ ಸುಂದರನಾಚಿಯು ಮೂರು ತಿಂಗಳು ಗರ್ಭಿಣಿಯು ಇದ್ದಳು. ರೇವಣಸಿದ್ಧನು ತನ್ನ ಕಯ್ಯಿಂದ ಅವಳ ಗರ್ಭವನ್ನು ತಡವರಿಸಲಾಗಿ ಆ ಗರ್ಭವು ಹೊರಗೆ ಬಂದಿತು ಆಗ ರೇವಣಸಿದ್ಧೇಶ್ವರನು ಆ ಪಿಂಡವನ್ನು ಪೃಥ್ವಿಯಲ್ಲಿ ಹುದುಗಿಸಿ ಅದನ್ನು ಜೋಕೆ ಮಾಡಿದನು. ಮುಂದೆ ಆರು ತಿಂಗಳುಗಳಾದ ಮೇಲೆ ಹುಗಿಯಲ್ಪಟ್ಟ ಆ ಪಿಂಡದಿಂದ ಒಬ್ಬ ಬಾಲಕನು ಪೃಥ್ವಿಯೊಳಗಿಂದ ಹೊರಬಿದ್ದನು. ಅವನಿಗೆ ರೇವಣಸಿದ್ಧೇಶ್ವರನು ರುದ್ರಮುನಿ ಎಂಬ ಹೆಸರನ್ನಿಟ್ಟನು. ಈ ರುದ್ರಮುನಿಯು ಅವನಲ್ಲಿಯೇ ಜೋಕೆಯಾಗಿ ಮುಂದೆ ಒಬ್ಬ ಪ್ರಸಿದ್ಧ ಪುರುಷನಾದನು.

ಈ ಸ್ಥಳದಲ್ಲಿ ರೇವಣಸಿದ್ಧೇಶ್ವರನೂ ರುದ್ರಮುನಿಯೂ ಅನೇಕ ವರ್ಷ ವಾಸ ಮಾಡಿದರು. ಅವರು ಕನಿಷ್ಟ ೧೦-೧೭ ವರ್ಷಗಳ ವರೆಗೆ ಅಲ್ಲಿ ಇದ್ದಿರ ಬಹುದು.

ಈ ಕಾಲದಲ್ಲಿ ರೇವಣಸಿದ್ಧೇಶ್ವರನು ಈ ಸ್ಥಳದಲ್ಲಿ ಸುಮ್ಮನಿಯಾಗಿ ಕಾಲಕಳೆದಿರುವದಿಲ್ಲ. ಅವನು ತನ್ನ ಸ್ಥಾನದಲ್ಲಿ ರುದ್ರಮುನಿಯನ್ನು ನೇಮಿಸಿ ತಾನು ಆಗಿಂದಾಗ್ಗೆ ಅನೇಕ ದೇಶಗಳಲ್ಲಿ ಸಂಚರಿಸಹತ್ತಿದನು.

ಅವನು ಮೊದಲು ಶ್ರೀಶೈಲಪ್ರಾಂತಕ್ಕೆ ಹೋಗಿ ಅಲ್ಲಿ ಧರ್ಮ ಪ್ರಸಾರ ಕಾರ್ಯ ಮಾಡಿದನು. ಮುಂದೆ ಅವನು ಉತ್ತರ ಪ್ರದೇಶದ ಕಡೆಗೆ ತೆರಳಿ ಕೇದಾರ ಕ್ಷೇತ್ರವನ್ನು ಸಂದರ್ಶಿಸಿದನು. ಈ ಸ್ಥಳದಲ್ಲಿ ಈಗಲೂ 'ರೇವಣತಲಾವ' ಎಂಬ ಹೆಸರಿನ ಕೆರೆಯು ಇರುತ್ತದೆ. ರೇವಣಸಿದ್ಧೇಶ್ವರನ ಮೂಲಕವೇ ಈ ಕೆರೆಯು ಆಗಿರುವದರಿಂದ ಅದಕ್ಕೆ ಅವನ ಹೆಸರು ಪ್ರಾಪ್ತವಾಗಿರಬಹುದು.

ಈ ಮೇರೆಗೆ ರೇವಣಸಿದ್ಧೇಶ್ವರನು ಉತ್ತರ ದೇಶದ ಪ್ರವಾಸವನ್ನು ತೀರಿಸಿಕೊಂಡು ತಿರುಗಿ ಮರಗಳವಾಡಕ್ಕೆ ಬಂದನು. ಆಗ ಅವನು ಅಲ್ಲಿ ಒಂದು ಸಿಂಹಾಸನ ಪೀಠವನ್ನು ಸ್ಥಾಪಿಸಿದನೆಂದು ತೋರುತ್ತದೆ. ಹೀಗೆ ಪೀಠವನ್ನು ಸ್ಥಾಪಿಸುವದರ ಉದ್ದೇಶವು ಲಿಂಗದೀಕ್ಷೆಯನ್ನು ಜನರಿಗೆ

ಕೊಟ್ಟು ನಾಡಿನಲ್ಲಿ ಧರ್ಮ ಪ್ರಸಾರ ಮಾಡುವದೇ ಆಗಿತ್ತು. ಆದರೆ ಈ ಪೀಠದ ಮೇಲೆ ತಾನು ಆರೋಹಣ ಮಾಡದೆ ತನ್ನ ಮಗನಾದ ರುದ್ರ ಮುನಿಗೆ ಪಟ್ಟಾಧಿಕಾರವನ್ನು ಕೊಟ್ಟನು. ಈ ಕಾಲದಲ್ಲಿ ಹಾವಿನಹಾಳ ಕಲ್ಲಯ್ಯನು ವಚನಕಾರನೆನಿಸಿಕೊಂಡು ಪ್ರಸಿದ್ಧನಾಗಿದ್ದನು. ರೇವಣಸಿದ್ಧನು ತನ್ನ ಮಗ ರುದ್ರಮುನಿಯು ಕಯ್ಯಿಂದ ಅವನಿಗೆ ಲಿಂಗದೀಕ್ಷೆಯನ್ನು ಕೊಡಿಸಿದನು.

ಮುಂದೆ ಮಧ್ಯ ಕರ್ನಾಟಕದಲ್ಲಿ ಉಜ್ಜನಿಯ ಮರುಳ ಸಿದ್ಧನು ಅತ್ಯಂತ ಖ್ಯಾತಿಯನ್ನು ಹೊಂದಿದವನಾಗಿದ್ದನು. ಅವನು ಮೂಲದಲ್ಲಿ ಅಸ್ಪೃಶ್ಯನು. ಆದರೂ ಅವನು ಭಕ್ತಾಗ್ರಣಿ ಎಂದು ನಾಡಿನಲ್ಲಿ ಪ್ರಸಿದ್ಧ ನಾಗಿದ್ದನು. ಅವನೂ ಕೂಡ ವೀರಶೈವ ಧರ್ಮದ ವಿಷಯವಾಗಿ ಜಾಗ್ರುತಿಯನ್ನು ಹುಟ್ಟಿಸುತ್ತ ಇದ್ದನು. ಅವನು ವಿಧಿಯುಕ್ತವಾಗಿ ಲಿಂಗ ಧಾರಣವನ್ನು ಹೊಂದಬೇಕೆಂದು ಬಯಸಿ ರೇವಣಸಿದ್ಧೇಶ್ವರನಲ್ಲಿಗೆ ಬಂದು ಅವನಿಂದ ದೀಕ್ಷೆಯನ್ನು ಹೊಂದಿದನು.

ಈ ಕಾಲದಲ್ಲಿ ರಾಜಕೀಯ ಸ್ಥಿತಿಯಲ್ಲಿ ಕ್ರಾಂತಿಯುಂಟಾಗಹತ್ತಿತ್ತು. ಬಿಜ್ಜಳನು ದಿನೇ ದಿನೇ ಪ್ರಬಲನಾಗುತ್ತ ಚಾಲುಕ್ಯ ರಾಜ್ಯದ ಅಪಹರಣ ಕಾರ್ಯದಲ್ಲಿ ಮಗ್ನನಾಗಿದ್ದನು. ಈ ಕಾಲದಲ್ಲಿ ರೇವಣಸಿದ್ಧೇಶ್ವರನು ಮಂಗಳ ವಾಡವನ್ನು ಬಿಟ್ಟು ಕಾಶೀಪಟ್ಟಣದಲ್ಲಿ ವಾಸಮಾಡುತ್ತಿದ್ದನು. ಅವನು ಇಲ್ಲದಕಾಲದಲ್ಲಿ ಮಂಗಳವಾಡದಲ್ಲಿ ರುದ್ರಮುನಿಯು ಇರುತ್ತಿದ್ದನು. ಈ ಸಂದರ್ಭದಲ್ಲಿ ರೇವಣಸಿದ್ಧೇಶ್ವರನು ತನ್ನ ಅಗಾಧವಾದ ಕತ್ತಿಯನ್ನು ಮಾಸ ನೂರು ಮಡುವಿನಲ್ಲಿ ಒಗೆದದ್ದು ಬಿಜ್ಜಳನಿಗೆ ತಿಳಿಯಿತು. ಈ ಕತ್ತಿಯನ್ನು ಸಂಪಾದಿಸಿದಲ್ಲಿ ತಾನು ಅಜಿಂಕ್ಯನಾಗುವನೆಂದು ಅವನಿಗೆ ತೋರಿ ಅದನ್ನು ಮಡುವಿನಿಂದ ಹೊರಗೆ ತೆಗೆಯಲು ಬಹಳ ಪ್ರಯತ್ನಿಸುತ್ತಾ ಇದ್ದನು. ಆದರೆ ಆ ಕತ್ತಿಯನ್ನು ಹೊರಗೆ ಎತ್ತಿ ತರುವದೇ ಅಸಾಧ್ಯವಾಯಿತು. ಅದನ್ನು ಮುಟ್ಟಿದ ಕೂಡಲೆ ಅದು ಸರ್ಪದಂತೆ ಕಣ್ಣಿಗೆ ಭಾಸವಾಗು ವದು. ಸಮೀಪದಲ್ಲಿ ಒಂದು ಗಿಡವಿದ್ದು ಅಲ್ಲಿ ಯಕ್ಷ ದಂಪತಿಗಳು ತಿಗು ಣಿಗಳಾಗಿ ಈ ಸ್ಥಳಕ್ಕೆ ಬಂದವರನ್ನು ಕೊಂದುಬಿಡುತ್ತಿದ್ದವು. ಇದನ್ನು ರೇವಣನು ತಿಳಿದು ತನ್ನ ಹಣೆಗಣ್ಣಿನಿಂದ ಅವುಗಳನ್ನು ಸುಟ್ಟು ಕರಕು ಮಾಡಿದನು. ಆಗ ಅವು ಕಬ್ಬಿಣ ಗುಂಡುಗಳಾದವು. ಅದರಲ್ಲಿ ಒಂದನ್ನು ಕಠಾರಿಯನ್ನಾಗಿಯೂ ಬೇರೊಂದನ್ನು ಕತ್ತಿಯನ್ನಾಗಿಯೂ ಮಾಡಿದನು. ಕತ್ತಿಯನ್ನಾಗಿ ಮಾಡಿದ್ದನ್ನು ಅವನು ಮಡುವಿನಲ್ಲಿ ಒಗೆದಿದ್ದನು.

ಅವನು ಮುಂದೆ ಜಯಂತಿ ಪಟ್ಟಣಕ್ಕೆ ಬಂದ ಕಾಲದಲ್ಲಿ ಅರಸನಾದ ವಿಕ್ರಮಾದಿತ್ಯನಿಂದ ಬಹಳ ಮನ್ನಿಸಲ್ಪಟ್ಟನು. ತನ್ನನ್ನು ಮನ್ನಿಸಿದ ವಿಕ್ರಮಾದಿತ್ಯನಿಗೆ ಸರ್ವಸಿದ್ಧಿಪ್ರದವಾದ ಈ ಕಠಾರಿಯನ್ನು ರೇವಣಸಿದ್ಧೇಶ್ವರನು ಕೊಟ್ಟನು. ಈ ವಿಕ್ರಮಾದಿತ್ಯನು ಈ ಭಾಗವನ್ನು ಆಳುತ್ತಿದ್ದ ಗುತ್ತರಸ ಮನೆತನದ ವಿಕ್ರಮಾದಿತ್ಯನೇ ಇದ್ದಿರಬಹುದು.

ಹೀಗಿರಲು ಒಂದು ದಿವಸ ಬಿಜ್ಜಳನು ಆಸ್ಥಾನದಲ್ಲಿದ್ದಾಗ ರೇವಣಸಿದ್ಧನು ಮಾಸನೂರು ಮಡುವಿನಲ್ಲಿ ಒಗೆದ ಕತ್ತಿಯ ವಿಷಯವು ಹೊರಬಿತು. ಆಗ ಅದನ್ನು ಹೊರಗೆ ತೆಗೆಯುವವರು ಯಾರಾದರೂ ಇರುವರೇ? ಎಂದು ಪ್ರಶ್ನೆ ಮಾಡಲು ಇದನ್ನು ತೆಗೆಯುವದಕ್ಕೆ ಕರ್ಪರನೆಂಬ ಯೋಗಿಯು ಮುಂದಾದನು. ಅವನು ೧೨ ಸಾವಿರ ಹೆಣ್ಣುಗಳ ಬಲಿಕೊಟ್ಟಲ್ಲಿ ಈ ಕತ್ತಿಯನ್ನು ತಾನು ಹೊರಗೆ ತೆಗೆಯುವೆನೆಂದನು. ಇದಕ್ಕೆ ಬಿಜ್ಜಳನು ಒಪ್ಪಿಕೊಳ್ಳಲು ದೇಶದಲ್ಲಿದ್ದ ಹೆಣ್ಣುಮಕ್ಕಳನ್ನು ಅವನು ಎಳೆತರಿಸಹತ್ತಿದನು. ಹೀಗೆ ಕಡೆಗೆ ಒಬ್ಬಳು ಮಾತ್ರ ಕಡಿಮೆಯಾದಳು. ಆಗ ರೇವಣಸಿದ್ಧನ ಮಗಳಾದ ರೇವಣದೇವಿಯನ್ನು ಅವನು ಹಿಡಿತರಿಸಿದನು. ಈ ಆಪತ್ತಿನಿಂದ ತನ್ನನ್ನು ಕಾಪಾಡಬೇಕೆಂದು ಅವಳ ತಾಯಿಯು ರೇವಣಸಿದ್ಧನನ್ನು ಪ್ರಾರ್ಥಿಸಿಕೊಂಡಳು. ಅವಳ ಕೂಗು ಕಾಶಿಯಲ್ಲಿದ್ದ ರೇವಣನಿಗೆ ಕೇಳಿಸಿತು. ಆಗ ಅವನು ವಿಮಾನಮಾರ್ಗವಾಗಿ ಮಂಗಳವಾಡಕ್ಕೆ ಬಂದು ನಡೆದ ಸಂಗತಿಗಳನ್ನು ತಿಳಿದು, ಆ ಮಡುವಿದ್ದ ಕಡೆಗೆ ಬಂದು ಅಲ್ಲಿದ್ದ ಕತ್ತಿಯನ್ನು ಹೊರಗೆ ತೆಗೆದು ಬಿಜ್ಜಳನಿಗೆ ಒಪ್ಪಿಸಿದನು.

ಮುಂದೆ ರೇವಣಸಿದ್ಧೇಶ್ವರನು ಕರ್ನಾಟಕ ದೇಶವನ್ನು ಬಿಟ್ಟು ಕೊಲ್ಲಿಪಾಕಿಗೆ ಹೋಗಬೇಕೆಂದು ನಿರ್ಧರಿಸಿದನು. ಆದರೆ ಅದಕ್ಕೂ ಪೂರ್ವದಲ್ಲಿ ಅವನು ಸೊನ್ನಲಗಿ ಎಂದರೆ ಸೊಲ್ಲಾಪುರಕ್ಕೆ ಆಗಮಿಸಿದನು. ಅವನು ಗ್ರಾಮದ ಗಡಿಯನ್ನು ಸಮೀಪಿಸಲು ಈ ಗ್ರಾಮದಲ್ಲಿ ಒಬ್ಬ ಮಹಾಪುರುಷನು ಮುಂದೆ ಉಗಮಿಸುವನೆಂದು ಭವಿಷ್ಯ ಹೇಳಿದನು. ಅವನು ಮುದ್ದುಗೌಡನ ಮಗನಾಗಿ ಹುಟ್ಟುವನೆಂತಲೂ ಹೇಳಿ, ರೇವಣಸಿದ್ಧನು ಅವನನ್ನೂ ಅವನ ಹೆಂಡತಿ ಚಾಮಲದೇವಿಯನ್ನೂ ಕಂಡು ನಿಮ್ಮಿಂದ ಒಬ್ಬ ಮಹನುಭಾವನು ಮುಂದೆ ಉದಯವಾಗಿ ಈ ನಾಡನ್ನು ಪುನೀತ ಮಾಡುವನೆಂದು ಹರಸಿದನು. ಆಗ ಪಟ್ಟಣಿಗರು ಅನೇಕ ಪವಾಡಗಳನು ಮಾಡಿದ ರೇವಣಸಿದ್ಧೇಶ್ವರನನ್ನು ಸೊನ್ನಲಿಗೆಯಲ್ಲಿಯೇ ಇರಬೇಕೆಂದು ಅಪೇಕ್ಷಿಸಿದರು.

ರೇವಣಸಿದ್ಧನಾದರೂ ಸೊನ್ನಲಿಗೆಯು ಪುಣ್ಯ ಭೂಮಿ ಎಂದು ತಿಳಿದು ಪಟ್ಟಣದ ನೆರೆಯಲ್ಲಿ ಒಂದು ನಿಬಿಡವಾದ ಕಾನನವಿದ್ದು ಅದನ್ನು ತನ್ನ ವಾಸಸ್ಥಳವನ್ನಾಗಿ ಮಾಡಿಕೊಂಡನು. ಅದರ ನೆರೆಯಲ್ಲಿ ಅವನು ಒಂದು ಜಲಾಶಯವನ್ನು ಉಂಟುಮಾಡಿ ಅಲ್ಲಿಯೇ ಇರುತ್ತಿದನು. ಜನರು ಅವನಿಗೋಸ್ಕರ ಒಂದು ದೇವಾಲಯವನ್ನು ಸಹ ಕಟ್ಟಿಸಿಕೊಟ್ಟರು. ಇದು ರೇವಣಸಿದ್ಧನ ದೇವಾಲಯವೆಂದು ಈಗಲೂ ಪ್ರಸಿದ್ಧವಾಗಿದೆ. ಹೀಗೆ ರೇವಣಸಿದ್ಧನು ಕೆಲಕಾಲ ಇಲ್ಲಿದ್ದು ಮುಂದೆ ಅವನು ಕರ್ನಾಟಕ ಪ್ರಾಂತವನ್ನು ಬಿಟ್ಟುಕೊಟ್ಟು ಕೊಲ್ಲಿಪಾಕಿಗೆ ತೆರಳಿದನು. ಅಲ್ಲಿ ಅವನು ಯಾವ ಸೋಮೇಶ್ವರ ಲಿಂಗದಲ್ಲಿ ಮೊದಲು ಉದ್ಭವಿಸಿದ್ದನೋ ಅದೇ ಲಿಂಗದಲ್ಲಿ ಅವನು ಸಾಮರಸ್ಯವನ್ನು ಹೊಂದಿದನು.

ರೇವಣಸಿದ್ಧೇಶ್ವರನು ವೀರಶೈವ ಧರ್ಮಪ್ರಸಾರ ಕಾರ್ಯಗಳಲ್ಲಿ ಬಹು ಮಹತ್ವದ ಸ್ಥಾನವನ್ನು ಹೊಂದಿದ್ದಾನೆ. ಅವನು ಹಿಂದುಸ್ಥಾನದಲ್ಲಿ ಅನೇಕ ಭಾಗಗಳಲ್ಲಿ ಸಂಚರಿಸಿದನು. ಅವನು ಹೋದಲ್ಲೆಲ್ಲ ಜನರು ಅವನ ವಿಷಯವಾಗಿ ಆದರವನ್ನು ವಹಿಸಿದವರಾಗಿ ಅವನನ್ನು ಸನ್ಮಾನಿಸಿದ್ದಾರೆ. ಅವನು ಚಾಲುಕ್ಯರ ವಿಕ್ರಮಾದಿತ್ಯನ ತರುವಾಯ ಅಂದರೆ ೧೧೨೬ನೇ ಇಸ್ವಿಯಾದನಂತರ ಪ್ರಸಿದ್ಧಿಗೆ ಬಂದು ಸುಮಾರು ೨೦-೨೫ ವರ್ಷ ಅಂದರೆ ೧೧೪೬ ರ ವರೆಗೂ ಧರ್ಮವೃದ್ಧಿಯ ಕಾರ್ಯಗಳನ್ನು ಮಾಡಿದ್ದಾನೆ. ಈ ಅವಧಿಯ ತರುವಾಯ ಅಂದರೆ ೧೧೪೬ ರಿಂದ ೧೧೬೮ರ ವರೆಗೆ ಬಸವ ಮತ್ತು ಅಲ್ಲಮ ಪ್ರಭುಗಳು ಅವನ ಕಾರ್ಯಗಳನ್ನು ಮುಂದುವರಿಸಿದರು. ಈ ಎಲ್ಲ ಮಹಾನುಭಾವರ ಪ್ರಯತ್ನಗಳ ಫಲವಾಗಿ ವೀರಶೈವ ಧರ್ಮವು ಕರ್ನಾಟಕದಲ್ಲಿ ಈ ಕಾಲದಲ್ಲಿ ಬೆಳೆದುಬಂದಿತು.

ರೇವಣಸಿದ್ಧೇಶ್ವರನು ೧೪೦೦ ವರ್ಷ ಪೃಥ್ವಿಯಲ್ಲಿ ಜೀವಿಸಿದನೆಂದು ಒಂದು ಐತಿಹ್ಯವಿದೆ. ಈತನ ಚರಿತ್ರ ಗ್ರಂಥಗಳಲ್ಲಿ ಈ ಸಂಗತಿಯು ಯಾವಾಗಲೂ ಉಲ್ಲೇಖಿಸಲ್ಪಡುತ್ತದೆ. ಇವನು ಅಗಸ್ತ್ಯನಿಗೆ ಲಿಂಗಧಾರಣೆ ಮಾಡಿದನೆಂತಲೂ ಅವನು ಅಗಸ್ತ್ಯನ ಕೂಡ ಲಂಕೆಗೆ ಹೋಗಿ ಅಲ್ಲಿ ಕೋಟ್ಯಾವಧಿ ಲಿಂಗಗಳನ್ನು ಸ್ಥಾಪಿಸಿದನೆಂತಲೂ ವಿಭೀಷಣನು ರೇವಣಸಿದ್ಧೇಶ್ವರನ ಕೂಡ ಮಂಗಳವಾಡಕ್ಕೆ ಬಂದಿದ್ದನೆಂತಲೂ ಹೀಗೆ ಇವನ ಚರಿತ್ರೆಯಲ್ಲಿ ಉಲ್ಲೇಖಗಳು ದೊರೆಯುತ್ತವೆ. ಆದರೆ ರೇಣುಕ ಮತ್ತು ರೇವಣಸಿದ್ಧ ಇವರು ಬೇರೆ ಬೇರೆ ಪುರುಷರೆಂದು ತೋರುತ್ತದೆ. ಇವರಲ್ಲಿ

ರೇಣುಕನು ಪುರಾತನ ಕಾಲದವನಿದ್ದು ಅವನಿಗೆ ಸಂಬಂಧಿಸಿದ ವಿಷಯಗಳನ್ನು ರೇವಣಸಿದ್ಧೇಶ್ವರನಿಗೆ ಜೋಡಿಸಿದ ಹಾಗೆ ಕಂಡುಬರುತ್ತದೆ. ವಿಭೀಷಣನು ರಾಮ ರಾವಣನ ಕಾಲದವನಿದ್ದು ಅವನು ಬಿಜ್ಜಳನ ಕಾಲದಲ್ಲಿದ್ದ ರೇವಣಸಿದ್ಧೇಶ್ವರನಿಗೆ ಸಂಬಂಧಿಸಿದವನಾಗುವದಿಲ್ಲ. ಆದರೆ ಜನರಲ್ಲಿ ಅವರು ಸಮಕಾಲೀನರೆಂಬ ವಿಷಯದ ಬಗ್ಗೆ ವಿಶ್ವಾಸವನ್ನುಂಟುಮಾಡಬೇಕೆಂದು ರೇವಣಸಿದ್ಧೇಶ್ವರನು ರೇವಣನೆಂಬ ಹೆಸರಿನಿಂದ ೧೪೦೦ ವರ್ಷ ಜೀವಿಸಿದನೆಂದು ಒಂದು ಕಾಲ್ಪನಿಕ ಕಥೆಯನ್ನು ಹುಟ್ಟಿಸಿದ ಹಾಗೆ ನಮಗೆ ತೋರುತ್ತದೆ. ಆದ್ದರಿಂದ ವಿಭೀಷಣನಿಗೆ ಸಂಬಂಧಿಸಿದ ವಿಷಯಗಳನ್ನು ನಾವು ಈ ಚರಿತ್ರೆಯಲ್ಲಿ ಬಿಟ್ಟುಬಿಟ್ಟಿದ್ದೇವೆ.

ಈಚೆಗೆ ಹೈದ್ರಾಬಾದ ಸಂಸ್ಥಾನದಲ್ಲಿ ಶಿರಿವಾಳ ಎಂಬ ಗ್ರಾಮವಿದ್ದು ಅಲ್ಲಿಯ ಒಂದು ಶಾಸನದಲ್ಲಿ ರೇವಣಸಿದ್ಧೇಶನ ಉಲ್ಲೇಖವು ಬರುತ್ತದೆ. ಈ ಶಾಸನವು ಬಿಜ್ಜಳನು ಘಾತಿಸಲ್ಪಟ್ಟ ಬಳಿಕ ಸುಮಾರು ೧೫-೨೦ ವರ್ಷಗಳ ತರುವಾಯ ಉಂಟಾದದ್ದು ಇದೆ. ಇದರಿಂದ ರೇವಣಸಿದ್ಧೇರನ್ನು ಬಸವಣ್ಣನ ನಂತರ ಪ್ರಸಿದ್ಧಿಗೆ ಬಂದನೆಂದು ಕೆಲವರು ಅಭಿಪ್ರಾಯಪಡುತ್ತಿದ್ದು ಅದನ್ನು ಈ ಶಾಸನವು ಸಮರ್ಥಿಸುತ್ತದೆಂದು ಅವರು ಭಾವಿಸುತ್ತಾರೆ. ಆದರೆ ರೇವಣಸಿದ್ಧನು ಬಿಜ್ಜಳನ ಆಧಿಪತ್ಯದ ಅಂತ್ಯದಲ್ಲಿದ್ದಹಾಗೆ ತೋರುವದಿಲ್ಲ. ಅದಕ್ಕೂ ಪೂರ್ವದಲ್ಲಿಯೇ ಅವನು ಕರ್ನಾಟಕ ದೇಶವನ್ನು ಬಿಟ್ಟು ಹೋಗಿದ್ದಾನೆ. ಆದ್ದರಿಂದ ಈ ಶಾಸನವು ರೇವಣಸಿದ್ಧನದೆಂದು ಹೇಳಲಿಕ್ಕೆ ಬರಲಾರದು. ರೇವಣಸಿದ್ಧನು ಒಬ್ಬ ಪ್ರಸಿದ್ಧ ವ್ಯಕ್ತಿಯಾಗಿದ್ದು ಅವನು ಗತಿಸಿಹೋದಮೇಲೆ ಅನೇಕರು ತಮ್ಮ ಮಕ್ಕಳಿಗೆ ಅವನ ಹೆಸರನ್ನೇ ಇಡುತ್ತಿರಬಹುದು. ಹಾಗೆ ಸಿರಿವಾಳ ಶಾಸನದಲ್ಲಿ ಉಲ್ಲೇಖವಾದ ರೇವಣಸಿದ್ಧನು ಬೇರೊಬ್ಬನಿರಬಹುದೆಂದು ನಮಗೆ ತೋರುತ್ತದೆ. ಆದ್ದರಿಂದ ಈ ಶಾಸನದ ಉಲ್ಲೇಖವನ್ನು ನಾನು ಈ ಚರಿತ್ರೆಯಲ್ಲಿ ಮಾಡಿರುವದಿಲ್ಲ.

ಇವೆರಡು ಸಂದರ್ಭಗಳನ್ನು ಬಿಟ್ಟು ರೇವಣಸಿದ್ಧೇಶ್ವರನ ಚರಿತ್ರೆಯಲ್ಲಿ ಬರುವ ಎಲ್ಲ ಸಂಗತಿಗಳನ್ನು ನಾವು ಈ ಚರಿತ್ರೆಯಲ್ಲಿ ಉಲ್ಲೇಖಿಸಿದ್ದೇವೆ.

ರೇವಣಸಿದ್ಧನ ಬಗ್ಗೆ ಅನೇಕ ಚರಿತ್ರೆಗಳು ಉಂಟಾಗಿರುತ್ತವೆ. ಅವುಗಳನ್ನು ನಾವು ಆಧಾರವಾಗಿಟ್ಟುಕೊಂಡು ಈ ಚರಿತ್ರೆಯನ್ನು ಬರೆದಿದ್ದೇವೆ.

ಆದರೆ ಇದರಲ್ಲಿ ಅನೇಕ ವಿಷಯುಗಳು ಬೀಭತ್ಸ ಮತ್ತು ನೀತಿಗೆ ವಿರುದ್ಧವಾದವುಗಳು ಇದ್ದು ಅಂಥ ಕೃತಿಗಳು ಶಿವಶರಣರಿಂದ ಸಾಧ್ಯವಲ್ಲವೆಂದು ನಮಗೆ ತೋರಿದ್ದರಿಂದ ನಾವು ಅವುಗಳನ್ನು ಇಲ್ಲಿ ವಿವರಿಸುವದನ್ನು ಬುದ್ಧಿಪುರಸ್ಸರವಾಗಿ ಬಿಟ್ಟುಬಿಟ್ಟಿರುತ್ತೇವೆ. ಚರಿತ್ರೆಗಳಲ್ಲಿ ಶುದ್ಧವಾದವುಗಳನ್ನಷ್ಟೇ ನಾವು ಈಗಿನ ಕಾಲದಲ್ಲಿ ಉಲ್ಲೇಖಿಸುವದು ಅವಶ್ಯವಿದೆ. ಯಾವ ಪ್ರಾಂತಗಳಲ್ಲಿ ರೇವಣಸಿದ್ಧನ ಸ್ಥಾನಗಳೆಂದು ಈಗ ನಿಶ್ಚಿತವಾಗಿ ಸಿದ್ಧವಾಗಿರುತ್ತವೆಯೋ ಅವುಗಳನ್ನು ನಾವು ನಂಬಿ ರೇವಣಸಿದ್ಧನು ಅಲ್ಲಿಗೆ ಹೋಗಿರಬಹುದೆಂತಲೂ ನಾವು ತಿಳಿದು ಅಲ್ಲಿ ನಡೆದ ಪುರಾಣೋಕ್ತ ಸಂಗತಿಗಳನ್ನು ಇಲ್ಲಿ ವಿವರಿಸಿದ್ದೇವೆ. ಶಕ್ಯವಿದ್ದಷ್ಟರಮಟ್ಟಿಗೆ ಇತಿಹಾಸದಲ್ಲಿ ನಿಜವೆಂದು ತೋರಿದವುಗಳನ್ನು ನಾವು ಬಿಟ್ಟಿರುವದಿಲ್ಲ. ರೇವಣಸಿದ್ಧೇಶ್ವರನ ಚರಿತ್ರೆಯಲ್ಲಿ ಕೆಲವು ಅಸಂಭಾವ್ಯ ಸಂಗತಿಗಳಿವೆ. ನಾವು ಹಿಂದೆ ಉಲ್ಲೇಖಿಸಿದಂತೆ ೧೪೦೦ ವರ್ಷ ಅವನು ಜೀವಿಸಿದನೆಂಬುದು ಇವುಗಳಲ್ಲಿ ಒಂದಾಗಿದೆ. ಬಹು ಪೂರ್ವಕಾಲದಲ್ಲಿ ರೇಣುಕನೆಂಬ ಹೆಸರಿನಿಂದ ಒಬ್ಬ ಮಹಾನುಭಾವನು ಪ್ರಸಿದ್ಧನಾಗಿದ್ದು ಅವನಿಗೂ ವಿಭೀಷಣ ಮೊದಲಾದವರಿಗೂ ಸಂಬಂಧಪಟ್ಟಿರಬಹುದು. ಇಂಥ ಸಂಗತಿಗಳು ಅಸಂಭಾವ್ಯವೆಂದು ತೋರುವದರಿಂದ ಅವುಗಳನ್ನು ನಾವು ಈಗಿನ ಚರಿತ್ರೆಯಲ್ಲಿ ವಿವರಿಸುವದನ್ನು ಬಿಟ್ಟಿರುತ್ತೇವೆ. ಹೀಗೆ ಕೆಲವು ಮಾರ್ಪಾಡುಗಳನ್ನು ನಾವು ಈ ಚರಿತ್ರೆಯಲ್ಲಿ ಮಾಡಿದ್ದೇವೆ. ಬೇರೆ ವಿಭೂತಿಗಳ ಚರಿತ್ರೆಗಳಲ್ಲಿ ಇಂಥ ಸಂಗತಿಗಳಿದ್ದಿದ್ದರೆ ಅವುಗಳನ್ನು ನಾವು ಉಲ್ಲೇಖ ಮಾಡುವದನ್ನೇ ಬಿಟ್ಟುಬಿಡುತ್ತಿದ್ದೆವು. ಆದರೆ ರೇವಣಸಿದ್ಧೇಶ್ವರನು ಹೀಗಿರದೆ ಅವನು ನಿಜವಾಗಿ ಆಗಿಹೋದ ಮಹಾಪುರುಷನಾಗಿದ್ದಾನೆ. ಆದರಿಂದ ನಾವು ಅವನ ಚರಿತ್ರೆಯಲ್ಲಿ ಇವುಗಳನ್ನು ವಿವರಿಸಿರುವದಿಲ್ಲ. ಇದು ಜನರ ಮನಸ್ಸಿಗೆ ಬರಲಿಕ್ಕಿಲ್ಲ. ಆದರೆ ನಿರ್ವಾಹವಿಲ್ಲದ್ದಕ್ಕೆ ನಾವು ಹೀಗೆ ಮಾಡಬೇಕಾದ್ದರಿಂದ ಅವರು ಇದಕ್ಕೋಸ್ಕರ ನಮ್ಮನ್ನು ಕ್ಷಮಿಸಬೇಕೆಂದು ನಮ್ಮ ಬಿನ್ನಹವಿದೆ.

## ಮರುಳಸಿದ್ಧ.

ರೇವಣಸಿದ್ಧನು ಹೇಗೆ ಪ್ರಸಿದ್ಧ ವ್ಯಕ್ತಿಯಾಗಿದ್ದಾನೋ ಹಾಗೆಯೇ ಮರುಳಸಿದ್ಧನು ವೀರಶೈವ ಸಮಾಜದಲ್ಲಿ ಪ್ರಸಿದ್ಧಿಯನ್ನು ಹೊಂದಿದ್ದಾನೆ. ರೇವಣಸಿದ್ಧೇಶ್ವರನು ಕರ್ನಾಟಕದ ಅನೇಕ ಭಾಗಗಳಲ್ಲಿ ಸಂಚರಿಸಿ ಧರ್ಮವೃದ್ಧಿಯ ಕಾರ್ಯಗಳನ್ನು ಮಾಡಿದನು! ಅದರಂತೆ ಮರುಳಸಿದ್ಧೇಶ್ವರನೂ ಆಚರಿಸಿದ್ದಾನೆ. ರೇವಣಸಿದ್ಧೇಶ್ವರನು ಕರ್ನಾಟಕದ ಉತ್ತರ ಭಾಗದಲ್ಲಿ ಧರ್ಮಪ್ರಸಾರವನ್ನು ಹೆಚ್ಚಾಗಿ ಮಾಡಿದಂತೆ ಮರುಳಸಿದ್ಧೇಶ್ವರನು ಕರ್ನಾಟಕ ಮಧ್ಯಭಾಗದಲ್ಲಿ ಅಂದರೆ ಈಗಿನ ಮೈಸೂರು ಪ್ರಾಂತದ ಉತ್ತರ ಪ್ರದೇಶ ಮತ್ತು ಬಳ್ಳಾರಿ ಜಿಲ್ಹೆಯಲ್ಲಿ ಜಾಗ್ರತಿಯನ್ನು ಹುಟ್ಟಿಸಿದ್ದಾನೆ. ಈತನ ಚರಿತ್ರೆಯಾದರೂ ಅತ್ಯಂತ ಉದ್ಬೋಧಕವಾಗಿರುತ್ತದೆ.

ಮರುಳಸಿದ್ಧೇಶ್ವರನು ರೇವಣಸಿದ್ಧೇಶ್ವರನಿಂದ ವೀರಶೈವ ದೀಕ್ಷೆಯನ್ನು ಹೊಂದಿದನೆಂದು ಅವನ ಚರಿತ್ರೆಯಿಂದ ತಿಳಿದುಬರುತ್ತದೆ. ಆದ್ದರಿಂದ ಅವನು ಬಸವೇಶ್ವರನ ಸಮಕಾಲೀನನಾಗುತ್ತಾನೆ. ಆದರೆ ಅವನು ಬಸವೇಶ್ವರನ ತರುವಾಯ ಅನೇಕ ವರ್ಷ ಜೀವಿಸಿದ್ದನೆಂದು ತಿಳಿದುಬರುತ್ತದೆ. ಆದ್ದರಿಂದ ಅವನು ತನ್ನ ಸುಧಾರಣೆಯ ಕಾರ್ಯಗಳನ್ನು ೧೨ನೇ ಶತಮಾನದ ಕಡೆಯ ಭಾಗದಲ್ಲಿ ಮಾಡಿದಂತೆ ಅನುಮಾನವು ಉಂಟಾಗುತ್ತದೆ.

ಮರುಳಸಿದ್ಧೇಶ್ವರನ ಮೂಲಕ ಈಗಿನ ಉಜ್ಜನಿ ಸಿಂಹಾಸನದ ಸ್ಥಾಪನೆಯಾಗಿರುತ್ತದೆ. ಈ ಉಜ್ಜನಿಯು ಮಧ್ಯಪ್ರಾಂತದ ಪಟ್ಟಣವಾಗಿರದೆ ಬಳ್ಳಾರಿ ಜಿಲ್ಹೆಯಲ್ಲಿ ಇರುತ್ತದೆ.

ಮರುಳಸಿದ್ಧೇಶ್ವರನ ವೈಶಿಷ್ಟ್ಯವೇನೆಂದರೆ ಅವನು ಅಸ್ಪೃಶ್ಯ ಸಮಾಜದಲ್ಲಿ ಜನಿಸಿದವನಾಗಿದ್ದನು. ಈ ಸಂಗತಿಯು ಈಗಿನ ಕಾಲದಲ್ಲಿ ಜನರಲ್ಲಿ ಕೌತುಕವನ್ನುಂಟು ಮಾಡಬಹುದು. ಆದ್ದರಿಂದ ಅನೇಕರು ಅವನು ಅಸ್ಪೃಶ್ಯನಲ್ಲವೆಂದು ತೋರಿಸಲು ಪ್ರಯತ್ನ ನಡಿಸಿದ್ದು ಕಂಡುಬರುತ್ತವೆ. ಆದರೆ ೧೨ನೇ ಶತಮಾನದಲ್ಲಿ ವೀರಶೈವರಲ್ಲಿ ಉಂಟಾದ ಜಾಗ್ರತೆಯ ಪರಿಣಾಮವಾಗಿ ಅಸ್ಪೃಶ್ಯರಲ್ಲಿನೇಕರು ವೀರಶೈವ ಸಮಾಜದಲ್ಲಿ ಉಚ್ಚಸ್ಥಾನವನ್ನು ಹೊಂದಿದ್ದು ಕಂಡುಬರುತ್ತದೆ. ಈ ಸಂಗತಿಯು ಶಿವಶರಣರ ಚರಿತ್ರೆ ಗ್ರಂಥಗಳನ್ನು ಪರಿಶೀಲಿಸಿದಲ್ಲಿ ತಿಳಿದುಬರುತ್ತದೆ.

ಕೆಂಭಾವಿ ಭೋಗಣ್ಣನು ವೀರಶೈವರಲ್ಲಿ ಅತ್ಯಂತ ಪ್ರಸಿದ್ಧಿಯನ್ನು ಹೊಂದಿದ್ದಾನೆ. ಅವನು ಬ್ರಾಹ್ಮಣನಾಗಿದ್ದರೂ ಅಸ್ಪೃಶ್ಯರೊಡನೆ ಅನ್ಯೋದಕ ವ್ಯವಹಾರಗಳನ್ನು ಮಾಡಿದ್ದರಿಂದ ಜನರಿಂದ ಅವನು ಬಹಳ ಹಿಂಸೆಯನ್ನು ಹೊಂದಬೇಕಾಯಿತು. ಆದರೆ ಅವನ ಹೆಸರಿಗೆ ಏನೂ ಕುಂದುಂಟಾಗಲಿಲ್ಲ. ಇಷ್ಟೇ ಅಲ್ಲ, ಅವನು ಶಿವಶರಣರಲ್ಲಿ ಮುಖ್ಯನೆಂದು ಗಣಿಸಲ್ಪಟ್ಟನು. ಉರಿಲಿಂಗಪೆದ್ದಿಯು ವೀರಶೈವರಲ್ಲಿ ಅತ್ಯಂತ ಪ್ರಸಿದ್ಧ ವಚನಕಾರನಿದ್ದಾನೆ. ಅವನು ಉರಿಲಿಂಗದೇವನ ಮಠಕ್ಕೆ ಅಧಿಕಾರಿಯಾಗಿ ನಿಯಮಿಸಲ್ಪಟ್ಟನು. ಈತನ ಹೆಸರಿನ ಮಠವು ಕಲ್ಯಾಣದಲ್ಲಿ ಈಗಲೂ ಇರುತ್ತದೆ. ಇದರಂತೆ ಹರಳಯ್ಯ, ಕಕ್ಕಯ್ಯ, ಚನ್ನಯ್ಯ, ಮಾದಾರ ಧೂಳಯ್ಯ, ಶಿವನಾಗಮಯ್ಯ ಮೊದಲಾದ ಅನೇಕ ಅಸ್ಪೃಶ್ಯರು ಉಚ್ಚ ಶಿವಾನುಭಾವಿಗಳಾಗಿ ವೀರಶೈವ ಸಮಾಜದಲ್ಲಿ ಉನ್ನತ ಸ್ಥಾನವನ್ನು ಹೊಂದಿದ್ದಾರೆ. ಅವರ ಚರಿತ್ರೆಗಳನ್ನು ನಾವು ಶಿವಶರಣರ ಚರಿತ್ರೆ ಗ್ರಂಥಗಳಲ್ಲಿ ಪ್ರಕಟ ಮಾಡಿದ್ದೇವೆ. ಅವರಂತೆಯೇ ಮರುಳಸಿದ್ಧೇಶ್ವರನು ಅಸ್ಪೃಶ್ಯ ಸಮಾಜದಲ್ಲಿ ಜನಿಸಿದ್ದರೂ ಅವನು ಇತರ ವೀರಶೈವ ಶಿವಶರಣರಂತೆ ಪೂಜ್ಯಸ್ಥಾನವನ್ನು ಹೊಂದಿದ್ದಾನೆ. ಇದರಲ್ಲಿ ನಾವು ಆಶ್ಚರ್ಯ ಪಡಬೇಕಾದ ಸಂಗತಿಯು ಏನೂ ಇರುವದಿಲ್ಲ.

ವೀರಶೈವ ದೀಕ್ಷೆಯನ್ನು ಒಬ್ಬ ವ್ಯಕ್ತಿಯು ಹೊಂದಿದ ಬಳಿಕ ಅವನಲ್ಲಿ ಪೂರ್ವಾಶ್ರಯವು ಏನೂ ಉಳಿಯುವದಿಲ್ಲವೆಂದು ಶಿವಶರಣರ ತತ್ವವಿದೆ. ಇಂಥವನಲ್ಲಿ ಮೊದಲಿನ ಜಾತಿಯು ಏನೂ ಉಳಿಯದೆ ಅವನು ಶ್ರೇಷ್ಠ ತರಗತಿಯವನಾಗುತ್ತಾನೆ. ಇದು ಪ್ರಮುಖರ ಮುಖ್ಯ ಸಿದ್ಧಾಂತವಿರುತ್ತದೆ. ಈ ತತ್ವವು ಬಸವೇಶ್ವರನ ಕಾಲದಲ್ಲಿ ಆಚರಣೆಯಲ್ಲಿದ್ದದರಿಂದ ಮರುಳಸಿದ್ಧೇಶ್ವರನಿಗೆ ಒಂದು ಮಹತ್ವದ ಸಿಂಹಾಸನ ಸ್ಥಾನವು ಪ್ರಾಪ್ತವಾಗಿರುತ್ತದೆ. ಇದಕ್ಕೋಸ್ಕರ ಈಗಿನ ವೀರಶೈವರೆಲ್ಲ ಅಭಿಮಾನಪಡತಕ್ಕ ಸಂಗತಿಯಾಗಿರುತ್ತದೆ.

ಮರುಳಸಿದ್ಧ ಕಾವ್ಯ ಎಂಬ ಹೆಸರಿನ ಕಾವ್ಯವನ್ನು ದೇವಕವಿ ಎಂಬ ಕವಿಯಿಂದ ರಚಿಸಲ್ಪಟ್ಟಿರುತ್ತದೆ. ಈ ಕವಿಯು ಇದನ್ನು ೧೫೮೭ ನೇ ಮೇ ತಿಂಗಳಿನಲ್ಲಿ ಪೂರ್ತಿಮಾಡಿದನೆಂದು ಈ ಕಾವ್ಯದಲ್ಲಿ ಉಲ್ಲೇಖವಿದೆ. ಈ ಗ್ರಂಥವು ಈಗ ಅಚ್ಚಾಗಿದ್ದು ಅದನ್ನು ಕೆಲವು ತಾಳೇಗರಿಯ ಪ್ರತಿಗಳ ಸಹಾಯದಿಂದ, ಶ್ರೀಯುತ ಅ. ನ. ಕೃಷ್ಣರಾಯರು ಸಿದ್ಧಪಡಿಸಿದ್ದಾರೆ.

೧೦೮. ಓಂಕಾರವೆಂಬ ಪ್ರಣವದಲ್ಲಿ ದಂಡಜ ತಾರಕೋಭವತಿ, ಓಂ ಆದಿ ರುದ್ರೋಧಿದೇವತಾಃ । ಅಕಾರಂ ಚ ಲಯಂ ಪ್ರಾಪ್ತಿ ಪಂಚಮಂ ಪ್ರಣವಾಂ ಶಿಕ್ಯೈಃ । ಉಕಾರವೆಂಬ ಪ್ರಣವದಲ್ಲಿ ಕುಂಡಲಂಚ ಅರ್ಧ ಚಂದ್ರೊಭವತಿ । ಓಂ ಆದಿ ಈಶ್ವರೋಧಿ ದೇವತಾಃ । ಉಕಾರ ಚ ಲಯ ಪ್ರಾಪ್ತಿ ಷಷ್ಠಮಂ ಪ್ರಣವಾಂ ಶಿಕ್ಯೈಃ । ಮಕಾರವೆಂಬ ಪ್ರಣವದಲ್ಲಿ ದರ್ಪಣಂ ಚ ಜ್ಯೋತಿರೂಪಾ ಭವತಿ, ಓಂ ಆದಿ ಸದಾಶಿವೊಧಿದೇವತಾಃ । ಮಕಾರಂಚ ಲಯಂ ಪ್ರಾಪ್ತಿ ಸಪ್ತಂ ಪ್ರಾಣ ವಾಂಶಿಕ್ಯೈಃ ಅಕಾರಂ ಚ ಉಕಾರಂಚ ಮಕಾರ ಧನಂಜಯಂ । ಇದಮೇಕ ಸಮುತ್ಪನ್ನಂ ಓಂ ಮಿತಿ ಜ್ಯೋತಿರೂಪಕಂ । ಎಂದುದಾಗಿ, ಅಪ್ರಮಾಣ ಕೂಡಲಸಂಗಮದೇವಾ.

೧೦೯. ಇನ್ನು ಪ್ರಣವದ ಲಕ್ಷಣವೆಂತೆಂದಡೆ, ಪ್ರಥಮವು ತಾರಕ ಸ್ವರೂಪವಾಗಿಹುದು. ಎರಡನೆಯದು ದಂಡಕ ಸ್ವರೂಪವಾಗಿಹುದು. ಮೂರನೆಯದು ಕುಂಡಲಾಕಾರವಾಗಿಹುದು. ನಾಲ್ಕನೆಯದು ಅರ್ಧ ಚಂದ್ರಕಾರವಾಗಿಹುದು. ಐದನೆಯದು ದರ್ಪಣಾಕಾರವಾಗಿಹುದು. ಆರನೆಯದು ಜ್ಯೋತಿ ಸ್ವರೂಪವಾಗಿಹುದು. ಇಂತೀ ಪ್ರಣವವು ಅತ್ಯಂತ ಗೋಪ್ಯವಾಗಿಹುದು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೧೧೦. ।ಸಾಕ್ಷಿ॥ ಪ್ರಥಮಂ ತಾರಕಾರೂಪಂ । ದ್ವಿತೀಯಂ ದಂಡ ಉಚ್ಯತೆ । ತೃತೀಯಂ ಕುಂಡಲಾಕಾರಂ । ಚತುರ್ಥಚಾರ್ಧ ಚಂದ್ರಕಂ । ಪಂಚಮಂ ದರ್ಪಣಾಕಾರಂ। ಷಷ್ಠಮಂ ಜ್ಯೋತಿ ರೂಪಕಂ । ಇತಿ ಪ್ರಣವ ವಿಜ್ಞಾಯಂ । ತತ್ತ್ವದ್ಗೋಪ್ಯವರಾನನೆ ಎಂದುದಾಗಿ, ಅಪ್ರಮಾಣ ಕೂಡಲ ಸಂಗಮದೇವಾ.

೧೧೧. ಇದು ಎಂಟನೆಯ ಪ್ರಣವವೆಂದು, ನಿರಂಜನಾತೀತಾಗಮದಲ್ಲಿ ಆಸಿಪದಾತೀತಾಗಮದಲ್ಲಿ, ಪ್ರಸಿದ್ಧವಾಗಿ ಹೇಳುತ್ತಿಹುದೆಂದು, ಸದ್ಗುರುಸ್ವಾಮಿ ಶಿಷ್ಯಂಗೆ ನಿರೂಪಿಸಿದನು. ಇನ್ನು ದಶಚಕ್ರದ ಉತ್ಪತ್ಯವೆಂತೆಂದಡೆ, ಚಕ್ರಾತೀತಾಗಮೆ. ॥ಶ್ರುತಿ॥ ಅಖಂಡ ಜ್ಯೋತಿರ್ಮಯವಾಗಿಹ ಗೋಳಕಾಕಾರ ಪ್ರಣವದ ನೆನಹು ಮಾತ್ರದಲ್ಲಿ, ಅಣುಚಕ್ರ ಉತ್ಪತ್ಯ, ಅಣುಚಕ್ರದಲ್ಲಿ ಪಶ್ಚಿಮಚಕ್ರ ಉತ್ಪತ್ಯ, ಪಶ್ಚಿಮಚಕ್ರದಲ್ಲಿ ಶಿಖಾಚಕ್ರ ಉತ್ಪತ್ಯ, ಶಿಖಾಚಕ್ರದಲ್ಲಿ ಬ್ರಹ್ಮಚಕ್ರ ಉತ್ಪತ್ಯ, ಬ್ರಹ್ಮ ಚಕ್ರದಲ್ಲಿ ಆಜ್ಞಾಚಕ್ರ ಉತ್ಪತ್ಯ, ಆಜ್ಞಾಚಕ್ರದಲ್ಲಿ ವಿಶುದ್ಧಿಚಕ್ರ ಉತ್ಪತ್ಯ,

ವಿಶುದ್ಧಿ ಚಕ್ರದಲ್ಲಿ ಅನಾಹತಚಕ್ರ ಉತ್ಪತ್ತ್ಯ, ಅನಾಹತ ಚಕ್ರದಲ್ಲಿ ಮಣಿ ಪೂರಕಚಕ್ರ ಉತ್ಪತ್ತ್ಯ, ಮಣಿಪೂರಕ ಚಕ್ರದಲ್ಲಿ ಸ್ವಾಧಿಷ್ಠಾನಚಕ್ರ ಉತ್ಪತ್ತ್ಯ, ಸ್ವಾಧಿಷ್ಠಾನ ಚಕ್ರದಲ್ಲಿ ಆಧಾರಚಕ್ರ ಉತ್ಪತ್ತ್ಯ, ನೋಡಾ! ಅಪ್ರಮಾಣ ಕೂಡಲಸಂಗಮದೇವಾ.

೧೧೨. ॥ಅಥರ್ವಣ॥ ಓಂಕಾರಸ್ಯ ಹೃದಯಾಜ್ಞಾನೆ ಅಣುಚಕ್ರೋ ಜನಿತಾ ॥ ಅಣುಚಕ್ರಕೆ ಪಶ್ಚಿಮಂ ಜನಿತಾ । ಪಶ್ಚಿಮ ಚಕ್ರೆ ಶಿಖಾಜನಿತಾ। ಶಿಖಾಚಕ್ರೆ ಬ್ರಹ್ಮೋಜನಿತಾ ಬ್ರಹ್ಮಚಕ್ರೆ ಆಜ್ಞೋಜನಿತಾ । ಆಜ್ಞಾಚಕ್ರೆ ವಿಶುದ್ಧಿಜನಿತಾ । ವಿಶುದ್ಧಿ ಚಕ್ರೆ ಅನಾಹತಂ ಜನಿತಾ । ಅನಾಹತಚಕ್ರೆ ಮಣಿಪೂರಕಂ ಜನಿತಾ । ಮಣಿಪೂರಕಚಕ್ರೆ ಸ್ವಾಧಿಷ್ಠಾನಂ ಜನಿತಾ । ಸ್ವಾಧಿಷ್ಠಾನಚಕ್ರೆ ಆಧಾರಂ ಜನಿತಾ ಎಂದುದಾಗಿ, ಅಪ್ರಮಾಣ ಕೂಡಲ ಸಂಗಮದೇವಾ.

೧೧೩. ಇನ್ನು ದಶಚಕ್ರಂಗಳ ನೆಲೆ ಅದೆಂತೆಂದಡೆ, ಗುದಸ್ಥಾನ ದಲ್ಲಿ ಆಧಾರಚಕ್ರ, ಲಿಂಗಸ್ಥಾನದಲ್ಲಿ ಸ್ವಾಧಿಷ್ಠಾನಚಕ್ರ, ನಾಭಿಸ್ಥಾನ ದಲ್ಲಿ ಮಣಿಪೂರಕಚಕ್ರ, ಹೃದಯಸ್ಥಾನದಲ್ಲಿ ಅನಾಹತಚಕ್ರ, ಕಂಠ ಸ್ಥಾನದಲ್ಲಿ ವಿಶುದ್ಧಿಚಕ್ರ, ಭ್ರೂಮಧ್ಯದಲ್ಲಿ ಆಜ್ಞಾಚಕ್ರ, ಬ್ರಹ್ಮರಂಧ್ರ ದಲ್ಲಿ ಬ್ರಹ್ಮಚಕ್ರ, ಶಿಖಿಯಲ್ಲಿ ಶಿಖಾಚಕ್ರ, ಪಶ್ಚಿಮದಲ್ಲಿ ಪಶ್ಚಿಮಚಕ್ರ, ಅಣುಚಕ್ರ ಏನು ಏನು ಇಲ್ಲದ ಕಾಳುಗತ್ತಲೆ ಕಾಣಾ! ಅಪ್ರಮಾಣ ಕೂಡಲಸಂಗಮದೇವಾ.

೧೧೪. ಇನ್ನು ನವಪದ್ಮ ಉತ್ಪತ್ತ್ಯವದೆಂತೆಂದಡೆ ॥ ನಿರಂಜನಾ ತೀತಾಗಮದಲ್ಲಿ॥ ಶ್ರುತಿ॥ ನಿರಂಜನಾತೀತವೆಂಬ ಪದ್ಮದಲ್ಲಿ ಏಕಪದ್ಮೋ ದ್ಭವತಿಯೆಂದುದಾಗಿ, ನಿರಂಜನಾ ತೀತವೆಂಬ ಪದ್ಮದಲ್ಲಿ ಏಕಪದ್ಮ ಉದ್ಭ ವಿಸಿ, ಪಶ್ಚಿಮ ಚಕ್ರವ ಮುಟ್ಟಿ, ಆ ಪ್ರದರ್ಶನ ವರ್ಣವಾಗಿಹುದು. ಆ ಏಕ ದಳ ಪದ್ಮದಲ್ಲಿ ತ್ರಿದಳ ಪದ್ಮೋದ್ಭವತಿ ಎಂದುದಾಗಿ, ಏಕ ದಳ ಪದ್ಮ ದಲ್ಲಿ ತ್ರಿದಳಪದ್ಮ ಹುಟ್ಟಿ, ಶಿಖಾಚಕ್ರದಲ್ಲಿ ಮಹಾಜ್ಯೋತಿ ವರ್ಣವಾಗಿ ಹುದು. ಆ ತ್ರಿದಳ ಪದ್ಮದಲ್ಲಿ ಸಹಸ್ರದಳ ಪದ್ಮೋದ್ಭವತಿ ಎಂದುದಾಗಿ ಆ ತ್ರಿದಳ ಪದ್ಮದಲ್ಲಿ ಸಹಸ್ರದಳ ಪದ್ಮ ಉದ್ಭವಿಸಿ, ಬ್ರಹ್ಮಚಕ್ರದಲ್ಲಿ ಜ್ಯೋತಿ ವರ್ಣಯುವಾಗಿಹುದು, ಆ ಸಹಸ್ರದಳ ಪದ್ಮದಲ್ಲಿ ದ್ವಿದಳ ಪದ್ಮೋದ್ಭವತಿ ಎಂದುದಾಗಿ, ಆ ಸಹಸ್ರದಳ ಪದ್ಮದಲ್ಲಿ ದ್ವಿದಳ ಪದ್ಮ ಉದ್ಭವಿಸಿ, ಆಜ್ಞಾ

ಚಕ್ರದಲ್ಲಿ ಮಾಣಿಕ್ಯ ವರ್ಣವಾಗಿಹುದು, ಆದ್ವಿದಳ ಪದ್ಮದಲ್ಲಿ ದ್ವಾದಶ ಪದ್ಮದಲ್ಲಿ ಷೋಡಶದಳ ಪದ್ಮೋದ್ಭವತಿ ಎಂದುದಾಗಿ, ಆ ದ್ವಿದಳ ಪದ್ಮ ದಲ್ಲಿ ಷೋಡಶದಳ ಪದ್ಮ ಉದ್ಭವಿಸಿ ವಿಶುದ್ಧಿ ಚಕ್ರದಲ್ಲಿ ಶ್ವೇತವರ್ಣ ವಾಗಿಹುದು ಆ ಷೋಡಶದಳ ಪದ್ಮದಲ್ಲಿ ದ್ವಾದಶದಳ ಪದ್ಮೋದ್ಭವತಿ ಎಂದುದಾಗಿ, ಆ ಷೋಡಶದಳ ಪದ್ಮದಲ್ಲಿ ದ್ವಾದಶದಳ ಪದ್ಮ ಉದ್ಭ ವಿಸಿ, ಅನಾಹತ ಚಕ್ರದಲ್ಲಿ ಕುಂಕುಮ ವರ್ಣವಾಗಿಹುದು, ಆ ದ್ವಾದಶ ದಳ ಪದ್ಮದಲ್ಲಿ ದಶದಳ ಪದ್ಮೋದ್ಭವತಿ ಎಂದುದಾಗಿ, ಆ ದ್ವಾದಶದಳ ಪದ್ಮದಲ್ಲಿ ದಶದಳ ಪದ್ಮಉದ್ಭವಿಸಿ, ಮಣಿಪೂರಕ ಚಕ್ರದಲ್ಲಿ ಕಪ್ಪು ವರ್ಣವಾಗಿಹುದು. ಆ ದಶದಳ ಪದ್ಮದಲ್ಲಿ ಷಡುದಳ ಪದ್ಮೋದ್ಭವತಿ ಎಂದುದಾಗಿ, ಆ ದಶದಳ ಪದ್ಮದಲ್ಲಿ ಷಡುದಳ ಪದ್ಮ ಉದ್ಭವಿಸಿ, ಸ್ವಾಧಿ ಷ್ಠಾನ ಚಕ್ರದಲ್ಲಿ ಪಚ್ಚೆಯ ವರ್ಣವಾಗಿಹುದು. ಆ ಷಡುದಳ ಪದ್ಮ ದಲ್ಲಿ ಚತುರ್ದಳ ಪದ್ಮೋದ್ಭವತಿ ಎಂದುದಾಗಿ. ಆ ಷಡುದಳ ಪದ್ಮ ದಲ್ಲಿ ಚತುರ್ದಳ ಪದ್ಮ ಉದ್ಭವಿಸಿ, ಆಧಾರಚಕ್ರದಲ್ಲಿ ಅಗ್ನಿವರ್ಣವಾಗಿ ಹುದು ನೋಡಾ ಅಪ್ರಮಾಣ ಕೂಡಲಸಂಗಮದೇವಾ॥

೧೧೫. ಇನ್ನು ಏಕಾಕ್ಷರ ತ್ರಿಯಕ್ಷರ, ಸಹಸ್ರಾಕ್ಷರ ಉತ್ಪತ್ಯ ವೆಂತೆಂದಡೆ, ಅಸಿಪದಾತೀತಾಗಮೋ ಶ್ರುತಿ॥ ನಿಶ್ಯಬ್ದವೆಂಬ ಪರಬ್ರಹ್ಮದ ನೆನಹು ಮಾತ್ರದಲ್ಲಿ ಏಕಾಕ್ಷರೋದ್ಭವತಿ ಎಂದುದಾಗಿ, ನಿಃಶಬ್ದವೆಂಬ ಪರ ಬ್ರಹ್ಮದ ನೆನಹು ಮಾತ್ರದಲ್ಲಿ ಏಕಾಕ್ಷರ ಉತ್ಪತ್ಯ ಆ ಏಕಾಕ್ಷರ ತಾನೇ ಆ ತ್ರಿಯಕ್ಷರ ವಾಯಿತ್ತು. ಆತ್ರಿಯಕ್ಷರ ತಾನೆ ಸಹಸ್ರಾಕ್ಷರವಾಯಿತ್ತು ನೋಡಾ, ಅಪ್ರಮಾಣ ಕೂಡಲಸಂಗಮದೇವಾ॥

೧೧೬. ಇನ್ನು ಏಕಾಕ್ಷರ, ತ್ರಿಯಕ್ಷರ, ಸಹಸ್ರಾಕ್ಷರದ ನೆಲೆ, ಅದೆಂ ತೆಂದಡೆ, ಪಶ್ಚಿಮ ಚಕ್ರದಲ್ಲಿ ಏಕಾಕ್ಷರ ನ್ಯಾಸವಾಗಿಹುದು, ಶಿಖಾಚಕ್ರ ದಲ್ಲಿ ತ್ರಿಯಕ್ಷರ ನ್ಯಾಸವಾಗಿಹುದು, ಬ್ರಹ್ಮಚಕ್ರದಲ್ಲಿ ಸಹಸ್ರಾಕ್ಷರ ನ್ಯಾಸವಾಗಿಹುದು, ನೋಡಾ ಅಪ್ರಮಾಣ ಕೂಡಲಸಂಗಮದೇವಾ॥

೧೧೭. ಇನ್ನು ಅಖಂಡ ಜ್ಯೋತಿರ್ಮಯವಾಗಿಹ ಗೋಳಕಾಕಾರ ಪ್ರಣವದ ತಾರಕ ಸ್ವರೂಪ, ದಂಡಕ ಸ್ವರೂಪ, ಕುಂಡಲಾಕಾರ, ಅರ್ಧ ಚಂದ್ರಕ, ದರ್ಪಣಾಕಾರ, ಜ್ಯೋತಿ ಸ್ವರೂಪ ಇವುಗಳ ಕಾಂತಿ ಅದೆಂತೆಂ

ದಡೆ, ಅಖಂಡ ಜ್ಯೋತಿರ್ಮಯವಾಗಿಹ ಗೋಳಕಾಕಾರ ಪ್ರಣವದ ತಾರಕ ಸ್ವರೂಪ, ಅರುವತ್ತು ನೂರು ಕೋಟಿಸೂರ್ಯ-ಚಂದ್ರಾಗ್ನಿ ಪ್ರಕಾಶ ಮಯವಾಗಿಹುದು ನೋಡಾ ಅಪ್ರಮಾಣ ಕೂಡಲಸಂಗಮದೇವಾ॥

೧೧೮. ಅಖಂಡಜ್ಯೋತಿರ್ಮಯವಾಗಿಹ ಗೋಳಕಾಕಾರ ಪ್ರಣವದ ದಂಡಸ್ವರೂಪವು ಎಪ್ಪತ್ತುನೂರು ಕೋಟಿ ಸೂರ್ಯಚಂದ್ರಾಗ್ನಿ ಪ್ರಕಾಶವಾಗಿಹುದು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೧೧೯. ಅಖಂಡ ಜ್ಯೋತಿರ್ಮಯವಾಗಿಹ ಗೋಳಕಾಕಾರ ಪ್ರಣವದ ಕುಂಡಲಾಕಾರವು ಎಂಭತ್ತು ನೂರು ಕೋಟಿ ಸೂರ್ಯ ಚಂದ್ರಾಗ್ನಿ ಪ್ರಕಾಶವಾಗಿಹುದು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೧೨೦. ಅಖಂಡ ಜ್ಯೋತಿರ್ಮಯವಾಗಿಹ ಗೋಳಕಾಕಾರ ಪ್ರಣವದ ಅರ್ಧಚಂದ್ರಕ ಸ್ವರೂಪವು ತೊಂಭತ್ತುನೂರು ಕೋಟಿ ಸೂರ್ಯ ಚಂದ್ರಾಗ್ನಿ ಪ್ರಕಾಶವಾಗಿಹುದು ನೋಡಾ ಅಪ್ರಮಾಣ ಕೂಡಲಸಂಗಮ ದೇವಾ.

೧೨೧. ಅಖಂಡ ಜ್ಯೋತಿರ್ಮಯವಾಗಿಹ ಗೋಳಕಾಕಾರ ಪ್ರಣವಣ ದರ್ಪಣಾಕಾರವು ಸಾವಿರದನೂರು ಕೋಟಿ ಸೂರ್ಯಚಂದ್ರಾಗ್ನಿ ಪ್ರಕಾಶ ವಾಗಿಹುದು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೧೨೨. ಅಖಂಡ ಜ್ಯೋತಿರ್ಮಯವಾಗಿಹ ಗೋಳಕಾಕಾರ ಪ್ರಣವದ ಜ್ಯೋತಿ ಸ್ವರೂಪವು ಅನಂತಕೋಟಿ, ಸೂರ್ಯ ಚಂದ್ರಾಗ್ನಿ ಪ್ರಕಾಶವಾಗಿಹುದು ನೋಡಾ ಅಪ್ರಮಾಣಕೂಡಲಸಂಗಮದೇವಾ.

೧೨೩. ಇನ್ನು ಅತಿ ಸೂಕ್ಷ್ಮಪಂಚಾಕ್ಷರೋತ್ಪತ್ಯ ವೆಂತೆಂದಡೆ, ಅಖಂಡ ಜ್ಯೋತಿರ್ಮಯವಾಗಿಹ ಗೋಳಕಾಕಾರ ಪ್ರಣವದ ತಾರಕ ಸ್ವರೂಪದಲ್ಲಿ ನಕಾರೋತ್ಪತ್ಯ, ಆ ಪ್ರಣವದ ದಂಡಸ್ವರೂಪದಲ್ಲಿ ಮಕಾರೋತ್ಪತ್ಯ, ಆ ಪ್ರಣವದ ಕುಂಡಲಾಕಾರದಲ್ಲಿ ಶಿಕಾರೋತ್ಪತ್ಯ, ಆ ಪ್ರಣವದ ಅರ್ಧಚಂದ್ರಕದಲ್ಲಿ ವಕಾರೋತ್ಪತತ್ಯ, ಆ ಪ್ರಣವದ ದರ್ಪಣಾಕಾರದಲ್ಲಿ ಯಕಾರೋತ್ಪತ್ಯ, ಆ ಪ್ರಣವದ ಜ್ಯೋತಿ ಸ್ವರೂಪದಲ್ಲಿ ಜೀವಾತ್ಮ ಪರಮಾತ್ಮರುತ್ಪತ್ಯ, ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೧೨೪. ಚಿತ್ಪಿಂಡಸಾಕ್ಷಿ॥ ಓಂಕಾರ ತಾರಕರೂಪ ನಕಾರಂ ಚಜಾಯತೆ ಓಂಕಾರಂ ದಂಡರೂಪೆ ಚ ಮಕಾರಂ ಚ ಜಾಯತೆ। ಓಂಕಾರ ಕುಂಡಲಾಕಾರೆ ಶಿಕಾರಂಚ ಜಾಯತೆ, ಓಂಕಾರ ಮರ್ಧಚಂದ್ರ ಚ ವಕಾರಂ ಚ ಜಾಯತೆ, ಓಂಕಾರ ದರ್ಪಣಾಕಾರೆ ಯಕಾರಂಚ ಜಾಯತೆ, ಓಂಕಾರ ಜ್ಯೋತಿರೂಪೆ ಚ ಜೀವಶ್ವರ ಚ ಜಾಯತೆ, ಯೆಂದುದಾಗಿ ಅಪ್ರಮಾಣ ಕೂಡಲಸಂಗಮದೇವಾ.

೧೨೫. ಇನ್ನು ಅತಿ ಸೂಕ್ಷ್ಮ ಪಂಚಾಕ್ಷರದ ನೆಲೆ, ಜೀವಾತ್ಮ ಪರಮಾತ್ಮನ ಕಾಂತಿ ಜೀವಾತ್ಮ ಪರಮಾತ್ಮನ ನೆಲೆ, ಅದೆಂತೆಂದಡೆ, ಅಖಂಡ ಜ್ಯೋತಿರ್ಮಯವಾಗಿಹ ಗೋಳಕಾಕಾರ ಪ್ರಣವದ, ತಾರಕ ಸ್ವರೂಪದಲ್ಲಿ ಅರುವತ್ತುನೂರು ಕೋಟಿ ಸಿಡಿಲೊಡೆದ ಬಯಲ ಪ್ರಕಾಶವಾಗಿ, ನಕಾರವಿಹುದು ನೋಡಾ ಅಪ್ರಮಾಣ ಕೂಡಲ ಸಂಗಮದೇವಾ.

೧೨೬. ಅಖಂಡ ಜ್ಯೋತಿರ್ಮಯವಾಗಿಹ ಗೋಳಕಾಕಾರ ಪ್ರಣವದ ದಂಡಕ ಸ್ವರೂಪದಲ್ಲಿ ಎಪ್ಪತ್ತುನೂರು ಕೋಟಿ ಸಿಡಿಲೊಡೆದ ಬಯಲ ಪ್ರಕಾಶವಾಗಿ ಮಕಾರವಿಹುದು ನೋಡಾ ಅಪ್ರಮಾಣ ಕೂಡಲ ಸಂಗಮದೇವಾ.

೧೨೭. ಅಖಂಡ ಜ್ಯೋತಿರ್ಮಯವಾಗಿಹ ಗೋಳಕಾಕಾರ ಪ್ರಣವದ ಕುಂಡಲಾಕಾರದಲ್ಲಿ ಎಂಭತ್ತು ನೂರು ಕೋಟಿ ಸಿಡಿಲೊಡೆದ ಬಯಲ ಪ್ರಕಾಶವಾಗಿ, ಶಿಕಾರವಿಹುದು ನೋಡಾ ಅಪ್ರಮಾಣ ಕೂಡಲ ಸಂಗಮದೇವಾ.

೧೨೮. ಅಖಂಡ ಜ್ಯೋತಿರ್ಮಯವಾಗಿಹ ಗೋಳಕಾಕಾರ ಪ್ರಣವದ ಅರ್ಧಚಂದ್ರಕದ ಸ್ವರೂಪದಲ್ಲಿ ತೊಂಭತ್ತುನೂರು ಕೋಟಿ ಸಿಡಿಲೊಡೆದ ಬಯಲ ಪ್ರಕಾಶವಾಗಿ ವಕಾರವಿಹುದು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೧೨೯. ಆ ಅಖಂಡ ಜ್ಯೋತಿರ್ಮಯವಾಗಿಹ ಗೋಳಕಾಕಾರ ಪ್ರಣವದ ದರ್ಪಣಾಕಾರದಲ್ಲಿ ಸಾವಿರದರುನೂರು ಕೋಟಿ ಸಿಡಿಲೊಡೆದ ಬಯಲು ಪ್ರಕಾಶವಾಗಿ ಯಕಾರವಿಹುದು ನೋಡಾ ಅಪ್ರಮಾಣ ಕೂಡಲ ಸಂಗಮದೇವಾ.

೧೩೦. ಆ ಅಖಂಡ ಜ್ಯೋತಿರ್ಮಯವಾಗಿಹ ಗೋಳಕಾಕಾರ ಪ್ರಣವದ ಜ್ಯೋತಿ ಸ್ವರೂಪದಲ್ಲಿ ಅನೇಕ ಕೋಟಿ ಸಿಡಿಲೊಡೆದ ಬಯಲ ಪ್ರಕಾಶವಾಗಿ ಜೀವಾತ್ಮ ಪರಮಾತ್ಮರಿಹರು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೧೩೧. ಇನ್ನು ಐವತ್ತೆರಡಕ್ಷರದುತ್ಪತ್ಯವೆಂತೆಂದಡೆ, ಅಖಂಡ ಜ್ಯೋತಿರ್ಮಯವಾಗಿಹ ಗೋಳಕಾಕಾರ ಪ್ರಣವದ ತಾರಕ ಸ್ವರೂಪದಲ್ಲಿಹ ನಕಾರದಲ್ಲಿ ನಕಾರ ಉತ್ಪತ್ಯ, ಅಖಂಡ ಜ್ಯೋತಿರ್ಮಯವಾಗಿಹ ಗೋಳಕಾಕಾರ ಪ್ರಣವದ ದಂಡಸ್ವರೂಪದಲ್ಲಿಹ ಮಕಾರದಲ್ಲಿ ಮಕಾರ ಉತ್ಪತ್ಯ, ಆ ಅಖಂಡ ಜ್ಯೋತಿರ್ಮಯವಾಗಿಹ ಗೋಳಕಾಕಾರ ಪ್ರಣವದ ಕುಂಡಲಾಕಾರದಲ್ಲಿಹ ಶಿಕಾರದಲ್ಲಿ ಶಿಕಾರ ಉತ್ಪತ್ಯ, ಆ ಅಖಂಡ ಜ್ಯೋತಿರ್ಮಯವಾಗಿಹ ಗೋಳಕಾಕಾರ ಪ್ರಣವದ ಅರ್ಧಚಂದ್ರಾಕಾರದಲ್ಲಿ ವಕಾರದಲ್ಲಿ ವಕಾರ ಉತ್ಪತ್ಯ, ಆ ಅಖಂಡ ಜ್ಯೋತಿರ್ಮಯವಾಗಿಹ ಗೋಳಕಾಕಾರ ಪ್ರಣವದ ಪ್ರಣವಾಕಾರದಲ್ಲಿಹ ಯಕಾರದಲ್ಲಿ ಯಕಾರ ಉತ್ಪತ್ಯ, ಈ ಪಂಚಾಕ್ಷರದುತ್ಪತ್ಯ ಗೋಪ್ಯಕ್ಕೆ ಗೋಪ್ಯವಾಗಿಹುದು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೧೩೨. ರಹಸ್ಯೆ || ನಕಾರೆ ನಕರಮುತ್ಪನ್ನಂ ಮಕಾರೆ ಮಕಾರಮುದ್ಭವಂ ಶಿಕಾರೆ ಶಿಕಾರಮುತ್ಪನ್ನಂ ವಕಾರೆ ವಕಾರ ಮುದ್ಭವಂ ಯಕಾರೆ ಯಕಾರಮುತ್ಪನ್ನಂ ಗುಹ್ಯ ಗುಹ್ಯ ಕಮಲಾನನೆ ಎಂದುದಾಗಿ ಅಪ್ರಮಾಣ ಕೂಡಲಸಂಗಮದೇವಾ.

೧೩೩. ಇನ್ನು ಬೀಜಾಕ್ಷರಂಗಳ ನೆಲೆ ಅದೆಂತೆಂದಡೆ, ಆ ಅಖಂಡ ಜ್ಯೋತಿರ್ಮಯವಾಗಿಹ ಗೋಳಕಾಕಾರ ಪ್ರಣವದಲ್ಲಿ ಪ್ರಣವ ಉತ್ಪತ್ಯವಾಗಿ, ಆಜ್ಞಾ ಚಕ್ರಕ್ಕೆ ಬೀಜಾಕ್ಷರವಾಗಿಹುದು. ಆ ಪ್ರಣವದ ದರ್ಪಣಾಕಾರದಲ್ಲಿಹ ಯಕಾರದಲ್ಲಿ ಯಕಾರದುತ್ಪತ್ಯವಾಗಿ, ವಿಶುದ್ಧಿ ಚಕ್ರಕ್ಕೆ ಬೀಜಾಕ್ಷರವಾಗಿಹುದು ಆ ಪ್ರಣವದ ಅರ್ಧಚಂದ್ರಕವಲ್ಲಿಹ ವಾಕ್ಯದಲ್ಲಿಹ ವಕಾರ ಉತ್ಪತ್ಯವಾಗಿ, ಅನಾಹತ ಚಕ್ರಕ್ಕೆ ಬೀಜಾಕ್ಷರವಾಗಿಹುದು ಆ ಪ್ರಣವದ ಕುಂಡಲಾಕಾರದಲ್ಲಿಹ ಶಿಕಾರದಲ್ಲಿಹ ಶಿಕಾರ ಉತ್ಪತ್ಯವಾಗಿ, ಮಣಿಪೂರಕ ಚಕ್ರಕ್ಕೆ ಬೀಜಾಕ್ಷರವಾಗಿಹುದು ಆ ಪ್ರಣವದ ದಂಡ ಸ್ವರೂಪದಲ್ಲಿಹ ಮಕಾರದಲ್ಲಿ ಮಕಾರ ಉತ್ಪತ್ಯ

ವಾಗಿ ಸ್ವಾಧಿಷ್ಠಾನ ಚಕ್ರಕ್ಕೆ ಬೀಜಾಕ್ಷರವಾಗಿಹುದು. ಆ ಪ್ರಣವದ ತಾರಕಾಸ್ವರೂಪದಲ್ಲಿಹ ನಕಾರದಲ್ಲಿ ನಕಾರ ಉತ್ಪತ್ತ್ಯವಾಗಿ, ಆಧಾರಕ್ಕೆ ಬೀಜಾಕ್ಷರವಾಗಿಹುದು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೧೩೪. ಸಾಕ್ಷಿ॥ ಆಧಾರಂ ಚ ನಕಾರಂ ಚ । ಸ್ವಾಧಿಷ್ಠಾನಂ ಮಕಾರಕಂ। ಶಿಕಾರಂ ಮಣಿಪೂರಂ ಚ। ವಾಕಾರಂ ಚ ಅನಾಹತಂ ಯಕಾರಂ ಚ ವಿಶುದ್ಧಿಸ್ಯ । ಆಜ್ಞೆ ಪ್ರಣವಮೇವ ಚ ಎಂದುದಾಗಿ ಅಪ್ರಮಾಣಕೂಡಲಸಂಗಮದೇವಾ.

೧೩೫. ಅಖಂಡ ಜ್ಯೋತಿರ್ಮಯವಾಗಿಹ ಗೋಳಕಾಕಾರ ಪ್ರಣವದ ಜ್ಯೋತಿ ಸ್ವರೂಪದಲ್ಲಿಹ ಜೀವಾತ್ಮ ಪರಮಾತ್ಮನಲ್ಲಿ ಜೀವಹಂಸ, ಪರಮಹಂಸ. ಪರಮಹಂಸ ಉತ್ಪತ್ತ್ಯವಾಗಿ ಅಜ್ಞಾ ಚಕ್ರದ ದ್ವಿದಳ ಪದ್ಮದಲ್ಲಿ ನ್ಯಾಸವಾಗಿಹುದು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೧೩೬. ವಿಶುದ್ಧಿ ಚಕ್ರದ ಯಕಾರ ಬೀಜದಲ್ಲಿ ಅ ಆ ಇ ಈ ಉ ಊ ಋ ೠ ಌ ಏ ಐ ಓ ಔ ಅಂ ಅ: ಎಂಬ ಷೋಡಶ ದಳಗಳುತ್ಪತ್ತ್ಯವಾಗಿ ವಿಶುದ್ಧಿ ಚಕ್ರ ೧೬ ದಳ ಪದ್ಮದಲ್ಲಿ ನ್ಯಾಸವಾಗಿಹುದು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೧೩೭. ಅನಾಹತ ಚಕ್ರದ ವಕಾರಬೀಜದಲ್ಲಿ ಕಖಗಘಙ, ಚಛಜ ಝಞ, ಟಠ ಎಂಬ ದ್ವಾದಶಾಕ್ಷರಂಗಳುತ್ಪತ್ತ್ಯವಾಗಿ, ಅನಾಹತ ಚಕ್ರದ ದ್ವಾದಶ ದಳದ ಪದ್ಮದಲ್ಲಿ ನ್ಯಾಸವಾಗಿಹುದು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೧೩೮. ಮಣಿಪೂರಕ ಚಕ್ರದ ಶಿಕಾರ ಬೀಜದಲ್ಲಿ ಡಢಣ ತಥ ದಧನ ಪಫ ಎಂಬ ದಶಾಕ್ಷರಂಗಳುತ್ಪತ್ತ್ಯವಾಗಿ, ಆ ಮಣಿಪೂರಕ ಚಕ್ರದ ದಶದಳ ಪದ್ಮದಲ್ಲಿ ನ್ಯಾಸವಾಗಿಹುದು ನೋಡಾ ಅಪ್ರಮಾಣ ಕೂಡಲ ಸಂಗಮದೇವಾ.

೧೩೯. ಸ್ವಾಧಿಷ್ಠಾನ ಚಕ್ರದ ಮಕಾರ ಬೀಜದಲ್ಲಿ ಬಭಮಯರಲ ವೆಂಬ ಆರಕ್ಷರಂಗಳುತ್ಪತ್ತ್ಯವಾಗಿ, ಆ ಸ್ವಾಧಿಷ್ಠಾನ ಚಕ್ರದ ಷಡುದಳ ಪದ್ಮದಲ್ಲಿ ನ್ಯಾಸವಾಗಿಹುದು ನೋಡಾ ಅಪ್ರಮಾಣ ಕೂಡಲಸಂಗಮ ದೇವಾ.

೧೪೦. ||ಸಾಕ್ಷಿ|| ಹಂ ಕ್ಷಂ ದ್ವಿವರ್ಣಕಂ ಚೈವ ಪರಮಾತ್ಮಚ ಜಾಯತೆ, ಹಂ ಕ್ಷಂ ದ್ವಿವರ್ಣಕಂಚೈವ ಜೀವಾತ್ಮ ಚ ಜಾಯತೆ, ಅಆ ಇಈ ಉಊ ವರ್ಣಂಚ | ಋೠ ಌೡ ವರ್ಣಕಂ | ಎಐ ಓಔ ಅಂ ಅಃ ವರ್ಣಂ | ಯಕಾರಂಚ ಜಾಯತೆ, ಕಖಗಘ ವರ್ಣಂಚ | ಚಛಜಝಞ ವರ್ನಕಂ | ಟಠ ದ್ವಿವರ್ಣಕಂಚೈವ| ವಕಾರಂಚ ಜಾಯತೆ, ಡಢಣ ತಥರ್ಣಂಚ | ದಧನ ಪಫ ವರ್ಣಕಂ | ಇತ್ಯೇತೆ ದಶವರ್ಣಾನಿ | ಶಿಕಾರಂ ಚ ಜಾಯತೆ | ಬಭಮಯರ ವರ್ಣಂಚ | ಲಯುಶೊ ವರ್ಣಕಂ ತಥಾ | ಇತಿ ಷಡ್ವರ್ಣಕಂ ಚೈವ | ಮಕಾರಂಚ ಜಾಯತೆ, ವಶಷ ಸಚತುರ್ವರ್ಣಂ | ನಕಾರಂಚ ಜಾಯತೆ | ಇತಿವರ್ಣಾಕ್ಷರಂ ನ್ಯಾಸಂ| ಸುಸೂಕ್ಷ್ಮಂ ಕಮಲಾನನೆ | ಎಂದುದಾಗಿ ಅಪ್ರಮಾಣ ಕೂಡಲಸಂಗಮ ದೇವಾ.

೧೪೧. ಐವತ್ತೆರಡು ಅಕ್ಷರ ಅನೇಕ ಆಗಮಂಗಳು, ಆ ಐವತ್ತೆರಡಕ್ಷರವೆ ಅನೇಕ ಭೇದಂಗಳು, ಆಐವತ್ತೆರಡಕ್ಷರವೇ ಅನೇಕ ಪುರಾಣಂಗಳು, ಆ ಐವತ್ತೆರಡಕ್ಷರಪೇ ಅರಿವಿಂದರಿದಡೆ ಐವತ್ತೆರಡಕ್ಷರವಡಗಿ ಆರಕ್ಷರವಾಯಿತ್ತು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೧೪೨. ಇನ್ನು ಷಡ್ವಿಧ ಮುಖಂಗಳುತ್ಪತ್ಯವದೆಂತೆಂದಡೆ, ಅಖಂಡ ಜ್ಯೋತಿರ್ಮಯವಾಗಿಹ ಗೋಳಕಾಕಾರ ಪ್ರಣವದ ತಾರಕಸ್ವರೂಪದಲ್ಲಿ ಸದ್ಯೋಜಾತ ಮುಖೋತ್ಪತ್ಯ, ಆ ಪ್ರಣವದ ದಂಡಸ್ವರೂಪದಲ್ಲಿ ವಾಮದೇವ ಮುಖೋತ್ಪತ್ಯ ಆ ಪ್ರಣವದ ಕುಂಡಲಾಕಾರದಲ್ಲಿ ಅಘೋರ ಮುಖೋತ್ಪತ್ಯ ಆ ಪ್ರಣವದರ್ಧಚಂದ್ರಕದಲ್ಲಿ ತತ್ಪುರುಷ ಮುಖೋತ್ಪತ್ಯ, ಆ ಪ್ರಣವದ ದರ್ಪಣಾಕಾರದಲ್ಲಿ ಈಶಾನ್ಯಮುಖೋತ್ಪತ್ಯ, ಆ ಪ್ರಣವದ ಜ್ಯೋತಿಸ್ವರೂಪದಲ್ಲಿ ನಿರ್ಭಾವ ಮುಖೋತ್ಪತ್ಯ ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೧೪೩. ಧರ್ಮಸೂತ್ರೆ ಸಾಕ್ಷಿ|| ಓಂಕಾರ ತಾರಕರೂಪಿ, ಸದ್ಯೋಜಾತಂಚ ಜಾಯತೆ | ಓಂಕಾರಂ ದಂಡರೂಪೇ ಚ | ವಾಮದೇವಂ ಚ ಜಾಯತೆ | ಓಂಕಾರ ಕುಂಡಲಾಕಾರೆ ಅಘೋರಂಚ ಜಾಯತೆ | ಓಂಕಾರ ಅರ್ಧಚಂದ್ರಚ | ತತ್ಪುರುಷಂ ಚಜಾಯತೆ | ಓಂಕಾರ ದರ್ಪಣಾಕಾರ ಈಶಾನ್ಯಂಚ ಜಾಯತೆ | ಓಂಕಾರ ಜ್ಯೋತಿರೂಪೇಚ | ನಿರ್ಭಾವಂಚ ಚ ಜಾಯತೆ, ಇತಿ ಷಡ್ವಕ್ತ್ರಕಂ ದೇವಿ ಸ್ಥಾನೆ ಸ್ಥಾನೆಚ ಜಾಯತೆ.

೧೪೪. ಇನ್ನು ಷಡ್ವಿಧ ಮುಖಂಗಳ ನೆಲೆಯದೆಂತೆಂದಡೆ, ಆಧಾರ ಚಕ್ರದಲ್ಲಿ ಸದ್ಯೋಜಾತ ಮುಖವಿಹುದು, ಸ್ವಾಧಿಷ್ಠಾನ ಚಕ್ರದಲ್ಲಿ ವಾಮದೇವ ಮುಖವಿಹುದು, ಮಣಿಪೂರಕ ಚಕ್ರದಲ್ಲಿ ಅಘೋರಮುಖ ವಿಹುದು, ಅನಾಹತ ಚಕ್ರದಲ್ಲಿ ತತ್ಪುರುಷ ಮುಖವಿಹುದು, ವಿಶುದ್ಧಿ ಚಕ್ರದಲ್ಲಿ ಈಶಾನ್ಯಮುಖವಿಹುದು ಆಜ್ಞಾ ಚಕ್ರದಲ್ಲಿ ನಿರ್ಭಾವ ಮುಖ ವಿಹುದು ನೋಡಾ ಅಪ್ರಮಾಣ ಕೂಡಲಸಂಗಮ-ದೇವಾ.

೧೪೫. ಶಿವಧರ್ಮಸಾರೆ|| ಆಧಾರಂತ ಸದ್ಯೋಜಾತಂ। ಸ್ವಾಧಿಷ್ಠೆ ವಾಮದೇವಕಂ ಅಘೋರ ಮಣಿಪೂರಕ ತತ್ಪುರುಷಂ ಅನಾಹತೆ। ಈಶಾ ನ್ಯಂತ ಉದ್ಧಿಶ್ಯತೆ। ಆಜ್ಞೆ ನಿರ್ಭಾವಂ ತಥಾ ಇತಿ ಷಡ್ವಕ್ತ್ರಕಂ ದೇವಿ| ಸ್ಥಾನೆಸ್ಥಾನೆ ಸಮಾಚರೇತ್ ಎಂದುದಾಗಿ, ಅಪ್ರಮಾಣ ಕೂಡಲಸಂಗಮ ದೇವಾ.

೧೪೬. ಇನ್ನು ಷಡ್ವಿಧ ಭೂತಂಗಳುತ್ಪತ್ಯವದೆಂತೆಂದಡೆ ಸದ್ಯೋ ಜಾತ ಮುಖದಲ್ಲಿ ಪೃಥ್ವಿ ಪುಟ್ಟಿತ್ತು. ವಾಮದೇವಮುಖದಲ್ಲಿ ಅಪ್ಪು ಪುಟ್ಟಿತ್ತು ಅಘೋರಮುಖದಲ್ಲಿ ಅಗ್ನಿ ಪುಟ್ಟಿತ್ತು ತತ್ಪುರುಷ ಮುಖ ದಲ್ಲಿ ವಾಯು ಪುಟ್ಟಿತ್ತು ಈಶಾನ್ಯ ಮುಖದಲ್ಲಿ ಆಕಾಶ ಪುಟ್ಟಿತ್ತು ಪ್ರಣ ವದರ್ಧ ಚಂದ್ರಕದಲ್ಲಿ ಮನಸ್ಸು ಪುಟ್ಟಿತ್ತು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೧೪೭. ಸದ್ಯೋಜಾತೋದ್ಭವೇದ್ಭೂಮಿ, ವಾಮದೇವ ಭವೇಜ್ಜಲಂ। ಅಘೋರಾದ್ವನ್ಹಿರಿತ್ಯುಕ್ತಂ, ತತ್ಪುರುಷಾದ್ವಾಯುರುಚ್ಯತೆ ಈಶಾನ್ಯೆ ಗಗನಾ ಕಾರಂ ಅರ್ಧಚಕ್ರಮನೋದ್ಭವಂ ಎಂದುದಾಗಿ ಅಪ್ರಮಾಣ ಕೂಡಲ ಸಂಗಮದೇವಾ.

೧೪೮. ಇನ್ನು ಷಡ್ವಿಧ ಭೂತಂಗಳ ನೆಲೆ, ಆಧಾರ ಚಕ್ರದಲ್ಲಿ ಪೃಥ್ವಿಯೆಂಬ ಮಹಾಭೂತವಿಹುದು. ಸ್ವಾಧಿಷ್ಠಾನ ಚಕ್ರದಲ್ಲಿ ಅಪ್ಪು ಯೆಂಬ ಮಹಾಭೂತವಿಹುದು. ಮಣಿಪೂರಕ ಚಕ್ರದಲ್ಲಿ ಅಗ್ನಿಯೆಂಬ ಮಹಾಭೂತವಿಹುದು. ಅನಾಹತ ಚಕ್ರದಲ್ಲಿ ಆಕಾಶವೆಂಬ ಮಹಾಭೂತವಿ ಹುದು. ಆಜ್ಞಾಚಕ್ರದಲ್ಲಿ ಮನವೆಂಬ ಮಹಾಭೂತವಿಹುದು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೧೪೯. ಮೃಗೇಂದ್ರ ಸಾರೆಸಾಕ್ಷಿ॥ ಆಧಾರೇ ಪ್ರಥ್ವಿಭೂತಂಚ। ಸ್ವಾಧಿಷ್ಠಾನೇಜಲಂ ತಥಾ ಮಣಿಪೂರಕ ತೇಜಾಚ ವಾಯುಭೂತಂ ಚನಾಹತಂ ಆಕಾಶಂ ಚ ವಿಶುದ್ಧಿಸ್ಯ ಆಜ್ಞೆ ಮನಮೇವ ಚ ಇತಿಷಡ್ಭೂತಂ ಚೈವಾ ಸ್ಥಾನಸ್ಥಾನೆ ಸಮಾಚರೇತ್ ಯೆಂದುದಾಗಿ ಅಪ್ರಮಾಣ ಕೂಡಲಸಂಗಮದೇವಾ.

೧೫೦. ಇನ್ನು ಷಡ್ವಿಧ ಲಿಂಗದುತ್ಪತ್ಯ ವದೆಂತೆಂದಡೆ ಅಖಂಡ ಜ್ಯೋತಿರ್ಮಯವಾಗಿಹ ಗೋಳಕಾಕಾರ ಪ್ರಣವದ ಜ್ಯೋತಿಸ್ವರೂಪದಲ್ಲಿ ಮಹಾಲಿಂಗ ಹುಟ್ಟಿತ್ತು. ಆ ಪ್ರಣವದ ದರ್ಪಣಾಕಾರದಲ್ಲಿ ಪ್ರಸಾದಲಿಂಗ ಹುಟ್ಟಿತ್ತು ಆ ಪ್ರಣವದರ್ಧ ಚಂದ್ರಕದಲ್ಲಿ ಜಂಗಮಲಿಂಗ ಹುಟ್ಟಿತ್ತು. ಆ ಪ್ರಣವದ ಕುಂಡಲಾಕಾರದಲ್ಲಿ ಶಿವಲಿಂಗ ಹುಟ್ಟಿತ್ತು. ಆ ಪ್ರಣವದ ದಂಡಸ್ವರೂಪದಲ್ಲಿ ಗುರುಲಿಂಗ ಪುಟ್ಟಿತ್ತು ಆ ಪ್ರಣವದ ತಾರಕ ಸ್ವರೂಪದಲ್ಲಿ ಆಚಾರಲಿಂಗ ಪುಟ್ಟಿತ್ತು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೧೫೧. ಶಿವಲಿಂಗಾಗಮೆಸಾಕ್ಷಿ ॥ ಓಂಕಾರ ಜ್ಯೋತಿರೂಪೆಚ। ಮಹಾಲಿಂಗ ಸಮುದ್ಭವಂ। ಓಂಕಾರ ದರ್ಪಣಾಕಾರೆ ಪ್ರಸಾದಲಿಂಗ ಸಮುದ್ಭವಂ ಓಂಕಾರಮರ್ಧ ಚಂದ್ರಂಚ। ಜಂಗಮಲಿಂಗ ಸಮುದ್ಭವಂ। ಓಂಕಾರ ಕುಂಡಲಾಕಾರೆ ಶಿವಲಿಂಗ ಸಮುದ್ಭವಂ। ಓಂಕಾರ ದಂಡರೂಪೆಚ ಗುರುಲಿಂಗಸಮುದ್ಭವಂ। ಓಂಕಾರ ತಾರಕಾರೂಪೆ ಆಚಾರಲಿಂಗ ಸಮುದ್ಭವಂ। ಇತಿ ಷಡುಲಿಂಗೋತ್ಪನ್ನಂ ಸುಸೂಕ್ಷ್ಮಂ ಶ್ರುಣಿ ಪಾರ್ವತಿ ಯೆಂದುದಾಗಿ ಅಪ್ರಮಾಣ ಕೂಡಲಸಂಗಮದೇವಾ.

೧೫೨. ಇನ್ನು ಷಡ್ವಿಧ ನೆಲೆ ಲಿಂಗದ ನೆಲೆಯಂತೆಂದಡೆ। ಆಧಾರಚಕ್ರದಲ್ಲಿ ನಾದ ಸ್ವರೂಪವಾಗಿ ಆಚಾರಲಿಂಗವಿಹುದು ಸ್ವಾಧಿಷ್ಠಾನ ಚಕ್ರದಲ್ಲಿ ನಾದಸ್ವರೂಪವಾಗಿ ಗುರುಲಿಂಗವಿಹುದು, ಮಣಿಪೂರಕ ಚಕ್ರದಲ್ಲಿ ನಾದ ಸ್ವರೂಪವಾಗಿ ಶಿವಲಿಂಗ ವಿಹುದು, ಅನಾಹತ ಚಕ್ರದಲ್ಲಿ ನಾದಸ್ವರೂಪವಾಗಿ ಜಂಗಮಲಿಂಗವಿಹುದು. ವಿಶುದ್ಧಿ ಚಕ್ರದಲ್ಲಿ ನಾದ ಸ್ವರೂಪವಾಗಿ ಪ್ರಸಾದಲಿಂಗವಿಹುದು, ಆಜ್ಞಾ ಚಕ್ರದಲ್ಲಿ ನಾದಸ್ವರೂಪವಾಗಿ ಮಹಾಲಿಂಗವಿಹುದು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೧೫೩. ಶಿವಲಿಂಗಸೂತ್ರೆಸಾಕ್ಷಿ॥ ಆಧಾರೆ ಭೃತ್ಯ ಲಿಂಗಂಚ। ಸ್ವಾಧಿಷ್ಠಾ ಗುರುಲಿಂಗಕಂ। ಶಿವಚ ಮಣಿಪೂರೆಚ ಜಂಗಮಂ ಚ ಅನಾಹತೆ। ಪ್ರಸಾದಂ ಚ ವಿಶುದ್ಧಿಸ್ಯ। ಆಜ್ಞೆಷು ಮಹಲಿಂಗಕಂ। ಇತಿ ಲಿಂಗಸ್ಥಲಂ ಜ್ಞಾತ್ವಾ ಸುಸೂಕ್ಷ್ಮಂ ಕಮಲಾನನೆ। ಯೆಂದುದಾಗಿ ಅಪ್ರಮಾಣ ಕೂಡಲ ಸಂಗಮದೇವಾ.

೧೫೪. ಇನ್ನು ಷಟ್‌ಕಲೆಗಳುತ್ಪತ್ಯವೆಂತೆಂದಡೆ ಅಖಂಡಜ್ಯೋತಿರ್ಮಯವಾಗಿಹ ಗೋಳಕಾಕಾರ ಪ್ರಣವದ ಜ್ಯೋತಿ ಸ್ವರೂಪದಲ್ಲಿ ಶಾಂತಾತೀತೋತ್ತರ ಕಳೆ ಉತ್ಪತ್ಯವಾಯಿತ್ತು ಆ ಪ್ರಣವದ ದರ್ಪಣಾಕಾರದಲ್ಲಿ ಶಾಂತಾತೀತ ಕಳೆ ಉತ್ಪತ್ಯವಾಯಿತ್ತು. ಆಪ್ರಣವದ ಅರ್ಧಚಂದ್ರಕದಲ್ಲಿ ಶಾಂತಿಕಳೆ ಉತ್ಪತ್ಯವಾಯಿತ್ತು ಆ ಪ್ರಣವದ ಕುಂಡಲಾಕಾರದಲ್ಲಿ ವಿದ್ಯಾಕಳೆ ಉತ್ಪತ್ಯವಾಯಿತ್ತು ಆಪ್ರಣವದ ದಂಡಸ್ವರೂಪದಲ್ಲಿ ಪ್ರತಿಷ್ಠೆಕಳೆ ಉತ್ಪತ್ಯವಾಯಿತ್ತು ಆಪ್ರಣವದ ತಾರಕಾ ಸ್ವರೂಪದಲ್ಲಿ ನಿವೃತ್ತಿ ಕಲೆ ಉತ್ಪತ್ಯ ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೧೫೫. ನಿಃಕಳಾ ತೀತಾಗಮೆ ಸಾಕ್ಷಿ॥ ಓಂಕಾರ ಜ್ಯೋತಿರೂಪೇಚ। ಮಹಾಕಳಂತ ಜಾಯತೆ। ಓಂಕಾರದರ್ಪಣಾಕಾರೆ ಶಾಂತ್ಯತೀತೋತ್ತರಜಾಯತೆ। ಓಂಕಾರಮರ್ಧ ಚಂದ್ರಚ। ಶಾಂತ್ಯತೀತಕಳಾ ಜಾಯತೆ। ಓಂಕಾರ ಕುಂಡಲಾಕಾರೆ। ವಿದ್ಯಾಕಳಾಚ ಜಾಯತೆ। ಓಂಕಾರದಂಡರೂಪೇಚ। ಪ್ರತಿಷ್ಠೆ ಚಜಾಯತೆ। ಓಂಕಾರ ತಾರಕ ರೂಪೆ, ನಿವೃತ್ತಿ ಚ ಜಾಯತೆ, ಇತಿಷಷ್ಠ ಕಳಾದೇವಿ, ಸ್ಥಾನೆ ಸ್ಥಾನೆಚ ಜಾಯತೆ, ಎಂದುದಾಗಿ, ಅಪ್ರಮಾಣ ಕೂಡಲಸಂಗಮದೇವಾ.

೧೫೬. ಇನ್ನು ಷಟ್‌ಕಳೆಯ ನೆಲೆ ಎಂತೆಂದೊಡೆ, ಆಧಾರಚಕ್ರದಲ್ಲಿ ನಿವೃತ್ತಿಕಳೆ ಇಹುದು. ಸ್ವಾದಿಷ್ಠಾನಚಕ್ರದಲ್ಲಿ ಪ್ರತಿಷ್ಠಾಕಲೆ ಇಹುದು, ಮಣಿಪೂರಕ ಚಕ್ರದಲ್ಲಿ ವಿದ್ಯಾಕಳೆ ಇಹುದು. ಅನಾಹತ ಚಕ್ರದಲ್ಲಿ ಶಾಂತಿ ಕಳೆ ಇಹುದು. ವಿಶುದ್ಧಿ ಚಕ್ರದಲ್ಲಿ ಶಾಂತಾತೀತ ಕಳೆ ಇಹುದು. ಆಜ್ಞಾಚಕ್ರದಲ್ಲಿ ಶಾಂತತೀತೋತ್ತರ ಕಳೆ ಇಹುದು, ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೧೫೭. ಆದಿತ್ಯ ಸೂತ್ರೆ ಸಾಕ್ಷಿ॥ ಆಧಾರಂಚ ನಿವೃತ್ತಿಂ ಚ। ಸ್ವಾಧಿಷ್ಠಾನೆ ಪ್ರತಿಷ್ಠಾಕಂ। ವಿದ್ಯಾಚ ಮಣಿಪೂರೆ ಚ। ಅನಾಹತಂ ಚ ಶಾಂತಿಕಂ। ಶಾಂತ್ಯತೀತ ವಿಶುದ್ಧಂಚ। ಅಜ್ಞಾಚಕ್ರ ಮಹಾ ಕಳೆ। ಇತಿ ಷಷ್ಠ ಕಳಾನ್ಯಾಸಂ ಸುಸೂಕ್ಷ್ಮಂ ಕಮಲಾನನೆ ಯೆಂದುದಾಗಿ, ಅಪ್ರಮಾಣ ಕೂದಲಸಂಗಮದೇವಾ.

೧೫೮. ಇನ್ನು ಷಡ್ವಿಧ ಸಾದಾಖ್ಯಂಗಳುತ್ಪತ್ಯವದೆಂತೆಂದೊಡೆ, ಶಾಂತ್ಯತೀತೋತ್ತರ ಕಳೆಯಲಿ ಮಹಾ ಸಾದಾಖ್ಯ ಉತ್ಪತ್ಯವಾಯಿತ್ತು. ಶಾಂತ್ಯತೀತ ಕಲೆಯಲಿ ಶಿವಸಾದಾಖ್ಯ ಉತ್ಪತ್ಯವಾಯಿತ್ತು. ಶಾಂತಿ ಕಲೆಯಲ್ಲಿ ಅಮೂರ್ತಿ ಸಾದಾಖ್ಯ ಉತ್ಪತ್ಯವಾಯಿತ್ತು. ವಿದ್ಯಾ ಕಳೆಯಲ್ಲಿ ಮೂರ್ತಿ ಸಾದಾಖ್ಯ ಉತ್ಪತ್ಯವಾಯಿತ್ತು. ಪ್ರತಿಷ್ಠೆ ಕಳೆಯಲಿ ಕರ್ತೃಸಾದಾಖ್ಯ ಉತ್ಪತ್ಯವಾಯಿತ್ತು. ನಿವೃತ್ತಿಕಳೆಯಲಿ ಕರ್ಮಸಾದಾಖ್ಯ ಉತ್ಪತ್ಯವಾಯಿತ್ತು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೧೫೯. ವಾತುಲಸಾಕ್ಷಿ॥ ಶಾಂತ್ಯತೀತೋತ್ತರಂ ಚೈವ। ಮಹಾ ಸಾದಾಖ್ಯ ಮುದ್ಭವಂ ಶಾಂತ್ಯತೀತ ಕಳಾ ಚೈವ, ಶಿವಸಾದಾಖ್ಯ ಮುದ್ಭವಂ ಅಮೂರ್ತಿ ಸಾದಾಖ್ಯಂ ದೇವಿ, ಶಾಂತಿ ಕಳಾ ಸಮುದ್ಭವಂ। ಮೂರ್ತಿ ಸಾದಾಖ್ಯಂ ಚೈವಂ। ವಿದ್ಯಾಕಳಾಸಮುದ್ಭವಂ। ಕರ್ತೃ ಸಾದಾಖ್ಯಕಂ ಚೈವ ಪ್ರತಿಷ್ಠೆ ಚಸಮುದ್ಭವಂ। ಕರ್ಮ ಸಾದಾಖ್ಯಂ ಚೈವ। ನಿವೃತ್ತಿ ಚಸಮುದ್ಭವಂ। ಷಡ್ವಿಧ ಸಾದಾಖ್ಯಕಂ। ದೇವಿ ಷಟ್ಕಳಾಚ ಜಾಯತೆ ಎಂದುದಾಗಿ ಅಪ್ರಮಾಣ ಕೂಡಲಸಂಗಮದೇವಾ.

೧೬೦. ಇನ್ನು ಷಡ್ವಿಧಸಾದಾಖ್ಯದ ನೆಲೆಯದೆಂತೆಂದಡೆ, ಆಧಾರ ಚಕ್ರದಲ್ಲಿ ಕರ್ಮಸಾದಾಖ್ಯವಿಹುದು, ಸ್ವಾಧಿಷ್ಠಾನ ಚಕ್ರದಲ್ಲಿ ಕರ್ತೃ ಸಾದಾಖ್ಯವಿಹುದು, ಮಣಿಪೂರಕ ಚಕ್ರದಲ್ಲಿ ಮೂರ್ತಿ ಸಾದಾಖ್ಯವಿಹುದು. ಅನಾಹತ ಚಕ್ರದಲ್ಲಿ ಅಮೂರ್ತಿ ಸಾದಾಖ್ಯವಿಹುದು, ವಿಶುದ್ಧಿ ಚಕ್ರದಲ್ಲಿ ಶಿವಸಾದಾಖ್ಯವಿಹುದು, ಆಜ್ಞಾಚಕ್ರದಲ್ಲಿ ಮಹಾಸಾದಾಖ್ಯವಿಹುದು, ನೋಡಾ, ಅಪ್ರಮಾಣ ಕೂಡಲಸಂಗಮದೆ ವಾ.

೧೬೧. ವಾತುಲ ಸೂತ್ರೆ ಸಾಕ್ಷಿ॥ ಆಧಾರೆ ಕರ್ಮಸಾದಾಖ್ಯಂ। ಸ್ವಾಧಿಷ್ಠಾನೆ ಚ ಕರ್ತೃಕಂ। ಮಣಿಪೂರೆ ಚ ಮೂರ್ತಂಚ। ಅಮೂರ್ತಂ

ಚ ಅನಾಹತೆ । ವಿಶುದ್ಧಿಶ್ಚ ಶಿವಂ ಚೈವ । ಆಜ್ಞಾ ಮಹಾಸಾದಾಖ್ಯಕಂ । ಇತಿ ಷಟ್‌ಸಾದಾಖ್ಯಂ ಚ ಸ್ಥಾನೆ ಸ್ಥಾನೆ ಸಮಾಚರೇತ್ । ಎಂದುದಾಗಿ, ಅಪ್ರಮಾಣ ಕೂಡಲಸಂಗಮದೇವಾ.

೧೬೨. ಇನ್ನು ಷಡ್ವಿಧ ಹಸ್ತದ ಉತ್ಪತ್ಯವೆಂತೆಂದಡೆ, ಅಖಂಡ ಜ್ಯೋತಿರ್ಮಯವಾಗಿಹ ಗೋಳಕಾಕಾರ ಪ್ರಣವದ ಜ್ಯೋತಿಸ್ವರೂಪದಲ್ಲಿ ಭಾವಹಸ್ತ ಉತ್ಪತ್ಯವಾಯಿತ್ತು. ಆ ಪ್ರಣವದ ದರ್ಪಣಾಕಾರ್‍ದಲ್ಲಿ ಜ್ಞಾನ ಹಸ್ತ ಉತ್ಪತ್ಯವಾಯಿತ್ತು. ಆ ಪ್ರಣವದ ಅರ್ಧಚಂದ್ರಕದಲ್ಲಿ ಸುಮನ ಹಸ್ತ ಉತ್ಪತ್ಯವಾಯಿತ್ತು. ಆ ಪ್ರಣವದ ಕುಂಡಲಾಕಾರದಲ್ಲಿ ನಿರಾಕಾರ ಹಸ್ತ ಉತ್ಪತ್ಯವಾಯಿತ್ತು. ಆ ಪ್ರಣವದ ದಂಡಸ್ವರೂಪದಲ್ಲಿ ಸುಬುದ್ಧಿ ಹಸ್ತ ಉತ್ಪತ್ಯವಾಯಿತ್ತು. ಆ ಪ್ರಣವದ ತಾರಕ ಸ್ವರೂಪದಲ್ಲಿ ಸುಚಿತ್ರ ಹಸ್ತ ಉತ್ಪತ್ಯವಾಯಿತ್ತು ನೋಡಾ, ಅಪ್ರಮಾಣ ಕೂಡಲಸಂಗಮದೇವಾ.

೧೬೩. ಅಸಿ ಚಿದಾತೀತಾಗಮೆ ಸಾಕ್ಷಿ ॥ ಓಂಕಾರ ಜ್ಯೋತಿ ರೂಪೆ ಚ । ಭವಹಸ್ತಂ ಚ ಜಾಯತೆ । ಓಂಕಾರ ದರ್ಪಣಾಕಾರೆ, ಜ್ಞಾನ ಹಸ್ತಂ ಜಾಯತೆ, ಓಂಕಾರ ಅರ್ಧ ಚಂದ್ರೆ ಚ । ಮನೋಹಸ್ತಂ ಚ ಜಾಯತೆ, ಓಂಕಾರ ಕುಂಡಲಾಕಾರೆ ಅಹಂಕಾರಂ ಚ ಜಾಯತೆ । ಓಂಕಾರ ದಂಡರೂಪಂ ಚ ಬುದ್ಧಿ ಹಸ್ತಂ ಚ ಜಾಯತೆ, ಓಂಕಾರ ತಾರಕರೂಪೆ ಚಿತ್ತ ಹಸ್ತಂ ಚ ಜಾಯತೆ, ಎಂದುದಾಗಿ ಅಪ್ರಮಾಣ ಕೂಡಲಸಂಗಮ ದೇವಾ.

೧೬೪. ಇನ್ನು ಷಡ್ವಿಧ ಹಸ್ತಂಗಳ ನೆಲೆ ಅದೆಂತೆಂದಡೆ, ಆಧಾರ ಚಕ್ರದಲ್ಲಿ ಸುಚಿತ್ತ ಹಸ್ತವಿಹುದು. ಸ್ವಾಧಿಷ್ಠಾನ ಚಕ್ರದಲ್ಲಿ ಸುಬುದ್ಧಿ ಹಸ್ತವಿಹುದು, ಮಣಿಪೂರಕ ಚಕ್ರದಲ್ಲಿ ನಿರಹಂಕಾರ ಹಸ್ತವಿಹುದು, ಅನಾಹತ ಚಕ್ರದಲ್ಲಿ ಸುಮನಹಸ್ತವಿಹುದು. ವಿಶುದ್ಧಿ ಚಕ್ರದಲ್ಲಿ ಜ್ಞಾನ ಹಸ್ತವಿಹುದು. ಆಜ್ಞಾ ಚಕ್ರದಲ್ಲಿ ಭಾವಹಸ್ತವಿಹುದು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೧೬೫. ಚಕ್ರಾತೀತಾಗಮೆ ॥ ಆಧಾರಂ ಚ ಸುಚಿತ್ತಂಚ ಸ್ವಾಧಿಷ್ಠಾನೆ ಸುಬುದ್ಧಿಕಂ । ಮಣಿಪೂರೆ ಚ ಅಹಂಕಾರಂ । ಮನೋಹಸ್ತಂ ಚ ನಾಹತಂ । ವಿಶುದ್ಧಿ ಜ್ಞಾನಹಸ್ತಂ ಚ ಆಜ್ಞಾಯಾಂ ಭಾವಹಸ್ತಕಂ । ಇತಿ

ಹಸ್ತಂ ಚ ಭೇದಜ್ಞಾಂ। ದುರ್ಲಭಂ ಚ ವರಾನನೆ। ಎಂದುದಾಗಿ ಅಪ್ರಮಾಣ ಕೂಡಲಸಂಗಮದೇವಾ.

೧೬೬. ಇನ್ನು ನವಶಕ್ತಿಗಳುತ್ಪತ್ಯ ವದೆಂತೆಂದಡೆ, ಏನೂ ಏನೂ ಎನಲಿಲ್ಲದ ಮಹಾ ಘನ ನಿರಂಜನ ವಸ್ತುವಿನ ನೆನಹು ಮಾತ್ರದಲ್ಲಿ ನಿರ್ಭಿನ್ನ ಶಕ್ತಿಹುಟ್ಟಿದಳು. ಆ ನಿರ್ಭಿನ್ನ ಶಕ್ತಿಯ ನೆನಹು ಮಾತ್ರದಲ್ಲಿ ನಿಭ್ರಾಂತಶಕ್ತಿ ಹುಟ್ಟಿದಳು ಆ ನಿಭ್ರಾಂತ ಶಕ್ತಿಯ ನೆನಹು ಮಾತ್ರದಲ್ಲಿ ನಿರ್ಮಾಯಶಕ್ತಿ ಹುಟ್ಟಿದಳ, ಆನಿರ್ಮಾಯ ಶಕ್ತಿಯ ನೆನಹು ಮಾತ್ರದಲ್ಲಿ ಹಾಕಿನಿ ಶಕ್ತಿ ಹುಟ್ಟಿದಳು. ಆ ಹಾಕಿನಿ ಶಕ್ತಿಯ ನೆನಹು ಮಾತ್ರದಲ್ಲಿ ಡಾಕಿನಿ ಶಕ್ತಿ ಹುಟ್ಟಿದಳು ಆ ಡಾಕಿನಿ ಶಕ್ತಿಯ ನೆನಹು ಮಾತ್ರದಲ್ಲಿ ಶಾಕಿನಿ ಶಕ್ತಿಯು ಹುಟ್ಟಿದಳು ಆ ಶಾಕಿನಿಶಕ್ತಿಯ ನೆನಹು ಮಾತ್ರದಲ್ಲಿ ಕಾಕಿನಿ ಶಕ್ತಿ ಹುಟ್ಟಿದಳು ಆ ಲಾಕಿನಿ ಶಕ್ತಿಯ ನೆನಹು
(ಟೀಪು:— ವಚನವು ಖಂಡವಾಗಿದೆ. —ಸಂಪಾದಕ)

೧೬೭. ನಿರಾಮಯಾ ತೀತಾಗಮೆ ಸಾಕ್ಷಿ॥ ನಿರಂಜನಸ್ಯ ಮನೋಜ್ಞಾನಾನ್ ನಿರ್ಭಿನ್ನಶ್ಚ ಸಮುದ್ಭವಂ। ನಿರ್ಭಿನ್ನಶ್ಚ ಮನೋಜ್ಞಾನಾನ್। ನಿಭ್ರಾಂತಶಕ್ತಿಮುದ್ಭವಂ। ನಿಭ್ರಾಂತಶ್ಚ ಮನೋಜ್ಞಾನಾ ನಿರ್ಮಾಯಂ ಚ ಸಮುದ್ಭವಂ। ನಿರ್ಮಾಯಂ ಚ ಮನೋಜ್ಞಾನಾನ್ ಹಾಕಿನಿ ಶಕ್ತಿ ಸಮುದ್ಭವಂ। ಹಾಕಿನಿಶ್ಚ ಮನೋಜ್ಞಾನಾನ್ ಡಾಕಿನಿಶ್ಚ ಸಮುದ್ಭವಂ। ಡಾಕಿನಿಶ್ಚ ಮನೋಜ್ಞಾನಂ। ಶಾಕಿನಿಶ್ಚ ಸಮುದ್ಭವಂ। ಶಾಕಿನಿಶ್ಚ ಮನೋಜ್ಞಾನಂ। ಲಾಕಿನಿಶ್ಚ ಸಮುದ್ಭವಂ। ಲಾಕಿನಿಶ್ಚ ಮನೋಜ್ಞಾನಂ। ರಾಕಿನಿಶ್ಚ ಸಮುದ್ಭವಂ। ರಾಕಿನಿಶ್ಚ ಮನೋಜ್ಞಾನಂ। ಕಾಕಿನಿಶ್ಚ ಸಮುದ್ಭವಂ। ಕಾಕಿನಿಶ್ಚ ಮನೋಜ್ಞಾನಂ। ಲಾಕಿನಿಶ್ಚ ಸಮುದ್ಭವಂ। ಲಾಕಿನಿಶ್ಚ ಮನೋಜ್ಞಾನಂ। ರಾಕಿನಿಶ್ಚ ಸಮುದ್ಭವಂ। ರಾಕಿನಿಶ್ಚ ಮನೋಜ್ಞಾನಂ॥ ಕಾಕಿನಿಶ್ಚ ಸಮುದ್ಭವಂ। ಏಕೈಕಂ ಪ್ರಾಣಮಾಖ್ಯಾತಂ। ಏಕೈಕಂ ತು ಸಮಸ್ಥಿತಂ। ಎಂದುದಾಗಿ, ಅಪ್ರಮಾಣ ಕೂಡಲಸಂಗಮದೇವಾ.

೧೬೮. ಇನ್ನು ನವಶಕ್ತಿಗಳ ನೆಲೆ ಅದೆಂತೆಂದಡೆ ಆಧಾರಚಕ್ರದಲ್ಲಿ ಕಾಕಿನಿ ಶಕ್ತಿಯಿಹುದು. ಸ್ವಾಧಿಷ್ಠಾನ ಚಕ್ರದಲ್ಲಿ ರಾಕಿನಿ ಶಕ್ತಿ ಇಹುದು, ಮಣಿಪೂರಕ ಚಕ್ರದಲ್ಲಿ ಲಾಕಿನಿ ಶಕ್ತಿ ಇಹುದು, ಅನಾಹತ ಚಕ್ರದಲ್ಲಿ ಶಾಕಿನಿ ಶಕ್ತಿ ಇಹುದು, ವಿಶುದ್ಧಿ ಚಕ್ರದಲ್ಲಿ ಕಾಕಿನಿ

ಶಕ್ತಿ ಇಹುದು ಅಜ್ಞಾ ಚಕ್ರದಲ್ಲಿ ಹಾಕಿನಿ ಶಕ್ತಿ ಇಹುದು ಬ್ರಹ್ಮಚಕ್ರದಲ್ಲಿ ನಿವರ್ಾಯ ಶಕ್ತಿ ಇಹುದು ಶಿಖಾಚಕ್ರದಲ್ಲಿ ನಿಭ್ರಾಂತ ಶಕ್ತಿ ಇಹುದು ಪಶ್ಚಿಮ ಚಕ್ರದಲ್ಲಿ ನಿರ್ಭಿನ್ನ ಶಕ್ತಿ ಇಹುದು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೧೬೯. ||ಸಾಕ್ಷಿ|| ಆಧಾರೆ ಕಾಕಿನಿಶ್ಚೈವ| ಸ್ವಾಧಿಷ್ಠಾನೈ ಚ ರಾಕಿನಿ| ಲಾಕಿನಿ ಮಣಿಪೂರೇ ಚ ಶಾಕಿನಿಶ್ಚ ಅನಾಹತೇ| ವಿಶುದ್ಧೌ ಡಾಕಿನಿಶ್ಚೈವ| ಆಜ್ಞಾಯಾಂ ಹಾಕಿನಿ ಸ್ಥಿತಾ| ಬ್ರಹ್ಮ ಚಕ್ರಂ ತು ನಿವರ್ಾಯಂ ಶಿಖಾಚಕ್ರೆ ನಿರ್ಭಾವಕಂ | ಪಶ್ಚಿಮೆ ತು ನಿರ್ಭಿನ್ನಂ ಚ ಸ್ಥಾನಸ್ಥಾನೆ ಸಮಾಚರೇತ್ | ಎಂದುದಾಗಿ ಅಪ್ರಮಾಣ ಕೂಡಲಸಂಗಮದೇವಾ.

೧೭೦. ಇನ್ನು ಷಡ್ವಿಧ ಅಧಿದೇವತೆಗಳುತ್ಪತ್ಯ ವೆಂತೆಂದಡೆ ಅಖಂಡ ಜ್ಯೋತಿರ್ಮಯವಾಗಿಹ ಗೋಳಕಾಕಾರ ಪ್ರಣವದ ಜ್ಯೋತಿ ಸ್ವರೂಪದಲ್ಲಿ ಆತ್ಮನುತ್ಪತ್ಯವಾದನು. ಆ ಪ್ರಣವದ ದರ್ಪಣಾಕಾರದಲ್ಲಿ ಸದಾಶಿವನುತ್ಪತ್ಯವಾದನು. ಆ ಪ್ರಣವದ ಅರ್ಧಚಂದ್ರಕದಲ್ಲಿ ಈಶ್ವರನುತ್ಪತ್ಯವಾದನು ಆ ಪ್ರಣವದ ಕುಂಡಲಾಕಾರದಲ್ಲಿ ರುದ್ರನುತ್ಪತ್ಯವಾದನು ಅಪ್ರಣವದ ದಂಡಸ್ವರೂಪದಲ್ಲಿ ವಿಷ್ಣು ಉತ್ಪತ್ಯವಾದನು ಆ ಪ್ರಣವದ ತಾರಕಾ ಸ್ವರೂಪದಲ್ಲಿ ಬ್ರಹ್ಮನುತ್ಪತ್ಯ ವಾದನು ನೋಡಾ ಅಪ್ರಮಾಣ ಕೂಡಲಸಂಗಮದೇವಾ,

೧೭೧. ಬ್ರಹ್ಮೋತ್ತರ ಸೂತ್ರೆ ಸಾಕ್ಷಿ|| ಓಂಕಾರ ಚಿಜ್ಯೋತಿ ರೂಪೇಚ | ಜೀವಾತ್ಮ ಚ ಜಾಯತೆ| ಓಂಕಾರ ದರ್ಪಣಾಕಾರೆ ಸದಾಶಿವಂ ಚ ಜಾಯತೆ, ಓಂಕಾರ ಮರ್ಧ ಚಂದ್ರೇ ಚ | ಈಶ್ವರಂಶ ಜಾಯತೆ| ಓಂಕಾರ ಕುಂಡಲಾಕಾರೆ ಕಾಲರುದ್ರಂ ಚಜಾಯತೆ| ಓಂಕಾರ ಡಂಡರೂಪೇಚ | ನಾರಾಯಣಂ ಚ ಜಾಯತೆ| ಓಂಕಾರ ತಾರಕಾರೂಪೆ ವಿರಿಂಚಿಚ ಜಾಯತೆ, ಎಂದುದಾಗಿ ಅಪ್ರಮಾಣ ಕೂಡಲಸಂಗಮದೇವಾ.

೧೭೨. ಇನ್ನು ಷಡ್ವಿಧ ಅಧಿದೇವತೆಗಳ ನೆಲೆಯದೆಂತೆಂದಡೆ, ಆಧಾರ ಚಕ್ರದಲ್ಲಿ ಬ್ರಹ್ಮನಧಿದೇವತೆ, ಸ್ವಾಧಿಷ್ಠಾನ ಚಕ್ರದಲ್ಲಿ ವಿಷ್ಣುವಧಿದೇವತೆ. ಮಣಿಪೂರಕ ಚಕ್ರದಲ್ಲಿ ರುದ್ರನಧಿದೇವತೆ, ಅನಾಹತಚಕ್ರದಲ್ಲಿ ಈಶ್ವರನಧಿದೇವತೆ ವಿಶುದ್ಧಿ ಚಕ್ರಕ್ಕೆ ಸದಾಶಿವನಧಿದೇವತೆ, ಅಜ್ಞಾಚಕ್ರಕ್ಕೆ ಆತ್ಮನ

ಧಿದೇವತೆ, ಬ್ರಹ್ಮಚಕ್ರಕ್ಕೆ ಅಂತರಾತ್ಮನೆಂಬ ಮಹಾ ಗುರವಧಿದೇವತೆ, ಶಿಖಾ ಚಕ್ರಕ್ಕೆ ಪರಮಾತ್ಮನೆಂಬ ಮಹಾಲಿಂಗವಧಿದೇವತೆ ಪಶ್ಚಿಮಚಕ್ರಕ್ಕೆ ಸರ್ವಾತ್ಮನೆಂಬ ಮಹಾ ಜಂಗಮವಧಿದೇವತೆ ನೋಡಾ, ಅಪ್ರಮಾಣ ಕೂಡಲ ಸಂಗಮದೇವಾ.

೧೭೩. ಇನ್ನು ಅಷ್ಟನಾದದುತ್ಪತ್ತ್ಯವದೆಂತೆಂದಡೆ, ನಿಶ್ಯಬ್ದವೆಂಬ ಪರ ಬ್ರಹ್ಮದ [illegible]ಹು ಮಾತ್ರದಲ್ಲಿ ಸಿಂಹನಾದ ಉತ್ಪತ್ತಿ. ಆ ಸಿಂಹನಾದದಲ್ಲಿ ದಿವ್ಯ ನಾದ ಉತ್ಪತ್ತಿ, ಆ ದಿವ್ಯ ನಾದದಲ್ಲಿ ಪ್ರಣವನಾದೋತ್ಪತ್ತಿ, ಆ ಪ್ರಣವನಾದದಲ್ಲಿ ಮೇಘನಾದೋತ್ಪತ್ತಿ. ಆ ಮೇಘನಾದದಲ್ಲಿ ಭೇರಿನಾದೋತ್ಪತ್ತಿ, ಆ ಭೇರಿನಾದದಲ್ಲಿ ಘಂಟಾನಾದೋತ್ಪತ್ತಿ, ಆ ಘಂಟಾನಾದದಲ್ಲಿ ವೀಣಾ ನಾದೋತ್ಪತ್ತಿ, ಆ ವೀಣಾನಾದದಲ್ಲಿ ಪೆಣ್ದುಂಬಿ ನಾದೋತ್ಪತ್ತಿ ನೋಡಾ, ಅಪ್ರಮಾಣ ಕೂಡಲಸಂಗಮದೇವಾ

೧೭೪. ಸಾಮವೇದೇ ಸಾಕ್ಷಿ ॥ ಓಂಪರಬ್ರಹ್ಮೋ ಸಿಂಹಜನಿತಾ। ಸಿಂಹನಾದೋ ದಿವ್ಯ ಜನಿತಾ, ದಿವ್ಯನಾದೋ ಪ್ರಣವಂ ಜನಿತಾ, ಪ್ರಣವ ನಾದೋ ಮೇಘಧ್ವನಿಂ ಜನಿತಾ, ಮೇಘಧ್ವನಿಂ ಭೇರಿನಾದಂ ಜನಿತಾ, ಭೇರಿನಾದಸ್ಯ ಘಂಟಾಂ ಜನಿತಾ, ಘಂಟಾ ನಾದೋವೀಣಾಂ ಜನಿತಾ, ವೀಣಾನಾದೋ ಭ್ರಮರಂ ಜನಿತಾಂ ಎಂದುದಾಗಿ ಅಪ್ರಮಾಣ ಕೂಡಲ ಸಂಗಮದೇವಾ.

೧೭೫. ಇನ್ನು ಅಷ್ಟ ನಾದದ ನೆಲೆ ಆದೆಂತೆಂದಡೆ, ಆಧಾರಚಕ್ರದಲ್ಲಿ ಪೆಣ್ದುಂಬಿನಾದವಿಹುದು, ಸ್ವಾಧಿಷ್ಠಾನ ಚಕ್ರದಲ್ಲಿ ವೀಣಾನಾದವಿಹುದು, ಮಣಿಪೂರಕ ಚಕ್ರದಲ್ಲಿ ಘಂಟಾನಾದವಿಹುದು, ಅನಾಹತಚಕ್ರದಲ್ಲಿ ಭೇರೀ ನಾದವಿಹುದು, ವಿಶುದ್ಧಿ ಚಕ್ರದಲ್ಲಿ ಮೇಘಧ್ವನಿ ಇಹುದು ಆಜ್ಞಾಚಕ್ರದಲ್ಲಿ ಪ್ರಣವನಾದವಿಹುದು. ಬ್ರಹ್ಮಚಕ್ರದಲ್ಲಿ ದಿವ್ಯನಾದವಿಹುದು. ಶಿಖಾಚಕ್ರ ದಲ್ಲಿ ಸಿಂಹನಾದವಿಹುದು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೧೭೬. ಅಸಿಪರಾಗಮೆ ಸಾಕ್ಷಿ ॥ ಆಧಾರೇ ಭ್ರಮರಂ ಚೈವಾ। ಸ್ವಾಧಿಷ್ಠೆ ವೀಣಾನಾದಂಚಥೆ। ಮಣಿಪೂರಂಚ ಘಂಟಾ ಚ। ಭೇರೀನಾದಂ ಚ ನಾಹತಂ। ವಿಶುದ್ಧಿ ಮೇಘನಾದಂಚ। ಆಜ್ಞೆ ಪ್ರಣಪನಾದಕಂ। ಬ್ರಹ್ಮೆ ದಿವ್ಯನಾದಂ ಚ। ಸಿಂಹನಾದೆ ಶಿಖಾಗ್ರಕಂ। ಏವಮಷ್ಟ ನಾದಂ ಜ್ಞಾತ್ವಾ ದುರ್ಲಭಂ ಚ ವರಾನನೆ ಎಂದುದಾಗಿ, ಅಪ್ರಮಾಣ ಕೂಡಲಸಂಗಮ ದೇವಾ.

ಸಂಪುಟ ೨೮  ಸಂಚಿಕೆ ೮

# ಶಿವಾನುಭವ



:: ಸಂಪಾದಕರು ::

ಫ. ಗು. ಹಳಕಟ್ಟಿ,
ಬಿ. ಎ. ಎಲ್. ಎಲ್. ಬಿ.



ವಾ. ಚ. ೫-೧೨-೬ ] ವಿಜಾಪೂರ ಆಗಸ್ಟ [illegible]

# ವಿಷಯಾನುಕ್ರಮಣಿಕೆ.

# ಶಿವಾನುಭವ

ವರ್ಷ ೨೮ | ಅಗಸ್ಟ ೧೯೫೪ | ಸಂಚಿಕೆ ೮

## ಅಕ್ಕನ ತ್ಯಾಗ.

(ಲೇಖಕಿ:- ಶ್ರೀ ಗೋದುತಾಯಿ ಗವಿಮಠ ತೆಗ್ಗಿಹಳ್ಳಿ, ತಾ|| ಇಂಡಿ)



ತ್ಯಾಗವೇ ಧರ್ಮದ ಮೂಲವಯ್ಯ. ತ್ಯಾಗವಿಲ್ಲದೆ ಜಗದಲ್ಲಿ ಯಾರೂ ಉಚ್ಚಪದವಿಗೇರರು. ಭಾರತವು ಪೂರ್ವದಿಂದಲೂ ತ್ಯಾಗದ ನೆಲೆಬೀಡಾಗಿದೆ. ಪರಮಾತ್ಮನಿಗಾಗಿ ರಾಜರೂ ಕೂಡ ರಾಜ್ಯವನ್ನು ತ್ಯಾಗಮಾಡಿದರು, ಆತ್ಮಾರ್ಪಣ ಮಾಡಿದರು, ಧನವನ್ನು ಸೂರೆಗೊಂಡರು. ದೇಶಭಕ್ತರು ಕೂಡ ದೇಶಸೇವೆಯೇ ದೇವರಸೇವೆಯೆಂದು ತನುಮನಧನಗಳನ್ನು ತ್ಯಾಗಮಾಡಿ ಸೇವೆಗೈದ ಕಥೆಗಳುಂಟು. ಆದರೆ ದೇವನಿಗಾಗಿ ತ್ಯಾಗಮಾಡಿದವರು ಹೆಚ್ಚಿನವರೆಂದು ಹೇಳಬಹುದು. ಅನೇಕ ಸ್ತ್ರೀಪುರುಷರು ತ್ಯಾಗಮಾಡಿದ ಕಥೆಗಳುಂಟು. ನಮ್ಮ ಪುರಾಣ ಪುಣ್ಯಕಥೆಗಳಲ್ಲಿ ಇವು ಹೇರಳವಾಗಿ ಸಿಗುವವು. ಅದರಲ್ಲಿ ಶ್ರೀ ಅಕ್ಕಮಹಾದೇವಿಯ ತ್ಯಾಗವೇ ಹೆಚ್ಚಿನದೆಂದು ಈ ಲೇಖಕಿಯು ಪೂರ್ಣ ನಂಬಿದ್ದಾಳೆ. ಅದನ್ನು ಕೆಳಗೆ ವಿವರಿಸುವೆನು.

ಅಕ್ಕನು ಉಡುತಡಿಯ ಶಿವಭಕ್ತರ ಮನೆಯಲ್ಲಿ ಜನಿಸಿದಳು. ಬಾಲ್ಯದಿಂದಲೂ ಚನ್ನಮಲ್ಲಿಕಾರ್ಜುನನೇ ತನಗೆ ಗಂಡನಾಗಬೇಕೆಂದು ಹಂಬಲಿಸಿದಳು. "ಹರನೇ ನೀನೆನಗೆ ಗಂಡನಾಗಬೇಕೆಂದು ಅನಂತಕಾಲ ತಪಿಸಿದ್ದೆ ನೋಡಾ. ಹಸೆಯುಮೇಲಣ ಮಾತ ಬೆಸಗೊಳಲಟ್ಟರೆ ಶಶಿಧರನ ಪತ್ತಿರ ಕಳುಹಿದರೆಮ್ಮವರು. ಭಸ್ಮವನೆ ಹೂಸಿ ಕಂಕಣವನೇ ಕಟ್ಟಿ ಚನ್ನಮಲ್ಲಿಕಾರ್ಜುನನೆಂಬ ಗಂಡಗೆನ್ನ ಮದುವೆಯಮಾಡಿದರು." ಎಂದು ಶಿವನೇ ತನಗೆ ಗಂಡನಾಗಬೇಕೆಂದು ಅವಳು ತಪಮಾಡಿದನ್ನು ವಚನದಲ್ಲಿ ಬಣ್ಣಿಸಿರುವಳು. ಬಾಲಿಕೆ

ಇರುವಾಗಲೇ ದೇವರ ಪೂಜೆ, ಧ್ಯಾನ, ಮಂತ್ರ, ಜಪ, ಮೊದಲಾದವುಗಳಲ್ಲಿಯೇ ಕಾಲ ಕಳೆಯುತ್ತಿದ್ದಳು. ಊಟ ಆಟ ನೋಟ ಮೊದಲಾದ ವ್ಯಸನಗಳಲ್ಲಿ ಎಳ್ಳಷ್ಟು ಮನಸ್ಸಿರಲಿಲ್ಲ. ಇದೆಲ್ಲವೂ ಒಳ್ಳೇ ಭಕ್ತರ ಜೀವನದಲ್ಲಿ ಕಂಡು ಬರುತ್ತಲಿವೆ. ಹುಟ್ಟಾ ತ್ಯಾಗಿಯೇ ಆಗಿದ್ದಳು ಇವಳು ಆಗ ಬಹುತರ ೧೬ ವರ್ಷದ ಪ್ರಾಯದವಳಾಗಿರಬಹುದು. ಆಗ ತಪದ ತೇಜಸ್ಸಿನಿಂದಲೂ ಪ್ರಾಯದ ಕೋಮಲ ಪರಿಪುಷ್ಟ ಪರಿಪೂರ್ಣವಾದ ಕಾಯದಿಂದಲೂ ಬ್ರಹ್ಮ ಚರ್ಯ ಪಾಲನೆಯಿಂದಲೂ ಒಳ್ಳೇ ಮೋಹಕವಾಗಿ ತೋರುತ್ತಿದ್ದಳು. ಮೊದಲೇ ರೂಪವತಿ. ಇದೆಲ್ಲ ಕೂಡಿದರೆ ಕೇಳುವದೇನು ? ರಾಜಾಧಿರಾಜರೂ ಕೂಡ ಮೋಹಗೊಂಡು ಹುಚ್ಚರಾಗುತ್ತಿದ್ದರೆಂದು ಅಲ್ಲಿಯ ಕೌಶಿಕರಾಜನ ಅಕ್ಕನ ಮೇಲೆ ಮಾಡಿದ ಬಲಾತ್ಕಾರವೇ ಸಾಕ್ಷಿ. ಅಕ್ಕನನ್ನು ತನ್ನ ಮಂದಿರಕ್ಕೆ ಸಾಮೋಪಾಯದಿಂದ ಹೇಳಿದರೂ ಆಕೆ ಕೇಳಲಿಲ್ಲ. ಅವನ ಎಲ್ಲ ಐಶ್ವರ್ಯ ವನ್ನು ಅವನ ರೂಪಲಾವಣ್ಯವನ್ನು ತಿರಸ್ಕರಿಸಿ ಕೆಳಗಿನ ವಚನವನ್ನು ಹೇಳಿದಳು. "ಸಾವಿಲ್ಲದ ಕೇಡಿಲ್ಲದ ರೂಹಿಲ್ಲದ ಚಲುವಾಂಗನೊಲಿದೇನವ್ವ. ಎಡೆಇಲ್ಲದ ಕಡೆ ಇಲ್ಲದ ತೆರಹಿಲ್ಲದ ಚಲುವಾಂಗನೊಲಿದೆ ಎಲೆ ಅವ್ವ, ನೀನು ಕೇಳಾ ತಾಯೆ, ಭಯವಿಲ್ಲದ ನಿರ್ಭಯ ಚಲುವಂಗೊಲಿದೆ, ನಾನು ಕುಲಸೀಮೆ ಇಲ್ಲದ ನಿಸ್ಸೀಮ ಚಲುವಂಗೆ ನಾನೊಲಿದೆ, ಇದುಕಾರಣ ಚನ್ನಮಲ್ಲಿಕಾರ್ಜುನ ಚಲುವ ಗಂಡ ನೆನಗೆ ಈ ಸಾವ ಕೆಡುವ ಗಂಡನೊಯ್ದು ಒಲೆಯೊಳಗಿಕ್ಕು." ಎಂದು ಹೇಳಿ ಉಟ್ಟ ಒಟ್ಟೆಯನ್ನು ಕಳೆದೊಗೆದು ಬರಿ ಬತ್ತಲೆಯಾದಳು. ಆಗ ಅವಳ ಶರೀರದಿಂದ ಒಂದು ದಿವ್ಯ ಜ್ವಾಲೆಯು ಬಂದು ಕೌಸಿಕನಿಗೆ ಬಡಿಯಲು, ಕಣ್ಣು ಕುಕ್ಕಿ ಸ್ಮೃತಿತಪ್ಪಿ ನೆಲಕ್ಕೆಬಿದ್ದನು. ಆಗ ಅಲ್ಲಿ ನೆರೆಪವರೆಲ್ಲರೂ ಗಾಬರಿಗೊಂಡು ಅಚ್ಚರಿಬಟ್ಟರು. ಈಕೆಯು ಸಾಕ್ಷಾತ್ ಜಗತ್ತಿನ ಕಲ್ಯಾಣ ಕ್ಕಾಗಿ ಅವತಾರತಾಳಿದ ಮಹಾದೇವಿಯೇ ಎಂದು ಸ್ತುತಿಸಿದರು. ಇದಾವು ದನ್ನು ಆಕೆ ಲೆಕ್ಕಿಸದೆ ಅರಮಂದಿರ ಬಿಟ್ಟು ನಗ್ನಾವಸ್ಥೆಯಲ್ಲಿ ಕೆಂಜೆಡೆಯಿಂದ ಮೈಮುಚ್ಚಿಕೊಂಡು ಅರಣ್ಯಕ್ಕೆ ಹೊರಟಳು. ಊರವರೂ ತಾಯಿತಂದೆಗಳು ಅತ್ತುಕರೆದರೂ ಕೇಳಲಿಲ್ಲ. " ಗಿರಿಯಲ್ಲದೆ ಹುಲ್ಲು ಮೊರಡೆಯಲಾಡುವನೇ ನವಿಲು, ಕೊಳನಲ್ಲದೆ ಕಿರಿವಳ್ಳಕ್ಕೆಳಸುವದೆ ಹಂಸೆ ? ಮಾವ-ರತಳಿತಲ್ಲದೆ ಸ್ವರ ಗೈಯುದೆ ಕೋಗಿಲೆ ? ಪರಿಮಳವಲ್ಲದೆ ಅನ್ಯಕ್ಕೆಳಸುವವೆ ಭ್ರಮರ ? ಎಂದು ಎಲ್ಲರಿಗೂ ಸಂತೈಸಿ ಮಲ್ಲಿಕಾರ್ಜುನನ್ನು ನೆನೆಯುತ್ತ ಹೊರಟು ಅರಣ್ಯ ಸೇರಿದಳು.

ಇದೇ ನಿಜವಾದ ತ್ಯಾಗ, ವೈರಾಗ್ಯ. ಜಗತ್ತಿನಲ್ಲಿ ಇಂಥ ಹೆಚ್ಚಿನ ತ್ಯಾಗ ಎಲ್ಲಿಯೂ ಕಾಣುವದಿಲ್ಲ. ೧೬ ವರ್ಷದ ತುಂಬು ಜವ್ವನೆ, ರೂಪವತಿ, ತೇಜಸ್ವಿಯಾದ ರಾಣಿಯಾಗಿ ಮೆರೆಯುವ ಸ್ಥಿತಿ, ಇದನ್ನೆಲ್ಲ ತುಚ್ಛೀಕರಿಸಿ ಬಿಟ್ಟಳು. ಭಾರತದ ಯಾವ ಸ್ತ್ರೀಯಳು ಇಂಥ ತ್ಯಾಗದ ಶಿಖರವನ್ನೇರಿ ದಂತೆ ಕಾಣುವದಿಲ್ಲ. ಇದೆಲ್ಲವನ್ನು ಬಿಟ್ಟು ತವರಮನೆಯಲ್ಲಿ ಆರಾಮ ಇದ್ದಳೇ ? ಅದೂ ಇಲ್ಲ. ಅರಣ್ಯವಾಸಿ ವನವಾಸಿಯಾದಳು. ಜೊತೆಗೆ ಯಾರೂ ಇಲ್ಲ. ಉಡಲಿಕ್ಕೆ ಬಟ್ಟೆಯಿಲ್ಲ, ಹಾಸಲಿಕ್ಕೆ ಹಾಸಿಗೆ ಇಲ್ಲ, ಉಣ ಲಿಕ್ಕೆ ತಾಟು ಇಲ್ಲ, ಕುಡಿಯಲಿಕ್ಕೆ ತಂಬಿಗೆ ಇಲ್ಲ, ಬೇಡಿಕೊಳ್ಳಲಿಕ್ಕೆ ಜೋಳಿಗೆ ಇಲ್ಲ, ಕಾಲಲಿ ಏನೂ ಇಲ್ಲದೆ, ಮಳೆಗಾಳಿ ಬಿಸಿಲು ಬೆಳಕನ್ನು ಲೆಕ್ಕಿಸದೆ ಕೋಮಲ ಸುಂದರ ಕಾಯವನ್ನು ಮರೆಮಾಚದೆ ತೆರೆದುಕೊಂಡೇ ಆಯು ಷ್ಯದ ಉಳಿದ ಎಲ್ಲ ಭಾಗವನ್ನು ಕಳೆದಳು. ಹೀಗೆ ಹೊರಡಲಿಕ್ಕೆ ಆಕೆಗೆ ವಿಷಯದ ಹುಚ್ಚು ಹಿಡಿದಿತ್ತೆಂದು ಹೇಳಬೇಕೇ ಅದಂತೂ ಇಲ್ಲ. ಆಕೆಗೆ ದೇವರ ಹುಚ್ಚು ಮಾತ್ರ ಹಿಡಿದಿತ್ತು. ದೇವನಿಗಾಗಿ ಕಾಯದ ಭ್ರಾಂತಿ ಬಿಟ್ಟಳು. "ಕಾಯ ಕರ್ರನೆ ಕಂದಿದರೇನು ? ಕಾಯ ಮಿರ್ರನೆ ಮಿಂಚಿದರೇನು ? ಅಂತ ರಂಗ ಶುದ್ಧವಾದಬಳಿಕ ಚನ್ನಮಲ್ಲಿಕಾರ್ಜುನನನೊಲಿದ ಕಾಯ ಎಂತಾದೊ ಡೇನಯ್ಯ ?' ಈ ಪ್ರಕಾರ ಶರೀರದಮೇಲಿನ ಮೋಹವಡಗದೆ ದೇವ್ನನೊಲಿಯು ನೆಂಬ ವಚನವನ್ನು ಹಾಡಿದ್ದಾಳೆ.

ಇವಳು ಹರಿವಾಣದಲ್ಲಿಯಾಗಲಿ, ಜೋಳಿಗೆಯಲಾಗಲಿ ಬೇಡಿಕೊಳ್ಳ ಲಿಲ್ಲ. ತನ್ನ ಬೊಗಸೆಯಲ್ಲಿಯೇ ಬೇಡಿಕೊಂಡು ಉಂಡಳೆಂದು ಕೆಳಗಿನ ವಚನದಿಂದ ಕಂಡ ಬರುವದು. "ಮನೆ ಮನೆ ತಪ್ಪದೆ ಕೈಯೊಡ್ಡಿ ಬೇಡುವಂತೆ ಮಾಡಯ್ಯಾ, ಬೇಡಿದೊಡೆ ಇಕ್ಕದಂತೆ ಮಾಡಯ್ಯಾ, ಇಕ್ಕಿದೊಡೆ ನೆಲಕ್ಕೆ ಬಿಳುವಂತೆ ಮಾಡಯ್ಯಾ. ನೆಲಕ್ಕೆ ಬಿದ್ದೊಡೆ ನಾನೆತ್ತಿ ಕೊಂಬುವದಕ್ಕೆ ಮುನ್ನವೇ ನಾಯಿ ಎತ್ತಿಕೊಂಡು ಹೋಗುವಂತೆ ಮಾಡಯ್ಯಾ. ಚನ್ನಮಲ್ಲಿಕಾರ್ಜುನಯ್ಯ" ಈ ಪ್ರಕಾರ ಶರೀರ ಎಳ್ಳುಮನೆಯಷ್ಟು ಕೂಡಾ ಸುಖ ಬೇಡೆಂದು ಸದಾ ದುಃಖ ತಾಪಗಳೇ ತನಗಿರಲೆಂದು ದೇವರು ಮಾತ್ರ ಹತ್ತಿರದಲ್ಲೇ ಇರಲೆಂದು ಕಷ್ಟಕ್ಕಂಜದೆ ಆನಂದದಿಂದಲೆ ಹಾಡಿದ್ದಾಳೆ. ಈ ಪ್ರಕಾರ ಯಾವ ಸ್ತ್ರೀಯರು ಮಾಡಿದ್ದಾರೆ ? ಕಾರಣ ಇದೇ ಹೆಚ್ಚಿನ ತ್ಯಾಗವೆಂದು ಹೇಳಬೇಕು.

ಸೀತಾದೇವಿಯು ಗಂಡ ಮೈದುನರೊಡನೆ ವನವಾಸ ಭೋಗಿಸಿದಳು. ಮೈದುನನು ಅವರ ಸುಖಕ್ಕೆ ಸದಾ ಹೆಣಗುತ್ತಿದ್ದನು. ಗಂಡನೊಡನೆ ಸುಖ

ದಿಂದ ಗುಡಿಸಲಿನಲ್ಲಿ ಇದ್ದಳು. ಎಂಥ ಕಷ್ಟಗಳು ಬಂದರೂ ಪ್ರೇಮದ ಗಂಡನೊಡನೆ ಇದ್ದರೆ, ಆ ದುಃಖ ಕಷ್ಟಗಳು ಏನುಮಾಡುವವು ? ಹೇಮರಡ್ಡಿ ಮಲ್ಲಮ್ಮನು ಶ್ರೀಶೈಲ ಪರ್ವತದ ತಳದಲ್ಲಿ ದನಕಾಯುತ್ತಿದ್ದಳು. ಮನೆಯಿಂದ ಆಕೆಗೆ ನಿತ್ಯ ಆಹಾರಬರುತ್ತಿತ್ತು ಹಾಸಿಗೆ ಹೊದಿಕೆಗಳಿದ್ದವು. ದ್ರೌಪತಿಯು ವನವಾಸವು ತನ್ನ ಪತಿಯರೊಂದಿಗೆ ಇತ್ತು. ಈಕೆ ಸುಖವಾಗಿರುವಂತೆ ಸದಾ ಎಲ್ಲರೂ ಯತ್ನಿಸುತ್ತಿದ್ದರು. ಹೀಗಾಗಿ ಎಲ್ಲ ಸ್ತ್ರೀಯರ ತ್ಯಾಗವು ನಮ್ಮ ಅಕ್ಕನ ತ್ಯಾಗಕ್ಕೆ ಸರಿಎನಿಸಲಾರವು. ಹೆಚ್ಚಿನ ತ್ಯಾಗದಿಂದಲೇ ಮೇದುಳಿನ ಗ್ರಂಥಿಗಳು ಹೋಗಿ ದಿವ್ಯ ಜ್ಞಾನೋದಯವಾಗುವದು. ಆಗ ವೇದಗಳೇ ಅವರ ಮುಖದಿಂದ ಹೊರಬೀಳುವವು. ಅಕ್ಕನ ವಚನಗಳನ್ನು ನೋಡಿದರೆ ಆಕೆಗೆ ಎಂಥ ದಿವ್ಯ ಜ್ಞಾನವಾಗಿತ್ತೆಂದು ತಿಳಿಯುವದು. ಇದಕ್ಕಂತಲೇ ಅವಳ ತ್ಯಾಗ ಹೆಚ್ಚಿನದು.

ಅಕ್ಕನು ಕೆಲವು ವರ್ಷಗಳ ವನವಾಸದಿಂದ ಕಲ್ಯಾಣಕ್ಕೆ ಬಂದು ಶಿವಾನುಭವ ಮಂಟಪಕ್ಕೆ ಬಂದಾಗ ಪ್ರಭುದೇವರು, ಬಸವಣ್ಣನವರು ಮೊದಲಾದವರು ಆಕೆಯ ಕೂಡ ಸಂವಾದಮಾಡಿದ ವಚನಗಳಿರುವವು. ಅದು ಶೂನ್ಯಸಂಪಾದನೆಯಲ್ಲಿ ಸಿಗುವದು. ಓದಿದರೆ ನಮಗೂ ಹುಚ್ಚು ಹಿಡಿಯುವದು ಅಷ್ಟು ದಿಟ್ಟತನ ಧೈರ್ಯ ಜ್ಞಾನ ಸಿದ್ಧಿಗಳು ಆಗಿದ್ದವೆಂದು ಸಹಜ ಗೊತ್ತಾಗುವದು. ಅಲ್ಲಿಯೂ ಕೂಡ ಬತ್ತಲೆಯಾಗಿ ಬಂದಿರುವಳು. ಯಾರಿಗೂ ಅಂಜಲಿಲ್ಲ. ನಾಚಲಿಲ್ಲ. ಮಹಾ ಶಿವಶರಣೆ ಈಕೆ ನಿಜವಾಗಿ ಎಲ್ಲರಿಗೂ ಅಕ್ಕನೇ ಆಗಿದ್ದಳೆಂದು ಅಕ್ಕ ಮಹಾದೇವಿಎಂದು ಅಂದವರು. ಆ ಸಂವಾದದಲ್ಲಿ ಎಲ್ಲರನ್ನು ಸೋಲಿಸಿದ್ದಾಳೆ. ಆಗ ಅಕ್ಕನಿಗೆ ತಮ್ಮ ಶಿವಾನುಭವ ಮಂಟಪದಲ್ಲಿ ಅಗ್ರಸ್ಥಾನವನ್ನು ಕೊಟ್ಟಿದ್ದಾರೆ. ಅಲ್ಲಿ ನಿತ್ಯ ಶಿವಾನುಭವ ಮಂಟಪಕ್ಕೆ ಹಾಗೆ ಬತ್ತಲೇ ಬರುತ್ತಿದ್ದಳು. ಅಡವಿಯಲ್ಲಿ ಹಾಗೆ ಇರುತ್ತಿದ್ದರೆ ಒಂದುರೀತಿ ಬೇರೆ. ಸುಧಾರಿಸಿದ ರೀತಿಯಪ್ರಕಾರ ನಡೆದಂಥ ಶಿವಾನುಭವ ಮಂಟಪಕ್ಕೆ ಹಾಗೆ ಬರುವಳೆಂದರೆ ಎಂಥ ತ್ಯಾಗ, ಎಂಥ ವೈರಾಗ್ಯ, ಎಂಥ ಜ್ಞಾನ ಎಂಥ ವಿಚಾರ ನೋಡಿರಿ. ಇದೇನು ಸಾಮಾನ್ಯ ಕೆಲಸವಲ್ಲ. ಬರೆ ಬಾಯಿಯಿಂದ ಬ್ರಹ್ಮ ನುಡಿಯಲಿಕ್ಕೆ ಬರುತ್ತದೆ. ಅದರಂತೆ ನಡೆಯುವದು ಎಂಥ ಕಠಿಣ ಕೆಲಸ ? ವಿಚಾರಿಸಿ. ನುಡಿದಂತೆ ಅಕ್ಕನು ನಡೆದದ್ದರಿಂದ ಇವಳ ಜ್ಞಾನಪೂರ್ಣ ವಚನಗಳಿಗೆ ಬೆಲೆಬಂದಿದೆ. ಶ್ರೀ ಚನ್ನಬಸ

ವೆ ಶನು ಅಕ್ಕನ ವಚನವನ್ನು ಕುರಿತು ಹೇಳಿದ್ದೇನಂದರೆ-" ಆದ್ಯರ ಅರವತ್ತು ವಚನಕ್ಕೆ ದಣ್ಣಾಯಕರ ಇಪ್ಪತ್ತು ವಚನ, ದಣ್ಣಾಯರ ಇಪ್ಪತ್ತು ವಚನಕ್ಕೆ ಪ್ರಭುದೇವರ ಹತ್ತು ವಚನ, ಪ್ರಭುದೇವರ ಹತ್ತು ವಚನಕ್ಕೆ ಅಜಗಣ್ಣನ ಐದು ವಚನ, ಅಜಗಣ್ಣನ ಐದು ವಚನಕ್ಕೆ ಕೂಡಲ ಚನ್ನಸಂಗಯ್ಯನಲ್ಲಿ ಮಹಾದೇವಿಯಕ್ಕನ ಒಂದು ವಚನ" ಎಂದು ಹೇಳಿದ್ದಾರೆ. ಅಂದರೆ ಅಕ್ಕನ ಜ್ಞಾನವೇ ಎಲ್ಲರಿಗಿಂತ ಹೆಚ್ಚಿನದೆಂದು ಇದರಮೇಲಿಂದ ಸಹಜ ತಿಳಿಯುವದು. ಇಂಥ ಜ್ಞಾನ ಬರಬೇಕಾದರೆ ತ್ಯಾಗದಿಂದಲ್ಲದೆ ಬೇರೆ ಯಾತರಿಂದಲೂ ಶಕ್ಯವಿಲ್ಲ. ಎಲ್ಲರಲ್ಲಿ ಅಕ್ಕನು ಹೆಚ್ಚಿನ ತ್ಯಾಗಮಾಡಿದ್ದಾಳೆಂದೇ ಇಂಥ ದಿವ್ಯ ಜ್ಞಾನೋದಯವಾಯಿತು. ನಮ್ಮನ್ನು ನಾವು ಎಷ್ಟು ಬರಿದನ್ನಾಗಿ ಮಾಡಿಕೊಳ್ಳುವೆವೋ ಅಷ್ಟು ಪರಮಾತ್ಮನ ಕೃಪೆಯು ಬಂದು ಸೇರವದು. ಅಂದರೆ ಸ್ವಲ್ಪ ತ್ಯಾಗಮಾಡಿದರೆ ಸ್ವಲ್ಪ, ಬಹಳ ತ್ಯಾಗಮಾಡಿದರೆ ಬಹಳ ಜ್ಞಾನ, ಅತಿ ತ್ಯಾಗಮಾಡಿದರೆ ಅತಿ ಜ್ಞಾನ, ಮಹಾ ತ್ಯಾಗಮಾಡಿದರೆ, ಮಹಾ ಜ್ಞಾನವು ಸಿಗುವದೆಂದೇ ಇದರಮೇಲಿಂದ ತಿಳಿಯುವದು. ಅಕ್ಕನ ತ್ಯಾಗವು ಎಲ್ಲರಲ್ಲಿ ಹೆಚ್ಚಿನದೆಂದು ಆಕೆಯ ವಚನಗಳಿಗೆ ವಚನಗಳು ಸರಿಯಲ್ಲವೆಂದು ತೂಕ ಮಾಡಿ ಮೇಲಿನ ವಚನದಲ್ಲಿ ಸ್ಪಷ್ಟ ಹೇಳಲಾಗಿದೆ. ಇದಲ್ಲದೆ ಇನ್ನೊಂದು ವಚನದಿಂದ ಅಕ್ಕನು ತ್ಯಾಗ ಅಂದರೆ ಜ್ಞಾನ ಎಷ್ಟೆಂದು ಸ್ಪಷ್ಟ ತಿಳಿಯುವದು, ನೋಡಿರಿ-" ಅಜಕೋಟಿ ವರುಷದವರೆಲ್ಲರೂ ಹಿರಿಯರೇ ? ಹುತ್ತೇರಿ ಬತ್ತ ಬೆಳೆದ ತಪಸ್ವಿಗಳೆಲ್ಲ ಹಿರಿಯರೇ ? ನಡುಮುರಿದು ತಲೆನಡುಗಿ ನೆರೆ ತೆರೆ ಹೆಚ್ಚಿ, ಮತಿಗೆಟ್ಟು ಒಂದನಾಡಹೋಗಿ ಒಂಬತ್ತುನಾಡುವ ಅಜ್ಞಾನಿಗಳೆಲ್ಲರೂ ಹಿರಿಯರೇ ? ಅನುವರಿದು ಘನವ ಬೆರಿಸಿ ಹಿರಿದು ಕಿರಿದೆಂಬ ಭೇದವ ಮರೆದು ಕೂಡಲ ಚನ್ನಸಂಗಯ್ಯನಲ್ಲಿ ಬೆರಿಸಿ ಬೇರಿಲ್ಲದಿಪ್ಪ ಹಿರಿಯತನ ನಮ್ಮ ಮಹಾದೇವಿಯಕ್ಕನಿಗಾಯಿತ್ತು " ಈ ವಚನದಿಂದ ಎಲ್ಲರೂ ಅಕ್ಕನೇ ಹೆಚ್ಚಿನವಳು ಶ್ರೇಷ್ಠಳೆಂದುಹೇಳಿದ್ದಾರೆ. ಇದು ಬಂದದ್ದು ತ್ಯಾಗದಿಂದಹೊರತು ಭೋಗದಿಂದಲ್ಲ. ಸರ್ವಸ್ವವನ್ನು ಸರ್ವವನ್ನು ಶರೀರದ ಪರಿವೆಯನ್ನು ಎಲ್ಲವನ್ನು ತ್ಯಾಗಮಾಡಿದ್ದರಿಂದಲೇ ಇಂಥ ಹೆಚ್ಚಿನ ಸ್ಥಿತಿ ಬಂದಿತಲ್ಲದೆ ಬೇರೆ ಯಾತರಿಂದಲೂ ಶಕ್ಯವಿಲ್ಲ. ಎಲ್ಲ ರೀತಿಯಿಂದ ವಿಚಾರಿಸಲಾಗಿ ಅಕ್ಕನ ತ್ಯಾಗವೇ ಹೆಚ್ಚಿನದೆಂದು ಹೇಳಲಿಕ್ಕೆ ಅಡ್ಡಿ ಇಲ್ಲ.

---

# ಪೂರ್ಣ ಯೋಗಕ್ಕಿಂತ ವೀರಶೈವರ ಷಟ್ಸ್ಥಲವು (ಶಿವಯೋಗವು) ಹೆಚ್ಚಿನದು.

(ಲೇಖಕರು:—ಶ್ರೀ ಸ್ವಾಮಿ ಶಿವಾನಂದರು ಗವಿಮಠ, ತೆಗ್ಗಿಹಳ್ಳಿ, ತಾ.-ಇಂಡಿ)



ವೀರಶೈವರಿಗೆ ಅಷ್ಟಾವರಣ, ಪಂಚಾಚಾರ, ಷಟ್ಸ್ಥಲಗಳೇ ಮುಖ್ಯವಾದವುಗಳು ಇವೇ ಅವರ ಮತತತ್ವಗಳೇ ಸರಿ. ಸದಾಚಾರ, ಗಣಾಚಾರ, ನಿತ್ಯಾಚಾರ, ಶಿವಾಚಾರ ಲಿಂಗಾಚಾರ ಎಂಧು ಐದು ಆಚಾರಗಳು. ಸದಾಚಾರವೆಂದರೆ— ಒಳ್ಳೇ ನೀತಿಯಿಂದ ನ್ಯಾಯದಿಂದ ಸತ್ಯದಿಂದ ನಡೆಯುವದು; ಗಣಾಚಾರವೆಂದರೆ— ಧರ್ಮ ಸತ್ಯ ಅಹಿಂಸೆಗಳಿಂದ ನಡೆದು ಅವುಗಳನ್ನು ರಕ್ಷಿಸುವದು; ನಿತ್ಯಾಚಾರವೆಂದರೆ— ಪೂಜೆ ವ್ರತ ನಿಯಮ ನಿತ್ಯಕರ್ಮಗಳನ್ನು ತಪ್ಪದೇ ಮಾಡುವದು; ಶಿವಾಚಾರವೆಂದರೆ— ಲಿಂಗಾಂಗಿಗಳೇ ಪರಮಾತ್ಮನೆಂದು ನಂಬಿ ಅವರ ಸೇವೆಯನ್ನು ತ್ರಿಕರಣಪೂರ್ವಕ ಮಾಡುವದು; ಲಿಂಗಾಚಾರವೆಂದರೆ— ಇಷ್ಟಲಿಂಗ, ಭಾವಲಿಂಗ, ಪ್ರಾಣಲಿಂಗಗಳನ್ನು ನೇಮದ ಪ್ರಕಾರ ನಿಷ್ಠೆಯಿಂದ ನಿತ್ಯ ಪೂಜೆ ಮಾಡುವದು ಇವು ಮೊದಲು ಬೇಕು. ಇವುಗಳಿಂದ ಶರೀರವೂ ಇಂದ್ರಿಗಳೂ ಮನಸ್ಸೂ ಬುದ್ಧಿಯೂ ನಿತ್ಯ ಪವಿತ್ರವಾಗುತ್ತ ಶುದ್ಧವಾಗುತ್ತ ಹೋಗಿ; ಪಾರಮಾರ್ಥದ ಕಡೆಗೆ ಮಾನವನು ಒಲಿಯುವನು. ಅಷ್ಟರಲ್ಲಿ ಗುರುವಿನ ಕಡೆಯಿಂದ ಲಿಂಗದ ಜ್ಞಾನವನ್ನು ತಿಳಕೊಂಡು ಮಂತ್ರವನ್ನು ಗೌಪ್ಯವಾಗಿ ಉಪದೇಶ ಪಡಕೊಂಡ ಮೇಲೆ ನಿಷ್ಕಾಮವಾಗಿ ಭಕ್ತಿ ಕರ್ಮಗಳನ್ನು ಮಾಡಿ ಅದರ ಫಲವನ್ನು ನರರಿಗೆ ಹರನೆಂದು (ಲಿಂಗಾಂಗಿಗಳು ಶಿವನೆಂದು) ಬಗೆದು; ದಾಸೋಹ ಭಾವದಿಂದ ಅರ್ಪಿಸಿ ಉಳಿದ ಫಲವನ್ನು (ಮಿಕ್ಕ ಪ್ರಸಾದವನ್ನ) ಪ್ರಸಾದವೆಂದು ಸ್ವೀಕರಿಸಿ ಉದಕವನ್ನು ಸತ್ಯ ಶರಣರ ಪಾದೋದಕವೆಂದು ಕೂಡಿದು ಮಹಾವಿಭೂತಿ ಅಂದರೆ ಮಹಾಮಹಿಮಾಶಾಲಿ, ಸಿದ್ಧಪುರುಷ, ಪವಾಡ ಪುರುಷನಾಗಿ, ರುದ್ರಾಕ್ಷಿ ಪಡೆದು ಅಂದರೆ ಶಿವನ ಮೂರನೇ ಕಣ್ಣನ್ನು ಹೊಂದಿ ಅದರ ಜ್ಞಾನವನ್ನು ಪಡೆದು ಜಂಗಮ ಮೂರ್ತಿ ಅಂದರೆ ಜಗಭರಿತನಾಗು ಎಂದರೆ ಪರಬ್ರಹ್ಮನಾದಾಗ ಅಷ್ಟಾವರಣಗಳನ್ನು ಸಾಧಿಸಿದಂತೆ ಆಗುವದು ಇದೆಲ್ಲಕ್ಕೂ ಮೊದಲಿನಿಂದಲೂ ಪಂಚಾಚಾರಗಳಂತೆ ಸಾಮಾನ್ಯವಾಗಿ ನಡೆಯುತ್ತ ಬಂದಿರಬೇಕು.

ಅಂದರೆ ಮೇಲೆ ವಿವರಿಸಿದ ಅಷ್ಟಾವರಣಗಳಂತೆ ಮಾನವನು ದೇವಮಾನವ ನೆಂದರೆ ಮಹಾಶರಣನಾಗಿ ಐಕ್ಯನಾಗುವನ ಜೀವನ್ಮುಕ್ತನಾಗುವನು. ಇವನೇ ಜಂಗಮನು ಹೊರತು ಅಯ್ಯನವರ ಹೊಟ್ಟೆಯಿಂದ ಹುಟ್ಟಿದ ಮಾತ್ರಕ್ಕೆ ಜಂಗಮನಾಗಲಾರನು. ಬ್ರಹ್ಮಜ್ಞಾನವುಳ್ಳವನೇ ಬ್ರಾಹ್ಮಣನಾಗುವನೆಂದು ವೇದಾಂತದಲ್ಲಿ ಹೇಳಿದಂತೆ ವೀರಶೈವರಲ್ಲಿ ಮಹಾಶರಣನಾಗಿ ಜೀವನ್ಮುಕ್ತ (ಐಕ್ಯ) ಸ್ಥಿತಿಗೆ ಬಂದಾಗ ಜಂಗಮನಾಗುವನು. ಅಂಥವರೇ ಗರುಗಳಾಗು ವರು. ಇವರಿಗೇ ಎಲ್ಲತರದ ಮಂಟಪ ಅಮರಗಣಂಗಳ ಪೂಜೆಗೆ ಸಲ್ಲತ ಕ್ಕವರು. ಹೊರತು ಅಯ್ಯನವರ ಕುಲಕ್ಕೆ ಪೂಜೆಯು ಗುತಗೆಇಲ್ಲ. ಈ ಪೂಜೆಯಿಂದ ಲಾಭವೇ ಇಲ್ಲ. ಎಲ್ಲ ಬಗೆಯ ಹಾನಿಯೇ ಆಗುವದು. ಶರಣನಿಗೆ ಕುಲವಿಲ್ಲವೆನ್ನುವದನ್ನು ಮಹಾನುಭಾವರಾದ ವೀರಶೈವರಲ್ಲೇ ಜ್ಞಾನ ಸೂರ್ಯನೆನಿಸಿದ ಜಗದಣ್ಣ ಬಸವಣ್ಣ ಮಹಾತ್ಮನೇ ತನ್ನ ಶಿವಾನುಭವ ಮಂಟಪದಲ್ಲಿಯೇ ತೋರಿಸಿ ಕೊಟ್ಟಿದ್ದು ಸರ್ವಶೃತವದೆ.

ಈ ಮೇಲೆ ವಿವರಿಸಿದ ಅಷ್ಟಾವರಣಗಳಿಗೆ ಸಂಬಂಧಿಸಿದಂತೆ ಷಟ್ಸ್ಥಲ ಗಳೂ ಇರುವವು. ಅವುಗಳ ವಿವರಣೆಯನ್ನು ಸ್ವಲ್ಪದರಲ್ಲಿ ವಿವರಿಸುವೆನು. ಆಗ ಈ ಅಷ್ಟಾವರಣಕ್ಕೂ ಷಟ್ಸ್ಥಲಕ್ಕೂ ನಿಕಟಸಂಬಂಧವಿರುವದೆಂದು ಅನು ಭವವು ಬರಲಾರದೆ ಇರದು. ಆದರೆ ಪಂಚಾಚಾರಗಳಂತೂ ಮೊದಲಿಗೆ ಪ್ರತಿ ಯೊಬ್ಬನಿಗೆ ಬೇಕೇಬೇಕು. ಮುಕ್ತಿಯ ಕಟ್ಟಡವು ಇವುಗಳ ಮೇಲೆ ನಿಂತಿದೆ. ಭಕ್ತಸ್ಥಲ, ಮಹೇಶ್ವರಸ್ಥಲ, ಪ್ರಸಾದಿಸ್ಥಲ, ಪ್ರಾಣಲಿಂಗಿಸ್ಥಲ, ಶರಣಸ್ಥಲ, ಐಕ್ಯಸ್ಥಲ ಹೀಗೆ ಆರುಸ್ಥಲಗಳನ್ನು ಕ್ರಮಾಂಕವಾಗಿಯೇ ಏರಬೇಕಾಗಿದೆ. ಶರಣರು ಆಗಿನ ಶಿವಾನುಭವಮಂಟಪದಲ್ಲಿ ಚರ್ಚೆಮಾಡಿತು. ಈ ಷಟ್ಸ್ಥಲವನ್ನು ಸರ್ವಾನುಮತದಿಂದ ಪಾಸು ಮಾಡಿದ್ದಾರೆ. ಇದೊಂದು ಜಗತ್ತಿಗೆ ವೀರಶೈ ವರು ಕೊಟ್ಟ ಒಳ್ಳೇ ಹಿರಿದಾದ ಕಾಣಿಕೆಯಾಗಿದೆ. ಇದರಲ್ಲಿ ಜಗತ್ತಿನ ಸರ್ವಧರ್ಮ ಹಾಗೂ ಮತಗಳ ತತ್ವಗಳು ಅಡಕವಾಗಿವೆ. ಇಂಥ ಶ್ರೇಷ್ಟಪರಿ ಪೂರ್ಣ ತತ್ವಜ್ಞಾನವನ್ನು ಯಾವ ಮತದವರೂ ಯಾವ ಜ್ಞಾನಿಗಳೂ ಯಾವ ಅವತಾರಿಯೂ ಯಾವ ಮಹಾತ್ಮನೂ ಇನ್ನೂವರೆಗೆ ಕಾಣಿಕೆಯೂ ಕೊಟ್ಟಿಲ್ಲೆಂದು ಧಾರಾಳವಾಗಿ ಹೇಳಬಹುದು. ಇಂಥ ತತ್ವವನ್ನು ನಾವು ಕಾಲಕೆಳಗೆ ಹಾಕಿ ತುಳಿಯುತ್ತಿರುವೆವು. ಈಗಿನ ವೀರಶೈವ ತತ್ವವಿಚಾರ, ಆಚಾರವೆಂದರೆ ಚಿಕ್ಕಮಕ್ಕಳ ಗೊಂಬೆ ಆಟವಾಗಿ ಬಿಟ್ಟಿದೆ. ಒಳ್ಳೇ ತ್ಯಾಗದ

ಪ್ರಚಾರಕರಾದರೆ ಅರ್ಧಗೋಲದಲ್ಲಿಯೇ ಈ ಷಟ್‍ಸ್ಥಲವು ವ್ಯಾಪಿಸಿಬಿಡುತ್ತಿತ್ತು. ಇರಲಿ ಇದಕ್ಕೆ ಆ ಕಾಲವು ಎಂದಾದರೊಮ್ಮೆ ಬಂದೀತೆಂಬ ಆಶೆ ಇದೆ.

(೧) ಭಕ್ತಸ್ಥಲಃ— ಇದು ವೇದಾಂತದ ಭಕ್ತಿಯೋಗವೇ ಸರಿ. ಭಕ್ತಿಯೆಂದರೆ ಪರಮಾತ್ಮನ ಮೇಲೆ ತ್ರಿಕರಣಪೂರ್ವಕ ಮಾಡುವ ಪ್ರೀತಿಯೇ ಹೊರತು ಬೇರೆ ಇಲ್ಲ. ಗುರು, ಯೋಗಿ, ಜಂಗಮ, ಶರಣರು ಮಹಾತ್ಮರು ಜ್ಞಾನಿಗಳು ತ್ಯಾಗಿಗಳು ಜೀವ ಭಕ್ತರು ಕೂಡ ಜೀವಂತ ದೇವರುಗಳೇ ಸರಿ ಅಂಗವು ಅವನ ಪ್ರತೀತವು ಲಿಂಗವನ್ನು ಭಕ್ತಿಯಿಂದ ಪೂಜಿಸುವದು ಯೋಗ್ಯ. ಗುರು ಮೊದಲಾದವರನ್ನೂ ಸಹ ಸೇವಿಸುವದು ಭಕ್ತಿಯಲ್ಲಿಯೇ ಬರುವದು. ಶರೀರವು ಆತ್ಮಲಿಂಗನ ಗುಡಿಯೆಂದು ತಿಳಿದು ಈ ಶರೀರವನ್ನು ಸದಾ ಪವಿತ್ರಗೊಳಿಸುವದು. ಮನವನ್ನು ಶುಚಿಗೊಳಿಸಲು ಸುವಿಚಾರ ಮಾಡುವದು ; ಸವಿ ವಚನಗಳನ್ನು ನುಡಿದು ವಾಚಾ ಶುದ್ಧಗೊಳಿಸುವದು ; ಇದರಿಂದ ಸುಬುದ್ಧಿಯುಳ್ಳವನಾಗುವನು. ಇವೇ ಮೊದಲಾದ ಸುಬುದ್ಧಿಯು ಭಕ್ತಿಸ್ಥಲಕ್ಕೆ ಸಂಬಂಧಿಸಿರುವವು. ಐಹಿಕ ವಿಷಯ ಸುಖ ಅಥವಾ ಇಂದ್ರಿಯ ಸುಖಗಳನ್ನು ವರ್ಜಿಸಬೇಕು. ಅಂದರೆ ವೇದಾಂತದ ಭಾಷೆಯಲ್ಲಿ ಹೇಳಬೇಕಾದರೆ- ಶಮ ದಮೆಗಳನ್ನು ಮಾಡಬೇಕಾಗುವದು. ತ್ಯಾಗದಿಂದಲೇ ಭಕ್ತಿ ಪ್ರಬಲವಾಗಿ ಬೆಳೆಯುವದು. ಭಕ್ತಿಯೆಂಬುವ ನಿಧಾನವ ಸಾಧಿಸುವದೇ ಶಿವಪ್ರೇಮವೆಂಬ ಅಂಜನವ ನೆಚ್ಚುಕೊಂಬುದು ಭಕ್ತನಾದವಂಗೆ ಇದೇ ಪಥವಾಗಿರಬೇಕು. ನಮ್ಮ ಕೂಡಲಸಂಗನ ಶರಣರ ಅನುಭಾವ ಗಜವೈದ್ಯ

ವೇದಪ್ರಿಯನಲ್ಲ, ಶಾಸ್ತ್ರಪ್ರಿಯನಲ್ಲ, ನಾದಪ್ರಿಯನಲ್ಲ, ಸ್ತೋತ್ರಪ್ರಿಯನಲ್ಲ, ಭಕ್ತಿಪ್ರಿಯನಲ್ಲ, ಯುಕ್ತಿಪ್ರಿಯನಲ್ಲ, ಇವೆಲ್ಲಕ ಸಾಧ್ಯ ನೀನು ಕಂಡಯ್ಯ! ಭಕ್ತಿಪ್ರಿಯನೆಂದು ಮರೆಹೊಕ್ಕೆ ಕಾಯಯ್ಯ ಕಪಿಲಸಿದ್ಧಮಲ್ಲಿಕಾರ್ಜುನಾ.

ಪರಮಾತ್ಮನೂ ಯಾತರಿಂದಲೂ ತೃಪ್ತನಾಗಿ ತೀವ್ರ ಒಲಿಯುವದಿಲ್ಲ. ಆದರೆ ಭಕ್ತಿಯೆಂಬ ಪ್ರೇಮರಸಕ್ಕೆ ಬಹು ತೀವ್ರ ಕರಗುವನು. ಮೆಚ್ಚುವನೆಂದು ಧಾರಾಳವಾಗಿ ಹೇಳಿದೆ. ಭಕ್ತಿಮುಖಸಾಧನ ಮಾಡುವಾಗ ಉಳಿದ ಯಾವದನ್ನೂ ಎಂದೂ ಮಾಡಬೇಡೆಂದೇ ಇವುಗಳ ಅರ್ಥವಿರುವದು. ಇದು ಮನವನ್ನು ಒಂದೇ ಒಂದಾದ ಪರಮಾತ್ಮನಲ್ಲಿ ಇರಿಸಲಿಕ್ಕೆ ಉಪಾಯ. ಹೀಗಾದರೆ ಮನಸ್ಸಿಗೆ ಸರ್ವಬಲಬರುವದು.

ಕೇಳಿದರೆ ಕೇಳು ಕೇಳದಿರ್ದೊಡೆ ಮಾಣು ನಾ ನಿನ್ನ ಹಾಡಿನಲ್ಲಿದೆ ಸೈರಿಸಲಾರೆ! ಒಲಿದರೆ ಒಲಿ ಒಲಿಯದಿರ್ದೊಡೆ ಮಾಣು ನಾ ನಿನ್ನ ಪೂಜಿಸಲಾರದೆ ಸೈರಿಸಲಾರೆನಯ್ಯ. ಮೆಚ್ಚಿದರೆ ಮೆಚ್ಚು ಮೆಚ್ಚದಿರ್ದೊಡೆ ಮಾಣು ನಾನಿನ್ನನಪ್ಪಿದಲ್ಲದೆ ಸೈರಿಸಲಾರೆನಯ್ಯ! ನೋಡಿದೊಡೆ ನೋಡು ನೋಡದಿರ್ದೊಡೆ ಮಾಣು. ನಾನಿನ್ನ ನೋಡಿ ಹಿಗ್ಗಿ ಹಾರೈಸಿದಲ್ಲದೆ ಸೈರಿಸಲಾರೆನಯ್ಯ! ಚನ್ನಮಲ್ಲಿಕಾರ್ಜುನಯ್ಯ ನಾನಿಮ್ಮ ಪೂಜಿಸಿ ಹರುಷದೊಳೋಲಾಡುವೆನಯ್ಯ.

ಈ ವಚನವು ಒಳ್ಳೇ ನಿಷ್ಕಾಮ ಭಕ್ತಿಯನ್ನೇ ಅನುಭವಕ್ಕೆ ತಂದು ಕೊಡುತ್ತಿರುವದು. ಇದರಲ್ಲಿಯೂ ಕೂಡ ಭಕ್ತಿಯ ಸಾಧನೆ ಮಾಡುವ ಕಾಲಕ್ಕೆ ಉಳಿದುದೇನನ್ನೂ ಮಾಡಬಯಸುವದಿಲ್ಲ. ಹಾಗೆ ಮಾಡಿದರೆ ಭಕ್ತಿ ಕೆಟ್ಟು ಪರಮಾತ್ಮನ ದರ್ಶನವು ದೂರಾಗುವದು. ಹೀಗೆ ಅಸಂಖ್ಯ ವಚನಗಳಿರುವವು, ಮೊದಲಿಗೆ ಗುರುಲಿಂಗ ಜಂಗಮ ಅಂದರೆ ಪರಮಾತ್ಮನ ಮೇಲೆ ಒಳ್ಳೇ ವಿಹ್ವಲನಾಗಿ ಭಕ್ತಿಯನ್ನು ಮಾಡುತ್ತ ರೋಮಾಂಚಗಳು ಪುಳುಕಾಶ್ರುಗಳು ಹೊರಡುವಂತೆ ಆಗಬೇಕು. ಇದೇ ದಿವ್ಯಭಕ್ತಿಯ ಲಕ್ಷಣ. ಶಿವಶರಣರು ಇದನ್ನು ಸಾಧಿಸಿದ್ದರು.

(೨) ಮಹೇಶ್ವರಸ್ಥಲಃ ಭಕ್ತಸ್ಥಲವು ಭಾವ ಪ್ರಾಧಾನ್ಯವಿದ್ದರೆ, ಮಹೇಶ್ವರಸ್ಥಲವು ವಿಚಾರ ಪ್ರಧಾನ್ಯವಾದುದು ವಿಚಾರವೆಂದರೆ ಬುದ್ಧಿಯ ಕೆಲಸ ಇದೇ ವೇದಾಂತದ ಜ್ಞಾನಯೋಗವೇ ಸರಿ. ಭಕ್ತಿಯಲ್ಲಿ ಮುಂದುವರಿದ ಸಾಧಕನು ಪರಮಾತ್ಮನ ಬಗ್ಗೆ ಅಂದರೆ ಅವನ ಮಹಿಮೆ, ಲೀಲೆ, ಶಕ್ತಿ, ಸ್ವರೂಪ ದೊದಲಾದವುಗಳ ಬಗ್ಗೆ ವಿಚಾರ ಮಾಡಹತ್ತುವನು. ಜಗತ್ತು ಶರೀರ ಈ ಪ್ರಪಂಚ ಮೊದಲಾದವುಗಳು ಅಸ್ಥಿರ ನಾಶವಾಗತಕ್ಕವುಗಳು ಪರಮಾತ್ಮನೊಬ್ಬನೇ ಶಾಶ್ವತ ಸತ್ಯವೆಂಬ ವಿಚಾರವು ಬರುವದು. ಇದೇ ಭಕ್ತಿಸ್ಥಲದನಂತರ ಸಾಧಕನು ಏರಬೇಕಾದ ಎರಡನೇ ಮೆಟ್ಟಲು ಅಂದರೆ ಭಕ್ತಿ ಮಾಡುತ್ತ ಮಾಡುತ್ತ ಹೋದಂತೆ ಜ್ಞಾನ ಸೂರ್ಯನೂ ಪ್ರಕಟನಾಗುವನು ಎಂದು ಅರ್ಥ ಮಹೇಶ್ವರಸ್ಥಲವು ಉಚ್ಚ ದಿವ್ಯ ಭಕ್ತಿಯನ್ನೇ ಹೇಳುವದು.

"ಸಾವಿಲ್ಲದ ಕೇಡಿಲ್ಲದ ರೂಹಿಲ್ಲದ ಚಲುವಂಗಾನೊಲಿದೆನವ್ವಾ. ಎಡೆ ಇಲ್ಲದ ಕಡೆ ಇಲ್ಲದ ತೆರಹಿಲ್ಲದ ಕುರುಹಿಲ್ಲದ ಚಲುವಂಗಾನೊಲಿದೆನವ್ವಾ. ನೀ ಕೇಳಾ ಭವವಿಲ್ಲದ ಭಯವಿಲ್ಲದ ನಿರ್ಭಯ ಚಲುವಂಗೊಲಿದೆ ಕುಲಸೀಮೆ

ಇಲ್ಲದ ನಿಸ್ಸೀಮ ಚಲುವಂಗೆ ನಾನೊಲಿವೆ ಇದುಕಾರಣ ಚನ್ನಮಲ್ಲಿಕಾರ್ಜುನ ಚೆಲುವ ಗಂಡ ನೆನಗೆ ಈ ಸಾವ ಕೆಡುವ ಗಂಡರನೊಯ್ದು ಒಲೆಯೊಳಗಿಕ್ಕು." ಇದು ನಿರಾಕಾರ ನಿರ್ಗುಣ ನಾಮರೂಪಾತೀತ ಪರಮಾತ್ಮನ ವರ್ಣನೆ, ಈ ಸ್ಥಲದಲ್ಲಿ ಇಂಥ ಜ್ಞಾನವಾಗುವದು.

ಮನೆನೋಡಾ ಬಡವರು, ಮನನೋಡಾ ಘನಸಂಪನ್ನ, ಸೋಕಿನಲ್ಲಿ ಸುಖಿ, ಸರ್ವಾಂಗಕಲಿ, ಪ್ರಸಾದಕ್ಕನುವಿಲ್ಲ, ಬಂದ ತತ್ಕಾಲ ಕೊಂಟು ಕೂಡಲ ಸಂಗನ ಶರಣರು ಸ್ವತಂತ್ರರು, ಧೀರರು. ಭಕ್ತಿಸ್ಥಲವನ್ನು ದಾಟಿ ಮಹೇಶ ಸ್ಥಲದಲ್ಲಿ ಪ್ರಗತಿಯಾದಾಗ ಸಾಧಕನು ಈ ವಚನದಂತೆ ಆಗುವನೆಂದು ಇದರ ಭಾವ.

ತನುವಿನಲಿ ನಿರ್ಮೋಹ, ಮನದಲ್ಲಿ ನಿರಹಂಕಾರ, ಪ್ರಾಣದಲ್ಲಿ ನಿರ್ಭಯ, ಚಿತ್ತದಲಿ ನಿರಪೇಕ್ಷ ವಿಷಯದಲಿ ಉದಾಸೀನ, ಭಾವದಲಿ ದಿಗಂಬರ ಜ್ಞಾನ ದಲಿ ಪರಮಾನಂದ ನೆಲೆಗೊಂಡ ಬಳಿಕ ಸೌರಾಷ್ಟ್ರ ಸೋಮೇಶ್ವರಲಿಂಗವು ಬೇರಿಲ್ಲ ಕಾಣಿರೋ? ಮಹೇಶ್ವರಸ್ಥಲದ ಅಂತ್ಯದಲ್ಲಿ ಈ ಪ್ರಕಾರ ನೆಲಿಸು ವದು ಇದು ಜ್ಞಾನಯೋಗಿಯ ನಿಲಯವು.

(೩) ಪ್ರಸಾದಿಯಸ್ಥಲ:—ಭಕ್ತಸ್ಥಲ ಹೃದಯಕ್ಕೆ (ಭಾವಕ್ಕೆ) ಮಹೇಶ ಸ್ಥಲ ಬುದ್ಧಿಗೆ (ವಿಚಾರಕ್ಕೆ) ಸಂಬಂಧಿಸಿದೆ. ಪ್ರಸಾದಿಯಸ್ಥಲ ಕ್ರಿಯೆಗೆ (ಶರೀರಕ್ಕೆ)ಸಂಬಂಧಿಸಿದೆ. ಇದೇ ವೇದಾಂತದ ಕರ್ಮಯೋಗವು. ಭಾವಕ್ಕೂ ವಿಚಾರಕ್ಕೂ ಹೊಳೆದ ಸತ್ಯಾನುಭವವನ್ನು ಆಚರಣೆಯಲ್ಲಿ ತಂದರೆ ಅದು ಸತ್ಯವೆಂದು ಗೋಚರವಾಗುವದು ಇದೇ ಪೂರ್ಣ ಯೋಗವಾಗುವದು. ಇಲ್ಲಿಗೆ ಪೂರ್ಣ ಯೋಗದ ಕೆಲಸ ತೀರಿತು. ಕ್ರಮವಾಗಿ ಕರ್ಮ, ಭಕ್ತಿ, ಜ್ಞಾನ ಗಳು ಕೂಡಿದರೆ ಪೂರ್ಣ ಯೋಗವಾದಂತೆ ಆಯಿತು. ಭಾರತದ ಎಲ್ಲ ಧರ್ಮಗಳೂ ಎಲ್ಲ ಮತಗಳೂ ಇಲ್ಲಿಗೆ ನಿಂತುಬಿಟ್ಟಿವೆ. ಇದಕ್ಕೆ ಅರವಿಂದರ ಪೂರ್ಣ ಯೋಗವೆಂದು ಸಹ ಕೆಲವರು ಕರೆಯುತ್ತಾರೆ. ವೀರಶೈವರಲ್ಲಿ ಮೊದಲು ಭಕ್ತಿ, ಆಮೇಲೆ ಜ್ಞಾನ, ಆಮೇಲೆ ಕ್ರಿಯೇ ಹೀಗೆ ಹೇಳಿದ್ದಾಗಿದೆ. ಇದೇ ಮಾರ್ಗ ಸರಿ ಎನಿಸುವದು. ಯಾಕಂದರೆ ದೇವರ ಮೇಲೆ ಭಕ್ತಿಮಾಡಿ ಜ್ಞಾನಪಡೆದು ಅದನ್ನು ಸರಿಯಾಗಿ ಪಡೆದದ್ದನ್ನು ವರೆಗಲ್ಲಿಗೆ ಹಚ್ಚಿ ಪರೀಕ್ಷಿಸಿ ಕೊಳ್ಳುವದಕ್ಕೆ ಕರ್ಮಮಾಡುವದು. ಅಂದರೆ ಪರಸೇವೆ ಮಾಡುವದೇ ಆಗಿದೆ. ಪ್ರಸಾದಿಸ್ಥಲವೆಂದರೆ ತಾನು ಮಾಡುವ ಕರ್ಮದ ಫಲಪ್ರಾಪ್ತಿಯನ್ನು ಗುರು ಲಿಂಗಜಂಗಮಕ್ಕೆ ಅಂದರೆ ನರರೂಪದಲ್ಲಿರುವ ಹರನಿಗೆ ಅರ್ಪಿಸುವದು.

ಮಿಕ್ಕ ಪ್ರಸಾದವನ್ನು ಅಂದರೆ ಹೊಟ್ಟೆಬಟ್ಟೆಯ ಪೂರ್ತಿಯಷ್ಟನ್ನೆಲ್ಲ ಸ್ವೀಕರಿಸುವನು. ಪ್ರಸಂಗಬಂದರೆ ಅದನ್ನು ಕೂಡ ಅರ್ಪಿಸುವನು. ಇದೇ ಕರ್ಮಫಲ ತ್ಯಾಗ ಅಥವಾ ನಿಷ್ಕಾಮ ಕರ್ಮಯೋಗವೇ ಸರಿ. ಇದೇ ವೀರಶೈವರ ದಾಸೋಹವೆನಿಸುವದು. ಮೊದಲಿಗೆ ನಿಷ್ಕಾಮಕರ್ಮವು ಯಾವ ಸಾಧಕನಿಗೂ ಸಾಧ್ಯವಾಗುವದಿಲ್ಲ. ಕಾರಣ ಮೊದಲು ಕರ್ಮ, ಆಮೇಲೆ ಭಕ್ತಿ ಆಮೇಲೆ ಜ್ಞಾನ ಇದು ಸಮಂಜಸವಾಗಲಾರದು. ವೀರಶೈವರ ಭಕ್ತಿ, ಜ್ಞಾನ, ಕರ್ಮ- ಈ ಕ್ರಮಾಂಕವೇ ಸರಿಯನಿಸುವದು.

"ಲಿಂಗಕ್ಕೆಂದೇ ನೆನೆವೆ, ಲಿಂಗಕ್ಕೆಂದೇ ಮಾಡುವೆ, ಲಿಂಗಕ್ಕೆಂದೇ ಕೊಡುವೆ, ಸಕಲ ಪದಾರ್ಥಗಳ ಲಿಂಗಕ್ಕೆಂದೇ ಭಾವಿಸುವೆ. ಅಂಗ ಗುಣಂಗಳ ನರಿಯೆನಯ್ಯ, ಲಿಂಗಕ್ಕೆಂದೇ ಕಾಮಿಸುವೆನು. ನಿಃಕಾಮಿಯಾಗಿ, ಎನ್ನ ದೇಹೇಂದ್ರಿಯ ಮನ ಪ್ರಾಣಾದಿಗಳು ಲಿಂಗದ ಸತಿಯಾಗಿ ಲಿಂಗಕೆಂದೇ ಬಯಸಿ, ಲಿಂಗಪ್ರಾಣಿಗಳಾದ ಶರಣ ಲಿಂಗಕ್ಕೆಂದೇ ಕೈಕೊಂಬೆನು, ಅನರ್ಪಿತವನರಿಯೆ ಕೂಡಲಸಂಗಮದೇವಾ."

ಇಲ್ಲಿ ಪ್ರಸಾದಿಸ್ಥಲದಲ್ಲಿ ಮಾಡುವ ನಿಜವಾದ ಪರಸೇವೆ ಅಂದರೆ ನಿಷ್ಕಾಮಕರ್ಮಯೋಗವನ್ನು ಸರಸಾಗಿ ಹಾಡಿದ್ದಾರೆ. ಮಾಡುವದು, ಗಳಿಸುವದು ಎಲ್ಲವೂ ಪರರಿಗಾಗಿ ಎಂದು ಹೇಳಿದೆ.

ಪರಮಪದವಿಯ ನಿಮ್ಮ ಪದದಲ್ಲಿ ಕಟ್ಟಿಕೊಳ್ಳಿ. ಪರಮಪದವಿಯ ನಿಮ್ಮ ಎದೆಯಲ್ಲಿ ಇರಿಸಿಕೊಳ್ಳಿ. ಎನಗೆ ನಿಮ್ಮ ತೊತ್ತುಸೇವೆಯೇ ಸಾಕು. ಮಹಾಲಿಂಗ ಕಲ್ಲೇಶ್ವರದೇವಾ, ಪರಮಪದವಿಯ ನಿಮ್ಮ ತಲೆಯಲ್ಲಿ ಸುತ್ತಿಕೊಳ್ಳಿ. ಇಂಥ ನಿಷ್ಕಾಮ ಸೇವೆಯೆ ಶರಣನಿಗೆ ಪರಮಾನಂದವನ್ನು ಮಾಡುವದು ಯಾವ ಪದವಿಯು ಆಶೆ ಮಾಡಿಲ್ಲ. ಅವೆಲ್ಲ ತುಚ್ಛವೆಂದು ಹೇಳಿದ್ದಾರೆ.

ಈ ಪ್ರಕಾರ ಪ್ರಸಾದಿಸ್ಥಲವು ಒಳ್ಳೇ ಮಹತ್ವವೆಂದು ಇದರ ಮೇಲಿಂದ ಸಹಜ ಕಂಡು ಬರಲಾರದೆ ಇರದು. ಎಲ್ಲರೂ ನುಡಿಯುವರೇ ಇರುವರು ಆದರೆ ನುಡಿದಂತೆ ನಡೆಯುವವರು ಸಿಗುವದು ಬಹು ವಿರಳ. ಎಲ್ಲರೂ ಗುರುಗಳಾಗಬೇಕೆನ್ನುವರು. ಆದರೆ ಯಾರಿಗೂ ಶಿಷ್ಯರಾಗುವದೇ ಬೇಡಾಗಿರುವದು.

(೪) ಪ್ರಾಣಲಿಂಗಿಸ್ಥಲ:— ಹಿಂದಿನ ಮೂರು ಸ್ಥಲಗಳಲ್ಲಿ ಆತ್ಮಲಿಂಗ ಬೇರೆ ಪರಮಾತ್ಮ ಬೇರೆ; ಶಿವ ಬೇರೆ; ಜೀವ ಬೇರೆ ಎಂಬ ದ್ವೈತಾ

ಭಾವವು ಇನ್ನೂ ಸಾಧಕನಲ್ಲಿ ತಲೆದೋರುವದು. ಭಕ್ತಮಹೇಶ, ಪ್ರಸಾದಿ ಸ್ಥಲಗಳನ್ನು ಸಾಧಕನು ಸಾಧಿಸಿದ ಮೇಲೆ ಪ್ರಾಣಲಿಂಗಿ ಸ್ಥಲವನ್ನು ಹತ್ತುತ್ತಾನೆ. ಅಂದರೆ ಲಿಂಗಪ್ರಾಣಿಯಾಗುತ್ತಾನೆ. ಆಗ ಶಿವೋಹಂಭಾವವು ಅಳವಡುತ್ತದೆ. ಇಲ್ಲಿಯ ವರೆಗೆ ಹೊರಗೆ ಹುಡುಕುತ್ತಿರುವ ಶಿವನು ತನ್ನೊಳಗೆ ತಾನೇ ಇರುವನೆಂದು ಅನುಭವವಾಗುತ್ತದೆ.

"ಉಳ್ಳವರು ಶಿವಾಲಯ ಮಾಡಿಪರು, ನಾನೇನ ಮಾಡುವೆನಯ್ಯ? ಬಡವನು. ಎನ್ನ ಕಾಲೇ ಕಂಬ, ದೇಹವೇ ದೇಗುಲ, ಶಿರವೇ ಹೊನ್ನ ಕಳಸವಯ್ಯ ಕೂಡಲಸಂಗಮದೇವ ಕೇಳಯ್ಯ, ಸ್ಥಾವರಕ್ಕಳಿವುಂಟು ಜಂಗಮಕ್ಕಳಿವಿಲ್ಲ.

ಈ ವಚನದಲ್ಲಿ ಇಷ್ಟಲಿಂಗ ಪೂಜೆ ನಿಂತುಹೋದ ಸ್ಥಿತಿಯನ್ನು ಹೇಳಿದ್ದಾರೆ. ತಾನೇ ದೇವರೆಂಬ ಭಾವವು ಅಳವಟ್ಟವನೇ ಜಂಗಮನೆಂದು ಅರ್ಥವಾಗುವದು. ಜಂಗಮನು ಯಾರೆಂದು ತಿಳಿದುಕೊಳ್ಳಬೇಕು.

ಅಂಗಲಿಂಗವ ವೇಧಿಸಿ ಅಂಗಲಿಂಗದೊಳಗಾಯಿತ್ತು. ಮನಲಿಂಗವ ವೇಧಿಸಿ ಮನಲಿಂಗದೊಳಗಾಯಿತ್ತು. ಭಾವಲಿಂಗವ ವೇಧಿಸಿ ಭಾವಲಿಂಗದೊಳಗಾಯಿತ್ತು. ಚನ್ನಮಲ್ಲಿಕಾರ್ಜುನ ನಿಮ್ಮೊಲುಮೆಯ ಸಂಗದಲ್ಲಿದ್ದು ಸ್ವಯಲಿಂಗಿಯಾದೆನು.

ಈ ವಚನದಲ್ಲಿ ಲಿಂಗಾಂಗಸಾಮರಸ್ಯವನ್ನು ಹೇಳಲಾಗಿದೆ. ಅಂಗ, ಮನ, ಭಾವಗಳಲ್ಲೆಲ್ಲ ಲಿಂಗಮಯವಾದವು. ಅವು ತಮ್ಮ ಗುಣಗಳನ್ನು ಸಂಪೂರ್ಣ ಕಳಕೊಂಡು ಲಿಂಗಗುಣಗಳನ್ನೇ ಹೊಂದಿದವೆಂದು ಇದರ ಅರ್ಥ ಅಂದರೆ 'ಶಿವೋಹಂ' ತತ್ವವನ್ನೇ ಇವು ಹೇಳುವವು.

ತನ್ನತಾನರಿದಡೆ ತಾನೇ ಗುರು, ತಾನೇಲಿಂಗ, ತನ್ನ ನಿಷ್ಪತ್ತಿಯೇ (ಸ್ವರೂಪಜ್ಞಾನ) ಜಂಗಮ. ಇಂತೀತ್ರಿವಿಧವು ಒಂದಾದಡೆ ರಾಮೇಶ್ವರಲಿಂಗವು ತಾನೇ.

ತನ್ನ ಅರುವೇ ಗುರುಲಿಂಗಜಂಗಮವೆಂದು ಸ್ಪಷ್ಟ ಅಭಿಪ್ರಾಯವದೆ. ಗುರುಲಿಂಗಜಂಗಮರ ಮರ್ಮವನ್ನರಿತು ವೀರಶೈವ ಮತಕ್ಕೆ ಮಹತ್ವವನ್ನು ಕೊಡಬೇಕೆಂಬುದನ್ನು ತಿಳಿದು ನಡೆದರೆ ಸಾಕು. ಇದೂಕೂಡ ಶಿವೋಹಂ ತತ್ವವನ್ನೇ ಸಾರುವದು.

(೫) ಶರಣಸ್ಥಲಃ— ಇದೇ ಜೀವನ್ಮುಕ್ತ ಸ್ಥಿತಿ ಇವನೇ ಸ್ಥಿತಿಪ್ರಜ್ಞ ಪ್ರತ್ಯಕ್ಷ ಪರಮೇಶ್ವರನಾದಬಳಿಕ ಅವನಿಗೆ ಯಾವ ಚಿಂತೆ ಆಶೆ ಅಧಿವ್ಯಗ

ಭಾವವೂ ಇರುವದಿಲ್ಲ. ಇಷ್ಟಾದರೂ ಕೂಡ ಜೀವಕೋಟಿಯನ್ನು ಮುಕ್ತ ಮಾಡುವ ಹೊಣೆಯನ್ನು ಹೊತ್ತು ಪ್ರಪಂಚದಲ್ಲಿ ಇರುತ್ತಾನೆ. ಇವನಿಗೆ ಯಾವ ಕರ್ಮದ ಕಟ್ಟಳೆಗಳಿರುವದಿಲ್ಲ. ಎಲ್ಲರಲ್ಲಿಯೂ ಪರಮಾತ್ಮನನ್ನೇ ನೋಡುವನು. ಭವಿಯ ಮುಖ ನೋಡನೆಂಬುದರ ಅರ್ಥ ಇದೇ ಸರಿ. ಕಲ್ಲು, ಬಂಗಾರ, ಹೆಂಟೆ, ಚಂಡಾಲ, ಪಾಪಿ, ಶರಣ, ಆಕಳು, ಹುಲಿ ಮೊದಲಾದವುಗಳನ್ನೆಲ್ಲ ಸಮದೃಷ್ಟಿಯಿಂದ ನೋಡುವನು. ಸುಖದುಃಖಗಳನ್ನು ಸಮದೃಷ್ಟಿಯಿಂದ ನೋಡುವನು. ಪ್ರೀತಿ, ಭಯ, ಸಿಟ್ಟು, ಬಿಟ್ಟವನೇ ಶರಣನು.

"ನೆಲನೊಂದೇ ಹೊಲಗೇರಿ ಶಿವಾಲಯಕ್ಕೆ ಜಲವೊಂದೇ ಶೌಚಾಚಮನಕ್ಕೆ, ಕುಲವೊಂದೇ ತನ್ನತಾನರಿವಂಗೆ ಫಲವೊಂದೇ ಷಡುದರ್ಶನ ಮುಕ್ತಿಗೆ. ನಿಲವೊಂದೇ ಕೂಡಲಸಂಗಮದೇವ ನಿಮ್ಮನರಿವಂಗೆ" ಇದೆಲ್ಲ ಸಮದರ್ಶನ ವಚನವು

"ಸ್ಪಟಿಕದ ಘಟದೊಳಗೆ ಎತ್ತಿರ ಜ್ಯೋತಿ ಒಳಹೊರಗೊಂದೇ ಸ್ವಯವಾಗಿ ಪ್ರಜ್ವಲಿಸುವಂತೆ ಎನ್ನೊಳಗಿಪ್ಪ ತನು ಹೊರಗಿಪ್ಪ ತನು ಒಂದೇ ವಸ್ತುವೆಂದು ಆದ್ಯಂತವ ಕಾಣಬಂದಿತ್ತು ನೋಡಾ. ಆ ಪರತತ್ವವೇ ಶರಣನು ತಾನೇ ನೋಡಾ. ಬೇರೊಂದು ಸ್ವರೂಪವಿಲ್ಲ ಕಾಣಾ ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೇ" ಶರಣರಿಗೆ ಹಾಗೂ ಪರಮಾತ್ಮನಿಗೆ ಭೇದವಿಲ್ಲದ ಸ್ಥಿತಿಯು ಇಲ್ಲಿ ವರ್ಣಿಸಲ್ಪಟ್ಟಿದೆ. ಶರಣನು ಅಷ್ಟು ತಾದಾತ್ಮ್ಯ ಹೊಂದಿ ವರ್ತಿಸುವನು. ಇದೇ ಶರಣನ ಜೀವನ್ಮುಕ್ತನ ಸ್ಥಿತಿ ಪ್ರಜ್ಞಾನ ಸ್ಥಿತಿಯು. ಶರಣನು ಎಲ್ಲರಲ್ಲಿಯೂ ದೇವನ್ನು ಕಾಣುವನು.

(೬) ಐಕ್ಯಸ್ಥಲಃ — ಕಟ್ಟಕಡೆಯ ಸ್ಥಿತಿ ಶಿವಜೀವರು ಒಂದಾಗುವರು. ಸಾಧಕನು ಏರುತ್ತ ಏರುತ್ತ ತನ್ನೆಲ್ಲ ಕರ್ತವ್ಯ ಕರ್ಮಗಳನ್ನು ನಿಷ್ಠೆಯಿಂದ ಪಾಲಿಸಿ ಅನಂತದಲ್ಲಿ ಲೀನನಾಗುವ ಸ್ಥಿತಿ. ಇದಕ್ಕೆ ಮುಕ್ತಾವಸ್ಥೆ ಎನ್ನುವರು.

"ಭಕ್ತಿ ಎಂಬ ಪೃಥ್ವಿಯಮೇಲೆ ಗುರುವೆಂಬ ಬೀಜವಂಕುರಿಸಿ, ಲಿಂಗವೆಂಬ ಎಲೆಯಾಯಿತ್ತು, ಲಿಂಗವೆಂಬ ಎಲೆಯಮೇಲೆ ವಿಚಾರವೆಂಬ ಹೂವಾಯಿತ್ತು. ಆಚಾರಎಂಬ ಕಾಯಾಯಿತ್ತು, ನಿಷ್ಪತ್ತಿ ಎಂಬ ಹಣ್ಣಾಯಿತ್ತು. ನಿಷ್ಪತ್ತಿ ಎಂಬ ಹಣ್ಣು ತೊಟ್ಟುಬಿಟ್ಟು ಕಳಚಿಬೀಳುವಲ್ಲಿ ಕೂಡಲಸಂಗಮದೇವ ತನಗೆ ಬೇಕೆಂದೆತ್ತಿಕೊಂಡ." ಇದರಲ್ಲಿ ಸಾಮಾನ್ಯವಾಗಿ ಆರೂ ಸ್ಥಲ

ಗಳನ್ನು ವರ್ಣಿಸಲಾಗಿದೆ. "ಕಂಗಳ ತುಂಬಿದ ಬಳಿಕ ನೋಡಲಿಲ್ಲ. ಕಿವಿ ತುಂಬಿದಬಳಿಕ ಕೇಳಲಿಲ್ಲ. ಕೈತುಂಬಿದಬಳಿಕ ಪೂಜಿಸಲಿಲ್ಲ. ಮನವ ತುಂಬಿದ ಬಳಿಕ ನೆನೆಯಲಿಲ್ಲ. ಮಹಾಂತ ಕೂಡಲಸಂಗಮದೇವನ" ಈ ಪ್ರಕಾರ ಎಲ್ಲ ಪೂಜೆ ಭಕ್ತಿ ಕ್ರಿಯೆ ಧ್ಯಾನ ಸಾಧನ ಮೊದಲಾದವುಗಳು ತನಗೆ ತಾನೇ ನಿಂತುಹೋಗುವವು. ಯಾಕಂದರೆ ಪರಮಾತ್ಮನು ಸರ್ವಾಂಗದೊಳ ಹೊರಗು ಮನ ಬುದ್ಧಿಯೊಳಗೂ ಹೃದಯದೊಳಗೆಲ್ಲ ತುಂಬಿ ಸ್ವರೂಪ ಜ್ಞಾನ, ಸಾಕ್ಷಾತ್ಕಾರವಾದಮೇಲೆ ಯಾರನ್ನು ಯಾರು ನೆನೆಯಬೇಕು ? ತಾನೇತಾನಾದ ಮೇಲೆ ಇನ್ನಾರನ್ನು ಪೂಜಿಸುವದು ? ಇಲ್ಲಿ ಮಾತು ನಿಲ್ಲುವವು. ಪರಮಾತ್ಮನೇ ಎಲ್ಲಕಡೆಗೂ ಸದಾ ತೋರುವದರಿಂದ ಅವನ ಹೊರತು ಯಾರನ್ನೂ ನೋಡಲಾರನು. ಅನ್ಯ ಶಬ್ದ ಕೇಳಿಸದು. ಅವನ ನುಡಿಗಳನ್ನೇ ಕೇಳುವನು. ಎಂದು ಐಕ್ಯದ ಪರಮಾವಧಿಯನ್ನು ಹೇಳಿದ್ದಾರೆ.

ಈ ಪ್ರಕಾರ ಷಟ್ಸ್ಥಲದ ವಿವರಣೆ ಇರುವದು. ಮೊದಲಿನ ಮೂರು ಸ್ಥಲಕ್ಕೆ ಪೂರ್ಣಯೋಗವು ಮುಗಿದುದು ಮತ್ತು ಇದರ ಪ್ರಕಾರ ಮೊದಲಿನ ಎರಡು ಸ್ಥಲಗಳು ಸ್ಥೂಲಶರೀರದ ಶುದ್ಧಿಯನ್ನೂ, ನಡುವಿನ ಎರಡು ಸ್ಥಲಗಳು ಸೂಕ್ಷ್ಮ ಅಂದರೆ ಮನ, ಬುದ್ಧಿ, ಚಿತ್ತ, ಅಂಹಾಕಗಳ ಶುದ್ಧಿಯನ್ನೂ ಕಡೆಯ ಎರಡು ಸ್ಥಲಗಳು ಸೂಕ್ಷ್ಮಶರೀರವನ್ನೂ ಶುದ್ಧಿಗೊಳಿಸಿ ಮುಕ್ತನಾಗುವನು. ಉಳಿದವರು ಪ್ರಾಣಲಿಂಗ, ಶರಣ, ಐಕ್ಯ ಈ ಸ್ಥಲಗಳನ್ನು ಅವರು ಕೈಬಿಟ್ಟಿದ್ದಾರೆ. ಜ್ಞಾನವೇ ಮುಕ್ತಿಎಂದು ಮುಗಿಸಿಬಿಟ್ಟಿರುವರು. ಕರ್ಮಯೋಗದಿಂದ ಮುಕ್ತಿ, ಭಕ್ತಿಯೋಗದಿಂದ ಮುಕ್ತಿ, ಜ್ಞಾನಯೋಗದಿಂದ ಮುಕ್ತಿ, ಹಟಯೋಗದಿಂದ ಮುಕ್ತಿ, ರಾಜಯೋಗದಿಂದ ಮುಕ್ತಿ ಎಂದು ಈ ಎಲ್ಲ ಯೋಗಗಳು ಸರ್ವಸ್ವತಂತ್ರವಾದವುಗಳೇ ಇರುವವು. ಆದರೆ ಕರ್ಮ, ಭಕ್ತಿ, ಜ್ಞಾನ ಈ ಮೂರೂ ಕೂಡಿದಾಗ ಪೂರ್ಣಯೋಗವಾಗುವದೆಂದು ಅಭಿಪ್ರಾಯಪಡುವರು. ಆದರೆ ವೀರಶೈವರಲ್ಲಿ ಭಕ್ತಿಯಿಂದ ಜ್ಞಾನವಾಗುವದ ಜ್ಞಾನವಾದಮೇಲೆ ಪದಾರ್ಥದ ಕರ್ಮವನ್ನಾಚರಿಸುವದು. ಆಗ ತಾನೇ ಶಿವನೆಂಬ ಅರಿವೆಯಾಗುವದು. ಆಮೇಲೆ ಅವನಿಗೆ ಶರಣನ (ಜೀವನ್ಮುಕ್ತಿ ಸ್ಥಿತಪ್ರಜ್ಞ) ಸ್ಥಿತಿಪ್ರಾಪ್ತವಾಗುವದು. ಅಂದರೆ ಸರ್ವವೂ ಸರ್ವರೂ ಪರಮಾತ್ಮನೆಂಬ ಅನುಭವವಾಗುವದು. ಎಲ್ಲೆಲ್ಲಿಯೂ ಎಲ್ಲದರಲ್ಲಿಯೂ ತನ್ನ ಸ್ವರೂಪವನ್ನೇ ಕಾಣುವನು. ಆ ಬಳಿಕ ಐಕ್ಯ ಅಂದರೆ ಮುಕ್ತಾವಸ್ಥೆಯನ್ನು ಹೊಂದುವನು. ಈ ಪ್ರಕಾರ ವೀರಶೈವರ ಶಿವಯೋಗವು ಆರೂ ಸ್ಥಲಗಳು

ಕೂಡಿದಾಗ ಪೂರ್ಣವಾಗುವದು. ಇದರಲ್ಲಿ ಒಂದು ಕಡಿಮೆಯಾಗುವದು. ಇದರಲ್ಲಿ ಒಂದು ಕಡಿಮೆಯಾದರೆ ಅದು ಶಿವಯೋಗವಾಗಲಾರದು. ಇದೇ ಷಟ್ಸ್ಥಲದ ಮರ್ಮವು ಇದನ್ನು ಬಿಟ್ಟು ವೀರಶೈವರು ಸಿಕ್ಕಂತೆ ಆಚರಿಸುವರು.

ವೇದಾಂತದಲ್ಲಿ ಆಧಾರ ಸ್ವಾಧಿಷ್ಠಾನ ಮಣಿಪೂರಕ ಅನಾಹತ ವಿಶುದ್ಧಿ ಆಜ್ಞೆಯು ಎಂದು ಆರು ಚಕ್ರಗಳನ್ನೂ ಸಹಸ್ರಾರ (ಬ್ರಹ್ಮಚಕ್ರ)ವೆಂಬ ಕಮಲ ವನ್ನೂ ಮಾಡಿದ್ದಾರೆ. ಇದಕ್ಕೂ ಮುಂದೆ ವೀರಶೈವರು ಹೋಗಿದ್ದಾರೆ. ಪಾಶ್ಚಿಮೋತ್ತಿ ಚಕ್ರ. ಶಿಖಾಚಕ್ರ ದಾಟಿ, ಇಡಾ ಪಿಂಗಳದ ನಾಳದಗುಂಟ ಈ ಶುಷುಮ್ನಾನಾಡಿಯು ಇಳಿದು ಪಾದುಗಳ ಹೆಬ್ಬೆರಳುಗಳತನಕ ಬಂದು ಮುಟ್ಟು ವದು. ಇಂಥ ಶಿವಶರಣರ ಪಾದೋದಕ, ಕರಣತೀರ್ಥ, ಕರಣ ಪ್ರಸಾದ ವನ್ನು ತಕ್ಕೊಳ್ಳುವರು. ಯಾಕಂದರೆ ಹೆಬ್ಬೆರಳುಗಳ ಮುಖಾಂತರವೇ ಈ ಚಿಚ್ಛಕ್ತಿಯು ಹರಿದುಬರುವದು. ಅದಕ್ಕಾಗಿಯೇ ಪಾದುಗಳಿಗೆ ಕೂಡ ನಮಸ್ಕಾರ ಮಾಡುವರು. ಶ್ರೀ ರಾಮಕೃಷ್ಣ ಪರಮಹಂಸರಲ್ಲಿ ಈ ಪ್ರಕಾರದ ಶಕ್ತಿಪಾದಗಳ ಹೆಬ್ಬೆರಳಿಗೆ ಮುಟ್ಟುತ್ತೆಂದು ಕಂಡುಬರುವದು. ಅದಕ್ಕಂತಲೇ ಅವರು ಅನೇಕ ತಮ್ಮ ಶಿಷ್ಯಂಗೆ ಪಾದಗಳ ಹೆಬ್ಬೆರಳುಗಳನ್ನು ಸ್ಪರ್ಶಮಾಡಿ ಸಮಾಧಿಗೆ ಹಚ್ಚುತ್ತಿದ್ದರೆಂದು ಅವರ ಚರಿತ್ರೆಯಲ್ಲಿ ಕಂಡುಬರುವದು. ಕಾರಣ ಇಂಥ ಶಿವಶರಣರ ಹೊರತು ಅನ್ಯರ ಪಾದೋದಕ ಕರಣಪ್ರಸಾದ, ಕರಣ ತೀರ್ಥಗಳನ್ನು ತಕ್ಕೊಳ್ಳಬಾರದು. ಮತ್ತು ನಮಸ್ಕರಿಸಬಾರದು. ಅಲ್ಲದೆ ಅದರಿಂದ ಏನೂ ಪ್ರಯೋಜನವಿಲ್ಲ.

ಮೇಲಿನ ವಿವರಣೆಯಿಂದ ನೋಡಲಾಗಿ ಪೂರ್ಣ ಯೋಗಕ್ಕಿಂತ ಶಿವ ಯೋಗವು ಅರ್ಥಾತ್ ಷಟ್ಸ್ಥಲ ಸಿದ್ಧಾಂತವು ಹೆಚ್ಚಿನದೆಂದು ಓದುಗರಿಗೆ ಅನುಸರಿಸುವದಿಲ್ಲವೇ ? ಈ ಲೇಖವನ್ನು ಪಕ್ಷಪಾತವಿಲ್ಲದೆ ಓದಬೇಕಾಗಿ ವಿನಂತಿ. ಲೇಖಕನ ಸತ್ಯ, ನಿರ್ಭಿಡೆ, ನ್ಯಾಯನಿಷ್ಠುರ ಲೇಖಣಿಗೆ ಬೈಯಬಾರದೆಂದು ಪುನಃ ವಿನಂತಿಸುವೆನು.

---

# ಪರಮಾತ್ಮನ ಅಡಿದಾವರೆಯಲ್ಲಿ ಭಕ್ತನ ಬಿನ್ನಹ.

(ಲೇಖಕರು:- ಶ್ರೀ ಸ್ವಾಮಿ ಶಿವಾನಂದರು ಗವಿಮಠ, ತೆಗ್ಗಿಹಳ್ಳಿ. ತಾ॥ ಇಂಡಿ.)



೧

ದೇವಾ! ಮಾನವಪ್ರಪಂಚವೆಂಬ ಅರಣ್ಯದಲ್ಲಿ ಎನ್ನನ್ನು ಅರಗಿಳಿಯನ್ನಾಗಿರಿಸು ಶಿವಶಿವಾ! ಎಂದು ಜಪಿಸುವಂತೆ ಮಾಡು. ದಿವ್ಯಭಕ್ತಿಎಂಬ ಪಂಜರದೊಳಗೆ ಇರಿಸಿ ಸಲಹು ದೇವಾ! ಬೆಕ್ಕು ಕಚ್ಚೀತು ವಿಷದ ನಂಜು ಏರೀತು ಜೋಕೆ! ಅನಂತಕಾಲ ನಿನ್ನನ್ನು ಹಾಡುವ ದಿವ್ಯ ಸುಮಧುರ ನುಡಿಗಳನ್ನು ನನ್ನಿಂದ ನುಡಿಸು ಲೋಕ ಆನಂದದಿ ಕೇಳಿ ನಲಿಯಲಿ ನನಗದೇ ಆನಂದ.

೨

ದೇವಾ! ಈ ಮಲ್ಲಿಗೆಯ ಮಹಾಮರದಲಿ ಹೂವುಗಳೆಷ್ಟೋ? ಆದರೆ ಗಾಳಿಗೆ ಬಿದ್ದುಹೋಗದ ಮುನ್ನ ಈ ಹೂವನು ನೀನು ಕಿತ್ತಿ ಸ್ವೀಕರಿಸು. ಎಷ್ಟೋ ಸಲ ಅರಳಿದ್ದ ಗಾಳಿಯಹೊಡೆತಕ್ಕೆ ಬಿದ್ದು ಬಾಡಿ ಮಣ್ಣುಗೂಡಿದ್ದೆ. ಈ ಸಲ ಮಾತ್ರ ಇದನ್ನು ನಿನ್ನ ಕಂಠಹಾರದಲ್ಲಿ ಸೇರಿಸಿಕೊ ಬಿಡಬೇಡ. ಅರಳಲಿಕೆ ಅಂಜಿ ಹೀಗೆ ಬೇಡೆನು. ಕೋಟಿ ಕೋಟಿ ಸಲ ಅರಳಿಸು. ಆದರೆ ದೇವಾ! ಈ ಸುಗಂಧವು ಮಾತ್ರ ಅಡವಿಯಪಾಲಾಗದಿರಲಿ. ಜನದ ಕೊಳೆಯನ್ನು ತೊಳೆಯಲು ಮೀಸಲಾಗಲಿ. ನೀನು ಆಘ್ರಾಣಿಸಿ ನಲಿ ಎಂದು ಬೇಡುವೆ.

೩

ಶಂಭೋ! ಪಂಚತತ್ವದ ಈ ಕೊಳಲಿನ ನವತೂತುಗಳಲ್ಲಿ ಹೊಲಸು ಕಲ್ಮಷ ಕೂತೀತು ಜೋಕೆ! ಸರಿಯಾಗಿ ಧ್ವನಿ ಹೊರಡುವದಿಲ್ಲ. ಇದನ್ನು ಸಿಕ್ಕಲ್ಲಿ ಚಲ್ಲಬೇಡ. ಹುಳಹತ್ತೀತು? ಅಗ್ನಿಗೆ ಆಹುತಿಯಾದೀತು? ಜತನ ಮಾಡು. ನಿತ್ಯ ಇದನ್ನು ಸರಿಯಾಗಿ ಕಾಲಕಾಲಕ್ಕೆ ಊದುತ್ತಿರು. ಪೆಟ್ಟು ತಾಕಿ ಸಿಕ್ಕಂತೆ ಸೀಳಿದರೆ ಅಪಸ್ವರ ಹೊರಡುವದು. ನೋಡಿ ಜತನಮಾಡು ದೇವಾ ನಿನಗಾಗಿ ಇದು ಸದಾ ಸುಮಧುರ ಗಾಯನ ನುಡಿಯಲಿ ಅಯೋಗ್ಯ ಅವಾಚ್ಯ ಅಧಮ ಗಾಯನ ನುಡಿಯದಂತೆ ಮಾತ್ರ ಇರಿಸು. ಗಾಯನಕೆ ನಾನಂಜಿಲ್ಲ. ನಿನಗೆ ಬೇಕಾದಷ್ಟು ಜಗ ಬಾಳಿದಷ್ಟು ಕಾಲಗಾಯನ ನಡಿಸು. ಆದರೆ ಸುಮಧುರಗಾಯನ ನಡಿಸು ಇಷ್ಟೆ.

ದೇವಾ! ಈ ಸುಂದರಾಕೃತಿಯ ವಿಚಿತ್ರ ಅಶ್ವವು ನಿನ್ನದು. ನೀನೇ ಹತ್ತುವವನು ತಕ್ಕಷ್ಟು ಯೋಗ್ಯಮೇವನ್ನು ಹಾಕಿ ನಡಿಸು. ಸಿಕ್ಕದ್ದು ಸಿಕ್ಕಷ್ಟು ತಿನಿಸಿದರೆ ಅಡಕಚ್ಚುವದು. ದಾರಿಸಾಗದು, ದಾರಿಹಿಡಿಯದು, ಪಯಣ ಕೆಡುವದು. ಇದಕ್ಕೆ ಐದು ಮುಳ್ಳಿನ ಕಡಿವಾಣಹಾಕಿ ಸದಾ ಬಿಗಿ ಹಿಡಿದುಕೊ. ಕಣ್ಣಿನ ಬದಿಗೆ ಮರೆಮಾಡು, ಇಲ್ಲವಾದರೆ ದಾರಿಯಲ್ಲಿಯ ಮೋಹಕ ವಸ್ತುಗಳ ಕಂಡು ಸಿಕ್ಕಂತೆ ಹಾರುವದು. ಅಂದರೆ ತನ್ನ ಗೊತ್ತು ಗುರಿಯ ಕಡೆಗೆ ನೋಡುತ್ತ ಸಾಗುವದು. ಹಾಗೇ ಮೇಲೆ ಮೇಲೆ ಚಾಬು ಕದ ಏಟುಕೊಟ್ಟು ಎಚ್ಚರಗೊಳಿಸು. ಅರಿವೆಯ ಕರೆಯಿಂದ ಬೆದರದಂತೆ ಧೈರ್ಯಗೊಳುವಂತೆ ಹುರುಪುಹುಮ್ಮಸಗೊಳುವಂತೆ ಮಾಡುತ್ತಿರು ಅಂದರೆ ದಾರಿಸಾಗಿ ಪಯಣ ಪೂರ್ತಿಗೊಳುವದು. ಅದರಂತೆ ಲೋಕ ನೋಡಿ ಪಯಣ ಗೊಳಲಿ. ದೇವಾ! ಪಯಣಕ್ಕೆ ನಾನಂಜಿ ಹೇಳಿಲ್ಲ. ಕೋಟಿಸಲ ಪಯ ಣಕ್ಕೆ ಅಣಿಯಾಗಿದ್ದೇನೆ. ಆದರ ಯೋಗ್ಯ ಪಯಣವಾಗಲೆಂದೇ ಹಂಬಲ.

೫೧

ದೇವಾ! ಇದು ನಿನ್ನ ಗುಡಿಯು ನೀನಿದ್ದಾನೆಂಬ ಅರಿವು ಇಲ್ಲದೆ ಗುಡಿಯ ಬಾಗಿಲುಹಾಕಿ ಹೊಲಸು ಮಾಡಿದೆ, ಏಸುಕೋಟಿ ಕಾಲ ಹೀಗೆ ಬಂದೆನು? ಬಾಗಿಲು ತೆರೆದು ಸ್ವಚ್ಛವಾಗಿಡಲು ಹೆಚ್ಚು. ಬರೇ ಹೊರಗಿನ ಸಿಂಗಾರವನ್ನೇ ಮಾಡುತ್ತ ನಡೆದೆ, ಸುಣ್ಣ ಬಣ್ಣ ಚಿತ್ರ ಸಾಳುವು ಹೊಳವು ಎಲ್ಲ ಹೊರಗೇ ಆಯಿತು. ಆದರೆ ಒಳಗೆ ನಿನಗೆ ಪೂಜೆ ಇಲ್ಲ, ಗಂಟೆ ಇಲ್ಲ, ನೈವೇದ್ಯವಿಲ್ಲ, ಧೂಪದೀಪಗಳಂತೂ ಇಲ್ಲವೇ ಇಲ್ಲ. ಹೀಗಾಗಿ ಹುಳ ಹುಪ್ಪಡಿಗಳು ಮನೆಮಾಡಿಕೊಂಡಿವೆ ದೇವಾ! ತಿಳಿಯಿತು ಒಳಗೂ ತೊಳೆವೆ ಸುಣ್ಣ ಬಣ್ಣ ಬಳಿವೆ. ದೀಪ ಧೂಪ ಇಡುವೆ ಪೂಜೆ ಮಾಡುವೆ ಗಂಟೆ ಬಾರಿಸಿ ನೈವೇದ್ಯ ಮಾಡುವೆ ದೇವಾ! ಇನ್ನಾದರೂ ನಿನಗೆ ತೃಪ್ತಿಯೇ? ಇನ್ನಾದರೂ ಗುಡಿಯಲ್ಲಿ ಕಾಣಿಸುವಂತೆ ವಿರಾಜಿಸುವಿಯಾ? ಅಂದರೆ ಈ ಗುಡಿಯು ಜಗದಲ್ಲಿ ಗಣ್ಯವಾಗುವದು. ಗುಡಿಗೆ ಸಿಡಿಲು ಗಾಳಿ ಮಳೆಗಳ ಕಾಟವಾಗದಂತೆ ಜಾಗ್ರವಾಗಿರಿಸು. ಇಷ್ಟೆ, ಅಂದರೆ ನಿನಗೆ ವಾಸಕ್ಕೆ ಯೋಗ್ಯ ವಾಗುವದು.

(ಮುಂದೆ ವರಿಯುವವು.)

## ಒಳ್ನುಡಿ.

ತಿಳಿಯು ಕನ್ನಡ ನುಡಿಯು ನುಡಿಯಿರಿ.
ತಿಳಿಯು ಕನ್ನಡ ಬರಹ ಕಲಿಯಿರಿ.
ತಿಳಿಯು ಕನ್ನಡದಿಂದ ಬರೆಯಿರಿ ಲೆಕ್ಕಪತ್ರವನು.
ತಿಳಿಯು ಕನ್ನಡ ಪತ್ರತರಿಸಿರಿ.
ತಿಳಿಯು ಕನ್ನಡ ಕವಿತೆಯೋದಿರಿ.
ತಿಳಿದು ನೋಡಿರಿ. ಮರೆಯಬೇಡಿರಿ ! ನಾಡನುಡಿಗಳನು.

— ಆನಂದಕವಿ.

## ದೇಶಭಕ್ತಿ.

(ಲೇಖಕ:— ಶ್ರೀ ಆನಂದಕವಿಗಳು- ಕುರುಗುಂದ)

(೧)

ಅನ್ನಬಲದಿಂ ಬಳೆದ ದೇಹವು.
ಮಣ್ಣಿನಲಿ ಸಲೆ ಕೂಡಿ ಪೋಪುದು.
ಚೆನ್ನವಾಗಿಹ ಕೀರ್ತಿಯೊಂದೇ ಜಗದಿ ಉಳಿಯುವದು.
ರನ್ನದಂತಿಹ ಜನ್ಮಭೂಮಿಯು
ಗನ್ನ ಸೇವೆಯ ಮಾಡದಿರುತಿಹ
ಪುಣ್ಯ ಹೀನರು ಇದ್ದರೂ ಸರಿ ! ಬಿದ್ದರೂ ಸರಿಯೇ !

(೨)

ಆಶೆಯಿಂದಲಿ ಘಾಸಿ ಹೊಂದದೆ
ಮೋಸಕಾರ್ಯದೆ ಮನಸುಹಾಕದೆ
ಲೇಸು ಲೇಸೈ ! ದೇಶ ಕಾರ್ಯದೆ ಮನವ ನೀಯುವದು.
ಈಶ ಸೇವೆಯೆ ! ದೇಶ ಸೇವೆಯು.
ದೇಶ ಸೇವೆಯೆ ! ಈಶ ಸೇವೆಯು
ಈಶನೊಲಿಯುವದೇದೆ ? ಜನರ ಸುಸೇವೆ ಮಾಳ್ಪಂಗೆ !

# ಶಿಕ್ಷಣ.

[ಲೇಖಕರುಃ- ಶ್ರೀಯುತ ಭೀ. ಶ್ರೀ. ಕುಲಕರ್ಣಿ, ವಿಜಾಪುರ.]



ಶಿಕ್ಷಣವು ಮಾನವನ ಜ್ಞಾನಾಭಿವೃದ್ಧಿಯ ಮೂಲವಾಗಿದೆ. ಇಂದು ಶಿಕ್ಷಣವು ಅಭಿವೃದ್ಧಿಯನ್ನು ಹೊಂದುತ್ತ ಮಾನವನಿಗೆ ಮೀರಿದ ಕಾರ್ಯಗಳಿಗೆ ಸುಲಭತೆಯನ್ನುಂಟುಮಾಡಿದೆ ಹಾಗು ಇನ್ನೂ ಮಾಡುತ್ತದೆ. ಜನಿಸಿದಾರಭ್ಯ ದಲ್ಲಿ ಮಾನವತ್ವವಿಲ್ಲದ ಶಿಶುವು ಬೆಳೆದು ದೊಡ್ಡದಾಗಿ ನಾಗರಿಕನೆನಿಸಿಕೊಂಡು ಅರ್ಹತೆಯನ್ನು ಪಡೆಯಲು ಆತನಿಗೆ ಈ ಶಿಕ್ಷಣವೇ ಸಾಧನ. ಶಿಕ್ಷಣವು ಕತ್ತಲೆಯು ದಾರಿದೀಪವಿದ್ದಂತೆಯೇ ಸರಿ. ಇಂಥ ಅಮೌಲ್ಯವಾದ ಶಿಕ್ಷಣದ ಸಮಾನ ಈ ಜಗತ್ತಿನಲ್ಲಿ ಮತ್ತಾವದಕ್ಕೂ ಮಹತ್ವವಿಲ್ಲವೆನ್ನಬಹುದು. ಇಂದು ಶಿಕ್ಷಣಕ್ಕೆ ಜನತೆ ಹಾಗು ಸರಕಾರವು ಬಹು ಮಹತ್ವವನ್ನಿತ್ತಿದೆ. ಇಂದು ವಿದ್ಯಾರ್ಥಿಗಳ ಸಂಖ್ಯೆಯೂ ಹೆಚ್ಚಾಗುತ್ತ ನಡೆದಿದೆ. ಆದರೆ ಶಿಕ್ಷಣದ ಅಭಿವೃದ್ಧಿಯ ಜೊತೆಗೆ ನಿರುದ್ಯೋಗದ ಅಭಿವೃದ್ಧಿಯೂ ಹೆಚ್ಚಾಗಹತ್ತಿರುವದು ಭಾರತೀಯ ರಾದ ನಮ್ಮ ದುರ್ದೈವವೇ ಸರಿ. ಶಿಕ್ಷಣದ ಸಲುವಾಗಿ ಸರಕಾರವೇನೊ ಹೆಚ್ಚು ಮಹತ್ವ ಕೊಟ್ಟಿದೆ. ಆದರೆ ಶಿಕ್ಷಣಕ್ಕಾಗುವ ಅಡೆತಡೆಯನ್ನು ಮಾತ್ರ ಸರಕಾರವು ಗಮನಿಸದಮೂಲಕ ಇಂದು ದೇಶದಲ್ಲಿ ಅನಾಗರಿಕತೆ, ಅಸತ್ಯತೆ, ಅನ್ಯಾಯ ಮುಂತಾದ ನೀಚ ಕೃತ್ಯಗಳು ಪ್ರಾರಂಭವಾಗಿವೆ. ಆದಿಕಾಲದಲ್ಲಿ ಅಶಿಕ್ಷಿತ ಜನಾಂಗವಿದ್ದರೂ ಸತ್ಯಶೀಲತೆಯನ್ನು ಎಂದೂ ತ್ಯಜಿಸುತ್ತಿರಲಿಲ್ಲ. ಸತ್ಯಕ್ಕಾಗಿ ಜೀವವನ್ನೇ ಬಲಿಗೊಡುತ್ತಿದ್ದರು. ಇದಕ್ಕೆ ಕಾರಣವೆಂದರೆ ಪುರಾಣ ಪುಣ್ಯಕಥೆಗಳಮೇಲಿನ ಜನತೆಯ ಪ್ರೇಮ. ಇಂದು ಹಗಲು ಹನ್ನೆರಡು ಗಂಟೆಯೇಕೆ ಇರುಳು ಸ್ವಪ್ನದಲ್ಲಿಯೂ ಕೂಡ ಅಸತ್ಯವನ್ನೇ ನುಡಿಯುವ ರೂಢಿ ಯಾಗಿದೆ. ಇದಕ್ಕೆ ಕಾರಣವೆಂದರೆ ಇಂದಿನ ಚಲಚಿತ್ರಗಳಮೇಲಿನ ಜನತೆಯ ಪ್ರೇಮ. ಆದಿಕಾಲದಲ್ಲಿ ಶಿಕ್ಷಣವಿದ್ದಿಲ್ಲವೆಂತಲ್ಲ. ಶಿಕ್ಷಣಕ್ಕೆ ಅಂದಿನ ಕಾಲಕ್ಕೆ ಇದ್ದ ಮಹತ್ವದ ಸ್ಥಾನ ಇಂದು ಇಲ್ಲವೆಂದು ಹೇಳಬಹುದು. ಇಂದು ಕೇವಲ ಶಿಕ್ಷಣಕ್ಕೆ ಮಹತ್ವದೊರೆತುದು ಸರಕಾರಿ ನೌಕರಿಗಾಗಿ ಮಾತ್ರ. ಇಲ್ಲದಿದ್ದರೆ ಈ ಕಾಲದಲ್ಲಿಯೂ ಸಹ ಶಿಕ್ಷಣಾಭಿವೃದ್ಧಿಯು ಆಗುತ್ತಿದ್ದಿಲ್ಲವೆಂದು ನಿಸ್ಸಂದೇಹ ವಾಗಿ ಹೇಳಬಹುದು.

ಶಿಕ್ಷಣದ ಬಗ್ಗೆ ರಾಜಕಾರಣಿಗಳಾದ ಮುಖಂಡರು ಹಾಗು ಜನತೆಯು ಹೆಚ್ಚಾಗಿ ಲಕ್ಷಪೂರೈಸುವದು ಅವಶ್ಯವಿದೆ. ಇಂದಿನ ನಮ್ಮ ದೇಶದ ಶಿಕ್ಷಣವು ಬ್ರಿಟೀಷಪದ್ಧತಿಗನುಸರಿಸಿದೆ. ನಮ್ಮ ಹಿಂದಿನಕಾಲದ ಶಿಕ್ಷಣಪದ್ಧತಿಯನ್ನು ಅರಿತರೆ ಶಿಕ್ಷಣಕ್ಕಿತ್ತ ಆದಿಕಾಲದಲ್ಲಿಯ ಮಹತ್ವವು ಇಂದು ಪೂರ್ಣವಾಗಿ ಅಳಿದಿದೆ ಎಂದು ಭಾಸವಾಗದೇ ಇರದು.

ಇಂದು ಶಿಕ್ಷಣ ಕಲಿಯುವ ವಿದ್ಯಾರ್ಥಿಗಳಾಗಲಿ, ವಿದ್ಯಾರ್ಥಿಗಳ ಪಾಲಕರಾಗಲಿ, ಶಿಕ್ಷಣ ಕಲಿಸುವದು ಹಾಗು ಕಲಿಯುವದು ಕೇವಲ ಸರಕಾರಿ ನೌಕರಿಗಳಿಗಾಗಿಯೇ ಎಂಬ ಧ್ಯೇಯಧೋರಣೆಯುನ್ನಿಟ್ಟಿದ್ದಾರೆ. ಇದು ಜನತೆಯ ತಪ್ಪಲ್ಲ, ಸರಕಾರದ ಅಲಕ್ಷತೆ ಎಂದರೆ ತಿಲಮಾತ್ರವೂ ತಪ್ಪಾಗದು. ಶಿಕ್ಷಣದ ಬಗ್ಗೆ ಸರಕಾರದ ಅಲಕ್ಷತೆಯೇ ಹೆಚ್ಚಾಗಿದೆ. ಇಂದು ವಿಶ್ವಗಲಿತ ವಿದ್ಯಾರ್ಥಿಗಳಲ್ಲಿ ಬಹುಜನ ವಿದ್ಯಾರ್ಥಿಗಳಿಗೆ ಇತರ ಯಾವ ವ್ಯವಹಾರಿಕ ಜ್ಞಾನವಾಗಲಿ ಇತರ ಯಾವದೊಂದು ವಿಚಾರವಾಗಲಿ ಎನಿತೂ ಇಲ್ಲ. ಕೇವಲ ಪರೀಕ್ಷೆಗಳಿಗೆ ಪಾಠಕಲಿಸಿದಂತೆ ಶಾಲೆಯಲ್ಲಿ ಶಿಕ್ಷಕರು ಕಲಿಸಿದ ಪಾಠದ ಉಚ್ಚಾರದಹೊರತು ಇನ್ನಿತರ ಜ್ಞಾನವಿಲ್ಲ. ಇದುವಾದರೂ ವಿದ್ಯಾರ್ಥಿಗಳ ತಪ್ಪಲ್ಲ. ಏಕೆಂದರೆ ಶಿಕ್ಷಣವು ಕೇವಲ ಸರ್ಟೀಫಿಕೆಟ್ಟುಗಳಿಗಾಗಿ. ಸರ್ಟೀಫಿಕೆಟ್ಟುಗಳು ಸರಕಾರೀ ನೌಕರಿಗಳಿಗಾಗಿ. ಸರಕಾರೀ ನೌಕರಿಯು ಆಡಂಬರಕ್ಕಾಗಿ, ಹಾಗು ಐಶ್ವ ಆರಾಮುಗಳಿಗಾಗಿ. ಅಂದಮೇಲೆ ಶಾಲೆಯಲ್ಲಿ ಕಲಿತ ಪಾಠದ ಜ್ಞಾಪಕವೇ ಹೆಚ್ಚಿನದು. ಇಂದು ಮೇಲ್ತರಗತಿಯ ಪರೀಕ್ಷೆಗಳ ಪ್ರಶ್ನೆಪೇಪರುಗಳು ಒಡೆಯುವದಾದರೂ ಈ ಸರ್ಟೀಫಿಕೆಟ್ಟುಗಳಿಗಾಗಿಯೇ. ಇಂಥ ಜನ ಮೇಲ್ಮಟ್ಟಕ್ಕೇರಿದರೆ ನಮ್ಮ ದೇಶವು ಎಷ್ಟು ಮುಂದುವರಿಯುವದೆಂಬುದನ್ನು ವಿಚಾರಮಾಡಿ. ಮೇಲಾಗಿ ಇಂದು ಸರಕಾರವೂ ಈ ಬಗ್ಗೆ ಎಚ್ಚರಪಟ್ಟು, ಯಾವದೊಂದು ನೌಕರಿಗಾಗಿ ಅರ್ಜಿಮಾಡಿದ ವಿದ್ಯಾರ್ಥಿಗಳಿಗೆ ಅವರು ಕಲಿತ ಇಂದಿನ ಪಾಠದಲ್ಲಿಯ ವಿಷಯವನ್ನೇ ಪುನಃ ಕೇಳಿ ಪರೀಕ್ಷಿಸಿ ನೌಕರಿ ಕೊಡುವದುಂಟು. ಪರೀಕ್ಷೆಯಲ್ಲಿ ಕೇಳುವದಾದರೂ ಏನು ಗೊತ್ತೇ ? ಜಗತ್ತಿನಲ್ಲಿ ಉನ್ನತವಾದ ಪರ್ವತವಾವುದು, ಕಟ್ಟಡವಾವುದು ಮುಂತಾದವು. ಅವುಗಳು ಮಾತ್ರ ಸಾಕಷ್ಟು ಅಭ್ಯಾಸಮಾಡಿರುತ್ತಾರೆ. ಯಾಕೆಂದರೆ ಅವರಿಗಾದರೂ ಗೊತ್ತೇ. ಮೇಲ್ಮಟ್ಟಕ್ಕೇರಿದವರಾದ ಅವರೂ ಸಹ ನಮ್ಮ ತರಗತಿಯವರೇ. ಮತ್ತು ನಮಗೆ ಬರತಕ್ಕ ಪಾಠವೇ ಅವರಿಗೂ ಬರುತ್ತವೆ. ಅಂದಮೇಲೆ ಅವರು ಇತರ ಯಾವ ಪ್ರಶ್ನೆಯನ್ನೂ ಕೇಳುವದೇಇಲ್ಲವೆಂದಮೇಲೆ ಇತರ ವಿಚಾರವು ನಮಗೇಕೆ *Time is the money* ಎಂದು ವೇಳೆಗೆ ಇಂತು ಮಹತ್ವ ಕೊಡುತ್ತಿದ್ದಾರೆ.

ಇನ್ನು ಇತರರ ಪರಿಸ್ಥಿತಿಯಂತೂ ಚಿಂತಾಜನಕವಾಗಿದೆ. ಹರಕು ಬಟ್ಟೆಯನ್ನುಟ್ಟು ಗೇಣುಹೊಟ್ಟೆಗಾಗಿ ಹಗಲಿರುಳು ದುಡಿದು ದಣಿದು ಕಾಯಕಷ್ಟಕ್ಕೆ ಪರವಶನಾಗಿ, ಜೀವನಸಾಗಿಸುವವನು ಇಂದು ಜನರ ಸಂಶಯಕ್ಕೆ ಕಾರಣನಾಗುವನು, ಕಳ್ಳನೆನಿಸುವನು. ಒಳ್ಳೆಯ ಆಡಂಬರದ ಉಡುಪನ್ನು ಧರಿಸಿ, ಹತ್ತೆಂಟು ಕೊಲೆ, ದರೊಡೆ ಮುಂತಾದ ಅತ್ಯಾಚಾರಗಳನ್ನು ಮಾಡಿದರೂ ಆತನು ಜನತೆಯಲ್ಲಿ ಒಳ್ಳೆಯನೆನಿಸುವನು. ಹೀಗೆ ಜನತೆಯ ಭಾವನೆಗೂ ಆಡಂಬರವು ಪಾಶಬೀಸಿದೆ. ಒಟ್ಟನಮೇಲೆ ನಮ್ಮ ಈ ಭರತಖಂಡದಲ್ಲಿ ಅನಾಗರಿಕತೆಯು ಗಾಳಿ ಬೀಸಿದಂತಾಗಿದೆ. ಚಳಿಗಾಲದ ಚಳಿಯಿಂದ ಸರ್ವರಿಗೂ ಚಳಿಯು ಹೇಗೆ ಆವರಿಸುವದೋ ಹಾಗೆ ಇಂದು ಅನಾಗರಿಕತೆ, ಅಸತ್ಯತೆಯ ಗಾಳಿ ಬೀಸಿ ಎಂಥ ಸತ್ಯವಂತರೂ ಸಹ ಅಸತ್ಯತೆಗೆ ಬಲಿಯಾಗಿದ್ದಾರೆ. ನಮ್ಮ ದೇಶದಲ್ಲಿ ರಾಜಕಾರಣಿಗಳಾಗಲಿಕ್ಕೆ ಅರ್ಹತೆಯುಳ್ಳವರೂ ರಾಜಕಾರಣದ ರೀತಿ ನೀತಿಗಳನ್ನರಿತವರೂ ಅನೇಕಜನರಿರಬಹುದು. ಆದರೆ ಸರ್ಟಿಫಿಕೆಟ್ಟುಗಳಿಲ್ಲದ್ದಕ್ಕೆ ಕಾಣದಾಗಿದ್ದಾರೆ. ದುರ್ದೈವಿಗಳೆಂದು ತಿಳಿದು ಭ್ರಾಂತಿಷ್ಟರಾಗಿದ್ದಾರೆ. ಜ್ಞಾನವೆಂಬ ಎಣ್ಣೆಯಿಂದ ಪ್ರಕಾಶಿಸುತ್ತಿದ್ದಾರೆ ಆದರೆ ಆ ಪ್ರಕಾಶವು ಅವರನುಟ್ಟಿಗಷ್ಟೇ ಪ್ರಜ್ವಲಿಸುತ್ತಿದೆ. ಆದರೆ ಈ ಜ್ಞಾನವೆಂಬ ಎಣ್ಣೆಯಿಲ್ಲದೆ, ಮತ್ತಾವದೋ ಅಲ್ಪ ಎಣ್ಣೆಯಿಂದ ಜ್ಞಾನವೆಂಬ ಎಣ್ಣೆಗಿಂತಲೂ ಹೆಚ್ಚು ಪ್ರಕಾಶವನ್ನೀವ ಇಲೆಕ್ಟ್ರಿಕ್ ಜ್ಯೋತಿಗಳಿಗೇ ಇಂದು ಮಹತ್ವವಿದೆ. ಆ ಪ್ರಕಾಶದಿಂದ ಕಣ್ಣು ಮಂದವಾಗಿ ನಾವೆತ್ತಸಾಗುತ್ತೇವೋ, ಎಂಬುದನ್ನು ಸರಕಾರವು ಲಕ್ಷಿಸಬೇಕು. ಸರಕಾರವು ಎಲ್ಲಕ್ಕಿಂತಲೂ ಮುಖ್ಯಮಾರ್ಗವಾದ ಶಿಕ್ಷಣಮಾರ್ಗದತ್ತ ಲಕ್ಷಪೂರೈಸಿರುವದೇನೋ ನಿಜ. ಆದರೆ ಮರ್ಮವರಿತಿಲ್ಲವೆಂಬುದು ಸ್ಪಷ್ಟವಾಗಿ ತೋರಿಬರುವದು.

ಇಂದು ಶಿಕ್ಷಣಕ್ಕಾಗಿ ಸರಕಾರವು ವ್ಯರ್ಥ ಪ್ರಯತ್ನಿಸಿ, ಪ್ರತಿಯೊಂದು ಹಳ್ಳಿ-ಪಳ್ಳಿಗಳಿಗಳಿಗೂ ಸಹ ಶಾಲೆ ಕಾಲೇಜುಗಳನ್ನು ಸ್ಥಾಪಿಸಿದೆ. ಒತ್ತಾಯದ ಶಿಕ್ಷಣವನ್ನೂ ಪ್ರಾರಂಭಿಸಿದೆ. ಇದಲ್ಲದೆ ಪ್ರೌಢಶಿಕ್ಷಣವನ್ನೂ ಪ್ರಾರಂಭಿಸಿದೆ. ಆದರೆ ಶಿಕ್ಷಣಕ್ಕಾಗುವ ಅಡೆತಡೆಗಳನ್ನು ಗಮನಿಸಿಲ್ಲ. ಇಂದಿನ ಚಲನಚಿತ್ರಗಳಿಂದ ಶಿಕ್ಷಣಕ್ಕೆ ಅತೀವ ಹಾನಿಯಾಗಿದೆ. ಇಂದಿನ ಚಲನಚಿತ್ರಗಳಲ್ಲಿ ಹುರುಳಿಲ್ಲ. ಜನತೆಯನ್ನು ಅಡ್ಡದಾರಿಗೊಯ್ಯುತ್ತಿವೆ. ಇಂದು ಚಲನಚಿತ್ರಗಳು ತಯಾರಾಗುತ್ತಿರುವದು ಕೇವಲ ಜನತೆಯನ್ನು ಅದರಲ್ಲಿಯೂ ವಿದ್ಯಾರ್ಥಿಗಳನ್ನು ಕಾಮುಕರನ್ನಾಗಿ ಮಾಡುವದಕ್ಕಾಗಿಯೆಂದರೆ ತಪ್ಪಾಗದು. ಇಂದು

ಎತ್ತ ನೋಡಿದತ್ತ ಸಿನೀಮಾ ತಾರೆಯರ ಭಾವಚಿತ್ರಗಳೇ ಗೋಡೆಗಳಿ ನೇತಾಡುತ್ತಿವೆ. ಸಿನೀಮಾ ಪದ್ಯಗಳು ಹಾಗು ಪೇಪರುಗಳೇ ಇಂದು ಗ್ರಂಥಗಳ ಸಮಾನವಾಗಿವೆ. ಇಷ್ಟೇ ಅಲ್ಲ, ವರ್ತಮಾನಪತ್ರಗಳ ಮುಖಪುಟದಮೇಲೆ ಹಾಗು ಒಳಪುಟಗಳಲ್ಲಿ ಸಿನೇಮಾ ತಾರೆಯರ ಭಾವಚಿತ್ರಗಳಿದ್ದರೆಯೇ ಬಹುಜನ ಚಂದಾದಾರರಾಗುತ್ತಾರೆ. ಇದರಮೇಲಿಂದ ಇಂದಿನ ಸುಶಿಕ್ಷಿತರ ಮನಸ್ಸು ಎತ್ತಸಾಗಿದೆ ಕಲ್ಪನೆಮಾಡಿ. ಇದಲ್ಲದೆ ವಿದ್ಯಾರ್ಥಿಗಳು ಪರಸ್ಪರ ಭೆಟ್ಟಿಯಾದಲ್ಲಿ ಈ ಚಲನಚಿತ್ರಗಳ ಮಾತೇ ಮಾತು. ಸಿನೇಮಾ ನಟನಟಿಯರ ನಾಮೋಚ್ಚಾರವೇ ಭಜನೆಯುಸಮಾನವೆಂದು ತಿಳಿದಿದ್ದಾರೆ. ಇಂದಿನ ಚಲನಚಿತ್ರಗಳಲ್ಲಿ ಪ್ರೇಮಪೂರಿತವಾದಂತಹ ಚಿತ್ರಗಳೇ ಇರುತ್ತವೆ. ಇದಲ್ಲದೆ ದರೋಡೆ, ಕೊಲೆ, ಸ್ತ್ರೀಅಪಹರಣ ಮುಂತಾದವುಗಳ ಹೊರತಾಗಿ ಜ್ಞಾನಾಭಿವೃದ್ಧಿಯ ಚಿತ್ರಗಳೇ ಹೊರಡುವದಿಲ್ಲ. ಇನ್ನುಮೇಲೆ ಸರಕಾರವು ಈ ಚಲನಚಿತ್ರಗಳ ಬಗ್ಗೆ ವಿಚಾರಿಸತಕ್ಕದ್ದು. ಇಂದಿನ ಚಲನಚಿತ್ರಗಳು ಜನತೆಯ ಮೋಹವನ್ನು ಸುಲಿದು, ಜನತೆಯ ಮಾನಹಾನಿಯನ್ನು ಮಾಡುವದಲ್ಲದೇ ಆದಿಕಾಲದಿಂದಲೂ ಪಾವಿತ್ರ್ಯತೆಯನ್ನು ಪಡೆದ ಭರತದೇಶದ ಸಾಂಸ್ಕೃತಿನಾಶಕವಾಗಿದೆ. ಚಲನಚಿತ್ರಗಳನ್ನು ನೋಡುವದು ಸಂಸಾರಸ್ಥರಿಗೆ ಪ್ರಪಂಚಬಳಲಿಕೆಯಿಂದ ಆಗದು. ಆದರೆ ವಿದ್ಯಾರ್ಥಿಗಳು ಮಾತ್ರ ನೋಡದೇಇರರು. ಮಾತಾಪಿತರುಗಳು ಪರಿಶ್ರಮಪಟ್ಟು ದುಡಿದ ಹಣವು ಮಕ್ಕಳಿಂದ ಸಿನೇಮಾ ಮುಂತಾದ ವ್ಯಸನಗಳಿಗೆ ವ್ಯಯವಾಗುತ್ತಿದೆ. ಇಂದಿನ ಜನತೆ ಹಾಗು ವಿದ್ಯಾರ್ಥಿಗಳು ತಮ್ಮ ಶಕ್ತಿ ಯುಕ್ತಿ ಭಕ್ತಿ ಇವುಮೂರನ್ನು ಚಲನಚಿತ್ರಕ್ಕರ್ಪಿಸಿದ್ದಾರೆ. ಟಿಕೆಟ್ಟುಗಳಿಗಾಗಿ ಶಕ್ತಿಪ್ರಯೋಗ, ಮನೆಯಲ್ಲಿ ಮಾತಾಪಿತರುಗಳಿಗೆ ಯಾವದಕ್ಕಾದರೊಂದು ನೆವಹೇಳಿ ಹಣ ಸ್ವೀಕರಿಸಿ ಚಲನಚಿತ್ರಗಳನ್ನು ನೋಡುವದು ಇದೊಂದು ಯುಕ್ತಿ. ಹಗಲಿರುಳೂ ಅದನ್ನೇ ನೆನೆಯುವದು ಇದು ಭಕ್ತಿ. ಕೊಲೆ ಸುಲಿಗೆಗಳ ಪ್ರಯೋಗವೂ, ಪ್ರೇಮಾಂಕುರವನ್ನು ಪ್ರತಿಬಿಂಬಿಸುವ ಮೋಹನಾಕೃತಿ ದೃಶ್ಯಗಳು ಅಚ್ಚಳಿಯದೇ ಅಕ್ಷುವಿನಲ್ಲಿ ನೆಲಿಸಿ, ಅಭ್ಯಾಸದತ್ತ ಲಕ್ಷವೇ ಉಳಿಯುವದಿಲ್ಲ. ಮೇಲಾಗಿ ಚಲನಚಿತ್ರಗಳಲ್ಲಿ ತೋರಲ್ಪಡುವ ಶಾಲೆಕಾಲೇಜುಗಳಲ್ಲಿಯ ವಿದ್ಯಾರ್ಥಿ ವಿದ್ಯಾರ್ಥಿನಿಯರ ಪ್ರೇಮದಿಂದಾದ ದುಷ್ಪರಿಣಾಮ, ಕಳ್ಳತನದಿಂದ ಬಂಧಿತನಾದ ಮಾನವನು ಜೈಲಿನಲ್ಲಿ ಹಸನ್ಮುಖನಾಗಿ ಕಾಲಹರಣಮಾಡಿ ಕೊನೆಗೆ ಆತನ ಶಿಕ್ಷೆಯದಿನಗಳು ಮುಗಿದರೂ ನಾನು ಜೈಲಿನಿಂದ ಹೊರಗೆ ಹೋಗಲಾರೆ, ಹೋದರೂ ಸಹ ಮರಳಿಬರುವೆ

ಎಂದು ಆನಂದದಿಂದ ಜೈಲರಸಾಹೇಬರಿಗೆ ನಮಸ್ಕರಿಸುವ ದೃಷ್ಯ ಇವುಗಳಿಂದ ಅಜ್ಞಾನಿಗಳಿಗೆ ಅಜ್ಞಾತನವನ್ನೂ ತಪ್ಪುದಾರಿಗೂ ಒಯ್ಯುತ್ತಿವೆ. ಸುಜ್ಞಾನಿಗಳಿಗೆ ರಾಜಕಾರಣಿಗಳ ಅಲಕ್ಷತೆಯನ್ನು ತೋರಿಸುತ್ತಿದೆ. ಮೇಲಾಗಿ ಪೇಟೆಯಲ್ಲಿ ಬಂದೊಡನೆ ಸಿನೇಮಾ ತಾರೆಯರಂತೇ ಒನಪು ಒಯ್ಯಾರದಿಂದ ಅಲಿಯುವ ಸ್ತ್ರೀ ಪುರುಷರು ಮಾನವತ್ವಪರಿಯದೆ ಪಶುವಿನಂತೆ ವರ್ತಿಸುವರು. ಹಾಗು ಶಾಲೆ ಕಾಲೇಜುಗಳಲ್ಲಿಯ ವಿದ್ಯಾರ್ಥಿಯರೊಂದಿಗೆ ವಿದ್ಯಾರ್ಥಿನಿಯರನ್ನು ಕಲಿಸುವ ಪರಿಪಾಠವು ಶಿಕ್ಷಣಕ್ಕೆ ಹಾನಿಯನ್ನುಂಟುಮಾಡಿದೆ.

ನಮ್ಮ ದೇಶದಲ್ಲಿ ಇಂತು ಅತ್ಯಾಚಾರ, ಅನಾಚಾರಗಳು ಒಡಮೂಡಿದುದನ್ನು ನೋಡಿದರೆ ನಿಜವಾದ ದೇಶಪ್ರೇಮಿಗಳಿಗೆ ವ್ಯಸನವಾಗದೇ ಇರದು. ಏನೇ ಇರಲಿ ಸರಕಾರವು ಇಂಥ ವಿಚಾರಗಳನ್ನು ಅರಿಯದೆ ಇರುವ ದಿನಗಳಲ್ಲ. ಪಂಚವಾರ್ಷಿಕ ಯೋಜನೆಯು ವಿಚಾರದಲ್ಲಿ ಯುಗವಾರ್ಷಿಕ ಹಾನಿಯಾಗುವ ಅನೇಕ ಕಾರ್ಯಗಳನ್ನು ಹಾನಿಯಾಗದಂತೆ ನೋಡಿಕೊಳ್ಳಬೇಕಾಗಿದೆ. ಕೇವಲ ಸರ್ಟೀಫಿಕೆಟ್ಟುಗಳ ಹೊರೆಹೊತ್ತು ಅಲೆಯುವ ಜನಕ್ಕಿಂತಲೂ ವಿಚಾರವಂತ ಜನರ ವಿಚಾರಪರಿಶೀಲನೆಮಾಡಿ, ಜ್ಞಾನಿಗಳ ರಾಜ್ಯವಾಗಲಿ, ಅಜ್ಞಾನಿಗಳ ರಾಜ್ಯವಾಗದಿರಲಿ. ಜನತಾರಾಜ್ಯವೆಂಬ ಹೆಸರು ನಮ್ಮ ದೇಶಕ್ಕೆ ಈಗ್ಗೆ ಸಲ್ಲದು. ಜನತೆಯಮೇಲೆ ಉಗ್ರ ಶಿಕ್ಷೆಬೇಕು. ಇಂದು ಜನತೆಗೆ ಹಾಗು ಸರಕಾರಕ್ಕೆ ಸಂಬಂಧವೇ ಇಲ್ಲದಂತಾಗಿಯೂ ಕೆಲವು ದುರ್ಘಟನೆಗಳು ನಡೆಯುವವು. ನಮ್ಮ ದೇಶದಲ್ಲಿ ನಿರುದ್ಯೋಗವು ಬೆಳೆದುದನ್ನು ನೋಡಿದರೆ ಸರಕಾರದ ಅಲಕ್ಷತೆಯೇ ತೋರಿಬರುವದು. ಸರಕಾರಿ ನೌಕರಿಯ ಹೊರತಾಗಿ ಇನ್ನುಳಿದ ಖಾಸಗಿ ನೌಕರಿಗಳಿಗೆ ಸರಕಾರವಾಗಲಿ, ಜನತೆಯಾಗಲಿ, ಮಹತ್ವವನ್ನಿತ್ತಿಲ್ಲ. ಸರಕಾರವೇ ಮಹತ್ವವನ್ನಿತ್ತಿಲ್ಲವೆಂದರೆ ಜನತೆಯು ಹೀಯಾಳಿಸುವದು ಸಹಜವೇ. ಹೀಗಾಗಿ ಇಂದು ಉಳಿದ ಉದ್ಯೋಗಗಳಿಗೆ ಮಹತ್ವ ಉಳಿದಿಲ್ಲ. ಮೇಲಾಗಿ ಇಂದು ಪುರುಷರಿಗಾಗಲಿ, ಸ್ತ್ರೀಯರಿಗಾಗಲಿ ಅಶಿಕ್ಷಿತರಿದ್ದರೆ ಇಲ್ಲವೆ ಸರಕಾರಿ ನೌಕರಿ ಇಲ್ಲದಿದ್ದರೆ ವಿವಾಹವಾಗುವದೂ ಸಹ ತೊಂದರೆಯಾಗಿದೆ. ಒಟ್ಟಿನಮೇಲೆ ಸಮಾಜದಿಂದ ದೂರೀಕರಿಸಲ್ಪಟ್ಟಂತೆಯೇ ಸರಿ. ಹೀಗಿರುವಾಗ ಉಳಿದ ಉದ್ಯೋಗಗಳ ಅಭಿವೃದ್ಧಿಯೆಂತು ? ಸರಕಾರೀ ನೌಕರಿಗಳಿಗಾಗಿಯೇ ಇಂದಿನ ವಿದ್ಯೆ. ಹಾಗು ಸರಕಾರೀ ನೌಕರಿಗಳಿಗಾಗಿಯೇ ವಿದ್ಯಾರ್ಥಿಗಳ ಪಾಲಕರ ಹಣ ಹಾಗು ದುಡಿಮೆ. ಸರ್ಟೀಫಿಕೆಟ್ಟುಗಳಾದರೂ ಸರಕಾರೀ ನೌಕರಿಗಳಿಗಾಗಿ ಎಂಬ ಜನತೆಯ ಧ್ಯೇಯಧೋರಣೆ ತಪ್ಪಲ್ಲ.

ಆದಿಕಾಲದ ಶಿಕ್ಷಣವನ್ನು ಜ್ಞಾಪಕಮಾಡಿಕೊಂಡರೆ ಅಂದಿನ ಶಿಕ್ಷಣಕ್ಕೂ ಇಂದಿನ ಶಿಕ್ಷಣಕ್ಕೂ ಇರುವ ವ್ಯತ್ಯಾಸವು ಕಂಡುಬರುವದು. ಆದಿಕಾಲದಲ್ಲಿ ಶಿಕ್ಷಣಕಲಿಸುವವರಿಗೆ ಗುರುಗಳೆಂಬ ಹೆಸರು. ವಿದ್ಯಾರ್ಥಿಗಳು ಗುರುಗಳು ಹೇಳಿದ್ದನ್ನು ಮೀರುತ್ತಿರಲಿಲ್ಲ. ಬಾಲಕನು ಚಿಕ್ಕವನಿರುವಾಗಲೇ ಮಾತಾಪಿತರುಗಳು ಗುರುಗಳ ಆಶ್ರಮಕ್ಕೆ ಕರೆದೊಯ್ದು ಗುರುಗಳಲ್ಲಿಯೇ ಬಿಟ್ಟು, ಗುರುಗಳಿಗೆ ನಮಿಸಿ ಮಗುವಿಗೆ ಆಶೀರ್ವದಿಸಿ ತಮ್ಮ ಗ್ರಾಮಕ್ಕೆ ತೆರಳುತ್ತಿದ್ದರು. ಮಗುವು ಗುರುಗಳ ಹೇಳಿಕೆಯಂತೆ ನಡೆದು, ರೀತಿ ನೀತಿಗಳನ್ನೂ, ಮಂತ್ರ-ತಂತ್ರ ಅಕ್ಷರಜ್ಞಾನ ಮುಂತಾದ ವಿದ್ಯೆಗಲಿತನಂತರ ಗುರುಗಳ ಆಶೀರ್ವಾದ ಪಡೆದು ತನ್ನ ಮಾತಾಪಿತರುಗಳಿರುವ ಗ್ರಾಮಕ್ಕೆ ತೆರಳುತ್ತಿದ್ದನು. ಅಲ್ಲಿಯ ವರೆಗೆ ಮಾತಾಪಿತರುಗಳ ಇಲ್ಲವೆ ಇನ್ನಿತರ ಸ್ತ್ರೀಯರ ದರ್ಶನವೂ ಕೂಡ ಆಗುತ್ತಿರಲಿಲ್ಲ. ಇಂದು ಮಾತ್ರ ಎಲ್ಲವೂ ಹಿಂದಿನ ಶಿಕ್ಷಣದ ವಿರುದ್ಧವಾದ ಶಿಕ್ಷಣವಾಗಿದೆ. ಊರಲ್ಲಿಯೇ ಶಾಲೆಕಾಲೇಜು, ಸಿನೇಮಾ ಮಂದಿರ, ಮೇಲಾಗಿ ವಿದ್ಯಾರ್ಥಿಗಳ ಕೋಣೆಯಲ್ಲಿಯೇ ವಿದ್ಯಾರ್ಥಿನಿಯರು, ಶಾಲೆಯಬದಿ ಚಹಾ ಕಾಫಿ ಸಿಗಾರೇಟುಗಳ ಅಂಗಡಿಗಳು. ಇವೆಲ್ಲ ನೋಡಲಾಗಿ ಇಂದಿನ ಶಾಲೆ ಕಾಲೇಜುಗಳು ಸಿನೇಮಾ ಸ್ಟುಡಿಯೋ ಎಂದು ಭಾಸವಾಗುತ್ತದೆ. ಮೇಲಾಗಿ ಶಾಲೆಯಲ್ಲಿ ಶಿಕ್ಷಕರ ಬೆದರಿಕೆಯೂ ನಡೆಯುದು. ಇದು ವಿದ್ಯಾರ್ಥಿಗಳ ತಪ್ಪಲ್ಲ. ಶಿಕ್ಷರ ತಪ್ಪು. ಇಂದಿನ ಬಹುಜನ ಶಿಕ್ಷಕರು ವ್ಯಸನಿಗಳಾಗಿದ್ದಾರೆ ಆಚಾರ ವಿಚಾರಗಳಿಲ್ಲ. ಶಾಲೆಯಲ್ಲಿ ಕಲಿತ ಶಿಕ್ಷಣದ ಹೊರತು ಇತರ ಜ್ಞಾನವೇ ಇಲ್ಲದ, ಅನೇದಾದರೂ ಯೇನು ತಪ್ಪು ಎಂದು ಸುಮ್ಮನಾಗುವದೊಳಿತು. ಏಕೆಂದರೆ ಶಿಕ್ಷಣದ ತಳಹದಿಯೇ ತಪ್ಪಿಹೋಗಿದೆ. ಆದಿಕಾಲದಲ್ಲಿ ಸ್ತ್ರೀ ಶಿಕ್ಷಣವು ಬಳಿಕೆಯಲ್ಲಿರಲಿಲ್ಲ, ಆದರೂ ಎಂತೆಂತಹ ಯೋಗಿನಿಯರೂ, ಪತಿವ್ರತೆಯರೂ, ತತ್ವಜ್ಞಾನಿಯರೂ ಆಗಿಹೋಗಿದ್ದಾರೆ. ಅಂದಿನ ಕಾಲದಲ್ಲಿ ಅಂಥ ಜನರಿಗೇ ಮಾನ್ಯತೆಯಿತ್ತು. ಆದರೆ ಇಂದು ಒನಪು ಒಯ್ಯಾರದವರಿಗೆ ಮಾನ್ಯತೆಯಿದೆ. ಇಂದಿನ ಶಿಕ್ಷಣದಲ್ಲಿ ಸ್ತ್ರೀಶಿಕ್ಷಣವು ವ್ಯರ್ಥವಾಗಿದೆ. ಗೃಹಣಿಯಾಗತಕ್ಕ ಸ್ತ್ರೀಯಳಿಗೆ ಶಿಕ್ಷಣವು ಯೋಗ್ಯವಲ್ಲ. ಇದರಿಂದಲೇ ಇಂಥ ಅನ ಗರಿಕತೆ ನಮ್ಮಲ್ಲಿ ನೆಲಿಸಿದೆ. ಸ್ತ್ರೀಶಿಕ್ಷಣದಿಂದ ನಿರುದ್ಯೋಗವೇ ಹೆಚ್ಚು ವ್ಯಾಪಿಸಿದೆ. ಮನೆಯ ಸಂಪರ್ಕವಿಲ್ಲದ ಅವರಿಗೆ ಶಿಶುಪೋಷಣೆಯ ಮರ್ಮವೂ, ಪಾಕಶಾಸ್ತ್ರದ ರೀತಿ ವಗ್ಯೆರೆ ಯಾವದೂ ಗೊತ್ತಾಗದು. ಸ್ತ್ರೀಯಳಿಗೆ ಗೃಹಶಿಕ್ಷಣವೇ ಉಚ್ಚಮಟ್ಟಿನದು. ಇಂದಿನ ಶಿಕ್ಷಣದ ಕೈಗನ್ನಡಿಯೇ ಆದಿಕಾಲದ ಶಿಕ್ಷಣ.

---

# ನನ್ನಯ್ಯ



ಒಂದು ಏಕಾಂಕ

ಬರೆದವರು:— ಶ್ರೀ ಬಾಣದ. ಲಿಂಗಣ್ಣ. ಶಾಲಾ ಗುರೂಜಿ.

## ಪಾತ್ರ ಪರಿಚಯ

| | |
|---|---|
| (೧) ಮಲ್ಲಯ್ಯ. <br> (೨) ಬಸಯ್ಯ. | ಓಡಿಸಾ ಪ್ರಾಂತದಲ್ಲಿಯ ಸುಜ್ಞಾನಿ ಮುನಿಗಳ ಶಿಷ್ಯರು. |
| (೩) ಸುಜ್ಞಾನಿಗಳು | ಲಿಂಗಧಾರಣೆ ಮಾಡುವ ಕಾಯಕದ ಗುರುವರ್ಯರು |
| (೪) ನೀಲಪ್ಪ. | ಒಕ್ಕಲು ಮನುಷ್ಯ |
| (೫) ಶಿವಗಂಗಿ. | ನೀಲಪ್ಪನ ಧರ್ಮಪತ್ನಿ |
| (೬) ಮಾತಂಗ. | ಗುಡ್ಡದಲ್ಲಿ ವಾಸಿಸುವ ಬೇಡನು |
| (೭) ಗುಂಡಯ್ಯ | ಕುಂಬಾರ ಗುಂಡಯ್ಯ |
| (೮) ಸೈನಿಕ | ಒಬ್ಬ ರಾಜನ ಸೈನಿಕ |
| (೯) ಪ್ರಭುಗಳು | ಅಲ್ಲಮ ಪ್ರಭುಗಳು |
| (೧೦) ಬಸವಣ್ಣನವರು | ಭಕ್ತಿಭಾಂಡಾರಿ ಬಸವಣ್ಣನವರು |
| (೧೧) ಅಕ್ಕಮಹಾದೇವಿ. | ವಿರಾಗಿಣಿ ಮಹಾದೇವಿಯಕ್ಕ |
| (೧೨) ಸಿದ್ಧರಾಮೇಶ್ವರ | ಸಿದ್ಧರಾಮ ತಂದೆಗಳು |
| (೧೩) ಉರಿಲಿಂಗಪೆದ್ದಿ | ಲಿಂಗನಿಷ್ಠೆಯುಳ್ಳ ಉರಿಲಿಂಗಪೆದ್ದಿಗಳು |

ಮೊದಲನೆಯ ಎರಡನೆಯವ,

ಒಬ್ಬನು, ಮುಂತಾದವರು.

## ದೃಶ್ಯ ೧



(ಓಡಿಸಾ ಪ್ರಾಂತದಲ್ಲಿ ಸುಜ್ಞಾನಿಗಳ ಆಶ್ರಮ)

ಮಲ್ಲಯ್ಯ— ಬಸಯ್ಯಾ, ಗುರುಗಳು ಇಂದು ಕಲ್ಯಾಣಕ್ಕೆ ಹೊರಡುವವರಿದ್ದಾರಂತೆ. ಅದಕ್ಕಾಗಿ ಪೂಜಾ ಸಾಮಗ್ರಿಗಳ ಶೀವ್ರ ಗಂಟು ಕಟ್ಟೋಣ ನಡೆ.

ಬಸಯ್ಯ :— ಈ ಮಹಾತ್ಮರಿಗೆ ಆ ಗುಂಡುಕಲ್ಲಿನಂತಹ ಲಿಂಗಗಳನ್ನು ಹೊತ್ತು ಕೊಂಡು ತಿರುಗುವದು ಇಲ್ಲಿ ಸಾಕಾಗಲಿಲ್ಲವೆ? ಇನ್ನು ಅಲ್ಲಿಯೂ ಕೂಡ ಹೀಗೆ ಹೊತ್ತು ತಿರುಗಬೇಕೆನ್ನುವರೆ?

ಮಲ್ಲಯ್ಯ :— ಹೀಗೆಂದರೇನೋ ಬಸಯ್ಯ ?

ಬಸಯ್ಯಾ :— ನನಗಂತೂ ಸಾಕಾಗಿದೆ. ಇವರಸಲುವಾಗಿ ಎಲ್ಲರಿಗೂ ಲಿಂಗಧಾರಣೆ ಮಾಡುವರಂತೆ. ಏನು ಇದು ಹುಚ್ಚರಂತೆ? ಹೀಗೆ ಎಲ್ಲರೂ ಲಿಂಗಧಾರಿಗಳಾದರೆ ನಮ್ಮಂತಹ ಲಿಂಗಧಾರಿಗಳ ಕಿಮ್ಮತ್ತು ಉಳಿಯುವದೆ ? ಅಲ್ಲದೆ ಆ ಲಿಂಗದಲ್ಲಿ ಯಾದರೂ ಏನಿದೆ? ಗೋಲಿಗುಂಡದಂತಹ ಲಿಂಗವನ್ನು ಕಟ್ಟುವದರಿಂದ ಆಗುವ ಲಾಭವಾದರೂ ಏನು ?

ಮಲ್ಲಯ್ಯ — ಏನು ಹುಚ್ಚನಂತೆ ಮಾತಾಡುವಿ. ವೀರಶೈವರಾದ ನಮಗೆ ಮುಖ್ಯವಾಗಿ ಇಷ್ಟಲಿಂಗ ಪ್ರಾಣಲಿಂಗ, ಭಾವಲಿಂಗ ಇವು ಮಹತ್ವದ್ದು ಎಂದು ಗುರುಗಳು ಹೇಳಿಲ್ಲವೆ? ಅಲ್ಲದೆ ಮೊದಲಿನ ಹೆಜ್ಜೆಯಾದ ಇಷ್ಟಲಿಂಗವನ್ನು ಧರಿಸುವದು ಸಾಮನ್ಯವೆ? ಅಂತಹ ಕಾರ್ಯವನ್ನುಗುರುಗಳು ಮಾಡುತ್ತಿರುವರು. ಇದರ ಮಹತ್ವವನ್ನು ನೀನು ಅರಿತಿರುವಿಯಾ? ನಮ್ಮ ಕಿಮ್ಮತ್ತು ಎಂದು ಅನ್ನುವಿ. ನಮ್ಮ ಕಿಮ್ಮತ್ತು ಎಂದು ನಮ್ಮನ್ನೇ ನಾವು ಬೆಳೆಯಿಸಿಕೊಳ್ಳುವದು ನಮ್ಮ ಧರ್ಮಕ್ಕೆ ತೀರಾ ವಿರುದ್ಧವಾದುದು. ಹೆಚ್ಚಿನವರೆಂದು ಹೆಮ್ಮೆ ಪಟ್ಟು ಹೇಯ ಕಾರ್ಯಮಾಡಿ ಹೇಸಿಗೆ ಮಡುವಿನಲ್ಲಿ ಉರುಳಿ ಕಿರುಚುವದಕ್ಕಿಂತ ಸಣ್ಣವರೆಂದು ಅಸಾಧಾರಣ ಕಾರ್ಯಗಳನ್ನೆಸಗಿ ಜೀವನ್ಮುಕ್ತರಾಗುವದು ಸರಿಯಲ್ಲವೆ?

ಎನಗಿಂತ ಕಿರಿಯರಿಲ್ಲ ।
ಶಿವಭಕ್ತರಿಗಿಂತ ಹಿರಿಯರಿಲ್ಲ ।
ಎನ್ನಮನಸಾಕ್ಷಿ ನಿಮ್ಮಪಾದಸಾಕ್ಷಿ।
ಎನಗಿದೇದಿಬ್ಯ ಕೂಡಲಸಂಗಮದೇವಾ ।

ಎಂಬ ಅಣ್ಣನವರ ನುಡಿ ನಿನ್ನ ಕಿವಿ ಕೇಳಿಲ್ಲವೆ? ಕಿರಿತನದಲ್ಲಿಯೇ ಹಿರಿತನವಡಗಿದೆ. ಕಾರಣ ಉಚ್ಚ ಧರ್ಮವಾದ ಈ ವೀರಶೈವ ಧರ್ಮವನ್ನು ಸಾಧ್ಯವಿದ್ದಷ್ಟು ಜನತೆಗೆ ತಿಳಿಹೊಳೆಯಂತೆ ಹರಿಸಿ

ಬೆಳೆಯಿಸುವದು ಆದ್ಯ ಕರ್ತವ್ಯವಲ್ಲವೆ? ಅಲ್ಲದೆ ಮೊನ್ನೆ ಗುರುಗಳು ಇಷ್ಟಲಿಂಗದ ಮಹತ್ವವನ್ನು ಹೇಳಿದ್ದು ಕೇಳಲಿಲ್ಲವೆ?

ಬಸಯ್ಯಾ — ನನಗೆ ಮರೆವು ಆಗಿದೆ, ಏನದು?

ಮಲ್ಲಯ್ಯಾ — ಕಟಿದಕಲ್ಲು ಲಿಂಗವೆಂದೆನಿಸಿತ್ತು।
ಕಟಿಯದಕಲ್ಲು ಕಲ್ಲೆನಿಸಿತ್ತು।
ಪೂಜಿಸದ ಮಾನವ ಮಾನವನಾದ।
ಪೂಜಿಸಿದ ಮಾನವ ಭಕ್ತಿಗೆ ಕಾರಣಿಕನಾದ।

ಬಸಯ್ಯಾ — ಇರಲಿ ಬಿಡೋ, ಅದು ಏನೋ ಇದ್ದರೂ ಕಟ್ಟುವ ಕೆಲ್ಸಮಾತ್ರ ನಮಗೆ ಬಿಟ್ಟಿದ್ದಲ್ಲಾ ಕಟ್ಟೋಣನಡೆ.

(ಎಲ್ಲ ಸಾಮಾನುಗಳನ್ನು ಎರಡು ಗಂಟು ಕಟ್ಟುವರು. ಒಂದು ಜೋಳಿಗೆ ಅದರಲ್ಲಿ ಕೇವಲಲಿಂಗಗಳಿವೆ. ಅಷ್ಟರಲ್ಲಿ ಗುರುಗಳು ಬರುವರು)

ಸುಜ್ಞಾನಿಗಳು — ಮಲ್ಲಯ್ಯ ಬಸಯ್ಯನವರೇ. ಪ್ರಯಾಣದ ವ್ಯವಸ್ಥೆ ಮಾಡಿದಿರಾ?

ಮಲ್ಲಯ್ಯ — ಎಲ್ಲವನ್ನು ಸಿದ್ಧಗೊಳಿಸಿದ್ದೇವೆ ಗುರುಗಳೇ!

ಸುಜ್ಞಾನಿಗಳು — ನಮ್ಮ ಸಗಂಡ ನೀವೂ ಬರುವಿರಾ?

ಮಲ್ಲಯ್ಯ — ತಮ್ಮ ಇಚ್ಛೆಯಂತೆ ನಡೆದುಕೊಳ್ಳುವೆವು.

ಬಸಯ್ಯ — (ಕೈತಿಕ್ಕುತ್ತ) ನಾನೂ........ಹಾಗೇ ಆಗಲಿ ಗುರುಗಳೇ!

ಸುಜ್ಞಾನಿಗಳು — ನಡೆಯಿರಿನ್ನು —

(ಹೋಗುವಾಗ ಮುಂದೆ ಮುಂದೆ ಸುಜ್ಞಾನಿಗಳು ವಚನ ಅನ್ನುವರು. ಹಿಂದಿನಿಂದ ಇಬ್ಬರೂ ಕೂಡಿ ಅನ್ನುವರು)

ಹೊತ್ತಾರೆ ಎದ್ದು ಲಿಂಗದೇವನ ದೃಷ್ಟಿಯಾರೆ ನೋಡದವನ,
ಸಂಸಾರವೇನವನ ನಡೆಯೇನವನ ಸಂಸಾರವೇನವನ
ಬಾಳುವೆಯೇನವನ ಬೀಳುವೆಯೇನವನ ಕೂಡಲ,
ಸಂಗಮದೇವಾ ನಿಮ್ಮ ಮುಟ್ಟಿ ನೋಡಿ ನೆನೆದು ಪೂಜಿಸದವನ ಬದುಕೇನವನ,

(ಹೋಗುವರು ತೆರೆಬೀಳುವದು)

## ದೃಶ್ಯ ೨



(ಹೆಂಡತಿ ವಿಭೂತಿ ಧರಿಸಿಕೊಂಡು ಅನುಭವಮಂಟಪಕ್ಕೆ ಹೊರಟಿದ್ದಾಳೆ)

ಶಿವಗಂಗಿ — (ಪ್ರವೇಶಿಸಿ ಹಾಡುತ್ತಬರುವಳು)

ಎತ್ತು ನಿಮ್ಮದಾನ । ಬಿತ್ತು ನಿಮ್ಮದಾನ।
ಸುತ್ತಿಹರಿವಸಾಗರ ನಿಮ್ಮ ಪಾನ।
ನಿಮ್ಮದಾನವನುಂಡು ಅನ್ಯದೈವಗಳ ಹೊಗಳುವ।
ಕುನ್ನಿಗಳನೇನೆಂಬೆ ರಾಮನಾಥಾ।

ನೀಲಪ್ಪ — (ಒಳಗಿನಿಂದ) ಏ... ಏ.... ಶಿವಗಂಗಿ ಸ್ವಲ್ಪನಿಲ್ಲು. ಎಷ್ಟೊಂದು ಅವಸರ? ತಡೆ ತಡೆ ನನಗೆ ಗೊತ್ತುಂಟು.

ಶಿವಗಂಗಿ — (ತಿರುಗಿ) ಯಾರವರು ನನ್ನ ಕೂಗಿದವರು ?

ನೀಲಪ್ಪ — (ಪ್ರವೇಶಿಸಿ) ನನಗೆ ಗೊತ್ತುಂಟು ಯಾರದು ಅಂದ್ರೇ... ತಿಳಿಯದಿಲ್ಲಾ ನಿನ್ನ ಹೆಸರುಗೊಂಡು ಒದರಬೇಕಾದರೆ ನಾನೇ ಅಂತಾ

ಶಿವಗಂಗಿ — ಕೂಗಿದಕಾರಣ ?

ನೀಲಪ್ಪ — ( ಬೆರಳು ಎಣಿಸತ್ತ ) ಕೂ...ಗಿ...ದ..ಕಾ...ರ...ಣ (ಆಲೋಚಿಸಿ) ವಿನಾಕಾರಣ. ನನಗೆ ಗೊತ್ತುಂಟು.

ಶಿವಗಂಗಿ — ನೀವು ಯಾವಾಗಲೂ ಹೀಗೆ ವಿನಾಕಾರಣಾನ್ಯ ಇದ್ದೀರಿ (ಹೊರಡುವಳು)

ನೀಲಪ್ಪ — ಏ-ನಿಲ್ಲು. ನಿಲ್ಲು ನಲ್ಲೆ ನಲ್ಲ ಕೂಗುವನು ನಿಲ್ಲು. ಕೂಗುವದನ್ನೇನು ಬಲ್ಲೆ ? ಒಲ್ಲೆಯಾದರೆ ನಿಲ್ಲದಲೆ ಹೋಗು. ನನಗೆ ಗೊತ್ತುಂಟು.

ಶಿವಗಂಗಿ — ಹೀಗೇ ಚೇಷ್ಟೆಮಾಡುತ್ತ ನಿಲ್ಲುವಿರೋ? ಕೂಗಿದ ಕಾರಣ ತಿಳಿಸುವಿರೊ ?

ನೀಲಪ್ಪ — ನನಗೆ ಗೊತ್ತುಂಟು ಈಗ ಎಲ್ಲಿಗೆ ಹೊರಟಿರುವೆ?

ಶಿವಗಂಗಿ — ಅನುಭವ ಮಂಟಪಕ್ಕೆ ಹೊರಟಿರುವೆ.

ನೀಲಪ್ಪ — ಒಕೋ ನನಗೆ ಗೊತ್ತುಂಟು. ಮೊನ್ನೆ ನಿನ್ನ ಮಾತು ಕೇಳಿ ನಾನು ಹೋಗಿ ಬರಬೇಕೂ ಅಂತಾ ನಿನ್ನೆ ನಿಮ್ಮ ಅನುಭವ

ಮಂಟಪಕ್ಕೆ ಹೋಗಿದ್ದೆ ಬಾಗಿಲಲ್ಲಿ ನಿಂತಿದ್ದಾ. ಆ ಕಾವಲುಗಾರರು ನನ್ನನ್ನು ಒಳಗೆ ಬಿಡಲಿಲ್ಲ. ನಿನ್ನೆ ಮಾತು ಕೇಳಿ ನಾನು ಅಪಮಾನ ಹೊಂದಿ ಮನೆಗೆ ಬಂದೆ.

ಶಿವಗಂಗಿ — ನಿಜ ಅನುಭವ ಮಂಟಪದಲ್ಲಿ ಬಿಡಲು ಮೊದಲು ಅವರಲ್ಲಿದ್ದ ಗುಣಗಳನ್ನು ಪರೀಕ್ಷಿಸುತ್ತಿರುವರು. ಅವರ ರೀತಿ, ನೀತಿ, ನಡತೆ, ನಿಶ್ಚಲಭಕ್ತಿ, ಮನಃಶುದ್ಧಿ ಇವುಗಳನ್ನೆಲ್ಲ ಪರಿಕ್ಷಿಸಿ ಒಳಗೆ ಬಿಡು ವರು.

ನೀಲಪ್ಪ — ನನಗೆ ಗೊತ್ತುಂಟು ನೀನು ಮಾ...ತ್ರ ಎಲ್ಲದರಿಂ ದಲೂ ಸರಿಯಾಗಿರುವೆ. ಏನೇ ಇರಲಿ! ನಮ್ಮ ಮನೆಪೈಕಿ ನೀನೊ ಬ್ಬಳು ಹೋಗುವಿಯಲ್ಲ. ಅದನ್ನೇ ದಿವ್ಸಾ ಒಂದೀಟು ಹೇಳಿ ನಮ್ಮನ್ನು ಸ್ವರ್ಗದ ಹಾದಿಗೆ ಹಚ್ಚವ್ವಾ... ಅಲ್ಲಲ್ಲಾ...ಹಚ್ಚಿ... ಮರೆತು ಹಚ್ಚವ್ವಾ. ಅಂದು ಬಿಟ್ಟೆ.

ಶಿವಗಂಗಿ — ತಮ್ಮ ಇಚ್ಛೆಯಂತೆ ನಡೆದುಕೊಳ್ಳುವೆನು. ಸದ್ಯ ಹೊತ್ತಾಗುತ್ತದೆ. ಹೋಗಿ ಬರುವೆನು. (ಹೊರಡುವಳು)

ನೀಲಪ್ಪ — ಅಲ್ಲಾ ಸ್ವಲ್ಪ ತಡೆ

ಶಿವಗಂಗಿ — ಮತ್ತೇನು ಕೆಲಸ!

ನೀಲಪ್ಪ — ಕೆಲ್ಸಗಿಲ್ಸಾ ಏನೂ ಇಲ್ಲ. (ವಿಚಾರಿಸಿ) ಆದರೂ ಸ್ವಲ್ಪ ತಡೆ. ನನಗೆಲ್ಲಾ ಗೊತ್ತುಂಟು.

ಶಿವಗಂಗಿ — ನಾನು ಹೋಗುವವಳಿಗೆ ನೀವು ಹೀಗೆ ತಡಮಾ ಡುವ ಕಾರಣವಾದರೂ ಏನು?

ನೀಲಪ್ಪ — ನನಗೆ ಗೊತ್ತುಂಟು. ಹಾಗೇನೂ ಇಲ್ಲ. ನಿನ್ನೆ ನಾನು ಅನುಭವ ಮಂಟಪಕ್ಕೆ ಹೋಗಿದ್ದೆನೆಂದು ಹೇಳಲಿಲ್ಲವೆ? ಆಗ ಭಕ್ತ, ಶರಣ, ಅಂತಾ ಹೀಗೆ ಏನೇನೋ ಗೊಂದಲ ನಡೆದಿತ್ತಲ್ಲಾ.

ಶಿವಗಂಗಿ — ನಿನ್ನಿನ ಅನುಭವ ಮಂಟಪದಲ್ಲಿ ನಮ್ಮ ವೀರಶೈವ ಧರ್ಮದ ಮುಖ್ಯಮಾರ್ಗವಾದ ಷಟ್‌ಸ್ಥಲದ ಬಗ್ಗೆ ಚರ್ಚೆ ನಡೆದಿತ್ತು. ಆ ವಿಷಯ ಬಹಳ ದೊಡ್ಡದಿದೆ. ಇನ್ನೊಮ್ಮೆ ಮನೆಯಲ್ಲಿ ನನಗೆ ತಿಳಿದ ಷ್ಟನ್ನು ಹೇಳುವೆನು.

ನೀಲಪ್ಪ — ಒಹೋ ನನಗೆಲ್ಲಾ ಗೊತ್ತುಂಟು. ಈ ನಿಮ್ಮ ಷಟ್ ಸ್ಥಲದ ಬಗ್ಗೆ ನನಗೆ ಗೊತ್ತುಂಟು.

ಶಿವಗಂಗಿ — ( ಬೇಸತ್ತವಳಂತೆ ) ಗೊತ್ತೈತಿ. ಗೊತ್ತೈತಿ-ಗೊತ್ತೈತಿ. ಏನು ಗೊತ್ತೈತಿ ಹೇಳಿ ನೋಡುವಾ.

ನೀಲಪ್ಪ— ಅಲ್ಲ್ಯ ನನಗೆ ಗೊತ್ತೈತಿ. ಷಟ್‌ಸ್ಥಲ ಅಂದ್ರ್ಯ ಆರು ಸ್ಥಳ, ಇದನ್ನ್ಯ ನಾವೇನ್ಯ ರಂಟ್ಯ ಕುಂಟ್ಯ ಹೊಡ್ಯಾವ್ರು ಅದಿವಿಯಲ್ಲಾ. ಆ ಸ್ಥಳಕ್ಕೆ ಮೆಟ್ಟ್ಸಿ. ಜಾಗಾ, ಅಂತಾ ಅಂತೀವಿ. ಅಂದ್ರ ಒಟ್ಟಿ ಆರು ಜಾಗಾ ಅವ ಅಂದ್ಹಾಂಗ ಅತು. ಅವು ಅಂದ್ರ ಉಣ್ಣುವ ಜಾಗಾ, ಕೂಡ್ರುವ ಜಾಗಾ, ಮಲಗುವಜಾಗಾ.

ಶಿವಗಂಗಿ :— ಸಾಕು, ಸಾಕು, ಕೇಳಿದ ಜನರೆಲ್ಲಾ ನಿಮ್ಮ ಜಾಗಾನ್ಯ ಹುಡುಕಾಕ ಹತ್ತ್ಯಾರು.

ನೀಲಪ್ಪ:— ನನಗೆಲ್ಲಾ ಗೊತ್ತೈತಿ. ನೀನು ಹೇಳು ನೋಡುವಾ·

ಶಿವಗಂಗಿ:— ತಾವು ಹೇಳಿದಂತೆ ಷಟ್‌ಸ್ಥಲವೆಂದರೆ ಆರುಸ್ಥಲ ನಿಜ. ಅವುಗಳ್ಯಾವವೆಂದರೆ, ಭಕ್ತಸ್ಥಲ, ಮಾಹೇಶ್ವರಸ್ಥಲ, ಪ್ರಾಣಲಿಂಗಿಸ್ಥಲ, ಪ್ರಸಾದಿಸ್ಥಲ, ಶರಣಸ್ಥಲ, ಐಕ್ಯಸ್ಥಲ.

ನೀಲಪ್ಪ:— ನನಗೆ ಗೊತ್ತೈತಿ. ಹೀಗೆ ಅಂದರೇನು ಶಿವಗಂಗಿ?

ಶಿವಗಂಗಿ;— ಮಾಯೆಯು ಮನುಷ್ಯನನ್ನು ನಾನಾ ವಿಧವಾಗಿ ವಿಷಯಗಳಿಗೆ ಒಲಿಸುವದು. ಕಾರಣ ಭಕ್ತನು ಲಿಂಗಧಾರಣೆಯಾದ ಬಳಿಕ ಮಾಯೆಗೆ ಒಳಗಾಗದೇ ಇರುವದು ಭಕ್ತಸ್ಥಲವಾಗಿದೆ. ಲಿಂಗದೊಳಗೆ ನಿಷ್ಠೆಯುಳ್ಳವನಾಗಿ ಅನ್ಯದೈವವನ್ನು ಕಣ್ಣೆತ್ತಿನೋಡದೆ, ಜ್ಯಾತಿಭೇದವಿಲ್ಲದೆ ಲಿಂಗವಿದ್ದವರೆಲ್ಲರೂ ಬಂಧುಗಳೆಂಬ ಭಾವದಿಂದ ನಡೆಯುವದೇ ಮಾಹೇಶ್ವರ ಸ್ಥಲವಾಗಿದೆ.

ನೀಲಪ್ಪ:— ತಡೆ, ತಡೆ. ಅನ್ಯ ದೈವ ಅಂತಾ ಅಂದಿಯಲ್ಲಾ ಅವು ಯಾವವು ?

ಶಿವಗಂಗಿ:— ಎಲ್ಲರೂ ಒಬ್ಬದೇವನ ಮಕ್ಕಳು. ಜಗಕ್ಕೆ ಕರ್ತನೊಬ್ಬ ಅಂತೆಯೇ ಅಣ್ಣನವರು,

ನಂಬಿದ ಹೆಂಡತಿಗೆ ಗಂಡನೊಬ್ಬ ಕಾಣಿರೋ ।
ನಂಬ ಬಲ್ಲ ಭಕ್ತಂಗೆ ದೇವನೊಬ್ಬ ಕಾಣಿರೋ ।
ಬೇಡ ಬೇಡ ಅನ್ಯದೈವದ ಸಂಗ ಬೇಡ ಹೊಲ್ಲ ।

ಬೇಡ ಬೇಡ ಅನ್ಯ ದೈವದ ಸಂಗ ಹಾದರ ಕಾಣಿರೋ ॥
ಕೂಡಲ ಸಂಗಮದೇವ ಕಂಡರೆ ಕಿವಿಮೂಗ ಕೊಯ್ವ
ಕಾಣಿರೋ ।

ನೀಲಪ್ಪ:— ಇರಲಿ! ತಿಳಿಯಿತು. ಮುಂದೆ?

ಶಿವಗಂಗಿ:— ಮಾಡುವ ಕ್ರಿಯೆಗಳೆಲ್ಲ ಲಿಂಗಾರ್ಪಣ ಭಾವದಿಂದ ಮಾಡುತ್ತ ಯಾವಾಗಲೂ ಶಾಂತ, ಪರಿಶುದ್ಧವಾದ ನಡೆಯಿಂದ ಸಜ್ಜನರ ಸಂಗ ಮಾಡುತ್ತ ಇದ್ದು ಕೊಳ್ಳುವದೇ ಪ್ರಸಾದಿಸ್ಥಲವಾಗಿದೆ. ಲಿಂಗದ ಶಕ್ತಿಯೇ ತನ್ನ ಶಕ್ತಿಯಾಗಿ ಚಂಚಲವಾದ ಮನಸ್ಸನ್ನು ತನ್ನ ಅಧೀನ ದಲ್ಲಿಟ್ಟುಕೊಂಡು ನಡೆಯುವದೇ ಪ್ರಾಣಲಿಂಗಿಸ್ಥಲವು.

ನೀಲಪ್ಪ:— ಸ್ವಲ್ಪ ತಡೆ. ನನಗೆ ಗೊತ್ತುಂಟು ಈಗ ಯಾವ ್ಯವು ಹೇಳಿದೆಯಲ್ಲ.

ಶಿವಗಂಗಿ:— ಮೊದಲನೇಯದು ಭಕ್ತಸ್ಥಲ.

ನೀಲಪ್ಪ:— (ಬೆರಳು ಎಣಿಸುತ್ತ) ಒಂದು

ಶಿವಗಂಗಿ:— ಎರಡನೇಯದು ಮಾಹೇಶ್ವರಸ್ಥಲ.

ನೀಲಪ್ಪ:— ಎರಡು .... .... ....

ಶಿವಗಂಗಿ:— ಮೂರನೇಯದು ಪ್ರಾಣಲಿಂಗಿಸ್ಥಲ.

ನೀಲಪ್ಪ:— ಮೂರು.

ಶಿವಗಂಗಿ:— ನಾಲ್ಕನೇಯದು ಪ್ರಸಾದಿಸ್ಥಲ.

ನೀಲಪ್ಪ:— ಅಂತೂ ಭಕ್ತ, ಮಹೇಶ, ಪ್ರಾಣಲಿಂಗಿ, ಪ್ರಸಾದಿ ಇನ್ನೆರಡು ಉಳಿದವಲ್ಲ.

ಶಿವಗಂಗಿ:— ಅವನ್ನೂ ಹೇಳುವೆ ಕೇಳಿರಿ. ಶರಣಸ್ಥಲಕ್ಕೆ ಮುಟ್ಟಿದ ಮನುಷ್ಯನ ಮನಸ್ಸು ಅಚಲವಾಗಿರುತ್ತದೆ. ಅವನು ಕೇವಲ ಜ್ಞಾನಿಯಾಗಿರು ವನು. ಯಾವಾಗಲೂಲಿಂಗಾಚಾರದಲ್ಲಿ ಮಗ್ನನಾಗಿರುತ್ತಾನೆ. ಇಂಥವನಿಗೆ ಸಂಸಾರದ ಬಂಧನಗಳು ಬಂಧಿಸಲಾರವು. ಇದುವೇಶರಣಸ್ಥಲವು.

ಹಿಂದಿನ ಐದುಸ್ಥಲಗಳನ್ನು ಅರಿತು ಆಚರಿಸಿದರೆ ಕಡೆಯ ಸ್ಥಲವು ತಾನೇ ಸಾಧ್ಯವಾಗುವದು. ಅದುವೇ ಐಕ್ಯಸ್ಥಲವು.

ನೀಲಪ್ಪ:— ಒಹೋ ಎಷ್ಟೊಂದು ಚೆನ್ನಾಗಿ ಮನನ ಮಾಡಿ ಕೊಂಡಿರುವೆಯಲ್ಲ್ವ ನನಗೆ ಗೊತ್ತುಂಟು. ಇನ್ನೊಮ್ಮೆ ಹೇಳು.

ಶಿವಗಂಗಿ:— ಭಕ್ತ, ಮಾಹೇಶ, ಪ್ರಾಣಲಿಂಗಿ, ಪ್ರಸಾದಿ, ಶರಣ, ಐಕ್ಯ.

ನೀಲಪ್ಪ:— ಸಾಕು, ಸಾಕು, ನೀನು ಇಂದೂ ಹೋಗಿ ಏನು ನಡೆದಿತ್ತು ಅನ್ನೋದನ್ನ ನನ್ನ ಮುಂದೆ ಹೇಳಬೇಕು. ಏನು? ಅಂ. ಹ್ಞಾಂ ನಡೆ, ನನಗೆ ಗೊತ್ತುಂಟು (ಒಂದುಕಡೆ ನೀಲಪ್ಪ ಹೋಗುವನು ಒಂದು ಕಡೆ ಕೆಳಗಿನ ವಚನ ಅನ್ನುತ್ತ ಶಿವಗಂಗಿ ಹೋಗುವಳು.)

ಎತ್ತು ನಿಮ್ಮದಾನ। ಬಿತ್ತು ನಿಮ್ಮದಾನ।
ಸುತ್ತಹರಿವ ಸಾಗರ ವೆಲ್ಲ ನಿಮ್ಮದಾನ।
ನಿಮ್ಮದಾನವ ನುಂಡು ಅನ್ಯರ ಹೊಗುಳುವ।
ಕುನ್ನಿಗಳ ನೇನೆಂಬೆ ರಾಮನಾಥಾ।

(ತೆರೆಬೀಳುವದು)

## ದೃಶ್ಯ ೩



(ಅಡವಿಯ ಮುಂಭಾಗದಲ್ಲಿ ಮೂವರೂ ಬರುವಾಗ ಎದುರಿಗೆ ಇಬ್ಬರು ರಕ್ತ ಸುರಿಯುತ್ತಿರುವ ಮೈಯಿಂದ ಹರಕು ಅರವಿಹಾಕಿಕೊಂಡು ಬರುವರು)

ಸುಜ್ಞಾನಿಗಳು:— ಅಹಾ! ಏನು ವಿಚಿತ್ರ ಘಟನೆ! ಮಹಾನುಭಾವರೆ! ನಿಮ್ಮ ಸ್ಥಿತಿ ಹೀಗಾಗಲು ಕಾರಣವೇನು?

ಮೊದಲನೇಯವ:— (ದುಃಖದಿಂದ) ಏನು ಸ್ವಾಮಿ? ತಾವು ಎಲ್ಲಿಗೆ ಹೊರಟಿರುವಿರಿ?

ಸುಜ್ಞಾನಿಗಳು:—ಇರಲಿ! ತಮ್ಮ ಸ್ಥಿತಿ ಹೀಗಾಗಲು ಕಾರಣವೇನು? ಮೈಯಲ್ಲಾ ರಕ್ತಸುರಿಯುತ್ತಿದೆ. ಮೈ ಮೇಲಿನ ಬಟ್ಟೆಗಳು ಹರಿದು ಹರಿದು ಚಿಂದಿಯಾಗಿವೆ. ದುಃಖದ ಅತಿರೇಕದಿಂದ ಕುತ್ತಿಗೆಯ ನರಗಳು ಮೇಲೆದ್ದಿವೆ. ಏನು ವಿಚಿತ್ರ!!

ಮೊದಲನೇಯವ:— ನಮಗಾಗ ಬೇಕಾದುದೆಲ್ಲವೂ ಆಗಿದೆ. ಮೊದಲು ಹೇಳಿರಿ. ತಾವು ಈ ದಾರಿಯಿಂದ ಎಲ್ಲಿಗೆ ಹೊರಟಿರುವಿರಿ.

ಸುಜ್ಞಾನಿಗಳು – ನಾವು ಕಲ್ಯಾಣ ನಗರಕ್ಕೆ ಹೊರಟಿದ್ದೇವೆ.

ಎರಡನೇಯವ:— ನಿಮಗೆ ಬೇರೆ ದಾರಿ ಯಿಲ್ಲವೆ?

ಮೊದಲನೇಯವ:— ನಿಮಗೆ ಜೀವ ಬೇಡವೆ?

ಸುಜ್ಞಾನಿಗಳು;— ಹೀಗೇಕೆ ನುಡಿಯುವಿರಿ? ನಿಮ್ಮ ಮೈಯಲ್ಲಿ ರಕ್ತವೇಕೆ ಸುರಿಯುವದು. ಮೊದಲು ಹೇಳಿರಿ.

ಎರಡೆನೇಯವ— ಏನು ಹೇಳೋದು ಸ್ವಾಮಿ. ಈ ದಾರಿಯಿಂದ ಸುಮ್ಮನೆ ತಿರುಗಿ ನಡೆಯಿರಿ. ಅಯ್ಯೋ ಮೈಯಲ್ಲಾ ನೋಯುತ್ತಿದೆ. ಹಾಃಘ್, ತಲೆ ಉರಿಯುತ್ತಿದೆ. ಅಯ್ಯೋ ( ಕೆಳಗೆ ಬೀಳುವನು )

ಸುಜ್ಞಾನಿಗಳು:— ( ಅವನ ತಲೆ ತಮ್ಮ ತೊಡೆಯ ಮೇಲೆ ಹಾಕಿ ಕೊಂಡು ) ಮಲ್ಲಯ್ಯಾ ಸ್ವಲ್ಪ ನೀರನ್ನು ತೆಗೆದುಕೊಳ್ಳು (ನೀರು ತರುವನು. ಸ್ವಲ್ಪ ಕುಡಿಸಿ ಎಬ್ಬಿಸಿ ಕೂಡ್ರಿಸುವನು ) ಆದ ಸಂಗತಿಯಾದರೂ ವಿವರವಾಗಿ ಹೇಳಿರಿ.

ಮೊದಲನೆಯವ — (ತಡವರಿಸುತ್ತ) ನಾವು ಎಂಟು ಜನರಿದ್ದೆವು ಮುಂದಿನ ಗುಡ್ಡದಾಚೆಗಿನ ಊರಿಗೆ ಹೋಗುವುದ್ದೇವು ಅಷ್ಟರೊಳಗೆ ಗುಡ್ಡದ ಮಧ್ಯದಲ್ಲಿ ಒಬ್ಬ ಬೇಡನು ಕೆಲವು ಪುಂಡರನ್ನು ಕರೆದು ಕೊಂಡು ಬಂದು ನಮ್ಮ ಮೇಲೇರಿ ಬಂದನು. ನಮ್ಮಲ್ಲಿದ್ದ ಎಲ್ಲವನ್ನೂ ಕಸಿದುಕೊಂಡಿದ್ದಾನೆ. ಮತ್ತು ಉಳಿದ ಆರು ಜನರ ಪ್ರಾಣಹಾನಿ ಮಾಡಿದ್ದಾನೆ. ಆಯ್ಯೋ ಮೈಯೆಲ್ಲಾ ಉರಿಯುತ್ತಿದೆ. ಉಶ್‌ಶ್

ಸುಜ್ಞಾನಿಗಳು — ಸಮಾಧಾನಿಯಾಗಿರಿ. ಎಲ್ಲವನ್ನೂ ಆ ದೇವನು ನಿರೀಕ್ಷಿಸುವನು. ಅವರ ಕರ್ಮಕ್ಕನುಸಾರವಾಗಿ ಪ್ರಾಯಶ್ಚಿತ ಕೊಟ್ಟೇ ಕೊಡುವನು.

ಎರಡನೆಯವ — ಎಲ್ಲಿಯಿದ್ರೀ ಅವನಿಗೆ ಪ್ರಾಯಶ್ಚಿತ್ತ ಆಗಬೇಕಾಗಿದ್ದರೆ ಇಷ್ಟು ದಿವ್ಸ ಹೇಗೆ ಉಳಿಯುತ್ತಿದ್ದ. ಅವನು ಅಲ್ಲಿ ನೆಲಿಸಿ ಬಹಳ ದಿವ್ಸವಾಯಿತಂತೆ ಇಂತಹ ಘಟನೆಗಳನ್ನು ನೂರಾರು ಮಾಡಿದ್ದಾನಂತೆ-

ಸುಜ್ಞಾನಿಗಳು — ಇರಲಿ! ಸಮಾಧಾನಿಯಾಗಿರಿ. ನೀವು ನಿಮ್ಮ ಊರಿಗೆ ನಡೆಯಿರಿ. ದುರ್ಮಾರ್ಗದಲ್ಲಿದ್ದವರನ್ನು ಸುಮಾರ್ಗಕ್ಕೆ ಹಿಡಿಸುವದು ನನ್ನ ಕಾಯಕವಾಗಿದೆ. ಕಾರಣ ನನ್ನ ಪ್ರಾಣವನ್ನು ಪಣಕ್ಕೆ ಹಚ್ಚಿ ಇದೇ ದಾರಿಯಿಂದ ಸಾಗುವೆನು.

ಇಬ್ಬರೂ— ಬೇಡ, ಬೇಡ, ನಿಮ್ಮಕಾಲಿಗೆ ಬಿದ್ದು ಬೇಡಿಕೊಳ್ಳುವೆವು.

ಸುಜ್ಞಾನಿಗಳು — ಹಾಗಾಗದು. ನೀವು ನಡೆಯಿರಿ.

ಮಲ್ಲಯ್ಯ )— ಗುರು ಸೇ (ಅಂಜುತ್ತ) ನಾವೂ ಇವರಸಂಗಡ
ಬಸಯ್ಯ ) ತಿರುಗಿ ಹೋಗುವೆವು.

ಸುಜ್ಞಾನಿಗಳು — ಒಳ್ಳೇದು ನೀವೂ ನಡೆಯಿರಿ.

( ಎಲ್ಲರೂ ಹಿಂದಿರುಗುವರು ಸುಜ್ಞಾನಿಗಳು ಒಬ್ಬರೇ ಹೋಗುವರು )
(ತೆರೆಬೀಳುವದು)

---

## ದೃಶ್ಯ ೩



(ಕಲ್ಯಾಣಪಟ್ಟಣದಲ್ಲಿ ನೀಲಪ್ಪನ ಮನೆ. ಗಂಡಹೆಂಡತಿ ಕುಳಿತಿದ್ದಾರೆ)

ನೀಲಪ್ಪ — ನನಗೆ ಗೊತ್ತುಂಟು. ಅಲ್ಲ್ಯಾ ಶಿವಗಂಗಿ ನಿಮ್ಮ ಅನುಭವ ಮಂಟಪದ ನಿನ್ನಿನ ಸಮಾಚಾರ ತಿಳಿಲಿಲ್ಲವಲ್ಲಾ.

ಶಿವಗಂಗಿ — ನಿನ್ನಿನ ಅನುಭವ ಮಂಟಪದಲ್ಲಿ ಅಷ್ಟಾವರಣದ ವಿಷಯುವಾಗಿ ಚರ್ಚೆನಡೆದಿತ್ತು.

ನೀಲಪ್ಪ — ನನಗೆ ಗೊತ್ತುಂಟು. ಹೀಗೆ ಅಂದರೇನು ಶಿವಗಂಗಿ?

ಶಿವಗಂಗಿ — ಅಷ್ಟಾವರಣವೆಂದರೆ ಗುರು, ಲಿಂಗ, ಜಂಗಮ, ಪಾದೋದಕ, ಪ್ರಸಾದ, ವಿಭೂತಿ, ರುದ್ರಾಕ್ಷಿ, ಮಂತ್ರ ಈ ಎಂಟು. ಇವುಗಳ ವಿಷಯುವಾಗಿ ಚರ್ಚೆನಡೆದಿತ್ತು. ಹಿಂದಿನಿಂದ ಮಾನವನಿಗೆ ಹೊನ್ನು, ಹೆಣ್ಣು, ಮಣ್ಣು ಇವುಗಳು ಮಾಯೆಯೇ? ಎಂಬ ವಿಷಯ ಚರ್ಚಿಸಿ ಕಡೆಗೆ ಇವುಗಳಲ್ಲಾವದೂ ಮಾಯೆಯಲ್ಲ. ತಮ್ಮ ತಮ್ಮ ಮನದ ಮುಂದಿನ ಆಶೆಯೇ ಮಹಾಮಾಯೆ ಎಂದು ನಿರ್ಣಯಿಸಲಾಯಿತು. ನಾಳಿನ ದಿವ್ಸ ಎಲ್ಲ ಶರಣ ಶರಣೆಯರು ಈ ವಿಷಯವಾಗಿ ವಚನಗಳನ್ನು ಬರೆದು ತಂದು ಮಂಟಪದಲ್ಲಿ ಓದುವರು.

ನೀಲಪ್ಪ — ಇರಲಿ, ನನಗೆ ಗೊತ್ತುಂಟು ದಿವ್ಸ್ಯಾ ವಿಭೂತಿ, ರುದ್ರಾಕ್ಷಿ ಇವುಗಳನ್ನೆಲ್ಲ ಧರಿಸಬೇಕೆಂದ ಹಾಗಾಯಿತಲ್ಲ.

ಶಿವಗಂಗಿ — ಅದಕ್ಕಾಗಿಯೇ ತಮಗೆ ಪ್ರತಿನಿತ್ಯ ಹೇಳುತ್ತಿರುವದು. ಪ್ರತಿದಿನ ಸ್ನಾನಮಾಡಿ ವಿಭೂತಿ ರುದ್ರಾಕ್ಷಿ ಧರಿಸಿಕೊಂಡು ಗುರುಜಂಗಮರನ್ನು ಪೂಜಿಸಿ ಶಿವಾರ್ಪಣ ಭಾವದಿಂದ ಪ್ರಸಾದ ತೆಗೆದುಕೊಳ್ಳಿರೆಂದು.

ನೀಲಪ್ಪ — ನನಗೆ ಗೊತ್ತುಂಟು. ಇದನ್ನೇನು ಹೇಳುವೆ? ಇಷ್ಟೆಲ್ಲ ನನ್ನಿಂದ ಸರ್ವಥಾ ಆಗಲಾರದು.

ಶಿವಗಂಗಿ — ಹಾಗಾದರೆ ಸ್ನಾನಪೂಜೆ ಮಾಡಿ ಊಟಮಾಡುವಿರಾ?

ನೀಲಪ್ಪ — ಊ ಹುಂ. ನನಗೆ ಗೊತ್ತುಂಟು.

ಶಿವಗಂಗಿ — ಪೂಜೆಯನ್ನಾದರೂ ಮಾಡಿಕೊಂಡು ಊಟಮಾಡುವಿರಾ ?

ನೀಲಪ್ಪ — ಸಾಧ್ಯವಿಲ್ಲ ಬಿಡು- ನನಗೆ ಗೊತ್ತುಂಟು.

ಶಿವಗಂಗಿ — ಮುಖವನ್ನಾದರೂ ತೊಳೆದುಕೊಂಡು ಊಟಮಾಡುವಿರಾ ?

ನೀಲಪ್ಪ - (ಆಲೋಚನೆ) ಅದೂ ಕೂಡಾ ಆಗಲಾರದು. ನನಗೆ ಗೊತ್ತುಂಟು.

ಶಿವಗಂಗಿ — ಕೇವಲ ವಿಭೂತಿಧರಿಸಿಕೊಂಡು ಊಟಮಾಡುವಿರಾ!

ನೀಲಪ್ಪ — ಊ-ಹು - ನನಗೆ ಗೊತ್ತುಂಟು.

ಶಿವಗಂಗಿ — ಹಾಗಾದರೆ ವಿಭೂತಿಧರಿಸಿದವರ ಮುಖವನ್ನಾದರೂ ನೋಡಿ ಊಟಮಾಡುವಿರಾ ?

ನೀಲಪ್ಪ — ನನಗೆ ಗೊತ್ತುಂಟು. (ವಿಚಾರಿಸಿ) ಇಷ್ಟು ಮಾತ್ರ ಸಾಧ್ಯನೋಡು.

ಶಿವಗಂಗಿ — ಇಷ್ಟಾದರೂ ತಪ್ಪದೇ ಪಾಲಿಸುವಿರಾ ?

ನೀಲಪ್ಪ (ವಿಚಾರಿಸಿ) ತಪ್ಪದೇ ಪಾಲಿಸುವೆ.

ಶಿವಗಂಗಿ — ನಡೆಯಿರಿನ್ನು ಊಟದ ವೇಳೆಯಾಗಿದೆ (ಹೋಗುವರು)

ತೆರೆ ಬೀಳುವದು.

## ದೃಶ್ಯ ೫

●

(ಅಡವಿಯ ಮಧ್ಯಭಾಗದಲ್ಲಿ).

ಮಾತಂಗ — ಎಲೋ, ಅಲ್ಲಿ ಹೋಗುವವನು ಯಾರು? ನಿಲ್ಲು.

ಸುಜ್ಞಾನಿಗಳು — ನಾನೊಬ್ಬ ಬಡಜಂಗಮ ಸ್ವಾಮಿ.

ಮಾತಂಗ — ಹೂಂ, ನಿಮ್ಮಂಥ ಕಳ್ಳ ಜಂಗಮರಲ್ಲಿಯೇ ಏನಾದರೂ ಇದ್ದರೆ ಇರಬೇಕು. ಬಿಚ್ಚು ಆ ಗಂಟನ್ನು.

ಸುಜ್ಞಾನಿಗಳು — ಸ್ವಾಮಿ ಇದರಲ್ಲಿಯೇನೂ ತಮಗೆ ಉಪಯೋಗವಾಗುವ ವಸ್ತುಗಳಿಲ್ಲ. ತಮ್ಮಿಚ್ಛೆಯಿದ್ದರೆ ಬಿಚ್ಚುವೆನು.

ಮಾತಂಗ — ಇಂಥಬೆಲ್ಲದಂತಹ ಮಾತು ಆಡಿ ಹಾಗೆ ಹೋಗಬೇಕೆನ್ನುವಿಯಾ? ಗಂಟು ಬಿಚ್ಚುವಿಯೋ? ನಿನ್ನ ತಲೆ ಡೋಗಿ ಬಿಚ್ಚಲೊ?

ಸುಜ್ಞಾನಿಗಳು — ತಮ್ಮಿಚ್ಛೆಯಂತೆ ಯಾವದು ಬೇಕೋ ಅದನ್ನು ಬಿಚ್ಚಿಕೊಳ್ಳಿ (ಜೋಳಿಗೆ ಕೆಳಗಿಟ್ಟು ನಮಸ್ಕರಿಸಿ ಸುಜ್ಞಾನಿಗಳು ಅವನ ಮುಂದೆ ಕೂಡ್ರುವರು. ಮಾತಂಗನು ಜೋಳಿಗೆಯನ್ನು ತೆಗೆದು ನೋಡುವನು.)

ಮಾತಂಗ — (ಆಶ್ಚರ್ಯದಿಂದ) ಏನೋ ಇವು?

ಸುಜ್ಞಾನಿಗಳು — ಇವು ಲಿಂಗಗಳು ಸ್ವಾಮಿ.

ಮಾತಂಗ — (ಮತ್ತಿಷ್ಟ ಆಶ್ಚರ್ಯದಿಂದ) ಇವು ಯಾತಕ್ಕೆ ಬರುವವು?

ಸುಜ್ಞಾನಿಗಳು — ಸದ್ವಿಚಾರದ ಸಾವಿರಕಾರ್ಯಗಳಿಗಾಗಿ ಬರುವವು. ಆಳಿನಂತೆ ನಡೆದು ಆ ದೇವನ ಜೀವನಾಗಲು ಬರುವವು. ಆ ದೇವನನ್ನು ದಾಸಾನುದಾಸನನ್ನಾಗಿ ಮಾಡಲು ಬರುವವು. ಇವುಗಳ ಮುಖಾಂತರ ಸ್ವರ್ಗದ ಬಾಗಿಲ ಕಾಣಲು ಬರುವವು. ಅಂಧಃಕಾರದ ಮನವನ್ನು ತೊಳೆದುಕೊಂಡು ಜ್ಞಾನದ ಬೆಳಕಿನಲ್ಲಿ ನಡೆಯಲು ಬರುವವು. ಇಂತಹ ನೂರಾರು ಕಾರಣಗಳಿಗಾಗಿ ಸಾವಿರಾರು ಕಾರಣಗಳಿಗಾಗಿ ಬರುವವು. ಇವು ಕಾಮಧೇನು ಕಲ್ಪವೃಕ್ಷವಿದ್ದಂತೆ ಬೇಡಿದ್ದನ್ನು ಕೊಡುವವು.

ಮಾತಂಗ — ಹಾಗಾದರೆ ನನಗೂ ಕೊಡುವಿಯಾ?

ಸುಜ್ಞಾನಿಗಳು — ಹಾಗೆ ಕೊಡಲು ಬರುವದಿಲ್ಲ. ಇವುಗಳನ್ನು ಗುರುಮುಖದಿಂದ ತೆಗೆದುಕೊಂಡು ಧರಿಸಬೇಕಾಗುವದು.

ಮಾತಂಗ — ಆ ಗುರು ಎಲ್ಲಿದ್ದಾನೆ?

ಸುಜ್ಞಾನಿಗಳು — ನಿನ್ನೆದುರಿನಲ್ಲಿ.

ಮಾತಂಗ — ಹಾಗಾದರೆ ಕೊಟ್ಟು ಬಿಡು.

ಸುಜ್ಞಾನಿಗಳು — ಇಲ್ಲ. ಇವುಗಳನ್ನು ಕೊಡಬೇಕಾದಲ್ಲಿ ಸತಿಪತಿಗಳ ಭಕ್ತಿ ಒಂದಾಗಿರಬೇಕಾಗುವದು. ಅವರ ಭಕ್ತಿ ಒಂದಾಗಿರದಿದ್ದರೆ ಅಮೃತದೊಳು ವಿಷ ಬೆರೆಸಿದಂತೆ ಹೆಂಡದ ಮಡಕಿ ಹೊರಗೆ ತೊಳೆದಂತೆ. ಕಾರಣ ನಿನ್ನ ಸತಿಯುಳನ್ನು ಪರೀಕ್ಷಿಸಬೇಕಾಗುವದು.

ಮಾತಂಗ — ಯಾವ ರೀತಿಯಾಗಿ ಪರೀಕ್ಷಿಸುವಿ ಈಗಲೇ ಪರಿಕ್ಷಿಸು.

ಸುಜ್ಞಾನಿಗಳು — ನೀನು ಇಲ್ಲಿಯೇ ನಿಲ್ಲು. ನಿನ್ನ ಸೇವಕನಿಗೆ ಒಂದು ಮಾತನ್ನು ಹೇಳಿಬರುವೆನು. ಅವನು ನಿನ್ನ ಮನೆಗೆ ಹೋಗಿಬರಲಿ.

ಮಾತಂಗ — ಶಾಬಾಶ್- ಕಳ್ಳಾ. ನನಗೆ ಮೋಸಮಾಡಿ ತಪ್ಪಿಸಿಕೊಂಡು ಓಡಿ ಹೋಗಬೇಕೆನ್ನುವಿಯಾ?

ಸುಜ್ಞಾನಿಗಳು — ಹಾಗಿಲ್ಲ ಸ್ವಾಮಿ. ನನ್ನ ಮಾತಿಗೆ ಮೇಲೆ ಭರವಸೆ ಇಡಿ. ಇದೊಂದು ಸಾರೆ ಪರಿಕ್ಷಿಸು.

ಮಾತಂಗ — ಒಳ್ಳೇದು. ಆಗಿಡದ ಬುಡದಲ್ಲಿ ನನ್ನ ಸಂಗಡಿಗನು ಇದ್ದಾನೆ. ಏನು ಹೇಳುವದನ್ನು ಹೇಳಿ ಬಾ— (ಗುರುಗಳು ಹೋಗುವರು)

ಈ ಕಳ್ಳನು ನನ್ನನ್ನು ತಪ್ಪಿಸಿ ಹೋದಂತೆ ಕಾಣಿಸುತ್ತಿದೆ. ಅಂತೆಯೇ ನನಗೆ ಈ ರೀತಿ-ಬೆಲ್ಲದಂತಹ ಮಾತುಗಳನ್ನಾಡಿ ಹೋಗಿದ್ದಾನೆ. (ಮುಂದೆನೋಡಿ) ಆಹಾ ನನ್ನ ಮನದಲ್ಲಿ ಇಂದು ಏಕೋ ಆನಂದದ ತೆರೆಗಳೇಳಹತ್ತಿವೆಯಲ್ಲ. ಯಾವದೋ ನನ್ನ ಇಚ್ಛೆ ಪೂರ್ತಿಯಾದಂತೆ ಆಗಿರುವದಲ್ಲ. ಇಲ್ಲ. ಇಲ್ಲ. (ತಲೆಕೆರೆದುಕೊಂಡು) ಎಲಾ ಇವನು ಹೋದವನು ಇನ್ನೂ ವರೆಗೆ ಬರಲಿಲ್ಲವಲ್ಲಾ. (ವಿಚಾರಿಸಿ) ಆಹಾ! ಏಕೋ ನನ್ನಮನವು ಅವನ ಕಡೆಗೆ ಸೆಳೆಯುವದಲ್ಲಾ. ಮತ್ತೆ ಅವನ ಮುಖ ಮುದ್ರೆ ನೋಡಬೇಕೆಂಬ ಕೂತುಹಲವಾಗ ಹತ್ತಿದೆಯಲ್ಲ. ಆತನ

ಮುಖದ ಮೇಲೆ ಶಾಂತಿ, ಆನಂದ, ಪ್ರೀತಿ ಸಹನತೆ ಸಂತೋಷದ ತೆರೆಗಳು ಒಂದರ ಹಿಂದೊಂದು ಏಳುತ್ತಿದ್ದುದನ್ನು ನೋಡಿ ನನ್ನ ಕ್ರೂರ ಮನ ಹಿಂದೆಗೆಯ ಹತ್ತಿದೆಯಲ್ಲ. ಏನು ಅವನ ತೇಜಸ್ಸು ನೊಸಲಿನಲ್ಲಿ ಕಂಗೊಳಿಸುವ ಆ ವಿಭೂತಿ, ಕರ್ಣಗಳಿಗೆ ಜೋತುಬಿಟ್ಟ ಆ ರುದ್ರಾಕ್ಷಿ, ಇವೆಲ್ಲವುಗಳನ್ನು ನೋಡಿ ನನ್ನ ಕ್ರೂರವೃತ್ತಿಯು ಅಡಗಿ ಹೋದಂತೆ ಆಗಿದೆಯಲ್ಲ. ಇದೇ ಈಗ ಆರುಜನರನ್ನು ಹೊಡೆಯುವಾಗ ಇದ್ದ ಕೆಂಪಾದ ಕಣ್ಣುಗಳು ಭೀಕರತೆ ತೋರುವ ಮುಖಮುದ್ರೆ ಕಿಡಿಗಳನ್ನು ಕಾರುತ್ತಿದ್ದ ಆ ಸಿಟ್ಟು ಸಿಂಹಗರ್ಜನೆಯ ಮಾತುಗಳು ಇವೆಲ್ಲ ಎಲ್ಲಿ ಅಡಗಿ ಹೋದವು. ಈ ರೀತಿ ನಾನು ಯಾರಿಗೂ ಸವಲತ್ತು ಕೊಟ್ಟಿದ್ದಿಲ್ಲವಲ್ಲಾ. (ಎಚ್ಚತ್ತವನಂತೆ) ಎಲಾ ಇದೇನು? ನಾನು ಹುಚ್ಚನಂತ ಮಾತನಾಡುತ್ತಿರುವೆನು. ಸುಲಿಯುವದು, ಕೊಲೆ ಮಾಡುವದು, ಇವೇ ನನ್ನ ಕೆಲಸವಾಗಿರುವಾಗ ನನಗೇಕೆ ಇಂಥ ವಿಚಾರಗಳು ಬರಹತ್ತಿವೆ? ಛೀ. ಛೀ. ನನಗೆ ಎಲ್ಲರೂ ಅಷ್ಟೇ. ನನ್ನ ಇಚ್ಛೆಯಂತೆ ಇವನನ್ನು ಹೊಡೆದು ಬಡಿದು ಸುಲಿಯಲೇಬೇಕು (ವಿಚಾರಿಸಿ) ಇಲ್ಲ. ಇಲ್ಲ. ಇವನು ಏನೋ ಒಬ್ಬ ಮಹಾತ್ಮನಿದ್ದಂತೆ ಕಾಣಿಸುವನು ಇವನ ವಿಶ್ವಾಸವನ್ನು ಪರೀಕ್ಷಿಸುವೆನು. ತಿರುಗಿ ಬರುವನೋ ಇಲ್ಲೋ ನೋಡೋಣ—

(ಅಷ್ಟರಲ್ಲಿ ಗುರುಗಳು ಬರುವರು)

ಮಾತಂಗ — (ಗುರುಗಳನ್ನು ದಿಟ್ಟಿಸುತ್ತ) ಮಹಾನುಭಾವರೇ ತಮ್ಮಿಂದ ನಾನು ಹಾದಿಗಾಣುವೆನೆಂದು ನನ್ನ ಮನ ಸೂಚಿಸುವದು. ತಾವು ಎಷ್ಟು ವಿನಯಿಗಳು, ಎಷ್ಟು ವಿಶ್ವಾಸಿಗರು. ಇವೆಲ್ಲಕ್ಕೂ ನನ ಮನಸೋತಿದೆ. ತಮ್ಮ ಮೇಲೆ ನನ್ನ ಕೈ ಎತ್ತಲಾರವು. ೩

(ನಮಸ್ಕರಿಸುವನು)

ಸುಜ್ಞಾನಿಗಳು — (ಮೇಲೆತ್ತಿ) ಇಂಲಿ! ಏಳು ಶರಣಾ! ನಿನ್ನ ಹೆಸರು ಏನು?

ಮಾತಂಗ — ನನ್ನ ಹೆಸರು "ಮಾತಂಗ" ನೆನ್ನುವರು.

ಸುಜ್ಞಾನಿಗಳು — ನೀನು ಈ ಕಾರ್ಯವನ್ನು ಎಷ್ಟು ದಿವ್ಸಗಳಿಂದ ಮಾಡುತ್ತಿರುವಿ

ಮಾತಂಗ — ನಾನು ಈ ಕಾರ್ಯವನ್ನು ಹನ್ನೆರಡು ವರ್ಷಗ ಳಿಂದ ಮಾಡುತ್ತಿದ್ದೇನೆ. ನೂರಾರು ಕೊಲೆ ಮಾಡಿದ್ದೇನೆ. ಎಷ್ಟೋ ಜನರನ್ನು ಹೊಡೆದು ಬಡೆದು ಸುಲಿದಿದ್ದೇನೆ. ನಾನು ಮಾಡಿದ ಹೀನ ಕೃತ್ಯಗಳಿಗೆ ಎಣೆಯಿಲ್ಲ.

ಸುಜ್ಞಾನಿಗಳು — ಇವೆಲ್ಲಾ ಪಾಪದ ಕಾರ್ಯಗಳಲ್ಲವೆ? ನೋಡು ಮಾನವನು ಈ ಜನ್ಮದಲ್ಲಿ ಮಾಡಿದ ಕರ್ಮಗಳನ್ನು ಮುಂದಿನ ಜನ್ಮದಲ್ಲಿ ಅನುಭವಿಸುವನು. ಇದಕ್ಕೆ ನಿನ್ನ ತಂದೆ ತಾಯಿಗಳದೇ ಸಾಕ್ಷಿ. ನಿನ್ನ ತಂದೆಯು ಕುಷ್ಟರೋಗದಿಂದ ಬಳಲಿ ಬಳಲಿ ಸತ್ತನು. ನಿನ್ನ ತಾಯಿಯು ಸರ್ಪಕಚ್ಚಿ ಸತ್ತಳು. ನರಾರು ಜನಪ್ರಾಣ ತೆಗೆದುಕೊಳ್ಳುವ ನಿನ್ನಂತಹ ಬಲಾಢ್ಯ ಮಗನಿದ್ದರೂ ಅವರನ್ನೇಕೆ ನಿನ್ನಿಂದ ಉಳಿಸುವದಾಗಲಿಲ್ಲ. ಅವರು ಹಿಂದಿನ ಜನ್ಮದಲ್ಲಿ ಮಾಡಿದ ಪಾಪಕ್ಕನುಗುಣವಾಗಿ ಈಗ ಹೀಗೆ ಸಾಯಬೇಕಾಯಿತು. ತಿಳಿಯಿತೆ? ಪ್ರತಿಯೊಬ್ಬರೂ ವಿದ್ದಷ್ಟು ಸತ್ಕಾರ್ಯ ಗಳನ್ನು ಮಾಡಬೇಕು.

ಮಾತಂಗ — (ಸ್ವಗತ) ನಿಜವಾಗಿಯೂ ಇವರು ಮಹಾತ್ಮರೇ ನಿಜ. ಇಲ್ಲದಿದ್ದರೆ ನನ್ನ ತಂದೆ ತಾಯಿಗಳ ಮರಣದ ಸಂಗತಿ ಗೊತ್ತಾ ಗುವ ಬಗೆ ಹೇಗೆ? (ನಮಸ್ಕರಿಸುವನು) ಮಹಾನುಭಾವರೇ ಇನ್ನ ನಾನೆಂದಿಗೂ ಪಾಪದ ಕಾರ್ಯಗಳನ್ನು ಮಾಡಲಾರೆ. ಹೇಗಾದರೂ ಮಾಡಿ ನನ್ನನ್ನು ಉದ್ಧರಿಸಿರಿ.

ಸುಜ್ಞಾನಿಗಳು — ಏಳು ಮಾತಂಗಾ ಏಳು-ಈಗ ನಿನ್ನ ಸಂಗಡಿ ಗನ ಮುಂದೆ ನೀನು ಸತ್ತಿರುವಿ ಎಂದು ಹೇಳಿ ಕಳಿಸಿರುವೆನು ಅದಕ್ಕೆ ನಿನ್ನ ಹೆಂಡತಿಯು ಮನಸ್ಸಿನ ಸ್ಥಿತಿ ಹೇಗಾಗುವದೋ ನೋಡಿಕೊಂಡು ಮುಂದಿನ ಕಾರ್ಯ ಮಾಡುವ ನಡೆ (ತೆರೆ ಬೀಳುವದು)

## ದೃಶ್ಯ ೬

●

(ರಸ್ತಾವರದೆ)

ನೀಲಪ್ಪಃ—ನನಗೆಗೊತ್ತುಂಟು. ನನಗೆ ಗೊತ್ತಿತ್ತು. ಅಂ, ಏನು ಅಂತಾ ಕೇಳತೀರಾ? ಈ ವಿಭೂತಿ ಹಚ್ಚಿದವರ ಹಣೆ ನೋಡುವ ಗೊಂದಲದಲ್ಲಿ ಬಿದ್ದೆನೆಂದರೆ ಒಮ್ಮೆಲ್ಲಾ ಒಮ್ಮೆ ಫಜೀತೆ ಆಗತೇನಿ ಅಂತಾ. ನೋಡ್ರಿ ಇಷ್ಟು ದಿವಸಾ ಎಷ್ಟು ಸರಳ ವಿಭೂತಿ ಕಾಣತಾ ಇದ್ದೆ, ಇಂದು ಸ್ವಲ್ಪ ತತವಾದ್ದರಿಂದ ಎಷ್ಟು ತಿರುಗಿ ನೋಡತೀನಿ ಒಬ್ಬರ ಹಣೀ ವ್ಯಾಲ್ಯಾರ ಕಂಡೀತು. ದಯವಮಾಡಿ ಯಾರಾದಾರ್ರ ಹಣೀ ವ್ಯಾಲ ಇದ್ದರೆ ಹೇಳ್ರಿಪೋ‌ss ನೀವs ಊಟಾಹಾಕಿದ್ದಾಂಗ ಆಗ ತೈತಿ ಎಲ್ಲ್ಯಾ ಸಿಗಲಾರದಕ ಈ ಹಳ್ಳದ ರಸ್ತಾ ಹಿಡಕೊಂಡು ಹೊಂಟೇನಿ. ಯಾರಾದರೂ ಪುಣ್ಯಾತ್ಮರು ಸಿಗತಾರೋ ಇಲ್ಲೋ ......... (ಮುಂದೆ ನೋಡಿ) ಅಲ್ಲಿ ಯಾರೋ ಮಣ್ಣು ಕಡಿಯುವ್ಹಾಂಗ ಕಾಣತೈತಿ? ಒಹೋ ನಮ್ಮ ಕುಂಬಾರ ಗುಂಡಯ್ಯ ಅವನ ಹಣೀವ್ಯಾಲಂತೂ ಇರ ಲೇಬೇಕು. ನನಗೆ ಗೊತ್ತುಂಟು ( ಸ್ವಲ್ಪ ಮುಂದಕ್ಕೆ ಹೋಗಿ ಬಗ್ಗಿ ನೋಡುವನು. ಅಷ್ಟರಲ್ಲಿ ಗುಂಡಯ್ಯನಿಗೆ ಒಂದು ಹೊನ್ನಿನ ಪಾತ್ರ ಮಣ್ಣಿನಿಂದ ಹೊರಡುವದು.)

ನೀಲಪ್ಪ:— (ಜೋರಿನಿಂದ) ನನಗೆ ಗೊತ್ತುಂಟು. ನಾ ಕಂಡೆ ನಪೋ, ನಾನು ಕಂಡೆ. (ಓಡಹತ್ತುವನು)

ಗುಂಡಯ್ಯಃ—ನಿಲ್ಲು, ನಿಲ್ಲು ನೀಲಪ್ಪ. (ಸಾವಕಾಶವಾಗಿ) ಇತ್ತಬಾ ಇಲ್ಲೆ ಬೊಬ್ಬಾಟ ಮಾಡಬೇಡ.

ನೀಲಪ್ಪಃ— ಸಾಧ್ಯವಿಲ್ಲ. ನಾ ಕಂಡೇನಿ. ನನಗೆ ಗೊತ್ತುಂಟು (ಹೋಗಹತ್ತುವನು

ಗುಂಡಯ್ಯಃ— ಮುಂದ್ಕ ಹೆಜ್ಜೆ ಇಟ್ಟೆಂದ್ರ ನಿಮ್ಮಪ್ಪನಾಣೆ ಆಗೇದ ನೋಡು ಸ್ವಲ್ಪು ಇಲ್ಲಿ ಬಂದುಹೋಗು.

ನೀಲಪ್ಪ: – (ಅವನ ಹತ್ತಿರಬಂದು) ಯಾಕೆ, ಏನು ಕೆಲಸ ನನಗೆ ಗೊತ್ತುಂಟು.

(ಮುಂದೆವರಿಯುದು)

# ಶಿವಾನುಭವ ಸಂಘಟನೆ

(ಲೇಖಕರು - ಸಂಪಾದಕರು.)



ನಾವು ವಚನಗ್ರಂಥಗಳನ್ನು ಪ್ರಕಟಿಸುವ ಕಾರ್ಯವನ್ನು ಕೈಕೊಂಡು ಇಂದಿಗೆ ೨೮ ವರ್ಷಗಳಾದವು. ಈ ದೀರ್ಘ ಕಾಲದಲ್ಲಿ ನಾವು ೬೦-೭೦ ವಚನ ಗ್ರಂಥಗಳನ್ನೂ ಮೂವತ್ತು ನಾಲ್ವತ್ತು ರಗಳೆಗಳನ್ನೂ ಪ್ರಸಿದ್ಧಿಸಿದೆವು. ಇವು ಗಳಿಂದ ನಾಡಿನಲ್ಲಿ ಬಹುಮಟ್ಟಿಗೆ ಜಾಗ್ರತೆಯುಂಟಾಗಿರುವದು ಸ್ಪಷ್ಟವಿರುತ್ತವೆ. ಆದರೆ ಇದರಿಂದ ಸಮಾಜದಲ್ಲಿ ಅವಶ್ಯಕ ಸಂಘಟನೆಯು ಮಾತ್ರ ಆಗಿಲ್ಲ ವೆಂಬುದು ಎಲ್ಲರ ನಿದರ್ಶನಕ್ಕೆ ಬರದೇ ಇರಲಾರದು. ಇದನ್ನುಂಟುಮಾಡ ಲಿಕ್ಕೆ ನಾವು ಅನೇಕ ಸಲ ಪ್ರಯತ್ನಿಸಿದೆವು. ಆದರೆ ಪ್ರಯತ್ನಗಳು ನಿಷ್ಫಲ ವಾಗುತ್ತ ಬಂದಿರುತ್ತವೆ.

ಶಿವಶರಣರ ವಚನವಾಙ್ಮಯದ ಅಭ್ಯಾಸವು ವ್ಯವಸ್ಥಿತವಾಗಿ ಎಲ್ಲಿಯೂ ನಡೆದಿರುವದಿಲ್ಲ.

ಷಟಸ್ಥಲ ಸಿದ್ಧಾಂತದ ತತ್ವಗಳ ಅಭ್ಯಾಸವು ವಿಶೇಷವಾಗಿ ನಡೆಯು ಬೇಕಾದುದು ಅವಶ್ಯವಿದೆ. ಇದಲ್ಲದೆ ಸೃಷ್ಟಿಯ ಉತ್ಪನ್ನದ ಬಗ್ಗೆ ವಿಚಾರ ಗಳು, ೩೬ ತತ್ವಗಳ ವಿವೇಚನೆ, ಷಟ್‌ಸ್ಥಲಮಾರ್ಗದಬಗ್ಗೆ ಇರುವ ತಾತ್ವಿಕ ಗ್ರಂಥಗಳು, ಸಕೀಲಗಳು. ಕರಣಹಸಿಗೆ ಅಷ್ಟಾವರಣ ಇವುಗಳ ಬಗ್ಗೆ ಅನೇಕ ಅಮೌಲ್ಯ ಗ್ರಂಥಗಳು ಇರುತ್ತವೆ. ಇವುಗಳಲ್ಲಿ ನಾವು ಕೆಲವುಗಳನ್ನು ಮಾತ್ರ ಪ್ರಕಟಪಡಿಸಿರುತ್ತೇವೆ. ಆದರೆ ಮುಖ್ಯ ವಿಷಯಗಳು ಇನ್ನೂ ಅಜ್ಞಾತಾವಸ್ಥೆ ಯಲ್ಲಿಯೇ ಇರುತ್ತವೆ.

ಇವುಗಳ ವಿವೇಚನೆಗಳು ವ್ಯವಸ್ಥಿತವಾಗಿ ನಡೆಯುವದು ಅವಶ್ಯವಿದೆ. ಆದರೆ ಈ ಕಾರ್ಯವು ತೃಪ್ತಿಕರವಾಗಿ ನಡೆದಿರುವದಿಲ್ಲ. ಈ ಸ್ಥಿತಿಯು ಮುಂದೆ ಉಳಿದಿದ್ದಾದರೆ, ಶಿವಶರಣರ ವಾಙ್ಮಯವು ತೀವ್ರವಾಗಿ ಲಯವಾಗಿಹೋಗು ವದರಲ್ಲಿ ಸಂದೇಹವಿರಲಾರದು.

ವೀರಶೈವ ಸಮಾಜದವರು ಈ ಸ್ಥಿತಿಯು ಮುಂದೆ ಬಾರದಂತೆ ಸಕಾಲ ದಲ್ಲಿ ಎಚ್ಚರಾಗುವದು ಬಹು ಅವಶ್ಯವಿದೆ.

ನಾವು ಈಗ ಒಂದು ನಿಧಿಯನ್ನು ಸಂಗ್ರಹಿಸಿ ಮೂಲ ಗ್ರಂಥಗಳ ಪ್ರಕಟನೆಮಾಡುವದು ಬಹು ಅವಶ್ಯವಿರುತ್ತದೆ. ಅವುಗಳ ತತ್ವಗಳ ಸಮಾಲೋಚನೆಯನ್ನು ಜಾಗ್ರತೆಯಾಗಿ ಎಲ್ಲ ಕಡೆಗೂ ನಡೆಯಬೇಕು. ಸಣ್ಣದೊಡ್ಡ ವೀರಶೈವ ಗ್ರಂಥಗಳ ಪ್ರಕಟನೆಯ ಕಾರ್ಯವು ಬಹು ತೀವ್ರವಾಗಿ ನಡೆಯಬೇಕು. ಜನತೆಯ ನಡೆನುಡಿಯಲ್ಲಿ ಶಿವಶರಣರ ತತ್ವಗಳು ರೂಢವಾಗಬೇಕು. ಈ ತೆರದ ಪರಿಸ್ಥಿತಿಯು ಉಂಟಾಗುವದು ಅವಶ್ಯವಿದೆ.

ಶಿವಶರಣರ ಬಗ್ಗೆ ಆದರ ಭಾವವು ಎಲ್ಲಕಡೆಗೂ ಹೆಚ್ಚಾಗಿರುವದು ಕಂಡು ಬರುತ್ತದೆ. ಆದರೆ ಅವರ ತತ್ವಗಳ ಪ್ರಚಾರದ ಬಗ್ಗೆ ವ್ಯವಸ್ಥಿತ ಪ್ರಯತ್ನಗಳು ಸಮಾಜದಲ್ಲಿ ನಡೆಯದೆ ಇರದುದು ಅತ್ಯಂತ ವಿಷಾದಕರವಾಗಿರುತ್ತದೆ.

ಈ ಕಾರ್ಯವು ವ್ಯವಸ್ಥೆಯಿಂದ ನಡೆಯಬೇಕಾದರೆ ಸಣ್ಣ ದೊಡ್ಡ ಗ್ರಂಥಗಳು ಈಗ ಹೊರಡಬೇಕು. ಬರಹೆಗಾರರು ಸಮಾಜದಲ್ಲಿ ಈಗ ದೊರೆಯುತ್ತಲಿದ್ದಾರೆ. ಆದರೆ ಅವರು ಬರೆದ ಗ್ರಂಥಗಳು ಅಚ್ಚಾಗಬೇಕು. ಹೀಗೆ ಅಚ್ಚಾದವುಗಳನ್ನು ಎಲ್ಲಕಡೆಗೂ ಪ್ರಸಾರಪಡಿಸಬೇಕು. ಇದಕ್ಕೋಸ್ಕರ ಒಂದು ದೊಡ್ಡ ನಿಧಿಯು ಶೇಖರಿಸಲ್ಪಡಬೇಕು. ಈ ತರದ ಪ್ರಯತ್ನಗಳು ಕೆಲವು ವರ್ಷ ಸತತವಾಗಿ ನಡೆಯಬೇಕು. ಅಂದರೆ ಮಾತ್ರ ಸಮಾಜದಲ್ಲಿ ಜಾಗ್ರತೆಯುಂಟಾಗುವದು.

ಆದರೆ ಈ ದೃಷ್ಟಿಯಿಂದ ಪ್ರಯತ್ನಗಳು ಇನ್ನೂ ಪ್ರಾರಂಭವಾಗಿರುವದಿಲ್ಲ. ಇದರಿಂದ ಶಿವಶರಣರ ವಿಶಾಲ ತತ್ವಗಳು ಸಮಾಜದಲ್ಲಿ ಪ್ರಸಾರವಾಗಿರುವದಿಲ್ಲ. ಈ ಪರಿಸ್ಥಿತಿಯನ್ನು ದೂರಮಾಡುವಬಗ್ಗೆ ಪ್ರಯತ್ನಗಳು ಎಲ್ಲಿಯೂ ನಡೆದಿರುವದಿಲ್ಲ. ಈ ಸ್ಥಿತಿಯು ಹೀಗೆಯೇ ಉಳಿದರೆ ಸ್ವಲ್ಪಕಾಲದಲ್ಲಿ ಶಿವಶರಣರ ವಾಙ್ಮಯವು ಅಳಿದುಹೋಗುವದೆಂದು ನಮಗೆ ತೋರುತ್ತದೆ.

ಬಸವೇಶ್ವರನ ತರುವಾಯ ಕೆಲವು ವರ್ಷಗಳ ವರೆಗೆ ಮಾತ್ರ ಶರಣರ ವಾಙ್ಮಯವು ಪ್ರಚಾರದಲ್ಲಿತ್ತು. ಆದರೆ ಮುಂದೆ ಅದು ನಿಂತುಹೋಯಿತು. ಮುಂದೆ ಎರಡುನೂರು ವರ್ಷಗಳ ತರುವಾಯ ವಿಜಯನಗರದ ಪ್ರೌಢರಾಯನ ಆಳಿಕೆಯಲ್ಲಿ ಮತ್ತು ತೋಂಟದಾರ್ಯರ ಕಾಲದಲ್ಲಿ ಶಿವಶರಣರ ವಾಙ್ಮಯವು ಕೆಲವು ಕಾಲ ಬೆಳಕಿಗೆಬಂದಿತು. ಆದರೆ ಮುಂದೆ ಸ್ವಲ್ಪ

ದಿವಸಗಳಲ್ಲಿ ಈ ವಾಙ್ಮಯಕ್ಕೆ ಅವನತ ಸ್ಥಿತಿಯು ಪ್ರಾಪ್ತವಾಯಿತು. ಈ ಸ್ಥಿತಿಯೂ ಈಗಲೂ ಉಳಿದಿರುತ್ತದೆ. ಅದಕ್ಕೆ ಇನ್ನೂ ಉಚ್ಚಸ್ಥಿತಿಯು ಪ್ರಾಪ್ತವಾಗಿರುವದಿಲ್ಲ. ಒಂದುವೇಳೆ ಈ ಸ್ಥಿತಿಯು ಹೀಗಿಯೇ ಉಳಿದರೆ ಶಿವಶರಣರ ವಾಙ್ಮಯವು ಸಂಪೂರ್ಣವಾಗಿ ಲೋಪಹೊಂದುವ ಚಿನ್ಹಗಳು ತೋರಿಬರುತ್ತಲಿವೆ.

ಇನ್ನು ಮುಂದೆ ಧಾರ್ಮಿಕ ಅವನತ ಸ್ಥಿತಿಯು ಉಂಟಾಗುವ ಪರಿಸ್ಥಿತಿಯು ಒದಗುವದು ಕಂಡುಬರುತ್ತಿದೆ. ಈ ಸ್ಥಿತಿಯನ್ನು ದೂರಮಾಡಬೇಕಾದರೆ ಶಿವಶರಣರ ವಾಙ್ಮಯವನ್ನು ಪ್ರಸಾರಪಡಿಸುವದೊಂದೇ ಮಾರ್ಗವಿರುತ್ತದೆ. ಈ ವಾಙ್ಮಯವು ಆಧುನಿಕ ಪರಸ್ಥಿತಿಗೆ ಹೊಂದುವಂಥದಿರುತ್ತದೆ. ಬೇರೆ ಧಾರ್ಮಿಕ ವಾಙ್ಮಯಗಳು ಈ ಪ್ರಕಾರ ಇರುವದಿಲ್ಲ. ಆದ್ದರಿಂದ ವೀರಶೈವ ಸಂಸ್ಕೃತಿಯು ಉಳಿಯಬೇಕಾದರೆ ಶಿವಶರಣರ ವಾಙ್ಮಯವನ್ನು ಪ್ರಸಾರಪಡಿಸುವದೊಂದೇ. ಇದನ್ನು ವೀರಶೈವ ಸಮಾಜದವರು ಲಕ್ಷಿಸಬೇಕೆಂದು ನಮ್ಮ ಬಿನ್ನಹವಿರುತ್ತದೆ.

— — — —

# "ಜ್ಯೋತಿಷ್ಯ ನಿರಾಕರಣೆ"

[ ಲೇ:- ಶ್ರೀ ಮಠದ ಬಸವಯ್ಯ ಮು॥ ಕುಣಬಗಟ್ಟಿ, ತಾ॥ ಹರಪನಹಳ್ಳಿ. ]



ನಾನು ಈ ಲೇಖವನ್ನು ಲಿಖಿಸುತ್ತಿರುವುದು ಒಳ್ಳೆಯ ಬುದ್ಧಿವಂತನು ಮತ್ತು ದೊಡ್ಡ ಶಿವಾನುಭವಿಯು ಎಂದು ಅನ್ನಿಸಿಕೊಳ್ಳುವದಕ್ಕಲ್ಲ. ಏಕೆಂದರೆ ಇದು ಅಹಂಕಾರವೆನ್ನಿಸುತ್ತದೆ. ೧೯೫೪ನೇ ಇಸ್ವಿ ಡಿಶಂಬರ ತಿಂಗಳಿಗೆ ಶಿವಾನುಭವ ಪತ್ರಿಕೆಗೆ ನಾನು ಚಂದಾದಾರನಾಗಿ ೧೩ ವರ್ಷ ತುಂಬುತ್ತವೆ. ಈ ಹದಿಮೂರು ವರ್ಷಗಳಲ್ಲಿ ಆ ಪತ್ರಿಕೆಯಿಂದ ನಾನು ಅನೇಕ ಅನುಭವಗಳನ್ನು ತಿಳಿದುಕೊಂಡು ಅದಕ್ಕೆ ಚಿರಋಣಿಯಾಗಿದ್ದೇನೆ. ಆ ಋಣ ಪರಿಹಾರ ಉದ್ದೇಶದಿಂದ ಈ ಸೇವೆಯನ್ನು ಕೈಕೊಂಡಿದ್ದೇನೆ. ಈ ಸೇವೆಯ ಫಲವನ್ನು ಸವಿದು ಲಿಂಗಾನಂದ (ಆತ್ಮಾನಂದ) ಹೊಂದಿರೆಂದು ಪ್ರತಿ ವಾಚಕರನ್ನು ಬೇಡಿಕೊಳ್ಳುವೆ.

"ಸ್ವಾನುಭಾವದ ನುಡಿಯು ನಾನೇನ ಬಲ್ಲೆನೈ. ನಿನ್ನೊಳಗೆ ಪೊಕ್ಕು ಏನ ನುಡಿಸಿದೊಡದನೆ ನಾ ನುಡಿವೆನೈ ಗುರುವೇ ಕೃಪೆಯಾಗು" ಎಂದು ಮೈಲಾರ ಬಸವಲಿಂಗ ಶರಣರು ಅಪ್ಪಣೆಕೊಡಿಸಿದ್ದಾರೆ. ಅದರಂತೆ ಬಸವಾದಿ ಪ್ರಮಥರು ನನ್ನ ಹೃದಯದಲ್ಲಿ ಕುಳಿತು ಯಾವ ಪ್ರಕಾರ ಬರಸುತ್ತಾರೆಯೋ ಆ ಪ್ರಕಾರ ಬರೆಯುವೆನೇ ಹೊರ್ತು ನನಗೆ ಬರೆಯಲಿಕ್ಕೆ ಸ್ವತಂತ್ರತೆ ಇಲ್ಲ.

ಜಗತ್ತಿನಲ್ಲಿ ವಿದ್ಯೆಗೆ ಬಹಳ ಮಹತ್ವವಿರುವದು. ಏಕೆಂದರೆ ಮಕ್ಕಳಿಗೆ ತಂದೆ ಬಾಲ್ಯದೊಳಕ್ಕರ ವಿದ್ಯೆಗಳನರಿಪದಿರ್ದೊಡೆ ಕೊಂದಂ। ಲಕ್ಕ ಧನವಿರಲು ಕೆಡುಗುಂ। ಚಿಕ್ಕಂದಿನ ವಿದ್ಯೆಪೊರೆಗು ಚೂಡಾರತ್ನ ಎಂತಲೂ, ವಿದ್ಯೆಯನರಿಯದವ ಗುದ್ಯಾಟಕ್ಕೊಳಗಾದ। ಅವಿದ್ಯೆಯನರಿಯದವ ಪ್ರಪಂಚವನೊದ್ದು ಬಿಟ್ಟ ನೋಡಾ! ಕಪಿಲಸಿದ್ಧ ಮಲ್ಲಿಕಾರ್ಜುನಾ. ಎಂದು ಸಿದ್ಧರಾಮೇಶ್ವರರ ಅಮೃತ ವಾಣಿ ಪ್ರಕಾಶಿಸುತ್ತಾ ಇದೆ. ಅವರು ವಿದ್ಯೆಯನ್ನು ಎರಡು ಭಾಗ ಮಾಡಿದ ಹಾಗಾಯಿತು. ಅದು ವಿದ್ಯೆ ಮತ್ತು ಅವಿದ್ಯೆ. ನಮ್ಮ ಮಹಾ ಶಿವಶರಣರು ಮತ್ತು ಜ್ಞಾನಿಗಳು ವಿದ್ಯೆಯನ್ನು ಪುರಸ್ಕರಿಸಿ, ಅವಿದ್ಯೆಯನ್ನು ತಿರಸ್ಕರಿಸಿದ್ದಾರೆ. ಇದು ಸ್ವಭಾವಜನ್ಯವಾದುದು.

ಅಂತೆಯೇ ಶರಣರು ಜೋತಿಷ್ಯಶಾಸ್ತ್ರವು ಅವಿದ್ಯೆ. ಅದು ಪರಾವಿದ್ಯೆಯಲ್ಲ. ಅದು ಅಪರ ವಿದ್ಯೆ. ಆ ಶಾಸ್ತ್ರವನ್ನು ಅಭ್ಯಾಸಿಸುವದರಿಂದ ಅನುಭವ ಮಾಡಿಕೊಳ್ಳುವುದರಿಂದ ಜನನ ಮರಣ ರಹಿತ ನಿತ್ಯಾನಂದ ಸುಖವು ದೊರೆಯಲಾರದು ಎಂದು ಕಂಡುಬಂದದ್ದರಿಂದ ಜ್ಯೋತಿಷ್ಯವನ್ನು ನಂಬಬೇಡಿರಿ, ನಂಬಿ ಮಾನವಜನ್ಮವನ್ನು ವೃಥಾ ಹಾಳುಮಾಡಿಕೊಳ್ಳಬೇಡಿರಿ ಎಂದು ನಿರ್ದಾಕ್ಷಿಣ್ಯದಿಂದ ಘಂಟಾಘೋಷದಿಂದ ಜಗತ್ತಿಗೆ ಸಾರಿದ್ದಾರೆ. ॥ವಚನ॥ ಕಂಡದ್ದ ನಾಡಿದರೆ ಭೂಮಂಡಲವು ಮುನಿಯುವುದು । ಕೊಂಡಾಡುತಿಚ್ಛೆ ನುಡಿದರೆ ಜಗವೆಲ್ಲ । ಮುಂಡಾಡುತಿಹುದು ಸರ್ವಜ್ಞ ॥ ಎಂದು ನಿರ್ದಾಕ್ಷಿಣ್ಯ ಕವಿಯಾದ ಸರ್ವಜ್ಞಕವಿಯೂ ಕೂಡ ಹೇಳಿದ್ದಾನೆ. ಅಂದಮೇಲೆ ಶಿವಶರಣರು ನಿರ್ದಾಕ್ಷಿಣ್ಯರು. ಅವರು ಇದ್ದ ಮಾತನ್ನು ಇದ್ದಹಾಗಿಯೇ ನುಡಿಯುವವರು. ಮತ್ತು ಆತ್ಮಬಲಶಾಲಿಗಳು. ಈ ವಿಚಾರ ಅವರ ವಚನಗಳಿಂದಲೇ ಗೊತ್ತಾಗುತ್ತದೆ. ಅದೋ ಕೇಳಿರಿ.

ನ್ಯಾಯನಿಷ್ಠುರಿ ದಾಕ್ಷಿಣ್ಯಪರ ನಾನಲ್ಲ. ಲೋಕ ವಿರೋಧಿ. ಶರಣನಾರಿಗೂ ಅಂಜುವವನಲ್ಲ ಕೂಡಲಸಂಗಮದೇವರ ರಾಜತೇಜದೊಳಿಪ್ಪೆನಾಗಿ

ಮತ್ತಂ॥ ಆರು ಮುನಿದು ನಮ್ಮನೇನು ಮಾಡುವರು. ಊರೆ ಮುನಿದು ನಮ್ಮನೆಂತು ಮಾಡುವುದು ? ನಮ್ಮ ಕುನ್ನಿಗೆ ಕೂಸ ಕೊಡಬೇಡ. ನಮ್ಮ ಸೊಣಗಂಗೆ ತಳಿಗೆಯಲ್ಲಿಕ್ಕಬೇಡ, ಆನೆಯ ಮೇಲೆ ಹೋಹವನ ಶ್ವಾನಕಚ್ಚಬಲ್ಲದೇನಯ್ಯ ನಮ್ಮ ಕೂಡಲಸಂಗಮದೇವರುಳ್ಳನ್ನಕ್ಕರ ನಮಗೇನಯ್ಯ.

ಮತ್ತಂ॥ ಆಯುಷ್ಯ ತೀರಿದಲ್ಲದೆ ಮರಣವಿಲ್ಲ. ಭಾಗ್ಯ ತೀರಿದಲ್ಲದೆ ದಾರಿದ್ರ್ಯವಿಲ್ಲ. ಅಂಜಲೇಕೋ ಲೋಕ ವಿಗರ್ಭಣೆಗೆ ಅಳುಕಲೇಕೋ ಕೂಡಲಸಂಗಮದೇವಾ ನಿಮ್ಮಾಳಾಗಿ.

ಈ ರೀತಿಯಾಗಿ ಅವಗೆ ಯಾರಿಂದಲೂ ಏನೂ ಬೇಕಾಗಿಲ್ಲ. ನಿಜವಾದ ಮಾತಿಗೆ ಊರೇ ಸಿಟ್ಟಾದರೂ ನಮ್ಮನ್ನು ಏನು ಮಾಡುತ್ತಾರೆ. ನಮ್ಮ ಗಂಡಿಗೆ ಇವರೇನು ಹೆಣ್ಣು ಕೊಡಬೇಕಾಗಿಲ್ಲ. ನಮ್ಮ ಮನೆಯ ಬಾಗಿಲ ಕಾಯುವ ನಾಯಿಗೆ ಅನ್ನಹಾಕಲೂ ಬೇಕಾಗಿಲ್ಲ. ನಮ್ಮ ಮನೆಯ ನಾಯಿಗೆ ನಾವೇ ಅನ್ನಹಾಕುತ್ತೇವೆ. ನಮ್ಮ ಮಕ್ಕಳಿಗೆ ನಮ್ಮ ಶರಣರೇ ಹೆಣ್ಣುಕೊಡುತ್ತಾರೆ. ಎಂದು ಅವಿದ್ಯಾ ಪಕ್ಷಪಾತಿಗಳಾದ ಮಾನವರನ್ನು ಕಟುವಾಗಿ ಟೀಕಿಸಿದ್ದಾರೆ. ಅಂತೆಯೇ ಅವಿದ್ಯೆಗಳನ್ನೂ ಕೂಡ ಟೀಕಿಸಿದ್ದಾರೆ.

ಅವಿದ್ಯೆಗಳ ಖಂಡನೆ ವೇದವೆಂಬುದು ಓದಿನಮಾತು. ಶಾಸ್ತ್ರವೆಂಬುದು ಸಂತೆಯ ಸುದ್ದಿ, ಪುರಾಣವೆಂಬುದು ಪುಂಡರಗೋಷ್ಠಿ, ತರ್ಕವೆಂಬುದು ತಗರ ಹಾರಟೆ, ಭಕ್ತಿಎಂಬುದು ತೋರಿ ಉಂಬ ಲಾಭ. ಗುಹೇಶ್ವರನೆಂಬುದು ಮೀರಿದ ಘನವು. ಮತ್ತಂ|| ವೇದ ಘನವೆಂಬುದೊಂದು ಸಂಪಾದನೆ, ಶಾಸ್ತ್ರ ಘನವೆಂಬುದೊಂದು ಸಂಪಾದನೆ, ಪುರಾಣ ಘನವೆಂಬುದೊಂದು ಸಂಪಾದನೆ, ಆಗಮ ಘನವೆಂಬುದೊಂದು ಸಂಪಾದನೆ, ಅಲ್ಲ ಎಂಬುದೊಂದು ಸಂಪಾದನೆ ಗುಹೇಶ್ವರನನರಿಯದಕಾರಣ ಹಲವು ಸಂಪಾದನೆಗಳಾದವು. ಎಂದು ಶ್ರೀಮದ ಲ್ಲಮಪ್ರಭುಗಳೂ ಕೂಡ ಅವಿದ್ಯೆಗಳನ್ನು ಕಟುವಾಗಿ ಟೀಕಿಸಿದ್ದಾರೆ. ಇರಲಿ

ಇವೆಲ್ಲ ಅವಿದ್ಯೆಗಳೆಂದು ಶರಣರು ಮಾತ್ರ ಹೇಳಿರುವರೋ ಬೇರೆ ಯವರು ಯಾರಾದರೂ ಹೇಳಿರುವರೊ? ಇದು ಮುಖ್ಯ ಪ್ರಶ್ನೆ. ಶರಣರೇ ಏಕೆ ಎಲ್ಲಾ ಅನುಭವಿಗಳೂ ಜ್ಞಾನಿಗಳೂ ಹೇಳಿರುವರು. ಅದೋ ಕೇಳಿ ಉಪನಿಷದ್ವಾಣಿ, ಮುಂಡಕೋಪನಿಷತ್ತಿನ ಐದನೇ ಶ್ರುತಿಯು ಇದನ್ನು ಪ್ರತಿ ಪಾದಿಸುತ್ತದೆ. ಋಗ್ವೇದೋ ಯಜುರ್ವೇದ: ಸಾಮವೇದೋ ಅಥರ್ವಣ ವೇದಃ । ಶಿಕ್ಷೋ ಕಲ್ಪೋ ವ್ಯಾಕರಣಂ ನಿರುಕ್ತಂ ಛಂದೋ ಜ್ಯೋತಿಷಂ ಇತಿ ತತ್ರಾಪರಾ" ಈ ಪ್ರಕಾರವಾಗಿ ಉಪನಿಷತ್ ರುಷಿಮುನಿಗಳು ಅಪ್ಪಣೆ ಕೊಡಿಸಿದ್ದಾರೆ. ಅಂದಮೇಲೆ ಜೋತಿಷ್ಯಶಾಸ್ತ್ರವು ಅವಿದ್ಯೆಯೆಂದು ನಿರಾಕರಿ ಸಲ್ಪಟ್ಟಿದೆ.

ವೀರಶೈವರಿಗಂತೂ ಜೋತಿಷ್ಯ ಶಾಸ್ತ್ರದ ಸಂಬಂಧವಂತೂ ಇಲ್ಲೇ ಇಲ್ಲ. ಏಕೆಂದರೆ ಲಿಂಗದೇಹೀ ಸದಾ ಶುಚಿಃ ಇವನಿಗೆ ಅಪವಿತ್ರತೆಯೂ ಇಲ್ಲ ಇವನು ಗ್ರಹಬಲವನ್ನು ನೋಡುವ ಅವಶ್ಯಕತೆಯೂ ಇಲ್ಲ. ಇವನಿಗೆ ಮಹಾಲಿಂಗದ ಬಲವೇ ಬಲ. ಅವನ ಹೊರ್ತು ಇವನಿಗೆ ಮತ್ತೆ ಯಾರನ್ನೂ ಬೇಡುವ ದಿಲ್ಲ. ಮೊರೆಹೋಗುವದಿಲ್ಲ. ಹೀಗಿದ್ದಮೇಲೆ ಶಿವಶರಣರ ಅನುಯಾಯಿಗ ಳಾಗಿ, ಗುರುಪುತ್ರರಾಗಿ, ಅಷ್ಟಾವರಣ ಸಂಪನ್ನರಾಗಿ ತ್ರಿವಿಧ ದೀಕ್ಷಾ ಸಂಪನ್ನ ರಾಗಿ ಷಟ್‌ಸ್ಥಲ ಬ್ರಹ್ಮಿಗಳಾಗಿ ಪಂಚಾಚಾರವೇ ಪ್ರಾಣವಾಗಿರುವವರಿಗೇ ಜ್ಯೋತಿಷ್ಯವು ಬೇಕಾಗಿದೆಯೇ? ಇಲ್ಲವೇ ಇಲ್ಲ. ಅದೋ ಬಸವಣ್ಣನವರ ಅಮೃತವಾಣಿ ಲಗ್ನವೆಲ್ಲಿಯದೋ ವಿಘ್ನವೆಲ್ಲಿಯದೋ ಸಂಗಯ್ಯ? ದೋಷವೆ ಲ್ಲಿಯದೋ ದುರಿತವೆಲ್ಲಿಯದೋ ಕೂಡಲಸಂಗಮದೇವರ ಮಾಣದೆ ನೆನೆಯು ವಂಗೆ ಭವಬಂಧನವೆಲ್ಲಿಯದೋ ಕೂಡಲಸಂಗಮದೇವರ ಮಾಣದೆ ನೆನೆಯು

ವಂಗೆ ಭವಬಂಧನವೆಲ್ಲಿಯದೋ ಎಂದು. ಮತ್ತಂ॥ ತಿಥಿವಾರವೆಂದರಿಯೆನಯ್ಯ, ಲಗ್ನ ವಿಲಗ್ನವೆಂದರಿಯೆನಯ್ಯ ಇದನರಿತು ಹದಿನಾರು ವಾರ, ಹದಿನೆಂಟು ಕುಲವೆಂದೆಂಬರು ಇದ ನಾವರಿಯೆವಯ್ಯ.ಇದನರಿತು ಹದಿನಾರುವಾರ ಹದಿನೆಂಟು ಕುಲವೆಂಬರು. ಇದನಾವರಿಯೆವಯ್ಯ, ಇರುಳೊಂದು ವಾರ ಹಗಲೊಂದುವಾರ ಭವಿಯೊಂದು ಕುಲ, ಭಕ್ತನೊಂದುಕುಲ, ನಾವು ಬಲ್ಲುದು ಇದು ತಾನೇ ಬಸವಪ್ರಿಯ ಕೂಡಲಸಂಗಮದೇವಾ.

ಇದು ಅಲ್ಲದೆ ಒಬ್ಬ ಶರಣನಂತೂ ಪಂಚಾಂಗ ಕೇಳುವವರನ್ನು ಅಂದರೆ ವೀರಶೈವರನ್ನು ಪ್ರತ್ಯಕ್ಷ ನೋಡಿ ಟೀಕಿಸಿರುವುದೇನೆಂದರೆ: ಅಣ್ಣಾ ಪಂಚಾಂಗ ಪಂಚಾಂಗವೆಂದು ಜೋಯಿಸನ ಕರಿಯಿಸಿ ಎಲೆ ಅಡಕೆಯ ಕೊಟ್ಟು ಕಾಣಿ ಕೆಯನಿಟ್ಟು ಜೋಯಿಸನ ವಾಕ್ಯ ಸಕಲ ಕಾರ್ಯ ಸಿದ್ಧಿ ಎಂದು ಆವನ ಬಾಯತೊಂಬುಲವ ತಿಂಬ ಹಂದಿಗಳೇನು ಬಲ್ಲರಯ್ಯಾ ಶಿವಾಚಾರ ಸದ್ಧತಿ ಯೇನು? ಪಂಚಾಂಗವೆಂಬ ಶಬ್ದಕ್ಕೆ ಅರ್ಥವ ಹೇಳಲರಿಯದೆ ಜೋಯಿಸರು ಕೆಟ್ಟರು, ಕೇಳಲರಿಯದೆ ಅನಂತ ಹಿರಿಯರು ಕೆಟ್ಟರು. ಪಂಚಾಂಗವೆಂದರೆ ಹೇಳಿಹೆ ಕೇಳಿರಣ್ಣಾ. ಪಂಚ ಅಂದರೆ ಐದು ಅಂಗವೆಂದರೆ ದೇಹ, ಪೃಥ್ವಿ, ಅಪ್ಪು, ತೇಜ, ವಾಯು, ಆಕಾಶ ಈ ಐದು ಕೂಡಿ ದೇಹವಾಯಿತ್ತು. ಈ ದೇಹದೊಳಗೆ ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರ ದಚ್ಚು ಮುರಿಯುವುದೇ ಪಂಚಾಂಗ. ಆಣವಮಲ ಮಾಯಾಮಲ ಕಾರ್ಮಿ ಕಮಲವೆಂಬ ಮಲತ್ರಯಂಗಳನಳಿಯುವುದೇ ಪಂಚಾಂಗ. ಸತ್ವಗುಣ, ರಜೋಗುಣ, ತಮೋಗುಣವೆಂಬ ಗುಣತ್ರಯಂಗಳನಳಿಯುವುದೇ ಪಂಚಾಂಗ ತನ್ನ ಸತಿಯಲ್ಲದೆ ಪರ ಸತಿಯ ಮುಟ್ಟದಿಹುದೇ ಪಂಚಾಂಗ. ಇದಲ್ಲದೆ ಲಿಂಗಾ ಚಾರ, ಸದಾಚಾರ, ಶಿವಾಚಾರ, ಗಣಾಚಾರ, ಭೃತ್ಯಾಚಾರವೆಂಬ ಪಂಚಾ ಚಾರವನರಿಯುವುದೇ ಪಂಚಾಂಗ. ತನ್ನ ಇಷ್ಟಲಿಂಗವಲ್ಲದ್ದಕ್ಕೆ ಕೈಮುಗಿಯ ದಿಹುದೇ ಪಂಚಾಂಗ. ಇಂತೀ ಪಂಚಾಂಗದ ನಿಲವನರಿಯದೆ ಪಂಚ ಸೂತಕ ದೊಳಗೆ ಮುಳುಗಾಡುವ ಪಂಚ ಮಹಾಪಾತಕರ ಎನಗೊಮ್ಮೆ ತೋರದಿರಾ, ನಿಸ್ಸಂಗ ನಿರಾಳ ಪ್ರಭುವೇ ಎಂದು ಶರಣರ ಮತ್ತು ಷಟ್‌ಸ್ಥಲ ಸಿದ್ಧಾಂತದ ತತ್ವವಿರುವಾಗ ಈಗ ಸದ್ಯದ ವೀರಶೈವರಲ್ಲಿ ನೂರಕ್ಕೆ ತೊಂಬತ್ತೊಂಬತ್ತು ಮಂದಿ ಜೋತಿಷ್ಯವನ್ನೇ ಪಾಲಿಸುತ್ತಾರೆ. ಈಗ ಪ್ರತಿಯೊಂದು ಹಳ್ಳಿಯ ಮಠದಯ್ಯನವರು ಪಂಚಾಂಗವನ್ನೇ ಪ್ರಧಾನ್ಯವಾಗಿ ಇಟ್ಟುಕೊಂಡಿರುತ್ತಾರೆ. ಇದು ಎಲ್ಲರಿಗೂ ಗೊತ್ತಿದ್ದ ವಿಷಯ. ಮಠದ ಮೂರ್ತಿಗಳೇ ಸ್ವತಃ ಭಕ್ತರ

ಮನೆಯಲ್ಲಿ ಜನನವಾದರೆ ಅವರು ಬಂದು. ಸ್ವಾಮಿ ನಮ್ಮ ಮನೆಯಲ್ಲಿ ಜನನವಾಗಿದ್ದಾರೆ, ದೋಷವಿದೆಯೋ ಇಲ್ಲವೇ ಚನ್ನಾಗಿ ನೋಡಿ ಹೇಳಿರಿ ಎಂದು ಕೇಳಲು ಅದಕ್ಕೆ ಇವರು ಮತ್ತಷ್ಟು ಅವರ ಆತ್ಮಬಲವನ್ನು ನಾಶಮಾಡುವುದಲ್ಲದೆ ಅವರಿಗೆ ಹೇಳುವುದೇನೆಂದರೆ, ನಿಮ್ಮ ಮಗುವಿನ ಜನನವು ಬಹಳ ದೋಷಯುಕ್ತವಾದದ್ದು. ಮೂಲನಕ್ಷತ್ರದಲ್ಲಿ ಜನಿಸಿದೆ. ಅದಕ್ಕೆ ನವಗ್ರಹ ಶಾಂತಿ ಮಾಡಿಸಬೇಕು. ಒಂದು ಕರೆಯುವ ಕರೆ ಆಕಳು ದಾನಕೊಡಬೇಕು. ಎಂದು ಹೇಳಿ ಒಂಬತ್ತು ವಸ್ತ್ರ ಒಂಬತ್ತು ದಿನಸಿನ ಧಾನ್ಯ ತರಿಸಿ ವಿಧವಿಧ ಬಣ್ಣದ ರಂಗದಲ್ಲಿ ಹಾಕಿಸಿ ತಾವೇ ಖುದ್ದು ನಿಂತು ಭಕ್ತಾದಿಗಳಿಂದ ಪೂಜೆ ಮಾಡಿಸುತ್ತಾರೆ. ಇದು ಅಲ್ಲದೇ ಈ ಮಗುವಿನ ಜನನದಿಂದ ತಾಯಿಗೆ ಇಲ್ಲವೇ ತಂದೆಗೆ ಮರಣವೆಂದು ಹೇಳುತ್ತಾರೆ ಈ ವಿಚಾರವನ್ನು ಕೇಳಿದ ತಂದೆತಾಯಿಗಳು ಕೆಲವರು ಶಿಶುಗಳನ್ನೇ ಕುತ್ತಿಗೆಯನ್ನು ಹಿಚುಕಿ ಕೊಂದು ಹಾಕಿದ ಸಂಗತಿಗಳು ಎಷ್ಟೋ ಇವೆ. ಇದಕ್ಕೆ ಅನೇಕ ಉದಾಹರಣೆಗಳುಂಟು. ಈ ಪ್ರಕಾರವಾಗಿ ಅನೇಕರಿಗೆ ಶಿಶುಹತ್ಯ ದೋಷ ಪ್ರಾಪ್ತವಾಗುತ್ತದೆ.

ಪ್ರಸ್ತುತ ಲೇಖಕನು ಕೂಡ ಶಿವಾನುಭವ ಶಾಸ್ತ್ರಗಳನ್ನು ನೋಡುವದಕ್ಕಿಂತ ಮೊದಲು ಇದೇ ವಿಚಾರದವನಾಗಿದ್ದನು. ಆದರೆ ಆ ಸಂಶಯವನ್ನು ಅನುಭವಮಂಟಪದ ಸಂದೇಶವು ಅದನ್ನು ಹೊರದೂಡಿತು. ಸದ್ಯ ಶ್ರಾವಣ ಮಾಸ ಬಂತು ಸರಿ. ಪ್ರತಿಯೊಂದು ಹಳ್ಳಿಯಲ್ಲಿಯೂ ಶ್ರಾವಣಮಾಸ ತೀರುವ ತನಕ ಪ್ರತಿಶನಿವಾರ ಶನಿಪುರಾಣವನ್ನು ಪ್ರತಿಮನಿಯವರು ಅಯ್ಯನವರಿಂದಲೇ ಹೇಳಿಸುತ್ತಾರೆ. ಇವರು ಕೇಳುತ್ತಾರೆ. ಆ ಶನಿ ಪುರಾಣದಲ್ಲಿ ಏನಿದೆ? ಪಂಚಾಚಾರ ಅಷ್ಟಾವರಣ ಮತ್ತು ಷಟ್‌ಸ್ಥಲಗಳ ಮತ್ತು ದಶ ವಿಧಪಾದೋದಕ ಏಕಾದಶ ಪ್ರಸಾದ ಮೊದಲಾದ ವೀರಶೈವ ತತ್ವ ವಿಚಾರಗಳು. ಅದರಲ್ಲಿ ಒಂದಾದರೂ ಇದೆಯೇ? ಇಲ್ಲವೇ ಇಲ್ಲ. ಇವರು ಶಿವಭಕ್ತರೋ ಶನಿಭಕ್ತರೋ ? ಶನಿ ಎಲ್ಲಿದ್ದಾನೆ ? ಅದು ಒಂದು ಜಡಗ್ರಹ. ಸೂರ್ಯ ಚಂದ್ರ ಭೂ ಗ್ರಹಗಳಂತೆ ಅದು ಒಂದು ಜಡವಸ್ತು. ಅದಕ್ಕೆ ನಾವು ನಿಂದಿಸಿದರೆ ಅವಹೇಳನಮಾಡಿದರೆ ಗೊತ್ತಾಗುತ್ತದೆಯೇ ? ಸೂರ್ಯನನ್ನು ನಾವು ನಿಂದಿಸೋಣ. ಆ ಸೂರ್ಯನಿಗೇನಾದರೂ ಕೇಳಿಸುತ್ತದೆಯೇ ? ಅದು ಪರಮಾತ್ಮನಿಂದ ನಿರ್ಮಿಸಲ್ಪಟ್ಟ ಒಂದು ಜಡಗ್ರಹ.

ಶನಿಕತೆ ಎಲ್ಲರಿಗೂ ಗೊತ್ತು. ಅದರ ವಿಚಾರ ಬಹಳ ತಮಾಶೆಯಾಗಿದೆ. ವಿಕ್ರಮರಾಜನು ಆಸ್ಥಾನದಲ್ಲಿದ್ದಾಗ ತನ್ನ ಸಭೆಯಲ್ಲಿದ್ದ ಪಂಡಿತರನ್ನು

ನವಗ್ರಹಗಳಲ್ಲಿ ಯಾರು ಶ್ರೇಷ್ಠರು ಎಂದು ಕೇಳಲು, ಸೂರ್ಯ ಗ್ರಹದ ಪಂಡಿತನು ಸೂರ್ಯನೇ ಘನವೆಂತಲೂ ಅವನಿಂದಲೇ ಜಗತ್ತಿನ ಕಾರ್ಯ ನಡೆ ಯುವದೆಂತಲೂ, ಚಂದ್ರಗ್ರಹದ ಪಂಡಿತನು ಚಂದ್ರನೇ ಘನ. ಲೋಕಕ್ಕೆ ರಾತ್ರಿ ತಂಪನ್ನು ಕೊಡುವನೆಂತಲೂ ಈ ರೀತಿ ಹೇಳಲು ಶನಿಗ್ರಹದ ಭಕ್ತನು ಅಂದರೆ ಪಂಡಿತನು ಶನಿಗ್ರಹವೇ ಘನವಾದದ್ದು, ಇದು ಎಲ್ಲ ಗ್ರಹಗಳಿಗಿಂತಲೂ ಕ್ರೂರ. ಹುಟ್ಟಿದಕೂಡಲೆ ಕಷ್ಟವ ಕೊಟ್ಟ ರವಿಯ ಸಾರಥಿ. ಕಾಲು ಹೇಳ ವನು ಅದನು ಎಂದು ವಿವರಿಸುತ್ತಾನೆ. ಈ ವಿಚಾರವನ್ನು ರಾಜನು ಕೇಳಿ ಎಷ್ಟೇಆಗಲಿ ಅವನು ತನ್ನಲ್ಲಿಯೇ ವಿಚಾರಿಸಿಕೊಂಡು ಅಂದದ್ದೇನಂದರೆ:- ಸುಪುತ್ರನಲ್ಲವ ದುಷ್ಪುತ್ರನೆಂದನು. ಇಷ್ಟೇ ರಾಜ ಅಂದದ್ದು. ಇದು ರಾಜನ ತಪ್ಪೇ ? ಯಾರಾದರೂ ಒಬ್ಬಾನೊಬ್ಬ ದುಷ್ಟ ತಂದೆ ತಾಯಿಗಳನ್ನು ನೋಯಿ ಸಲಿ. ನಾವು ಕೂಡ ನೋಡಿದ ಕೂಡಲೇ ನೀಚ ದುಷ್ಟ ಎಂದು ಅವ ನಿಗೆ ಅನ್ನುತ್ತೇವೆ. ಸಂತೋಷಪಡುವವರಾರಿದ್ದಾರೆ. ರಾಜನು ಇಷ್ಟೆಂದ ಮಾತ್ರಕ್ಕೆ ಶನಿಯು ಅದೇ ಸಮಯದಲ್ಲಿ ಅಂತರಿಕ್ಷದಲ್ಲಿ ವಿಮಾನದಲ್ಲಿ ಹೋಗುತ್ತಾ ಇದ್ದ. 'ಈ ದುಷ್ಪುತ್ರ' ಎಂದ ಮಾತು ಶನಿಗೆ ಕೇಳಿದಕೂಡಲೆ ಅವನು ತಕ್ಷಣವೇ ವಿಮಾನದಿಂದಿಳಿದ. ಇಳಿದು ರಾಜನ ಎದುರಿಗೆ ಬಂದು ನಿಂತು, ಎಲೋ ವಿಕ್ರಮ ಏನು ನನ್ನನ್ನು ಜರಿದೆಯೋ ? ನೋಡು ಹನ್ನೊಂದನೇ ರಾಶಿಗೆ ಬರುತ್ತೇನೆ. ಆಗ ನನ್ನ ಶಕ್ತಿ ಗೊತ್ತಾಗುತ್ತದೆ, ಎಂದು ಗರ್ಜಿಸಿ ಹೊರಟುಹೋದ ಎಂದು. ಹಾಗಾದರೆ ಶನಿಯು ಹುಟ್ಟಿದ ಕೂಡಲೆ ತಂದೆಗೆ ಕಷ್ಟವ ಕೊಟ್ಟರೆ ನಾನೂ ಕೂಡ ಶನಿಯು ನೀಚ ದುಷ್ಟ ಅವನು ಪಿತೃದ್ರೋಹಿ ಅವನು ಚಾಂಡಾಲ, ಅವನನ್ನು ಯಾರೂ ಪೂಜಿಸ ಕೂಡದು ಎಂದು ಹೇಳುತ್ತೇನೆ. ಇಲ್ಲಿ ಅವನ ಸುಳಿವೇ ಇಲ್ಲ. ಈಗ ಯುದ್ಧ ವಿರಾಮದಿಂದ ವಿಮಾನಗಳು ಬೇಕಾದಷ್ಟಿವೆ. ಇಂದು ವಿಮಾನದಲ್ಲಿ ಕೂತು ಕೊಂಡು ಏಕೆ ಬರಬಾರದು ? ನನಗೆ ಅವನು ೧೧ನೇ ರಾಸಿಗೆ ಬೇಕಾದರೂ ಬರಲಿ. ಯಾವ ರಾಸಿಗೆ ಬರಲಿ ಎಂದು ಈಗ ಆಗಲೇ ಕಾದು ಕಾದು ಸುಮಾರು ೧೨ ವರ್ಷವಾಯಿತು. ಅದಕ್ಕೆ ಶರಣರು ಶನಿ ಎಂದರೆ ಅಷ್ಟ ಮದ ಅಹಂಕಾರವೇ ಶನಿ ಕಾಣಿರಣ್ಣಾ ಎಂದು ಸಂಬೋಧಿಸಿದ್ದಾರೆ. ಅಷ್ಟಮದ ಅಹಂಕಾರಗಳಿಲ್ಲದಿದ್ದರೆ ಯಾವ ಕಷ್ಟಗಳೂ ಇಲ್ಲ, ಎಂದು ಅದರ ಉತ್ತರ.

ಈಗ ಪ್ರತಿ ವೀರಶೈವನು ವಿವಾಹವನ್ನು ಶಭ ಲಗ್ನದಲ್ಲಿ ಶುಭದಿವಸ ದಲ್ಲಿ ಶುಭಮುಹೂರ್ತವೆಂದು ಶಾಸ್ತ್ರಿಗಳಿಂದ ಕೇಳಿ ವಿವಾಹವನ್ನು ನಡೆಸು

ತ್ತಾರೆ, ವಧುವರರಿಗೆ ಯಾವ ತೊಂದರೆಯೂ ಬರಬಾರದು ಎಂದು. ಆದರೆ ಎಲ್ಲಿಯೂ ಇದೇ ಪ್ರಕಾರ ಮಾಡುತ್ತಾರೆ. ಹಾಗಾದರೆ ಪ್ರತಿಗ್ರಾಮದಲ್ಲಿಯೂ ವಿದುರರೂ ವಿಧವೆಯರೂ ತುಂಬಿ ತುಳುಕುತ್ತಾರೆ. ಇವರ ಮುಹೂರ್ತವೇನಾಯಿತು ?

ಸ್ವಲ್ಪ ದೋಷವಿದೆ. ತಾರಾಬಲ ಚಂದ್ರಬಲ ನೆಟ್ಟಗಿಲ್ಲ, ತಾರಾಬಲಕ್ಕೆ ಬದನೇಕಾಯಿ ಉಪ್ಪು ದಾನ. ಚಂದ್ರಬಲವಿಲ್ಲದ್ದಕ್ಕೆ ಅಕ್ಕಿ, ಬೆಳ್ಳಿ, ದಾನ ಕೊಡಬೇಕು ಎಂದು ಕೊಡಿಸುತ್ತಾರೆ. ಬಹಳದಿವಸ ಬದುಕಲಿ ಎಂದು. ಸುಮಾರು ಸೇರು ಎರಡುಸೇರು ಬದನೇಕಾಯಿ ದಾನದಿಂದಲೇ ದೋಷವನ್ನು ಕಳೆದುಕೊಂಡು ಚಿರಂಜೀವಿಗಳಾಗುವುದಾದರೆ ಮಣಗಟ್ಟಲೆ ಬದನೇಕಾಯಿ ದಾನಮಾಡಿ ಬಹುದಿವಸ ಬದುಕಬಹುದಲ್ಲ! ಇವರಿಗೆ ಈಶ್ವರಾಜ್ಞೆಯನ್ನು ಮೀರಿಸಿಬಿಡುವ ಶಕ್ತಿ ಬದನೇಕಾಯಿಗಿದೆ ಅಂದಹಾಗಾಯಿತು. ಅದೋ ಮಹಲಿಂಗರಂಗನ ಅನುಭವಾಮೃತ ನೋಡಿರುವಿರಾ ? ಅದಿದು, ಹಣೆಯಬರಹವ ಮೀರಿ ನಡೆಯುವದೆ ಶ್ರೀಣಯಸಿಗುವುಳವಲ್ಲ. ಮಿಕ್ಕಿನ ಬಣಗುಗಳ ಪಾಡೇನು ? ಪೂರ್ವದ ಕರ್ಮಫಲಗಳನೂ ಜುಣುಗಿ ತಾನುಣಲೊಲ್ಲೆನೆಂದಿರಲಣಕವೇ ? ನಿಮ್ಮಕ್ಕಪ್ಪನುಂಬನೆ । ಎಣಿಸಿ ನೋಡಿದರೀಶ್ವರಾಗ್ನೆಯ ವೀರಲಳವಲ್ಲ ॥ ಎಂದು ಮತ್ತು ಪುರಂದರದಾಸರೂ ಸಹ ಜೀವನು ದೇಹ ಧರಿಸಿ ಬಂದಮೇಲೆ ಅವರವರ ಕಷ್ಟ ಸುಖಗಳನ್ನು ಅವರವರು ಅನುಭವಿಸೇ ತೀರಬೇಕು. ಯಾರಿಂದಲೂ ಕಳೆಯಲು ಶಕ್ಯವಿಲ್ಲ ಎಂದು ಹೇಳಿದ್ದಾನೆ. ಅದಿದು ಆರೇನುಮಾಡುವರು, ಆರಿಂದಲೇನಹುದು ಪೂರ್ವಜನ್ಮದ ವಿಧಿಯು ಬೆನ್ನ ತಾ ಬಿಡದು ॥ಪಲ್ಲ॥ ಐದು ವರುಷದ ಹಸುಳವನೆತ್ತ, ತಪವೆತ್ತ, ಬೈದು ಮಲತಾಯಿಯಡವಿಗೆ ನೂಕಲೂ ಸುಯ್ದು ಕೋಪಾಗ್ನಿಯಲಿ ಪೊರಮಟ್ಟು ಪೋಪಾಗ ಅಯಿದ ಪಿತರಿದ್ದು ಏನ ಮಾಡಿದರು ? ॥೧॥ ನೃಪರೊಳಗೆ ಅತಿಶೂರ ಬಲವಂತ ರಘುರಾಮ । ಅಪರಿಮಿತ ಶೌರ್ಯ ಲಕ್ಷ್ಮಣದೇವನು । ಚಪಲಾಕ್ಷಿ ಸೀತೆಯನು ಖಳನು ಕದ್ದೊಯ್ಯಾಗ। ಅಪರಿಮಿತಶೂರರಿದ್ದೇನಮಾಡಿದರು ೨ ಪಾಪಿ ದುಶ್ಶಾಸ ದ್ರೌಪತಿಯ ಸೀರೆಯಸೆಳೆದು । ಕೋಪದಿಂ ಮಾನಭಂಗವ ಮಾಡಲು॥ ಆಪತ್ತಿಗೊಳಗಾದ ಶ್ರೀಪತಿಯಲ್ಲದೆ । ಭೂಪತಿಗಳೈವರಿದ್ದೇನಮಾಡಿದರು ॥೩॥ ರಣದೊಳಗೆ ಅಭಿಮನ್ಯು ಚಕ್ರವ್ಯೂಹವಪೊಕ್ಕು ಸೆಣಸಿ ಷಡುರಥರೊಡನೆ ಪೊಯ್ದಾಡಲು । ಅಣಕವಿಲ್ಲದೆ ಕಾದಿ ಅಸುವಳಿದುಪೋಪಾಗ ಶ್ರೀಣಯಸಖಪಾರ್ಥರಿದ್ದೇನಮಾಡಿದರು ? ॥೪॥

ಹರಿಹರನು ಕೂಡ ತನ್ನ ವೀರಶೈವ ರಗಳೆಯಲ್ಲಿ ಅಂದಿರುವದೇನಂದರೆ:-

ಇಂದುವದನೆ ಹೊಲೆಯಗಂಡಳೆಂದು ದೂರವಿದ್ದು ಮರಳಿ ಮಿಂಪಬಳಿಕ ಮನೆಗೆ ಕರೆದುಕೊಂಬುದಲ್ಲ ವೀರಶೈವ ॥ ವಾರ ಲಗ್ನ ಶುಭಮುಹೂರ್ತ ದಾರಿಶಕುನವೆಂಬ ಸಟೆಯ । ಬೇರು ಸಹಿತ ಕಿತ್ತುಹಾಕುದಿಪ್ಪವಂತ ವೀರಶೈವ ॥ ಹಾರುವರ್ಗೆ ನಮಿಸಿ ಚಂದ್ರತಾರೆಗಳ ಬಲವ ಕೇಳ್ದು । ಬೀರನರರ ಮನದ ಧೈರ್ಯ ಸುಡುವುದಲ್ಲ ವೀರಶೈವ ॥

ಇದೇ ರೀತಿ ಮೈಲಾರ ಬಸವ ಲಿಂಗಶರಣರು ಕೂಡ ಆದ್ಯರ ವಚನ ವನ್ನು ಕೇಳಿ ಪುನೀತರಾಗಿರಿ. ಪಂಚಾಂಗವನ್ನು ಕೇಳಬೇಡಿರಿ. ಈ ಹಿಂದೆ ಪಂಚಾಂಗವನ್ನು ಕೇಳಿದವರ ಗತಿ ಏನಾಗಿದೆ ನಿಮಗೆ ಗೊತ್ತಿಲ್ಲವೇ ? ಹೇಳು ತ್ತೇನೆ ಕೇಳಿರಿ ಎಂದಿದ್ದಾರೆ. (ಶಿವಾನುಭವದರ್ಪಣ ಹಳಕಟ್ಟಿಯವರ ಪ್ರತಿ)

ಅಣ್ಣಾ ನೀ ಕೇಳೋ ಪಂಚಾಂಗವ ಕೇಳಿದಣ್ಣಗಳೆಲ್ಲರಭಂಗಾವ ॥ಪಲ್ಲ॥
ಸರಸ್ವತಿದೇವಿ ಜೋಯಿಸರಿಂದಲನವರತ ಶುಭಾಶುಭವಿವರಿಸಿ ।
ಶರಭವಸಾರನದೆಸೆಯಿಂದಲವಳುರೆ ಮೂಕೊರತಿಯಾದ ಭಂಗವ ॥೧॥
ಇದನರಿಯದೊಳಿದ್ದು ಮನ್ಮಥ ಶುಭದಿನಶುಭ ತಿಥಿಗಳ ಕೇಳುತ್ತ ।
ಘನಶಿವನಕ್ಷಿಯುದೆಸೆಯಿಂದ ತನ್ನ ತನುವ ನೀಗಿದ ಮಾನಭಂಗವ ॥೨॥
ರಾಮ ಸೀತೆಯರಿಗೆ ಲಗ್ನವ ತಮ್ಮ ಸ್ವಾಮಿ ವಸಿಷ್ಠ ಮಾಡಿರಲಾಗಿ ।
ಆ ಮಹಸತಿಯ ರಾವಣನು ವೈದ ರಾಮನ ವನವಾಸ ಭಂಗಾವ ॥೩॥
ಕಷ್ಟ ಕರ್ಮವ ನೀಗಬೇಕೆಂದು ಬಹು ನಿಷ್ಠೆಯಿಂ ಪಂಚಾಂಗವ ಕೇಳಿ ।
ಸೃಷ್ಟಿಯೊಳಗೆ ಪಂಚಪಾಂಡವರು ದೇಶಭ್ರಷ್ಟರಾದ ಮಾನಭಂಗವ ॥೪॥

ಮತ್ತು ವೇಮಣ್ಣಯೋಗಿಯು ಕೂಡ ತನ್ನ ವಿಚಾರವನ್ನು ಈ ರೀತಿ ಹೇಳಿದ್ದಾನೆ. (ಜೋತಿಷ್ಯ ಬಗ್ಗೆ) ವಿಪ್ರರೆಲ್ಲರೂ ಕೂಡಿ । ಹುಚ್ಚು ಕೂಗಸು ಕೂಗಿ । ಸತಿಪತಿಗಳ ಮಾಡಿ । ಸಮ್ಮತದೊಳು ನೆರೆಮುಹೂರ್ತವ ಮಾಡೆ । ಮುಂಡೆಯುಂತಾದಳ್ಳೆ ವಿಶ್ವತೋಭಿರಾಮ ಕೇಳೊ ವೇಮಾ॥

ಈ ರೀತಿಯಾಗಿ ಪ್ರತಿಯೊಬ್ಬ ಮಹಾನುಭಾವಿಗಳೂ ಕೂಡ ಜೋತಿಷ್ಯವು ಮೋಕ್ಷಶಾಸ್ತ್ರವಲ್ಲ. ಅದು ಭೌತಿಕ ಶಾಸ್ತ್ರ. ಅದನ್ನು ನಂಬಬೇಡಿರಿ, ಎಂದು ನಮಗೆ ಉಪದೇಶಿಸಿದ್ದಾರೆ.

ಒಂದುಸಾರಿ ನಾನು ಮನೆಯಲ್ಲಿ ಕುಳಿತಿದ್ದೆ, ಆವಾಗ ಒಬ್ಬ ಆರೇ ಪಂಚಾಂಗದವನು ಬಂದು ಸ್ವಾಮಿ ನಾನು ನಿಮ್ಮ ಜನ್ಮನಕ್ಷತ್ರ ನಾಮ ನಕ್ಷತ್ರ ಹಿಡಿದು ನಿಮ್ಮ ಭವಿಷ್ಯವನ್ನು ಎಲ್ಲ ವಿವರಿಸಿ ಹೇಳುತ್ತೇನೆ ಕೇಳಿರಿ, ಎಂದು ಹೇಳಿದ. ನನಗೂ ಅದೇಬೇಕಾಗಿತ್ತು. ನಾನು ಜೋತಿಷ್ಯವನ್ನು ಪರೀಕ್ಷಾ ಮಾಡುವ ಕಾಲವಿದು ಎಂದೆ. ಎಂದವನೇ ಆ ಆರೇ ಪಂಚಾಂಗ ದವನನ್ನು ಎದುರಿಗೆ ಒಂದು ಹಾಸಿಗೆಯನ್ನು ಹಾಸಿ ಕೂಡ್ರಿಸಿಕೊಂಡೆ. ಅವ ನಿಗೆ ನಾನಂದದ್ದೇನೆಂದರೇ ? ಏನಯ್ಯಾ ಎಲ್ಲರೂ ನಿನಗೆ ಒಂದಾಣೆಯೋ ಎರಡಾಣೆಯೋ ರೊಕ್ಕಕೊಟ್ಟು ಕೇಳಿಸಿಕೊಳ್ಳುತ್ತಾರೆ. ಇಗೋ ನಾನು ನಿನಗೆ ಒಂದು ರೂಪಾಯಿ ಕೊಡುತ್ತೇನೆ. ನನಗೆ ಬಲವನ್ನು ಹೇಳು ಎಂದೆ. ಆಗ ಅವನಿಗೆ ಜಾಸ್ತಿ ರೊಕ್ಕ ಸಿಕ್ಕಿತೆಂದು ಮುಖವರಳಿತು. ಅವನು ನನಗೆ ಅಂದದ್ದೇನೆಂಧರೇ ನಿಮ್ಮ ಜನ್ಮ ನಕ್ಷತ್ರ ಅಥವಾ ನಾಮ ನಕ್ಷತ್ರವನ್ನು ತಿಳಿಸಿರಿ ಎಂದ! ನಾನು ಅವನಿಗೆ ಹೇಳಿದ್ದೇನೆಂದರೆ ? ಅಯ್ಯಾ ಅಕ್ಕ ಮಹಾದೇವಿಯು ಕೂಡ "ಹಲವು ಯೋನಿಗಳೊಳು ಬಂದೆ ಬಂದೆ. ಬಾರದ ಭವಂಗಳನುಂಡೆನುಂಡೆ, ಹಿಂದಿನ ಜನ್ಮವೇನಾದಡಾಗಲಿ, ಮುಂದೆ ಬಾರದ ರೀತಿ ಕರುಣಿಸಯ್ಯ ಚನ್ನಮಲ್ಲಿಕಾರ್ಜುನಾ" ಎಂದು ಇದೇ ಅಭಿಪ್ರಾಯ ವನ್ನೇ ನಾನು ಅವನಿಗೆ ಸ್ಪಷ್ಟವಾಗಿ ವಿವರಿಸಿ ಹೇಳಿದ್ದೇನೆಂದರೇ ? ಅಯ್ಯಾ ನಾನು ಈ ಹಿಂದೆ ಕತ್ತೆ, ನರಿ, ನಾಯಿ, ಕೋಳಿ, ಹಂದಿ, ಏಡಿ, ಮೀನು ಕಪ್ಪೆ, ಗಿಡ, ಬಳ್ಳಿ, ಮರವಾಗಿ, ಮೃಗವಾಗಿ, ಪಕ್ಷಿಗಳಾಗಿ ಅನೇಕ ದೇಹ ಗಳನ್ನು ಧರಿಸಿ ಧರಿಸಿ ಬಂದಿದ್ದೇನೆ. ಈಗ ಪುನಹ ಮನುಷ್ಯದೇಹ ಧರಿಸಿ ದ್ದೇನೆ. ನಾನು ಬಂದು ಬಹಳ ದಿವಸದ ಯಿತು. ಎಷ್ಟೋ ಯುಗಗಳಾಯಿತು. ನನ್ನ ಜನನವು ಇನ್ನಾದರೂ ಕೊನೆಗಾಣುವ ಹಾಗಿಲ್ಲ. ನನ್ನ ಜನ್ಮದ ರೀತಿ ಹೀಗಿದೆ. ದಯಮಾಡಿ ನನಗೆ ಈಗ ಯಾವ ರಾಸಿ ನಡೆಯುತ್ತಾ ಇದೆ. ಏನು ಗುರು ದಶವೇ ಶುಕ್ರ ದಶವೇ ಏನು ಎಂದು ಕೇಳಿದೆ. ಅದಕ್ಕೆ ಅವನು ಹಾಗೆ ಮೇಲಕ್ಕೆ ನೋಡಿದ. ಮೇಲಿಲ್ಲ ಎಂದೆ ನಾನು, ಕೆಳಕ್ಕೆ ನೋಡಿದ. ಕೆಳಗಿಲ್ಲ ಎಂದೆ ನಾನು ಆಗ ಅವನು ಸೋತಂತವನಾಗಿ ಏನು ಸ್ವಾಮಿ, ನಿಲುಕದ ವಿಚಾರವಿದು. ನಿಮ್ಮ ಶರೀರ ಬಂದಿದ್ದು ಹೇಳಿದರೆ ನಾನು ಹೇಳುತ್ತೇನೆ, ಇಂಥ ಆತ್ಮವಿಚಾರ ಜೋತಿಷ್ಯದಲ್ಲಿಲ್ಲ ಎಂದ. ಅಯ್ಯಾ ನನಗೆ ಆತ್ಮವಿದ್ಯೆ ಬ್ರಹ್ಮವಿದ್ಯೆಯೊಂದೇ ನಿತ್ಯವಾದದ್ದು. ಉಳಿಕೆ ಅವಿದ್ಯೆ

ಗಳನ್ನು ತೆಗೆದುಕೊಂಡು ಮಾಡುವುದಾದರೂ ಏನು ಎಂದೆ. ಆಗ ಅವನು ತನ್ನ ಪಂಚಾಂಗಗಳನ್ನು ಬಗಲಲ್ಲಿ ಧರಿಸಿಕೊಂಡು ಹೊರಟುಹೋದ.

ಆದಕಾರಣ ಜ್ಯೋತಿಷ್ಯಶಾಸ್ತ್ರದಿಂದ ಜನನಮರಣವೆಂಬ ಕಾಲಚಕ್ರ ಹಿಂಗದಾಗಿ ಲಿಂಗಾಂಗ ಸಮರಸ ದೊರೆಯದಾಗಿ, ತಾನಾರು ಎಂಬ ವಿಚಾರ ಗೊತ್ತಾಗಬೇಕಾದರೆ ಆದ್ಯರ ವಚನಗಳನ್ನು ನಾವು ನೋಡಿ ಅನುಭಾವಿಗಳಾ ಗುವದಿದೆ. ಆದ್ದರಿಂದ ಮೇಲಿನ ಮಹಾನುಬಾವರ ಅಮೃತವಾಣಿಯಂತೆ ಅವಿದ್ಯೆಗಳನ್ನು ತಿರಸ್ಕರಿಸಿ ಬಿಟ್ಟು ನಿರಾಕರಿಸಿ ಶಿವಾನುಭವ ವಿದ್ಯೆ ಅಂದರೆ ಬ್ರಹ್ಮವಿದ್ಯೆಯನ್ನು ಪರಿಗ್ರಹಿಸಿ. ನಿತ್ಯಾನಂದದಾಯಿಗಳಾಗಲೆಂದು ಸಕಲ ಮಾನವ ಕೋಟಿಗೆ ಬಿನ್ನವಿಸಿಕೊಳ್ಳುತ್ತೇನೆ.

ವಿಶೇಷ ಸೂಚನೆ:— ಜ್ಯೋತಿಷ್ಯದ ವಿಚಾರವಾಗಿ ಇನ್ನೂ ಹೆಚ್ಚಿಗೆ ತಿಳಿಯಲಪೇಕ್ಷಿಸುವವರು ಫ. ಗು. ಹಳಕಟ್ಟಿಯವರ ವಚನಶಾಸ್ತ್ರಸಾರ ಭಾಗ ೧ ಪೂರ್ವಾರ್ಧ ಈ ಗ್ರಂಥವನ್ನು ಅವಶ್ಯವಾಗಿ ನೋಡಬೇಕು.



# ಭಾರತೀಯ ಸಮಾಜ ನೀತಿ.

(ಲೇ:- ಶ್ರೀ ಅಲ್ಲಯ್ಯನವರ ಮಠ ಎಸ್. ಸಿ. "ಸಾಹಿತ್ಯಭೂಷಣ" ಬೆಳಗಾವಿ.)



ಇದೊಂದು ಪ್ರಜಾಯುಗವು ತಾನೆ. ಪ್ರಜಾರಾಜ್ಯಗಳ ಅಗ್ರಸ್ಥಾನದ ಅರ್ಹತೆ ಈಗ ವಿಶಾಲ ಭಾರತಕ್ಕಿದೆ. ಇಂಥ ವಿಶಾಲ ರಾಷ್ಟ್ರಗಳಲ್ಲಿ ಸುಖ ಶಾಂತಿಗಳು ಸಮೃದ್ಧವಾಗಿ, ಆರ್ಥಿಕ ಮತ್ತು ಸಾಮಾಜಿಕ ಸ್ಥಿತಿಗಳು ಸಮ ತೋಲವಾಗಿ ಉಳಿಯಬೇಕಾದರೆ ಹಿರಿಯರ ಹಿರಿಯ ತತ್ವಗಳು ಪ್ರಜಾರಾಜ್ಯದ ತಳಹದಿಯಾಗಬೇಕು. ಹಿರಿಯರು ತೋರಿಸಿದ ಮಾರ್ಗದಂತೆ ನಡೆಯಬೇಕು. ಎಂದರೆ ಅದರಂತೆ ವರ್ತಿಸಬೇಕಷ್ಟೇ. ಅದನ್ನೇ ಒಬ್ಬ ಆಂಗ್ಲ ವಿದ್ವಾಂಸನು "*We must follow the foot prints of great men*" ಎಂದು ಹೇಳಿದ್ದಾನೆ. ಹೀಗೆ ನಾವು ಹಿರಿಯರ ಹಿರಿಯಮಾರ್ಗವನ್ನನುಸರಿಸಿದರೆ ಭಾರತ ಆದರ್ಶ ರಾಷ್ಟ್ರವಾಗದಿರಲಾರದು. ಇದನ್ನರಿತು ಮಹಾತ್ಮಾಜಿಯವರು ಸರ್ವರಿಗೂ ಸಮವಾದ ಸುಖ ಸಮೃದ್ಧಿಗಳ ಆಗರವಾದ ಶಾಂತಿ ಸೂತ್ರವಾದ "ಸರ್ವೋದಯ' ಸಮಾಜವನ್ನು ಸ್ಥಾಪಿಸಿ ಸಾಮಾಜಿಕ ಸುಖ ಶಾಂತಿಗಾಗಿ ಹೆಣಗಿದರು.

ಮೊದಮೊದಲು ೧೨ನೆಯ ಶತಮಾನದಲ್ಲಿ ಮಹಾತ್ಮಾ ಬಸವಣ್ಣನವರೂ ಸುಖಶಾಂತಿಗಳ ಮೂಲವಾದ ಇಂಥದೊಂದು ಸಮಾಜವನ್ನು ಸ್ಥಾಪಿಸಿ, ಸಮಾಜದ ಸರ್ವತೋಮುಖ ಬೆಳವಣಿಗೆಗಾಗಿ ಯತ್ನಿಸಿದರು. ವಿಶ್ವಶಾಂತಿಯೇ ಬಸವಣ್ಣನವರ ಉಚ್ಚ ಸಾಮಾಜಿಕ ನೀತಿಯಾಗಿತ್ತು.

ದೇಶವು ಸಮೃದ್ಧವಾಗಿ ಸುಖಶಾಂತಿಗಳ ಸುಂದರ ಸಮ್ಮಿಲನವಾಗಬೇಕಾದರೆ ದೇಶದ ಆರ್ಥಿಕ ಮತ್ತು ಸಾಮಾಜಿಕ ಸ್ಥಿತಿಗಳು ಸ್ಥಿರವಾಗಿರಬೇಕಲ್ಲದೆ ಚನ್ನಾಗಿರಬೇಕು. ದೇಶದ ಆರ್ಥಿಕ ಪರಿಸ್ಥಿತಿಯು ಆದರ್ಶ ಸಮಾಜ ರಚನೆಯನ್ನವಲಂಬಿಸಿದೆ. ಸಮಾಜದಲ್ಲಿ ಸಮತೆ ಇದ್ದರೆ ಮಾತ್ರ ಅದು ಸಾಧ್ಯ. ಸಮಾಜದಲ್ಲಿ ಸಮತೆಯು ಸಮಾಗಮವಾಗಬೇಕಾದರೆ ಮೇಲು ಕೀಳೆಂಬ ಭಾವನೆ ಕಮರಬೇಕು. ನಾವೆಲ್ಲ ಒಂದೇ ಎಂಬ ಭಾವ ಚಿಗುರಬೇಕು. ಸಕಲರೂ

ಸತತೋದ್ಯೋಗಿಗಳಾಗಬೇಕು. ಕಾಯಕ ಮಾಡಬೇಕು. ಕಾಯಕ ಜೀವನ ಪಾವನ. ಅಂತಲೇ ಬಸವಣ್ಣನವರು "ಕಾಯಕದಿಂದಲೇ ಜೀವನ್ಮುಕ್ತಿ ಕಾಯಕವೇ ಕೈಲಾಸ" ಎಂದು ಹೇಳಿದ್ದಾರೆ. ಅದನ್ನೇ ಒಬ್ಬ ಆಂಗ್ಲ ವಿದ್ವಾಂಸನೂ "*Work is worship*" ಎಂದು ಒತ್ತಿ ಒತ್ತಿ ಹೇಳಿದ್ದಾನೆ. ಕಾಯಕಜೀವನ ಸುಖಸಮೃದ್ಧಿಗಳ ಆಗರವಾಗುವದು. ಕಾಯಕಗಳಿದ್ದ ನಾಡಿನ ಸ್ಥಿತಿ ಸ್ಥಿರವಾಗುವದು.

"ಮನ ಶುದ್ಧವಿಲ್ಲದವಂಗೆ ದ್ರವ್ಯದ ಬಡತನವಲ್ಲದೆ, ಚಿತ್ತಶುದ್ಧಿಯಿಂದ ಕಾಯಕ ಮಾಡುವ ಸದ್ಭಕ್ತಂಗೆ, ಎತ್ತನೋಡಿದತ್ತ ಲಕ್ಷ್ಮಿ ತಾನಾಗಿಪ್ಪಳು" ಅಂತಲೇ ಮ. ಗಾಂಧೀಜಿಯವರು ಗ್ರಾಮೋದ್ಯೋಗಗಳ ಪುನರುಜ್ಜೀವನಕ್ಕಾಗಿ ವಿಶ್ವಪ್ರಯತ್ನಪಟ್ಟರು. ಎಲ್ಲರೂ ಒಂದೇ ತಾಯಿ-ಮಕ್ಕಳು-ಬಾಂಧವರು, ಬೇಕಾದವರು ತಮಗಭಿರುಚಿಯುಳ್ಳ ಬೇಕಾದ ಕಾಯಕ ಮಾಡಬಹುದೆಂದರು. "ಕಾಯಕವೇ ಮಾನವತೆಯ ಹೆಗ್ಗುರುತು" ಎಂದು ಬಸವಣ್ಣನವರು ಮಂತ್ರಿಸಿದಾಗ ಸರ್ವರಿಗೆ ಸರ್ವ ಕಾರ್ಯಗಳಿಗೆ ಸಮಸ್ಥಾನ ದೊರೆತಿತು. ಮಾನ ದೊರೆಯಿತು, ಆದರೆ ಮನುಸ್ಮೃತಿಯು ಮೇಲುಕೀಳೆಂಬ ವರ್ಣಭೇದ ಬಂಧನದಿಂದ ಜನತೆಯನ್ನು ಸೆರೆ ಹಿಡಿದುಕೊಂಡು ಕೊಂದು ತಿಂದಿತು. ಹೀಗಾಗಿ ವರ್ಣಾಶ್ರಮಗಳ ಉಗಮವಾಗಿತ್ತು. ಚತುರ್ವರ್ಣದವರ ಮುಖಗಳು ಚತುರ್ದಶಗಳಿಗೆ ಸದ್ದಿಲ್ಲದೆ ತಿರುಗಿದ್ದವು. ಪರಸ್ಪರ ಸಂಬಂಧ-ಬಳಿಕೆ ನಿಂತುಹೋಯಿತು. ಶ್ರೇಷ್ಠ, ಕನಿಷ್ಠತೆಗಳು ತಾಂಡವವಾಡಹತ್ತಿದವು. ಉಚ್ಚವರ್ಣದವರೂ, ಇತರರೂ ಸ್ವಾರ್ಥಸಾಧಿಸುತ್ತ ಸಮಾಜದ ವಿನಾಶಕ್ಕೆ ಕಾರಣರಾದರು. ಜ್ಞಾನದ ಸವಿರೂ ಇಲ್ಲದ ಸಿರಿವಂತ ಸ್ವಾರ್ಥಿಗಳ ಸಂಭ್ರಮ ಅದು ಹೇಗೆ ಹೇಳಲು ತಾನೆ ಸಾಧ್ಯ? ಈ ಸಮಯಕ್ಕೆ "ಭಾಂಡವಲುಗಾರರು ಮತ್ತು ಇತರರ ಸಂಬಂಧ ಬೆಕ್ಕು ಇಲಿಗಳಂತೆ" ಎಂದು ಹೇಳಿದ ಮಹಾತ್ಮಾಜಿಯವರ ಮಾತು ನೆನಪಾಗದಿರದು. ಇದರ ನಿರ್ಮೂಲಕರಾಗಿಯೇ "ಸರ್ವೋದಯ" ಸಮಾಜವನ್ನು ಸ್ಥಾಪಿಸಿದರು.

ಬಸವಣ್ಣನವರೂ ಇದೇ ತತ್ವ. ಅಂತೆಯೇ ಅವರೊಂದು ತಾತ್ವಿಕ ಸಮಾಜವನ್ನು ಬೇರೆ ಸ್ಥಾಪಿಸಿದ್ದರು. ಆದರಿಂದಾಗಿ ಬೇಕಾದವರು ಬೇಕಾದ ಕಾಯಕ-ಉದ್ಯೋಗ ಕೈಕೊಳ್ಳಬಹುದಾಗಿತ್ತು. ಅಂತಲೇ ಒಕ್ಕಲಿಗ ಮಾದಯ್ಯ ದನಗಾಯಿ ರಾಮಣ್ಣ, ಮೋಳಿಗೆ ಮಾರಯ್ಯ, ಹಡಪದ ಅಪ್ಪಣ್ಣಾ, ಮಡಿ

ವಾಳ ಮಾಚಿದೇವ, ಚಮ್ಮಗಾರ ಹರಳಯ್ಯ, ಹಡಪದ ಅಪ್ಪಣ್ಣ, ಮೇದಾರ ಕೇತಯ್ಯ, ಡೋಹರ ಕಕ್ಕಯ್ಯ ಒಲ್ಲರೂ ಸಮಾಜದಲ್ಲಿ ಸರಿಸಮಾನವಾದ ಸ್ಥಾನ-ಮಾನ-ಗೌರವ ಪಡೆದಿದ್ದಾರೆ. ಕಾಯಕದಲ್ಲಿ ಮೇಲು ಕೀಳುಗಳಲ್ಲಿ ಜಾತೀಯ ಭಾವನೆಯಿಲ್ಲ.

ಮನಬಂದಂತೆ ಮಾಡಿದುದಲ್ಲ ಅವರ ಸಮಾಜ ರಚನೆ. ಅದರ ತಳಹದಿಯಲ್ಲಿ ಸಿದ್ಧಾಂತ ಜ್ಞಾನವುಂಟು. ಮಾನವ ಸಮಾಜದ ಉದ್ಧಾರಕ್ಕೆ ಅತ್ಯವಶ್ಯವಾದ ತಾತ್ವಿಕ ಜ್ಞಾನವುಂಟು. ಅಂತಲೇ ಅವರ ಕಾಲದ ಆರ್ಥಿಕ ಸಾಮಾಜಿಕ ಮತ್ತು ಔದ್ಯೋಗಿಕ ಕ್ಷೇತ್ರಗಳು ವಿಶಾಲವಾಗಿದ್ದವು. ಸುಖ ಶಾಂತಿಗಳು ಸಮೃದ್ಧವಾಗಿದ್ದವು. ಸಮಾಜದ-ಮಾನವನ ಸರ್ವತೋಮುಖ ಬೆಳವಣಿಗೆಗೆ ಸಂಕುಚಿತಭಾವನೆ ಅನುಚಿತ. ವಿಶ್ವಬಂಧುತ್ವವೇ ವಿಶ್ವಶಾಂತಿಯ ಸೂತ್ರ. ಸಮತೆಯೇ ಸಮಾಜ ತಂತ್ರ. ಸತತೋದ್ಯೋಗವೇ ಸುಖ-ಸಮೃದ್ಧಿಗಳ ನಿಜಮಂತ್ರ, ಆದರಣೀಯವಾಗಿವೆ. ಇಂತು ನಮ್ಮ ಭಾರತೀಯ ಸಮಾಜಶಾಸ್ತ್ರ.



೧೭೭. ಇನ್ನು ಷಡ್ವಿಧ ಭಕ್ತಿಯುತ್ಪತ್ಯವೆಂತೆಂದಡೆ, ಅಖಂಡ ಜ್ಯೋತಿರ್ಮಯವಾಗಿಹ ಗೋಳಕಾಕಾರ ಪ್ರಣವದ ಜ್ಯೋತಿಸ್ವರೂಪದಲ್ಲಿ ಸಮರಸಭಕ್ತಿ ಹುಟ್ಟಿತ್ತು. ಆ ಪ್ರಣವದ ದರ್ಪಣಾಕಾರದಲ್ಲಿ ಆನಂದಭಕ್ತಿ ಹುಟ್ಟಿತ್ತು. ಆ ಪ್ರಣವದ ಅರ್ಧಚಂದ್ರಕದಲ್ಲಿ ಅನುಭಾವ ಭಕ್ತಿ ಹುಟ್ಟಿತ್ತು. ಆ ಪ್ರಣವದ ಕುಂಡಲಾಕಾರದಲ್ಲಿ ಅವಧಾನ ಭಕ್ತಿ ಹುಟ್ಟಿತ್ತು. ಆ ಪ್ರಣವದ ದಂಡಸ್ವರೂಪದಲ್ಲಿ ನೈಷ್ಠಿಕಾಭಕ್ತಿ ಹುಟ್ಟಿತ್ತು. ಆ ಪ್ರಣವದ ತಾರಕಾಸ್ವರೂಪದಲ್ಲಿ ಸದ್ಭಕ್ತಿ ಹುಟ್ಟಿತ್ತು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೧೭೮. ಅಜಪದಾತೀತಾಗಮೆ ಸಾಕ್ಷಿ॥ ಓಂಕಾರ ಜ್ಯೋತಿರೂಪಂ ಚ । ಸಮರಸಂಚಮುದ್ಭವಂ । ಓಂಕಾರ ದರ್ಪಣಾಕಾರೆ । ಆನಂದ ಭಕ್ತಿಯುದ್ಭವಂ। ಓಂಕಾರಮರ್ಧಚಂದ್ರಚ । ಅನುಭಾವಂ ಚ ಸಮುದ್ಭವಂ । ಓಂಕಾರ ಕುಂಡಲಾಕಾರೆ ಅವಧಾನಂಚ ಸಮುದ್ಭವಂ। ಓಂಕಾರ ದಂಡರೂಪೇಚ। ನೈಷ್ಠಿಯುದ್ಭವಂ। ಓಂಕಾರ ತಾರಕಾ ರೂಪೆ । ಸದ್ಭಕ್ತಿಶ್ಚ ಸಮುದ್ಭವಂ ಎಂದುದಾಗಿ ಅಪ್ರಮಾಣ ಕೂಡಲಸಂಗಮದೇವಾ.

೧೭೯. ಇನ್ನು ಷಡ್ವಿಧ ಭಕ್ತಿಯ ನೆಲೆ ಆದೆಂತೆಂದಡೆ, ಆಧಾರ ಚಕ್ರದಲ್ಲಿ ಸದ್ಭಕ್ತಿ ಇಹುದು. ಸ್ವಾಧಿಷ್ಠಾನ ಚಕ್ರದಲ್ಲಿ ನೈಷ್ಠಿಕಾಭಕ್ತಿ ಇಹುದು. ಮಣಿಪೂರಕ ಚಕ್ರದಲ್ಲಿ ಅವಧಾನ ಭಕ್ತಿ ಇಹುದು. ಅನಾಹತ ಚಕ್ರದಲ್ಲಿ ಅನುಭಾವ ಭಕ್ತಿ ಇಹುದು. ವಿಶುದ್ಧಿ ಚಕ್ರದಲ್ಲಿ ಆನಂದ ಭಕ್ತಿ ಇಹದು. ಆಜ್ಞಾಚಕ್ರದಲ್ಲಿ ಸಮರಸ ಭಕ್ತಿ ಇಹುದು ನೋಡಾ ಅಪ್ರಮಾಣ ಕೂಡಲ ಸಂಗಮದೇವಾ.

೧೮೦. ಅಜಪದಾತೀತಾಗಮೆ ಸಾಕ್ಷಿ॥ ಆಧಾರೆ ಭೃತ್ಯಭಕ್ತಿಶ್ಚ।ಸ್ವಾಧಿಷ್ಠೆ ನೈಷ್ಟಿಕಂ ತಥಾ । ಅವಧಾನೆಸ್ತಥಾಪೂರಂ । ಅನುಭಾವಂ ಚನಾಹತಂ । ಆನಂದಶ್ಚ ವಿಶುದ್ಧಿಶ್ಚ । ಆಜ್ಞೇ ಸಮರಸಂ ಭವೇತ್ ಎಂದುದಾಗಿ ಅಪ್ರಮಾಣ ಕೂಡಲಸಂಗಮದೇವಾ.

೧೮೧. ಇನ್ನು ಷಡ್ವಿಧ ಪರಿಣಾಮದುತ್ಪತ್ಯವೆಂತೆಂದಡೆ। ಅಖಂಡ ಜ್ಯೋತಿರ್ಮಯವಾಗಿಹ ಗೋಳಕಾಕಾರ ಪ್ರಣವದ ಜ್ಯೋತಿಸ್ವರೂಪದಲ್ಲಿ ಪರಿಣಾಮ ಉತ್ಪತ್ಯವಾಯಿತ್ತು. ಆ ಪ್ರಣವದ ದರ್ಪಣಾಕಾರದಲ್ಲಿ ಶಬ್ದ ಉತ್ಪತ್ಯವಾಯಿತ್ತು. ಆ ಪ್ರಣವದ ಕುಂಡಲಾಕಾರದಲ್ಲಿ ರೂಪೋತ್ಪತ್ಯವಾಯಿತ್ತು.

ವಾಳ ಮಾಚಿದೇವ, ಚಮ್ಮಗಾರ ಹರಳಯ್ಯ, ಹಡಪದ ಅಪ್ಪಣ್ಣ, ಮೇದಾರ ಕೇತಯ್ಯ, ಡೋಹರ ಕಕ್ಕಯ್ಯ ಒಲ್ಲರೂ ಸಮಾಜದಲ್ಲಿ ಸರಿಸಮಾನವಾದ ಸ್ಥಾನ-ಮಾನ-ಗೌರವ ಪಡೆದಿದ್ದಾರೆ. ಕಾಯಕದಲ್ಲಿ ಮೇಲು ಕೀಳುಗಳಲ್ಲಿ ಜಾತೀಯ ಭಾವನೆಯಿಲ್ಲ.

ಮನಬಂದಂತೆ ಮಾಡಿದುದಲ್ಲ ಅವರ ಸಮಾಜ ರಚನೆ. ಅದರ ತಳಹದಿಯಲ್ಲಿ ಸಿದ್ಧಾಂತ ಜ್ಞಾನವುಂಟು. ಮಾನವ ಸಮಾಜದ ಉದ್ಧಾರಕ್ಕೆ ಅತ್ಯವಶ್ಯವಾದ ತಾತ್ವಿಕ ಜ್ಞಾನವುಂಟು. ಅಂತಲೇ ಆವರ ಕಾಲದ ಆರ್ಥಿಕ ಸಾಮಾಜಿಕ ಮತ್ತು ಔದ್ಯೋಗಿಕ ಕ್ಷೇತ್ರಗಳು ವಿಶಾಲವಾಗಿದ್ದವು. ಸುಖ ಶಾಂತಿಗಳು ಸಮೃದ್ಧವಾಗಿದ್ದವು. ಸಮಾಜದ-ಮಾನವನ ಸರ್ವತೋಮುಖ ಬೆಳವಣಿಗೆಗೆ ಸಂಕುಚಿತಭಾವನೆ ಅನುಚಿತ. ವಿಶ್ವಬಂಧುತ್ವವೇ ವಿಶ್ವಶಾಂತಿಯ ಸೂತ್ರ. ಸಮತೆಯೇ ಸಮಾಜ ತಂತ್ರ. ಸತತೋದ್ಯೋಗವೇ ಸುಖ-ಸಮೃದ್ಧಿಗಳ ನಿಜಮಂತ್ರ, ಆದರಣೀಯವಾಗಿವೆ. ಇಂತು ನಮ್ಮ ಭಾರತೀಯ ಸಮಾಜಶಾಸ್ತ್ರ.



೧೭೭. ಇನ್ನು ಷಡ್ವಿಧ ಭಕ್ತಿಯುತ್ಪತ್ಯವೆಂತೆಂದಡೆ, ಅಖಂಡ ಜ್ಯೋತಿರ್ಮಯವಾಗಿಹ ಗೋಳಕಾಕಾರ ಪ್ರಣವದ ಜ್ಯೋತಿಸ್ವರೂಪದಲ್ಲಿ ಸಮರಸಭಕ್ತಿ ಹುಟ್ಟಿತ್ತು. ಆ ಪ್ರಣವದ ದರ್ಪಣಾಕಾರದಲ್ಲಿ ಆನಂದಭಕ್ತಿ ಹುಟ್ಟಿತ್ತು. ಆ ಪ್ರಣವದ ಅರ್ಧಚಂದ್ರಕದಲ್ಲಿ ಅನುಭಾವ ಭಕ್ತಿ ಹುಟ್ಟಿತ್ತು. ಆ ಪ್ರಣವದ ಕುಂಡಲಾಕಾರದಲ್ಲಿ ಅವಧಾನ ಭಕ್ತಿ ಹುಟ್ಟಿತ್ತು. ಆ ಪ್ರಣವದ ದಂಡಸ್ವರೂಪದಲ್ಲಿ ನೈಷ್ಠಿಕಾಭಕ್ತಿ ಹುಟ್ಟಿತ್ತು. ಆ ಪ್ರಣವದ ತಾರಕಾಸ್ವರೂಪದಲ್ಲಿ ಸದ್ಭಕ್ತಿ ಹುಟ್ಟಿತ್ತು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೧೭೮. ಅಜಪದಾತೀತಾಗಮೆ ಸಾಕ್ಷಿ॥ ಓಂಕಾರ ಜ್ಯೋತಿರೂಪಂ ಚ । ಸಮರಸಂಚಮುದ್ಭವಂ । ಓಂಕಾರ ದರ್ಪಣಾಕಾರೆ । ಆನಂದ ಭಕ್ತಿಯುದ್ಭವಂ। ಓಂಕಾರಮರ್ಧಚಂದ್ರಚ । ಅನುಭಾವಂ ಚ ಸಮುದ್ಭವಂ । ಓಂಕಾರ ಕುಂಡಲಾಕಾರೆ ಅವಧಾನಂಚ ಸಮುದ್ಭವಂ। ಓಂಕಾರ ದಂಡರೂಪೇಚ। ನೈಷ್ಠಿಯುದ್ಭವಂ। ಓಂಕಾರ ತಾರಕಾ ರೂಪೆ । ಸದ್ಭಕ್ತಿಶ್ಚ ಸಮುದ್ಭವಂ ಎಂದುದಾಗಿ ಅಪ್ರಮಾಣ ಕೂಡಲಸಂಗಮದೇವಾ.

೧೭೯. ಇನ್ನು ಷಡ್ವಿಧ ಭಕ್ತಿಯ ನೆಲೆ ಆವೆಂತೆಂದಡೆ, ಆಧಾರ ಚಕ್ರದಲ್ಲಿ ಸದ್ಭಕ್ತಿ ಇಹುದು. ಸ್ವಾಧಿಷ್ಠಾನ ಚಕ್ರದಲ್ಲಿ ನೈಷ್ಠಿಕಾಭಕ್ತಿಇಹುದು. ಮಣಿಪೂರಕ ಚಕ್ರದಲ್ಲಿ ಅವಧಾನ ಭಕ್ತಿ ಇಹುದು. ಅನಾಹತ ಚಕ್ರದಲ್ಲಿ ಅನುಭಾವ ಭಕ್ತಿಇಹುದು. ವಿಶುದ್ಧಿ ಚಕ್ರದಲ್ಲಿ ಆನಂದ ಭಕ್ತಿ ಇಹುದು. ಆಜ್ಞಾಚಕ್ರದಲ್ಲಿ ಸಮರಸ ಭಕ್ತಿ ಇಹುದು ನೋಡಾ ಅಪ್ರಮಾಣ ಕೂಡಲ ಸಂಗಮದೇವಾ.

೧೮೦. ಅಸಿಪದಾತೀತಾಗಮೆ ಸಾಕ್ಷಿ ॥ ಆಧಾರೆ ಭೃತ್ಯಭಕ್ತಿಶ್ಚ।ಸ್ವಾಧಿಷ್ಠೆ ನೈಷ್ಟಿಕಂ ತಥಾ । ಅವಧಾನೆಸ್ತಥಾಪೂರಂ । ಅನುಭಾವಂ ಚನಾಹತಂ । ಆನಂದಶ್ಚ ವಿಶುದ್ಧಿಶ್ಚ । ಅಜ್ಞೀ ಸಮರಸಂ ಭವೇತ್ ಎಂದುದಾಗಿ ಅಪ್ರಮಾಣ ಕೂಡಲಸಂಗಮದೇವಾ.

೧೮೧. ಇನ್ನು ಷಡ್ವಿಧ ಪರಿಣಾಮದುತ್ಪತ್ಯವೆಂತೆಂದಡೆ । ಅಖಂಡ ಜ್ಯೋತಿರ್ಮಯವಾಗಿಹ ಗೋಳಕಾಕಾರ ಪ್ರಣವದ ಜ್ಯೋತಿಸ್ವರೂಪದಲ್ಲಿ ಪರಿಣಾಮ ಉತ್ಪತ್ಯವಾಯಿತ್ತು. ಆ ಪ್ರಣವದ ದರ್ಪಣಾಕಾರದಲ್ಲಿ ಶಬ್ದ ಉತ್ಪತ್ಯವಾಯಿತ್ತು. ಆ ಪ್ರಣವದ ಕುಂಡಲಾಕಾರದಲ್ಲಿ ರೂಪೋತ್ಪತ್ಯವಾಯಿತ್ತು.

ಆ ಪ್ರಣವದ ದಂಡ ಸ್ವರೂಪದಲ್ಲಿ ರಸೋತ್ಪತ್ಯವಾಯಿತ್ತು. ಆ ಪ್ರಣವದ ತಾರಕ ಸ್ವರೂಪದಲ್ಲಿ ಗಂಧೋತ್ಪತ್ಯವಾಯಿತ್ತು ನೋಡಾ ಅಪ್ರಮಾಣ ಕೂಡಲ ಸಂಗಮದೇವಾ.

೧೮೨. ಉತ್ತರ ವಾತುಳಾಗಮಸಾರೆ ಸಾಕ್ಷಿ॥ ಓಂಕಾರ ಜ್ಯೋತಿರೂಪಂ ಚ । ತೃಪ್ತಿಶ್ಚೈವ ಸಮುದ್ಭವಂ । ಓಂಕಾರ ದರ್ಪಣಾಕಾರೆ । ಶಬ್ದಂಚೈವ ಸಮುದ್ಭವಂ । ಓಂಕಾರಮರ್ಧಚಂದ್ರೇಚ। ಸ್ಪರ್ಶಂಚೈವ ಸಮುದ್ಭವಂ। ಓಂಕಾರ ಕುಂಡಲಾಕಾರೆ, ರೂಪಂಚೈವ ಸಮುದ್ಭವಂ । ಓಂಕಾರ ದಂಡರೂಪೆಚ । ರಸಂ ಚೈವ ಸಮುದ್ಭವಂ । ಓಂಕಾರ ತಾರಕಾ ರೂಪೆ ಗಂಧಚೈವ ಸಮುದ್ಭವಂ। ಇತಿ ಷಷ್ಠದ್ರವ್ಯಂಚೈವ । ಸ್ಥಾನ ಸ್ಥಾನೆ ಸಮುದ್ಭವಂ ಎಂದುದಾಗಿ ಅಪ್ರಮಾಣ ಕೂಡಲಸಂಗಮದೇವಾ.

೧೮೩. ಇನ್ನು ಷಡ್ವಿಧ ಪರಿಣಾಮದ ನೆಲೆ ಆದೆಂತೆಂದಡೆ, ಆಧಾರ ಚಕ್ರದಲ್ಲಿ ಗಂಧವಿಹುದು, ಸ್ವಾಧಿಷ್ಠಾನ ಚಕ್ರದಲ್ಲಿ ರಸವಿಹುದು. ಮಣಿಪೂರಕ ಚಕ್ರದಲ್ಲಿ ರೂಪವಿಹುದು. ಅನಾಹತ ಚಕ್ರದಲ್ಲಿ ಸ್ಪರ್ಶನವಿಹುದು, ವಿಶುದ್ಧಿ ಚಕ್ರದಲ್ಲಿ ಶಬ್ದವಿಹುದು, ಆಜ್ಞಾ ಚಕ್ರದಲ್ಲಿ ಪರಿಣಾಮವಿಹುದು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೧೮೪. ಉತ್ತರವಾತುಲ ಸಾರೆಸಾಕ್ಷಿ॥ ಆಧಾರಂಚ ಗಂಧಶ್ಚೈವ । ಸ್ವಾಧಿಷ್ಠೆ ರಸಮುಚ್ಯತೆ। ಮಣಿಪೂರಂಚ ರೂಪಂ ಚ । ಸ್ಪರ್ಶನಂ ಚ ಅನಾಹತಂ। ವಿಶುದ್ಧಿಶ್ಚ ಶಬ್ದಂಚೈವ । ಆಜ್ಞೆಯಾಂ ತೃಪ್ತಿ ಮೇವಚ । ಎಂದುದಾಗಿ ಅಪ್ರಮಾಣ ಕೂಡಲಸಂಗಮದೇವಾ.

೧೮೫. ಇನ್ನು ಋಗ್ವೇದ. ಸಾಮವೇದ, ಅಥರ್ವಣವೇದ, ಯಜುರ್ವೇದ, ಅಜಪಗಾಯತ್ರಿಯುತ್ಪತ್ಯವೆಂತೆಂದಡೆ, ಅಖಂಡಜ್ಯೋತಿರ್ಮಯವಾಗಿಹ ಗೋಳಕಾಕಾರ ಪ್ರಣವದ ತಾರಕ ಸ್ವರೂಪದಲ್ಲಿ ಋಗ್ವೇದ ಉತ್ಪತ್ಯವಾಯಿತ್ತು. ಆ ಪ್ರಣವದ ದಂಡಸ್ವರೂಪದಲ್ಲಿ ಯಜುರ್ವೇದ ಉತ್ಪತ್ಯವಾಯಿತ್ತು. ಆ ಪ್ರಣವದ ಕುಂಡಲಾಕಾರದಲ್ಲಿ ಸಾಮವೇದ ಉತ್ಪತ್ಯವಾಯಿತ್ತು. ಆ ಪ್ರಣವದ ಅರ್ಧಚಂದ್ರಕದಲ್ಲಿ ಅಥರ್ವಣವೇದ ಉತ್ಪತ್ಯವಾಯಿತ್ತು. ಆ ಪ್ರಣವದ ದರ್ಪಣಾಕಾರದಲ್ಲಿ ಗಾಯತ್ರಿ ಉತ್ಪತ್ಯವಾಯಿತ್ತು. ಆ ಪ್ರಣವದ ಜ್ಯೋತಿಸ್ವರೂಪದಲ್ಲಿ ಅಜಪೆ ಉತ್ಪತ್ಯವಾಯಿತ್ತು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೧೮೬. ಶಿವಾಗಮಸಾರೆ ಸಾಕ್ಷಿ || ಓಂಕಾರ ಜ್ಯೋತಿರೂಪೇ ಚ ಅಜಪಂ ಚ ಜಾಯತೆ । ಓಂಕಾರ ದರ್ಪಣಾಕಾರೆ ಗಾಯತ್ರಿಶ್ಚ ಜಾಯತೆ । ಓಂಕಾರ ಅರ್ಧಚಂದ್ರೇಚ ಅಥರ್ವಣಂ ಜಾಯತೆ । ಓಂಕಾರ ಕುಂಡಲಾಕಾರ । ಸಾಮವೇದಂ ಚ ಜಾಯತೆ, ಓಂಕಾರ ದಂಡರೂಪೆಚ। ಯಜುರ್ವೇದಂ ಚ ಜಾಯತೆ। ಓಂಕಾರ ತಾರಕಾರೂಪೆ ಋಗ್ವೇದಂಚ ತಜಾಯತೆ । ಏವಂ ವೇದಸಮುತ್ಪನ್ನಂ। ಸೂಕ್ಷ್ಮಂ ಕಮಲಾನನೆಯೆಂದ ದಾಗಿ. ಅಪ್ರಮಾಣ ಕೂಡಲ ಸಂಗಮದೇವಾ.

೧೮೭. ಇನ್ನು ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣ ವೇದ, ಅಜಪೆಗಾಯತ್ರಿಯ ನೆಲೆಯದೆಂತೆಂದಡೆ, ಆಧಾರಚಕ್ರದಲ್ಲಿ ಋಗ್ವೇದ ವಿಹುದು. ಸ್ವಾಧಿಷ್ಠಾನ ಚಕ್ರದಲ್ಲಿ ಯಜುರ್ವೇದವಿಹುದು, ಮಣಿಪೂರಕ ಚಕ್ರದಲ್ಲಿ ಸಾಮವೇದವಿಹುದು. ಅಹ ಹತ ಚಕ್ರದಲ್ಲಿ ಅಥರ್ವಣವೇದವಿಹುದು. ವಿಶುದ್ಧಿ ಚಕ್ರದಲ್ಲಿ ಗಾಯತ್ರಿಮಂತ್ರವಿಹುದು. ಆಜ್ಞಾ ಚಕ್ರದಲ್ಲಿ ಅಜಪೆಮಂತ್ರ ವಿಹುದು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೧೮೮. ನೀಲಕಂಠ ಸಾರೆ ಸಾಕ್ಷಿ ॥ ಆಧಾರೆ ಋಗ್ವೇದಂ ಚ । ಸ್ವಾಧಿಷ್ಠೆ ಯಜುರ್ವೇದಕಂ। ಮಣಿಪೂರಂಚ ಸಾಮಂಚ। ಅಧಃಶೃತಿಶ್ಚನಾಹತಂ । ಗಾಯತ್ರಿಶ್ಚ ವಿಶುದ್ಧೇಶ್ಚ । ಆಜ್ಞೇಯಂ ಅಜಪಂ ಭವೇತ್ । ಯೆಂದುದಾಗಿ, ಅಪ್ರಮಾಣ ಕೂಡಲಸಂಗಮದೇವಾ.

೧೮೯. ಇನ್ನು ಅಖಂಡಲಿಂಗದ ಮರ್ಮವೆಂತೆಂದಡೆ, ಲಿಂಗವೆಂಬುದು ನಾದಬಿಂದು ಕಳಾತೀತ, ಲಿಂಗವೆಂಬುದು ಅಖಂಡ ಜ್ಞಾನ, ಲಿಂಗವೆಂಬುದು ಅಖಂಡ ಪರಿಪೂರ್ಣ, ಲಿಂಗವೆಂಬುದು ನಿರಾಮಯ, ಲಿಂಗವೆಂಬುದು ನಿಶ್ಯಬ್ದ ಬ್ರಹ್ಮ, ಲಿಂಗವೆಂಬುದು ಹರಿಬ್ರಹ್ಮಾದಿಗಳ ನಡುವೆ ನೆಗಳ್ದ ಜ್ಯೋತಿರ್ಮಯ ಲಿಂಗ ॥ಸಾಕ್ಷಿ॥ ಅಖಿಲಾರ್ಣವಲಯಾನಾಂ । ಲಿಂಗಮುಖ್ಯಂ ಪರಂತಥಾ । ಪರಂಗೂಢಂ ಶರೀರಸ್ಥ ಲಿಂಗ ಕ್ಷೇತ್ರ ಮನಾದಿವತ್ । ಯಥಾ ವಿಶ್ರಾಂತೇಜಂ ! ತಲ್ಲಿಂಗಂ ಪಂಚಸೌಂಜ್ಞಿಕಂ । ಎಂದುದಾಗಿ ಇದು ಲಿಂಗದ ಮರ್ಮ ಅಪ್ರಮಾಣ ಕೂಡಲಸಂಗಮದೇವಾ.

೧೯೦. ಆಧಾರಚಕ್ರದಲ್ಲಿ ಅನಾದಿ ಸಂಜ್ಞೆ ಸ್ವಾಧಿಷ್ಠಾನ ಚಕ್ರದಲ್ಲಿ ಲಿಂಗಕ್ಷೇತ್ರವೆಂಬ ಸಂಜ್ಞೆ ಮಣಿಪೂರಕ ಚಕ್ರದಲ್ಲಿ ಶರೀರವೆಂಬ ಸಂಜ್ಞೆ ಅನಾಹತ ಚಕ್ರದಲ್ಲಿ ಗೂಢವೆಂಬ ಸಂಜ್ಞೆ, ವಿಶುದ್ಧಿ ಚಕ್ರದಲ್ಲಿ

ಪರವೆಂಬು ಸಂಜ್ಞೆ, ಆಜ್ಞೆಚಕ್ರದಲ್ಲಿ ನಿರಾಕುಳವೆಂಬ ಸಂಜ್ಞೆ ಇದು ಸೂಕ್ಷ್ಮಕ್ಕೆ ಸೂಕ್ಷ್ಮವಾಗಿಹುದು ನೋಡಾ ಅಪ್ರಮಾಣ ಕೂಡಲ ಸಂಗಮದೇವಾ.

೧೯೧. ಶಿವಲಿಂಗ ಸೂತ್ರೆ|| ಆಧಾರಂ ಚನಾದಿಶ್ಚೈವ | ಸ್ವಾಧಿಷ್ಟಿ ಲಿಂಗ ಕ್ಷೇತ್ರಕಂ । ಶರೀರಂ ಚ ಮಣಿಪೂರಕಂ ಚ | ಗೂಢಮನಾಹತಂ ತಥಾ | ವಿಶುದ್ಧಿಶ್ಚ ಪರಶ್ಚೈವ ಆಜ್ಞೆನಿರಾಕುಳಂ ಭವೇತ್, ಇತಿಷಷ್ಠ ಸಂಜ್ಞಾಜ್ಞಾತ್ವಾ| ದುರ್ಲಭಂ ಚವರಾನನೆ, ಎಂದುದಾಗಿ ಅಪ್ರಮಾಣ ಕೂಡಲಸಂಗಮದೇವಾ.

೧೯೨. ಇನ್ನು ಷಡ್ವಿಧ ಚಕ್ರದ ಅರ್ಪಿತಾವಧಾನದ ಭೇದವೆಂತೆಂದಡೆ. ಗುದಸ್ಥಾನದಲ್ಲಿ ಆಧಾರಚಕ್ರ, ಪ್ರಥ್ವಿಯೆಂಬ ಮಹಾಭೂತ, ಆ ಚಕ್ರ ಚತು: ಕೋಣಾಕಾರ, ಚತುರ್ದಳ ಪದ್ಮ, ಆ ಪದ್ಮ ಕೆಂಪುವರ್ಣ, ಅಲ್ಲಿ ವಶಷ ಸಯೆಂಬ ಚತುರಾಕ್ಷರ, ಅಲ್ಲಿ ಪೀತವರ್ಣವಾದ ಸದ್ಯೋಜಾತ ಮುಖವನುಳ್ಳ ಆಚಾರಲಿಂಗ, ಆ ಲಿಂಗಕ್ಕೆ ನಿವೃತ್ತಿಕಳೆ, ಅಲ್ಲಿ ಕರ್ಮ ಸಾದಾಖ್ಯ, ಪಶ್ಚಿಮ ದಿಕ್ಕು, ಅಲ್ಲಿ ಪೆಣ್ದುಂಬಿಯನಾದ ಆ ಲಿಂಗಕ್ಕೆ ಕಾಕಿನಿಯೆಂಬ ಪರಿಯಾಯನಾಮ ವನುಳ್ಳ ಕ್ರಿಯಾಶಕ್ತಿ, ಋಗ್ವೇದವನುಚ್ಚರಿಸುತ್ತ ಸುಚಿತ್ತವೆಂಬ ಹಸ್ತದಿಂದೆ, ಸುಗಂಧವೆಂಬ ದ್ರವ್ಯವನು ಲಿಂಗದ ಘ್ರಾಣವೆಂಬ ಮುಖಕ್ಕೆ ಸದ್ಭಕ್ತಿಯಿಂದ ರ್ಪಿಸುವಳು ಬ್ರಹ್ಮಪೂಜಾರಿ ಭವನಧಿದೇವತೆ ಅನಾದಿಯೆಂಬ ಸೌಜ್ಞೆ ಇಂತಿ ವೆಲ್ಲವಕ್ಕು ಮಾತೃಸ್ಥಾನವಾಗಿಹುದು. ನಕಾರವೆಂಬ ಬೀಜಾಕ್ಷರ. ಅದು ಪ್ರಣ ಮದ ತಾರಕಾಕೃತಿಯಲ್ಲಿಹ ನಕಾರದಲ್ಲಿರುವದು. ಆ ಈ ಊ ಎ ಓಂ ನಾಂ ವೆಂಬ ಬ್ರಹ್ಮನಾದ ಮಂತ್ರ ಮೂರ್ತಿ ಪ್ರಣವದ ಶಿರೋಮಧ್ಯದಲ್ಲಿಹ ಗುಹ್ಯ ನಾದ ಮಂತ್ರಮೂರ್ತಿ ಪ್ರಣವಕ್ಕೆ ನಮಸ್ಕಾರವು ನೋಡಾ, ಅಪ್ರಮಾಣ ಕೂಡಲಸಂಗಮದೇವಾ.

೧೯೩. ಅಲ್ಲಿಂದ ಮೇಲೆ ಲಿಂಗಸ್ಥಾನದಲ್ಲಿ ಸ್ವಾಧಿಷ್ಠಾನಚಕ್ರ, ಅಪ್ಪುವೆಂಬ ಮಹಾಭೂತ, ಆ ಚಕ್ರ ಧನುರ್ಗತಿ ಆಕಾರ, ಷಡುದಳಪದ್ಮ, ಆ ಪದ್ಮಪಚ್ಚೆಯ ವರ್ಣ ಅಲ್ಲಿ ಭಭಂಮಯರಲ ಯೆಂಬ ಷಡಕ್ಷರ ನ್ಯಾಸವಿಹುದು. ಅಲ್ಲಿ ಶ್ವೇತವರ್ಣವಾಗಿ ವಾಮದೇವ ವಕ್ತ್ರವನುಳ್ಳ ಗುರುಲಿಂಗ, ಆ ಲಿಂಗಕ್ಕೆ ಪ್ರತಿ ಷ್ಟೆಕಲೆ ಅಲ್ಲಿ ಕರ್ತೃಸಾದಾಖ್ಯ ಉತ್ತರದಿಕ್ಕು, ಅಲ್ಲಿ ವೀಣಾನಾದ, ರಾಕಿನಿ ಯೆಂಬ ಪರ್ಯಾಯ ನಾಮವನುಳ್ಳ ಜ್ಞಾನಶಕ್ತಿ, ಸುಬುದ್ಧಿಯೆಂಬ ಹಸ್ತದಿ ಲಿಂಗ ಜಿಹ್ವೆ ಎಂಬ ಮುಖಬೆರಸು ದ್ರವ್ಯಮಂ ನೈಷ್ಠಿಕಾಭಕ್ತಿಯಿಂದ ಯಜು

R. N. B. 2554





ಸಂಪುಟ ೨೮ ] [ ಸಂಚಿಕೆ ೩ ೪

# ಶಿವಾನುಭವ



ಸಂಪಾದಕರು
ಫ. ಗು. ಹಳಕಟ್ಟಿ,
ಬಿ. ಎ. ಎಲ್. ಎಲ್. ಬಿ.

ವಾ. ಚ. ೫-೧೨-೦] ವಿಜಾಪುರ [ಮಾರ್ಚ-ಎಪ್ರೀಲ ೧೯೫೪

R. N. B. 2554





ಸಂಪುಟ ೨೮ ]　　　　[ ಸಂಚಿಕೆ ೩-೪

# ಶಿವಾನುಭವ

ಸಂಪಾದಕರು,
ಫ. ಗು. ಹಳಕಟ್ಟಿ,
ಬಿ. ಎ. ಎಲ್. ಎಲ್. ಬಿ.

ವಾ. ಚ. ೫-೧೨-೦]　　ವಿಜಾಪೂರ　　[ಮಾರ್ಚ-ಏಪ್ರೀಲ ೧೯೫೪

# ಶಿವಾನುಭವ.

ಈ ಪತ್ರಿಕೆಯಲ್ಲಿ ಸಂಚಿಕೆ ೩ ಮತ್ತು ೪ ಇವೆರಡೂ ಸಮಾವೇಶವಾಗಿದ್ದು, ಆ ಪ್ರಕಾರ ತಿದ್ದಿಕೊಂಡು ವಾಚಕರು ಈ ಪತ್ರಿಕೆಯನ್ನು ಉಪಯೋಗಿಸಿಕೊಳ್ಳಬೇಕೆಂದು ನಮ್ಮ ನಮ್ರ ವಿನಂತಿ ಇದೆ.

೧೫- ಎಪ್ರೆಲ್ ೧೯೫೪. ಸಂಪಾದಕ— **ಶಿವಾನುಭವ,**

# ವಿಷಯಾನುಕ್ರಮಣಿಕೆ



# ಶಿವಾನುಭವ

| ವರ್ಷ ೨೮ | ಮಾರ್ಚ ೧೯೫೪ | ಸಂಚಿಕೆ ೩+೪ |
|---|---|---|

## ಜಪಗಳು.

(ಲೇಖಕಃ- ಶ್ರೀ. ಬಸವಪ್ಪ ಚನ್ನಪ್ಪ ಪಟ್ಟೀನ ಒಂಟಮುರಿ ಮು. ಹುಕ್ಕೇರಿ)

—:○:—

ವೀರಶೈವರು ಲಿಂಗ ಪೂಜೆಯು ಕಾಲದಲ್ಲಿ ಜಪಗಳನ್ನು ಮಾಡುವದುಂಟಷ್ಟೆ. ಆ ಜಪಗಳು ಶಿವ ಪಂಚಾಕ್ಷರಿಮಂತ್ರ ಜಪ, ಮಹಾಲಿಂಗ ಮಂತ್ರಜಪ, ನವಲಿಂಗಜಪ, ಹಂಸಜಪ, ಹಸ್ತಜಪ, ಎಂಬವೇ ಇರುವವು. ಇವನ್ನು ಅನುಲೋಮ ವಿಲೋಮವಾಗಿ ಜಪಿಸತಕ್ಕದ್ದು. ಲಿಂಗ ಪೂಜಕನ ಬಳಿಯಲ್ಲಿ ರುದ್ರಾಕ್ಷಿಗಳ ಮೂರು ಸರಗಳು ಇರುವದು ಅವಶ್ಯವದೆ. ಅವು ಜಪಮಾಲೆ, ಕಂಠ ಮಾಲೆ, ಲಿಂಗಕ್ಕೆ ಧರಿಸುವ ಮಾಲೆ.

**ಜಪಮಾಲೆ:—** ಇದು ೧೦೮ ಸಣ್ಣ ರುದ್ರಾಕ್ಷಿಗಳದಿರಬೇಕು. ೧೦೮ ಏಕೆಂದರೆ ಷಡ್ಲಿಂಗಗಳಲ್ಲಿ ಪ್ರತಿಯೊಂದು ಲಿಂಗದೊಳಗೆ ಆರೂ ಲಿಂಗಗಳಿರುವದರಿಂದ (೬×೬) ಅವು ೩೬ ಆದವು. ಈ ೩೬ಕ್ಕೆ ಇಷ್ಟ-ಪ್ರಾಣ-ಭಾವಲಿಂಗ ಸಂಖ್ಯೆಯಿಂದ (೩ರ ರಿಂದ) ಗುಣಿಸಿದರೆ (೩೬×೩=) ೧೦೮ ಆಗುವದು. ಅಂತೇ ಈ ಸರವು ೧೦೮ರ ದಿರಬೇಕು.

**ಕಂಠಮಾಲೆ:—** ಇದು ಲಿಂಗ ಪೂಜಕನಿಗೆ ಕೊರಳಲ್ಲಿ ಧರಿಸಲಿಕ್ಕೆ ಬೇಕು. ೩೨ ದೊಡ್ಡ ರುದ್ರಾಕ್ಷಿಗಳದಿರಬೇಕು. —೩೨ ಏಕೆಂದರೆ ವಿಶುದ್ಧಿ ಚಕ್ರದ ದಳಗಳ ಸಂಖ್ಯೆ ೧೬. ಅವು ಅನುಲೋಮ ವಿಲೋಮ ಕೂಡಿದರೆ (೧೬+೧೬) ೩೨ ಆಗುವವು. ಅಥವಾ ಎರಡೂ ದವಡೆಗಳ ದಂತ

ಗಳು ( ೧೬+ ೧೬ ) ೩೨ ಆಗುವವು. ಅಂತೇ ಕಂಠಮಾಲೆಗೆ ೩೨ ರುದ್ರಾಕ್ಷಿಗಳಿರಬೇಕು.

ಲಿಂಗಕ್ಕೆ ಧರಿಸುವ ಮಾಲೆ— ಇದಕ್ಕೆ ೧೨ ದೊಡ್ಡ ರುದ್ರಾಕ್ಷಿಗಳದೊಂದು ಸರವಿರಬೇಕು. ಅನಾಹತ ಚಕ್ರಕ್ಕೆ ೧೨ ದಳಗಳಿರುವದರಿಂದ ಈ ಸರವು ೧೨ ರುದ್ರಾಕ್ಷಿಗಳದಿರುವದು. ಅಥವಾ ಎರಡು ಕರಗಳು ಹಾಗೂ ಅವುಗಳಿಗಿರುವ ೧೦ ಬೆರಳುಗಳು ಕೂಡಿದರೆ ೧೨ ಆಗುವವು.

## (೧) ಶಿವಪಂಚಾಕ್ಷರಿ ಮಂತ್ರ ಜಪ

ಇದನ್ನು ೧೦೮ ರುದ್ರಾಕ್ಷಿಗಳ ಸರವನ್ನು ಹಿಡಿದುಕೊಂಡು ಮಾಡಬೇಕು. ಒಮ್ಮೆ ಮಂತ್ರವನ್ನು ಉಚ್ಚರಿಸಿದೊಡನೆ ಸರದೊಳಗಿನ ಒಂದು ರುದ್ರಾಕ್ಷಿಯನ್ನು ಎಳೆಯಬೇಕು. ಇದೇ ಮೇರೆಗೆ ೧೦೮ ಸಾರೆ ಮಂತ್ರೋಚ್ಚಾರಮಾಡಿ ಆ ೧೦೮ ಮಣಿಗಳನ್ನೆಲ್ಲ ಎಳೆಯಬೇಕು. ಆ ಸರವು ಪೂರಾ ಮುಗಿದರೆ ೧೦೮ ಜಪಗಳಾದವೆಂಬುದು ಸಹಜವದೆ. ಜಪಸಂಖ್ಯೆಗಳ ಎಣಿಕೆ ತಿಳಿಯುವದಕ್ಕಾಗಿಯೇ ಈ ಸರವನ್ನು ಉಪಯೋಗಿಸುವರು. ಇದು ಅನುಲೋಮ ಜಪವಾಯಿತು.

ಇನ್ನು ವಿಲೋಮ ಜಪ:— ಆ ೧೦೮ರ ರುದ್ರಾಕ್ಷಿ ಸರವನ್ನು ತಿರುವಿ ಹಿಡಿದು ಪುನಃ ೧೦೮ ಸಾರೆ ಮೇಲೆ ಹೇಳಿದಂತೆ ಜಪಿಸಬೇಕು. ಇದೇ ವಿಲೋಮ ಜಪವು.

## (೨) ಮಹಾಲಿಂಗ ಜಪ

(೧) ವಂ ಶಂ ಷಂ ಸಂ - ಓಂ ನಕಾರ ಮಂತ್ರಮೂರ್ತಿ ಆಚಾರ ಲಿಂಗಾಯನಮಃ

(೨) ಬಂ ಭಂ ಮಂ ಯಂ ರಂ ಲಂ –ಓಂ ಮಃಕಾರ ಮಂತ್ರಮೂರ್ತಿ ಗುರುಲಿಂಗಾಯನಮಃ

(೩) ಡಂ ಢಂ ಣಂ ತಂ ಥಂ ದಂ ಧಂ ನಂ ಪಂ ಫಂ } ಓಂ ಶಿಕಾರ ಮಂತ್ರಮೂರ್ತಿ ಶಿವ ಲಿಂಗಾಯನಮಃ

(೪) ಕಂ ಖಂ ಗಂ ಘಂ ಙಂ ಚಂ ಛಂ ಜಂ ಝಂ ಞಂ ಟಂ ಠಂ } ಓಂ ಶಿಕಾರ ಮಂತ್ರಮೂರ್ತಿ ಜಂಗಮ(ಚರ)ಲಿಂಗಾಯನಮಃ

(೫) ಕಂ ಖಂ ಇಂ ಈಂ ಉಂ ಊಂ ಋಂ ೠಂ ಌಂ ೡಂ ಎಂ ಐಂ ಓಂ ಔಂ ಅಂ ಅಃ } ಓಂ ಯಕಾರ ಮಂತ್ರಮೂರ್ತಿ ಪ್ರಸಾದಲಿಂಗಾಯನಮಃ

(೬) ಹಂ ಕ್ಷಂ } ಓಂ ಓಂಕಾರ ಮಂತ್ರಮೂರ್ತಿ ಮಹಾ ಲಿಂಗಾಯನಮಃ

ಇದು ಅನುಲೋಮ ಜಪವಾಯಿತು. ಇನ್ನು ವಿಲೋಮ ಅಂದರೆ- ಹಂ ಕ್ಷಂ- ಓಂ ಓಂಕಾರ ಮಂತ್ರಮೂರ್ತಿ ಮಹಾಲಿಂಗಾಯನಮಃ ದಿಂದ ಆರಂಭಿಸಿ, ಕ್ರಮವಾಗಿ ಇಳಿಯುತ್ತ ವಂ ಶಂ ಕ್ಷಂ ಸಂ- ಓಂ ನಕಾರ ಮಂತ್ರ ಮೂರ್ತಿ ಆಚಾರಲಿಂಗಾಯನಮಃ ದ ವರೆಗೆ ಬಂದು ಮುಟ್ಟಬೇಕು.

ಬಳಿಕ ಮಾಯಾಖ್ಯ ಪಂಚಾಕ್ಷರಿ (ಓಂ ಹ್ರಾಂ ಹ್ರೀಂ ನಮಃ ಶಿವಾಯ) ಯನ್ನು ಉಚ್ಚರಿಸಿ, ಆ ಜಪವನ್ನು ಮುಗಿಸಬೇಕು.

## (೩) ನವಲಿಂಗ ಜಪ.

ಜಪಮಾಲೆಯು ನಮ್ಮಲ್ಲಿ ಒಂದೇ ಒಂದು, ಅಂದರೆ ೧೦೮ ರುದ್ರಾಕ್ಷಿ ಗಳದೇ ಇರುವದು. ಆದರಿಂದ ಈ ಜಪ ಮಾಡಿದರೆ, ಈ ನವಲಿಂಗ ಜಪದ ಅನುಲೋಮ ವಿಲೋಮ ಜೋಡಿಗಳು, ಆರುಸಾರೆ ಆಗುತ್ತವೆ. ಹಾಗೆ ಮಾಡಿದರೂ ಮಾಡಬೇಕು. ಅಷ್ಟುಸಾರೆ ಮಾಡುವದು ಬೇಡೆಂದರೆ ಒಂದೇ ಸಾರೆ ಕೆಳಗೆ ಬರದಂತೆ ಮಾಡಿ ಕೈಯಿಂದಲೇ ನಮಸ್ಕಾರವರ್ಪಿಸಿ ಮುಗಿ ಸಬೇಕು.

(೧) ಓಂ ಹ್ರಾಂ ನಂ ಓಂ ಆಚಾರಲಿಂಗಾಯನಮಃ
(೨) ಓಂ ಹ್ರೀಂ ಮಂ ಓಂ ಗುರುಲಿಂಗಾಯನಮಃ
(೩) ಓಂ ಹ್ರೂಂ ಶಿಂ ಓಂ ಶಿವಲಿಂಗಾಯನಮಃ
(೪) ಓಂ ಹ್ರೈಂ ವಂ ಓಂ ಜಂಗಮ (ಚರ) ಲಿಂಗಾಯನಮಃ
(೫) ಓಂ ಹ್ರೌಂ ಯಂ ಓಂ ಪ್ರಸಾದಲಿಂಗಾಯನಮಃ
(೬) ಓಂ ಹ್ರಃ ಓಂ ಓಂ ಮಹಾಲಿಂಗಾಯನಮಃ

೭ { (ಅ) ಓಂ, ಅಂ, ಬಂ, ಓಂ ಇಷ್ಟಲಿಂಗಾಯನಮಃ
(ಬ) ಓಂ ಬಂ ಅಂ ಓಂ ನಿಷ್ಕಲ ಲಿಂಗಾಯನಮಃ

೮ { (ಅ) ಓಂ ಉಂ ಸಂ ಓಂ ಪ್ರಾಣಲಿಂಗಾಯನಮಃ
(ಬ) ಓಂ ಸಂ ಉಂ ಓಂ ನಿಃಶೂನ್ಯ ಲಿಂಗಾಯನಮಃ

೯ { (ಅ) ಓಂ ಮಂ ವಂ ಓಂ ಭಾವಲಿಂಗಾಯನಮಃ
(ಬ) ಓಂ ವಂ ಮಂ ಓಂ ನಿರಂಜನ ಲಿಂಗಾಯನಮಃ

ಕಡೆಯ ಮೂರು ಲಿಂಗಗಳನ್ನು ಹೇಳುವಾಗ, (ಅ) ದಲ್ಲಿ ಹೇಳಿದವುಗಳನ್ನಾಗಲಿ (ಬ) ದಲ್ಲಿ ಹೇಳಿದವುಗಳನ್ನಾಗಲಿ ಕ್ರಮವಾಗಿ ಹೇಳಬೇಕು. ಯಾವುದಾದರೂ ಒಂದನ್ನೇ ಹೇಳಬೇಕು. ಎರಡನ್ನೂ ಹೇಳಬಾರದು. ಒಂದು ಹೇಳಿದರೆ ಮತ್ತೊಂದು ಅದರಲ್ಲಿಯೇ ಬಂದುಬಿಡುವದು. ಅವು ಭಿನ್ನ ಭಿನ್ನವಲ್ಲ. ಇದು ಅನುಲೋಮವಾಯಿತು. ಇದನ್ನೇ ವಿರುದ್ಧ ಕ್ರಮದಿಂದ ಆರಂಭಿಸಿ, ಆಚಾರಲಿಂಗದ ವರೆಗೆ ಮುಟ್ಟಿದರೆ ಅದೇ ವಿಲೋಮ ಜಪವು.

## (೪) ಹಂಸ ಮಂತ್ರ ಜಪ.

ಇದು ಜನ್ಮಿಸಿದಾಗಲಿಂದ ಆರಂಭವಾಗಿ, ಕೊನೆಯ ವರೆಗೂ ಅವ್ಯಾಹತವಾಗಿ ಸಾಗುವದು. ಉಸಿರಾಡಿಸುವ ಕ್ರಿಯೆಯೇ ಈ ಹಂಸ ಮಂತ್ರವು. ದಿನಾಲು (೨೪ ತಾಸಿನಲ್ಲಿ) ೨೧೬೦೦ ಸಾರೆ ಈ ಮಂತ್ರದ ಜಪವು (ಶ್ವಾಸೋಚ್ಛ್ವಾಸವು) ನಡೆಯುವದು. ಒಂದು ತಾಸಿಗೆ ೯೦೦ ಜಪಗಳು ಬೀಳುವವು. ಒಂದು ನಿಮಿಷಿಗೆ ೧೫ ಇಲ್ಲವೆ ೪ ಸೆಕೆಂದಿಗೆ ಒಂದರಂತೆ ಚರಿಸುವವು.

ಷಟ್ ಚಕ್ರಗತ ಷಡ್ಲಿಂಗಗಳ ೫೦ ದಳಗಳಲ್ಲಿ ೨೧೬೦೦ ಜಪಗಳನ್ನು ಸರಿಯಾಗಿ ಹಂಚಿದರೆ ಒಂದೊಂದು ದಳಕ್ಕೆ ೪೩೨ ಜಪಗಳು ಬೀಳುವವು. ಆದುದರಿಂದ ಆಚಾರಲಿಂಗಕ್ಕೆ ೪೩೨×೪, ಗುರುಲಿಂಗಕ್ಕೆ ೪೩೨×೬, ಶಿವಲಿಂಗಕ್ಕೆ ೪೩೨×೧೦, ಜಂಗಮಲಿಂಗಕ್ಕೆ ೪೩೨×೧೨, ಪ್ರಸಾದಲಿಂಗಕ್ಕೆ ೪೩೨×೧೬, ಮಹಾಲಿಂಗಕ್ಕೆ ೪೩೨×೨ ಈ ಮೇರೆಗೆ ಜಪಗಳು ಸಲ್ಲುವವು. ಈ ಜಪಗಳು ನಡೆದ ಕಾಲವೇ ಆಯಾ ಲಿಂಗಗಳ ಕಾಲವೆಂದು ಹೇಳುವರು.

(೧) ಆಚಾರಲಿಂಗದ ಜಪಸಂಖ್ಯೆ ೧೭೨೮, ವೇಳೆ ಮುಂಜಾವಿನಿಂದ ೪ ಘಟಿಕಾ ೪೮ ಪಳಾ (ತಾ ೧-೫೫-೧೨ ಸೇ) ಆಚಾರಲಿಂಗದ ವೇಳೆ.

(೨) ಗುರುಲಿಂಗದ ಜಪಸಂಖ್ಯೆ ೨೫೯೨, ವೇಳೆ ಆಚಾರಲಿಂಗದ ವೇಳೆಯ ತರುವಾಯ. ೭ ಘಳಿಗೆ ೧೨ ಪಳಾ (ತಾ ೨-೫೨-೪೮ ಸೇ) ಗುರುಲಿಂಗದ ವೇಳೆ.

(೩) ಶಿವಲಿಂಗದ ಜಪಸಂಖ್ಯೆ ೯೩೨೦, ವೇಳೆ ಗುರುಲಿಂಗದ ವೇಳೆಯ ತರುವಾಯ ೧೨ ಘಳಿಗೆ ೫ ಪಳಾ. (ತಾ ೪-೪೮-೦ ಸೇ) ಲಿಂಗದ ವೇಳೆ.

(೪) ಜಂಗಮಲಿಂಗದ ಜಪಸಂಖ್ಯೆ ೫೧೪೪, ಶಿವಲಿಂಗದ ವೇಳೆಯ ತರುವಾಯ ೧೪ ಘಳಿಗೆ ೨೪ ಪಳಾ. (ತಾ ೫-೪೫-೩೬ ಸೇ) ಜಂಗಮಲಿಂಗದ ವೇಳೆ.

(೫) ಪ್ರಸಾದಲಿಂಗದ ಜಪಸಂಖ್ಯೆ ೬೯೧೨, ವೇಳೆ ಜಂಗಮಲಿಂಗದ ತರುವಾಯ ೧೯ ಘಳಿಗೆ ೧೨ ಪಳಾ.(ತಾ ೭-೪೦ ೪೮ಸೇ ಪ್ರಸಾದಲಿಂಗದ ವೇಳೆ.

(೬) ಮಹಾಲಿಂಗದ ಜಪಸಂಖ್ಯೆ ೮೬೪, ವೇಳೆ ಪ್ರಸಾದಲಿಂಗದ ತರುವಾಯ ೨ ಘಳಿಗೆ ೪೪ ಪಳಾ (ತಾ ೧-೫೭-೩೬ಸೇ)ಮಹಾಲಿಂಗದ ವೇಳೆ.

ಇವೇ ೨೧೬೦೦ ಜಪಗಳನ್ನು ಷಡಂಗರಲ್ಲಿ ಹಂಚಿದರೆ—

| | | | |
|---|---|---|---|
| (೧) ಈಶ್ವರನಿಗೆ (ಭಕ್ತನಿಗೆ) | ೬೦೦ | (೪) ಪ್ರಾಣಲಿಂಗಿಗೆ | ೬೦೦೦ |
| (೨) ಮಹೇಶ್ವರನಿಗೆ | ೬೦೦೦, | (೫) ಶರಣನಿಗೆ | ೧೦೦೦ |
| (೩) ಪ್ರಸಾದಿಗೆ | ೬೦೦೦, | (೬) ಐಕ್ಯನಿಗೆ | ೧೦೦೦ |
| | | ಗುರುವಿಗೆ (ಪರಶಿವಗೆ) | ೧೦೦೦ |

ಇಲ್ಲಿ ಮಹೇಶ್ವರ - ಪ್ರಸಾದಿ - ಪ್ರಾಣಲಿಂಗಿಗಳಿಗೆ ಆರಾರು ಸಾವಿರ ಅವರಿಗಿಂತಲೂ ಮಿಗಿಲಾದ ಶರಣ-ಐಕ್ಯ-ಗುರು ಅಂದರೆ ಪರಬ್ರಹ್ಮರಿಗೆ ಒಂದೊಂದು ಸಾವಿರವೇಕೆ? ಎಂಬ ಶಂಕೆಯು ತಲೆದೋರುವದು. ಆದರೆ ಅದು ನಿರರ್ಥಕವಾಗಿದೆ. ಯಾಕಂದರೆ ಷಟ್‌ಸ್ಥಲಗಳ ಸಾಧನೆಯಲ್ಲಿ ಮಹೇಶ್ವರ, ಪ್ರಸಾದಿ, ಪ್ರಾಣಲಿಂಗಿಗಳು ಪಡಬೇಕಾದ ಶ್ರಮವು ಬಹಳ ಹೆಚ್ಚಾಗಿರುವದು. ಪ್ರಾಣಲಿಂಗಿಯಾದವನಿಗೆ ಶರಣನಾಗುವದು, ಶರಣನಾದವನಿಗೆ ಐಕ್ಯನಾಗುವದು, ಸುಲಭವಾಗಿ ಸಾಧಿಸುವದು. ಷಟ್‌ಸ್ಥಲಗಳ ಲೇಖವನ್ನು ಮನನಿಸಿದವನಿಗೆ ಈ ಮಾತು ಸುಲಭವಾಗಿ ತಿಳಿಯುವದು. ಐಕ್ಯನಾದವನು ಪರಶಿವನೇ ಆಗಿರುವನು. ಅವನು ಪರಬ್ರಹ್ಮನಾಗುವದು ಸಾಹಜಿಕವೇ ಆಗಿರುವದು. ಆದ್ದರಿಂದ ಈ ಮೂವರಿಗೆ ಮೇಲಿನವರಷ್ಟು ಕಾಲ ಬೇಕಾಗಿಲ್ಲ. ಭಕ್ತನಿಗೆ ತೀರ ಕುಸು ಕಾಲ ಕೊಟ್ಟಿವೆ. ಅವನು ಬರಿಯ ಧ್ಯೇಯವನ್ನು ಮಾತ್ರ ಪರಿಶೀಲಿಸುವದದೆ.

ಹಂಸಮಂತ್ರವನ್ನು ಸಹ ಅನುಲೋಮ ವಿಲೋಮದಿಂದಲೇ ಜಪಿಸಬೇಕು. ಹಂಸ ಜಪಕ್ಕೂ ಅದೇ ಜಪಮಾಲೆಯು. ಅದನ್ನೇ ಉಪಯೋಗಿ

ಸ್ಸಿದರೆ, ಅದು ಮುಗಿಯುವವರೊಳಗಾಗಿ ಆ ಮಂತ್ರದ ಅನುಲೋಮ ವಿಲೋಮ ಜತೆಗಳು ೫೪ ಸಾರೆ ಆಗುವವು. ಅವು ಷಡ್ಲಿಂಗಗಳಿಗೆ ೯ ಸಾರೆ ಇಲ್ಲವೆ ನವಲಿಂಗಗಳಿಗೆ ೬ ಸಾರೆ ಸಲ್ಲುವವು. ಈ ಜಪವು ತಾನಾಗಿಯೇ ಸತತಕಾಲ ನಡೆದಿರುವದರಿಂದ, ಜಪಿಸುವವನ್ನು ಮತ್ತೆ ಏನು ಮಾಡತಕ್ಕದು? ಜಪಿಸುವದಕ್ಕಿಂತಲೂ ಅದರ ಅರ್ಥವನ್ನೇ ಲಕ್ಷ್ಯಕ್ಕೆ ತಂದುಕೊಳ್ಳುವದೇ ಇಲ್ಲಿ ಮುಖ್ಯ ಉದ್ದೇಶವದೆ. ಹಾಗೆ ಸರಿಯಾಗಿ ಅರ್ಥವನ್ನು ಗ್ರಹಿಸಿ ಎಷ್ಟುಸಾರೆ ಜಪಿಸಿದರೂ ಅಷ್ಟೇ. ಬಹಳಸಾರೆ ಜಪಿಸುವ ಅವಶ್ಯಕತೆಯಿಲ್ಲ ತನಗೆ ದಿನಾಲು ಸಲ್ಲುವಷ್ಟು ಇಟ್ಟುಕೊಳ್ಳಬೇಕು. ತೀರ ಕಡಿಮೆ ಎಂದರೆ ಅನುಲೋಮ ವಿಲೋಮಗಳ ೧೨ ಜತೆಯಾದರೂ ಸಾಕು.

ಹಂಸಃ, ಇದೇ ಅದರ ಅನುಲೋಮವು. ಹಂ=ಹಕಾರವು. ಸಃ= ಅವನು ಅಥವಾ ಶಿವನು. ( ಸಃ ಎಂಬುದು 'ತತ್' ಶಬ್ದದ ಪುಲ್ಲಿಂಗ ಪ್ರಥಮಾ ಏಕವಚನದ ರೂಪವು.)

ಸೋಹಂ, ಎಂಬುದು ಹಂಸಃ ಎಂಬುದರ ವಿಲೋಮ ಉಚ್ಚಾರವು. 'ಸೋಹಂ'ದ ಸಂಧಿ ಬಿಡಿಸಿದರೆ (೧) ಸಃ + ಹಂ ಇಲ್ಲವೆ (೨) ಸಃ + ಅಹಂ ಎಂದು ಆಗುವದು. ಇನ್ನು ಇವುಗಳ ಅರ್ಥವು. ಮೊದಲನೆಯ ದರದು ಅವನು ಅಂದರೆ ತತ್ತ್ವೇಕಾಕಾರವು; ಎರಡನೇಯದರದು (ಅವನು ಎಂದರೆ ಶಿವನು ಇಲ್ಲವೆ ತತ್ತ್ವ "ನಾನು" ಎಂದಾಗುವದು.

[ಸೋಹಂ ದೊಳಗಿನ 'ಸಕಾರ ಮತ್ತು 'ಹ'ಕಾರ ವ್ಯಂಜನಗಳನ್ನು ಕಳೆದರೆ ಓಂ+ಅಹಂ = ಓಂ ಓಂ, ವಾಚ್ಯ ಪ್ರಣವು ಹುಟ್ಟುವದು.]

ಹಕಾರವು 'ಹ' ಅಕ್ಷರವನ್ನು ಹೇಳುವದು. ಆ 'ಹ' ಕಾರವು ಎಲ್ಲಿದ್ದರೂ ಅದರ ಅರ್ಥವು ಒಂದೇ ದಧವಾಗಿರುವದು. ಆ 'ಹ'ಕಾರವು ಮುಖ್ಯವಾಗಿ ಕೆಳಗೆ ಬರೆದ ಸ್ಥಳಗಳಲ್ಲಿ ಬಂದಿರುವದು.

(೧) ಹಂಸ ಮಂತ್ರದೊಳಗಿನ 'ಹ'ಕಾರವು.
(೨) ಹ್ರಾಂ ಮೊದಲಾದ ಪ್ರಸಾದ ಮಂತ್ರದೊಳಗಿನ 'ಹ'ಕಾರವು.
(೩) ಹರ ಶಬ್ದದೊಳಗಿನ 'ಹ'ಕಾರವು
(೪) ಆಜ್ಞಾಚಕ್ರದ ಒಂದು ದಳವಾದ 'ಹ'ಕಾರವು.
(೫) ನಿರಂಜನ ಲಿಂಗದ ಪ್ರಣವವಾದ 'ಹ'ಕಾರವು.

(೬) ೫೦ ಪ್ರಣವಾಕ್ಷರಗಳ (ವರ್ಣಮಾಲೆಯ) ಕಡೆಯಲ್ಲಿ ಬಂದಿರುವ 'ಹ'ಕಾರವು.
(೭) ಸ್ವರಗಳ ಕಡೆಗೆ ಬಂದಿರುವ ವಿಸರ್ಗ (ಃ) ಹ್
} ಇವೆರಡೂ ಒಂದೇ.

ಈ ಅರಿಯು ಕಡೆಗಳಲ್ಲಿ ಬಂದಿರುವ 'ಹ'ಕಾರದ ಅರ್ಥವು ಒಂದೇ ಎಂದು ತಿಳಿಯಬೇಕು. ಅಂದರೆ ನಿರಂಜನ ಪ್ರಣವವಾದ 'ಹ'ಕಾರವೇ ಎಂದು ತಿಳಿಯಬೇಕು.

'ಓಂ'ಕಾರದ ಅವಯವಗಳಾದ 'ಅ-ಉ-ಮ್' ಪ್ರಣವಗಳನ್ನು ಕ್ರಮವಾಗಿ ನಾದ-ಬಿಂದು-ಕಲೆ ಎಂದು ಹೆಸರಿಸಿರುವರು. ಆದುದರಿಂದ ಇಲ್ಲಿಯ ಅಕಾರವು ನಾದವಾಯಿತು. ಅಕಾರವು ನಾದವಾದಮೇಲೆ ಹಕಾರವೂ ನಾದವಾಗುವದು. ಏಕೆಂದರೆ 'ಅ'ಕಾರ ಮತ್ತು 'ಹ'ಕಾರಗಳು ವರ್ಣಮಾಲೆಯ ಆದಿ ಹಾಗು ಅಂತ್ಯ ವರ್ಣಗಳಾಗಿವೆ. ಉಪಕ್ರಮ (ಆದಿ) ಉಪಸಂಹಾರ (ಕೊನೆ)ಗಳು ಒಂದೇ ಇರಬೇಕಾಗುವದೆಂಬುದು ಪ್ರಸಿದ್ಧವೇ ಆದೆ. (ಇವೆರಡೂ ವರ್ಣಗಳು ಒಂದೇ ಒಂದಾದ ಕಂಠಸ್ಥಾನದಲ್ಲಿಯೇ ಹುಟ್ಟುವವು.) ಇದಕ್ಕೊಂದು ದೃಷ್ಟಾಂತ ಮೊಳಕೆಯ ಆರಂಭದಲ್ಲಿಯೂ ಬೀಜ, ವೃಕ್ಷದ ಕೊನೆಯಲ್ಲಿ ಹಣ್ಣಿನೊಳಗೂ ಬೀಜ. ಅದರಂತೆ ವರ್ಣಮಾಲೆಗಳ 'ಅ'ಕಾರ ಮತ್ತು 'ಹ'ಕಾರಗಳ ವಿಷಯದಲ್ಲೂ ಬಗೆಯಬೇಕು. ಅಂತೇ 'ಅ'ಕಾರ ಹೇಗೆ ನಾದವೋ ಹಾಗೇ 'ಹ'ಕಾರವಾದರೂ ನಾದವೇ! ಆದಕಾರಣ 'ಅ'ಕಾರ ನಾದದಲ್ಲಿ ಹುಟ್ಟಿದ ಮಂತ್ರವು 'ಹ'ಕಾರ ನಿರಂಜನದಲ್ಲಿ ಪರ್ಯವಸಾನ ಹೊಂದುವದು.

ಹಂಸ ಮಂತ್ರದೊಳಗಿನ 'ಹ'ಕಾರವು ನಿರಂಜನ ಪ್ರಣವವಾಗಿದೆ. ಆ 'ಹ'ಕಾರವೇ ಸಃ [ತತ್ತ್ವ] ಆ ಸಃ [ತತ್ತ್ವ] ನಾನು. ಒಟ್ಟಿಗೆ ಹಂಸ ಮಂತ್ರವು ನಿರಂಜನ ಪ್ರಣವ, ತತ್ತ್ವ ಮತ್ತು ನಾನು ಈ ಮೂರೂ ಒಂದೇ ಎಂದು ಸರ್ವಕಾಲದಲ್ಲಿಯೂ ಘೋಷಿಸುತ್ತಿರುವದು.

## (೫) ಹಸ್ತ ಜಪ.

ಇದನ್ನು ೧೨ ಪ್ರಣವ ಮಂತ್ರ ಜಪಮಂತ್ರವೆಂತಲೂ ಹೇಳುವದು. ಇದಕ್ಕಾಗಿ ಜಪಮಾಲೆಯು ಬೇಡ. ಬಲಹಸ್ತವನ್ನು ಉಪಯೋಗಿಸಬೇಕು. ಹಸ್ತದ ೫ ಬೆರಳುಗಳಿಗೆ ಕೂಡಿ ೧೪ ಕಂಡಿಕೆಗಳಿರುವವು. ಇವುಗಳಿಗೆ

ಕಂಡಿಕೆಗಳಿರುವವು. ಇವುಗಳಲ್ಲಿ ನಡುವಿನ ಹಾಗೂ ಅದಕ್ಕೆ ಹೊಂದಿರುವ ಉಂಗಾರ ಬೊಟ್ಟುಗಳ ನಡುವಿನ ಕಂಡಿಕೆಗಳನ್ನು ಬಿಟ್ಟರೆ ಹನ್ನೆರಡೇ ಉಳಿಯುವವು. ಅವುಗಳಲ್ಲಿ ಹಿಂದಿನ ಪುಟ್ಗಲು ತೋರಿಸಿದಂತೆ ೧೨ ಪ್ರಣವಾಕ್ಷರಗಳನ್ನು ಬರೆದುಕೊಂಡು, 'ನ, ಮ, ಶಿ, ವಾ, ಯ, ಓಂ, ಅ, ಉ, ಮ, ಬ, ಸ, ವ," ಎಂಬ ಪ್ರಣವಗಳನ್ನು ಅನುಕೂಲಿಸುವ ಬೊಟ್ಟಿನಿಂದ ಸ್ಪರ್ಶಿಸುತ್ತ ಕ್ರಮವಾಗಿ "ಆಚಾರಲಿಂಗಾಯನಮಃ ಶಿವಲಿಂಗಾಯನಮಃ ಚರಲಿಂಗಾಯನಮಃ, ಪ್ರಸಾದ ಲಿಂಗಾಯನಮಃ, ಮಹಾಲಿಂಗಾಯನಮಃ ನಿಷ್ಕಲ ಲಿಂಗಾಯನಮಃ, ನಿಃಶೂನ್ಯಲಿಂಗಾಯನಮಃ, ನಿರಂಜನ ಲಿಂಗಾಯನಮಃ ಇಷ್ಟಲಿಂಗಾಯನಮಃ, ಪ್ರಾಣಲಿಂಗಾಯನಮಃ ಭಾವಲಿಂಗಾಯನಮಃ" ಎಂದು ಉಚ್ಚರಿಸಬೇಕು. ಇದೇ ಅನುಲೋಮ ಜಪವಾಯಿತು.

ವಿಲೋಮ ಜಪ:— 'ವ, ಸ, ಭ, ಮ, ಉ, ಅ, ಓಂ, ಯ, ವಾ, ಶಿ, ಮಃ, ನ," ಎಂಬ ಪ್ರಣವುಗಳನ್ನು ಮೇಲಿನ ವಿರುದ್ಧಕ್ರಮದಲ್ಲಿ ಸ್ಪರ್ಶಿಸುತ್ತ "ಭಾವಲಿಂಗಾಯನಮಃ, ಪ್ರಾಣಲಿಂಗಾಯನಮಃ, ಇಷ್ಟಲಿಂಗಾಯನಮಃ,ಆಚಾರಲಿಂಗಾಯನಮಃ"ದ ವರೆಗೆ ಉಚ್ಚರಿಸಿದರೆ ಅದು ವಿಲೋಮ ಜಪವಾಗುವದು. ಇದನ್ನು ಹಸ್ತದ ಮೂಲಕ ಮಾಡುವದರಿಂದ ಹಸ್ತಜಪ ಎಂದು ಹೆಸರು ನಿರೂಢವಾಗಿದೆ. ಹನ್ನೆರಡರ ಹೊರತು ಉಳಿಯುವ ನಡುವಿನವೆರಡು ಕಂಡಿಕೆಗಳಲ್ಲಿ ಹೆಬ್ಬೆರಳಿನಿಂದ ದುಂಡಗಾಗಿ ತಿರುವಿ ಆ ಲಿಂಗಗಳಿಗೆ ಪ್ರದಕ್ಷಿಣೆಯನ್ನು ಸಲ್ಲಿಸಬೇಕು. ಅವಸರದ ಪ್ರಸಂಗದಲ್ಲಿಯೂ, ಮುಂಜಾವು ಸಂಜೆಯ ಕಾಲದಲ್ಲಿಯೂ ಇದೊಂದೇ ಜಪದಿಂದ ಸಂಕ್ಷಿಪ್ತವಾಗಿ ಮುಗಿಸಲಿಕ್ಕೆ ಬರುವದು.

## ಎರಡು ಬೆದರ್ಗಲ್ಲುಗಳು

ಕೆಲ ಐಹಿಕ ಸ್ವಾರ್ಥ ಪರಾಯಣ ಜನರು ಅರಿಯದ ಅಜ್ಞ ಜನರ ಮೇಲೆ ಈ ವಿಷಯದಲ್ಲಿ ಬೆದರ್ಗಲ್ಲುಗಳನ್ನು ಹಾಕಿ, ಕೈಕಾಲು ಕಳೆಯುವದುಂಟು. ಆದುದರಿಂದ ಇಲ್ಲಿ ಆ ಬಗೆಗೆ ಬೇಕೆಂತಲೇ ಎಚ್ಚರಿಕೆಯನ್ನು ಕೊಟ್ಟಿರುತ್ತದೆ.

(೧) ಮಂತ್ರದ ಜಪ ಮಾಡುವದೇನು ಹುಡುಗಾಟವಲ್ಲ! ಆ ಮಂತ್ರವನ್ನು ಇಲ್ಲವೇ ಜಪಮಾಡುವದನ್ನು ಪುಸ್ತಕದಲ್ಲಿ ಓದಿ ಅಥವಾ ಬೇಕ್ಕ ಬೇಕಾದವರ ಬಾಯಿಂದ ಕೇಳಿ, ಮಾಡುವದು ತೀರ ಮೂರ್ಖತನ! ಅದ್ದರಿಂದ ಅವರಿಗೆ ಏನೂ ಫಲ ದೊರೆಯುವದಿಲ್ಲ, ಅದರೆ ಬಲ್ಲ ಆರಾಧ್ಯ

(ಅಯ್ಯನವ)ರಾದ ಗುರುಗಳ ಪಾದಕ್ಕೆ ಭಕ್ತಿಪೂರ್ವಕವಾಗಿ, ತನ ಮನ ಧನಗಳನ್ನು, ಸಾಷ್ಟಾಂಗ ನಮಸ್ಕಾರ ಹಾಕಿ ಸಮರ್ಪಿಸಿ ಅವರ ಕೃಪೆ ಪಡೆದು, ಅವರಿಂದ ಸವಿಧಾನವಾಗಿ ಅರಿತುಕೊಂಡು ಯಾರಿಗೂ ತಿಳಿಯದಂತೆ, ಮುಚ್ಚು ಮರ್ಯಾದೆಯಿಂದ ಅವನ್ನು ಜಪಿಸಬೇಕು. ಆಗ ಅವುಗಳ ಫಲವು ದೊರೆಯುವದು.

ಇದರ ಪರಿಹಾರ :— ಪುಸ್ತಕಗಳನ್ನು ಯಾರೇ ರಚಿಸಲಿ, ಅವರು ಆ ವಿಷಯಗಳಲ್ಲಿ ತಾವು ಒಳಿತಾಗಿ ಬಲ್ಲವರಾಗಿಯೂ ತಮಗೆ ತಿಳಿದುದು ಅಷ್ಟಕ್ಕೆ ನಾಶವಾಗದೆ ಮುಂದಿನವರಿಗೂ ತಿಳಿದು ಅವರೂ ಸಹ ಜ್ಞಾನಿಗಳಾಗಿ, ಆತ್ಮ ಪ್ರಗತಿಯನ್ನು ಸಾಧಿಸಿ, ಸುಖಿಗಳಾಗಲಿ; ಎಂಬ ಸದಿಚ್ಛೆಯಿಂದಲೇ ಬರೆದಿಟ್ಟಿರುವರು. ಅವರ ದೇಹವು ನಷ್ಟವಾದರೂ, ತಮ್ಮ ಆ ಜ್ಞಾನವನ್ನು ಅಮರವಾಗಿ ಮಾಡಿಟ್ಟಿರುವರು. ಆ ಜ್ಞಾನವೇ ಗುರುವಲ್ಲದೇ ದೇಹವೇನೂ ಗುರುವಲ್ಲ! ಗುರುವು ಯಾವಾಗಲೂ ಭದ್ರವಾಗಿ ವಾಸಿಸುತ್ತಲೇ ಇರುವನು. ಆ ಕಾರಣ ಗ್ರಂಥ ಬರೆದಿಟ್ಟ ಪಂಡಿತರು ಅವರ ಗುರುಗಳು. ಅವರ ಬೋಧೆಯು ಫಲವನ್ನು ಕೊಡಲಿಕ್ಕೇ ಬೇಕು. ಅದರಂತೆ, ಸರಿಯಾಗಿ ವರ್ತಿಸುವವರು ಸಹ ಸಫಲರಾಗೇ ಆಗುವರು. ಇದಾದರೂ ಸ್ವಾಭಾವಿಕ ಉಪದೇಶವೇ ಆಗಿರುವದು. ಅದು ಯಾವರೀತಿ ಒದಗಿದರೂ ಅಷ್ಟೇ! ಅದಕ್ಕೆ, ಒಣ ಆಡಂಬರದ ಉಪದೇಶವೇ ಬೇಕೆಂಬ ಹಾಗಿಲ್ಲ. ಹೇಗೇ ಆಗಲಿ, ಯೋಗ್ಯ ಜ್ಞಾನವನ್ನು ಪಡೆದು, ಅದರಂತೆ ವರ್ತಿಸುವದೇ ಫಲದಾಯಿಯಾಗಲು ಕಾರಣವಲ್ಲದೆ, ಆಡಂಬರದ ಡಂಭಾಚಾರವು ಮಾತ್ರ ನಿಷ್ಫಲವಾಗುವದು. ನಮ್ಮ ಪ್ರಮಾಥರು ಸತ್ಯವನ್ನು ಸಾಧಿಸಲು ಹೇಳಿರುವರಲ್ಲದೆ, ಬಾಹ್ಯಾಡಂಬರವನ್ನು ಎಲ್ಲಿಯೂ ಹೇಳಿಲ್ಲ. ಸ್ವಾರ್ಥಿಗಳು ಶಿಷ್ಯರನ್ನು ಪಡೆದುಕೊಂಡು, ಅವರ ತನುಮೂಲಕ ಸೇವೆಯನ್ನೂ, ಮನೋಮೂಲಕ ಶುಶ್ರೂಷೆಯನ್ನೂ, ಧನಮೂಲಕ ಅನಾಯಾಸವಾಗಿ ತಮ್ಮಗೆ ಉಂಡುಟ್ಟು ಲೋಲಾಡುವ ಸುಖವನ್ನೂ ಪಡೆಯಬೇಕೆಂದು, ಹೊಂಚು ಹಾಕಿಕೊಂಡು ಕುಳಿತಿರುವರು.

(೨) ಜಪವನ್ನು ಸೃಷ್ಟಿ-ಸ್ಥಿತಿ-ಲಯವನ್ನು ಅರಿತು, ಯೋಗ್ಯ ರೀತಿಯಿಂದ ಮಾಡಬೇಕಲ್ಲದೆ, ಮನಬಂದಂತೆ ನಡೆದು, ಲಯಕ್ರಮವಿಡದು ಜಪಿಸಿದ್ದಾದರೆ ವಿನಾಕಾರಣ ನಾಶವಾಗಿ ಹೋಗುವದು. ಫಲವಂತೂ ಒತ್ತಟ್ಟಿಗೆ ಉಳಿಯಿತು. ತಿರುಗಿ ನಷ್ಟದ ಕಂಠಮಾಲೆ ಮಾತ್ರ ಕೊರಳಿಗೆ ಸಿಗಬೀಳುವದು.

ಇದರ ಪರಿಹಾರ:- ಸೃಷ್ಟಿ = (ಮತ್ತೆ ಹೊಸದಾಗಿ) ಹುಟ್ಟುವಿಕೆ. ಸ್ಥಿತಿ = (ಇದ್ದಂತೆಯೇ) ಇರುವಿಕೆ. ಲಯ = (ಇದ್ದದ್ದು) ಅಳಿದು ಹೋಗುವಿಕೆ. ಈ ಮೂರರಲ್ಲಿ ಪ್ರಾಪಂಚಿಕರು ಸೃಷ್ಟಿ ಜಪವನ್ನೇ ಮುಖ್ಯವಾಗಿ ಸ್ವೀಕರಿಸುವರು. ಅದು ಫಲಕಾರಿಯಾಗದಿದ್ದಲ್ಲಿ ಕಡೆಗೆ ಸ್ಥಿತಿ ಜಪದ ಪರಿಣಾಮವಾದರೂ ಉಳಿಯಲಿ ಎಂದು ಇಚ್ಛಿಸುವರು. ಲಯ ಜಪದ ಫಲಿತವು ಅವರಿಗೆ ಸಹಜವಾಗಿ ಬೇಡವೇ ಬೇಡ! ಆದುದರಿಂದ ವೀರಶೈವರು ಯಾರು? ಎಂಬುದನ್ನು ಮೊದಲು ಇಲ್ಲಿ ಅವಶ್ಯವಾಗಿ ಲಕ್ಷಿಸಬೇಕು. ಇವರು ಕಂಡಿರುವ ಮಕ್ಕಳನ್ನು ಸಲಹುತ್ತಿದ್ದರೂ ಪ್ರಪಂಚದಲ್ಲಿ ತಲ್ಲೀನರಾಗಿ ಹೋಗುವ ಮೂಢ ಅಜ್ಞಜನರಲ್ಲ! ಅವರು ಹೆಸರಿಗೆ ಪ್ರಾಪಂಚಿಕರಾಗಿದ್ದರೂ, ಯಾವಾಗಲೂ ಆ ವಿಷಯದಲ್ಲಿ ಅಲಿಪ್ತರು; ಕೆಸರೊಳಗಿನ ಕುಂಬಾರ ಹುಳುವಿನಂತೆ ಕಲ್ಲಿನ ನೀರೊಳಗಿನ ಕಮಲದಂತೆ, ಪ್ರಪಂಚದಲ್ಲಿ ವಾಸಿಸುವರು. ಅವರ ದೃಷ್ಟಿಯು ಸರ್ವದಾ ಲಿಂಗಾಂಗ ಸಾಮರಸ್ಯದತ್ತ ಹೊರಳುವುದು. ಅವರಿಗೆ ಭವಿಗಳಂತೆ ಹುಟ್ಟುವವರೂ ಬೇಡ; ಇದು ಸ್ಥಿತಿಯನ್ನು ಹಾಗೇ ಉಳಿದುಬಿಡಲಿ, ಎಂಬ ಕಾಂಕ್ಷೆಯೂ ಇಲ್ಲ. ತಾವು ಏಕಮೇವಾದ್ವಿತೀಯ ತತ್ವವನ್ನು (ಲಿಂಗಾಂಗೈಕ್ಯವನ್ನು) ಹೊಂದಬೇಕೆಂಬ ಧ್ಯೇಯವನ್ನಿಟ್ಟುಕೊಂಡವರು. ಆ ಕಾರಣ ಅವರಿಗೆ ಅಥಾತಃ ಲಯಜಪದ ಇಷ್ಟವೇ ಇಷ್ಟವಾದುದು. ಅದೇ ಜಪವು ಘಟಿಸಿ ಸ್ವಪ್ನದಂತಿರುವ ಪ್ರಪಂಚದಲ್ಲಿ ಇದ್ದುದೆಲ್ಲ ಅಳಿದುಹೋಗಿ, ತಾನು (ದೇಹ) ತನ್ನ ಮನ-ಬುದ್ಧಿ-ಚಿತ್ತ ಮೊದಲಾದುವೆಲ್ಲ ನಷ್ಟವಾಗಿ, ಎಲ್ಲೆಲ್ಲಿಯೂ ಪ್ರಸಾದ ಒಂದೇ ತೋರುತ್ತಿರುವ ಸ್ಥಿತಿಯೊದಗಿದರೆ, "ರೋಗಿಯು ಬಯಸಿದ್ದೂ ಹಾಲೋಗರ, ವೈದ್ಯ ಹೇಳಿದ್ದೂ ಹಾಲೋಗರ" ಎಂಬ ಗಾದೆಯಂತೆ ಒಳಿತೇ ಆಗುವದು. ನಿರ್ದೇಹಾಗಮ, ನಿರ್ಭಾವಾಗಮ, ನಷ್ಟಾಗಮಗಳನ್ನು ಲಿಂಗಧಾರಿಯು ಹೊಂದಬೇಕೆಂಬುದನ್ನು ಷಟ್‌ಸ್ಥಲ ಮಾರ್ಗವನ್ನರಿತವರು ಮೊದಲೇ ತಿಳಿದುಬಿಟ್ಟಿರುವರು. ಆ ಕಾರಣ ಪ್ರಸಾದ ಸ್ವಾಯತ್ತರಾದ ನಿಷ್ಪೃಹ ಲಿಂಗವಂತರು ಸೃಷ್ಟಿ-ಸ್ಥಿತಿ-ಲಯ ಜಪಗಳತ್ತ ನೋಡುವ ಕಾರಣವೇ ಇಲ್ಲ. ಯಾವ ಜಪದ ಫಲವು ಗಂಟುಬಿದ್ದರೂ ಸರಿಯೇ. ಸೃಷ್ಟಿ-ಸ್ಥಿತಿ ಜಪಗಳೊದಗಿ ಅವುಗಳ ಫಲಿತವು ಒದಗಿದರೆ, "ಇನ್ನೂ ತನ್ನ ಕರ್ಮ ಹರಿದು ಉದಯಕಾಲ ಬಂದಿಲ್ಲ"ವೆಂದರಿಯಬೇಕು. ಲಯ ಜಪವು ನಡೆದು ಅದು ಫಲಿಸಿದರೆ "ಅವನ ಉದ್ಧಾರಕಾಲವು ಬಂದಿರುವದೆಂದರಿಯಬೇಕು ಇಷ್ಟೇ.

ಮುಂಜಾವು ಸಾಯಂಕಾಲಗಳಲ್ಲಿ ಸಂಕ್ಷಿಪ್ತ ಪೂಜೆಗಳನ್ನು ಮಾಡಿದರೂ ಅಡ್ಡಿಯಿಲ್ಲ. ಆಗ ಬರಿಯ ಹಸ್ತಜಪದ ಪೂಜೆಯೇ ಸಾಕು. ಅದರಿಂದ ೧೨ ಪ್ರಣವಗಳೂ, ೧೨ ಇಲ್ಲವೆ ೯ ಲಿಂಗಗಳೂ ಕಣ್ಣೆದುರು ಬರುವವು. ಮಧ್ಯಾಹ್ನ ಮಾತ್ರ ಹೆಚ್ಚು ಪ್ರಕಶ ಪೂಜೆಯನ್ನು ಮಾಡುವದು ಒಳಿತು. ಆಗ ಮೊದಲು ಪಂಚಾಕ್ಷರೀ ಮಂತ್ರಜಪ, ಮಹಾಲಿಂಗ ಮಂತ್ರಜಪ, ನವ ಲಿಂಗಗಳ ಜಪ, ಹಂಸ ಮಂತ್ರಜಪ, ಈ ನಾಲ್ಕರಲ್ಲಿ ತನಗೆ ಸಲ್ಲುವಷ್ಟು (ಒಂದು, ಎರಡು, ಮೂರು ಅಥವಾ ನಾಲ್ಕೂ) ಜಪಮಾಡಿ, ಕೊನೆಗೆ ಹಸ್ತಜಪವನ್ನು ಮಾಡಿ ಮುಗಿಸಬೇಕು. ಆಗ ಮಂಗಲಾರುತಿ ಮಾಡಿ ನಮಸ್ಕಾರಗಳನ್ನು ಸಮರ್ಪಿಸಬೇಕು

(೨) ಪ್ರಸಾದವನ್ನು ಸೇವಿಸುವದು— ಊಟದ ಕಾಲಕ್ಕೆ ಆ ಪದಾರ್ಥಗಳನ್ನು ಲಿಂಗಾರ್ಪಿತಮಾಡಿ, ಆ ಲಿಂಗಪ್ರಸಾದವನ್ನೇ ಸೇವಿಸಬೇಕು. ಹಾಗೆಯೇ ಎಂದೂ ತಕ್ಕೊಳ್ಳಬಾರದು.

"ಲಿಂಗಕ್ಕೆ ತೋರಿಸದೆ ಅಂಗಕ್ಕೆ ಕೊಂಡೊಡೆ ।
ತಿಂಗಳಲಿ ಸತ್ತ ಹಳೆ ನಾಯಿ ಮಾಂಸವನು ।
ನುಂಗಿದಂತಕ್ಕು ಸರ್ವಜ್ಞ ॥೧॥"

ಎಂದು ಸರ್ವಜ್ಞ ಮೂರ್ತಿಯು ಹೇಳಿದ್ದಾನೆ. ಈ ಮಾತು ಯಾವಾಗಲೂ ನೆನಪಿಡಬೇಕು. ಪ್ರಸಾದದ ವಿಷಯವಾಗಿ ಹೆಚ್ಚಿಗೆ ತಿಳಿಯಲಪೇಕ್ಷಿಸುವವರು. ಈ ಮೊದಲು ಬರೆದ ಎರಡೂ ವಿಧದ [೩೬ ಮತ್ತು ೧೦೧ ಸ್ಥಲಗಳ] ಲೇಖನದೊಳಗಿನ ಪ್ರಸಾದಿ, ಪ್ರಾಣಲಿಂಗಿ, ಶರಣ, ಸ್ಥಲಗಳಲ್ಲಿ ಹೇಳಿದುದನ್ನು ಗಮನಿಸಬೇಕು.

[೩] ಸ್ನಾನ ಮಾಡುವದರ ವಿಷಯವಾಗಿ— ಸ್ನಾನಮಾಡಿ ಶುಚಿಯಾಗಿ ಲಿಂಗಪೂಜೆ ಮಾಡಬೇಕೆಂದು ಹೇಳುತ್ತಾರಷ್ಟೇ. ಅದೇನೂ ಕೆಡಕಲ್ಲ. ತ್ರಿಕಾಲ ಸ್ನಾನಮಾಡುವದು ದುಸ್ತರವಾಗುವದು. ಒಮ್ಮೆ ಸ್ನಾನ ಮಾಡುವದೇ ಅನೇಕರಿಗೆ ಜಡವಾಗುವದು. ಆ ಕಾರಣ ಸ್ನಾನಕ್ಕೂ ಲಿಂಗ ಪೂಜೆಗೂ ಗಂಟುಹಾಕಿದರೆ, ಲಿಂಗಪೂಜೆಯೇ ನಿಂತುಬಿಡಬಹುದು; ಅಥವಾ ಉಳಿದ ಕೆಲಸಗಳೆಲ್ಲ ನಿಲ್ಲಬಹುದು. ಆದುದರಿಂದ ಸ್ನಾನಕ್ಕೆಯೇ ಹೆಚ್ಚು ಮಹತ್ವಕೊಡಬಾರದು. ಜಳಕದಿಂದ ಹೊರಗಿನ ಮೈ ಮಾತ್ರ ಹಸನಾಗುವದು. ಆದರೆ ಒಳಗಿನ ಮನಸ್ಸೇನೂ ಅದರಿಂದ ನಿರ್ಮಲವಾಗಲಾರದು.

ಅಂತೇ "ಮುಡಿ ತಾಂ ನಿರ್ಮಲ ಚಿತ್ತನೈ ಹರಹರಾ ಶ್ರೀ ಚೆನ್ನ ಸೋಮೇಶ್ವರಾ" ಎಂದು ಹೇಳಿದ್ದಾರೆ. ಲಿಂಗಪೂಜೆಗೆ ಈ ಮನಸ್ಸು ಶುದ್ಧವಿರುವದು ಬಹು ಅವಶ್ಯ. ಲಿಂಗವಂತರು ಮನವನ್ನು ಯಾವಾಗಲೂ ಪರಿಶುದ್ಧವಿರಿಸಿಕೊಂಡಿರಬೇಕು. ಅಂತೇ "ಲಿಂಗಧಾರೀ ಸದಾ ಶುಚಿಃ" ಎಂದು ಹೇಳುವರು. ಆ ಕಾರಣ ದಿನಾಲು ಮಧ್ಯಾಹ್ನದ ಲಿಂಗಪೂಜೆಯ ಕಾಲಕ್ಕೊಮ್ಮೆಯೇ ಜಳಕ ಮಾಡಿದರೆ ಸಾಕು. ಮುಂಜಾವು ಸಂಜೆಗೆ ಬರೇ ಕೈಕಾಲು ತೊಳೆದುಕೊಂಡು, ವಿಭೂತಿಯ ಉದ್ಧೂಳನ ಮಾಡಿಕೊಂಡು, ಲಿಂಗಪೂಜೆ ಮಾಡತಕ್ಕದು. ಜ್ವರಾದಿ ರೋಗಪೀಡಿತನಾದಾಗ, ಅವಶ್ಯವಿದ್ದರೆ, ಮಧ್ಯಾಹ್ನಕ್ಕಾದರೂ ಸ್ನಾನಮಾಡುವನ್ನು ಬಿಟ್ಟುಬಿಡಬೇಕು. ಬರಿಯ ಕರಚರಣ ಮುಖಮಾರ್ಜನ ಮಾಡಿಕೊಂಡು, ಭಸ್ಮೋದ್ಧೂಳನ ಭಸ್ಮಸ್ನಾನದಿಂದಲೇ ಶುಚಿಯಾಗಿ, ಲಿಂಗಪೂಜೆ ಮಾಡಿಕೊಳ್ಳಬೇಕು. ಸಾಗ್ರ ಪೂಜೆ ಮಾಡಿಕೊಳ್ಳಲಿಕ್ಕೆ ಆಗದಿದ್ದರೆ, ಆಗಲೂ ಕೂಡ ಹಸ್ತ ಜಪದಿಂದಲೇ ಮುಗಿಸಬೇಕು. ಆದರೆ ಮನಸ್ಸನ್ನು ಮಾತ್ರ, ಯಾವಾಗಲೂ ಮಡಿಯಾಗಿಯೇ ಇರಿಸಿಕೊಂಡಿರಬೇಕು. ಲಿಂಗ ಪೂಜೆಗೆ ಸ್ನಾನವು ಅತ್ಯವಶ್ಯವೆಂದು ಅಯ್ಯಗಳವರು ಹೇಳುವರು. ಆದರೆ ಅದೇನೂ ಅಷ್ಟು ಗಣ್ಯವಾದುದಲ್ಲ. ಶ್ರೀ ಬಸವಣ್ಣನವರು "ನೀರ ಕಂಡಲ್ಲಿ ಮುಳುಗುವರು, ಮರನ ಕಂಡಲ್ಲಿ ಸುತ್ತುವರು, ಬತ್ತುವ ಜಲವನು, ಒಣಗುವ ಮರನನು, ನಂಬಿದವರ ಕೂಡಲಸಂಗಮದೇವಾ. (ಲಿಂಗದೇವಾ) ನಿಮ್ಮನೇನು ಬಲ್ಲರವರು !" ಎಂದು ಹೇಳಿದ್ದಾರೆ. ಆದಕಾರಣ ಅವರ ಮಾತು ಅಷ್ಟೇನು ಪುರಸ್ಕರಣೀಯವಲ್ಲ.

(೪) ನಮ್ಮ ಹೃದಯದ ಅನಾಹತ ಚಕ್ರದಲ್ಲಿ ಜೀವಹಂಸನು ಇರುತ್ತಿರುವನು. ಇದು ಆ ಜೀವನ ಕೇಂದ್ರಸ್ಥಾನವು. ಅದೇ ಜೀವನು ದೇಹದ ಪ್ರತಿಯೊಂದು ಕಣದಲ್ಲಿಯೂ ತುಂಬಿ ತುಳುಕುತ್ತಿರುವನು. ಹವೆಯೊಳಗಿನ ಪ್ರಾಣವಾಯುವನ್ನು ನಾವು ಯಾವಾಗಲೂ ಉಪಂಡಿಸುತ್ತಿರುವದು ಈ ಜೀವದ ರಕ್ಷಣೆಗಾಗಿಯೇ. ಈ ಕ್ರಿಯೆಯು ನಿಂತರೆ, ಪ್ರಾಣವು ಹೋಗಿಬಿಡುವದು. ಅನಾಹತ ಚಕ್ರಕ್ಕೆ ಮೇಲೆ ೮, ಕೆಳಗೆ ೪, ಹೀಗೆ ೧೨ ದಳಗಳಿರುವವು. ಜೀವನು ಜಗತ್ತಿನತ್ತ ಮುಖತಿರುವಿದಾಗ ಮೇಲಿನ ೮ ದಳಗಳಲ್ಲಿ ಸುತ್ತುರುಗುವನು. ಹೀಗೆ ಬಹುಕಾಲ ತಿರುಗಿ ತಿರುಗಿ ಪ್ರಪಂಚವು ದುಃಖಕಾರಕವೂ, ವಿನಾಶಿಯೂ ಇರುವದೆಂದು ಅನುಭವ ಪಡೆದು, ಅದರ ವಿಷಯವಾಗಿ ಹೇಯ ಬುದ್ಧಿಯು ಹುಟ್ಟಿತೆಂದರೆ, ಅವನು ಸ್ವಸ್ಥಿರ್ಕರ್ಣನಾದ

ಶಿವನತ್ತ ಮುಖದಿರುವುವನು. ಆಗ ತನ್ನ ಗುರುವಿನಿಂದ ಲಿಂಗ (ಶಿವ) ದೀಕ್ಷೆ ಹೊಂದಿ, ಭಕ್ತನಾಗುವನು. ಮೇಲಿನ ದಳಗಳನ್ನು ಬಿಟ್ಟು ಕೆಳಗಿನ ದಳಗಳಲ್ಲಿ ಸಂಚರಿಸಹತ್ತುವನು. ಆ ದಳಗಳು-ಜಾಗ್ರತ್ತು ವೈರಾಗ್ಯ, ಸ್ವಪ್ನ ಸುಷುಪ್ತಿ (ಲಿಂಗಸಮಾಧಿ) ಎಂದಿರುವವು. ವೈರಾಗ್ಯವು ಹೋಗಿ ಅರಿವು ಉಂಟಾಗುವದೇ ಜಾಗ್ರತ್ತು. ಇಂತಹ ಜಾಗ್ರತ್ತನ್ನು ಪಡೆದನಂತರ ಅವನಿಗೆ ಪ್ರಪಂಚದಲ್ಲಿ ವೈರಾಗ್ಯ ಹುಟ್ಟುವದು. ಆಗ ಆತನು ವಿರಕ್ತ (ಅಲಿಪ್ತ ಸಂಸಾರಿ)ಯಾಗುವನು. ಮುಂದೆ ಬರುಬರುತ್ತ ಪ್ರಪಂಚವೆಲ್ಲ ಒಂದು ಸ್ವಪ್ನ ಎಂದು ತಿಳಿದು, ಲಿಂಗ (ಸ್ವಜ್ಞಾನ) ಪೂಜೆಯನ್ನು ಭಕ್ತಿಪುರಸ್ಸರವಾಗಿ ಮಾಡಿ, ಜಪ, ಧ್ಯಾನ, ಸಮಾಧಿಗಳನ್ನು ಹೊಂದುವನು. ಈ ವಿಧದಲ್ಲಿ ಲಿಂಗದಲ್ಲಿ ಸಮಾಧಿಸ್ಥ (ಸಮರಸ ಭಾವವುಳ್ಳವ) ನಾದ ಆತನೇ ಶರಣ-ಜೀವನ್ಮುಕ್ತ-ಸತ್ಪುರುಷ-ಪರಮಹಂಸನೆನಿಸುವನು. ಅವನೇ ಸದಾಗತಿಹಂಸ ಅಂದರೆ ಶಿವನಾಗಿಬಿಡುವನು. ಸತ್+ಅ+ಗತಿ= ಸದಾಗತಿ (ಸತ್ತನಂತರ ಉತ್ತರದ ಗತಿಯುಳ್ಳವನು) ಇಲ್ಲವೆ ಸದ್ಗತಿ ಹೊಂದಿದವನು. ಹೀಗೆ ಸದಾಗತಿ ಹಂಸನಾಗುವದೇ ವೀರಶೈವನ ಧ್ಯೇಯವು.

# ಷ. ಬ್ರ. ಭಕ್ತಸ್ಥಲವೂ ಭಗವದ್ಗೀತೆಯೂ.

(ಲೇಖಕ:— ಶ್ರೀ. ಸಿ. ನಾ. ಮಹಾಂತಣ್ಣನವರು,—ಹನೂರು)

[ಹಿಂದಿನಿಂದ ಮುಂದೆ ಸಾಗಿದ್ದು]

—: ಶ್ರೀ :—

ಪಿಂಡಸ್ಥಲ:— ಅಪರೇಯಮಿತಸ್ತ್ವನ್ಯಾಂ ಪ್ರಕೃತಿಂ ವಿದ್ಧಿ ಮೇ ಪರಾಂ। ಜೀವಭೂತಾಂ ಮಹಾಬಾಹೋ ಯಯೇದಂ ಧಾರ್ಯತೇ ಜಗತ್ ॥

ಏತದ್ಯೋನೀನಿ ಭೂತಾನಿ ಸರ್ವಾಣೀತ್ಯುಪಧಾರಯ। ಅಹಂ ಕೃತ್ಸ್ನಸ್ಯ ಜಗತಃ ಪ್ರಭವಃ ಪ್ರಲಯಸ್ತಥಾ ॥

ಮತ್ತಃ ಪರತರಂ ನಾನ್ಯತ್ಕಿಂಚಿದಸ್ತಿ ಧನಂಜಯ। ಮಯಿ ಸರ್ವಮಿದಂ ಪ್ರೋತಂ ಸೂತ್ರೇ ಮಣಿಗಣಾ ಇವ ॥

ಶಿವಶರಣರು ಈ ಸ್ಥಲದಲ್ಲಿ ಮಣಿಗಳ ಸೂತ್ರದಂತೆ ತ್ರಿಣಯನನೆ ಇರಿಸಿಪ್ಪೆಯಯ್ಯ, ಆತ್ಮನೊಳಪ್ಪನೇ ತನು ಭಿನ್ನ ಅಣುರೇಣು ಮಧ್ಯದೊಳು ಗುಣಭೂತ ನೀನೆಂದು ಮಣಿಯುತಿಪ್ಪೆನಯ್ಯ ರಾಮನಾಥಾ ||

ಪಿಂಡಜ್ಞಾನಸ್ಥಲ:— ಪರಸ್ತಸ್ಮಾತ್ತು ಭಾವೋಽನ್ಯೋಽವ್ಯಕ್ತೋಽವ್ಯಕ್ತಾತ್ ಸನಾತನಃ। ಯಃ ಸ ಸರ್ವೇಷು ಭೂತೇಷು ನಶ್ಯತ್ಸು ನ ವಿನಶ್ಯತಿ ॥

ಪುರುಷಃ ಸ ಪರಃ ಪಾರ್ಥ ಭಕ್ತ್ಯಾ ಲಭ್ಯಸ್ತ್ವನನ್ಯಯಾ। ಯಸ್ಯಾಂತಃಸ್ಥಾನಿ ಭೂತಾನಿ ಯೇನ ಸರ್ವಮಿದಂ ತತಮ್ ॥

ಅಯ್ಯಾ ನೀನು ನಿರಾಕಾರವಾಗಿದ್ದಲ್ಲಿ ನಾನು ಜ್ಞಾನವೆಂಬ ವಾಹನವಾಗಿದ್ದೆ ಕಾಣಾ, ನೀನು ನಾಟ್ಯಕ್ಕೆ ನಿಂದಲ್ಲಿ ಚೈತನ್ಯವೆಂಬ ವಾದನವಾಗಿದ್ದೆ ಕಾಣಾ, ನೀನು ಸಾಕಾರವಾಗಿದ್ದಲ್ಲಿ ನಾನು ವೃಷಭನೆಂಬ ವಾಹನವಾಗಿದ್ದೆ ಕಾಣಾ, ನೀನು ನಾಟ್ಯಕ್ಕೆ ನಿಂದಲ್ಲಿ ಚೈತನ್ಯವೆಂಬ ವಾದನವಾಗಿದ್ದೆ ಕಾಣಾ, ನೀನು ಸಾಕಾರವಾಗಿದ್ದಲ್ಲಿ ನಾನು ವೃಷಭನೆಂಬ ವಾಹನವಾಗಿದ್ದೆ ಕಾಣಾ, ನೀನು ಎನ್ನ ಭವವ ಕೊಂದಿಹೆನೆಂದು ಜಂಗಮವಾಗಿ ಬಂದಲ್ಲಿ ನಾನು ಭಕ್ತನೆಂಬ ವಾಹನವಾಗಿದ್ದೆ ಕಾಣಾ ಕೂಡಲಸಂಗಮದೇವಾ.

ಸಂಸಾರಹೇಯಸ್ಥಲ:— ನ ಹಿ ಪ್ರ ಪಶ್ಯಾಮಿ ಮಮಾಪನುದ್ಯಾ | ದ್ಯಚ್ಛೋಕಮುಚ್ಛೋಷಣಮಿಂದ್ರಿಯಾಣಾಂ॥ ಅವಾಪ್ಯ ಭೂಮಾವಸಪತ್ನ ಮೃದ್ಧಂ। ರಾಜ್ಯಂ ಸುರಾಣಾಮಪಿ ಚಾಧಿಪತ್ಯಂ ॥

ಅಥಚೈನಂ ನಿತ್ಯ ಜಾತಂ ನಿತ್ಯಂ ವಾಮನ್ಯಸೇ ಮೃತಂ | ತಥಾ ಪಿ ತ್ವಂ ಮಹಾಬಾಹೋನೈನಂ ಶೋಚಿತುಮರ್ಹಸಿ ॥

ಕಪ್ಪೆ ಸರ್ಪನ ನೆಳಲಲ್ಲಿ ಇರ್ಪಂತೆ ಎನಗಾಯಿತ್ತಯ್ಯ; ಅಕಟಕಟಾ ಸಂಸಾರವೃಥಾ ಹೋಯಿತಲ್ಲಾ. ಕರ್ತೃ ಕೂಡಲಸಂಗಮದೇವಾ; ಇವನ ತಪ್ಪಿಸಿ ಎನ್ನನು ರಕ್ಷಿಸಯ್ಯ ಪ್ರಭುವೇ.

ಜ್ಞಾನಬೋಧ ಮಾಡುವ ಕೃಷ್ಣನು ಅರ್ಜುನನಿಗೆ ಗುರುಕಾರುಣ್ಯವು ಅವಶ್ಯವೆಂಬದನ್ನು ಹೇಳುವನು.

ಗುರುಕಾರುಣ್ಯಸ್ಥಲಃ – ಅನ್ಯೇ ತ್ವೇವಮಜಾನಂತಃ ಶ್ರುತ್ವಾನ್ಯೇಭ್ಯ ಉಪಾಸತೆ | ತೇಽಪಿ ಚಾತಿತರಂತ್ಯೇವ ಮೃತ್ಯುಂ ಶ್ರುತಿಪರಾಯಣಾಃ ||

ಮಡಿಕೆಯ ಮಾಡುವರೆ ಮಣ್ಣೇ ಮೊದಲು, ತೊಡಗೆಯ ಮಾಡುವರೇ ಹೊನ್ನೇ ಮೊದಲು, ಶಿವಪಥವನರಿವಡೆ ಗುರುಪಥವೇ ಮೊದಲು ಕೂಡಲಸಂಗಮನರಿವಡೆ ಶರಣರ ಸಂಗವೇ ಮೊದಲು.

ಲಿಂಗಧಾರಣಸ್ಥಲಃ—ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ | ಭ್ರಾಮಯನ್ಸರ್ವಭೂತಾನಿ ಯಂತ್ರಾರೂಢಾನಿ ಮಾಯಯಾ॥

ತಮೇವ ಶರಣಂಗಚ್ಛ ಸರ್ವಭಾವೇನ ಭಾರತ | ತತ್ಪ್ರಸಾದಾತ್ಪರಾಂ ಶಾಂತಿಂ ಸ್ಥಾನಂ ಪ್ರಾಪ್ಸ್ಯಸಿ ಶಾಶ್ವತಂ ||

ಮನ್ಮನಾ ಭವ ಭಕ್ತೋ ಮದ್ಯಾಜೀ ಮಾಂ ನಮಸ್ಕುರು | ಮಾಮೇ ವೈಷ್ಯಸಿ ಸತ್ಯಂ ತೇ ಪ್ರತಿಜಾನೇ ಪ್ರಿಯೋಽಸಿ ಮೇ ॥

ಲಿಂಗದ ಉಂಡಿಗೆಯ ಪಶುವಾನಯ್ಯ ವೇಷಧಾರಿಯಾನು, ಉದರ ಪೋಷಕನಾನು ಕೂಡಲಸಂಗನ ಶರಣರ ಧರ್ಮದ ಕಪಲೆಯಾನು.

ಮಂತ್ರಸ್ಥಲ:— ಓಮಿತ್ಯೇಕಾಕ್ಷರಂ ಬ್ರಹ್ಮ ವ್ಯಾಹರನ್ ಮಾಮನು ಸ್ಮರನ್ । ಯಃ ಪ್ರಯಾತಿ ತ್ಯಜನ್ ದೇಹಂ ಸಯಾತಿ ಪರಮಾಂಗತಿಂ.

ಪಾತಕ ಶತಕೋಟಿಗಳನೊರೆದು ಹಾಕಲು ಸಾಲದೆ ಒಂದು ಶಿವ ನಾಮ? ಸಾಲದೆ ಒಂದು ಶರಣಾಮ? ಕೂಡಲಸಂಗಮದೇವಾ ನಿಮ್ಮ ಉಂಡಿಗೆಯ ಪಶುವ ಮಾಡಿದೆಯಾಗಿ.

ವಿಭೂತಿಸ್ಥಲಃ— ಯದ್ಯದ್ವಿಭೂತಿಮತ್ಸತ್ವಂ ಶ್ರೀಮದೂರ್ಜಿತಮೇವ ವಾ । ತತ್ತದೇವಾವಗಚ್ಛತ್ವಂ ಮಮತೇಜೋಂsಶ ಸಂಭವಮ್ ॥

ನೀರಿಗೆ ನೈದಲು ಶೃಂಗಾರ, ಸಮುದ್ರಕ್ಕೆ ತೆರೆಯು ಶೃಂಗಾರ, ನಾರಿಗೆ ಗುಣವೇ ಶೃಂಗಾರ, ಗಗನಕ್ಕೆ ಚಂದ್ರಮನೇ ಶೃಂಗಾರ, ಕೂಡಲ ಸಂಗನ ಶರಣರಿಗೆ ನೊಸಲ ವಿಭೂತಿಯೇ ಶೃಂಗಾರ ॥

ರುದ್ರಾಕ್ಷಿಸ್ಥಲಃ— ವಿಭೂತಿ ಸ್ಥಲದಲ್ಲಿ ನಿರ್ದೇಶಿಸಿದ ಶ್ಲೋಕದಂತೆ ತೇಜವುಳ್ಳ ಎಲ್ಲ ಪದಾರ್ಥಗಳಲ್ಲಿ ಬ್ರಹ್ಮಾಂಶವಿರುತ್ತದೆ ಎಂದು ಹೇಳಿದ್ದ ರಿಂದಲೂ, ಸ್ಥಿತಪ್ರಜ್ಞೆ, ಸ್ಥಿತಧೀ ಇವುಗಳ ಸ್ಪಷ್ಟೀಕರಣದಿಂದಲೂ ವೀರ ಶೈವ ಅಂತರಂಗಷ್ಟಾವರಣಗಳಲ್ಲಿ ಬುದ್ಧಿಯು ರುದ್ರಾಕ್ಷಿಸ್ಥಲವಾದ್ದರಿಂದಲೂ ಗೀತೆಯು ರುದ್ರಾಕ್ಷಿಯನ್ನು ಬಾಹ್ಯದಲ್ಲಿ ವ್ಯಕ್ತವಾಡದೆ ಇದ್ದರೂ ರುದ್ರಾ ಕ್ಷಿಯಸ್ಥಲವು ಗರ್ಭಗೀತೆಯಲ್ಲಿ ಅಡಕವಾಗಿದೆ..

ಪರಮ ಶಿವನ ಪರಬ್ರಹ್ಮದೇಹದಲ್ಲಿ ತೊಡಿಗೆಯಾಗಿ, ಪರಮಪುಣ್ಯ ಪುಂಜ ಮಾಲೆಯೆನಿಸಿಯೊಪ್ಪುವಾ ಶರಣಜನ ಮನೋರಥವೆನಿಪ್ಪ ರುದ್ರಾಕ್ಷಿ ಗಳನು ಧರಿಸಿ ಅನುಬದುಕಿದೆನು ಸಂಗ ನಿಮ್ಮೊಳು ॥

ಭಕ್ತಸ್ಥಲಃ— ಗತಸಂಗಸ್ಯ ಮುಕ್ತಸ್ಯ ಜ್ಞಾನಾವಸ್ಥಿತ ಚೇತಸಃ । ಯಜ್ಞಾಯಾಚರಿತಃ ಕರ್ಮ ಸಮಗ್ರಂ ಪ್ರವಿಲೀಯತೇ ॥

ಗೀತವ ಹಾಡಿದಡೇನು ? ಶಾಸ್ತ್ರಪುರಾಣಗಳ ಕೇಳಿದರೇನು ? ವೇದ ವೇದಾಂತವ ನೋಡಿದರೇನು ? ಮನವರಿದು ಲಿಂಗಜಂಗಮವ ಪೂಜಿಸ ಲರಿಯದವ ಎಲ್ಲರಲ್ಲಿ ಸಂಭಾವಿತರಾದರೇನು ? ಭಕ್ತಿ ಇಲ್ಲದವರನೊಲ್ಲ ಕೂಡಲಸಂಗಮದೇವಾ.

ಉಭಯಸ್ಥಲ:— ಗೀತೆಯಲ್ಲಿ ಜ್ಞಾನಬೋಧ ಮಾಡುವ ಶ್ರೀಕೃಷ್ಣನೇ ಜಂಗಮನು, ಅರ್ಜುನನೇ ಭಕ್ತನು, ಶಿವಭಕ್ತರು ಅಧಿಕರು ನೋಡಯ್ಯ. ಇದಕ್ಕೆ ಅಧಿಕವಾಗಿ ಜಂಗಮವ ಕಂಡೆ, ಈ ದ್ವಿವಿಧವ ಒಂದೇ ಎಂದು ನಂಬಿದೆ ಕೂಡಲಸಂಗಮದೇವಾ.

ತ್ರಿವಿಧಸಂಪತ್ಸ್ಥಲ:— ಕೃಷ್ಣನೂ ಪರವಸ್ತುವೂ, ಅರ್ಜುನನೂ ಈ ಮೂರು ವಿಧಗಳೇ ಈ ಸ್ಥಳವು.

ಹೊಲೆಯುಂಟೇ ಲಿಂಗವಿದ್ದೆಡೆಯಲ್ಲಿ ? ಕುಲವುಂಟೇ ಜಂಗಮ ವಿದ್ದೆಡೆಯಲ್ಲಿ ? ಎಂಜಲುಂಟೆ ಪ್ರಸಾದ (ಬೋಧ) ವಿದ್ದೆಡೆಯಲ್ಲಿ ?....... ಕೂಡಲಚನ್ನಸಂಗಯ್ಯ.

ಚತುರ್ವಿಧ ಸಾರಾಯ ಸ್ಥಲಃ— ಗುರುಲಿಂಗ ಜಂಗಮ ಸ್ಥಲದ ಬಗ್ಗೆ ಈ ಮೊದಲೇ ಹೇಳಿದೆ. ನಾಲ್ಕನೆಯದಾದ ಪ್ರಸಾದದ ಬಗ್ಗೆ ಗೀತೆಯು— ಇಷ್ಟಾನ್ ಭೋಗಾನ್‌ಯೋ ದೇವಾ ದಾಸ್ಯಂತೇ ಯಜ್ಞಭಾವಿತಾಃ। ತೈರ್ದತ್ತಾನಪ್ರದಾಯೈಭ್ಯೋಯೋ ಭುಂಕ್ತೇಸ್ತೇನ ಏವಸಃ ||

ಯಜ್ಞಾಶಿಷ್ಟಾಶಿನಃ ಸಂತೋಮುಚ್ಯಂತೇ ಸರ್ವಕಿಲ್ಬಿಷ್ಟೈಃ । ಭುಂಜತೇ ತೇತ್ವಘಂ ಪಾಪಾಯೇ ಪಚಂತ್ಯಾತ್ಮ ಕಾರಣಾತ್ ||

ದಾಸೋಹಂ ಎಂಬ ಭಾವಗೊಂಡು ಗುರುವ ಕಂಡೆ, ಲಿಂಗವ ಕ ಡೆ, ಜಂಗಮವ ಕಂಡೆ. ಇಂತೀ ಚತುರ್ವಿಧ ಸಾರಾಯದಲ್ಲಿ ಸಂಪನ್ನನಾದೆನು ಕಾಣಾ ಕೂಡಲಸಂಗಮದೇವಾ ||

ಉಪಾಧಿ ಮಾಟಸ್ಥಲಃ— ನೇಹಾಭಿಕ್ರಮ ನಾಶೋಸ್ತಿ ಪ್ರತ್ಯವಾಯೋ ನವಿದ್ಯತೇ । ಸ್ವಲ್ಪಗುಪ್ಯಸ್ಯ ಧರ್ಮಸ್ಯತ್ರಾಯತೇ ಮಹತೋಭಯಾತ್ ||

ಗಾಳಿ ಹಡದಲ್ಲಿ ತೂರಿಕೊಳ್ಳಯ್ಯ ಗಾಳಿ ನಿನ್ನಾಧೀನವಲ್ಲ. ನಾಳೆ ತೂರಿಹೆನೆಂದಡೆ ಇಲ್ಲನಯ್ಯ. ಶ್ರೀ ಶಿವಶರಣರೆಂಬುದು ಒಂದೇ ಗಾಳಿ. ಬೇಗ ತೂರಿಕೊಳ್ಳಿರೆಂದ ನಮ್ಮ ಅಂಬಿಗರ ಚೌಡಯ್ಯ ||

ನಿರುಪಾಧಿ ಮಾಟಸ್ಥಲ:- ಯೋಗಸ್ಥಃಕುರು ಕರ್ಮಾಣಿ ಸಂಗಂತ್ಯಕ್ತ್ವಾ ಧನಂಜಯ । ಬುದ್ಧೌ ಶರಣಮನ್ವಿಚ್ಛ ಕೃಪಣಾಃ ಫಲ ಹೇತವಃ ||

ಎನಗೆ ಕುಲದೈವ ಬಲದೈವ ಛಲದೈವ ಮನದೈವ ಮನೆದೈವ ಜಂಗಮ ಮೂರ್ತಿಯಯ್ಯ ತನು ಮನ ಧನ ಮೀಸಲು ಜ್ಞಾನ ಮೀಸಲು ಕೂಡಲಸಂಗಮದೇವಾ ನಿಮ್ಮ ಶರಣರಿಗೆ ||

ಸಹಜ ಮಾಟಸ್ಥಲಃ— ಕರ್ಮಜಂ ಬುದ್ಧಿಯುಕ್ತಾಹಿ ಫಲಂ ತ್ಯಕ್ತ್ವಾ ಮನೀಷಣಃ । ಜನ್ಮ ಬಂಧವಿನಿರ್ಮುಕ್ತಾಃ ಪದಂ ಗಚ್ಛಂತ್ಯನಾಮಯಂ ||

ಮಾಟವಿಲ್ಲದ ಕೂಟವಿದೇಕೋ ? ಮಾಟಕೂಟವೆಂಬೆರಡರ ಅನುವನರಿಯಲೇಬೇಕು. ಮಾಟಕೂಟವೆಂಬೆರಡರ ಅನುವು ಮಾಟದಿಂದಲೇ ಭಕ್ತಿ. ಇದೇ ಕೂಟವು ಕೂಡಲಸಂಗಾ ನಿಮ್ಮಲ್ಲಿ.

ಭಕ್ತನ ಭಕ್ತಸ್ಥಲಃ— ಯಸ್ಯ ಸರ್ವೇ ಸಮಾರಂಭಾಃ ಕಾಮ ಸಂಕಲ ವರ್ಜಿತಾ: ಜ್ಞಾನಾಗ್ನಿ ದಗ್ಧಕರ್ಮಾಣಂ ತಮಾಹುಃ ಪಂಡಿತಂ ಬುಧಾಃ ||

ತನುವಿಲ್ಲದ ಭಕ್ತ, ಮನವಿಲ್ಲದ ಭಕ್ತ, ಧನವಿಲ್ಲದ ಭಕ್ತ, ಪಂಚೇಂದ್ರಿಯ ಸುಖವಿಲ್ಲದ ಭಕ್ತ, ಕಾಯವಿಲ್ಲದ ಭಕ್ತ, ಕರ್ಮವಿಲ್ಲದ ಭಕ್ತ, ಕಲ್ಪಿತ

ವಿಲ್ಲದ ಭಕ್ತ, ಅಶನವರಿಯದ ಭಕ್ತ,...... ಕೂಡಲ ಚನ್ನಸಂಗಯ್ಯನಲ್ಲಿ ಎನ್ನ ಭಕ್ತ ಮಾತಾಪಿತನು ॥

ಭಕ್ತನ ಮಾಹೇಶಸ್ಥಲಃ— ।ತತ್ವವಿತ್ತು ಮಹಾ ಬಾಹೋ ಗುಣಕರ್ಮ ವಿಭಾಗಯೋ: ಗುಣಾ ಗುಣೇಷು ವರ್ತಂತ ಇತಿ ಮತ್ವಾನ ಸಜ್ಜತೇ ॥

ಎಲ್ಲಿ ನೋಡಿದಡಲ್ಲಿ ಮನವನೆರಿಸಿದರೆ, ಆಣೆ ನಿಮ್ಮಾಣೆ, ನಿಮ್ಮ ಪ್ರಮಥರಾಣೆ, ಪುರವಧುವನು ಮಹಾದೇವಿಯೆಂಬೆ ಕೂಡಲಸಂಗಮದೇವಾ ॥

ಭಕ್ತನ ಪ್ರಸಾದಿಸ್ಥಲಃ— ಪ್ರಸಾದಂ ಸರ್ವದುಃಖಾನಾಂ ಹಾನಿರಸ್ಯೋಪಜಾಯತೇ । ಪ್ರಸನ್ನಚೇತಸೋಹ್ಯಾಶು ಬುದ್ಧಿಃ ಪರ್ಯವತಿಷ್ಠತೇ ॥

ಗುರುಲಿಂಗ ಜಂಗಮದಿಂದ ಪಾದೋದಕ ಪ್ರಸಾದವಾಯಿತ್ತು, ಆ ಭಾವವೇ ಮಹಾ ಪ್ರಸಾದವಾಗಿ, ಎನಗೆ ಬೇರೆ ಪ್ರಸಾದವಿಲ್ಲ. ಕೂಡಲ ಸಂಗಮದೇವಾ.

ಭಕ್ತನ ಪ್ರಾಣಲಿಂಗಿ ಸ್ಥಲ: —ಸ್ಪರ್ಶಾನ್ ಕೃತ್ವಾ ಬಹಿರ್ಬಾಹ್ಯಾಂಶ್ಚಕ್ಷುಶ್ಚೈವಾಂತರೇ ಭ್ರುವೋಃ। ಪ್ರಾಣಾಪಾನೌ ಸಮೌಕೃತ್ವಾನಾಸಾಭ್ಯಂತರ ಚಾರಿಣೌ ॥

ಯತೇಂದ್ರಿಯ ಮನೋಬುದ್ಧಿರ್ಮುನಿರ್ಮೋಕ್ಷ ಪರಾಯಣಃ। ವಿಗತೇಚ್ಛಾಭಯ ಕ್ರೋಧೋಯ: ಸದಾ ಮುಕ್ತ ಏವ ಸ: ॥

ಅಷ್ಟದಳ ಸುತ್ತುವ ಜೀವಾತ್ಮನು ತಾನು ಮೆಟ್ಟಿದ ದಳವನರಿಯದೆ ಭಕ್ತನೆಂತಹನು ಆನು ಶರಣನೆಂತೆಂಬೆ, ಆನು ಐಕ್ಯನೆಂತೆಂಬೆ ಎನ್ನ ಮನವು ಸಮಾಧಾನವಕ್ಕರ ಕೂಡಲಸಂಗಮದೇವಾ ॥

ಭಕ್ತನ ಶರಣಸ್ಥಲ: — ಯೋ ಮಾಂ ಪಶ್ಯತಿ ಸರ್ವತ್ರ ಸರ್ವಂಚಮಯಿ ಪಶ್ಯತಿ। ತಸ್ಯಾಹಂ ನ ಪ್ರಣಸ್ಯಾಮಿ ಸಚಮೇನ ಪ್ರಣಶ್ಯತಿ ॥

ನಿಮ್ಮ ನೋಟ ಅನಂತ ಸುಖ, ಕೂಟ ಪರಮ ಸುಖ, ಅಷ್ಟಕೋಟಿ ರೋಮಂಗಳು ಕಂಗಳಾಗಿ ನೋಡುತ್ತಿದ್ದೆನು. ಕೂಡಲಸಂಗಮದೇವಯ್ಯ ನಿಮ್ಮ ನೋಡಿ ಮನದಲ್ಲಿ ರತಿಹುಟ್ಟಿ ನಿಮಿರ್ದವೆನ್ನ ಕಂಗಳು ॥

ಭಕ್ತನ ಐಕ್ಯಸ್ಥಲಃ - ಅವ್ಯಕ್ತೋಕ್ಷರ ಇತ್ಯುಕ್ತಸ್ತಮಾಹುಃ ಪರಮಾಂ ಗತಿಂ। ಯಂ ಪ್ರಾಪ್ಯ ನ ನಿವರ್ತಂತೇ ತದ್ಧಾಮ ಪರಮಂ ಮಮ ॥

ಲಜ್ಜೆಗೆಟ್ಟೆನು, ನಾಣುಗೆಟ್ಟೆನು, ಕುಲಗೆಟ್ಟೆನು, ಛಲಗೆಟ್ಟೆನು, ಸಂಗ ನಿಮ್ಮ ಪೂಜಿಸಿ ಭವಗೆಟ್ಟೆನು ನಾನಯ್ಯ. ಕೂಡಲಸಂಗಮದೇವಯ್ಯ ನಾ ನಿಮ್ಮ ಮುಟ್ಟಿ ಹುಟ್ಟುಗೆಟ್ಟೆನು ॥

ಷಟ್‌ಸ್ಥಲ ಬ್ರಹ್ಮಿಗಳ ಬ್ರಹ್ಮಾನುಭವವು, ಶಿವಾನುಭವದ ಸಂಗದಿಂದ ಹೇಗೆ ಉಂಟಾಗುವದೆಂಬುದನ್ನು ಹೇಳಿದ್ದಾಯಿತು. ಹಾಗು ಷಟ್‌ಸ್ಥಲ ಭಕ್ತನ ಶಿವಾನುಭವಪೂರಿತ ಬ್ರಹ್ಮಾನುಭವಕ್ಕೂ ಭಗವದ್ಗೀತೆಗೂ ಇರುವ ಸಾರೂಪ್ಯವನ್ನು ನಿದರ್ಶನಕ್ಕೆ ತಂದಂತಾಯಿತು. ಭಗವದ್ಗೀತೆಯ ಪ್ರತಿಯೊಂದು ತತ್ವದ ಅನುಭಾವವು ಶಿವಶರಣರ ತತ್ವಾನುಭವದ ವಚನಗಳಲ್ಲಿ ಕಾಣಬಹುದು. ಭಗವದ್ಗೀತೆಯೊಳು ೨ನೇ ಅಧ್ಯಾಯದ ಕಡೆಯದಾದ ಬ್ರಾಹ್ಮೀ ಸ್ಥಿತಿಯನ್ನು ಸಾರುವ "ಏಷಾಃ ಬ್ರಾಹ್ಮೀಸ್ಥಿತಿಃ ಪಾರ್ಥ ನೈನಾಂ ಪ್ರಾಪ್ಯ ವಿಮುಹ್ಯತಿ। ಸ್ಥಿತ್ವಾsಸ್ಯಾಮಂತ ಕಾಲೇsಪಿ ಬ್ರಹ್ಮನಿರ್ವಾಣ ಮೃಚ್ಛತಿ" ಎಂಬಂತೆ |"ಅಡವಿಯಾರಣ್ಯದೊಳು ಮಡಿವನಕ ತಪವಿದ್ದು, ಮಡಿವಾಗ ಮೃಢನ ಮರೆದೊಡೆ ತುಂಬಿದ ಸಕ್ಕರೆಯ ಮಡುವಿನೊಳು ಬಿದ್ದಂತೆ ಕಾಣಾ ರಾಮನಾಥಾ ।

ಇನ್ನು ಷಟ್‌ಸ್ಥಲಗಳ ಬಗ್ಗೆ ವಿಚಾರಿಸಲು, ವ್ಯವಹಾರದಲ್ಲಿ ಪಂಚ ಪದಾರ್ಥಗಳ ಮಿಶ್ರಣದ ಚಟ್ನಿಯನ್ನು ಮಾಡುವದಾದರೆ, ಹಸೀ ಕಡ್ಲಿ [ಶುಲಗಾಯಿ] ಹಸಿಖೊಬ್ಬರಿ, ಹಸಿಮೆಣಸಿನಕಾಯಿ, ಹಸಿಹುಣಶಿಕಾಯಿ, ಉಪ್ಪು ಇವುಗಳಲ್ಲಿ ಹಸಿಕಡ್ಲಿಯನ್ನು ಹೆಚ್ಚುಹಾಕಿ, ಉಳಿದ ನಾಲ್ಕು ಪದಾರ್ಥಗಳನ್ನು ಅಲ್ಪಪ್ರಮಾಣದಿಂದ ಬೆರಿಸಿ, ಚಟ್ನಿಯನ್ನು ಅರೆದರೆ ಕಡ್ಲಿ ಚಟ್ನಿ [ಭಕ್ತಸ್ಥಲ] ಎನ್ನಿಸುವದು, ಹಸಿಖೊಬ್ಬರಿಯನ್ನು ಹೆಚ್ಚು ಹಾಕಿ ಉಳಿದ ೪ ಪದಾರ್ಥಗಳನ್ನು ತಕ್ಕಷ್ಟು ಹಾಕಿ ಕುಟ್ಟಿದರೆ ಖೊಬ್ಬರಿಚಟ್ಟಿ (ಮಹೇಶ ಸ್ಥಲ) ಎನ್ನಿಸುವದು. ಇದರಂತೆ ಹಸಿಮೆಣಸಿನಕಾಯಿ ಚಟ್ನಿ [ಪ್ರಸಾದಿ ಸ್ಥಲ], ಹಸಿಹುಣಶಿನಕಾಯಿ ಚಟ್ನಿ [ಪ್ರಾಣಲಿಂಗಿ ಸ್ಥಲ] ಮಾಡಿ ಪ್ರಕಾಶಗೊಳಿಸುವ ಅರಿಶಿಣಪುಡಿಯನ್ನು (ಐಕ್ಯಸ್ಥಲ) ಎಲ್ಲ ಚಟ್ನಿಗಳಲ್ಲಿ ಬೆರಿಸಿ ಪ್ರಕಾಶಂಗೊಳಿಸಬೇಕು. ಹಾಗು ಹಸಿಕಡ್ಲಿ, ಹಸಿಮೆಣಸಿನ ಕಾಯಿ, ಹಸಿಹುಣಶಿಕಾಯಿಗಳನ್ನು ತಕ್ಕೊಂಡು ಅವುಗಳನ್ನು ಕೂಡಿಸಿ ಅವುಗಳಲ್ಲಿ ಉಪ್ಪು ಅರಿಷಿಣಗಳ ಪ್ರಮಾಣವನ್ನು ಹೆಚ್ಚಿಸಿದರೆ ಉಪ್ಪಿನ ಕಾಯಿಯು ೪।೬ ದಿವಸಗಳಲ್ಲಿ ಕಳಿತು ಊಟಕ್ಕೆ ಮೊದಲು ಉಪ್ಪಿನ ಕಾಯಿಯು ರುಚಿಸಲು ಅನುಕೂಲವಾಗುವದು. ಹಾಗು ಷಡ್ರಸಗಳು ಷಡ್ಲಿಂಗಾರ್ಪಣಕ್ಕೆ ಸರ್ವೋತ್ಕೃಷ್ಟವೆನಿಸುವವು.

ಇದರಂತೆ ಭಕ್ತನ ಭಕ್ತಿ, ಮಹೇಶನ ನಿಷ್ಠೆ, ಪ್ರಸಾದಿಯ ಅರ್ಪಣ, ಪ್ರಾಣಲಿಂಗಿಯ ಯೋಗ, ಶರಣನ ನಿಬ್ಬೆರಗುಗಳು ಆಯಾ ಸ್ಥಳದವರಲ್ಲಿ

ಹೇಳ್ಪ ಪ್ರಮಾಣದಲ್ಲಿದ್ದು ಉಳಿದ ಆಚರಣೆಗಳು ಎಲ್ಲ ಸ್ಥಳಿಕರಲ್ಲಿಯೂ ಇರುವವೆಂಬದನ್ನು ಮರೆಯಲಾಗದು. ಐಕ್ಯಸ್ಥಳದಲ್ಲಿ ಶರಣಸ್ಥಳಾಂತರ ದಿಂದ ಐಕ್ಯಾಂಗವಾಗಿ ಅಂದರೆ ಲಿಂಗಾಂಗ ಸಾಮರಸ್ಯವಾಗುವವು.

ಕಂದಃ—

ಭವಿಗಳ ಭಕ್ತರ ಮಾಡುವ। ನವವಿಧ ಭಕ್ತಿಯ ಪಿಡಿಸುವಶರಣರ ಚರಿತಂ॥
ನವಸಂಸ್ಕೃತಿಯಂಗೊಳಿಸುವ। ಭವಬಂಧನಮಂ ಬಿಡಿಸುವ ಸನ್ಮಾರ್ಗಂ ಕೇಳ್ ॥೧॥

ಕರ್ಮೇಂದ್ರಿಯಗಳ ಬಳಿಕೆಯು।ಧರ್ಮಾಚಾರದ ಸುನೀತಿ ಸತ್ಕ್ರಿಯೆಗಳೊಳಂ॥
ಧರ್ಮೇಂದ್ರಿಯಗಳ ದೃಷ್ಟಿಯು।ಮರ್ಮಜ್ಞಾನಾನುಭವದೊಳಿರ್ಪುದು ಯೋಗ್ಯಂ ॥೨॥

ಶಿವತತ್ವಂಗಳ್ ಹತ್ತುಂ। ಭವ ಮರಣ ಜಯಿಸೆ ಸಹಾಯ ಸದ್ಭಕ್ತಂಗಂ॥
ನವವಿಧ ತಾಣದೊಳಿರುತಿಹ। ನವಲಿಂಗಾರ್ಪಣ ಸಕೀಲ ಸಮನಿಸಬೇಕೈ ॥೩॥

ಅಷ್ಟದಳಂಗಳ ತಿರುಗುವ। ದುಷ್ಟ ದಳಂಗಳ ಪಿಡಿಯುವ ಹಂಸನ ಗತಿಯಂ॥
ದೃಷ್ಟಿಸುತಿರಲಾಗಾಗಳ್। ಶಿಷ್ಟಾಚಾರದ ದಳದೊಳು ನಿಲ್ಲಿಸಬೇಕೈ ॥೪॥

ಬರೆಯುವ ಹಸ್ತವ ನೋಡಲು। ಬೆರಳಗಳೆಲ್ಲಕೆ ಕಿರುಬೆರಳಾಧಾರದವೋಲ್॥
ಪರತರ ಷಟ್‌ಸ್ಥಲ ಭಕ್ತಂ।ಕಿರು ದಾಸೋಹಿಯು ಷಡುಸ್ಥಲಬ್ರಹ್ಮಿಯು ತಾಂ ॥೫॥

ಆದ್ಯರ ವಚನಾರ್ಥಂಗಳ್। ವೇದ್ಯಂಗೊಳ್ಳುತ ಸದಾಚಾರಣೆ ಸಂಭವಿಸಲ್॥
ಸಾಧ್ಯಂ ಸರ್ವಾಚಾರಂ। ಬೋಧ್ಯ ಮಹಾಲಿಂಗ ಸಂಗ ಸಮರಸಕ್ಯಂ ॥೬॥

ವಚನಃ— ತನುವು ಗುರುವಿನ ಸೇವೆಗೆ ಧಾವಿಸುತ, ಮನವು ಲಿಂಗದ ಧ್ಯಾನವ ಆಕಲನಗೊಳುತ, ನೇತ್ರಂಗಳು ಜಂಗಮದ ಬರವ ಹಾರೈಸುತ, ಆತ್ಮವು ಜಂಗಮದ ತೀರ್ಥ ಪ್ರಸಾದದೊಳು ತೃಪ್ತಿಗೊಳುತ, ಶ್ರೋತ್ರವು ಶಿವಶರಣರ ನುಡಿಗಡಣವನೊಡಲುಗೊಳ್ಳುತ, ಇರವನೇ ಪರಿಪಾಲಿಸಯ್ಯ ಸಿದ್ಧೇಶ್ವರಾ ॥೧॥

ಕರ್ಮೇಂದ್ರಿಯಗಳಿಗೆ ಯಮನಾಗಿ, ಧರ್ಮೇಂದ್ರಿಯಗಳಿಗೆ ಧವನಾಗಿ ಸರ್ವ ವಿಷಯಗಳಿಗೆ ಪಾವಕ ಸ್ವರೂಪನಾಗಿ, ದಶದಿಕ್ಕುಗಳ ಪಸರಿಸುತ

ದಶವಾಯುಗಳ ಹಿಡಿತದೊಳಿರಿಸಿ ಕಂಡ ಕಡೆಗೆ ಹರಿವ ಕರಣಂಗಳ ಕಡಿವಾಣದೊಳಿರಿಸಿ, ಮೃಡನ ಪಾದವ ಪಿಡಿದು ಅಗಲದ ಇಹಲೋಕ ವೀರ ಸದ್ಭಕ್ತನ ತೋರಿ ಬದುಕಿಸಯ್ಯ ಎನ್ನ ಸಿದ್ಧೇಶ್ವರಾ ॥೨॥

ಬ್ರಹ್ಮವಿದ್ಯೆಯು ಸುಮ್ಮನಾಗದು ನೋಡಯ್ಯ. ಇಮ್ಮನವ ಒಮ್ಮನವ ಮಾಡಿ ಹಮ್ಮು ಬಿಮ್ಮುಗಳ ಸೊಮ್ಮವನಡಗಿಸಿ ಮಹಾನುಭಾವರ ಮಾತುಗಳ ನೆಮ್ಮಿ, ಕಮ್ಮನ್ನ ತತ್ವಗಳ ತಾರತಮ್ಯವ ಬಿಮ್ಮನೊಳು ಬಿಂಬಿಸಿ, ಬೋಧಿಸುವ ಚಿದಾತ್ಮರ ಕೆಮ್ಮಾವಿಗೆಯ ಪಿಡಿದಲ್ಲದೆ ಬೊಮ್ಮ ಜ್ಞಾನವು ಬಾರದೆಂದ ನಮ್ಮ ಸಿದ್ಧೇಶ್ವರಾ ॥೩॥

ಅಂಗಗಳಿಗೆ ಸಂಬಂಧಿಸಿದ ಲಿಂಗವನೇ ಕರಸ್ಥಳದೊಳಗೈಕರಿಸಿ, ಸದ್ಭಕ್ತಿಯಿಂ ಅಷ್ಟವಿಧಾರ್ಚನೆ ಷೋಡಶೋಪಚಾರದೊಳು ಪೂಜಿಸಿ, ಅರ್ಚಿಸಿ, ಕರಣಾರ್ಪಣ, ಭಾವಾರ್ಪಣಗಳ ಗುರುಲಿಂಗ ಜಂಗಮಕೆ ಅರ್ಪಿಸಿ, ಶೇಷಂಗಳಾದ ಶುದ್ಧ ಸಿದ್ಧ ಪ್ರಸಿದ್ಧ ಪ್ರಸಾದಂಗಳೊಳು ಬದ್ಧನಾಗಿರಿಸಿ ಎನ್ನ ಶುದ್ಧ ಶಿವಾಚಾರ್ಯನನ್ನಾಗಿ ಮಾಡಯ್ಯ ಎನ್ನ ಮುದ್ದಿನ ಸಿದ್ಧೇಶ್ವರಾ ॥೪॥

ಮಂತ್ರಾಂಗದ ಮನೆಯು, ರುದ್ರಾಕ್ಷಂಗಳ ದೀಪದ, ಭಸ್ಮಾಂಗದ ಬೆಳಗಿನೊಳು ಸದ್ರೂಪವಾದ ಗುರು, ಚಿದ್ರೂಪವಾದ ಲಿಂಗ, ಜಂಗಮದ ಸಂಗದಿಂದ ನಿತ್ಯವಾದ ಪಾದೋದಕ ಪರಿಪೂರ್ಣವಾದ ಪ್ರಸಾದಮಯ್ಯನಾಗಿ ನಿಂದು, ಭೇದ ಭೇದಕ ಭೇದ್ಯಗಳನರಿಯದೆ, ಸರ್ವಾಂಗ ಮಹಾಲಿಂಗನೊಳು ಬೆರೆದು ಬೇರಿಲ್ಲದ ಅನುವುದೋತಯ್ಯ ಎನ್ನ ಸಿದ್ಧೇಶ್ವರಾ ॥೫॥

ಇಷ್ಟಲಿಂಗದ ಅಗಲದ ಪೂಜೆ, ಮರೆಯದ ಮಂತ್ರ, ಆ ಲಿಂಗದೊಳು ಬೆರೆದು ಬೇರೆಯಾಗದ ಇರವಿನ ಪರಿಯ ಕರುಣಿಸಿ ಕಾಯಯ್ಯ ಎನ್ನ ಸಿದ್ಧೇಶ್ವರಾ ॥೬॥

# ಸಂದೇಶ.

(ಲೇಃ ಶ್ರೀ ಆಂಟಿನ ವ್ಹಿ. ಸಿ., ಎಫ್. ವಾಯ್. ಸಾಯನ್ಸ, ಬೆಳಗಾವಿ.)

ಅಕ್ಕಗಳಿರಾ! "ಯಾರಿವಳು? ನಮಗೆ ಉಪದೇಶ ಮಾಡಬಂದವಳು?" ಎಂದು ಬೇಸರಪಟ್ಟುಕೊಳ್ಳದಿರಿ. ತಮಗೆ ಕೇಜಾರಬಾರದಂತೆಯೇ ತಿಳಿಸುವ ಯತ್ನಮಾಡುವೆನು. ತಾವುಗಳೆಲ್ಲ ಈ ಹೇಯುವಾದ ಸಂಸಾರವೆಂಬ ಕೊಳೆಯಲ್ಲಿ ಹುಳ. ಎಂಬ ಮಾಯೆಯ ಬಾಧೆಗೊಳಗಾಗಿ ತೊಳಲಾಡುತ್ತಿರುವಿರೆಂದು ಎನ್ನ ಮನದನ್ನನು ನನ್ನನ್ನು ಇಲ್ಲಿಗೆ ಕಳುಹಿರುವನೌ ತಾಯಿರಿರಾ! ಈ ಮೋಹ ಯಾರನ್ನೂ ಬಿಟ್ಟಿಲ್ಲ. ಮೇಕೆ ಮುಟ್ಟದ ವನಸ್ಪತಿ ದುರ್ಲಭವಿದ್ದಂತೆ "ನನ್ನದು" ಎಂಬೀ ಮಾಯೆಗೊಳಗಾಗದವರು ವಿರಳ ಕಾಣಿರವ್ವಾ.

**ವಚನಃ**— ಹರಿಯ ನುಂಗಿತ್ತು ಮಾಯೆ, ಅಜನ ನುಂಗಿತ್ತು ಮಾಯೆ, ಶತನಯನನ ನುಂಗಿತ್ತು ಮಾಯೆ, ಶಶಿಯ ನುಂಗಿತ್ತು ಮಾಯೆ, ಬಲ್ಲೆನೆಂಬ ಬಲುಗಯ್ಯರ ನುಂಗಿತ್ತು ಮಾಯೆ, ಅರಿಯೆನೆಂಬ ಅಜ್ಞಾನಿಗಳ ನುಂಗಿತ್ತು ಮಾಯೆ, ಈರೇಳು ಭುವನವನಾರಡಿಗೊಂಡಿತ್ತು ಮಾಯೆ, ಚನ್ನಮಲ್ಲಿಕಾರ್ಜುನಯ್ಯ ಎನ್ನ ಮಾಯೆಯ ಮಾಣಿಸಾ ಕರುಣಿ!

ನೀವುಗಳು ಈ ಮಾಯೆ ಎಂಬ ಪಿಶಾಚಿಯ ಬಂಧನಕ್ಕೊಳಗಾಗದಿರಿ. ಲಕುಮಿ ಚಂಚಲಳು. ಹೆಣ್ಣಿನ ಸ್ವಭಾವ ಅದು. ದುಡ್ಡಿದೆ ಎಂದು ದರಿದ್ರರನ್ನು ಕಡೆಗಣಿಸದಿರಿ. ಸಂಸಾರವೆಂಬ ಕಾಲಚಕ್ರದಲ್ಲಿ ಒಮ್ಮೆ ಶಿಖರಕ್ಕೇರಿ ಮೆರೆದದ್ದು ಮರುಕ್ಷಣದಲ್ಲಿಯೆ ರಸಾತಳಕ್ಕಿಳಿಯದಿರದು. ಅದು ಕಾರಣ ತಾವು ಭ್ರಮರ ಸೋಂಕದ ಪುಷ್ಪವಾಗಿರಿ.

**ನೀತಿಃ**— ಬಂಗಾರ ಬಳಿ ಇಟ್ಟು ಽ ಬೈಬ್ಯಾಡ ಬಡವರಿಗೆ ।
ಬಂಗಾರ ನಿನಗ ಽ ಸ್ಥಿರವಲ್ಲ । ಮದ್ಯಾಣ ।
ಬಿಸಿಲು ಹೊಳ್ಳೂದು ಽ ತಡವಲ್ಲ ॥

ಎಲೌ ಸೋದರಿಯರಿರಾ ಸಿರಿ ಎಂಬ ಪರದೆ ತಮ್ಮನಯನಕ್ಕೆ ಬಂದೊಡೆ, ಪರೆ ಕಳಚಲು ಬಂದ ಭುಜಗನಂತೆ, ಮಾರ್ಗ ತಪ್ಪದಿರದು. ಆ ನಯವಾದ ಕವಚ ಆವರಿಸಿದಂತೆ ಭಕುತಿ ಎಂಬ ಅಂಜನವ ಲೇಪಿಸಿ

ಗುಣಹೊಂದಿ ಸಂಕೇತ ಸ್ಥಳ ತಲುಪುವುದು ಲೇಸು ಕಂಡಿರವ್ವಾ. ಎನ್ನ ತಂದೆ ಕಳುಹಲು ತ್ಯಾಗಿಗಳಾಗಿ ಬಂದೆವು. ಈಗ ಭೋಗಿಗಳಾಗುವುದೆಂದರೆ ಹೊಲ್ಲದ ಸಂಗತಿ. ಅದು ಅವನಿಗೆ ಪ್ರಿಯವಾದುದಲ್ಲ. ಅವನೊಲ್ಲದ ಕೃತಿಗಳಿಗೆ ನಾವುಗಳು ಎಳಸಬಾರದು. ಪತಿಗನಕೂಲಳಾಗಿರುವುದು ಸತಿಯ ಧರ್ಮವೇ ಹೊರತು ಪ್ರತಿಕೂಲಳಾಗಿರುವುದಲ್ಲ. ಈ ಸಾಗರವನ್ನು ಈಜಿ ದಾಟಬೇಕೇ ಹೊರತು ಮುಳಿಗಿ ಅಳನೋಡಲೆತ್ನಿಸಬಾರದವ್ವಾ.

ಹೆಣ್ಣಾಗಿ ಬಂದವಳು ಹೊನ್ನಾಗಿ ಹೋಗಲೇಬೇಕು. ಹುಣ್ಣಾಗ ಬಯಸಬಾರದು. ನಾವು ಹೇಗೆ ವರ್ತಿಸಿದರೂ ಸಹ ಜನ ಆಡಿಕೊಳ್ಳುವದನ್ನು ಬಿಡರವ್ವಾ. ಪುನಕ್ಕಂಜದಿದ್ದರೂ ಜನಕ್ಕೆ ಬೆದರ ಬೇಕಲ್ಲವೆ. ಮನೆಗೆಲಸ ಮುಗಿದು ಅಳಿದುಳಿದ ವೇಳೆಯನ್ನು ತುಚ್ಛಕೃತ್ಯಗಳಿಗಾಗಿ ವ್ಯಯಿಸದಿರಿ. ನೋಡಿ ನಂಬಿರಿ. ನಂಬಿ ಕೆಡದಿರಿ. ಹೆರವರ ಬಾಗಿಲಿಗೆ ಪತಂಗ ದೀಪಕ್ಕೆಳಸುವಂತೆ, ಹೋಗಿ ಪವಡಿಸದಿರಿ. ನಿತ್ಯಹರಕೆ ಹಾಕಿದರೆ ಅಶನವನಾರೂ ಈಯರು. ಬಲ್ಲ ಸತಿಯರಿಗೆ, ಪರೋಪಕಾರಕ್ಕಾಗಿಯೇ ಜನ್ಮವೆತ್ತ ಚಂದನ ಕೊರಡಿನಲ್ಲಿ ಆದರ ಉಂಟೇನವ್ವಾ.

ಅವ್ವಗಳಿರಾ! "ಮಿತಿ" ಎಂಬ ಶಬ್ದದ ಇತ್ಯರ್ಥವನರಿತು ನಡೆಯಿರಿ. ಮಾನವ ಜನ್ಮಕ್ಕಿದ ನಂತರವೆ ಅವೆಲ್ಲ ಮೈದಾಳಿವೆ. ಮನವೆಂಬ ಮಂಗನನ್ನು ಹಿಡಿತದಲ್ಲಿಡಿರಿ. ಹೆರವರ ಮುಂದೆ ಬಾಯ್ಬಿಡದಿರಿ.

**ನೀತಿ:—** ಹಾಸೀಗಿ ಮಾಡಿರಲ್ಯ ಕೂಸಲ್ಲಿ ಮಲಗಿರಲಿ।
ಸಂಪಿಗೂವ್ಹಿರಲ್ಯ ಬನದಾಗ। ಹಡೆದವ್ವ।
ಮಾತಿರಲಿ ನಿನ್ನ್ಯ ಮನದಾಗ॥

ಮನನೋಯಿಸುವಂಥ ಬಿರುನುಡಿಗಳು ಕೇಳಬಂದರೆ ಮಾರುತ್ತರ ಮೀಯದಿರಿ. ಕಬ್ಬು ನಮಗೆ ರುಚಿಕಟ್ಟಾದ ರಸವನ್ನೀಯ ಬೇಕಾದರೆ, ನಾವು ಕೆಟ್ಟದೆಂದು ಕಡೆಗಣಿಸಿದ ಗೊಬ್ಬರದಿಂದ ಬಂದ ಪುಷ್ಟಿಯಿಂದಲ್ಲವೇನವ್ವಾ.

**ನೀತಿ:—** ಬೈದಂಥ ಬೈಗಳ್ಯೂ ಬೆನ್ಹತ್ತಿ ಬಾರವ।
ಬೈದವ್ವ ಕೇಳ್ಯ ನನಮಾತ ಬೈಗೂಳ।
ಮಲ್ಲಿಗ್ಹೂವಾಗ್ಯ ಮುಡಿಹೋಗ॥

ನೀವಾಡುವ ನುಡಿಯಲ್ಲಿ ನಯವಿರಲಿ. "ಅಣ್ಣಗಳಿರಾ" ಎಂದಡೆ-ಗರುಡನನ್ನು ಕಂಡು ಸರ್ಪ ಹುದುಗಿಕೊಳ್ಳುವಂತೆ—ಕೀರ್ತಿಎಂಬ ನಿಮ್ಮ ಶ್ವೇತ ಛತ್ರಕ್ಕೆ ಕಳಂಕ ಸೋಂಕಲರ್ಹವಾಗದು.

ಸದ್ಭಾವಿಗಳಿರಾ! ಅತಿಥಿ ನಿಮ್ಮ ಮನೆಯನರಸಿ ಬಂದರೆ ಮರಳಿ ಹೋಗೆ ಹೇಳದಿರಿ. ಮನವೆಂಬ ಮಡುವಿನಾಳವನ್ನಳೆಯಲು ನನ್ನಿನಿಯ ಚನ್ನ ಅತಿಥಿಎಂಬ ಅಳೆಗೋಲಾಗಿ ಹೇಮಳದ್ದಯ್ಯ ಮನೆಗೆ ಬಿಜಯಂಗೈದಂತೆ ಇಲ್ಲಿಗೂ-ದಯಮಾಡಿಸಬಹುದು. ವಂಚನೆಮಾಡದೆ, ಇದ್ದುದ ನೀಡಿ ತೃಪ್ತಿಪಡಿಸಿ ಕಳುಹಿಸಿದದೆ ಈ ಕಾರಿರುಳಿನಲ್ಲಿಯೂ ಮಿಣುಕು ಮಿಣುಕೆಂಬ ಬೆಳಕುಕಾಣದಿರದು.

ಬಳ್ಳಿ ಬೆಳೆದು ಮಲೆತು ನಿಂತೆನೆಂದು ತನ್ನಾಶ್ರಯದಾತನನ್ನು ಮರೆಯದಷ್ಟೆ. ಗುರುಹಿರಿಯರ ಮನನೋಯಿಸದಿರಿ. ಅವರು ಹಾಕಿಕೊಟ್ಟ ಕಟ್ಟಳೆಯನ್ನು ಮೀರಿನಡೆಯದಿರಿ. ಸಟೆಯಾಡದಿರಿ. ಮುಗಿಲು ಹರಿದು ಬೀಳಬಹುದು! ಕಡಲು ಬತ್ತಬಹುದು! ತಾಯಿ ಅರಿಯಾಗಬಹುದು! ಜರುಗದ ಕೆಲಸ ಜರುಗಿ ಹೋಗಬಹುದು! ಆದರೆ ಸತ್ಯಕ್ಕಾಗಿ ಮೀಸಲಾಗಿದ್ದಸ್ಥಾನ ಧೃವತಾರೆಯಂತೆ ಶಿವಭಕ್ತರಾಗಿ ಸಲ್ಲದ ಸಂಗತಿಗೆ ಮನ ತಿರುಗಿಸದೆ, ಕಡಿವಾಣಹಾಕಿ ಹಿಡಿತದಲ್ಲಿಡಲೆತ್ನಿಸಿರಿ.

**ವಚನ**:— ಸಟೆದಿಟವೆಂಬುವೆರಡುವಿಡಿದು ನಡೆವುದೀ ಲೋಕವೆಲ್ಲವು. ಸಟೆದಿಟವೆಂಬುವೆರಡು ವಿಡಿಡು ನಡೆವ ಲೋಕದೊಡನೆ ಶರಣನು ಗುರುಲಿಂಗ ಜಂಗಮದಲ್ಲಿ ಸಟೆಯ ಬಳಸಿದೊಡೆ, ಆತನು ತ್ರಿವಿಧಕ್ಕೆದ್ರೋಹಿ, ಅಘೋರನರಕಿ, ಉಂಬುದೆಲ್ಲ ಕಿಲ್ಬಿಷ, ತಿಂಬುದೆಲ್ಲ ಅಡಗು ಕುಡಿವುದೆಲ್ಲ ಸುರೆ, ಹುಸಿಎಂಬುದೇ ಹೊಲೆ ಶಿವಭಕುತಂಗೆ ಹುಸಿ ಎಂಬದುಂಟೆ ಅಯ್ಯಾ? ಹುಸಿಯನಾಡಿ ಲಿಂಗಪೂಜಿಸಿದಡೆ ಹೊಳ್ಳು ಬಿತ್ತಿ ಫಲವನರಸುವಂತೆ ಕಾಣಾ ಚನ್ನಮಲ್ಲಿಕಾರ್ಜುನಾ.

ಈ ತೆರನಾಗಿರ್ಪ ಸಟೆಯ ಮಹಾತ್ಮೆಯನ್ನರಿತ ಅಕ್ಕಂದಿರಾ! ಚನ್ನನ ಕರೆಗೆ ಓಗೊಡಿರಿ. ಕೈನೀಡಿಕರೆಯುತಿಹನು. ಕೈಚಾಚಿರಿ ಶರಣು ಬಂದವರಿಗೆ ಅಭಯವನ್ನೀಯದಿರನಾತ. ತುಂಬು ಹೃದಯ ಅವನದು. ಭಕ್ತರೆಂಬ ಲೋಹ ರಾಸಿ ಕಸದಲ್ಲಿ ಒರಗಿದ್ದರೂ ಸಹ ಆತ ತನ್ನೆಡೆ ಸೆಳೆಯದಿರನು.

"ನಾನು, ಅಳಿವಡೆ ಮೋಕ್ಷ" ವೆಂಬುದರ ಇಂಗಿತವನರಿಯಿರಿ. "ನಾನು" ಎಂಬುದೊಂದು ಅಹಂಕಾರ. ಕಬ್ಬಿಣಕ್ಕೆ ಕುತ್ತು ಹಿಡಿದಂತೆ ನಮ್ಮನ್ನಾವರಿಸದಿರದು. ಆದರೆ ಮಹೇಶ್ವರನಿಗೆ ಮೊರೆ ಹೊಕ್ಕವರನ್ನು ಕಲ್ಲೆಣ್ಣೆಯಲ್ಲೊರಗಿದ ಸೂಜಿಯಂತೆ ಮುತ್ತಲಾರದು.

ಪ್ರಸಿದ್ಧಿ ಪಡೆದ ಮರದ ಹೆಸರು ಹೇಳಿ ಹಣ್ಣನ್ನು ಕ್ರಯಕ್ಕೆ ತೆತ್ತುವಂತೆ, ದೇವಭಕ್ತರಾಗಿ ಆತನನ್ನು ಭವಿಯನ್ನಾಗಿ ಮಾಡದಿರಿ. ಧರ್ಮದ ಕಟ್ಟಳೆಯು ಸೀಮೆದಾಟಿ ಸಮಾಜ ಬಾಹಿರರಾಗದಿರಿ. ಭಕ್ತರಾಗಿರಿ. ಹೊರತು ಭವಿಯಾಗದಿರಿ. ಜಾತಿ ಎಂಬುದು ನಶ್ವರವಾದುದು. ಮಾನವನಿಂದಲೇ ನಿರ್ಮಿತವಾದುದು. ಕಟ್ಟಿಗೆಯಿಂದ ಹುಟ್ಟಿದ ಬೆಂಕಿ ಅದನ್ನೆ ದಹಿಸುವಂತೆ ಈ ಮತ್ಸರ ಭಾವ ನಮ್ಮನ್ನು ಬೇಯಿಸುವದು. ವಿನಯ, ನಿರಾಶೆ, ಭಕ್ತಿ, ಪ್ರೀತಿ ಇದ್ದವರೆ ನಮ್ಮವರು. ಇವುಗಳಿಂದ ಬಾಹಿರರಾದವರು ಅನ್ಯರು. ಸಖಿಯರಿರಾ! ತಾವು ಈ ತರಹದ ಜಾತಿಯತೆ ಮಾಡಿರಿ ಹೊರತು, ಬೇರೆ ರೀತಿಯಾಗಿ ಅಲ್ಲ. ಈ ಕಟ್ಟಳೆಯನ್ನು ಮೀರದಿರುವುದೆ ನಮ್ಮಯ ಧರ್ಮ. ಒಂದುವೇಳೆ ಮೀರಿದರೆ ಬಲೆಯಲ್ಲಿ ಸಿಲುಕಿದ ಇಲಿಯಂತೆ ತೊಳಲಾಡ ಬೇಕಾದೀತು ಕಾಣಿರವ್ವಾ. ನಮಗೆ ಬೇಕಾದುದು ಆತನಿಗೆ ಬೇಡ. ಆತನಿಗೆ ಬೇಕಾದುದು ನಮಗೆ ಬೇಡ. ಆದರೆ ಶರಣರ ಬಯಕೆಗೆ ಮಾತ್ರ ಪ್ರತಿಕೂಲನಾಗನವ್ವಾ ನನ್ನಿನಿಯ. ಯಾಕಂದರೆ,

**ವಚನ:—** ಪುರುಷನ ಮುಂದೆ ಮಾಯೆ ಸ್ತ್ರೀ ಎಂಬ ಅಭಿಮಾನವಾಗಿ ಕಾಡಿಹುದು. ಸ್ತ್ರೀಯ ಮುಂದೆ ಮಾಯೆ ಪುರುಷನೆಂಬ ಅಭಿಮಾನವಾಗಿ ಕಾಡಿಹುದು. ಲೋಕವೆಂಬ ಮಾಯೆಗೆ ಶರಣರ ಚಾರಿತ್ರ್ಯ ಮರುಳಾಗಿ ತೋರಿಹುದು. ಚನ್ನಮಲ್ಲಿಕಾರ್ಜುನನೊಲಿದ ಶರಣಂಗೆ ಮಾಯೆಯೂ ಇಲ್ಲ. ಮರಹೂ ಇಲ್ಲ. ಅಭಿಮಾನವೂ ಇಲ್ಲ ಕಾಣಿರವ್ವಾ.

ಈ ಮಾಯೆಎಂಬ ಮರದ ಬೇರನ್ನು ಕಡಿಯಲು ಭಕ್ತಿಎಂಬ ಕೊಡಲಿಯನ್ನುಪಯೋಗಿಸಿರಿ. ಕೋಗಿಲೆ ಸದಾ ತನ್ನ ತಾಯನರಸುವುದರಲ್ಲಿ ತೊಡಗಿದಂತೆ, ಆತನ ಕುರುಹನ್ನರಿಯುವುದರಲ್ಲಿ ಮಗ್ನರಾಗಿರಿ. ಇದೇ ಅಂತರಂಗ ಶುದ್ಧಿ, ಇದೇ ಬಹಿರಂಗ ಶುದ್ಧಿ ಕೇಳಿರವ್ವಾ.

"ಅತಿ ಸರ್ವತ್ರ ವರ್ಜಯೇತ್" ಹೊತ್ತಾಗುತ್ತ ಬಂದಿತವ್ವಗಳಿರಾ. ಆತ ಮುನಿಯ ಬಹುದು ಹೋಗುವೆನು ಚನ್ನನ ಮರೆಯದಿರಿ ಶರಣು

# ವಚನಧರ್ಮ ಅರ್ಥಾತ್ ಲಿಂಗವಂತಧರ್ಮವು.

(ಲೇಖಕ:-ಧರ್ಮಾಭಿಮಾನಿ)

ಮೇಲ್ಕಂಡ ವಿಷಯದ ಬಗೆಗೆ ಈಗ ಒಂದು ವಿವಾದವು ಹುಟ್ಟಿದೆ. ವೀರಶೈವವು ಅರ್ಥಾತ್ ಲಿಂಗವಂತ ಧರ್ಮವು ಅನಾದಿಕಾಲದಿಂದ ಬಂದಿದೆ ಎಂದು ಕೆಲವರು, ಈಗ ದೊರೆತಿರುವ ವಚನಗಳಿಂದ ಲಿಂಗವಂತ ಧರ್ಮವು ೧೦೦೮-೧೦೫೦ ರಲ್ಲಿ ಆಗಿಹೋದ ದೇವರದಾಸಿಮಯ್ಯನಿಂದಲೇ ಲಿಂಗವಂತ ಧರ್ಮವು ಉಗಮವಾಯಿತೆಂದು ಕೆಲವರು ವಾದಿಸಹತ್ತಿರುವರು.

ಮೊದಲನೆಯವರನ್ನು ವಾದಿಗಳೆಂದು ಎದುರುಪಕ್ಷದವರನ್ನು ಪ್ರತಿವಾದಿಗಳೆಂದು ಕರೆಯೋಣ.

ವಾದಿಗಳ ಪ್ರಕಾರ ವೀರಶೈವವು ಅರ್ಥಾತ್ ಲಿಂಗವಂತ ಧರ್ಮವು ಅನಾದಿಕಾಲದ್ದೆಂತಲೂ, ಅದನ್ನು ಪಂಚಪೀಠಸ್ಥರು ಸ್ಥಾಪಿಸಿದರೆಂತಲೂ ಹೇಳುತ್ತಾ ಸಿದ್ಧಾಂತ ಶಿಖಾಮಣಿ, ಶ್ರೀಕರಭಾಷ್ಯ ಮುಂತಾದ ಗ್ರಂಥಗಳನ್ನು ಉದಾಹರಿಸುತ್ತಾ ಅತಿ ಪುರಾತನ ಕಾಲದಲ್ಲಿ ಶೈವವು ಉತ್ಕ್ರಾಂತಿ ಹೊಂದಿ ವೀರಶೈವದಲ್ಲಿ ಪರಿಪೂರ್ಣತೆ ಹೊಂದಿದೆ ಎಂತಲೂ, ಇದಕ್ಕೆ ವೇದಾಗಮ ಉಪನಿಷತ್ತುಗಳಲ್ಲಿ ಬರುವ ಲಿಂಗಶಬ್ದವನ್ನು ರುದ್ರ ಶಿವಶಬ್ದಗಳನ್ನು ಉದಹರಿಸುತ್ತಿರುವರು. ಇದಕ್ಕೆ ಶ್ರೀ ಮೈಸೂರ ಮಹಾರಾಜರು ಬೆಟ್ಟದಪುರದಲ್ಲಿ ಮಾಡಿದ ಭಾಷಣವನ್ನು ಉದಹರಿಸುತ್ತಾ ಮಹೆಂಜೋದಾರೋ ಹರಪ್ಪ ಅವಶೇಷಗಳಲ್ಲಿ ದೊರೆತ ಲಿಂಗಗಳನ್ನು ಉದಹರಿಸುತ್ತಿರುವರು.

ಪ್ರತಿವಾದಿಗಳು ವಾದಿಗಳ ಮೇಲ್ಕಂಡ ಹೇಳಿಕೆಯನ್ನು ಅಲ್ಲಗಳೆಯುತ್ತಾ ವಚನಧರ್ಮವು ದೇವರದಾಸಿಮಯ್ಯನಿಂದಲೇ ಉಗಮವಾಯಿತು, ಆತನಿಂದಲೇ ಇಷ್ಟಲಿಂಗ ಧಾರಣಕ್ರಮವು, ಷಟ್ಸ್ಥಲ ವಿಚಾರಗಳು ಪ್ರತಿಪಾದಿಸಲ್ಪಟ್ಟವು. ಬಸವೇಶ್ವರನ ಕಾಲದಲ್ಲಿ ವಚನಧರ್ಮವು ದಾರ್ಶನಿಕ ವ್ಯವಸ್ಥೆ ಪಡೆಯಿತು. ಈ ಧರ್ಮದಲ್ಲಿರುವ ಎಲ್ಲ ಸಂಸ್ಕೃತ ಗ್ರಂಥಗಳು ೧೩ನೇ ಶತಮಾನದಿಂದೀಚೆಗೆ ಬರೆಯಲ್ಪಟ್ಟವು ಎಂದು ಹೇಳುತ್ತಿರುವರು.

ಹೋದ ತಿಂಗಳಲ್ಲಿ ದೇವರ ದಾಸಿಮಯ್ಯನ ಸಹಸ್ರವರ್ಷ ಸ್ಮಾರಕೋತ್ಸವವು ಬೆಂಗಳೂರಲ್ಲಿ ಜರಗಿ ಆತನ ಬಗ್ಗೆ ಒಂದು ಉದ್ಗ್ರಂಥವು ಪ್ರಕಟವಾಯಿತು. ಈ ಗ್ರಂಥವು ಮೇಲ್ಕಂಡ ವಾದವಿವಾದಗಳ ಬಗೆಗೆ ಹೆಚ್ಚು ಬೆಳಕನ್ನು ಕೆಡವುತ್ತಲಿದೆ. ಅಲ್ಲದೆ ಕಪಟ್ರಾಳು ಕೃಷ್ಣರಾಯ ಎಂಬವರು ಧಾರವಾಡ ಕನ್ನಡ ಸಂಶೋಧನಾಲಯದ ಆಶ್ರಯದ ಕೆಳಗೆ ವೀರಶೈವ ಧರ್ಮದ ಮುಂಚಿನ ಶೈವ ಧರ್ಮವು ಎಂಬ ವಿಷಯದ ಮೇಲೆ ಮಾಡಿದ ಭಾಷಣವೂ ಕೂಡ ಈ ವಿವಾದಾಂಶದ ಮೇಲೆ ಸ್ವಲ್ಪ ಬೆಳಕನ್ನು ಕೆಡಹುತ್ತದೆ.

ಈ ವಿವಾದವನ್ನು ಚರ್ಚಿಸುವದಕ್ಕೆ ಮುಂಚೆ 'ಆರ್ಯ' ಎಂದರೆ ಶ್ರೇಷ್ಠವಾದದ್ದು, ಅನಾರ್ಯವೆಂದರೆ ಕೀಳುತರವಾದದ್ದು ಎಂದು ಯಾರೂ ತಿಳಿದುಕೊಳ್ಳಬಾರದು.

ವಾದಿಗಳು ಉದಹರಿಸಿದ ಮಹಂಜೋದಾರೋ ಅವಶೇಷಗಳಿಂದ ಆರ್ಯರು ಭರತಖಂಡಕ್ಕೆ ಬರುವದಕ್ಕೆ ಮುಂಚೆ ಅಲ್ಲಿ ಅತಿ ಶ್ರೇಷ್ಠವಾದ ದ್ರಾವಿಡ ಸಂಸ್ಕೃತಿ ಇತ್ತೆಂದು ತಿಳಿದುಬರುತ್ತದೆ. ಈ ಅವಶೇಷಗಳಲ್ಲಿ ಲಿಂಗ ನಂದಿ ವಿಗ್ರಹಗಳು ದೊರೆತಿರುವುದರಿಂದಲೂ ಇಜಿಪ್ತ, ಗ್ರೀಸ, ಬೆಬಿಲೋನಿಯಾ, ಬ್ರಿಟನ್ನದ ಡ್ರೂಯಿಡ್ಸ್ (ದ್ರಾವಿಡರು) ಅಸ್ಸಿರಿಯ ಮುಂತಾದ ದೇಶಗಳಲ್ಲಿ ಈ ಲಿಂಗಮೂರ್ತಿಗಳು ದೊರೆಯುತ್ತಿರುವದರಿಂದ ಲಿಂಗಪೂಜೆಯು ಆರ್ಯರಗಿಂತಲೂ ಮುಂಚೆಯೇ ವಿಶ್ವವ್ಯಾಪ್ತಿಹೊಂದಿತ್ತೆಂದು ತಿಳಿಯಬಾರದೇ ಇರದು. ಆದುದರಿಂದ ಲಿಂಗಾರಾಧನೆಯು ಅವೈದಿಕ ಧರ್ಮವು ಎಂದು ವಾದಿಗಳು ಎಷ್ಟು ಬೇಗನೆ ತಿಳಿದುಕೊಳ್ಳುವರೋ ಅಷ್ಟು ಬೇಗನೇ ಮೇಲ್ಕಂಡ ವಿವಾದವು ಬಗೆಹರಿಯುವದು. ಲಿಂಗಾರಾಧನೆಯು ವೇದಾಗಮೋಕ್ತವೆಂದು ವಾದಿಗಳು ತಿಳಿದುಕೊಂಡರೆ ಮಹಂಜೋದಾರೋ ಅವಶೇಷಗಳು ಸುಳ್ಳಾಗಿ ಬಿಡುವವು. ವೇದಗಳಲ್ಲಿ ಲಿಂಗಾರಾಧನೆಯನ್ನು ಶಿಶ್ನದೇವತಾರಾಧನೆಯೆಂದು ಅವಹೇಳನ ಮಾಡಿರುವದನ್ನು ವಾದಿಗಳು ಅವಶ್ಯಕವಾಗಿ ಗಮನಿಸಬೇಕು. ಹಾಗೆ ಅವರು ಮನನಮಾಡಿಕೊಂಡರೆ ಅವರಿಗೆ ವಚನಧರ್ಮವು ಸರಿಯಾಗಿ ಅರ್ಥವಾಗುವದು.

ಮೊದಲು ಆರ್ಯರು ಅನಾಗರಿಕರು. ಅವರಿಗೆ ಪಟ್ಟಣವಾಸವೇ ಗೊತ್ತಿರಲಿಲ್ಲ. ಅವರು ಪಶುಗಳ ಹಿಂಡನ್ನು ಸಾಕುತ್ತಾ ಹುಲ್ಲು ಇದ್ದಲ್ಲಿಗೆ ತಂಗುತ್ತಾ ವನವೃಕ್ಷಾದಿಗಳ ಸಂಸ್ಕೃತಿಯನ್ನು ಬೆಳೆಸಿಕೊಳ್ಳುತ್ತಾ ಭಾರತಕ್ಕೆ ಬಂದಕೂಡಲೇ ದ್ರಾವಿಡ ಸಂಸ್ಕೃತಿ ಮತ್ತು ನಾಗರಿಕತೆಯಿಂದ

ಅವರ ಕಣ್ಣು ಕುಕ್ಕಿ ಹೋದವು. ಪ್ರಕೃತಿಯೊಡಲಿನಲ್ಲಿ ಬೆಳೆದ ಅವರು ಬಲಾಢ್ಯತನದಿಂದಲೂ ದ್ರಾವಿಡರಲ್ಲಿ ಬೆಳೆದು ಬಂದಿದ್ದ ಅನೈಕ ಮತ್ಯ ದಿಂದಲೂ ಮತ್ತು ಪಂಚಮಪಳದವರಿಂದಲೂ ಆರ್ಯರಿಂದ ದ್ರಾವಿಡರು ಯುದ್ಧಗಳಲ್ಲಿ ಜಯಿಸಲ್ಪಟ್ಟರು. ತಮ್ಮ ರಾಜ್ಯ ಸುಧಾರಣಾ ಕಾರ್ಯಕ್ಕೆ ಆರ್ಯರು ಸೋತ ದ್ರಾವಿಡರನ್ನು ಸಂತೈಸಲು ದ್ರಾವಿಡರ ಸಂಸ್ಕೃತಿಯನ್ನು ದ್ರಾವಿಡರ ಧರ್ಮವನ್ನು ಅಳವಡಿಸಿಕೊಂಡರು. ದ್ರಾವಿಡರ ಪ್ರತ್ಯೇಕತೆಯು ನಾಶವಾಯಿತು. ಅವರ ಪೂರ್ವಜರ ವಿರೋಧವಾಗಿ ಮಿಸ್ ಮೇಯೋ ಪ್ರಚಾರವಾಯಿತು. ಅವರೆಲ್ಲರೂ ಆರ್ಯಸಾಹಿತ್ಯದಲ್ಲಿ ಕಪಿಗಳು, ರಾಕ್ಷಸ, ಅಕರಾಳ, ವಿಕರಾಳರು ಆದರು. ಆರ್ಯಧರ್ಮದಲ್ಲಿಯೇ ಶೈವ, ವೈಷ್ಣವ ಶಾಕ್ತೇಯ ಗಾಣಪತ್ಯ ಮುಂತಾದ ದರ್ಮಗಳು ಉಗಮಗೊಂಡವು.

ಈ ಹಿನ್ನೆಲೆಯನ್ನಿಟ್ಟುಕೊಂಡು ವಚನ ದರ್ಮದ ಉಗಮುವನ್ನು ವಿಚಾರಿಸೋಣ. ವಚನ ದರ್ಮವನ್ನು ಅಷ್ಟಾವರ್ಣ ಷಟ್ ಸ್ಥಳ ಪಂಚಾಚಾರಗಳ ದೇವತೋಪಾಸನೆ ದೇವರ ಪೂಜೆಯನ್ನು ಅನ್ಯರಿಂದ ಮಾಡಿಸದೇ ತಾವೇ ಮಾಡುವದು ದೇವರ ಮತ್ತು ವ್ಯಕ್ತಿಗಳ ಮಧ್ಯದಲ್ಲಾರೂ ಇರದೇ ಇರುವಿಕೆ. "ಸತಿಯರ ಸಂಗವನು ಅತಿಶಯದ ಗ್ರಾಸವನು ಪೃಥ್ವೀಗೀಶ್ವರ ಪೂಜೆಯನ್ನು ಅರಿವುಳ್ಳ ಹೆರರ ಕೈಯಿಂದ ಮಾಡಿಸುವರೇ ರಾಮನಾಥಾ !?" ಮೇಲುಕೀಳುಗಳಿಲ್ಲದಿರುವಿಕೆ ಅಧ್ಯಾತ್ಮಕದಲ್ಲಿ ಸ್ತ್ರೀ ಸಮಾನತೆ ನರಕ ಸ್ವರ್ಗಗಳೆಂಬವು ಬೇರಿಲ್ಲ. ಇವೇ ಮುಂತಾದವ್ರುಗಳೆಂದೊಡಗೂಡಿದೆ.

ಈ ಎಲ್ಲಾ ತತ್ವಗಳು ವೇದಾಗನೋಪನಿಷತ್ತುಗಳಲ್ಲಿ ವಿದ್ಯುತ್‌ಚ್ಛಕ್ತಿ ಬೆಳಕಿನಿಂದ ಹುಡುಕಿದರೂ ಕಾಣಿಸುವದಿಲ್ಲ.

ಇವುಗಳಲ್ಲಿ ಕೆಲ ತತ್ವಗಳು ಶೈವದಲ್ಲಿ ವೇದಾಗಮಗಳಲ್ಲಿ ಕಾಣಬಹುದು. ಗುರುಶಬ್ದವು ಎಲ್ಲಾ ದರ್ಮಗಳಲ್ಲಿ ಕಾಣಬರುವದು. ಲಿಂಗವು ಅನಾದಿ ಕಾಲದ್ದು. ಪಾದೋದಕ ಪ್ರಸಾದ ಮಂತ್ರ ರುದ್ರಾಕ್ಷಿ ಭಸ್ಮ ಇವು ಎಲ್ಲಾ ಶೈವಪಂಥಗಳಲ್ಲಿ ಕಾಣಬರುತ್ತವೆ. ಜಂಗಮ ಎಂದರೆ ಫ್ರೈಟರ್ನಿಟಿ (*Fraternity*) ಅಥವಾ *Brother hood* ಅಂದರೆ ಸರ್ವಸಮಾನತೆ ಎಂದು ಸಿ. ಗಿ. ಜಾನುಸಾಹೇಬರು '*Jungam literature*' ಎಂಬುವ ಗ್ರಂಥದಲ್ಲಿ ವ್ಯಾಖ್ಯಾನ ಮಾಡಿರುವರು. ಈ ಅರ್ಥದಲ್ಲಿ ಜಂಗಮ ಶಬ್ದವು ವೇದಾಗಮೋಪನಿಷತ್ತುಗಳಲ್ಲಾಗಲಿ ಇತರ ಶೈವ ಪಂಥಗಳಲ್ಲಿ ಕಾಣ ಬರುವದಿಲ್ಲ.

ಇಷ್ಟಲಿಂಗೋಪಾಸನೆಯೂ ಇತರ ಶೈವಪಂಥಗಳಲ್ಲಿರುವದಿಲ್ಲ. ಸ್ಥಾವರ ಲಿಂಗೋಪಾಸನೆಯೂ ಮಾತ್ರ ಕಂಡುಬರುತ್ತದೆ. ದೇವರದಾಸಿಮಯ್ಯನ ಕಾಲದಲ್ಲಿ ಮತ್ತು ಅವನಿಗೆ ಮುಂಚೆ ಕಾಳಾಮುಖ, ಲಕುಲೀಶ ಪಾಶುಪತ, ಶುದ್ಧಶೈವ ಮುಂತಾದ ಶೈವಪಂಥಗಳಿದ್ದವು. ಶ್ರೀಶೈಲ ಕಾಳೀ, ಹೂಲೀ ಮುಂತಾದ ಕ್ಷೇತ್ರಗಳಲ್ಲಿ ಕ್ಷೇತ್ರಾಧಿಪತಿಗಳು ಕಾಳಾಮುಖರೋ ಲಕುಲೀಶರೋ ಆಗಿದ್ದರು. ದೇವರದಾಸಿಮಯ್ಯನಿಗೆ ಶ್ರೀಶೈಲ ಕ್ಷೇತ್ರಪತಿಗಳಾದ ಚಂದ್ರಗುಂಡ ಶಿವಾಚಾರ್ಯರಿಂದ ಅನುಗ್ರಹ ಅಥವಾ ಉಪದೇಶವಾಯಿತೆಂದು ಅವರ ಸ್ಮಾರಕ ಉದ್ಗ್ರಂಥದಲ್ಲಿ ಹೇಳಲಾಗಿದೆ. ಆ ಗ್ರಂಥದ ೪೫ನೇ ಪುಟದಲ್ಲಿ ನೆಪಮಾತ್ರಕ್ಕೆ ಅವನು ಲಿಂಗಧರಿಸಲಿಲ್ಲ, ಲಿಂಗದೀಕ್ಷೆಯನ್ನು ಪಡೆಯಲಿಲ್ಲ ಎಂದು ಹೇಳಲಾಗಿದೆ. ಚಂದ್ರಗುಂಡರು ಕಾಳಾಮುಖರಾಗಿರಬೇಕು. ಏಕೆಂದರೆ ಅವರ ತರುವಾಯ ಆ ಪೀಠಕ್ಕೆ ಬಂದ ಕಾಶೀವಿಲಾಸ ಕ್ರಿಯಾಶಕ್ತಿಯುವರು ಕಾಳಾಮುಖರೆಂದು ಅದೇ ಗ್ರಂಥದ ೨ನೇ ಭಾಗದ ಒಂದು ಲೇಖದಲ್ಲಿ ಉಲ್ಲೇಖವಾಗಿದೆ. ಚಂದ್ರಗುಂಡರು ಅಷ್ಟಾವರಣದ ವೀರಶೈವರಾಗಿದ್ದರೆ ದಾಸಿಮಯ್ಯನಿಗೆ ಬರಿ ಉಪದೇಶ ಮಾಡದೆ ಇಷ್ಟಲಿಂಗ ದೀಕ್ಷೆಯನ್ನು ಕೂಡ ಮಾಡುತ್ತಿದ್ದರು.

ಇನ್ನು ವೀರಶೈವ ಸಂಸ್ಕೃತ ಗ್ರಂಥಗಳ ವಿಚಾರವಾಗಿ ಈ ಮುಂಚೆ ಅನೇಕರು ಅವೆಲ್ಲವೂ ೧೩ನೇ ಶತಮಾನದಿಂದೀಚೆಗೆ ಬರೆಯಲ್ಪಟ್ಟುವೆಂದು ಅನೇಕರು ಸಿದ್ಧಾಂತಮಾಡಿದರು. ಇದಕ್ಕೆ ಇವರು ಕೊಟ್ಟ ಕಾರಣಗಳನ್ನು ವಾದಿಗಳು ಖಂಡಿಸಿಲ್ಲ. ಹಾಗೆ ಖಂಡಿಸಲಿಕ್ಕೆ ಆಗಿಲ್ಲ. ಶ್ರೀಕರ ಭಾಷ್ಯವನ್ನು ತರ್ಜುಮೆಮಾಡಿದ ಹಯವದನರಾಯರೇ ಅದರಲ್ಲಿ ತಿರುಪತಿಯ ವಿರೇಶನನ್ನು ರಾಮಾನುಜಾಚಾರ್ಯರು ವೆಂಕಟರಮಣನನ್ನಾಗಿ ಮಾರ್ಪಡಿಸಿದ ವಿಷಯವು ಬಂದಿರುವದರಿಂದ ಅದು ೧೪-೧೫ನೇ ಶತಮಾನದ ಗ್ರಂಥವೆಂದು ಹೇಳಿರುವದನ್ನು ವಾದಿಗಳು ಅಲ್ಲಗಳೆಯುವದು ಆಗಿಲ್ಲ. ಶಿವಕುಮಾರರು ಅದು ೧೮೯೩ನೇ ೧೯ನೇ ಶತಮಾನದ ಗ್ರಂಥವೆಂದು ಒಂದು ಲೇಖಾಂಕವನ್ನೇ ಪ್ರಕಟಿಸಿದರೂ ಆ ಕಾರಣಗಳನ್ನು ಈವರೆಗೂ ಯಾರಿಂದಲೂ ಅಲ್ಲಗಳೆಯುವದು ಆಗಿಲ್ಲ. ಸಿದ್ಧಾಂತ ಶಿಖಾಮಣಿ ಮತ್ತು ನೀಲಕಂಠಭಾಷ್ಯ ೧೩-೧೪ನೇ ಶತಮಾನಗಳ ಗ್ರಂಥಗಳೆಂದು ಈವರೆಗೂ ಅನೇಕರು ಶಾಸ್ತ್ರೀಯ ರೀತಿಯಾಗಿ ಸಿದ್ಧಪಡಿಸಿರುವದನ್ನು ವಾದಿಗಳಿಗೆ ಅಲ್ಲಗಳೆಯಲು ಶಕ್ಯವಾಗಿಲ್ಲ. ರೇವಣಸಿದ್ಧನು ನಿರ್ಲಜ್ಯ ಶಾಂತಮಯ್ಯನಿಂದ

ಇಷ್ಟಲಿಂಗಧಾರಣೆ ಮಾಡಿಕೊಂಡನು. ಬಾಳೆಹಳ್ಳಿ ಪೀಠವು ರುದ್ರಮುನಿಯಿಂದ ಸ್ಥಾಪಿತವಾಯಿತು. ಕಾಶೀ ಶ್ರೀಶೈಲ ಕೇದಾರ ಪೀಠಗಳ ಕ್ಷೇತ್ರಾಧಿಪತಿಗಳು ಬಸವನ ಕಾಲದಲ್ಲಿ ಇಷ್ಟಲಿಂಗಧಾರಿಗಳಾದರು. ವೀರಶೈವದ ವಿಜೃಂಭಣೆಯಿಂದ ಕಾಳಮುಖ ಮುಂತಾದ ಶೈವಪಂಥಗಳು ಹೇಳ ಹೆಸರಿಲ್ಲದೆ ಹೋದವು.

ಆದರೆ ಬಸವನ ಕಾಲದಲ್ಲಿ ಮೂರ್ತಿಭಜಿಸದ ಅಷ್ಟವರ್ಣಾಂತರ್ಗತ ವೀರಶೈವದ ಕುರುಹುಗಳಿಲ್ಲವೂ ದೇವರ ದಾಸಿಮಯ್ಯನ ವಚನಗಳಲ್ಲಿ ಬಂದಿರುವವು. ಅವನು ಜಯಸಿಂಹನ ಹೆಂಡತಿ ಮುಂತಾದ ಸಾವಿರಾರು ಜನರಿಗೆ ಇಷ್ಟಲಿಂಗದೀಕ್ಷೆಯನ್ನು ಕೊಟ್ಟನು.

ಅಂದಮೇಲೆ ದೇವರ ದಾಸಿಮಯ್ಯನಲ್ಲದೇ ಮತ್ತ್ಯಾರಿಂದ ಮತ್ತು ಯಾವಾಗ ಶೈವವು ಉತ್ಕ್ರಾಂತಿಯಾಗಿ ವೀರಶೈವವಾಗಿ ಮಾರ್ಪಟ್ಟಿತು ?

ವಚನ ದರ್ಮವೇ ನಿಜವಾದ ಲಿಂಗವಂತ ದರ್ಮವೆನ್ನುವದಕ್ಕೆ

### ಮನಗಾಣುವ ಹೆಚ್ಚಿನ ಸಂಗತಿಗಳು:

ವೀರಶೈವವು ಶಿವಶರಣರಿಂದಲೇ ಉಗಮವಾಯಿತೆನ್ನಲಿಕ್ಕೆ ಈಗ ರೂಢಿಯಲ್ಲಿದ್ದ ಸಂಗತಿಗಳೇ ಸಾಕ್ಷಿಯು.

ವೀರಶೈವವು ಆರು ಸ್ಥಲಗಳುಳ್ಳದ್ದು. ಇವುಗಳಿಗೆ ಬಹಿರಂಗವಾಗಿ ಸ್ಥಾನಗಳು ಕಲ್ಪಿಸಲ್ಪಟ್ಟು ಈಗ ಪ್ರಚಲಿತ ರೂಢಿಯಲ್ಲಿವೆ. ನಾಲ್ಕನೆಯು ಪ್ರಾಣಲಿಂಗಿ ಅನುಭವ ಭಕ್ತಿಯ ಜ್ಞಾನದ ಆರಂಭ ಸ್ಥಳಕ್ಕೆ ಪಟ್ಟಾಧ್ಯಕ್ಷರು ಪ್ರತಿನಿಧಿಗಳು ಕಟ್ಟಾ ಬ್ರಹ್ಮಚಾರಿಗಳು ಐದನೆಯದು ಆನಂದ ಭಕ್ತಿಯ ಶರಣಸ್ಥಲವು ಗೃಹಸ್ಥರಿರಬಹುದು ಆರನೆಯದು ಐಕ್ಯ ಸ್ಥಲವು ಇದಕ್ಕೆ ನಿರಾಭಾರಿ ಜಂಗಮ ವಿರಕ್ತರಾದ ನಿರಂಜನ ಮೂರ್ತಿಗಳೇ ಸಮರಸಭಕ್ತಿ( ಅರಿವಿನ ಅನನ್ಯ ತನ್ನಲ್ಲಿಯೇ ಹುದುಗಿದ ಪರಮಾತ್ಮ ಭಕ್ತಿ ) ಯ ಪ್ರತಿನಿಧಿಗಳು ಈ ಆರನೆಯ ಸ್ಥಳಕ್ಕೆ ಆರಂಭಕ್ಕೆ ಮೊದಲನೆಯ ಸಾರೆ ಬಸವಾದಿ ಪ್ರಮಥರಿಂದ ಆರಿಸಲ್ಪಟ್ಟವರೆಂದರೆ ಅಲ್ಲಮ ಪ್ರಭುಗಳು ಇವರೇ ಈಗಿನ ವಿರಕ್ತರಿಗೆ ಮೂಲಪುರುಷರು. ಅಂದ ಮೇಲೆ ಶಿವಶರಣರಾದ ಪ್ರಮಥರಿಂದಲೇ ವೀರಶೈವ ದಾರ್ಶನಿಕ ವ್ಯವಸ್ಥೆಯು ಶಿವಾನುಭವ ಮಂಟಪದಿಂದಾಗಿ ಈಗಲೂ ರೂಢಿಯಲ್ಲಿದೆ. ತತ್ಪೂರ್ವದಲ್ಲಿ ಸ್ಥಾವರ ಲಿಂಗ ಪೂಜೆಯು ಶೈವದರ್ಮವಿತ್ತು.

ಶೈವ ದರ್ಶನದಲ್ಲಿ ಆರು ಸ್ಥಲಗಳೂ ಅವುಗಳ ಸ್ಥಾನಗಳ ಪ್ರತಿನಿಧಿಗಳೂ ಇದ್ದಿಲ್ಲ, ದುರ್ವಾಸನು ಶೈವ ದರ್ಶನದ ಋಷಿ ಅಥವಾ ಮುನಿ ಅಲ್ಲದೆ ವೀರಶೈವ ಜಂಗಮನಲ್ಲ ಸಿದ್ಧಾಂತ ಶಿಖಾಮಣಿಕಾರರು ವಚನ ಷಟ್‌ಸ್ಥಲಗಳ ವಿಚಾರಗಳನ್ನೇ ಆಧಾರವಾಗಿ ತೆಗೆದುಕೊಂಡು ಸಂಸ್ಕೃತದಲ್ಲಿ ಬರೆದಿದ್ದಾರೆ. ಇವರು ಸೊಲ್ಲಾಪುರದ ಸಿದ್ಧರಾಮೇಶ್ವರ ಶಿವಯೋಗಿಗಳ ತರುವಾಯ ನಾಲ್ಕನೆಯವರಿದ್ದು ೧೩ನೆಯ ಶತಮಾನದ ಅಂತ್ಯದವರು. ಇವರು ತಮ್ಮನ್ನೇ ಶಿವಯೋಗಿ ರೇಣುಕಾಚಾರ್ಯರೆಂದು ಕರೆದುಕೊಂಡಿದ್ದಾರೆ.

ಪೌರಾಣಿಕ ರೀತಿಯಿಂದ ಮೊದಲನೆಯ ರೇಣುಕಾಚಾರ್ಯರು ಶಿವನ ಒಡ್ಡೋಲಗದಲ್ಲಿದ್ದವರು ಎಂದು ನಂಬುತ್ತಾರೆ. ಸಿದ್ಧಾಂತ ಶಿಖಾಮಣಿಕಾರರು ತಮ್ಮನ್ನೇ ಈ ಶಿವನ ಒಡ್ಡೋಲಗದಲ್ಲಿದ್ದ ರೇಣುಕಾಚಾರ್ಯರೆಂದು ಅಂದು ಕೊಂಡಿದ್ದಾರೆ. ಈ ರೀತಿಯಾಗಿ ವೀರಶೈವವು ಬಸವಣ್ಣನವರ ಶಿವಾನುಭವ ಮಂಟಪದಿಂದಲೇ ದಾರ್ಶನಿಕವಾಗಿಯೂ ಬಹಿರಂಗ ಸ್ಥಾನಗಳಾಗಿಯೂ ವ್ಯವಸ್ಥೆ ಮಾಡಲ್ಪಟ್ಟಿದೆ. ವೀರಶೈವರು ಅತಿ ವರ್ಣಾಶ್ರಮಿಗಳು ಅವರಿಗೆ ವರ್ಣಾಶ್ರಮಗಳ ಅವಶ್ಯಕತೆಯಿಲ್ಲ. ಇಚ್ಛೆಯುಳ್ಳವರು ಶಿವನ ಭಕ್ತಿ ಮೈಯುಂಡವರು ಬ್ರಹ್ಮಚಾರಿಗಳಾಗಿರಬಹುದು. ಮಠಗಳಿಗೆ ಅಧಿಪತಿಯಾದವರು ಭಕ್ತರ ವಿಶ್ವಾಸ ಆದರಗಳಿಗೆ ಪಾತ್ರರಾಗಬೇಕೆನ್ನುವವರು ಕಟ್ಟಾ ಬ್ರಹ್ಮಚಾರಿಗಳಾಗಿರುವದು ರೂಢಿಯಲ್ಲಿದೆ. ಈ ಆರು ಸ್ಥಲಗಳಲ್ಲಿ ಮೊದಲಿನ ಮೂರು ಸ್ಥಲಗಳು ಕ್ರಿಯಾಪ್ರಧಾನವಾದವುಗಳು. ಮುಂದಿನ ಮೂರು ಸ್ಥಲಗಳು ಜ್ಞಾನಪ್ರಧಾನವಾದವುಗಳು. ಕ್ರಿಯೆಯನ್ನೇ ಹೇಳಲು ತಮಗೆ ಅಧಿಕಾರವುಂಟು, ಅಪ್ಪಣೆಯುಂಟು ಕಡೆಯ ಮೂರು ಸ್ಥಲಗಳ ಜ್ಞಾನ ಹೇಳಲು ಅಪ್ಪಣೆ ಇಲ್ಲವೆಂದು ಬಲ್ಲವರು ಹೇಳುತ್ತಾರೆ. ವಚನ ಗ್ರಂಥಗಳಿಂದ ಸಿದ್ಧಾಂತ ಶಿಖಾಮಣಿ ಸಂಸ್ಕೃತ ಗ್ರಂಥದಿಂದ ಎಲ್ಲ ಸ್ಥಲಗಳ ಮರ್ಮವನ್ನು ಲಿಂಗೈಕ್ಯ ಹರ್ಡೆಕರ ಮಂಜಪ್ಪನವರು ಕನ್ನಡದಲ್ಲಿ ವೀರಶೈವ ತತ್ವಗಳು ಎಂಬ ಗ್ರಂಥದಲ್ಲಿ ಬರೆದಿದ್ದಾರೆ ಕಡೆಯ ಮೂರು ಸ್ಥಲಗಳ ಜ್ಞಾನವನ್ನು ತಿಳಿಸುವದು ತಿಳಿದುಕೊಳ್ಳುವದು ಮಹತ್ವದ್ದು. ಅಂದರೆ ಮಾತ್ರ ತಾನಾರೆಂಬುವದು ಗೊತ್ತಾಗಿ ಅನುಭವವಾಗುವದು. ಶಿವಶರಣರ ಪೂರ್ವದಲ್ಲಿ ಆಗಮಗಳು ಕೇವಲ ಶೈವಾಗಮಗಳು ವೀರಶೈವವನ್ನು ಪ್ರತಿಪಾದಿಸುವದಿಲ್ಲ. ಆದ್ದರಿಂದ ವಚನಗ್ರಂಥಗಳ ಅಭ್ಯಾಸದ ಅವಶ್ಯಕತೆ.

---

# ಚಿತ್ (ಚಿತ್ತು).

(ಲೇಖಕ:— ಶ್ರೀ. ಬಸವಪ್ಪ ಚನ್ನಪ್ಪ ಪಟ್ಟೇದ.)

ಚಿತ್ ಅಂದರೆ, ಅನಾದಿ ಲಿಂಗದಿಂದ [ಸ್ವಸ್ಥ ಲಿಂಗದಿಂದ ಇಲ್ಲವೆ ಪರಶಿವನಿಂದ ಅಥವಾ ಸ್ಥಳದಿಂದ] ಸೃಷ್ಟಿ ನಿರ್ಮಾಣ ಮಾಡಲಿಕ್ಕೆ ಹೊರ ಬಿದ್ದ ಶಕ್ತಿಯು. ಈ ಶಕ್ತಿಯು ಮೊದಲು ಆ ಲಿಂಗದಲ್ಲಿಯೇ ಇತ್ತು, ಬೀಜದಲ್ಲಿ ಮೊಳಕೆಯ ಸೂಕ್ಷ್ಮಾಂಶವು ಇದ್ದಂತೆ ? "

"ಲೀಯತೆ ಗಮ್ಯತೆ ಯತ್ರ । ಜಗದೇತದ್ಚರಾಚರಮ್ ॥
ತದೇವಂ ಲಿಂಗಮಿತ್ಯಾಹು: । ಲಿಂಗ ತತ್ವ ವಿಶಾರದಾಃ ॥ ॥ ಇದೇ ಅನಾದಿ ಲಿಂಗವು.

"ಅಯಃ ಪೂರ್ಣಮಿದಂ ಪೂರ್ಣಮ್ । ಪೂರ್ಣಾತ್ ಪೂರ್ಣ ಮುದುಚ್ಯತೆ ॥
ಪೂರ್ಣಸ್ಯ ಪೂರ್ಣಮಾದಾಯಃ । ಪೂರ್ಣ ಮೇವಾವ ಶಿಷ್ಯತೆ ॥೧॥

ಎಂದು ಹೇಳಿರುವದರಿಂದ, ಲಿಂಗವು ಮೊದಲು ಪೂರ್ಣವೇ ಇದ್ದು, ಅದರೊಳಗಿಂದ ಹೊರಟ ಶಕ್ತಿ (ಚಿತ್ತು) ಯು ಸಹ ಪೂರ್ಣವು. ಶಕ್ತಿಯು ಹೊರಟ ತರುವಾಯ, ಹಿಂದುಳಿದ ಲಿಂಗವಾದರೂ ಪೂರ್ಣವಾದುದು. ಆದ ರಂತೆಯೇ ಶಕ್ತಿಯು ಸಹ ಜಗತ್ತು ನಿರ್ಮಿಸಿದರೂ ಮತ್ತೂ ಪೂರ್ಣವೇ ಉಳಿದಿರುವದು. ಈ ಶಿವಚಿತ್ಕಳೆಯು, ಮನುಷ್ಯನ ತನುವಿನಲ್ಲಿ ಶಿರಸ್ಸಿನೊ ಳಗೆ ಜ್ಞಾನರೂಪದಿಂದ ವಾಸಿಸುತ್ತದೆ.

ಅನಾದಿಲಿಂಗವು ಅನಂತವಾದ ಮಹಾಜ್ಞಾನವು. ಅದರಿಂದ ಹೊರಟ ಚಿತ್ತು (ಚಿತ್) ಸಹ ಅನಂತವಾದ ಮಹಾಜ್ಞಾನ ಸ್ವರೂಪವೇ! ಈ ಚಿತ್ತು ಲಿಂಗದಿಂದ ಹೊರಬೀಳುವಾಗ, 'ಓಂ' ಎಂದು ಪ್ರಕಟವಾಯಿತು. ಹೀಗೆ ಇದು ತೀರ ಹೊಸದಾಗಿ ಹೊರಟುದರಿಂದ, ಇದಕ್ಕೆ ಮೂಲಪ್ರಣವವೆಂದು ಹೆಸರುಂಟಾಯಿತು. ಈ 'ಓಂ' ಕಾರವು ಊಹಿಸಲಾರದಷ್ಟು (ಅವಗಾಹನೆಗೆ ಬಾರದಷ್ಟು) ಅಪರಂಪಾರ ಗಾಂಭೀರ್ಯಉಳ್ಳುದಾಗಿದೆ. ಇದನ್ನೇ ಅಜಪ ವೇದವೆಂದು ಕರೆದಿರುವರು. ಈ ಮೂಲ ಪ್ರಣವದಿಂದ 'ನಂ, ಮಂ, ಶಿಂ, ವಂ, ಯಂ, ಓಂ, ಅಂ, ಉಂ, ಮಂ (ಮ್), ಬಂ, ಸಂ, ವಂ, ' ಎಂಬ ಹನ್ನೆರಡು (೧೨) ಪ್ರಣವಗಳು ಹುಟ್ಟಿದವು. ಅದರಂತೆ ತ್ಯಾಗಾಂಗ, ಭೋಗಾಂಗ, ಯೋಗಾಂಗ, ಈಶ್ವರಾಂಗ (ಭಕ್ತಾಂಗ), ಮಹೇಶ್ವರಾಂಗ

ಪ್ರಸಾದ್ಯಂಗ, ಪ್ರಾಣಲಿಂಗ್ಯಂಗ, ಶರಣಾಂಗ, ಐಕ್ಯಾಂಗ, ಸ್ಥೂಲಾಂಗ, ಸೂಕ್ಷ್ಮಾಂಗ, ಕಾರಣಾಂಗಗಳೆಂದು, ಹನ್ನೆರಡು (೧೨) ಅಂಗಗಳೂ ಹುಟ್ಟಿದವು. ಅಂಗವೆಂದರೆ ಹೊರಗೆ ಬಂದುದು, ಲಿಂಗವೆಂದರೆ ಒಳಗೆ ಇದ್ದುದು. ಲಿಂಗವು ಪೂಜ್ಯ, ಅಂಗವು ಪೂಜಕ. ಮೇಲೆ ಹೇಳಿದ ಪ್ರಣವಗಳೇ ಲಿಂಗರೂಪವನ್ನು ತಾಳಿರುವವು. ಅಂದರೆ ೧೨ ಪ್ರಣವಗಳಿಂದ, ೧೨ ಲಿಂಗಗಳು ಹುಟ್ಟಿದ್ದರೂ ಅವನ್ನು ಒಂಬತ್ತೇ ಎಂದು ತಿಳಿದಿರುವರು. ಅವಕ್ಕೆ ನವಲಿಂಗಗಳೆಂದು ಕರೆದಿರುವರು. ಅವು— ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ, ಮಹಾಲಿಂಗ, ನಿಷ್ಕಲಲಿಂಗ (ಇಷ್ಟಲಿಂಗ), ನಿಃಶ್ಶೂನ್ಯಲಿಂಗ (ಪ್ರಾಣಲಿಂಗ), ನಿರಂಜನಲಿಂಗ (ಭಾವಲಿಂಗ), ಎಂಬವು ಪ್ರಮಥರು ಭಾವಿಸಿದ ಲಿಂಗಗಳು ಇವೇ. ತ್ಯಾಗಾಂಗ ಭೋಗಾಂಗ ಯೋಗಾಂಗಗಳಿಂದ ಇಷ್ಟ-ಪ್ರಾಣ-ಭಾವಗಳೆಂಬ ಮೂರು ಸಕಲ ಲಿಂಗಗಳೂ, ಸ್ಥೂಲಾಂಗ, ಸೂಕ್ಷ್ಮಾಂಗ, ಕಾರಣಾಂಗಗಳಿಂದ ಮೂರು ಶೂನ್ಯಲಿಂಗಗಳೂ, ಹುಟ್ಟಿರುವವು. ಇವನ್ನು ಆರು ಲಿಂಗಗಳಾಗಿ ಊಹಿಸಿದೆ. ಮೂರು ಸಕಲ ಲಿಂಗಗಳನ್ನು ಮೂರು ಶೂನ್ಯಲಿಂಗಗಳಲ್ಲಾಗಲೀ ಆ ಶೂನ್ಯಲಿಂಗಗಳನ್ನು ಆ ಸಕಲಲಿಂಗಗಳಲ್ಲಿಯಾಗಲೀ ಎಣಿಸುವದರಿಂದ, ಒಂಬತ್ತೇ ಲಿಂಗಗಳಾಗಿವೆ. ಆದರೂ ಹಸ್ತಜಪದಲ್ಲಿ ಮಾತ್ರ ೧೨ ಲಿಂಗಗಳನ್ನು ಎಣಿಸುವದುಂಟು. ಪ್ರಣವಗಳಿಗೆ ಮುಂದೆ (ಮಹಾಲಿಂಗದಿಂದ ಚಿತ್ತ) ಶಕ್ತಿ ಎಂಬ ಹೆಸರು ಪ್ರಾಪ್ತವಾಯಿತು.

ಶಕ್ತಿದೇವಿಗೆ ಕುಂಡಲಿ, ಫಣಿಕುಂಡಲಿ (ಕುಂಡಲಿ ಸರ್ಪ) ಎಂಬ ಹೆಸರುಗಳೂ ಆವೆ. ಜಗತ್ತನ್ನು ವಿರಚಿಸುವಾಗ ಶಕ್ತಿಗೆ ಅಧೋಮುಖವಾಗಿಯೇ ಸಾಗಬೇಕಾಗುವದು. ಕುಂಡಲಿ ಸರ್ಪವು ಕೆಳಮುಖವಾದಾಗ ಅದಕ್ಕೆ ಜೀವವೆನ್ನುವರು. ತದಂತರ್ಗತವಾಗಿರುವ ಮನಸ್ಸನಕಾ ಆ ವಿಷಯಗಳಲ್ಲಿಯೇ ನಿಮಗ್ನವಾಗಿ ಬಿಡುವದು. ಆದುದರಿಂದ ಅನೇಕ ತಾಪ ಕಷ್ಟಗಳುಂಟಾಗುವವು. ಇದನ್ನೇ ಆ ಕುಂಡಲಿ ಸರ್ಪವು ಅಧೋಮುಖವಾಗಿ ನರಕವನ್ನು ಭುಂಜಿಸುವದೆಂದು ಹೇಳಿರುತ್ತಾರೆ. ಅದಕ್ಕೆ ಆಗ ಆ ಫಣಿಕುಂಡಲಿಯು ಜೇಸತ್ತು ಜಿಗುಪ್ಸೆಯನ್ನು ಹೊಂದಿ, ಊರ್ಧ್ವಮುಖ (ಲಿಂಗದತ್ತ ಮುಖ) ವಾದರೆ ಆದಕ್ಕೆ ತನ್ನ ನಿಜರೂಪದ ಅರುಹಾಗಿ, ಶಾಂತಿಯನ್ನು ಹೊಂದಿ, ಲಿಂಗದಲ್ಲಿ ಬೆರೆದು, ಆನಂದಮಯವಾಗುವದು. ಅದನ್ನೇ ಅಮೃತ ಪ್ರಾಶನವೆಂದು ಹೇಳಿದ್ದಾರೆ. ಇದರ ಸ್ಪಷ್ಟೀಕರಣವು ಕೆಳಗಿದೆ.

## ಲಿಂಗ ಪ್ರಸಾದ ಭೋಗ (ಅಮೃತ ಪ್ರಾಯ)

| | | |
|---|---|---|
| ಕಾರಣಾಂಗ (ಮ್) ಮಂ | ಕುಂಡಲಿ ಸರ್ಪವು ಅಮೃತಪ್ರಾಶನ ಮಾಡುವದು | ನಿರಂಜನ ಲಿಂಗ (ಹ್) ಹಂ |
| ಸೂಕ್ಷ್ಮಾಂಗ ಉ. | | ನಿಶ್ಶೂನ್ಯ ಲಿಂಗ ಕ್ಷಂ. |
| ಸ್ಥೂಲಾಂಗ ಅ. | | ನಿಷ್ಕಲ ಲಿಂಗ ಓಂ. |
| ಯೋಗಾಂಗ ವ. | | ಭಾವಲಿಂಗ (ಮ್) ಮಂ. |
| ಭೋಗಾಂಗ ಸ. | | ಪ್ರಾಣಲಿಂಗ ಉ. |
| ತ್ಯಾಗಾಂಗ ಬ. | | ಇಷ್ಟಲಿಂಗ ಅ. |

ಮೇಲ್ಮುಖ ಕುಂಡಲಿ ಸರ್ಪ

ಶೂನ್ಯ ಲಿಂಗಗಳು. ಶಾಂತಿದಾಯಕ ವಿಷಯಗಳಲ್ಲಿ (ಚಂದ್ರ ಮಂಡಲ.)

| |
|---|
| ನಾದಲಿಂಗ |
| ಬಿಂದುಲಿಂಗ |
| ಕಲಾಲಿಂಗ |

ಚಂದ್ರಮಂಡಲದ ಆಚೆಗೆ ಅಗ್ನಿಮಂಡಲ. ಅಲ್ಲಿ ಎಲ್ಲ ಉರಿದು ಅನಾದಿ ಲಿಂಗ (ಸ್ಥಳ; ನೆಲೆ) ವೇ ಉಳಿಯುವದು.

| | | | |
|---|---|---|---|
| ಓಂ | ಮಹಾಲಿಂಗ. | ಹ ಮತ್ತು ಕ್ಷ | ೨ |
| ಯ | ಪ್ರಸಾದ ಲಿಂಗ | ಅ ದಿಂದ ಅ | ೧೬ |
| ವಾ | ಜಂಗಮ ಲಿಂಗ | ಕ ದಿಂದ ಡ | ೧೨ |
| ಶಿ | ಶಿವ ಲಿಂಗ | ಡ ದಿಂದ ಫ | ೧೦ |
| ಮಃ | ಗುರು ಲಿಂಗ | ಬ ದಿಂದ ಲ | ೬ |
| ನ | ಆಚಾರ ಲಿಂಗ | ವ ದಿಂದ ಸ | ೪ |

ಶಕ್ತಿಯುತ ಕಡೆಗೆ ಕಲಾಯುತ
(ಸಶಕ್ತ) (ಸಕಲ)
ಲಿಂಗಗಳು.
ತಾಪದಾಯಕ ವಿಷಯಗಳಿವೆ.
(ಸೂರ್ಯ ಮಂಡಲ)

ಜಗತ್ತು ವಿಷಯಭೋಗ (ದುಃಖಕಾರಕ)

ಕುಂಡಲಿ ಸರ್ಪವು
ಸಕಲಭೋಗ
ಮಾಡುವವರು
ಕೆಳಮುಖ
ಕುಂಡಲಿ ಸರ್ಪ

ತಾಪದಾಯಕ
ವಿಷಯಗಳಿವೆ

ವಚನಶಾಸ್ತ್ರದಲ್ಲಿ ಮೇಲಿಂದ ಮೇಲೆ ಕೆಳಗಿನ ಶಬ್ದಗಳು ಬರುವದುಂಟು; ಅವು:—

ಚಿತ್ ಪೃಥ್ವಿ, ಚಿದ್ವಾರಿ, ಚಿದಗ್ನಿ, ಚಿದ್ವಾಯು, ಚಿದಾಕಾಶ, ಚಿದಾತ್ಮ, ಚಿದ್ಗಂಧ, ಚಿದ್ರಸ, ಚಿದ್ರೂಪ, ಚಿತ್‌ಸ್ಪರ್ಶ, ಚಿಚ್ಛಬ್ದ, ಚಿದ್ಗುರು, ಚಿಲ್ಲಿಂಗ, ಚಿಜ್ಜಂಗಮ, ಚಿತ್ ಪಾದೋದಕ, ಚಿತ್ ಪ್ರಸಾದ, ಚಿದ್ವಿಭೂತಿ, ಚಿದ್ರುದ್ರಾಕ್ಷಿ, ಚಿನ್ಮಂತ್ರ, ಚಿನ್ಮಯ ಶಿವ. ಇವುಗಳ ಸರಿಯಾದ ಅರ್ಥವನ್ನು ತಿಳಿದುಕೊಳ್ಳುವದು ಅತ್ಯವಶ್ಯವದೆ. ಅವನ್ನು ಮುಂದೆ ಕ್ರಮವಾಗಿ ವಿವರಿಸುವದೇ ಈ ಬರಹದ ಉದ್ದೇಶವಾಗಿದೆ.

೧) ಚಿತ್ ಪೃಥ್ವಿ:— ದೃಶ್ಯ ಪೃಥ್ವಿ ಇಲ್ಲವೆ ಜಗತ್ತು ನಮ್ಮೆಲ್ಲರ ಕಣ್ಣೆದುರು ಇದ್ದೇ ಇರುವದು. ಅದು ಸ್ಥೂಲವಾದುದು, ಜಡವಾದುದು. ಈ ಸ್ಥೂಲತನವನ್ನೂ ಜಡತ್ವವನ್ನೂ ಕಳೆದು, ಅದನ್ನು ಪ್ರಸಾದ ಸ್ವರೂಪದಲ್ಲಿ ಕಾಣುವ ಸೂಕ್ಷ್ಮ ಜ್ಞಾನವೇ ಚಿತ್ತು. ಈ ದೃಷ್ಟಿಯಿಂದ ಕಾಣುವ ಪೃಥ್ವಿಯೇ ಚಿತ್ ಪೃಥ್ವಿಯು.

೨) ಚಿದ್ವಾರಿ: ಸ್ಥೂಲ ಇಲ್ಲವೆ ಜಡವಾರಿಯುವನ್ನು ಎಲ್ಲರೂ ಬಲ್ಲರು. ಆದರ ಸ್ಥೂಲತನ ಜಡತ್ವವನ್ನು ಕಳೆದು, ಪಾದ (ಸ್ಥಳ) ದಿಂದ ಒಸರುವ ಉದಕ ಅಂದರೆ ಪಾದೋದಕವೆಂದು ಅದನ್ನು ಭಾವಿಸಬೇಕು. ಪಾದೋದಕವು, ದೀಕ್ಷಾ ಪಾದೋದಕ, ಶಿಕ್ಷಾ ಪಾದೋದಕ, ಜ್ಞಾನಪಾದೋದಕವೆಂದು, ಮೂರು ತರನಾಗಿಹುದೆಂದು, ಷಟ್‌ಸ್ಥಲ ನಿರೂಪಣೆಯಲ್ಲಿ ಬಂದಿರುವದು. ಈ ತೆರನಾಗಿ ಜ್ಞಾನ ದೃಷ್ಟಿಯಿಂದ ಜಲವನ್ನು ಕಾಂಬುವದೇ ಚಿದ್ವಾರಿಯು.

೩) ಚಿದಗ್ನಿ: ಶಿವನ ಹಣೆಗಣ್ಣಲ್ಲಿ ಮಹಾಜ್ಞಾನರೂಪ ಅಗ್ನಿಯು ಇರುತ್ತದೆ. ಅದನ್ನೇ ರುದ್ರನ ಅಕ್ಷಿ (ರುದ್ರಾಕ್ಷಿ) ಎಂದೆನ್ನುವರು. ಸ್ಥೂಲ ಮತ್ತು ಜಡ, ಈ ದ್ವಿಗುಣಗಳ ದೃಶ್ಯಾಗ್ನಿಯನ್ನು ಮೇಲಿನಂತೆ ಮಹಾಜ್ಞಾನದಿಂದ ನೋಡಿದರೆ, ಅದೇ ಚಿದಗ್ನಿಯಾಗುವದು.

೪) ಚಿದ್ವಾಯು:— ದ್ವಿಗುಣದ ವಾಯುವು ಎಲ್ಲರ ಪರಿಚಯದ್ದು. ಆ ದ್ವಿಗುಣಗಳನ್ನು ಕಳೆದು, ಆ ವಾಯುವನ್ನು ಚೈತನ್ಯ (ಪ್ರಾಣ-ಪ್ರಾಣಲಿಂಗ) ಸ್ವರೂಪದಲ್ಲಿ ಕಾಣುವದೇ ಚಿದ್ವಾಯುವೆನಿಸುವದು.

೫) ಚಿದಾಕಾಶ:— ಇದನ್ನೇ ಚಿದಂಬರವೆಂದೂ ಹೇಳುವರು. ಮೇಲೆ ಹೇಳಿದ ದ್ವಿಗುಣಗಳುಳ್ಳ ಆಕಾಶವು, ನಮಗೆ ಗೊತ್ತುಂಟು. ಅದು ಅಡಗಿ ಎಲ್ಲಿ ನೋಡಿದಲ್ಲೆಲ್ಲ ಶಿವನ ಚಿತ್ ಸ್ವರೂಪವನ್ನೇ (ಏಕಮೇವಾದ್ವಿತೀಯತ್ವವನ್ನೇ) ಕಂಡು, ಉಳಿದುದೆಲ್ಲವನ್ನು ನಾಶಗೊಳಿಸಿದರೆ ಅದೇ ಚಿದಾಕಾಶ (ಚಿದಂಬರ) ವೆನಿಸುವದು.

೬) ಚಿದಾತ್ಮ:— ನಿರ್ದೇಹಾಗಮ, ನಿರ್ಭಾವಾಗಮ, ನಷ್ಟಾಗಮಗಳಿಂದ, ಜೀವಾತ್ಮದ ಸ್ಥೂಲ ಮತ್ತು ಜಡ ಗುಣಗಳನ್ನು ಹೋಗಲಾಡಿಸಿ ಅದನ್ನು ಪ್ರಸಾದ ಸ್ವರೂಪಕ್ಕೊಯ್ದರೆ, ಅದೇ ಚಿದಾತ್ಮವಾಗುವದು. ಆಗ ಅದಕ್ಕೆ ಆತ್ಮದ ಶುದ್ಧ ಸ್ವರೂಪವು ಪ್ರಾಪ್ತವಾಗುವದು.

೭) ಚಿದ್ಗಂಧ:— ಗಂಧವೆಂದರೆ ವಾಸನೆಯು. ಹೂವು ಎಲೆ ಕಾಯಿ ಬೇರು ಹಗಿನ (ಸ್ತಂಭ) ಮೊದಲಾದವುಗಳಲ್ಲಿಯ ವಾಸನೆಯೇ

(ನಾತವು) ದ್ವಿಗುಣಗಳುಳ್ಳದ್ದು. ಅದನ್ನು ನಾಸಿಕದ್ವಾರವಾಗಿ ಇಷ್ಟ ಲಿಂಗಕ್ಕೂ ಅಂತರ್ಲಿಂಗಕ್ಕೂ ಅರ್ಪಣಮಾಡಿ, ಅದನ್ನು ಪ್ರಸಾದ ಸ್ವರೂಪವಾಗಿ ಭಾವಿಸುವದೇ ಚಿದ್ಗಂಧವು.

೮) ಚಿದ್ರಸ:— ಇದು ದ್ವಿಗುಣ ಸಹಿತವಾದುದು. ರಸವು ಮಧುರ, ಒಗರ, ಕ್ಷಾರ (ಉಪ್ಪುಕಾರ) ಆಮ್ಲ, ಕಹಿ, ಎಂಬ ಭೇದ ಉಳ್ಳುದಾಗಿದೆ. ಇವೆಲ್ಲವನ್ನೂ ರಸನೆಯ ಮೂಲಕ, ಇಷ್ಟಲಿಂಗೆಕ್ಕೂ, ಪ್ರಸಾದ ಮಂತ್ರದಿಂದ ಅಂತರ್ಲಿಂಗಗಳಿಗೂ, ಅರ್ಪಿತಮಾಡಿ, ಅದನ್ನು ಪ್ರಸಾದ ಸ್ವರೂಪವಾಗಿ ಎಸಗಿದರೆ, ಅದೇ ಚಿದ್ರಸವು.

೯) ಚಿದ್ರೂಪಃ— ರೂಪೇ ಆಕಾರವೂ ಕೂಡ ದ್ವಿಗುಣಿಯು. ಪೀತ, ಶ್ವೇತ, ರಕ್ತ, ಹರಿತ, ಕಪೋತವೆಂಬ ಪಂಚವಿಧ ರೂಪಗಳನ್ನು ನಯನದ್ವಾರವಾಗಿ ಪ್ರಸಾದ ಮಂತ್ರದಿಂದ, ಇಷ್ಟಲಿಂಗಕ್ಕೂ ಅಂತರ್ಲಿಂಗಗಳಿಗೂ ಅರ್ಪಿತಮಾಡಿ, ಅವುಗಳ ಗುಣದ್ವಯಗಳನ್ನು ಹೋಗಲಾಡಿಸಿದರೆ ಅದೇ ಚಿದ್ರೂಪವಾಗುವದು.

೧೦) ಚಿತ್‌ಸ್ಪರ್ಶಃ— ದ್ವಿಗುಣಸ್ಪರ್ಶವು ಕಠಿಣ, ಮೃದು, ಉಷ್ಣ, ಶೀತ, ಮಿಶ್ರವೆಂದು ೫ ಬಗೆಯದಿರುವದು. ಪ್ರಸಾದ ಮಂತ್ರದಿಂದ ತ್ವಕ್ಕಿನ ಮೂಲಕ ಇಷ್ಟಲಿಂಗಕ್ಕೂ ಅಂತರ್ಲಿಂಗಗಳಿಗೂ, ಅರ್ಪಿತಮಾಡಿ ಪ್ರಸಾದ ಸ್ವರೂಪಕ್ಕೊಯ್ದರೆ ಅದೇ ಚಿತ್‌ಸ್ಪರ್ಶವಾಗುವದು.

೧೧) ಚಿಚ್ಛಬ್ದಃ— ಶಬ್ದವು ಜಾಗಟೆಯ ಮಹಾನಾದ, ತಂತಿಯ ಸೂಕ್ಷ್ಮನಾದ, ಕಾಸಿದರೆ ಧ್ವನಿಗುಡುವ ಚರ್ಮವಾದ್ಯಗಳ ನಾದ, ಕೊಳಲು ಶಂಖ ಮೊದಲಾಗಿ ಊದುವದರಿಂದ ನುಡಿಯುವ ವಾದ್ಯಗಳ ಧ್ವನಿ; ಮಾನವನ ಕಂಠನಾದ ಈ ಐದು ಪ್ರಕಾರವಾಗಿರುವದು. ಶಬ್ದದ ಈ ದ್ವಿಗುಣಗಳನ್ನು ಪ್ರಸಾದ ಮಂತ್ರದಿಂದೆ ಇಲ್ಲಮಾಡಿ ಇಷ್ಟಲಿಂಗಕ್ಕೂ ಕರ್ಣದ್ವಾರವಾಗಿ ಅಂತರ್ಲಿಂಗಗಳಿಗೂ ಅರ್ಪಿತಮಾಡಿ ಪ್ರಸಾದ ಸ್ವರೂಪವನ್ನೈದಿಸಿದರೆ ಅದೇ ಚಿಚ್ಛಬ್ದವೆನಿಸುವದು.

೧೨) ಚಿದ್ಗುರುಃ— ನಿರ್ಗುಣ ನಿರೂಪವಾದ ವಸ್ತುವೇ ಚಿದ್ಗುರುವೆನಿಸುವದು.

೧೩) ಚಿತ್‌ಲಿಂಗ (ಚಿಲ್ಲಿಂಗ)ಃ— ಜೀವಾತ್ಮವು ಶುದ್ಧ ಅಂತರಾತ್ಮನ ಸ್ವರೂಪ ಹೊಂದಿ ಪರಮಾತ್ಮನಲ್ಲಿ ಬೆರೆದು ಏಕರೂಪ ಹೊಂದುವಂತೆ ಆದರೆ ಅದೇ ಚಿಲ್ಲಿಂಗವು.

೧೪) ಚಿಜ್ಜಂಗಮಃ— ವಾಯುವಿನ ಸಹಾಯವಿಲ್ಲದಿರುವ ಜ್ಞಾನ ಮಾತ್ರದಿಂದಲೇ ಉಂಟಾದ ಚೈತನ್ಯವು ( ಅಲೆದಾಟವು ) ಚಿಜ್ಜಂಗಮವು.

೧೫) ಚಿತ್ಪಾದೋದಕಃ— ಮಹಾಲಿಂಗದ ಪಾದದಿಂದ ದ್ರವಿಸುವ ಉದಕವೇ ( ಮಹಾಲಿಂಗದ ಪಾದ ಕೃಪೆಯೇ ) ಚಿತ್ಪಾದೋದಕವು.

೧೬) ಚಿತ್ಪ್ರಸಾದಃ— ಮಹಾಜ್ಞಾನ (ಸಮ್ಯಗ್ ಜ್ಞಾನ) ಯೋಗ ದಿಂದ, ಎಲ್ಲೆಲ್ಲಿಯೂ ಶಿವ ಚಿತ್ಕಳೆಯ ವಿನಾ ಇನ್ನೊಂದು ತೋರದಿರುವ ಸ್ಥಿತಿಯೇ ಚಿತ್ಪ್ರಸಾದವು.

೧೭) ಚಿದ್ವಿಭೂತಿಃ— "अनादि शाश्वतं शांतम् ಇತ್ಯಾದಿ ಸ್ವರೂಪದ ವಿಭೂತಿಯೇ ಚಿದ್ವಿಭೂತಿ.

೧೮) ಚಿದ್ರುದ್ರಾಕ್ಷಿಃ— ರುದ್ರನ ವಿರೂಪವಾದ ಫಾಲಾಕ್ಷಿಯೇ ಚಿದ್ರುದ್ರಾಕ್ಷಿಯು.

೧೯) ಚಿನ್ಮಂತ್ರಃ— ನಿರಂಜನ ಲಿಂಗ ಪ್ರಣವವೇ ವ್ಯಂಜನ "ಹ್" ಕಾರವೇ ಅಥವಾ 'ಹಂ' ಎಂಬುದೇ ಚಿನ್ಮಂತ್ರವು.

೨೦) ಶಿತ್ ಶಿವ ( ಚಿಚ್ಛಿವ )ಃ— ಇವನಿಗೆ ಚಿನ್ಮಯ ಶಿವನೆಂತಲೂ ಕರೆದಿರುವರು. ಪ್ರಜ್ಞಾನ, ಇಲ್ಲವೆ ಮಹಾಜ್ಞಾನ ( ಮಹತ್ತು ) ಇದೇ ಚಿಚ್ಛಿವವು.

ಇವೇ ಮುಂತಾದ ವಿವರಣಗಳನ್ನು ನೋಡಿದರೆ ನಮ್ಮ ಪ್ರಮಥರು ಅದೆಷ್ಟು ಸೂಕ್ಷ್ಮವಿಚಾರಕ್ಕೆ ಕೈಹಾಕಿರುವರೆಂಬುದು, ಸ್ಪಷ್ಟವಾಗಿ ಕಂಡು ಬರುತ್ತದೆ. ಆದುದರಿಂದಲೇ ಪ್ರಮಥರ ಷಟ್‌ಸ್ಥಲ ಸಿದ್ಧಾಂತವೇ 'ಸಿದ್ಧಾಂತ ಶಿಖಾಮಣಿ' ( ಎಲ್ಲ ಧರ್ಮಸಿದ್ಧಾಂತಗಳಲ್ಲಿ ಅತ್ಯಂತ ಮಿಗಿಲಾದುದು ) ಎಂದು ಹೆಸರಾಗಿದೆ. ವೀರಶೈವ ಶಿವಭಕ್ತರು ನಾವು ಇಂತಹ ಶ್ರೇಷ್ಠ ಧರ್ಮದಲ್ಲಿ ಜನ್ಮವಿದ್ದರೂ ಆರಾಧ್ಯರ (ಅಯ್ಯಗಳ) ಮುಷ್ಟಿಗೆ ಒಳಗಾಗಿ ಜೀವಿಸಿ ಜನ್ಮವನ್ನು ವ್ಯರ್ಥವಾಗಿ ಹಾಳುಮಾಡಿ ಕೊಳ್ಳುತ್ತಿರುವುದು ನಮ್ಮ ಪರಮಾವಧಿ ದುರ್ದೈವವೇ ಸರಿ! ಏಕೆಂದರೆ ಅವರ ಧರ್ಮವು ಪ್ರಮಥರ ಧರ್ಮಕ್ಕಿಂತ ಅನೇಕ ರೀತಿಯಲ್ಲಿ ಸದೋಷವಾಗಿದೆ. ಪ್ರಮಥರದು ಅತ್ಯಂತ ಪರಿಶುದ್ಧವಾದುದು. ಈ ವಿಷಯವಾಗಿ 'ಶರಣ ಸಾಹಿತ್ಯ' 'ಶಿವಾನುಭವ' 'ಸಾವಧಾನ' ಪತ್ರಿಕೆಗಳಲ್ಲಿ "ಭಕ್ತ–ಮಾಹೇಶ್ವರರ ತುಲನೆ" ಎಂಬ ಲೇಖವು ಪ್ರಸಿದ್ಧವಾಗಿದೆ. ಅದನ್ನು ಬೇಕಾದವರು ಓದಿ ನೋಡಬಹುದು.

ಒಂದು ಏಕಾಂಕ

# ಹರಭಕ್ತ ಹರಳಯ್ಯ.

(ಬರೆದವರು:— ಶ್ರೀ. ಬಾಣದ ಲಿಂಗಣ್ಣ,
ಲೋ. ಶಾ. ಶಿ. ವಿದ್ಯಾರ್ಥಿ ೨ನೇ ವರ್ಷ ಲಚ್ಯಾಣ.)



## ಪಾತ್ರಪರಿಚಯ.

(೧) **ರಾಮಾಚಾರಿ**........ಕಣ್ಣುಕಾಣದ ಬಡಬ್ರಾಹ್ಮಣ.
(೨) **ಹರಳಯ್ಯ** ........ಹರನೊಲಿಸಿಕೊಂಡ ಶರಣ.
(೩) **ಹೆಂಡತಿ**...............ಹರಳಯ್ಯನ ಧರ್ಮಪತ್ನಿ.
(೪) **ಗುರುಲಿಂಗಯ್ಯ**
(೫) **ಬಸಲಿಂಗಯ್ಯ** } ಉಂಡಾಡಿ ಜಂಗಮರು.
(೬) **ಬಸವಣ್ಣ**............ಭಕ್ತಿಭಂಡಾರಿ ಬಸವಣ್ಣನವರು.
(೭) **ಮಧುವರಸ**.... ......ಬಿಜ್ಜಳನ ರಾಜ್ಯದ ಅಧಿಕಾರಿ.
(೮) **ಗುಂಡಯ್ಯ** ............ಸಾಮಾನ್ಯ ಮನುಷ್ಯ.

## ೧ನೇ ದೃಶ್ಯ.

**ರಾಮಾಚಾರಿ:**— ದೇವಾ ನನ್ನಮೇಲೆ ಸ್ವಲ್ಪಾದರೂ ಕರುಣೆತೋರ್ರಿ ದೇವಾ! ತಮ್ಮ ಶಿವಶರಣರ ಅಡಿಯಾಳು ನಾನು. ಆ ಮಹಾನುಭಾವ ಬಸವಣ್ಣನ ಕಿಂಕರನು ನಾನು. ನನಗೆ ಎರಡೂ ಕಣ್ಣುಗಳು ಕಾಣದಿದ್ದರೂ ಅಣ್ಣನವರ ನಲ್ನುಡಿ ನನ್ನ ಕರ್ಣಪಟಲದ ಮೇಲಾದರೂ ಅಪ್ಪಳಿಸಲಿ, ಅದರಿಂದಲೇ ನಾನು ತೃಪ್ತನಾಗುವೆ. ದೇವಾ ಕೂಡಲಸಂಗಮದೇವಾ, ನಿನ್ನ ನಿಜಭಕ್ತ ಬಸವಣ್ಣನವರನ್ನು ಎಲ್ಲಿ ಅಡಗಿಸಿಟ್ಟಿರುವೆ. ನಾನು ಇಷ್ಟೊಂದು ಕಷ್ಟಸಹಿಸಿ ಇಷ್ಟು ದೂರ ನಡೆದು ಬಂದು ಕಾಣದ ಕಣ್ಣುಗಳು ಕುತೂಹಲದಿಂದ ಹುಡುಕುತ್ತಿವೆ. ತೋರು ದೇವ ನನ್ನ ಅಣ್ಣ ಜಗದಣ್ಣ ಬಸವಣ್ಣನನ್ನು ತೋರುದೇವಾ ಕೂಡಲಸಂಗಮದೇವಾ.

**ಹರಳಯ್ಯ:** — ಅಯ್ಯಾ ನೀನುಯಾರು? ಎಷ್ಟೊಂದು ಹಂಬಲಿಸುತ್ತಿರುವೆಯಲ್ಲ. ಯಾರನ್ನು ಕಳೆದುಕೊಂಡಿರುವೆ?

**ರಾಮಾಚಾರಿ:**— ಮಹಾನುಭಾವ; ನಾನು ಒಬ್ಬ ಮಾನವ ಪ್ರಾಣಿ. ಅಣ್ಣಬಸವಣ್ಣನವರನ್ನು ನಾನು ಕಣ್ಣಾರೆ ನೋಡಿರದಿದ್ದರೂ ಅವರ ನೀತಿ ಸುವಿಚಾರದ ನಡತೆಯ ಕೀರ್ತಿಕೇಳಿ ಅವರ ದರುಶನದಿಂದ ಈ ದೇಹದ ಪಾಪದ ತೊಡರು ಹರಿದುಕೊಳ್ಳಬೇಕೆಂದು ಹಂಬಲಿಸಿ ಬಂದಿರುವೆ.

**ಹರಳಯ್ಯ:**— (ಸ್ವಗತ) ಅಹಾ! ಬಸವಾ ನೀನೇ ಧನ್ಯ! ನೀನೇ ಶರಣ, ನಿನ್ನ ಜನ್ಮ ಸಾರ್ಥಕ.

(ಪ್ರಕಾಶ) ತಮ್ಮ ನಾಡು ಯಾವದು, ತಮ್ಮ ಕಾಯಕ ಯಾವದೆಂಬುದನ್ನು ಹೇಳಬಲ್ಲಿರಾ?

**ರಾಮಾಚಾರಿ:**— (ಸ್ವ.) ಧನ್ಯ! ಕರ್ನಾಟಕಾಂಬೆ ನೀನೇ ಧನ್ಯ!! ಅದರಲ್ಲಿಯೂ ಕಲ್ಯಾಣಪುರವಂತೂ ಆ ಪರಶಿವನ ನೆಲೆಬೀಡು. ಇವರಲ್ಲಿ ಎಷ್ಟೊಂದು ವಿನಯವಿದೆ! ನಿಜವಾಗಿಯೂ ಅಣ್ಣನವರ ಅಮೃತ ವಚನದ ತಿರುಳನ್ನು ಈ ಜನತೆ ಅರಗಿಸಿಕೊಂಡಿದೆ. ಅಯ್ಯಾ ಎಂದರೆ ಸ್ವರ್ಗ, ಎಲವೋ ಎಂದರೆ ನರಕ (ಪ್ರ) ಮಹಾನುಭಾವರೇ ನನ್ನದು ಮೈಸೂರಿನ ಭಾಗ. ನನ್ನ ತಂದೆಯು ಜೋತಿಷ್ಯವನ್ನು ಹೇಳುತ್ತಿರುವ ಕಾಯಕ ಮಾಡುತ್ತಿದ್ದಾರೆ.

**ಹರಳಯ್ಯ:**— ತಡೆಯಿರಿ ತಡೆಯಿರಿ. ಶರಣರೇ ತಮ್ಮ ತಂದೆಯವರು ಮಾಡುತ್ತಿರುವದು ಕಾಯಕವಲ್ಲ. ಕಾಯಕದ ಅರ್ಥಕ್ಕೆ ಅನರ್ಥವನ್ನು ಮಾಡಿ ಕಾಯಕಕ್ಕೆ ಕಲಂಕ ಬಳಿಯಲು ಯತ್ನಿಸುವದು ಉಚಿತವಲ್ಲ. ಕಾಯಕವು ಕಾಯಕವನ್ನು ದಣಿಸುವಂಥದ್ದಿರಬೇಕು. ಕಾಯ ದಣಿದು ಬಂದ ಪ್ರತಿಫಲವನ್ನು ಶಿವಾರ್ಪಣ ಭಾವದಿಂದ ಸೇವಿಸಬೇಕು. ಅಲ್ಲದೆ ಅದು ಸತ್ಯ ಶುದ್ಧವಾಗಿರಬೇಕು.

**ರಾಮಾಚಾರಿ:**— ತಮ್ಮಗಳ ಮಾತಿಗೆ ಒಪ್ಪಿದೆ. ಮಹಾನುಭಾವರೇ ಆದಷ್ಟು ಬೇಗನೆ ನನಗೆ ಅಣ್ಣನವರ ದರುಶನ ಮಾಡಿಸುವಿರಾ?

**ಹರಳಯ್ಯ:**— ಅವಶ್ಯವಾಗಿ ಮಾಡಿಸುವೆ. ಮೊದಲು ಈಗ ಹರನ ಮನೆಗೆ ನಡೆಯಿರಿ. ಇಂದು ಶಿವನು ಕೊಟ್ಟ ಪ್ರಸಾದವನ್ನು ಸೇವಿಸಿ ಶಿವನ ಮಂದಿರದಲ್ಲಿ ತಂಗಿಕೊಳ್ಳಿ! ಮುಂಜಾನೆ ಶಿವಾನುಭವ ಮಂಟಪದಲ್ಲಿ ಅಣ್ಣನವರ ದರುಶನ ಪಡೆದುಕೊಳ್ಳುವಿರಂತೆ.

**ರಾಮಾಚಾರಿ।**— (ಸ್ವ) ದೇವಾ ಎಷ್ಟೊಂದು ಸುಬುದ್ಧಿಯನ್ನು ತುಂಬಿರುವಿ! ಅಲ್ಲ ಇದು ದೇವಕೃತಿಯಲ್ಲಿ ಮಹಾನುಭಾವ ಬಸವಣ್ಣನ ನಡತೆಯ ಫಲದ್ರೂಪ.

(ಪ್ರ) ಆಗಲಿ ತಮ್ಮ ಇಚ್ಛೆಯಂತೆ ಆಗಲಿ.

**ಹರಳಯ್ಯ:**— (ಹೊರಡುವರು) ಅಗೋ ಅಣ್ಣನವರು ಇತ್ತ ಕಡೆಗೆ ಬರುತ್ತಿರುವಂತೆ ಕಾಣುತ್ತಿದೆ. ನಿಜ, ನಿಜ! ಅಣ್ಣನವರು ದರ್ಬಾರಕ್ಕೆ ಹೊರಟರು.

**ರಾಮಾಚಾರಿಃ**— ಎಲ್ಲಿ! ಎಲ್ಲಿ!! ಆ ಮಹಾನುಭಾವರು ಎಲ್ಲಿ!!! ಧನ್ಯ! ಧನ್ಯ!! ನಾನೇ ಧನ್ಯ!!!

( ಬಸವಣ್ಣನವರ ಪ್ರವೇಶ )

**ಹರಳಯ್ಯಃ**— ಬಸವಣ್ಣನವರಿಗೆ ಶರಣು (ನಮಸ್ಕರಿಸುವನು.)

**ಬಸವಣ್ಣ:**— ಶರಣು, ಹರಭಕ್ತ ಹರಳಯ್ಯ ಶರಣು, ಶರಣು.

**ರಾಮಾಚಾರಿಃ**— ಶರಣು, ಮಹಾನುಭಾವರೇ ಶರಣು! ಶರಣು!! ಶರಣು!!!

**ಬಸವಣ್ಣಃ**— ಶರಣು ಶರಣು! ತಮ್ಮಗಳಿಗೆ ಶರಣು!! ತಾವು ಯಾರು?

**ಹರಳಯ್ಯ:**— ತಮ್ಮ ದರ್ಶನಕ್ಕೆ ಬಂದ ಮೈಸೂರಿನ ನಾಡಿನೊಬ್ಬ, ಶರಣರಿವರು.

**ಬಸವಣ್ಣಃ**— ಹರಭಕ್ತ ಹರಳಯ್ಯನವರೇ, ಇವರನ್ನು ಮನೆಗೆ ಕರೆದುಕೊಂಡು ಹೋಗಿ ದೇವಿಯವರಿಗೆ ತಿಳಿಸಿ ನಡೆಯಿರಿ. ದರ್ಬಾರಕ್ಕೆ ವೇಳೆಯಾಗುತ್ತಿದೆ.

**ಹರಳಯ್ಯಃ**— ಮಹಾನುಭಾವರ ಇಚ್ಛೆ- (ಬಸವಣ್ಣನು ಹೋಗುವನು.) ಶರಣರ ಮನೆಗೆ ನಡೆಯಿರಿ.

**ರಾಮಾಚಾರಿಃ**— ತಮ್ಮ ಇಚ್ಛೆ. ಮಹಾನ್ ಶರಣ ಬಸವಣ್ಣನವರ ಇಚ್ಛೆ.

**ಹರಳಯ್ಯಃ**— (ವಚನ ಅನ್ನುತ್ತ ಹೋಗುವರು.)

ಎತ್ತೆತ್ತ ನೋಡಿದಡೆ ಬಸವನೆಂಬ ಬಳ್ಳಿ।
ಎತ್ತಿನೋಡಿದಡೆ ಲಿಂಗವೆಂಬ ಗೊಂಚಲು।
ಒತ್ತಿಹಿಂಡಿದಡೆ ಭಕ್ತಿ ಎಂಬ ರಸವಯ್ಯಾ।

( ತೆರೆ ಬೀಳುವದು. )

## .೨ನೇ ದೃಶ್ಯ.

**ಗುರುಲಿಂಗಯ್ಯ:**— ಏನೋ ಬಸಲಿಂಗಯ್ಯ, ಮಧ್ಯಾನ್ಹದ ಆರು ತಾಸು ಆದರೂ ಇಂದು ಯಾವೂ ಭೋಜನದ ಆಮಂತ್ರಣ ಬರಲಿಲ್ಲ.

**ಬಸಲಿಂಗಯ್ಯ:**— ನಿನಗೆ ಗೊತ್ತಿಲ್ಲವೇನೋ ಗುರುಲಿಂಗಯ್ಯ ? ಈ ದಿವಸ ಇಂದು ಮುಂಜಾನೆ ಸರಿಯಾಗಿ ಏಳುಗಂಟೆಗೆ ಹರಳಯ್ಯ ಹೇಳಿ ಹೋಗಿದ್ದಾನೆ.

**ಗುರುಲಿಂಗಯ್ಯ:**— ಏನೋ ನನಗ ಗೊತ್ತಿಲ್ಲಪಾ ! ಹಾಗಾದರ ನಾನೂ ಜಳಕಾ ಮಾಡಿ ಪಂಜೆ ಉಟಗೊಂಡು ಬರತೀನಿ.

**ಬಸಲಿಂಗಯ್ಯ:**— ಆಮಂತ್ರಣ ಬಂದೈತಿ ಅನ್ನಾನ, ಜಳಕಾ ಮಾಡಲಾಕ ಹೊಂಟನಪಾ. ತನಗೂ ಹೇಳ್ಯಾರೋ ಇಲ್ಲೋ ಏನೂ ವಿಚಾರ ಮಾಡೂವಾಂಗಿಲ್ಲ.

**ಗುರುಲಿಂಗಯ್ಯ:**— ಹೇಳಾಕೇನ ಬಿಡೊ. ನನಗೆಲ್ಲ ಹರಳ್ಯಾಂದು ಗುರುತ ಐತಿ. ಇನ್ನ ಹೇಳಿಲ್ಲ ಅಂತಾ ಬಿಟ್ರ ಹೊಟ್ಟಿಗೆ ಅನ್ನಾನು ತಪ್ಪತೈತಿ. ಕೈಗೆಬರುವ ೫ ದುಡ್ಡೂ ತಪ್ಪತಾವ.

**ಬಸಲಿಂಗಯ್ಯ:**— ಅಲ್ಲೋ, ಇಷ್ಟ ಮಾಡುವದಕ್ಕಿಂತ ಸರಿಯಾಗಿ ಏನಾದರೂ ಕಾಯಕಾ ಮಾಡಿ ಹೊಟ್ಟಿತುಂಬಿಸಿಕೊಳ್ಳಬಾರದೆ ?

**ಗುರುಲಿಂಗಯ್ಯ:**— ಮಂದೀ ಮನ್ಯಾಗ ಊಟಮಾಡೂದು ಒಂದು ನಮ್ಮ ಕಾಯಕಪಾ. ತಿಳಿತ ? ಇರಲಿ, ಆ ಹರಳ್ಯಾ ಊಟಮಾಡಿಸಿದ ಮೇಲೆ ದಕ್ಷಣಾ ಕೊಡತಾನೋ ಇಲ್ಲೋ? ಯಾಕಂದರ ಮೊದಲೇ ಬಡ ಸೂಳೆಮಗ.

**ಬಸಲಿಂಗಯ್ಯ:**— ಬಡವ ಅಂತಾ ಯಾತರ ಮೇಲೆ ಅಂತಿಯೊ ? ನಮ್ಮ ಬಸವಣ್ಣಪ್ಪ ಅವನಿಗೆ ಬೇಕಾದ್ದು ದೊರೆಯುವ್ಹಾಂಗ ಮಾಡತಾರ. ಅವ ಅಂದರ ಬಸಪ್ಪನವರಿಗೆ ಪಂಚಪ್ರಾಣಪಾ.

**ಗುರುಲಿಂಗಯ್ಯ:**— ಹಾಗಾದರ ಹರಳ್ಯಾಂದು ಬಹಳ ಹೇಳತಾರ. ಇಂದು ದಕ್ಷಣಾನ ದೊಡ್ಡದು ಕೇಳೂದು.

**ಬಸಲಿಂಗಯ್ಯ:**— ನೀಯೇನ ಕೇಳಬೇಕಂತಿ ?

**ಗುರುಲಿಂಗಯ್ಯ:**— ನೀಯೇನ ಕೇಳಬೇಕಂತಿ ?

**ಬಸಲಿಂಗಯ್ಯ:**—ನಾನ್ಯ............ ನಾನ್ಯ............ ನೀನ್ಯ ಹೇಳು ಏನ ಕೇಳಬೇಕಂತಿ ?

**ಗುರುಲಿಂಗಯ್ಯಃ**— ನಾ ನೋಡಪಾ. ಮನಿಯೊಳಗ ನಮ್ಮ ಗೃಹಮಂತ್ರಿ............

**ಬಸಲಿಂಗಯ್ಯಃ**— ತಡೆ ತಡೆ. ನೀವು ಮನಿಯೊಳಗೂ ರಾಜ್ಯ ಮಾಡಿಕೊಂಡಿರೇನೋ ? ಗೃಹಮಂತ್ರಿ ಅಂತಾ ಅಂತಿಯಲ್ಲ ?

**ಗುರುಲಿಂಗಯ್ಯಃ**— ಹೌದು. ಗೃಹಮಂತ್ರಿ ಅಂದ್ರ ನಿನಗೆ ಗೊತ್ತಿಲ್ಲಾ ?

**ಬಸಲಿಂಗಯ್ಯಃ**— ನನಗ ಗೊತ್ತಿಲ್ಲಪಾ.

**ಗುರುಲಿಂಗಯ್ಯಃ**— ಗೃಹಮಂತ್ರಿ ಅಂದ್ರ ಶ್ರೀಮತ' ಅಕಟಕಟ ಪಣೇಂದ್ರಿ, ಗುಣೇಂದ್ರಿ, ನನ್ನ ಇಂದ್ರಿ ಗಂಗಿಗೆ.

**ಬಸಲಿಂಗಯ್ಯ**:— ತಡೆ ತಡೆ. ನಿನ್ನ ಹೆಂಡತಿ ಅನ್ನಪಾ.

**ಗುರುಲಿಂಗಯ್ಯಃ**—ಅವಳಿಗೇನೇ.

**ಬಸಲಿಂಗಯ್ಯಃ**— ಏನ ಬೇಡಬೇಕಂತಿ ?

**ಗುರುಲಿಂಗಯ್ಯಃ**— ಮೊನ್ನಿಸುಟ್ಟಾ ಹೇಳತಾಳ. ಅದಕ್ಕ ಒಂದು ಪಿತಾಂಬರ ಬೇಡಬೇಕೂ ಅಂತ ಮಾಡೀನಿ. ನೀನು ?

**ಬಸಲಿಂಗಯ್ಯಃ**— ಸಾದಾ ಮಂದಿ ಕಣ್ಣಿಗೆ ರಬ್ಬ ಕಾಣದ್ಹಾಂಗ ಹೊನ್ನು ಬೇಡಬೇಕಂತೀನಿ.

**ಗುರುಲಿಂಗಯ್ಯಃ**— ಅಂತೂ ಬಸವಣ್ಣ ಏನ ಮಾಡತಾನೋ ನೋಡೋನ ನಡಿ.

## ೩ನೇ ದೃಶ್ಯ.

(ಹೆಂಡತಿಯು ಗೃಹಕೃತ್ಯದಲ್ಲಿ ತೊಡಗಿದ್ದಾಳೆ.)

**ಹರಳಯ್ಯ**:—(ಒಂದೆಡೆ ಕುಳಿತು) (ಸ್ವ) ಶರಣು ಹರಭಕ್ತ ಹರಳಯ್ಯ ಶರಣು ಶರಣು. ಶರಣು ಹರಭಕ್ತ ಹರಳಯ್ಯಾ ಶರಣು ಶರಣು. ಅಯ್ಯೋ ನಾನೆಂಥ ಪಾಪಿ! ಇಂಥ ಪಾಪಿಗೆ ಮಹಾನುಭಾವರು ಶರಣು ಶರಣು ಎಂದು ನುಡಿದರೆ ಎರಡ ಬಾರಿ ಈ ಹೊರೆಯನ್ನು ಹೇಗೆ ಇಳುಹಲಿ! ಬಸವಾ, ಇಂಥ ದೊಂದು ಭಾರ ಹೊರಿಸಿದೆಯಾ ?

**ಹೆಂಡತಿ**:— ಶರಣರೇ ಎಲ್ಲವೂ ಸಿದ್ಧವಾಗಿದೆ. ಸ್ನಾನತೀರಿಸಿ ಶಿವ ಪೂಜೆ ಮಾಡಿಕೊಂಡು ಶಿವಾರ್ಪಣದಿಂದ ಶಿವನ ಪ್ರಸಾದ ಸೇವಿಸಲು ಸನ್ನದ್ಧ ರಾಗಬೇಕೆಂದು ಬೇಡಿಕೊಳ್ಳುವೆ.

**ಹರಳಯ್ಯ:**— ಶರಣು ಹರಭಕ್ತ ಹರಳಯ್ಯ ಶರಣು ಶರಣು ಶರಣು. ಹರಭಕ್ತ ಹರಳಯ್ಯ ಶರಣು ಶರಣು.

**ಹೆಂಡತಿ:**— (ಸ್ವ) ಶರಣರು ಯಾವದೋ ಆಲೋಚನೆಯಲ್ಲಿ ತೊಡಗಿದ್ದಾರೆ. (ಪ್ರ) ಶರಣರೇ.

**ಹರಳಯ್ಯ:**— ದೇವಿ !

**ಹೆಂಡತಿ:**— ಎಲ್ಲವೂ ಸಿದ್ಧವಾಗಿದೆ. ತಮ್ಮ ಭಕ್ತಿಯ ತಲ್ಲೀನತೆಗೆ ಭಂಗ ತಂದದ್ದಕ್ಕಾಗಿ ಭಯದಿಂದ ಕ್ಷಮ ಕೋರುವೆ.

**ಹರಳಯ್ಯ:**— ದೇವಿ ! ನನ್ನ ದೇವಿ !! ಅಣ್ಣನವರು ಹೊರಿಸಿದ ಹೊರೆಯನ್ನು ಇಳುಹಿ ನನ್ನನ್ನು ಈ ಪಾಪದಿಂದ ಬಿಡುಗಡೆ ಮಾಡು.

**ಹೆಂಡತಿ:**— ಶರಣರೆ, ತಮ್ಮಂಥವರ ವಿಚಾರದ ಮುಂದೆ ನನ್ನದು ತೃಣಸಮಾನ ತಾವು ಜ್ಞಾನಿಗಳು, ಶರಣರು, ಮಹಾನುಭಾವರು. ನಾನು ತಮ್ಮ ಚರಣದಾಸಿ. ತಮ್ಮಿಂದ ಪಾವನಳಾಗಬೇಕೆಂದು ಹಂಬಲಿಸುವ ಅಬಲೆ. ರಾಕ್ಷಸಿ ಮಾಯೆ ನಾನು.

**ಹರಳಯ್ಯ:**— ಇದೊಂದು ನನ್ನ ಮೇಲೆ ಭಾರವೇ ? ತಲೆತಿರುಗುತಿದೆ ದೇವಿ, ಹೀಗೇಕೆ ನುಡಿದು ನನ್ನ ಮನ ನೊಂದಿಸುತಿಹೆ ? ನೀನು ಅಬಲೆಯೆ ! ಮಾಯೆಯೆ !! ರಾಕ್ಷಸಿಯೆ !!! ಸುಳ್ಳು.

ತಾ ಮಾಡಿದ ಹೆಣ್ಣು ತೊಡೆಯನೇರಿತ್ತು ।
ತಾ ಮಾಡಿದ ಹೆಣ್ಣು ಬ್ರಹ್ಮನ ನಾಲಿಗೆಯನೇರಿತ್ತು ।
ತಾ ಮಾಡಿದ ಹೆಣ್ಣು ನಾರಾಯಣನ ಎದೆಯನೇರಿತ್ತು ।
ಹೆಣ್ಣು ಹೆಣ್ಣಲ್ಲ, ಹೆಣ್ಣು ಮಾಯೆಯಲ್ಲ. ಹೆಣ್ಣು ಪ್ರತ್ಯಕ್ಷ
ಕಪಿಲಸಿದ್ಧ ಮಲ್ಲಿಕಾರ್ಜುನ ನೋಡಾ.

**ಹೆಂಡತಿ:**— ಸಾಕು ಸಾಕು. ಶರಣರೆ, ಎನ್ನವರು ಎಂದು ಎನ್ನನು ಹೊನ್ನಶೂಲಕ್ಕೇರಿಸುವದು ತರವಲ್ಲ. ತಮಗೆ ಬಂದ ಅಂಥ ಪ್ರಸಂಗವಾದರೂ ಏನು ?

**ಹರಳಯ್ಯ:**— ದೇವಿ ! ಇಂದು ಅಣ್ಣನವರು ಭೆಟ್ಟಿಯಾದಾಗ ನಾನು ಬಸವಣ್ಣ ಶರಣು, ಎಂದು ನಮಸ್ಕರಿಸಿದ ಕೂಡಲೇ ಅಣ್ಣನವರು ಶರಣು ಹರಭಕ್ತ ಹರಳಯ್ಯ ಶರಣು ಶರಣು ಎಂದು ಎರಡು ಸಾರೆ ಶರಣು ಎಂದು ನನ್ನ ಮೇಲೆ ಹೊರೆ ಹೊರಿಸಿದ್ದಾರೆ. ದೇವಿ, ಇದನ್ನು ಮಹಾನುಭಾವರಿಗೆ ಯಾವ ರೀತಿ ಮುಟ್ಟಿಸಲಿ ?

**ಹೆಂಡತಿ:**—(ಸ್ವಗತ) ಬಸವಾ, ಇಷ್ಟೊಂದು ಪರೀಕ್ಷೆಯೆ? ಹರ ತನ್ನ ಭಕ್ತರ ಕಿರಿವಂತೆ ಮಾಡುವ, ಒರೆದು ನೋಡುವ ಸುವರ್ಣದ ಚಿನ್ನದಂತೆ ಅರೆದು ನೋಡುವ ಚಂದನದಂತೆ, ಅರೆದು ನೋಡುವ ಕಬ್ಬಿನ ಕೋಲಿನಂತೆ, ಬೆದರದೆ ಬೆಚ್ಚದೆ ಇದ್ದಡೆ ಹರ ಹಿಡಿದು ಎತ್ತಿಕೊಂಬ. (ಪ್ರ) ಶರಣರೆ, ನನ್ನ ಬಲದೊಡೆಯ ತಮ್ಮ ಎಡದೊಡೆಯ ಚರ್ಮವನ್ನು ತೆಗೆದು ಪವಿತ್ರಗೊಳಿಸಿ, ಶುದ್ಧ ಮನಸ್ಸಿನಿಂದ ಮೊಚ್ಚೆ ತಯಾರಿಸಿ, ಮಹಾನುಭಾವರಿಗೆ ಅರ್ಪಿಸಿದರೆ ಮಾತ್ರ ನಮ್ಮ ಮನವು ಶಾಂತವಾಗುತ್ತಿದೆ, ಎಂದು ಎನ್ನ ಅಂತರಾತ್ಮ ನುಡಿಯುತ್ತಿದೆ. ಅದಕ್ಕೆ ತಮ್ಮಗಳ ಇಚ್ಛೆ?

**ಹರಳಯ್ಯ:**— ದೇವಿ! ಧನ್ಯ. ನಿಜವಾಗಿಯೂ ನೀನು ಯೊಗ್ಯ ಸಲಹೆಯನ್ನು ಕೊಟ್ಟೆ. ಮಹಾನುಭಾವರ ಕಾರ್ಯದಲ್ಲಿ ತಡವೇಕೆ? ನಡೆ. ಸ್ನಾನ ತೀರಿಸಿಕೊಂಡು ಮಡಿಯಿಂದ ಕಾಯಕ ಮಾಡುವಾ ನಡೆ. (ಹೋಗುವರು.)

**ಹರಳಯ್ಯ:**— ಓ ದೇವಿ, ಸ್ನಾನ ತೀರಿತೆ? ಹಾಗಾದರೆ ರೆಂಪಿಗೆಯನ್ನು ಕೈಯಲ್ಲಿ ತೆಗೆದುಕೊಳ್ಳು. ಮಹಾನುಭಾವರ ಧ್ಯಾನ ಮಾಡುತ್ತ ಚರ್ಮವನ್ನು ಸುಲಿದುಕೊಳ್ಳುವಾ.

**ಇಬ್ಬರು:**— ಬಸವನ ಹೊಡೆದವರ, ಬಸವನ ಹೊಗಳದವರ, ಬಸವಾಕ್ಷರತ್ರಯದ ಜಪವಿಲ್ಲದ ದೆಸೆಗೇಡಿ ಮನುಜರ, ಎನ್ನತ್ತ ತೋರದಿರಯ್ಯ.

(ಪಾತ್ರೆಯಲ್ಲಿ ತೊಗಲು ತೊಳೆಯುತ್ತ)

ಬಸವಣ್ಣನೇ ಶರಣು, ಬಸವಣ್ಣನೇ ಶರಣು. ಬಸವಣ್ಣನೇ ಪರಮ ಬಂಧು ಎನಗೆ, ಬಸವಣ್ಣನೇ ತಾಯಿ, ಬಸವಣ್ಣನೇ ತಂದೆ, ಬಸವಣ್ಣನೇ ಪರಮ ಬಂಧು ಎನಗೆ. ಭಕ್ತಿರೂಪನು ಬಸವ, ನಿತ್ಯರೂಪನು ಬಸವ, ಚಿದ್ರೂಪನು ಬಸವ, ಎತ್ತೆತ್ತ ನೋಡಿದರೆ ಅತ್ತತ್ತ ಪರಿಪೂರ್ಣನಾಗಿಪ್ಪನು.

(ಮೊಚ್ಚೆ ಮಾಡುತ್ತ.)

ಬಸವಾ! ಬಸವಾ !! ಬಸವಾ !!! ಬಸವಣ್ಣ, ಬಸವೇಶಾ, ಬಸವರಸ, ಬಸವರಾಜಾ, ಬಸವಾ, ಬಸವಾ, ಬಸವಾ, ಬಸವಾ.

(ಮೊಚ್ಚೆ ತಯಾರಿಸಿದ ಬಳಿಕ.)

**ಹರಳಯ್ಯ:**— ದೇವಿ, ಮೊಚ್ಚೆಗಳು ಎಷ್ಟೊಂದು ಸುಂದರವಾಗಿರುವವಲ್ಲ.

**ಹೆಂಡತಿ:**— ಶರಣರೆ, ಮಾತಿದವರು ನಾವಾಗಿದ್ದರೂ ಮಾಡಿಸಿದ ಮಹಾನುಭಾವರು ಬಸವನಲ್ಲದೆ ಮತ್ತಾರು ಅಲ್ಲ.

**ಹರಳಯ್ಯ:**— ದೇವಿ, ನಿನ್ನ ಬುದ್ಧಿ ಕುಶಲತೆಗೆ ಮೆಚ್ಚಿದೆ. ಎಷ್ಟೊಂದು ಸೂಕ್ಷ್ಮತೆಯಿಂದ ಮಾತನಾಡುವಿ, ಇರಲಿ. ಇನ್ನು ನೀನು ಬಸವರಸನಿಗೆ ಮುಟ್ಟಿಸಿ ಬಂದು ಊಟಮಾಡುವೆ.

**ಹೆಂಡತಿ:**— ತಾವು ಬರುವವರೆಗೂ ದಾರಿಕಾಯುವೆ. ಶರಣರಿಗೆ ಶರಣು.

(ನಮಸ್ಕರಿಸುವಳು.) ತೆರೆ.

## ೪ನೇ ದೃಶ್ಯ.

**ಬಸಲಿಂಗಯ್ಯ:**— ಗುರಲಿಂಗಾ ಬಡಾ ಬಡಾ ಬಾರೋ.

**ಗುರುಲಿಂಗಯ್ಯ:**— ಅಬ್ಬ ಆಅಬ್ಬ ಹೊಟ್ಟೆ ಭಾರ ಆತಪ.

**ಬಸಲಿಂಗಯ್ಯ:**— ಆಗಲೇನ ಮಾಡೀತಪಾ. ಗಂಗಾಳಕತಲಿ ಹತ್ತಿದ್ದಾಂಗ ಬಾಗಬಡುತ್ತಿದ್ದಿ. ಅವನ ಹೆಂಡತಿ ಸಾರು ನೀಡುವಾಗ ತಲಿಮ್ಯಾಲೆ ಬಿದ್ದರೂ ಎಚ್ಚರಿದ್ದಿಲ್ಲ.

**ಗುರುಲಿಂಗಯ್ಯ:**— ಯಾವಾಗೋ ನನಗ ಗೊತ್ತೇ ಇಲ್ಲ.

**ಬಸಲಿಂಗಯ್ಯ:**— ಈಗಾದರೂ ಹತ್ತೈತಿ ನೋಡು, ತಲಿಕೆ ಸಾರು. ಇನ್ನಾದರೂ ಒರಸಿಕೋ.

**ಗುರುಲಿಂಗಯ್ಯ:**— ಹೌದಲ್ಲೋ. ಆವಾಗ ಹೇಳಬಾರದ್ಯ

**ಬಸಲಿಂಗಯ್ಯ:** – ಹೇಳಿದರೂ ಆಗ ಊಟದ ಭರದಾಗ ಇದ್ದಿ.

**ಗುರುಲಿಂಗಯ್ಯ:**— ಇರಲಿ, ನಿನಗೆ ಕೊಟ್ಟ ಹೊನ್ನು ತೆಗೆ ನೋಡೋನ.

**ಬಸಲಿಂಗಯ್ಯ:**— ನಿನ್ನ ಪಿತಾಂಬರ ತೆಗೆ.

(ಒಬ್ಬರಿಗೊಬ್ಬರು ತೋರಿಸುವರು.)

**ಗುರುಲಿಂಗಯ್ಯ:**— ನೀನು ಹೇಳಿದ್ದು ಖರೇ ನೋಡಪಾ. ಏನು ಬೇಡತೀವಿ, ಅವೆಲ್ಲಾ ಮುಂದೆ ಬಂದಬಿಟ್ಟು.

**ಬಸಲಿಂಗಯ್ಯ:**— ಬಸಪ್ಪನವರನ್ನ ಹಾಂಗ ವಲಿಸಿಕೊಂಡಾನೋ.

**ಗುರುಲಿಂಗಯ್ಯ:**— ಇರಲಿ ಬಿಡೋ. ನಮಗೊಂದು ಬೇಡಿದಾಗ ಬೇಕಾದಷ್ಟು ಊಟ, ಬೇಕಾದಷ್ಟು ದ್ರವ್ಯ, ಸಿಗತೈತಿ ಸಾಕಪಾ. ಹೆಚ್ಚಿನದರಾ ನಮಗ್ಯಾಕ ಬೇಕು.

**ಬಸಲಿಂಗಯ್ಯ:**— ಬಸವಣ್ಣನವರು ಇರುತನಕಾ ನಮಗ್ಯಾವದೂ ಕಡಿಮೆ ಇಲ್ಲ. ಇನ್ನೊಮ್ಮೆ ಬಸಪ್ಪನವರ ಹೆಸರು ತಗೊಂಡು ನಮಸ್ಕಾರ ಮಾಡಿ ಹೊರಡೂನು ನಡಿಯಪಾ.

( ಇಬ್ಬರೂ ಬಸಪ್ಪನವರಿಗೆ ಶರಣು ಎನ್ನುತ್ತಾ ಹೋಗುವರು. )

## ೩ನೇ ದೃಶ್ಯ.

( ಬಸವಣ್ಣನವರ ಮನೆ. )

**ಹರಳಯ್ಯ:**— ಶರಣರಿಗೆ ನಮಸ್ಕರಿಸುವೆ.

**ಬಸವಣ್ಣ:**— ಶರಣು ಹರಭಕ್ತ ಹರಳಯ್ಯ.

**ಹರಳಯ್ಯ:**— ಮಹಾನುಭಾವರ್‍ಯೆ

**ಬಸವಣ್ಣ:**— ಅಕಸ್ಮಾತ್ ಶರಣರ ಆಗಮನ.

**ಹರಳಯ್ಯ:**— ತಮ್ಮಗಳ ಅಡಿಯಲ್ಲಿ ಒಂದು ಮಾತನ್ನು ಕೇಳಲು ಬಂದಿರುವೆ.

**ಬಸವಣ್ಣ:**— ಹಾಗನ್ನಬಾರದು ಹರಳಯ್ಯಾ. ತಾವು ವಯೋವೃದ್ಧರು, ಜ್ಞಾನವೃದ್ಧರು ಇಂಥ ತಮ್ಮಂಥ ಹಿರಿಯರು ಈ ರೀತಿ ಮಾತನಾಡಕೂಡದು.

**ಹರಳಯ್ಯ:**— (ಸ್ವ) ಬಸವರಸ, ಎನ್ನ ಮನವನ್ನು ಎಷ್ಟೊಂದು ರೀತಿಯಾಗಿ ಪರೀಕ್ಷಿಸುತ್ತಿರುವೆ ;

(ಪ್ರ) ಎನಗಿಂತ ಕಿರಿಯರಿಲ್ಲ, ಶಿವಭಕ್ತರಿಗಿಂತ ಹಿರಿಯರಿಲ್ಲ, ಎಂಬ ಮಾತು ತಾವೇ ಹೇಳಿಲ್ಲವೇ ? ಅಲ್ಲದೆ ನಿನ್ನಿನ ಅನುಭವಮಂಟಪದಲ್ಲಿ.

ಅಜಕೋಟಿ ವರುಷದವರೆಲ್ಲರೂ ಹಿರಿಯರೇ ? ಹುತ್ತೇರಿ ಬೆತ್ತಬೆಳೆದ ತಪಸ್ವಿಗಳೆಲ್ಲರೂ ಹಿರಿಯರೇ, ನಡಮುರಿದು ತಲೆನಡುಗಿ ನರೆತೆರೆ ಹೆಚ್ಚಿ ಮತಿಗೆಟ್ಟು ಒಂದುನಾಡಹೋಗಿ, ಒಂಬತ್ತುನಾಡುವ ಅಜ್ಞಾನಿಗಳೆಲ್ಲರೂ ಹಿರಿಯರೆ ? ಎಂದು ಚರ್ಚಿಸಲಿಲ್ಲವೆ ?

**ಬಸವಣ್ಣ:**— ಹರಭಕ್ತ ಹರಳಯ್ಯ ನಿನ್ನ ಬುದ್ಧಿ ಸೂಕ್ಷ್ಮ, ಅಳ ಇರಲಿ. ಬಂದಕಾರಣವೇನು ತಿಳಿಸುವಿಯಾ ?

**ಹರಳಯ್ಯ:**— ಮಹಾನುಭಾವರೇ ಹರಳನು ಮಾಡಿದ ಪಾಪದ ಮನವನ್ನು ತೊಳೆದುಕೊಳ್ಳಲು ತನ್ನ ಪಾಪಿದೇಹದ ಚರ್ಮ ಸುಲಿದು ತಮಗಾಗಿ ಮೊಚ್ಚೆ ಮಾಡಿ ತಂದಿರುವೆನು. ಮಹಾನುಭಾವರು ಮೆಟ್ಟಿ, ಪಾಮರನ ಬಿನ್ನಹ ಮನ್ನಿಸಬೇಕಾಗಿ ಬೇಡಿಕೆ. (ಮೊಚ್ಚೆಯನ್ನು ಕೆಳಗಿಡುವನು)

**ಬಸವಣ್ಣ:**— ಅಯ್ಯೋ, ಹರಭಕ್ತ ಹರಳಯ್ಯ ತಮ್ಮ ಪವಿತ್ರ ಚರ್ಮದಿಂದ ತಯಾರಿಸಿದ ಮೊಚ್ಚೆ ಮೆಟ್ಟಲೆ? ಅಯ್ಯೋ ಶರಣಾ ನನ್ನಾವ ನರಕದಲ್ಲಿ ದೂಡಬೇಕೆಂದಿರುವಿ ಕೂಡಲಸಂಗಮದೇವಾ. ಇಷ್ಟೊಂದು ನನ್ನ ಪರೀಕ್ಷೆಯೇ? (ಮೊಚ್ಚೆಯನ್ನು ತಲೆಯಮೇಲೆ ಇಟ್ಟುಕೊಳ್ಳುವನು.)

**ಹರಳಯ್ಯ:**— ಬಸವಾ! ಬಸವರಸ!! ಬಸವರಾಜ!!! ಬೇಡ ಬೇಡ. ನನ್ನ ಅಪರಾಧ ಮನ್ನಿಸು. ನನ್ನನ್ನು ಪಾಪಕೂಪದಲ್ಲಿ ದೂಡಬೇಡ. ತಮ್ಮ ಇಚ್ಛೆಯಂತೆ ವರ್ತಿಸುವೆ.

**ಬಸವಣ್ಣ:**— ಹರಭಕ್ತ ಹರಳಯ್ಯ, ಇವುಗಳನ್ನು ಮೆಟ್ಟಲು ನಾನು ಯೋಗ್ಯನೇ? ಮಹಾನ್ ಕೂಡಲಸಂಗಮನಿಗೆ ಇವುಗಳು ಅರ್ಪಿತವಲ್ಲದೆ ಇನ್ನಾರಿಗೆ ಯೋಗ್ಯ ನೀನೇ ಹೇಳು. ತೆಗೆದುಕೊಂಡು ಹೋಗಿ ಸಂಗಮನಾಥನಿಗೆ ಅರ್ಪಿಸಿಬನ್ನಿ.

**ಹರಳಯ್ಯ:**— ತಮ್ಮ ಇಚ್ಛೆ. ಶರಣರ ಇಚ್ಛೆಗೆ ವಿರುದ್ಧ ನಡೆಯುಲಾರೆ. (ಹೋಗುವನು.)

(ತೆರೆ ಬೀಳುವದು)

## ೬ನೇ ದೃಶ್ಯ.

(ರಸ್ತೆಯಲ್ಲಿ ಮಧುರಸನ ಮನೆ.)

**ಮಧುವರಸ:**— ಲೇ ಹೆರಳ್ಯಾ, ಎಲ್ಲಿಗೆ ಹೊರಟಿರುವೆ?

**ಹರಳಯ್ಯ:**—ಮಾನ್ಯರಿಗೆ ಅನಂತ ಪ್ರಣಾಮಗಳು. ಭಕ್ತನ ತೊಡೆಯ ತೊಗಲಿನಿಂದ ತಯಾರಿಸಿದ ಮೊಚ್ಚೆಯನ್ನು ಶರಣರಿಗೆ ಅರ್ಪಿಸಲು ಹೋಗಿದ್ದೆ ಅವುಗಳನ್ನು ಕೂಡಲಸಂಗಮನಾಥನಿಗೆ ಅರ್ಪಿಸಬೇಕೆಂದು ಶರಣರ ಆಜ್ಞೆ ಆದಮೂಲಕ ಅಲ್ಲಿಗೆ ಹೊರಟಿರುವೆ.

**ಮಧುವರಸಃ**— ಆ ಶರಣ, ನೀ ಹರಳ ಇಬ್ಬರೂ ಕೂಡಿಕೊಂಡು ಊರೊಳಗೆ ಯಾರನ್ನು ಹರಣ ಮಾಡಬೇಕೆಂದಿರುವಿರಿ ?

**ಹರಳಯ್ಯಃ**— ಮಾನ್ಯರೇ, ಹೀಗೆ ಮಾತನಾಡಬೇಡಿರಿ.

**ಮಧುವರಸ:**— ಲೇ ಹರಳ್ಯಾ, ಕಸಾ ಬಳಿದು, ತೊಗಲು ಹೊಲಿದು ಹೊಟ್ಟೆ ತುಂಬಿಕೊಳ್ಳುವ ಮಗಾ ನೀನು. ಇಲ್ಲದ್ದನ್ನೆ ಮಾತನಾಡಿ ನನಗೆ ಇದುರು ವಾದಿಸುವಿಯಾ ? ಬಲು ಜೋಕೆ. ಏನೋ ಹರಳ್ಯಾ, ಮೊಚ್ಚೆ ತೆಗೆ ನೋಡುವಾ. (ತೋರಿಸುವನು) ಇವುಗಳ ಕಿಮ್ಮತ್ತು ಎಷ್ಟು ?

**ಹರಳಯ್ಯಃ**— ಇವುಗಳ ಕಿಮ್ಮತ್ತು ಎಣಿಕೆ ಇಲ್ಲದಷ್ಟು. ಮಹಾನು ಭಾವರ ಜಗವನಾಳುವ ಆ ದೇವನ ಮಚ್ಚೆಯ ಕಿಮ್ಮತ್ತು ಹೇಳಲು ಜಗದೊಳಗಿನ ಒಂದು ಪ್ರಾಣಿಗೆ ಸಾಧ್ಯವೆ ?

**ಮಧುವರಸ:**— ಹರಳ್ಯಾ, ಇಲ್ಲಷ್ದನ್ನು ಬೆಳೆಸುತ್ತಾ ಕೂಡ್ರಬೇಡಾ. ಈ ಮೊಚ್ಚೆಗಳು ನನಗೆ ಬೇಕಾಗಿವೆ. ತೀವ್ರ ಕಿಮ್ಮತ್ತು ಹೇಳು.

**ಹರಳಯ್ಯಃ**— ಬೇಡ ಮಾನ್ಯರೇ, ಸುಮ್ಮನೇ ಸಿಟ್ಟಿಗೆದ್ದು ನೀವೇ ಹಾನಿಗೀಡಾಗುವಿರಿ. "ತನುವಿನ ಕೋಪಾ ತನ್ನ ಹಿರಿತನ ಕೇಡು. ಮನದ ಕೋಪ ತನ್ನ ಅರವಿನ ಕೇಡು. ಮನೆಯೊಳಗಿನ ಕಿಚ್ಚು ಮನೆ ಸುಟ್ಟಿತಲ್ಲದೆ ನೆರೆಮನೆ ಸುಡುವದೆ ಎಂಬುದನ್ನು ಜ್ಞಾಪಿಸಿಕೊಳ್ಳಿ.

**ಮಧುವರಸ**— ಸುಮ್ಮನೆ ಕೆಳಗಿಡುವಿಯೋ, ಮುಟ್ಟಿ ಕಸಿದು ಕೊಳ್ಳಲೋ ?

**ಹರಳಯ್ಯಃ**— ಬೇಡ ಬೇಡ ಮಹಾನುಭಾವರೆ

**ಮಧುವರಸ:**— ಇನ್ನೆಲ್ಲಿ ಬೇಡವೆನ್ನುವಿ. (ಕಸಿದು ಕಾಲಲ್ಲಿ ಮೆಡುವನು. ಹಾಗು ಕೆಳಗೆ ಬಿದ್ದು ಹೊರಳಾಡುತ್ತ) ಅಯ್ಯೋ; ಹೊಟ್ಟೆಯಲ್ಲಿ ಉರಿ. ಸಂಕಟ ನಾನು ತಾಳಲಾರೆ, ನಾನು ಸಾಯುತ್ತೇನೆ. ಅಯ್ಯೋ ; ಉರಿ, ಮೈಯಲ್ಲಿ ಉರಿ.

(ಅಷ್ಟರಲ್ಲಿ ಬಸವಣ್ಣನವರ ಪ್ರವೇಶ.)

**ಬಸವಣ್ಣಃ**— ಇದೇನು ಶರಣ ಹರಭಕ್ತ ಹರಳಯ್ಯ ?

ಹರಳಯ್ಯ:— ಶರಣರೇ, ಹೇಗಾದರೂ ಮಾಡಿ ಈ ಮಹಾನುಭಾವರ ಸಂಕಟವನ್ನು ಕಡಿಮೆಮಾಡಿರಿ.

ಬಸವಣ್ಣ:— ಆಹಾ! ಶರಣಾ. ಶರಣಧರ್ಮರಕ್ಷಕಾ ಧನ್ಯ! ಕೇಡು ಬಗೆದವನಿಗೆ ಕೇಡು ಬಗೆಯಲಾರದೆ ವಿನಯ ತೋರುವಿಯಲ್ಲ! ಇರಲಿ ಅಯ್ಯಾ ಯಾರಲ್ಲಿ?

ಗುಂಡಯ್ಯ:— (ಒಳಗಿನಿಂದ ಬಂದು) ಮಹಾನುಭಾವರೆ?

ಬಸವಣ್ಣ:— ಅಯ್ಯೋ! ನೀನು ಶರಣಶ್ರೇಷ್ಠನಾದ ಹರಭಕ್ತ ಹರಳಯ್ಯನ ಪ್ರತಿನಿತ್ಯ ತಮ್ಮ ಪವಿತ್ರ ಶರೀರ ತೊಳೆದುಬಿಟ್ಟ ಒಚ್ಚಲದೊಳಗಿನ ಉದಕ ತೆಗೆದುಕೊಂಡು ಬಾ.

ಗುಂಡಯ್ಯ:— ತಮ್ಮಗಳ ಇಚ್ಛೆ.

(ಹೋಗುವನು).

ಹರಳಯ್ಯ:— ಏನು ಬಸವಣ್ಣ ಹೀಗೇಕೆ ನುಡಿವಿಯೆ?

ಬಸವಣ್ಣ:— ಸ್ವಲ್ಪ ತಡೆ ಹರಳಯ್ಯ ಈಗ ತಾನೇ ಎಲ್ಲವೂ ಪರೀಕ್ಷೆಯಾಗುವದು. (ನೀರು ತರುವನು. ಬಸವಣ್ಣನು ಮಧುವರಸನ ಮೇಲೆ ಸಿಂಪಡಿಸುವನು. ಮಧುವರಸನು ಮೇಲೆ ಎದ್ದು.)

ಮಧುವರಸು:— ತಮ್ಮೀರ್ವರಿಗೂ ಶರಣು. ತಮ್ಮಗಳ ಮಾತಿಗೆ ಬೆಲೆಕೊಡದೆ ವರ್ತಿಸಿದ ಪ್ರತಾಪವಿದು. ಮಹಾನುಭಾವರೆ ತಮ್ಮ ಶರಣರ ಇಚ್ಛೆಗೆ ನಾನೆಂದಿಗೂ ಎದುರಿಸಲಾರೆ, ಅದಕ್ಕಾಗಿ ಈ ಪಾಮರನ ಮೇಲೆ ಕೃಪೆತೋರಬೇಕು. (ನಮಸ್ಕರಿಸುವನು.)

ಬಸವಣ್ಣ:— (ಎತ್ತಿ ಅಪ್ಪಿ) ಏಳಿ ಶರಣರೆ ಇದರಲ್ಲಿ ನಮ್ಮದೇನೂ ಇಲ್ಲ. ಕೂಡಲಸಂಗನ ಮಹಿಮೆ ಇದು.

(ಒಬ್ಬರನ್ನೊಬ್ಬರು ಅಪ್ಪಿ ನಮಸ್ಕರಿಸುವರು.)

---

ಅಖಿಲ ಭಾರತ ೧೦ನೇ ಶಿವಾನುಭವ ಸಮ್ಮೇಳನವು ಬೆಳಗಾವಿ ಜಿಲ್ಲಾ ಶ್ರೀ ಕ್ಷೇತ್ರ ನಿಡೋಸಿಯಲ್ಲಿ ನಡೆದ ಸಮಯದಲ್ಲಿ ಸಮ್ಮೇಳನಾಧ್ಯಕ್ಷರೂ ಬೆಂಗಳೂರ ಶ್ರೀ ಸರ್ಪಭೂಷಣ ಶಿವಯೋಗೀಶ್ವರ ಮಠಾಧಿಪತಿಗಳೂ ಆದ ಅಭಿನವಾಲ್ಲಮ

## ಶ್ರೀ ನಿ. ಪ್ರ. ಮಹಾದೇವ ಸ್ವಾಮಿಗಳು

## ನಿರೂಪಿಸಿದ ಭಾಷಣ.



ಶುಭದಿನವಾದ ಇಂದು ಪುಣ್ಯಕ್ಷೇತ್ರವಾದ ಶ್ರೀ ನಿಡೋಸಿ ಸಿದ್ಧ ಸಿಂಹಾಸನ ದುರುದುಂಡೇಶ್ವರ ಮಹಾ ಸ್ವಾಮಿಗಳವರ ದಿವ್ಯ ಸನ್ನಿಧಿಯಲ್ಲಿ ಮಹತ್ತರವಾದ ತತ್ವ ಜಿಜ್ಞಾಸೆಗಾಗಿ ತಾವುಗಳೆಲ್ಲರೂ ನೆರೆದಿರುವಿರಿ. ಶ್ರೀ ಮಠದ ಅಧಿಪತಿಗಳಾಗಿರುವ ವಿದ್ಯಾವಿನಯ ಸಂಪನ್ನರೂ ನಿರಂಜನ ಜಗದ್ಗುರುಗಳೂ ಆದ ಪೂಜ್ಯ ಶ್ರೀ ಶಿವಲಿಂಗ ಮಹಾಸ್ವಾಮಿಗಳವರು ಈ ಶಿವಾನುಭವ ಸಮ್ಮೇಳನದ ಅಧ್ಯಕ್ಷತೆ ವಹಿಸಲು ತುಂಬಾ ಅರ್ಹತೆಯುಳ್ಳವರಾಗಿದ್ದಾಗ್ಯೂ-ಇಂದಿನ ಸಮ್ಮೇಳನದ ಅಧ್ಯಕ್ಷಸ್ಥಾನವನ್ನು ವಹಿಸಲು ಶ್ರೀ ಮಠದ ಅಧ್ಯಕ್ಷರೂ, ಸ್ವಾಗತಸಮಿತಿಯುವರೂ ನಮ್ಮನ್ನು ಮಮತೆಯಿಂದ ಸ್ವಾಗತಿಸಿರುವುದು ಅವರಿಗೆ ನಮ್ಮ ಮೇಲಿರುವ ಪ್ರೇಮಾದರಗಳ ನಿದರ್ಶನವಾಗಿದೆ. ಇದಕ್ಕಾಗಿ ಸ್ವಾಗತ ಸಮಿತಿಯುವರಿಗೆ ನಮ್ಮ ಕೃತಜ್ಞತೆ ಸಲ್ಲಿಸಬೇಕಾಗಿದೆ. ಈ ಕಾರ್ಯವನ್ನು ನಿರ್ವಹಿಸಲು ನಮಗೆ ಎಲ್ಲರ ಸಹಕಾರ, ಸಹಾನುಭೂತಿ, ಸಮಾಲೋಚನೆಗಳು ಅವಶ್ಯವಾಗಿವೆಯೆಂಬುವದು ಕಂಡಂತೆಯೇ ಇದೆ.

ವಿಶಾಲವಾದ ವಿಶ್ವದಲ್ಲಿ ಮಾನವ ಸೃಷ್ಟಿಯಾದನಂತರ ಮನುಷ್ಯನ ಆಹಾರ ವ್ಯವಹಾರಗಳು ಕಾಡುಮೃಗಗಳಂತೆ ಅನಾಗರಿಕ ಸ್ಥಿತಿಯಲ್ಲಿದ್ದುವು ಮೊದಮೊದಲು ಜನರು ಗವಿಗಳಲ್ಲಿಯೂ ಮರದ ಪೊಟ್ಟರೆಗಳಲ್ಲಿಯೂ ಇದ್ದು, ಮುಂದೆ ಬರಬರುತ್ತ ಜನಜೀವನದ ಸುಖದ ಆಶೆಗಳು ಬೆಳೆದ ಹಾಗೆಲ್ಲಾ ವಾಸಕ್ಕೆ ಅಂದಚಂದವಾದ ಮನೆ-ಮಠಗಳನ್ನು ಮಾಡಿಕೊಂಡರು. ಕಾಲಕ್ರಮದಲ್ಲಿ ಮನುಷ್ಯನಲ್ಲಿ ವಿಮರ್ಶಾತ್ಮಕ ಬುದ್ಧಿಶಕ್ತಿಯು ದಿನೇ ದಿನೇ ಬಳೆಯಲಾರಂಭವಾಗಿ, ಜೀವನದ ನಿಜವಾದ ಸುಖಶಾಂತಿಗಳು ಎಲ್ಲಿರುವುವೆಂದು ಹುಡುಕುಲಿಕ್ಕೆ ಆರಂಭವಾಯಿತು. ಆಶ್ಚರ್ಯಕರವೂ ಅಗಾಧವೂ

ಆದ ಈ ವಿಶ್ವದಲ್ಲಿ ಒಂದು ದಿವ್ಯಚೈತನ್ಯ ಹುದುಗಿರಬೇಕೆಂದು ಕೆಲವು ಸೂಕ್ಷ್ಮದರ್ಶಿಗಳು ಮೊದಮೊದಲು ಅದನ್ನು ವಿಮರ್ಶೆಮಾಡಿ ನೋಡಲು ಹೊರಟರು. ಅವರು ತಮ್ಮ ಈ ಅನುಭವವನ್ನು ಬರೆದಿಟ್ಟರು. ಇವೇ ಶಿವಾಗಮ, ವೇದ, ಉಪನಿಷತ್ತುಗಳೆಂಬ ಹೆಸರಿನಿಂದ ಕರೆಯಲ್ಪಡಹತ್ತಿದವು. ಅನಂತರದ ಜನಾಂಗವು ಯಾವದೋ ಒಂದು ನಂಬುಗೆಯಿಂದ ಇವುಗಳ ಈಶನಿರ್ಮಿತವಾದವುಗಳೆಂದು ಭಾವಿಸಿದರು. ಈಶ್ವರ ಸ್ಫೂರ್ತಿಯಿಂದ ಹೊರಟ ಭಾವನೆಗಳು ಎಂಬರ್ಥದಲ್ಲಿ ಇದನ್ನು ನಾವು ಗ್ರಹಿಸಬೇಕು. ಹಿಂದಿನವರು ತಮಗೆ ಮುನ್ನಿನವರ ಬರಹಗಳ ತಳಹದಿಯ ಮೇಲೆಯೇ ತಮ್ಮ ತಮ್ಮ ಬುದ್ಧಿಶಕ್ತಿಯಿಂದ, ಆತ್ಮಸ್ಫೂರ್ತಿಯಿಂದ ಚೈತನು ಸ್ವರೂಪವನ್ನರಿಯಲು ಸೂತ್ರ, ಭಾಷ್ಯ ಇತ್ಯಾದಿ ಶಾಸ್ತ್ರಗಳನ್ನು ರಚಿಸಿದರು. ಆಮೇಲೆ ಈ ಕೆಲವು ಶಾಸ್ತ್ರಗಳು ದ್ವೈತವನ್ನೂ, ಇನ್ನು ಕೆಲವು ಅದ್ವೈತವನ್ನೂ ಪ್ರತಿಪಾದಿಸಿದುವು. ಈ ದ್ವೈತಾದ್ವೈತ ವಾದಗ್ರಸ್ತ ಶಾಸ್ತ್ರಗಳಿಗೆ ಶಿವನ ನಿಲವು ಸಾಧಿಸದೆಂದರಿದು ಕೆಲವರು ವಿಚಕ್ಷಣತೆಯಿಂದ ವಿಶ್ವವನ್ನು ನಿರೀಕ್ಷಿಸಿ ವಿಶ್ವಸ್ವರೂಪವಾದ ಲಿಂಗಾಂಗ ಸಾಮರಸ್ಯವುಳ್ಳ ರಹಸ್ಯವಾದ ಶಿವಾನುಭವ ಶಾಸ್ತ್ರವನ್ನು ರಚಿಸಿದರು. ಇವರಿಗೆ ಶರಣರು, ಜಂಗಮರು, ಶಿವಯೋಗಿಗಳು ಎಂದು ಹೆಸರು. ಈ ಶಾಸ್ತ್ರವು ಬಚ್ಚ ಬರಿಯ ವಾಗದ್ವೈತ ವೇದಾಂತವಲ್ಲ. ಇದರಲ್ಲಿ ಆತ್ಮಾನುಭವವಿದೆ. ಲೋಕಾನುಭವವಿದೆ. ಪರಿಪೂರ್ಣ ಪ್ರಕಾಶವಿದೆ.

ಈ ಅನುಭವವನ್ನು ಲಿಂಗಾಂಗ ಸಾಮರಸ್ಯ ರೂಪದಿಂದ ಈಗ ಎಲ್ಲರೂ ತಿಳಿಯಬೇಕಾಗಿದೆ. ಸಾಮರಸ್ಯ ತಿಳಿಯುವದಕ್ಕಿಂತ ಮುನ್ನ, ಲಿಂಗ-ಅಂಗಗಳ ಅರಿವು ನಮಗಾಗಬೇಕು. ಈ ಲಿಂಗಾಂಗ ಸಾಮರಸ್ಯ ತತ್ವವು ಬಹು ಪ್ರಾಚೀನವಾದದ್ದು. ಲಿಂಗವು ವಿಶ್ವರೂಪವಾದದ್ದು. 'ಲಿಂಗಮಧ್ಯೇ ಜಗತ್ಸರ್ವಂ ತ್ರೈಲೋಕ್ಯಂ ಸಚರಾಚರಂ, ಲಿಂಗಬಾಹ್ಯಾತ್ ಪರಂ ನಾಸ್ತಿ' ಇಂತಹ ದಿವ್ಯ ಲಿಂಗವು ವೀರಶೈವರಿಗೆಲ್ಲರಿಗೂ ಹುಟ್ಟುತ್ತಲೇ ಪ್ರಣವಸ್ವರೂಪಿ ಗುರುಗಳಿಂದ ನಮ್ಮ ಅಂಗದಮೇಲೆ ಧರಿಸಲ್ಪಡುತ್ತದೆ. ಈ ಲಿಂಗಧಾರಣವಾಗಿ ಕೆಲವು ವರ್ಷಗಳುರುಳಿ ನಮ್ಮ ಮನಸ್ಸು ಬುದ್ಧಿವಿಕಾಸವಾದಾಗ ಪ್ರಾಯೇಣ ಎಂಟನೇ ವರ್ಷದಲ್ಲಿ-ಪ್ರಣವಸ್ವರೂಪಿ ಜಂಗಮರಿಂದ ಶಿವದೀಕ್ಷಾ ಸಂಸ್ಕಾರವು ನಡೆಯುತ್ತದೆ. ಈ ಸಮಯದಲ್ಲಿ ಸ್ಥೂಲ ಶರೀರಕ್ಕೆ ಕ್ರಿಯಾದೀಕ್ಷೆ, ಸೂಕ್ಷ್ಮ ಶರೀರಕ್ಕೆ ಮಂತ್ರದೀಕ್ಷೆ, ಕಾರಣ

ಶರೀರಕ್ಕೆ ವೇಧಾದೀಕ್ಷೆಯೂ ಇಷ್ಟ, ಪ್ರಾಣ ಭಾವ ಲಿಂಗಗಳ ಬೋಧೆಯೂ ಮಾಡಲ್ಪಡುತ್ತದೆ. ಮತ್ತು ವಿಶ್ವ ರೂಪಲಿಂಗವನ್ನು ನಮ್ಮ ಕರಸ್ಥಲದಲ್ಲಿರಿಸಿ ತಮ್ಮ ಹಸ್ತವನ್ನು ನಮ್ಮ ಮಸ್ತಕದ ಮೇಲಿರಿಸಿ, ಲಿಂಗಾಂಗ ಸಾಮರಸ್ಯ ಮತ್ತು ಷಡಕ್ಷರ ಮಂತ್ರ ರಹಸ್ಯವನ್ನು ಗುರುಗಳು ಹೇಳಿಕೊಡುತ್ತಾರೆ. ಅನಂತರ ನಿತ್ಯವೂ ಲಿಂಗಪೂಜೆಯನ್ನು ಮಾಡುತ್ತಾ, ಮಾಡಿದ ಪೂಜೆಯನ್ನು ನೋಡುತ್ತಾ ನೋಡುತ್ತಾ ಕ್ರಮಶಃ ತನ್ನನ್ನೇ ಮರೆಯುತ್ತಾ, ಲಿಂಗದಲ್ಲಿ ಬೆರೆಯುವುದೇ ದೃಷ್ಟಯೋಗ. ಈ ಸ್ಥಿತಿಯಲ್ಲಿ ಸಾಮರಸ್ಯ ಸುಖವನ್ನು ಅನುಭವಿಸುವದೇ ಶಿವಯೋಗ. ಲಿಂಗಪೂಜೆಯಲ್ಲಿ ಇಷ್ಟಲಿಂಗ ಪೂಜೆ, ಪ್ರಾಣಲಿಂಗಪೂಜೆ, ಭಾವಲಿಂಗಪೂಜೆ ಎಂದು ಮೂರುವಿಧ. ಇಷ್ಟಲಿಂಗವು ಸಾಕಾರವಾದದ್ದು, ಭಾವಲಿಂಗವು ನಿರಾಕಾರವಾದದ್ದು. ಆದ್ದರಿಂದ ಸಾಕಾರವಾದ ನಮ್ಮ ಶರೀರಕ್ಕೆ ಇಷ್ಟಲಿಂಗದ ಪೂಜೆಯೂ, ಸಾಕಾರ ನಿರಾಕಾರವಾದ ನಮ್ಮ ಸೂಕ್ಷ್ಮ ಶರೀರಕ್ಕೆ ಪ್ರಾಣಲಿಂಗದ ಪೂಜೆಯೂ, ಕಾರಣ ಶರೀರಕ್ಕೆ ಭಾವಲಿಂಗದ ಪೂಜೆಯೂ ಅವಶ್ಯಬೇಕು. ಮೊದಲು ಇಷ್ಟಲಿಂಗದ ಪೂಜೆಯಿಲ್ಲದೆ ಭಾವಲಿಂಗವು ಭಾವನೆಯಲ್ಲಿ ಬರುವದಿಲ್ಲ. ಆದುದರಿಂದ ಈ ಜಗದ್ರೂಪವಾದ ಲಿಂಗವು ಕರಚರಣಾದ್ಯವಯವಗಳುಳ್ಳ ಮೂರ್ತಿಯಲ್ಲ. ಕಾರಣ ಲಿಂಗಪೂಜೆಯು ಮೂರ್ತಿ ಪೂಜೆಯಲ್ಲ. ಇದು ನಮ್ಮ ಸ್ವರೂಪದ ಪೂಜೆ. ಈ ಪೂಜೆಯೇ ಯೋಗ. ಇದು ಮಹಾವ್ರತ. ಹಗಲಿರುಳು ಇಷ್ಟಲಿಂಗವನ್ನು ಸ್ಮರಿಸುವ ಭಾವನೆಯೊಂದಿರುವುದೇ ಧ್ಯಾನಯೋಗವು. ಆ ಇಷ್ಟಲಿಂಗದ ಅರಿವಿನಲ್ಲಿ ಏಕವಾಗಿ ಮನಸನ್ನು ಲಯಗೊಳಿಸುವುದೇ ಸಮಾಧಿಯೋಗವು. ಆ ಮನಸ್ಸಿನ ಲಯಕ್ಕೆ ಆಶ್ರಯಸ್ಥಾನವಾದ ಇಷ್ಟಲಿಂಗವನ್ನು ಭಕ್ತಿಕ್ರಿಯೆಯಿಂದ ಆಚರಿಸುತ್ತ ಎಡೆಬಿಡದೆ ಶರೀರದಮೇಲೆ ಧರಿಸುವುದೇ ಧಾರಣಯೋಗವು. ಭಕ್ತಿಯ ತಳಹದಿಯ ಮೇಲೆಯೇ ಶಿವಾನುಭವದ ಭವ್ಯಭವನವು ರಚಿತವಾಗಿದೆ. ಸತ್ಕ್ರಿಯೆ ಸಮ್ಯಕ್ ಜ್ಞಾನಗಳಿಂದೊಡಗೂಡಿದ ನೀರಿಹ ನಿರಹಂಭಾವದ ದಾಸೋಹಂ ಭಾವವೇ ಭಕ್ತಿ.

ದಾನಂ ದ್ರವ್ಯಸಮರ್ಪಣಂ ನಿರುತಮಾ ದ್ರವ್ಯಾರ್ಪಣಂ ದಾನವೊಂ ।
ದೇ ನಿರ್ಣೀತ ಪದಾರ್ಥಮಾದ ವಿಲಸದ್ಧಾಧಾತು ಶಬ್ದ ಕ್ರಿಯಾ ॥
ಧೀನಾತ್ಮೀಯ ತನುತ್ರಯಾದಿ ಸಕಲ ದ್ರವ್ಯಂಗಳಂ ಕೊಟ್ಟು ನಿಂ ।
ದಾನೀಗಳ್ ಶಿವನಪ್ಪೆ ನೆಂಬುದಿದು ದಾಸೋಹಂ ಶಿವಾವಲ್ಲಭಾ ॥

ಈ ಪ್ರಕಾರ ತನ್ನ ದೇಹ ಕರಣಾದಿಗಳನ್ನೆಲ್ಲ ಲಿಂಗಕ್ಕೆ ಸಮರ್ಪಿಸಿ ನಿರಭಿಮಾನಿಯಾಗಿ ನಿಂತು ಈಗ ನಾನು ಶಿವನಾದೆನೆಂಬ ನಿಶ್ಚಯ ಜ್ಞಾನವುಳ್ಳ ಶರಣನೇ ನಿರಹಂಭಾವವುಳ್ಳ ದಾಸೋಹಂಭಾವವೆಂದೂ—

ಶಿವಲಿಂಗ-ಪತಿ ತಾನೆ ತತ್ಸತಿ-ಯೆನಿಪ್ಪಾಭಾವ ಸತ್ಯವ್ರತೋ ।
ತ್ಸವ ತಾತ್ಪರ್ಯ ಪತಿವ್ರತ್ಯೈಕ ನಿಯಮಮಾತ್ರ ಪ್ರಾಣಲಿಂಗಾಂಗ ಸಂ ॥
ಗವಿಲಾಸಾಸ್ಪದ ನಿಷ್ಠೆಯಂ

ಶಿವಭಕ್ತನು ತಾನು ಸತಿ, ಲಿಂಗವು ಪತಿಯೆಂಬ ದೃಢಭಾವವೂ ಆ ಜೀವ ಶಿವಜೀವೈಕ್ಯ ಸಮರ್ಚನ ವ್ರತದಲ್ಲಿ ಸಂತೋಷ ಪೂರ್ವಕವಾದ ಮನೋವೃತ್ತಿಯೂ ಪಾತಿವ್ರತ್ಯ ನಿಯಮದಿಂದ ಪ್ರಾಪ್ತವಾದ ಲಿಂಗಾಂಗ ಸಾಮರಸ್ಯ ವಿಲಾಸದ ಶ್ರದ್ಧೆಯೂ ಉಳ್ಳವನಾಗಿರಬೇಕೆಂದು ಶಿವಾನುಭವಿಗಳಾದ ಮಗ್ಗೆಯ ಮಾಯಿದೇವರು ಹೇಳಿದ್ದಾರೆ. ಸತಿಪತಿ ಭಾವದಿಂದ ಪ್ರತಿಯೊಬ್ಬ ಸಾಮಾನ್ಯ ಜೀವಿಯೂ ಶಿವಜೀವರ ( ಲಿಂಗಾಂಗ ಸಾಮರಸ್ಯ ) ಸತ್ಯ ನಿತ್ಯ ನಿಕಟ ಸಂಬಂಧವನ್ನು ಸುಲಭವಾಗಿ ಗ್ರಹಿಸಬಲ್ಲನು. ಶಿವಜೀವರಲ್ಲಿ ಸತಿ ಪತಿ ಭಾವವನ್ನು ಕಲ್ಪಿಸುವದು ಅಶ್ಲೀಲವೆಂದು ಒಬ್ಬ ಮಹನೀಯರು ತಮ್ಮ ಬರೆಹದಲ್ಲಿ ಹೇಳಿದ್ದಾರೆ. ಆದರೆ ಅವರು ಈ ಮಾತನ್ನು ಅನುಭವದಿಂದ ಹೇಳಿಲ್ಲ. ಸತಿ-ಪತಿ ಭಾವವಿಲ್ಲದೆ ಸಾಮರಸ್ಯ ಸುಖದ ಅನುಭವವು ನಮಗಾಗುವದಿಲ್ಲ. ಸತಿ-ಪತಿ ಭಾವದಿಂದಲೇ ಸಂಸಾರದಲ್ಲಿಯ ಪ್ರತಿಯೊಂದು ಹೆಣ್ಣೂ, ಗಂಡೂ ಶಿವಜೀವರ ರಹಸ್ಯವಾದ ಸಂಬಂಧವನ್ನು ಸುಲಭವಾಗಿ ತಿಳಿಯಬಲ್ಲರು. ಈ ತತ್ವವನ್ನು ತಿಳಿಯಲು ಯಾರೂ ಮನೆಮಾರು ಬಿಟ್ಟು ಸನ್ಯಾಸ ಸ್ವೀಕರಿಸಿ ಅಡವಿಗೆ ಹೋಗಿ ಕಂದ ಮೂಲ ತಿಂದು ಜಪಿಸಿ ಈ ಸುಂದರತನುವ ಕಂದಿ ಕುಂದಿಸಬೇಕಾಗಿಲ್ಲ. “ಈ ಶರೀರ ಶಿವನನೊಲಿಸಂಬಂದ ಪ್ರಸಾದ ಕಾಯ ಕೆಡಿಸಬೇಡಿ” ಎಂದುಹೇಳಿ ಶರಣರು ಶಿವಾನುಭವವನ್ನು ಪ್ರತಿಯೊಬ್ಬ ಮಾನವನಿಗೂ ತಿಳಿಯುವಂತೆ ಸುಲಭವಾಗಿ ಅನ್ನ ನೀರು, ಪಾದೋದಕ ಪ್ರಸಾದಗಳಾದುವು. ಕಾರ್ಯವು ಕಾಯಕವಾಯಿತು. ವ್ಯವಹಾರದಲ್ಲಿಯ ಪ್ರತಿಯೊಂದು ಕಾರ್ಯವೂ ಶಿವನೆಂದು ಭಾವಿಸಿದರು. ಲಿಂಗದಲ್ಲಿ ಬ್ರಹ್ಮಾಂಡವನ್ನು ಕಂಡ ಈ ಶಿವಶರಣರೇ ಶಿವಾನುಭಾವಿಗಳು. ಇವರು ಆನಂದದಿಂದ ನುಡಿದುದೇ ಶಿವಾನುಭವ ಶಾಸ್ತ್ರವು. ಜೀವನನ್ನು ಮಹದೇವನನ್ನು ಮಾಡುವ ಜಗ

ತ್ತಿನ ಎಲ್ಲ ತತ್ವ ಶಾಸ್ತ್ರಗಳಲ್ಲಿ ಶಿವಾನುಭವ ಶಾಸ್ತ್ರದ ವೈಶಿಷ್ಟ್ಯವೇ ಒಂದು ತರಹದ್ದು. ಕೆಲವು ಅಧ್ಯಾತ್ಮವಾದಿಗಳು ಕೇವಲ ಜ್ಞಾನವನ್ನೂ ಕೆಲವರು ಕೇವಲ ಕರ್ಮವನ್ನೂ ಅವಲಂಬಿಸಿ ವಾದಿಸುತ್ತಾರೆ. ಶಿವಾನುಭವವು ಕೇವಲ ಕರ್ಮವನ್ನೇ ಇಲ್ಲವೇ ಕೇವಲ ಜ್ಞಾನವನ್ನೇ ಅವಲಂಬಿಸಿರದೆ, ಸತ್ಕ್ರಿಯಾ ಸಮ್ಯಕ್ ಜ್ಞಾನಗಳಿಂದೊಡಗೂಡಿದೆ. ಕೆಲವು ತತ್ವಜ್ಞಾನಿಗಳು ಕೇವಲ ದ್ವೈತವೆಂದೂ, ಇನ್ನು ಕೆಲವರು ಕೇವಲ ಅದ್ವೈತವೆಂದೂ ಶಾಸ್ತ್ರಗಳ ಮೂಲಕ ವಾದಿಸುತ್ತಿರುವರು. ಆದರೆ ಅದ್ವೈತ-ತತ್ವಕ್ಕೆ ಸಾಮರಸ್ಯಸುಖದ ಅನುಭವವು ಆಗುವದಿಲ್ಲ. ಸಾಮರಸ್ಯವಿಲ್ಲದಲ್ಲಿ ಶಿವಾನುಭವವಿಲ್ಲ. ತತ್ವ ಜಿಜ್ಞಾಸುವಿಗೆ ಪ್ರಥಮದಲ್ಲಿ ಅದ್ವೈತ ತತ್ವದ ಅನುಭವವು ಆಳವಡುವುದಿಲ್ಲ. ಆದುದರಿಂದ ಶಿವಾನುಭವದಲ್ಲಿ ದ್ವೈತ, ಅದ್ವೈತ, ದ್ವೈತಾದ್ವೈತಗಳ ಸಮನ್ವಯವಿರುವುದು ' ವ್ಯಕ್ತಂ ಷಟ್‌ಸ್ಥಳ ಯೋಗಮಾರ್ಗ ಪರಮಾದ್ವೈತಂ ಶಿವಾವಲ್ಲಭಾ, ಶಿವನಿಗೆ ಆತ್ಮಾರ್ಪಣ ಮಾಡಿರುವವನು ಶರಣನು, ತಾನೇ ಶಿವನು ಶಿವನೇ ತಾನಾಗಿರುವವನು ಐಕ್ಯನು, ಇದೇ ಷಟ್‌ಸ್ಥಳ ಸಂಬಂಧವಾದ ಮಾರ್ಗವೆನಿಸಿಕೊಳ್ಳುವ ಉತ್ಕೃಷ್ಟವಾದ ಅದ್ವೈತವು. ಅರ್ಥಾತ್ ಶಿವಾದ್ವೈತವು ಎನಿಸಿಕೊಳ್ಳುತ್ತದೆ.

ದ್ವೈತಂ ನೋಳ್ಪೊಡೆ ಬೊಮ್ಮವಂ ನುಡಿವ ವಾಗದ್ವೈತಿಗಳ್ಗೆಲ್ಲವುಂ ।
ಮಾತೊಂದಲ್ಲದೆ ಮಿಕ್ಕವರ್ತನಮುದೇಂ ಸದ್ಭಕ್ತನಂತಲ್ಲ ಕೇಳ್ ॥
ದ್ವೈತಾದ್ವೈತ ವಿಹೀನನೇನುಮರಿಯಂತಾನೆಂಬ ಹಮ್ಮಿಲ್ಲ ಮಾ ।
ಯಾತೀತಂ ಬರಿಬೊಮ್ಮಗಿಮ್ಮಡೊಡಕಂ ಪೂರ್ಣಂ ಶಿವಾವಲ್ಲಭಾ ॥

ಬಾಯಲ್ಲಿ ಬ್ರಹ್ಮವ ನುಡಿವ ಬರಿಯ ಒಣ ಅದ್ವೈತಿಗಳಿಗೆ, ಆ ಅದ್ವೈತವು ಮಾತಿನಲ್ಲೇ ಹೊರತು ನಡೆಯೆಲ್ಲಾ ದ್ವೈತವೇ. ಆದರೆ ಶರಣನ ನಡೆ ಆ ವಾಗದ್ವೈತಿಯಹಾಗಲ್ಲ. ಅವನು ಭೇದಾಭೇದಕ್ಕೆ ವಿಲಕ್ಷಣನಾಗಿಯೂ ಸೋಹಂ, ಕೋಹಂ ಎಂಬುದು ಮೊದಲಾದ ಅಹಂಭಾವಗಳೊಂದನ್ನೂ ಅರಿಯದವನಾಗಿಯೂ, ನಿರಹಂಭಾವ ಸಂಪನ್ನನಾತಿಯೂ ಮಾಯೆಯನ್ನು ಮೀರಿದವನಾಗಿಯೂ ವಾಗ್ಪ್ರಕೃ ಜಾಲದ ತೊಡಕಿಗೆ ಸಿಲ್ಕದವನಾಗಿಯೂ ಇರುತ್ತಿರುವುದು ಶಿವಾದ್ವೈತದ ವೈಶಿಷ್ಟ್ಯ.

ಇನ್ನು ಕೆಲವರು ಅಷ್ಟಾಂಗವುಳ್ಳ ಹಠಯೋಗವನ್ನೂ, ಮತ್ತೆ ಕೆಲವರು ಲಯಯೋಗವನ್ನೂ, ಬೇರೆ ಕೆಲವರು ರಾಜಯೋಗವನ್ನೂ, ಉಳಿದ

ಕೆಲವರು ಮಂತ್ರಯೋಗವನ್ನೂ ಮಾಡಿ ಮುಕ್ತಿಪಡೆಯಲು ತವಕಪಡುತ್ತಾರೆ. ಆದರೆ ಲಿಂಗಾಂಗಸಾಮರಸ್ಯದ ಶಿವಯೋಗದಲ್ಲಿ ಮೇಲಿನ ಎಲ್ಲ ಯೋಗಗಳೂ ಸಮಾವಿಷ್ಟಗಳಾಗಿವೆ. ಆದುದರಿಂದ ಶಿವಾನುಭವವು ಷಟ್‌ಸ್ಥಲ ಷಡಂಗಯೋಗವೆಂದು ಹೆಸರಾಗಿದೆ. ಇದು ಸುಲಭಯೋಗ, 'ಪ್ರಾಣಾಯಾಮದ ಯೋಗ ಬಲು ಕಷ್ಟಕಂಡ್ಯಾ ಮಗನೇ' 'ಮಂದರಾಗ್ರದಿ ನಿಲಬೇಡ, ಮಂದಿರವ ಬಿಡಬೇಡ, ಕಂದವ ಮೂಲವ ಸವಿಯಬೇಡ, ನಿನ್ನ ತನುವ ಕಂದಿ ಕುಂದಿಸಬೇಡ, ಸುವ್ರತ್ನೊಮ್ಮೆ ನುಡಿದಂಗೆ ಮುಕ್ತಿಗೊಡುತಿರ್ಪುದಿದೆಂದೊಡಿದನಾರೊ ಬಣ್ಣಿಪರ್' ಎಂದು ಶರಣರು ಶಿವಯೋಗವನ್ನು ಎಲ್ಲರಿಗೂ ತಿಳಿಯಲು ಆಚರಿಸಲು ಬರುವಂತೆ ಸುಲಭ ಮಾಡಿದರು. ಸಂಸ್ಕೃತದಲ್ಲಿಯೇ ಶಾಸ್ತ್ರ ಓದಬೇಕು" ಇಂತಹವರೇ ಯೋಗ ಮಾಡಬೇಕು, ಇಂತಹರೇ ಇದಕ್ಕೆ ಅರ್ಹರು ಎಂದೂ ಕೆಲವು ಸಂಸ್ಥಾಪಕರು ಕಟ್ಟುನಿಟ್ಟುಗಳನ್ನು ಹಾಕಿ ಸಾಮಾನ್ಯ ಜನತೆಯನ್ನು ಅಜ್ಞಾನದಲ್ಲಿರಿಸಲು ಪ್ರಯತ್ನಿಸಿದ್ದಾರೆ. ಇದನ್ನು ಕೂಲಂಕಷವಾಗಿ ವಿಚಾರಿಸಿ ಶರಣರು ಈ ಸಾಮಾನ್ಯ ಜನತೆಗಿದ್ದ ಈ ಸುವರ್ಣದ ಸಂಕೋಲೆಯನ್ನು ಬಿಚ್ಚಿಬಿಸಾಕಿದರು ಎಲ್ಲರಿಗೂ ತಾಯಿ ಮಾತಿನಲ್ಲಿ ತತ್ವ ತಿಳಿಯುವಂತೆ ಕನ್ನಡ, ತೆಲಗು, ತಮಿಳು ಮೊದಲಾದ ದೇಶಭಾಷೆಗಳಲ್ಲಿಯೇ ಶಿವಾನುಭವ ಶಾಸ್ತ್ರವನ್ನು ರಚಿಸಿದರು. ಯೋಗವನ್ನು ಪ್ರತಿಯೊಬ್ಬ ಮನುಷ್ಯನೂ ಮಾಡುವಷ್ಟು ಸುಲಭಮಾಡಿದರು. ಕಠಿಣವಾದ ಸಂಸ್ಕೃತದಲ್ಲಿಯೇ ಬರೆದು, ಸಂಸ್ಕೃತ ಭಾಷೆಯನ್ನು ಕಲಿಯುವದರಲ್ಲಿಯೇ ಓದಬೇಕೆಂದು ನಿಯಮವು ಜಿಜ್ಞಾಸುಗಳಿಗೆ ಕಷ್ಟದಾಯಕವಾಗಿತ್ತು. ಸಂಸ್ಕೃತ ಭಾಷೆಯನ್ನು ಕಲಿಯುವುದರಲ್ಲಿಯೇ ಅವರ ಆಯುಷ್ಯವು ಕಳೆದು ಹೋಗುತ್ತಿತ್ತು. ಹಲವರಿಗೆ ತತ್ವ ತಿಳಿಯಲು ಅವಕಾಶವೇ ಸಿಕ್ಕುತ್ತಿರಲಿಲ್ಲ. ಆದ್ದರಿಂದ "ಸುಲಿದ ಬಾಳೆಯ ಹಣ್ಣಿನಂದದಿ, ಕಳೆದ ಸಿಗರಿನ ಕಬ್ಬಿನಂದದಿ, ಅಳಿದ ಉಷ್ಣದ ಹಾಲಿನಂದದಿ ಸುಲಭವಾಗಿರ್ಪ, ಲಲಿತ-ವಹ ಕನ್ನಡದ ನುಡಿಯಲಿ ತಿಳಿದು ತನ್ನಲಿ ತನ್ನ ಮೋಕ್ಷವ ಗಳಿಸಿಕೊಂಡರೆ ಸಾಲದೇ ಸಂಸ್ಕೃತದಲಿನ್ನೇನು?" ಎಂಬ ಕವಿವಾಣಿಯಂತೆ, ಶರಣರು, ಜನರು ಬಾಳಿ ಬದುಕುವುದಕ್ಕೋಸ್ಕರ ತತ್ವ ಸಾಹಿತ್ಯವನ್ನು ತಿಳಿಗನ್ನಡದಲ್ಲಿ ರಚಿಸಿದರು. ಶರಣರು ಕನ್ನಡ ನುಡಿಯಲ್ಲಿ ಶಿವಾನುಭವ ಶಾಸ್ತ್ರವನ್ನು ರಚಿಸಿ ಕನ್ನಡ ನುಡಿಯನ್ನು ಪವಿತ್ರವನ್ನಾಗಿ ಮಾಡಿದರು. ಜನವಾಣಿ, ಕನ್ನಡ ವನದೇವವಾಣಿಯನ್ನಾಗಿ

ಮಾಡಿದರು. ಕನ್ನಡ ಸಾಹಿತ್ಯದಲ್ಲಿ ವಿಶ್ವಸಾಹಿತ್ಯದಲ್ಲಿ ಮನ್ನಣೆ ಪಡೆಯು ಅರ್ಹವಾದ ಮಾತೆಂಬ ಜ್ಯೋತಿರ್ಲಿಂಗಗಳನ್ನು ನಿರ್ಮಿಸಿದರು. ಕೆಲವು ಶಾಸ್ತ್ರಗಳು ಹೇಳಿದಂತೆ ದೇವರನ್ನರಸಲು ಗುಟ್ಟಬೆಟ್ಟಗಳಿಗೆ ಹೋಗಬೇಕಾಗಿತ್ತು. ಆದರೆ 'ಮಣ್ಣು ಬಿಟ್ಟು ಮಡಿಕೆ ಇಲ್ಲ ತನ್ನ ಬಿಟ್ಟು ದೇವರಿಲ್ಲ' ಎಂಬಂತೆ ನಮ್ಮೊಳಗೆ ದೇವರಿದ್ದಾನೆ. ದೇವರೊಳಗೆ ನಾವಿದ್ದೇವೆಂದು ಶಿವಾನುಭವಶಾಸ್ತ್ರವು ಹೇಳುತ್ತದೆ. ತೀರ್ಥ ಕ್ಷೇತ್ರಗಳನ್ನೆಲ್ಲಾ ಅಲೆದು ಕೊನೆಗೆ ದೇವರು ನಮ್ಮಲ್ಲಿದ್ದಾನೆಂಬ ನಿಶ್ಚಿತ ತತ್ವಕ್ಕೆ ಬರುತ್ತಾರೆ. ಆದರೆ ತಮ್ಮಲ್ಲಿಯೇ ದೇವರಿದ್ದಾನೆಂಬ ನಿಶ್ಚಿತ ತತ್ವದ ವಿಶ್ವಾಸದಿಂದಲೇ ವೀರಶೈವ ತತ್ವಜ್ಞಾನಕ್ಕೆ ಪ್ರಾರಂಭ. ವೀರಶೈವರ ನಡೆ ನುಡಿಗಳು ವಿಲಕ್ಷಣವಾದವುಗಳು. ಇವರು ಅನ್ನನೀರುಗಳನ್ನು ಪಾದೋದಕ ಪ್ರಸಾದ ರೂಪದಲ್ಲಿ ಸೇವಿಸುತ್ತಾರೆ. ಇವರು ಮಾಡುವ ಕೆಲಸ ಸತ್ಯಶುದ್ಧ ಕಾಯಕವಾಯಿತು. ಕಾಯಕದಲ್ಲಿ ಕಾಮ್ಯ ಭಾವನೆ ಇರುವದಿಲ್ಲ. ಶಿವಾನುಭವ ಶಾಸ್ತ್ರದಲ್ಲಿ ಪಾರಮಾರ್ಥಿಕ ದಿವ್ಯ ಜೀವನಕ್ಕೂ ವ್ಯವಹಾರಿಕ ಜೀವನಕ್ಕೂ ಭಿನ್ನವಿಲ್ಲ. ಸಾಮಾಜಿಕ ಜೀವನವನ್ನೇ ಪಾರಮಾರ್ಥಿಕ ದಿವ್ಯ ಜೀವನವನ್ನಾಗಿ ಶರಣರು ಮಾರ್ಪಡಿಸಿದವರು. ಒಂದುರೀತಿಯಿಂದ ಲಿಂಗವಂತರೆಲ್ಲರೂ ಶಿವಯೋಗಿಗಳು. ಶಿವಶರಣರು; ಶಿವಾನುಭಾವಿಗಳು.

ಯಾವ ಕೃತ್ಯದೊಳಿರುತಿರ್ದರೂ ಶಿವಯೋಗಿ: ಭಾವದೊಳಗೆ ಬ್ರಹ್ಮವನು ಬಿಡದಿರ್ಪನು। ಕರಣೇಂದ್ರಿಯಗಳ ವಿಷಯ ಭೋಗಪರವಾಗಿ। ಪರಮಾತ್ಮನು ನುಳುಮೆಯೆಚ್ಚರ ದಪ್ಪದಿಹನು.। ತನುಧನ ವನಿತಾದಿ ಸಂಸಾರವನು ಹೊಂದಿ ಮನದೊಳಾತ್ಮನ ಲಕ್ಷವ ಬಿಡದಿಹನು। ಹೊರಗೆ ಸಕಲ ಲೋಕ ವ್ಯವಹಾರದೊಳಗಿರ್ದು। ಗುರುಸಿದ್ಧನನುಸಂಧಾನದೆ ಬೆರೆದಿಹನು' ಎಂದು ಶ್ರೀಗುರು ಸರ್ಪಭೂಷಣರು ಹೇಳಿರುವರು. ಶಿವಯೋಗಿ ಸಂಸಾರದಲ್ಲಿದ್ದರೂ ಮೋಹಿಸಿ ಕೆಡುವದಿಲ್ಲ. ಇವರು ಸಂಸಾರಕ್ಕೂ ಶಿವಾನುಭ ಭೇದಮಾಡದೇ ಸಂಸಾರದ ಯೋಗ್ಯ ಅನುಭವವೇ ಶಿವಾನುಭವವೆಂದು ತಿಳಿದರು. ಮಾಯೆಯಿಂದ ಜಿಗುಪ್ಸಿತವಾದ ಈ ಜೀವನವನ್ನು ಸುಂದರ ದಿವ್ಯವನ್ನಾಗಿ ಮಾಡಿದರು. ಶರಣರು ಮಾತನಾಡಲು ವಿಶಿಷ್ಟವಾದ ಶಿವಾನುಭವ ಭವಭಾಷೆಯನ್ನು ತಮ್ಮದನ್ನಾಗಿ ಮಾಡಿಕೊಂಡರು. ಇವರೇ ಶಿವಾನುಭವಿಗಳು; ಇವರು ಹೇಳಿದುದೇ ಶಿವಾನುಭವ ಶಾಸ್ತ್ರ.

ಇಂತಹ ದಿವ್ಯ ತತ್ವ ಹಾಗೂ ಸಂಸ್ಕೃತಿಯುಳ್ಳ ಲಿಂಗವಂತರು ಶಿವಾನುಭವ ಶಾಸ್ತ್ರದ ವಾಸ್ತವತೆಯನ್ನು ಪರಿಪೂರ್ಣವಾಗಿ ತಿಳಿಯದೇ ಇಂದು ಪರಕೀಯ ತತ್ವ, ಸಂಸ್ಕೃತಿ, ಸಾಹಿತ್ಯಗಳಿಗೆ ಮೋಹಿನಿ ಗುಲಾಮರಾಗಿರುವುದು ಎಂತಹ ವಿಷಾದಕರವಾದ ಸಂಗತಿ !!! ಇಂತಹ ನಮ್ಮ ಉನ್ನತ ತತ್ವವು ಈಚಿನಷ್ಟು ಹೀನಾವಸ್ಥೆಗಿಳಿಯಲು ನಮ್ಮ ಬಹುಸಂಖ್ಯಾತ ಮಠಾಧಿಪತಿಗಳಿಗೆ ತತ್ವದಮೇಲೆ ನಿಷ್ಠೆಯಿಲ್ಲದಿರುವದೇ ಕಾರಣ. – ತತ ಚೆನ್ನಾಗಿ ತಿಳಿದಿಲ್ಲ, ಅದಕ್ಕಾಗಿ ನಿಷ್ಠೆ ಇಲ್ಲ. ಪಂಡಿತರಾಗಬೇಕೆಂಬ ಹಂಬಲದಿಂದ ಇವರ ಓದು, ಇವರ ಜೀವನಸಂಸ್ಕೃತದಲ್ಲಿ. ಕನ್ನಡ ಭಾಷೆಯ ಪರಿಚಯವಿಲ್ಲದ ಇವರಿಗೆ ಶಿವಾನುಭವ ಶಾಸ್ತ್ರದ ವಾಸ್ತವ ಜ್ಞಾನವಾಗುವುದಿಲ್ಲ.

ಶಿವಾನುಭವ ಶಾಸ್ತ್ರವು ಕನ್ನಡದಲ್ಲಿ ಪರಿಪೂರ್ಣವಾಗಿದೆ. ಆದುದರಿಂದ ಇಂದು ನಾವು ಕಲಿಯುವ ಭಾಷೆ, ತತ್ವ ನಮ್ಮದಾಗಿರಬೇಕು. ಇದಲ್ಲದೆ ನಾವು ನಮ್ಮ ತನವನ್ನು ಮರೆತು, ಸಾಹಿತ್ಯ, ತತ್ವಜ್ಞಾನಕ್ಕಾಗಿ ಪರಭಾಷೆಗಳನ್ನಾಶ್ರಯಿಸಿ ಅದರ ದಾಸರಾದರೆ ಅದು ಶಿವಾನುಭವಕ್ಕೆ ವಿರುದ್ಧ. ಭಾಷೆಗಳನ್ನು ಕಲಿಯಬೇಕು. ನಮ್ಮ ಸಂಸ್ಕೃತಿ ತತ್ವ ನಮ್ಮದಾಗಿರಬೇಕು. ನಮ್ಮತನ ನಮ್ಮಲ್ಲಿಲ್ಲದಿದ್ದರೆ ನಾವು ಲಿಂಗವಂತರೆ ? ಲಿಂಗ ಪೂಜೆಮಾಡಿ ಪ್ರಸಾದ ಸ್ವೀಕರಿಸುತ್ತ ಮನೆಗಳಲ್ಲಿ ಸುಮ್ಮನೆ ಕುಳಿತುಕೊಳ್ಳುವುದಷ್ಟೇ ನಮ್ಮ ಕೆಲಸವೆ ? ನಮ್ಮ ಸಂಸ್ಕೃತಿ ಉಳಿದರೆ ನಾವು ನಮ್ಮತನದಿಂದ ನಾವಾಗಿ ಉಳಿದು ಬಾಳುತ್ತೇವೆ. ಮಠಗಳಲ್ಲಿಯೇ ತತ್ವ ಸಂಸ್ಕೃತಿ ಉಳಿಯಬೇಕು. ಇವು ತತ್ವಸಂಸ್ಕೃತಿಯ ಕೇಂದ್ರಗಳು, ಇವುಗಳನ್ನು ರಕ್ಷಿಸುವುದು ಮಠಾಧಿಕಾರಿಗಳ ಮುಖ್ಯ ಕರ್ತವ್ಯ. ಇವರು ತಮ್ಮ ಕರ್ತವ್ಯದಲ್ಲಿ ಚ್ಯುತಿಹೊಂದಿದರೆ ನಮ್ಮ ಸಮಾಜಕ್ಕೆ ಬಲವಾದ ಆಘಾತ. ಇದರ ಅವನತಿಗೆ ನಾವೇ ಬಾಧ್ಯಸ್ತರು. ಇಂದಿನವರೆಗೆ ಎಷ್ಟೋ ಶಿವಾನುಭವ ಸಮ್ಮೇಳನಗಳು ಜರುಗಿವೆ. ಜರುಗುತ್ತಲೂ ಇವೆ. ಇದರಿಂದ ಸಮಾಜದಲ್ಲಿ ಏನೂ ಬದಲಾವಣೆ ಕಂಡುಬರಲಿಲ್ಲ. ಆದರೆ ಈ ಶಿವಾನುಭವ ಸಮ್ಮೇಳನದಲ್ಲಿ ತತ್ವಜ್ಞಾನಕ್ಕಾಗಿ, ಸಂಸ್ಕೃತಿಯ ರಕ್ಷಣೆಗಾಗಿ ಕ್ರಾಂತಿಯಾಗಲಿ. ಶಾಂತಿ ದೊರೆಯಲಿ. ಎಲ್ಲರೂ ಸತ್ಯ ಸಂಗತಿಯನ್ನು ಅರಿಯಲಿ. ಎಲ್ಲರೂ ಶಿವಾನುಭವಿಗಳಾಗಲಿ. ಎಲ್ಲರಿಗೂ ಲಿಂಗಾಂಗ

ಸಾಮರಸ್ಯ ಸುಖವು ಲಭಿಸಲಿ. ಎಲ್ಲರೂ ಶಿವಯೋಗಿಗಳಾಗಲಿ ಎಂಬುದೇ ಇಂದಿನ ಶಿವಾನುಭವದ ಸಂದೇಶವಿರುತ್ತದೆ.

ಉತ್ತಮವಾದ ಧ್ಯೇಯದಿಂದ ಇಲ್ಲಿ ನೆರೆದ ವಿದ್ವಾಂಸರೂ, ಅನುಭವಿಗಳೂ, ಸಮಾಜ ಪ್ರೇಮಿಗಳೂ ಒಟ್ಟುಗೂಡಿ ಈ ಸಮ್ಮೇಳನವು ಯಶಸ್ವಿಯಾಗುವಂತೆ ಮಾಡಲಿ. ಅದರಿಂದ ಸಮಾಜವು ಉದ್ಧಾರವಾಗುವ ದಾರಿಯನ್ನು ಕಂಡುಹಿಡಿಯಲಿ.

## ನಿರ್ಣಯಗಳು.

ನಾವು ವರುಷಕ್ಕೊಮ್ಮೆ ಸಮ್ಮೇಳನಗಳನ್ನು ನಡೆಸುತ್ತ ಅಲ್ಲಿ ಭಾಷಣಾದಿಗಳನ್ನು ಹೇಳಿ ಮನೆಮಠಗಳಿಗೆ ಹಿಂತಿರುಗಿದರೆ ಅದರಿಂದ ತಕ್ಕಷ್ಟು ಫಲಪ್ರಾಪ್ತಿಯಾಗುವುದೆಂದು ಹೇಳಲಾಗುವುದಿಲ್ಲ. ಕಾರಣ ಈ ಬಗ್ಗೆ ರಚನಾತ್ಮಕವಾದ ಕಾರ್ಯಗಳನ್ನು ಕೈಕೊಂಡು ನಡೆಸುವುದು ಅಗತ್ಯವೂ ಅನಿವಾರ್ಯವೂ ಆಗಿದೆ.

೧. ನಮ್ಮ ಹಿರಿಯರು ಬರೆದಿಟ್ಟಿರುವ ಪ್ರಾಚೀನ ಗ್ರಂಥಗಳನ್ನು ಸುಂದರವಾಗಿಯೂ ಶುದ್ಧವಾಗಿಯೂ ಟೀಕೆ ಟಿಪ್ಪಣಿಗಳಿಂದ ಕೂಡಿಯೂ ಪ್ರಕಟಿಸುವುದು. ಹೀಗೆ ಪ್ರಕಟಿಸಿದ ಗ್ರಂಥಗಳನ್ನು ನಮ್ಮ ಮಠಾಧಿಪತಿಗಳೂ ಸಮಾಜ ಹಿತೈಷಿಗಳೂ ಎಲ್ಲ ಕಡೆಗೆ ಪ್ರಚಾರ ಮಾಡುವುದು.

೨. ವೀರಶೈವ ಮಠಗಳಲ್ಲಿ ಅಂದರೆ ಗುರುಸ್ಥಲ, ಷಡುಸ್ಥಲ ಮತ್ತು ಶರಣಸ್ಥಲ ಮಠಗಳಲ್ಲಿ ಪ್ರತಿದಿನವೂ ಸಂಜೆ ಮತ್ತು ಬೆಳಗಿನ ಸಮಯದಲ್ಲಿ ಶಾಸ್ತ್ರ ಪ್ರವಚನಗಳನ್ನು ಹೇಳುವುದು, ಮತ್ತು ಪುರಾಣ ಶ್ರವಣ, ಕಾವ್ಯವಾಚನ, ಶರಣರ ವಚನಗಳ ಹಾಡಿಕೆ ಇತ್ಯಾದಿಗಳನ್ನು ನಡೆಸುವುದು.

೩. ವೀರಶೈವ ತೀರ್ಥಕ್ಷೇತ್ರಗಳಲ್ಲಿ ಅಂದರೆ ನಿಡಸೋಸಿ, ಕೂಡಲಸಂಗಮ, ಸೊಲ್ಲಾಪುರ, ಕೊಟ್ಟೂರು, ಅನಿಮಿಷಾರ್ಯರ ಕೊಪ್ಪಲು, ಎಡೆಯೂರು, ಗುಬ್ಬಿ, ಸಿದ್ಧಗಂಗೆ, ಮಾದೇಶ್ವರ, ರೇವಣಸಿದ್ಧೇಶ್ವರ, ಶ್ರೀಶೈಲ, ಉರುವಕೊಂಡ, ಶಿವಗಂಗೆ, ಉಳಿವಿ, ಕಲ್ಯಾಣ ಮೊದಲಾದ ಕಡೆಗಳಲ್ಲಿ ನಡೆಯುವ ಜಾತ್ರೆ, ಪರಿಷೆ, ಪರ್ವ ಮೊದಲಾದ ಸನ್ನಿವೇಶಗಳಲ್ಲಿ ನಮ್ಮ ಸಮಾಜದ ಪರವಾಗಿ ಪ್ರಚಾರಕರನ್ನು ಕಳುಹಿಸಿ ಶಿವಾನುಭವವನ್ನು ಬೋಧಿಸುವುದು.

೮. ಶಿವಾನುಭವ ಶಾಸ್ತ್ರವನ್ನು ಕುರಿತು ಅಂದರೆ ಅಷ್ಟಾವರಣ, ಪಂಚಾಚಾರ ಷಟ್‌ಸ್ಥಳ, ಶಿವದೀಕ್ಷೆ ಇತ್ಯಾದಿ ವಿಚಾರವಾಗಿಯೂ ಶಿವಶರಣರ ಚರಿತ್ರೆಗಳು ವೀರಶೈವ ರಾಜರು, ಕವಿಗಳು, ವಿಭೂತಿಗಳು ಮೊದಲಾದವರ ವಿಷಯವಾಗಿಯೂ ಸಣ್ಣ ಸಣ್ಣ ಗ್ರಂಥಗಳನ್ನು ಪ್ರಕಟಿಸುವುದು ಮತ್ತು ಪ್ರಚಾರ ಮಾಡುವುದು.

೫. ವೀರಶೈವ ಧರ್ಮ ಮತ್ತು ಸಂಸ್ಕೃತಿಗಳ ರಕ್ಷಣೆಗಾಗಿ ಏರ್ಪಟ್ಟಿರುವ ವೀರಶೈವ ಮಠಗಳು ಕಡೆಯ ಪಕ್ಷ ವರುಷಕ್ಕೆ ಒಂದೆರಡು ವೀರಶೈವ ಧರ್ಮ ಗ್ರಂಥಗಳನ್ನು ಅಚ್ಚುಮಾಡಿಸಿ ಪ್ರಕಟಿಸುವುದು.

೬. ಮೈಸೂರು ಬೆಂಗಳೂರುಗಳಲ್ಲಿಯ ಸರಕಾರಿ ಸಂಸ್ಕೃತ ಕಾಲೇಜುಗಳಲ್ಲಿಯೂ, ಗದುಗಿನ ವೀರಶೈವ ವಿದ್ಯಾಪೀಠದಲ್ಲಿಯೂ ನಡೆಯುತ್ತಿರುವ ವೀರಶೈವ ದರ್ಶನ ಅಥವಾ ಶಿವಾನುಭವ ಶಾಸ್ತ್ರದ ಅಧ್ಯಯನಕ್ಕೆ ನಮ್ಮ ವಿದ್ಯಾರ್ಥಿಗಳು ಹೆಚ್ಚು ಹೆಚ್ಚಾಗಿ ಹೋಗಿ ಪರೀಕ್ಷೆಗಳಲ್ಲಿ ಉತ್ತೀರ್ಣರಾಗತಕ್ಕದ್ದು. ತನ್ಮೂಲಕ ಮತ ವಿಷಯಗಳಲ್ಲಿ ಅನುಭವಿಗಳಾಗತಕ್ಕದ್ದು. ಇಂತಹ ಶಾಲೆಗಳನ್ನು ಇತರ ಕಡೆಗಳಲ್ಲಿಯೂ ಪ್ರಾರಂಭಿಸತಕ್ಕದು.

೭. ಪ್ರತಿಯೊಬ್ಬ ವೀರಶೈವರ ಮನೆಗಳಲ್ಲಿಯೂ ಬೆಳಿಗ್ಗೆ ಮತ್ತು ಸಂಜೆ ಶಿವಶರಣರ ವಚನಗಳನ್ನು ಪ್ರಾರ್ಥನಾರೂಪವಾಗಿ ಹಾಡುವ ಅಭ್ಯಾಸವನ್ನು ಇಟ್ಟುಕೊಳ್ಳತಕ್ಕದ್ದು. ಆದರಿಂದ ಧಾರ್ಮಿಕ ಸ್ಫೂರ್ತಿ ಪಡೆಯತಕ್ಕದ್ದು.

೮. ಕನ್ನಡ, ಸಂಸ್ಕೃತ, ತಮಿಳು, ತೆಲಗು ಮತ್ತು ಮರಾಠಿ ಭಾಷೆಗಳಲ್ಲಿರುವ ವೀರಶೈವ ಗ್ರಂಥಗಳ ಪಟ್ಟಿಯನ್ನು ತಯಾರು ಮಾಡತಕ್ಕದ್ದು. ಅಂದರೆ ವೀರಶೈವ ಗ್ರಂಥಸೂಚಿ ರಚಿಸತಕ್ಕದ್ದು. ಅಚ್ಚಾಗದ ಗ್ರಂಥಗಳನ್ನು ಪ್ರಕಟಿಸತಕ್ಕದ್ದು.

೯. ಶಿವಾನುಭವ ತತ್ವಗಳನ್ನು ಪ್ರಚಾರಮಾಡುತ್ತಿರುವ ವಿಜಯಪುರದ 'ಶಿವಾನುಭವ', ಬೆಂಗಳೂರಿನ 'ಶರಣ ಸಾಹಿತ್ಯ', ಗದುಗಿನ 'ಸಾವಧಾನ', ಧಾರವಾಡದ 'ಜಯಕರ್ನಾಟಕ', ಶಿವಯೋಗಮಂದಿರದ ಸುಕುಮಾರ' ಮೊದಲಾದ ಪತ್ರಿಕೆಗಳಿಗೆ ಸಮಾಜ ಹಿತೈಷಿಗಳು ಪೋಷಕ

ರಾಗಿ, ಚಂದಾದಾರರಾಗಿ, ಪ್ರಚಾರಕರಾಗಿ, ಲೇಖಕರಾಗಿ ಸೇವಾಗತಕ್ಕದ್ದು. ಈ ಪತ್ರಿಕೆಗಳನ್ನು ಎಲ್ಲ ವಿಧದಲ್ಲಿಯೂ ಪ್ರೋತ್ಸಾಹಿಸತಕ್ಕದ್ದು.

೧೦. ಶಿವಶರಣರ ಕ್ಷೇತ್ರಗಳು, ಶಿವಯೋಗಿಗಳ ತಪೋಭೂಮಿಗಳು, ವೀರಶೈವ ರಾಜರ ಮತ್ತು ಕವಿಗಳ ಸ್ಮಾರಕಗಳು ಮೊದಲಾದವುಗಳ ಜೀರ್ಣೋದ್ಧಾರ ಕಾರ್ಯಗಳನ್ನು ಮಾಡತಕ್ಕದ್ದು. ಇಂತಹ ಕಾರ್ಯಗಳಿಗೆ ಸಮಾಜ ಬಾಂಧವರು ಪ್ರೋತ್ಸಾಹ ನೀಡತಕ್ಕದ್ದು. ವೀರಶೈವದ ಉದ್ಧಾರಕ್ಕೆ ಈ ಕಾರ್ಯಪೋಷಕವಾದುದು.



## ಅಕ್ಕನ ಬಳಗ.

( ಲೇ:- ಶ್ರೀ ಸಿ. ನಾ. ಮಹಾಂತಣ್ಣವರ, ಮು- ಹುನ್ನೂರು. )

ಶಿವಪುರವೆಂಬ ಗ್ರಾಮ. ಅಲ್ಲಿ ಶಿವಭಕ್ತರ ಮನೆಗಳೇ ಹೆಚ್ಚು. ಶಿವಾಚಾರದಲ್ಲಿ ಮುಂದುವರಿದ ಚನ್ನಪ್ಪ ಚಂದಕ್ಕಗಳೆಂಬ ದಂಪತಿಗಳು ದೀಕ್ಷಾತ್ರಯಗಳನ್ನು ಹೊಂದಿದವರು. ನಾಲ್ಕೇ ಕೂರಿಗೆ ಅವರ ಖಾತೆಯ ಜಮೀನು. ಮನೆಯು ಒಕ್ಕಲತನ. ವರ್ಷಾನುವರ್ಷ ಎರಡು ಆಕಳುಗಳ ತಪ್ಪದಿದ್ದ ಹಯನ. ಪ್ರತಿ ಸೋಮವಾರ ಹುಣ್ಣಿವೆ ಅಮಾವಾಸ್ಯೆಗಳಲ್ಲಿ ಜಂಗಮ ಪಾದಪೂಜೆ ನಡೆಯುವದೇ. ಇದಲ್ಲದೆ ಮಧ್ಯಾಹ್ನಕ್ಕೆ ಹಸಿದು ಬಂದ ಜಂಗಮ ತೃಪ್ತಿಗೆ ಕೊರತೆಯಿಲ್ಲ. ಹೀಗೆ ಹತ್ತೆಂಟು ವರ್ಷ ಗತಿಸಿದರೂ ಮಕ್ಕಳ ಮನೆಯೆಂದು ಎನಿಸಲಿಲ್ಲ. ಅವರಿಗೆ ದೀಕ್ಷೆಯನ್ನಿತ್ತ ಹೇಮಕೂಟದ ಮುಸಂಗ ಸ್ವಾಮಿಯ ಆಗಮನ ವೈಶಾಖ ಮಾಸ. ಮಕ್ಕಳ ಮನದ ಚಿಂತೆಯಿಂದ ಕೊರಗಿದ ಚಂದಕ್ಕನ ಶರೀರ. ಈ ಅಂತ ಸ್ಥಿತಿಯನ್ನು ಕಂಡುಹಿಡಿದ ಗುರುಗಳ ಆಶೀರ್ವಾದದ ಬಲದಿಂದ ಮುಂದೆ ಬಲವಾದ ಅವಳಿಜವಳಿ ಹೆಂಗೂಸುಗಳ ಜನನ. ಧರ್ಮಾಚಾರದಂತೆ ಅವುಗಳಿಗೆ ಸತ್ಯಕ್ಕ ನಿತ್ಯಕ್ಕಗಳೆಂಬ ನಾಮಕರಣ. ಗುರುಕಾರಣ್ಯದಿಂದ ದಿನದಿನಕ್ಕೆ ಕೂಸುಗಳು ವರ್ಧಿಸುತ್ತ ಸುಶಿಕ್ಷಣವ ಪಡೆಯುತ್ತ ಲಗ್ನದ ಆತುರತೆಯ

ಹೆಂಗಾಮು. ಈ ಪರಿಸ್ಥಿತಿಗನುಸರಿಸಿ ಸತ್ಯಕ್ಕನನ್ನು ತಾಯಿಯ ತವರುಮನೆಗೂ ನಿತ್ಯಕ್ಕನನ್ನು ಹೆಚ್ಚು ತಲಿತ ಸರಕಾರೀ ನೌಕರಿಯನ್ನು ಧಾರಣ ಮಾಡಿದ ವರನಿಗೂ ಕೊಟ್ಟು ವಿವಾಹ ವಿಧಿಗಳನ್ನು ಮುಗಿಸಿದರು.

ಮುಂದೆ ಶುಭಮುಹೂರ್ತದಲ್ಲಿ ಸತ್ಯಕ್ಕನು ಪ್ರಥಮ ಋತುಮತಿಯಾಗಿದ್ದರಿಂದ ತಾಯಿಯ ತವರೂರವರು ಆಕೆಯನ್ನು ಕರಕೊಂಡು ಹೋಗಿ, ಶಿಷ್ಟಾಚಾರದಂತೆ ಮಕರತೋರಣ ಕಟ್ಟಿ, ೫ ದಿನಗಳ ವರೆಗೆ ಪ್ರತಿದಿವಸ ಮುತ್ತೈದೆಯರು ಬಂದು, ಸಂಜೆಯ ವೇಳಯಲ್ಲಿ ಶೋಭನ ಪದಗಳನ್ನು ಸಾಕಷ್ಟು ಹಾಡಿ, ಆರುತಿ ಬೆಳಗುತ್ತ ಎಡೆಗಳನ್ನು ಕೊಡುತ್ತ ಹೋಗುತ್ತಿದ್ದರು. ಕಡೆಯ ದಿವಸ ಬೀಗರು ಬಿಜ್ಜರೂ, ಬಂಧುಬಳಗದವರೂ, ಇನ್ನಿತರ ಸಜ್ಜನರೂ ಬಂದು ಶುಭಮುಹೂರ್ತದಲ್ಲಿ ಧರ್ಮಾಚಾರದಂತೆ ಸತ್ಕ್ರಿಯೆಗಳನ್ನು ಮಧ್ಯಾಹ್ನಕ್ಕೆ ಮುಗಿಸಿ, ಫಲಶೋಭನ ಕಾರ್ಯವನ್ನು ವಿಜೃಂಭಣೆ ಪೂರ್ವಕ ಸಾಂಗಗೊಳಿಸಿದರು. ಸತ್ಯಕ್ಕನ ಗಂಡ ಸೋಮಣ್ಣನ ವಯಸ್ಸು ೨೨. ಆತನು ಮುಲ್ಕೀಪರೀಕ್ಷೆಯ ಪಾಸಾಗಿ ಎರಡು ವರ್ಷ. ದೇವೀ ಹೊಸೂರಲ್ಲಿ ಒಕ್ಕಲತನ ಶಿಕ್ಷಣ ಪಡೆದು, ಊರೊಳಗಿನ ಗರಡೀ ಮನೆಗೆ ಹೋಗುತ್ತಾ ನಾಲ್ಕು ವರ್ಷ ಕಳೆದದ್ದರಿಂದ ಶಾರೀರಿಕ, ಮಾನಸಿಕ, ನೈತಿಕ ಔದ್ಯೋಗಿಕಗಳಲ್ಲಿ ಹೆಸರುವಾಸಿಯಾಗಿದ್ದನು. ಸತ್ಯಕ್ಕನ ಅತ್ತೆ ಮಾವಂದಿರರಿಗೆ ಹೊಲಗಳು ಹೆಚ್ಚು ಇದ್ದದರಿಂದ ಹಾಲುಹಯನಗಳಿಗೂ, ಕಾಳುಕಡಿಗಳಿಗೂ, ಅರಿವೆಅಂಚಡಿಗಳಿಗೂ ಯಾವ ಕೊರತೆಯೂ ಇದ್ದಿಲ್ಲ. ಆ ಊರಲ್ಲಿ ಹೆಣ್ಣುಮಕ್ಕಳೆಲ್ಲ ಕೂಡಿ "ಅಕ್ಕನ ಬಳಗ" ಎಂಬ ಕೂಟವನ್ನೇರ್ಪಡಿಸಿದ್ದರು. ಹಾಗು ಅಲ್ಲಿ ಚರಮೂರ್ತಿಗಳೊಬ್ಬರು ಕ್ರಿಯಾಜ್ಞಾನಗಳಿಂದ ಬಂಧುರರಾಗಿದ್ದು, ಮುಪ್ಪಾವಸ್ಥೆಗೆ ಬಂದಿದ್ದರು. ಸೋಮವಾರಕ್ಕೊಮ್ಮೆ ಶ್ರೀ ಮಹಾದೇವಿಯಕ್ಕನ ವಚನಗಳನ್ನು ಓದಿ ಹೇಳಿ, ಪ್ರತಿಯೊಂದು ವಚನದ ಸ್ಥಳಕುಳಗಳನ್ನು ವಿವರಿಸಿ, ಹೆಣ್ಣುಮಕ್ಕಳ ನಡೆನುಡಿಗಳನ್ನು ಸುಧಾರಣೆಗೆ ತಂದಿದ್ದರು. ಸತ್ಯಕ್ಕನಾದರೂ ಮೊದಲೇ ತಾಯಿತಂದೆಗಳಿಂದ ವೀರಶೈವಾನುಭವವನ್ನು ಚನ್ನಾಗಿ ಪಡೆದದ್ದರಿಂದ ಆ ಊರ ಅಕ್ಕನಬಳಗದಲ್ಲಿ ಎಲ್ಲ ಹೆಣ್ಣುಮಕ್ಕಳಿಂದ ಪ್ರೇಮಾದರಗಳಿಗೆ ಪಾತ್ರಳಾಗಿ ನಾಲ್ಕೆಂಟು ವರ್ಷಗಳಲ್ಲಿ ಅಷ್ಟಾವರಣ ದಶಾಚಾರ, ಕರಣ ಹಸಿಗೆ, ಪಂಚೀಕರಣ, ನೂರಾ ಎಂಟು ಅಂಗ ಲಿಂಗ ಸಕೀಲುಗಳ ಜ್ಞಾನ ಸುಜ್ಞಾನಗಳಿಂದ ಮಹಾಜ್ಞಾನಿಯಾಗಿ, ಶರಣಮ್ಮನೆಂಬ ಅಭಿದಾನವನ್ನು ಗುರುಹಿರಿಯರಿಂದ ಅಂಗೀಕರಿಸಿದಳು.

ನಿತ್ಯಕ್ಕನು ರೂಪವತೆಯೂ, ಶಾಂತಳೂ, ಅಕ್ಕನಿಗಿಂತ ಹೆಚ್ಚು ಕಲಿತವಳೂ, ಚಾಣಾಕ್ಷಳೂ ಆಗಿದ್ದು, ಆಚರಣೆಯಲ್ಲಿ ಅಕ್ಕನಿಗಿಂತ ಒಂದು ಹೆಜ್ಜೆ ಮುಂದಾದವಳು. ಈಕೆಯ ರೂಪ ಲಾವಣ್ಯಗಳಿಗೆ ಮರುಳಾಗಿ ತರುಣ ಪದವೀಧರರು ಲಗ್ನವಾಗಬೇಕೆಂಬ ಆಕಾಂಕ್ಷೆಯುಳ್ಳವರಾಗಿದ್ದರು. ಫ್ರೀ ಬೋರ್ಡಿಂಗಿನ ಸಹಾಯದಿಂದ ಕಲಿತು ಎಮ್. ಎ. ಪದವಿಯನ್ನು ಪಡೆದ ಪರಮ ಸಾಧುವೃತ್ತಿಯ ಲಕ್ಷಣವುಳ್ಳ ಧಾರವಾಡ ಜಿಲ್ಹೆಯ ಬೆಳವಲನಾಡಿನ ಶಾಂತಣ್ಣನೆಂಬವನನ್ನು ಲಗ್ನವಾದಳು. ಶಾಂತಣ್ಣನಿಗೆ ನೌಕರಿಯು ಇನ್ನೂ ಸಿಕ್ಕಿದ್ದಿಲ್ಲ. ಲಗ್ನವಾದ ೫|೬ ತಿಂಗಳಲ್ಲಿ ಕರ್ನಾಟಕ ಮಹಾರಾಷ್ಟ್ರಗಳ ಗಡಿ ಸೀಮೆಯ ತಾಲೂಕಿನಲ್ಲಿ ಮೊದಲು ಕಾರಕೂನೀ ಕೆಲಸವನ್ನು ಶಾಂತಣ್ಣನು ಕೈಕೊಂಡು ಒಂದೆರಡು ವರ್ಷ ಚನ್ನಾಗಿ ಕೆಲಸ ಮಾಡಿ, ಡಿಪಾರ್ಟಮೆಂಟಿನ ಪರೀಕ್ಷೆಯಲ್ಲಿಯೂ ತೇರ್ಗಡೆ ಹೊಂದಿದ್ದರಿಂದ ಶಿರಸ್ತೇದಾರ ಜಾಗೆಯು ಸಿಕ್ಕು ಅದರಲ್ಲಿಯೂ ಕೆಲವು ಕಾಲ ಖಾತೆಯ ಅನುಭವವಾದ್ದರಿಂದ ಮಾಮಲೇದಾರ ಜಾಗೆಯ ಅಧಿಕಾರಿಯಾಗಿ, ತನ್ನ ಹೆಸರಿಗೆ ಸರಿಯಾಗಿ ಇಡೀ ತಾಲೂಕಿನ ಕೆಲಸವನ್ನು ಸಾಗಿಸಹತ್ತಿದರು. ಅವರ ಸತಿಯಾಳಾದ ನಿತ್ಯಕ್ಕನು ಶರಣೆಯರ ಮಾರ್ಗಾವಲಂಬಿಯಾಗಿ ಪತಿಗೆ ಅನುಕೂಲಳಾಗಿ, ನಿತ್ಯ ನಿತ್ಯ ಜಂಗಮ ತೀರ್ಥಪ್ರಸಾದ ತಕ್ಕೊಳ್ಳುತ್ತ ವೀರಶೈವ ಮತಾನುವರ್ತಿಗಳಾದ ಹೆಣ್ಣುಮಕ್ಕಳನ್ನು ಸಹ ಸುಧಾರಿಸಹತ್ತಿದಳು. ಆಚಾರವಂತರಿಗೆ ಅನೇಕ ಅಡಚಣಿಗಳನ್ನು ತಂದು, ಶಿವನು ಅವರ ಗುಣಪರೀಕ್ಷೆಗಳನ್ನು ಮಾಡುವನೆಂಬಂತೆ, ನಿತ್ಯಕ್ಕನ ಇದ್ದೊಬ್ಬ ಮಗನು ವಿಷಮಜ್ವರದಿಂದ ತೀರಿಕೊಂಡನು. ಆದರಿಂದ ನಿತ್ಯಕ್ಕನನ್ನು ಮಾತಾಡಿಸಲು ಸತ್ಯಕ್ಕನು ಬಂದು ಒಂದೆರಡು ವಾರಗಳ ವರೆಗೆ ಇದ್ದು, ತಂಗಿಗೆ ಅನೇಕ ರೀತಿಯಿಂದ ದುಃಖೋಪಶಾಂತಿಯನ್ನು ಮಾಡುತ್ತ "ಹರತನ್ನ ಭಕ್ತರ ತಿರಿವಂತೆ ಮಾಡುವ. ಒರೆದು ನೋಡುವ ಸುವರ್ಣದ ಚಿನ್ನದಂತೆ, ಅರೆದುನೋಡುವ ಚಂದನದಂತೆ, ಅರಿದು ನೋಡುವ ಕಬ್ಬಿನ ಕೋಲಿನಂತೆ, ಬೆದರದೆ ಬೆಚ್ಚದೆ ಇದ್ದಡೆ ಕರವಿಡಿದೆತ್ತಿ ಕೊಂಬ ನಮ್ಮ ರಾಮನಾಥಾ." ಎಂಬ ವಚನಾನುಸಾರ ಬೋಧಿಸಿದಳು. ಮೊದಲೇ ಶರಣೆಯರ ಮಾರ್ಗವನ್ನು ಅನುಸರಿಸಿದ ತಂಗಿಯು ಧೈರ್ಯಗೊಂಡು ಇರಹತ್ತಿದಳು. ಸತ್ಯಕ್ಕ ನಿತ್ಯಕ್ಕ ಇಬ್ಬರೂ ತಾವಿದ್ದ ತಾಲೂಕ ಸ್ಥಳದ ಹೆಣ್ಣುಮಕ್ಕಳಿಗೆ ವೀರಶೈವಾಚಾರಗಳನ್ನೂ ಬೋಧಿಸುತ್ತ ಇದ್ದರು. ಪ್ರತಿ ಸೋಮವಾರಕ್ಕೊಮ್ಮೆ ಅಕ್ಕತಂಗಿಯರ ಅಮೃತವಾಣಿಯು ಅಲ್ಲಿಯ

ಸುಶಿಕ್ಷಿತ ಸ್ತ್ರೀಯರ ಇಂಗ್ಲಿಷ ಪದ್ಧತಿಯ ವೇಷಾಡಂಬರಗಳನ್ನು ಹೀಯಾಳಿಸದೆ ಇರಲಿಲ್ಲ.

ಮೊದಲನೇ ಸೋಮವಾರ ದಿವಸ ಸತ್ಯಕ್ಕನು "ಸದಾಚಾರ" ಈ ವಿಷಯವಾಗಿ ಸದ್ಬೋಧವನ್ನು ಸಮೀಚೀನವಾಗಿ ಗುರುಸ್ತೋತ್ರ ಮಾಡುತ್ತ,

॥ವೃತ್ತ॥ ಶರಣಹೃದಯ ದೀಪಂ ವೇದಶಾಸ್ತ್ರಾನುರೂಪಂ ।
ಕರಣ ವಿಜಯ ವೀರಂ ಷಟ್‌ಸ್ಥಲಾಚಾರಧೀರಂ ॥
ಪರಮಗುಣ ಸುಶೀಲಂ ಲಿಂಗಲೀಲಾವಿಲೋಲಂ ।
ನಿರುತ ನಿಜನಿವೇಶಂ ಮುಕ್ತ ಕಂಥಾಮಠೇಶಂ ॥೧॥

ಘನಮಠೇಶನನ್ನು ತ್ರಿಕರಣಪೂರ್ವಕವಾಗಿ ಸ್ತುತಿಸಿ ಆತನ ಆಶೀರ್ವಾದ ರೂಪವಾದ ಪ್ರವಚನವು ಪ್ರಾರಂಭಿಸುವದಾಯಿತು.

ಸದಾಚಾರವೆಂಬುದು ಸತ್ಯವಾದ ನಡಾವಳಿಯು. ಸತ್ಯವಾದ ಆಚಾರವೇ ಸದಾಚಾರವು. ಸತ್ಯವು ಸಕಲಸಂಪತ್ತಿಗೆ ಸ್ಥಾನವು. ಸತ್ಯವೇ ಸಕಲ ತಪದ ಬೀಜವು. "ವರ ಸತ್ಯದಿಂ ಬೇರಿನ್ನು ತಪವುಂಟೇ" ಎಂಬ ನಿಜಗುಣರ ವಾಕ್ಯವುಂಟು. ಅಸತ್ಯದಿಂದ ಅಗಣಿತ ದುಃಖವು. ಅಸತ್ಯವೇ ಅನೃತವು. ಅನೃತವೇ ಪಾಪದ ಮೂಲವು. ಇದರಿಂದ ಕಳವು, ಹಾದರ, ಹಿಂಸೆ, ಕಪಟ, ಮೋಸ, ವಿಶ್ವಾಸಘಾತಾದಿ ಸಮಸ್ತ ದುರ್ದೋಷಗಳು ನೆಲೆಗೊಳ್ಳುತ್ತವೆ. ಆದುದರಿಂದ ಅನೃತವು ಅನಂತ ಹಿಂಸಾಕರ್ಮಗಳಿಗೆ ಸಮಾನವು. "ಶತಗಾವೋಹತಾ ಬಾಲಾಃ । ಶತಬಾಲಾ ಹತಾಸ್ತ್ರಿಯಃ ॥ ಶತನಾರೀ ಹತಾ ವಿಪ್ರಾಃ । ಶತವಿಪ್ರಾ ಹತಾನೃತಃ ॥ ಎಂಬುದಾಗಿ ಸುಳ್ಳಾಡುವವನೇ ಅಧಮನು. ಕಾರಣ ಸುಳ್ಳಾಡದೇ ಇರುವುದೇ ಸದಾಚಾರವು. "ಜಿಹ್ವಾಗ್ರೇ ವಸತೇ ಲಕ್ಷ್ಮೀ । ಜಿಹ್ವಾಗ್ರೇ ಮಿತ್ರಬಾಂಧವಃ ॥ ಜಿಹ್ವಾಗ್ರೇ ಬಂಧನಂ ಪ್ರಾಪ್ತಿಃ । ಜಿಹ್ವಾಗ್ರೇ ಮರಣಂ ಧ್ರುವಂ ॥" ಎಂಬ ಪ್ರಮಾಣದಿಂದ ಸತ್ಯ ಸದಾಚಾರಿಗಳಿಗೆ ವಾಕ್‌ಶುದ್ಧಿಯಾದಲ್ಲಿ ವಾಕ್‌ಪರುಷವುಂಟು.

ಶಿವಭಕ್ತರುಗಳಲ್ಲಿ ಸದಾಚಾರಿಗಳು ಎಲ್ಲ ಮತಸ್ಥರಂತೆ ಸ್ವೇಚ್ಛೆಯಾಗಿ ವರ್ತಿಸಲಿಕ್ಕೆ ಮಾರ್ಗವೇ ಇಲ್ಲವಾಗಿ, ಸತ್ಯ ಸದಾಚಾರದಿಂದ ನಡೆಯಬೇಕು. ಯಾಕಂದರೆ, ಅನಾದಿ ವೃಷಭೇಶ್ವರನಾದ ಜಗದಾರಾಧ್ಯ ಸಂಗನಬಸವೇಶ್ವರ ದೇವರ ಸಾಂಪ್ರದಾಯಕರಾದ ಕಾರಣ, ಅವರಂತೆ ಇವರಿಗಾದರೂ ಮನ ಪರುಷ, ವಾಕ್‌ಪರುಷ, ಹಸ್ತಪರುಷ, ದೃಷ್ಟಿಪರುಷ ಭಾವಪರುಷಗಳು ಎಂಬ

ಪಂಚಪರುಷಗಳನ್ನು ಜಗದೀಶ್ವರನು ಕೊಟ್ಟಿರುವನಾಗಿ, ಈ ಶಿವಭಕ್ತರ ಅಂಗಣವೇ ಕೈಲಾಸವೆಂದು ಮತ್ತು ಶಿವಭಕ್ತರುಗಳ ಪಾದ ಪ್ರಕ್ಷಾಲನದ ಹೊಂಡವೇ ಅಷ್ಟಾಷಷ್ಟಿ ತೀರ್ಥಗಳೆಂದು, ಇದಲ್ಲದೆ ಆ ಶಿವಭಕ್ತರ ಪಾದಸೋಂಕಿದ ಸ್ಥಳವೇ ಪುಣ್ಯಕ್ಷೇತ್ರವೆಂದು ಸಕಲ ಪುರಾಣ ಶಾಸ್ತ್ರಾಗಮಗಳು ಪ್ರಸಿದ್ಧವಾಗಿ ಬೋಧಿಸುತ್ತವೆ. ಶಿವಭಕ್ತರ ಪಾದವು ಸೋಕಿದಲ್ಲಿ ಲಕ್ಷ್ಮಿಯು ನೆಲೆಗೊಂಡಿರುವಳೆಂಬದಕ್ಕೆ ಅನೇಕ ಪ್ರಮಾಣಗಳುಂಟು.

ಕುಬೇರಾದಿ ಸಕಲ ದೇವತೆಗಳೆಲ್ಲರು ತಮ್ಮ ತಮ್ಮ ಊಳಿಗ ಸಹಿತವಾಗಿ ಶಿವಭಕ್ತರ ಭಕ್ತಿಮಂದಿರದ ಮಹಾದ್ವಾರವನ್ನು ಕಾಯ್ದುಕೊಂಡಿರುವರೆಂಬುದಕ್ಕೆ ಅನಂತ ಪುರಾಣಗಳಲ್ಲಿ ಸಾಕ್ಷಿಯುಂಟು. ಅದಾದರೂ ಪ್ರತ್ಯಕ್ಷ ಪ್ರಮಾಣವುಂಟು. ಈಗಿನ ಕಾಲದಲ್ಲಿ ಶಿವಭಕ್ತರಾದವರು ವೀರಶೈವ ಮಾರ್ಗದ ಭಕ್ತಿತಾತ್ಪರ್ಯದ ಚಾತುರ್ಯದ ಕ್ರಮತಪ್ಪಿ ನಡೆಯುವವರು ದಾರಿದ್ರ್ಯಾದಿ ದುಃಖವನ್ನು ಅನುಭೋಗಿಸುವರು. ಮಾಹೇಶ್ವರರಾದರೂ ವೀರಮಾಹೇಶ್ವರಾಚಾರದ ಕ್ರಮವನರಿಯದ ಕಾರಣ ಕಷ್ಟಬಡುತ್ತಾರೇ ಹೊರತು ಭಕ್ತ ಮಾಹೇಶ್ವರರಿಗೆ ಕೊರತೆಯುಂಟೆ ? ತಾವು ಶಿವಭಕ್ತರಾಗಿ ದಾರಿದ್ರ್ಯ ದುಃಖವನ್ನನುಭೋಗಿಸುವದೆಂದರೆ ಇದು ನಾಚಿಕೆಗೆ ಎಡೆಯಲ್ಲವೇ? ಇಂಥ ಪರಿಸ್ಥಿತಿಯು ಶಿವಮಹಿಮಾತಿಶಯಕ್ಕೆ ಭಂಗವಲ್ಲವೇ ? ಇಂಥವರು ಕ್ರಮತಪ್ಪಿದ್ದರಿಂದ ಕಷ್ಟವುಂಟಾಯಿತು.

ಭಕ್ತರೆಂಬವರು ತಾವು ಲಿಂಗಭಕ್ತರೆಂಬ ಅಭಿಮಾನವಿಲ್ಲದೆ, ತಮಗೆ ಶಿವನು ಕೊಟ್ಟಿರುವ ಸರ್ವಸಾಮರ್ಥ್ಯಯುತವಾದ ಪಂಚಪರುಷಗಳನ್ನು ಕಳೆದುಕೊಂಡು ದಾರಿದ್ರ್ಯ ದೋಷಿಗಳಾಗಿ ಲೌಕಿಕ ವೃತ್ತಿಯೊಡನೆ ಕೂಡಿ ಜಾತಿಸ್ಮರತ್ವವನ್ನೇ ಮರೆತು ತ್ರಿವಿಧಮಲಭಾವಿಗಳಾಗಿ ಜೀವ ಭಾವದೊಡನೆ ಕೂಡಿ ವರ್ತಿಸುತ್ತ ಶುದ್ಧ ಪಾಮರರಂತೆ ವಿಚಾರವಿಲ್ಲದೆ ಅನಂತ ದುರ್ದೋಷಗಳನ್ನು ಮಾಡುತ್ತ ದೇಹಾಂತ್ಯದಲ್ಲಿ ಕಾಲಾಗ್ನಿ ರುದ್ರನ ಶಿಕ್ಷೆಗೊಳಗಾಗಿ ಮುಂದೆ ಭವಭವಾಂತರದಲ್ಲಿ ಭಯಂಕರ ದುಃಖವನ್ನನುಭೋಗಿಸುತ್ತಿರುವರು

ಶಿವಭಕ್ತರೆಂಬ ಲಿಂಗಭಕ್ತರು ತಾವು ವೀರಶೈವ ಸದ್ಭಕ್ತರಾದ ಕಾರಣ ಶಿವಾಗಮ ಪ್ರಮಾಣದಂತೆ ಶಿವಲಿಂಗ ನೈಷ್ಠೆಯುಳ್ಳವರಾಗಿ ನಡೆನುಡಿ ಕಾಯಕಂಗಳಲ್ಲಿ ಶೀಲವ್ರತ ನಿಯಮಾಚಾರಗಳಲ್ಲಿ ಭೃತ್ಯಾಚಾರ ಜ್ಞಾನಾಚಾರ ಧರ್ಮನೀತಿಗಳಿಂದ ಸದಾಚಾರಿಗಳಾಗಿ ವರ್ತಿಸಬೇಕು. ತಾಮಸ ಬುದ್ಧಿಯುತ

ರಾದ ಲೌಕಿಕರಂತೆ ಪರನಾರೀ ಗಮನ ಕಳವು, ಹುಸಿ, ಹಿಂಸೆ, ತಾಮಸ ಜನಸಂಗ, ಇವೈದರಿಂದ ಕೆಟ್ಟು ಭ್ರಷ್ಟರಾಗುತ್ತಿಹರಾಗಿ, ಇವುಗಳನ್ನು ಬಿಟ್ಟು ಬಿಡಬೇಕು. "ಕನ್ಯಾಸಂಯೋಗ ಸಂಯುಕ್ತಂ । ಪ್ರೌಢೀ ಸಂಪರ್ಕವರ್ಜಯೇತ್ ॥ ಏಕಪತ್ನೀವ್ರತಶ್ಚೈವ । ಶಿವಾಚಾರ ಪಥಂ ತಥಾ ||" ಎಂದ ುಂಟಾಗಿ ಸದಾಚಾರಿಗಳಾದ ಶಿವಭಕ್ತರುಗಳಿಗೆ ಪರಸ್ತ್ರೀಗಮನವು ಧರ್ಮವಲ್ಲ.

ಕುಲೀನ ಸ್ತ್ರೀಯುಳಾದ ಸ್ವಪತ್ನಿಯೊಡಗೂಡಿರುವದು ಭಕ್ತರ ಲಕ್ಷಣವು. ಮತ್ತು ಪರಮಪತಿವ್ರತೆಯರಾದ ಭಕ್ತಿಸತಿಯರುಗಳ ಧರ್ಮವು ಹೇಗೆಂದರೆ— "ಏಕಲಿಂಗ ನಿಜ ನೈಷ್ಠೆಯುಳ್ಳವರಾಗಿ ಪುರುಷನ ಆಜ್ಞೆಯ ಪ್ರಕಾರ ವರ್ತಿಸುತ್ತ ಪುರುಷ ಭಕ್ತಿಯಲ್ಲಿ ತತ್ಪರರಾಗಿ ಪುರುಷನಿಗೆ ಶುಶ್ರೂಷೆಯನು ಮಾಡುತ್ತ ಅನ್ಯ ದೈವಂಗಳನುಪೇಕ್ಷಿಸಿ ಶಿವನೇ ದೈವವೆಂದು ದೃಢಾನುರಾಗದಿಂದ ಗುರುಲಿಂಗ ಜಂಗಮದ ಭಕ್ತಿತಾತ್ಪರ್ಯ ಚಾತುರ್ಯವನ್ನೂ ಅಂತರಂಗ ಬಹಿರಂಗದಲ್ಲಿ ಅರಿದು ಮಾರ್ಗಕ್ರಿಯೆ, ಮೀರಿದ ಕ್ರಿಯೆಗಳಿಂದ ವರ್ತಿಸುತ್ತ ಜ್ಞಾನಕ್ರಿಯೆಗಳೊಂದೇಯಾಗಿ ಲೋಕಾಚಾರಕ್ಕೆ ವಿಲಕ್ಷಣವಾಗಿ ಶ್ರುತ್ಯಾಚಾರ ಜ್ಞಾನಾಚಾರಗಳನ್ನನುಸರಿಸಿ ವರ್ತಿಸುವದೇ ಸದಾಚಾರವು. ಈ ಧರ್ಮವು ಶಿವಭಕ್ತರಾದ ಸ್ತ್ರೀಪುರುಷರೀರ್ವರಿಗೂ ಯೋಗ್ಯವಾದದ್ದು.

ಸರ್ವ ಸ್ತ್ರೀಯರನ್ನು ಮಾತೆಯ ಸಮವೆಂದು ಭಾವಿಸಿ ಪರಸ್ತ್ರೀಯರನ್ನು ಬಿಟ್ಟಾತನೇ ಬ್ರಹ್ಮಚಾರಿಗೆ ಸಮಾನನಹನು. ಮತ್ತು ಭಕ್ತಸತಿಯರುಗಳು ತಮ್ಮ ಲಗ್ನದ ಪುರುಷನೊಬ್ಬನೇ ಪುರುಷನಲ್ಲದೆ ಅನ್ಯ ಪುರುಷರೆಲ್ಲರೂ ಸಹೋದರರೆಂದು ಭಾವಿಸಿ ಅನ್ಯದೈವಂಗಳನ್ನೆಲ್ಲ ತೃಣಕ್ಕೆ ಸಮಾನವಾಗಿ ಕಂಡು ಪುರುಷ ಭಕ್ತಿಯಲ್ಲಿ ತತ್ಪರರಾಗಿರುವದೇ ಭಕ್ತಿ ಸತಿಯರಿಗೆ ಸದಾಚಾರವೆನಿಸುವದು.

"ತೃಣಂವಾಯ ವಿವಾಕಾಶಂ । ಮೃದಂವಾಜಲಮೇವಚ ॥ ಪರಸ್ಯಾಪಹರಣಂಜಂತು । ನರಕಂ ಚ ಪ್ರಪದ್ಯತೇ ॥" ಎಂಬದಾಗಿ ಹುಲ್ಲುಕಡ್ಡಿಯಷ್ಟಾದರೂ ಆಕಾಶದಷ್ಟಾದರೂ ಒಕ್ಕುಡುತೆಯುದಕವಾದರೂ ಒಂದು ಹಿಡಿ ಮಣ್ಣಾದರೂ ಅನ್ಯರ ಪದಾರ್ಥವನ್ನು ಅವರು ಕಾಣಗೊಡದ ಹಾಗೆ ಅಥವಾ ಬಲುಮೆಯಿಂದಾದರೂ ಅಪಹರಿಸಿದವರಿಗೆ ಅಕ್ಷಯವಾದ ನರಕದ ಶಿಕ್ಷೆಯು ಸಂಭವಿಸುತ್ತಿರುವದು. ಕಾರಣ ಕಾಯಾ ವಾಚಾ ಮಾನಸವೆಂಬ ತ್ರಿಕರಣ

ಪೂರ್ವಕವಾಗಿ ಪರಧನವನಿಚ್ಛೈಸದೆ ನಿರ್ಮಲರಾಗಿದ್ದ ಸದಾಚಾರಿಗಳಾಗಿದ್ದವರೇ ಶಿವಪೂಜೆಯ ಮಾಡಲು ಯೋಗ್ಯರು. ತ್ರಿಕರಣ ಶುದ್ಧಿ ಇಲ್ಲದವರ ಶಿವಪೂಜೆಯು ನಿಷ್ಫಲವು.

ಸದಾಚಾರಿಗಳಾದ ವೀರಶೈವ ಸದ್ಭಕ್ತರುಗಳು ಪರಧನ ಪರಸ್ತ್ರೀಯರಿಗಿಚ್ಛೈಸದೆ ಪರಹಿಂಸೆಯ ಮಾಡದೆ ಸಟೆಯ ನುಡಿಯದೆ ಸರ್ವಜೀವ ದಯಾಭರಿತ ಕಾರುಣ್ಯರಾಗಿ ವರ್ತಿಸಬೇಕು. ಮತ್ತು ಲೋಕಾಚಾರದಂತೆ ಸಂಸಾರ ಮಾಡಿದಾಗ್ಯಾದರೂ ಅದರಲ್ಲಿ ಮನಮಗ್ನರಾಗದೆ, ಷಟ್‌ಕೃಷಿಲೋಕ ವ್ಯವಹಾರ ದೋರದೆ, ಭಕ್ತಿ ಸತ್ಪಥ ಮಾರ್ಗವಾಗಿ, ಗುರುಲಿಂಗ ಜಂಗಮದ ಸೇವಾ ತತ್ಪರರಾಗಿ, ದಾಸೋಹ ಮುಖಾಂತರದಿಂದ ಕೃಷಿ ಮೊದಲಾದ ಸಮಸ್ತ ಕಾಯಕಗಳನ್ನು ಗುರುಲಿಂಗ ಜಂಗಮ ನಿಮಿತ್ಯ ಮಾಡುತ್ತ ಸತ್ಯ ಶುದ್ಧ ಕಾಯಕಿಗಳೆನಿಸಿ, ಮಾಡಿ ನೀಡಿ, ಸುಖಭೋಗಂಗಳೆಲ್ಲವರಲ್ಲಿ ಒಂದೂ ಕೊರತೆಯಾಗದೆ ಲಿಂಗಭೋಗೋಪಭೋಗಿಗಳಾಗಿ ಭೋಗಿಸುತ್ತ, ಗುರುಭಕ್ತಿ ಲಿಂಗ ಭಕ್ತಿ, ಜಂಗಮ ಭಕ್ತಿ, ಪ್ರಸಾದಭಕ್ತಿಯೆಂಬ ಚತುರ್ವಿಧ ಭಕ್ತಿವಿಡಿದ ಭಕ್ತಿ ಸತ್ಕಾಯಕದಿಂದ ಶಿವದಾಸೋಹಿಗಳಾಗಿ ವರ್ತಿಸುವದೇ ಸದಾಚಾರವು. ಸತ್ಕಾಯಕದಿಂದ ಬಹುಜನ್ಮದ ದೋಷಗಳು ಪರಿಹಾರವಾಗುವವು. ಇದೇ ಶಿವಭಕ್ತರುಗಳ ಮುಖ್ಯ ಧರ್ಮವು.

ಶಿವಭಕ್ತರ ಸಂಸಾರವು ಲೌಕಿಕರಿಗೆ ಲೌಕಿಕದಂತೆ ಕಂಡರೂ ಅದು ಲೌಕಿಕವಲ್ಲವು. ಯಾಕಂದರೆ ಅವರು ತಮ್ಮ ಹಾಗು ತಮ್ಮ ಸತಿಸುತಾದಿಗಳ ನಿಮಿತ್ತಾರ್ಥವಾಗಿ ಕಾಯಕ ಕೈಕೊಂಡದ್ದಲ್ಲ. ಶಿವಭಕ್ತಿ ಮುಂದುಗೊಂಡು ಗುರುಲಿಂಗ ಜಂಗಮದಿಂದ ತ್ರಿವಿಧ ಪ್ರಸಾದವನ್ನು ಪಡೆದು ಅನುಭೋಗಿಸುವದರಿಂದ ಸಕಲ ಸಂಸಾರ ನಿವೃತ್ತಿಯಾಗಿ, ಸಂಸಾರವೆಂಬುದೇ ಸದ್ಭಕ್ತಿಚಾರಿತ್ರ್ಯವಾಗಿರ್ಪುದು. "ಯಾ ಯಾ ಚೇಷ್ಟಾ ಸಮುತ್ಪನ್ನಂ। ಸಾ ಸಾ ಪೂಜನಮೀಶ್ವರಃ ॥" ಎಂಬದಾಗಿ ಶಿವಭಕ್ತರ ಭಾವದಲ್ಲಿ ಶಿವನು ಪರಿಪೂರ್ಣನಾಗಿರುವನು. "ಯಥಾ ಭಾವ ಸ್ತಥಾಲಿಂಗಂ ಸತ್ಯಂ ಸತ್ಯಂ ನ ಸಂಶಯಃ" ಎಂದುಂಟಾಗಿ, ಶಿವಭಕ್ತರಾದ ಸದಾಚಾರಿಗಳು ತಮ್ಮ ತಮ್ಮ ಭಾವದಲ್ಲಿ ಗುರುಲಿಂಗ ಜಂಗಮವೇ ಸಾಕ್ಷಾತ್ ಶಿವನೆಂದು ನಂಬಿ ನಿರ್ವಂಚಕ ಭಾವದಿಂದ ಅರ್ಥ ಪ್ರಾಣಾಭಿಮಾನಂಗಳನೊಪ್ಪಿಸಿ, ಗುರು ಲಿಂಗ ಜಂಗಮವೇ ತಮ್ಮ ಪ್ರಾಣನಾಥನೆಂದು ದೃಢಾನುರಾಗವಾಗಿ ಒಡೆಯರಿಗೊ

ಡಿವೆಯನೊಪ್ಪಿಸುವೆನೆಂದು ಬಂದ ಜಂಗಮದ ಹಸಿವನರಿತು ಬೇಡಿ ಬೇಡಿದಂತೆ ಸಂತೋಷದಿಂದ ಕೊಟ್ಟು ಭಕ್ತಿಯನ್ನು ಮಾಡುತ್ತ ಸದಾ ಸಂಪತ್ತನ್ನೂ ಭೋಗ ಮೋಕ್ಷಂಗಳನ್ನೂ ಪಡೆಯಬೇಕು. ಭಕ್ತರಾದವರು ಗುರುಲಿಂಗ ಜಂಗಮವನುಪೇಕ್ಷಿಸಿದರೆ ಅವರ ಕೇಡಿಂಗೆ ಕಡೆಯಿಲ್ಲವಾಗಿ ಗುರುಲಿಂಗ ಜಂಗಮವೇ ಸಾಕ್ಷಾತ್ ಶಿವನೆಂದು ನಂಬಬೇಕು. ಇದುವೇ ಭಕ್ತರಿಗೆ ಸದಾಚಾರವು.

ಶಿವನೇ ಶ್ರೀ ಗುರುವಾಗಿ ಬಂದು ಬೋಧಿಸುತ್ತಿರಲು ಒಬ್ಬಾನೊಬ್ಬಾತ್ಮನು ಜ್ಞಾನೋನ್ಮುಖನಾಗಿ, ಸದ್ಗುರುವಿನ ಸದ್ಬೋಧೆಯಂ ಗ್ರಹಿಸಿ, ಭವಿತನಕ್ಕೆ ಹೇಸಿ, ಭಕ್ತನಾಗಬೇಕೆಂದಿಚ್ಛಿಸಿ, ಅರ್ಥ ಪ್ರಾಣಾಭಿಮಾನಂಗಳನ್ನು ಶ್ರೀಗುರುವಿಂಗೊಪ್ಪಿಸಿ, ಮೊದಲು ಆತನಿಂ ಆಜ್ಞಾದೀಕ್ಷೆಯಂ ಪಡೆದು, ಬಳಿಕ ವೇಧಾದೀಕ್ಷೆ , ಮಂತ್ರದೀಕ್ಷೆ , ಕ್ರಿಯಾದೀಕ್ಷೆಯೆಂಬ ತ್ರಿವಿಧ ದೀಕ್ಷೆಯೊಂದಾದ ಶ್ರೀ ವೀರಶೈವ ದೀಕ್ಷೆಯನ್ನು ಪಡೆದು, ಮಲತ್ರಯಗಳನ್ನು ಬಿಸುಟಿ ಕಳೆದು, ಮಾಂಸಮಯ ಶರೀರ ಭಾವವಳಿದು, ಮಂತ್ರಮಯ ಶರೀರಭಾವಿಯಾಗಿ, ಭೂತ ಪಂಚಕ ಜಡಕಾಯವಳಿದು ಚಿಂದಂಗಸ್ವರೂಪನಾಗಿ, ಶ್ರೀ ಗುರುವಿನ ಹಸ್ತ ಮಸ್ತಕ ಸಂಯೋಗದಿಂದ ಚಿತ್ಕಲಾ ಲಿಂಗವು ಬಹಿಷ್ಕರಿಸಿ, ಕ್ರಿಯಾಘನ ಲಿಂಗವಾಗಿ, ಭಾವಕ್ಕೆ ಗೋಚರವಾಗಿ, ಭಾವದಲ್ಲಿ ನೆಲೆಗೊಂಡಲ್ಲಿ ಭಾವ ಲಿಂಗವೆನಿಸಿತ್ತಾಗಿ, ಬಳಿಕಾಲಿಂಗವೇ ಮನಕ್ಕೆ ಗೋಚರವಾಗಿ, ಮನದಲ್ಲಿ ನೆಲೆಗೊಂಡು ಪ್ರಾಣಲಿಂಗವೆನಿಸಿತ್ತಾಗಿ, ಆ ಮನದ ಚಾಪಲ್ಯವೃತ್ತಿಯಳಿದು ಉನ್ಮನವೆನಿಸಿತ್ತು. ಮತ್ತು ಆ ಲಿಂಗವೇ ನೇತ್ರಕ್ಕೆಗೋಚರವಾಗಿ ಕರಸ್ಥಲಕ್ಕೆ ಬಂದು ಕರದಲ್ಲಿ ನೆಲೆಗೊಂಡು ಇಷ್ಟಲಿಂಗವೆನಿಸಿತ್ತು.

ಬಳಿಕಾ ಇಷ್ಟಲಿಂಗವೇ ಷಟ್‌ಪ್ರಕಾಶ ಮುಖವಾಗಿ ಷಟ್‌ಕರಣಂಗಳಲ್ಲಿ ಭೇದಿಸಿದಲ್ಲಿ ಕುಚಿತ್ತ ಹಸ್ತವಳಿದು ಸುಚಿತ್ತ ಹಸ್ತವಾಗಿ, ಕುಬುದ್ಧಿ ಅಳಿದು ಸುಬುದ್ಧಿ ಹಸ್ತವಾಗಿ, ಕುಮನವಳಿದು ಸುಮನ ಹಸ್ತವಾಗಿ, ದುರಹಂಕಾರವಳಿದು ನಿರಹಂಕಾರ ಹಸ್ತವಾಗಿ, ಅಜ್ಞಾನ ಹಸ್ತವಳಿದು ಸುಜ್ಞಾನ ಹಸ್ತವಾಗಿ, ದುರ್ಭಾವವಳಿದು ಸದ್ಭಾವ ಹಸ್ತವಾಗಿ, ಈ ಪ್ರಕಾರ ಷಡ್ವಿಧ ಹಸ್ತ ಶುದ್ಧವಾದಲ್ಲಿ, ಬಳಿಕ ಆ ಲಿಂಗವೇ ಜ್ಞಾನಕ್ರಿಯಾಸೂತ್ರದಿಂ ಷಡಿಂದ್ರಿಯಂಗಳು ಟ್ಕರಣಂಗಳಲ್ಲಿ ವೇಧಿಸಿ, ಸರ್ವಾಂಗ ಪರಿಪೂರ್ಣವಾಗಿ ನೆಲೆಗೊಂಡಲ್ಲಿ ಚಿದ್ಘನ ಮಹಾಲಿಂಗವೆನಿಸಿತ್ತಾಗಿ ಸರ್ವಾಂಗ ಲಿಂಗಮಯವಾಗಿತ್ತು. “ಸರ್ಪದಷ್ಟ ತದ್ದೇಹಂ । ಸರ್ವಾಂಗ ವಿಷದೇಹವತ್ ॥ ಲಿಂಗದಷ್ಟ ತದ್ದೇಹಂ ।

ಸರ್ವಾಂಗ ಲಿಂಗದೇಹವತ್" ಎಂಬ ಆಗಮ ಪ್ರಮಾಣವುಂಟು. ಈ ಪ್ರಕಾರ ಗುರುಮಾರ್ಗಾಚಾರವಿಡಿದು ಭಕ್ತನಾದಲ್ಲಿ ಶಿವನು ಭಕ್ತದೇಹಿಕ ದೇಹನಾಗಿರ್ಪನು. ಹೀಗಿರುವದೇ ಭಕ್ತರ ಸದಾಚಾರವು.

ಈ ಪ್ರವಚನ ನಡೆದಾಗ್ಗೆ ಸತ್ಯಕ್ಕನ ಎದುರಿಗೆ ಕುಳಿತ ಒಬ್ಬ ಹೆಣ್ಣುಮಗಳು ತನ್ನ ಗಂಡನ ದುರಾಚಾರದಿಂದ ಮನೆಮಾರು ಹಾಳುಮಾಡಿಕೊಂಡು ಕಷ್ಟಕ್ಕೆ ಗುರಿಯಾಗಿ ಕಣ್ಣೀರು ಒರಿಸಿಕೊಂಡು ಬಾಡಿದ ಮುಖಚರ್ಯೆಯುಳ್ಳವಳಾಗಿ ಬಿಕ್ಕಿ ಬಿಕ್ಕಿ ಅಳಹತ್ತಿದಳು. ಒಂದೆರಡು ದಿವಸಗಳಿಂದ ೫|೬ ಮಕ್ಕಳ ಹಾಗು ತನ್ನ ಉಪವಾಸ ವನವಾಸಗಳ ದುಃಸ್ಥಿತಿಯನ್ನು ಸಭೆಯಲ್ಲಿ ಹೇಳದೆ ಹುಡುಗಿಯರಂತೆ ದುಃಖವು ಧುಮುಕುತ್ತಿರುವದನ್ನು ನೋಡಿದ ಸತ್ಯಕ್ಕನು ಸೂಕ್ಷ್ಮದೃಷ್ಟಿಯಿಂದ ಸುವಿಚಾರಿಸಿ ಆಕೆಯ ದುಃಖೋದ್ಧಾರ ಶಮನದ ಪದ್ಯವನ್ನಾರಂಭಿಸಿದಳು.

**ಪದ**

ಅಳಬೇಡ ತಂಗೀ ಅಳಬೇಡ ।
ಬೇಡಿದ ನೀಡುವ ಒಡೆಯನು ಇರುತಿರೆ ॥ಪಲ್ಲ॥
ಗುರುಪುರದೊಳು ಪೊಕ್ಕು ಅರುಹಿನ ಕರದೊಳು ।
ಸುರಸ ಪ್ರಸಾದವ ಸುರಿನಡೆ ನೀನು ॥೧॥
ಗುರುಕರ ಜಾತಕಳಾಗಿ ಕರದೊಳು ಮಿರುಗುವ ।
ಪರಮನ ಪೂಜಿಸಿ ಪ್ರಮೋದವ ನೀಡೆ ನೀ ॥೨॥
ಗುರುಲಿಂಗ ಜಂಗಮದ ತೀರ್ಥ ಪ್ರಸಾದಗಳ ।
ನಿರುತದಿ ಸೇವಿಸಿ ನಿಜಸುಖಿಯಾಗೌ ॥೩॥
ಬಡತನ ಬಂದಂತೆ ಬಳಲುವದೇತಕೆ ।
ಕೊಡುವ ಶಿವನು ತಾ ಬಡವನೇ ಹೇಳೇನೀ ॥೪॥
ಕಾಯಕ ಕೈಕೊಂಡು ನ್ಯಾಯದಿ ನಡೆಯುತ ।
ಮಾಯೆಯ ಜಯಿಸುತ ಸ್ವಾಯತಳಾಗೌ ॥೫॥
ಶಿವನಾಮವ ಬಿಡದೆ ನೇಮದಿ ಜಪಿಸಲು ।
ಭವಹರನೊಲಿಯಲು ಪರಿಭವ ಹರಿವುದು ॥೬॥

ಈ ಪ್ರಕಾರ ಬೋಧಿಸಿ ಆ ಹೆಣ್ಣುಮಗಳ ಗಂಡನನ್ನು ಮಾಮಲೇದಾರ ಸಾ॥ ರ ಎದುರಿಗೆ ಕರೆಯಿಸಿ, ಪೋಲಿಸರ ಚಕ್ಕು ಆತನ ಮೇಲೆ ಇಡಿಸಿ, ಸರಕಾರೀ ಒಡ್ಡಿನ ಖಾತೆಯಲ್ಲಿ ಆತನಿಗೂ ಹೆಂಡತಿಗೂ ಕೆಲಸ ಕೊಡಿಸಿ

ಮಕ್ಕಳ ಶಿಕ್ಷಣಕ್ಕೆ ಅನುಕೂಲಮಾಡಿಕೊಟ್ಟು ಆ ಮನೆತನಕ್ಕೇನೇ ಶಿವದೀಕ್ಷೆಯ ವ್ಯವಸ್ಥೆಗೊಳಿಸಿ ನಿಜವೀರಶೈವ ಸಂಬಂಧಿಗಳಾಗಿ ಗಂಡನು ಬಸವನ ಬಳಗದಲ್ಲಿಯೂ ಹೆಂಡತಿಯು ಅಕ್ಕನ ಬಳಗದಲ್ಲಿಯೂ ಸಮಾವೇಶವಾಗಿ ಸದಾಚಾರದಿಂದ ಇರಹತ್ತಿದರು.

ಮರುಸೋಮವಾರದ ಸದ್ಬೋಧವು ನಿತ್ಯಕ್ಕನಿಂದ "ಸುಜ್ಞಾನಸಾರು ಈ ವಿಷಯವಾಗಿ ನಡೆಯುವದೆಂತಲೂ ಇಂದಿನಂತೆ ಎಲ್ಲರ ಆಗಮನವು ಆಗಬೇಕೆಂತಲೂ ಹೇಳಿ ಸಭಾವಿಸರ್ಜನೆಯಾಯಿತು.

### ಸುಜ್ಞಾನಸಾರ.

ವೃತ್ತ:—ವಿಶ್ವಾಕಾರಂ ವಿನುತಚರಣಂ ವಿಶ್ವತೋಪಾದಪೂಜ್ಯಂ ।
ಭಕ್ತಾಧಾರಂ ಭವಭಯಹರಂ ಭಾವಲಿಂಗಾಭಿಧಾನಂ ॥
ಶಾಂತ್ಯಾತೀತಂ ಶರಣಸದನಂ ಶಾಸ್ತ್ರಸಂದೋಹಗೇಹಂ ।
ಭಾವಾತೀತಂ ಭವಿಕುಲಹತಂ ಭಾವಜಾರಿಂ ಪ್ರಪದ್ಯೇ ॥೧॥

ಈ ಪದ್ಯವನ್ನು ಅನ್ನುತ್ತ ಶಂಕರನಿಗೆ ಅಭಿವಂದಿಸುತ್ತ ಸತ್ಯಕ್ಕನು ಈ ಮೊದಲು ಗೊತ್ತುಮಾಡಿದಂತೆ "ಸುಜ್ಞಾನಸಾರ" ಈ ಬಗ್ಗೆ ಪ್ರವಚನವು ಪ್ರಾರಂಭಿಸಲ್ಪಟ್ಟಿತು.

ಈ ಸುಜ್ಞಾನವೆಂಬುದು ಶಿವನ ಜ್ಞಾನವು. ಶಿವಜ್ಞಾನವೆಂದರೂ ಬ್ರಹ್ಮಜ್ಞಾನವೆಂದರೂ ತತ್ವಜ್ಞಾನವೆಂದರೂ ಸ್ವಾತ್ಮಜ್ಞಾನವೆಂದರೂ ಆತ್ಮಜ್ಞಾನವೆಂದರೂ ಶಿವತತ್ವಜ್ಞಾನವೆಂದರೂ ಮಹಾಜ್ಞಾನವೆಂದರೂ ಏಕಪರ್ಯಾರ್ಥವು. ಆದರೆ "ಶಿವಜ್ಞಾನಂ ನಜಾನಾತಿ ಬ್ರಾಹ್ಮಣಃ ಶ್ವಪಚಾಧಮಃ ॥ ಎಂಬದಾಗಿ ಶಿವಜ್ಞಾನ ಹೀನರಾಗಿ ಉತ್ತಮ ಕುಲದಲ್ಲಿ ಹುಟ್ಟಿದರೂ ಅಧಮನೆಂದು ಹೇಳಲ್ಪಟ್ಟಿದೆ. "ಬ್ರಹ್ಮಜ್ಞಾನೀಚ ಬ್ರಾಹ್ಮಣಃ" ಎಂಬ ಶ್ರುತಿಯುಂಟಾಗಿ ಪೂರ್ವದ ಋಷಿಗಳೆಲ್ಲರು ಕಮ್ಮಾರ, ಮಚ್ಚಿಗಾರ, ಢೋರ, ಕಬ್ಬಲಿಗ, ನಾಯಿಂದ ಮೊದಲಾದ ಕುಲದಲ್ಲಿ ಹುಟ್ಟಿದವರಾದಾಗ್ಯೂ ಬ್ರಹ್ಮಜ್ಞಾನಿಗಳಾದದರಿಂದ ಎಲ್ಲರೂ ಬ್ರಾಹ್ಮಣರಾಗಿ ವರ್ತಿಸಿದರು. ಈಗಲಾದರೂ ಆ ಋಷಿಗಳ ಗೋತ್ರದವರು ಬ್ರಾಹ್ಮಣರೆಂದು ಹೇಳಿಸಿಕೊಳ್ಳುತ್ತಾರೆ. ಇವರಾದರೂ ಬ್ರಹ್ಮಜ್ಞಾನಿಗಳಾದರೆ ಆ ವರ್ಣಕ್ಕೆ ಯೋಗ್ಯರಾಗುವರು. ಬ್ರಾಹ್ಮಣ ವರ್ಣಕ್ಕೆ ಬ್ರಹ್ಮಜ್ಞಾನವೇ ಮುಖ್ಯವು.

ಜ್ಞಾನಾಗ್ನಿಃ ಸರ್ವಕರ್ಮಾಣಿ ಭಸ್ಮಸಾತ್ ಕುರುತೇರ್ಜುನ ಎಂದು ಭಗವದ್ಗೀತೆಯಲ್ಲಿ ಹೇಳುತ್ತಿಹುದಾಗಿ ಮತ್ತು "ನಂಬೋ ಜ್ಞಾನವನ್ನೇ

ಕರ್ಮವೆಂಬ ಜಾಲದೊಳು ಸಿಲ್ಕಿ ! ಹಂಬಲಿಸದಿರು ಮುಕ್ತಿಯ ಬೇರೆ ಬಯಸಿ ಮನುಜ || ಎಂದು ನಿಜಗುಣಾರ್ಯರ ವಾಕ್ಯವಿಹುದಾಗಿ ಈ ಸುಜ್ಞಾನವು ವೇದಾಂತಾದಿ ಉಪನಿಷತ್ ವಾಕ್ಯಗಳಿಂದಲ್ಲದೆ ತಲೆದೋರದಾಗಿ "ವೇದಾಂತ ಜನ್ಯತೆ ಜ್ಞಾನಂ ವಿದ್ಯೇತಿ ಪರಿಕೀರ್ತಿತೇ "ವಿದ್ಯಾಯಾಂ ರಮತೇ ಯಸ್ಯ ವೀರ ಇತಿ ಬ್ರೂಯತೇ" ಎಂಬದಾಗಿ ವೇದಾಂತದಿಂದುದ್ಭವಿಸಲ್ಪಟ್ಟ ಜ್ಞಾನವೇ ವೀರಶೈವ ಜ್ಞಾನವೆಂದು ಹೇಳುತ್ತಿಹುದಾಗಿ ವೀರಶೈವ ಸದ್ಭಕ್ತರು ಉಪನಿಷದ್ವಾಕ್ಯಂಗಳ ಸಾರವನ್ನೆಲ್ಲ ತೆಗೆದು ಏಕಮುಖದಲ್ಲಿ ತಿಳಿಯುವದಕ್ಕೆ ಆಬಾಲವೃದ್ಧರಿಗೆ ಆಯಾಸವಿಲ್ಲದ ಹಾಗೆ ಕನ್ನಡ ಭಾಷೆಯಿಂದ ಬೆಳುಗನ್ನಡವಾಗಿ ವಿವೇಕಚಿಂತಾಮಣಿ, ಅನುಭವಸಾರ, ಪರಮಾನುಭವ, ಪಾರಮಾರ್ಥ ಪ್ರಕಾಶ ಗೀತೆ, ಕೈವಲ್ಯ ಪದ್ಧತಿಗಳೆಂಬ ಷಟ್ ಶಾಸ್ತ್ರಗಳನ್ನು ಮೋಕ್ಷ ಚಿಂತಾಸ್ವರೂಪವಾಗಿ ಸುಜ್ಞಾನ ದೀಪಿಕೆಯಂತೆ ರಚಿಸಿದ್ದಾರೆ. ಅವುಗಳು ಕನ್ನಡವೆಂದು ಉಪೇಕ್ಷಿಸದೆ ನೋಡಬೇಕು.

ಆದ್ಯರ ವಚನಗಳು ಜ್ಞಾನೋತ್ಕರ್ಷವಾದ ಪ್ರಬಲಶಾಸ್ತ್ರಗಳು. ಇವು ಕನ್ನಡವೆಂದು ಉಪೇಕ್ಷಿಸಲಾಗದು. ಯಾಕಂದರೆ ಆದ್ಯರುಗಳಾದ ದೇವದಾಸ ಬಸವಾದಿ ಪ್ರಮಥರು ವೇದಾದಿ ಸಕಲ ಶ್ರುತಿ ಸ್ಮೃತಿಗಳೆಲ್ಲ ತಮ್ಮ ಮನೆಯ ಮುಂದಿರುವ ಶುನಕಗಳಿಂದೋದಿಸಿದ ಸಮರ್ಥರಿಗೆ ಸಂಸ್ಕೃತವೇನಾಶ್ಚರ್ಯವು? ಅವರಿಗೆ ಸಂಸ್ಕೃತನಿಂದ ಹೇಳುವ ಸಾಮರ್ಥ್ಯವಿದ್ದಿಲ್ಲವೇ ? ಕನ್ನಡದಿಂದ ಹೇಳಿದಾಗ್ಯಾದರೂ ಒಂದೊಂದು ವಚನದಲ್ಲಿ ಕೋಟಿ ಕೋಟಿ ಶ್ರುತ್ಯಾಗಮಗಳ ಸಾರವು ಗೂಢವಾಗಿದೆ. ಆದರೆ ಬಸವದೇವರಾಜರಿಗೆ ಸಂಗಮೇಶ್ವರ ದೇವರು ವೇದಾಂತದೊಳ್ ಗೋಪ್ಯವಾದ ನಿಜೈಕ್ಯ ಭಕ್ತಿಯನೆ ಪ್ರಕಟಿಸೆಂದು ಉಪದೇಶವಿತ್ತಕಾರಣ ನಾಲ್ಕು ಲಕ್ಷ ಮೂವತ್ತಾರು ಸಾವಿರ ವಚನಗಳಿಂದ ನಿಜೈಕ್ಯ ಭಕ್ತಿಯ ಚಾತುರ್ಯದ ತಾತ್ಪರ್ಯವನ್ನೇ ಲೋಕಹಿತಾರ್ಥವಾಗಿ ಕನ್ನಡದಲ್ಲಿ ಬೆಳುಗನ್ನಡ ತಿಳಿಗನ್ನಡವಾಗಿ ಬೋಧಿಸಿದರು. ಶ್ರೀ ಪ್ರಭುದೇವ, ಬಸವರಾಜದೇವ, ಚನ್ನ ಬಸವರಾಜದೇವ, ಸಿದ್ಧರಾಮದೇವ, ದೇವರದಾಸ ಆದಯ್ಯ, ಸಂಗನಬಸವೇಶ್ವರ, ಗಣದಾಸಿ ವೀರಣ್ಣ, ಹಡಪದ ಅಪ್ಪಣ್ಣ, ಲಿಂಗಮ್ಮ, ಮಡಿವಾಳ ಮಾಚಿದೇವ ಮೊದಲಾದ ಶಿವಶರಣರ ವಚನಗಳು ತಾಡವಾಲಿಗಳಲ್ಲಿದ್ದು, ಹುಳತಿಂದು ಹೋಗುತ್ತಿದ್ದಂಥವುಗಳನ್ನು ಶೋಧಿಸಿ ಪ್ರಸಿದ್ಧಪಡಿಸಿದ ರಾವಬಹಾದ್ದೂರ ಹಳಕಟ್ಟಿಯವರೂ, ರಾವಸಾಹೇಬ ಹಾಲಭಾವಿಯವರು ಪ್ರಸಿದ್ಧಿಸಿದ ಮೋಳಿಗೆಯ ಮಾರಯ್ಯ, ಮಹಾದೇವಿಗಳ

ವಚನಗಳ ಸಂಗ್ರಹವು ಪ್ರತಿ ಗ್ರಾಮದ ವಾಚನಾಲಯಗಳಲ್ಲಿ ಇಟ್ಟು, ಸುಜ್ಞಾನ ಸಾರಾಮೃತವನ್ನು ಸೇವಿಸುವದು ನಮ್ಮೆಲ್ಲರ ಆದ್ಯ ಕರ್ತವ್ಯವಾಗಿದೆ.

ಬಸವಾದಿ ಪ್ರಭುದೇವರಂತ್ಯವಾದ ಏಳುನೂರಿಪ್ಪತ್ತು ಪ್ರಮಥಗಣಂಗಳು, ಅರುವತ್ತುಮೂರು ಪುರಾತನರು ಮತ್ತು ನೂತನ ಪುರಾತನರೆಲ್ಲರು ನಡೆದಂತೆ ನುಡಿದು, ನುಡಿದಂತೆ ನಡೆದು, ಭಕ್ತಿಜ್ಞಾನವಿಡಿದಾಚರಿಸಿ ತೋರಿದ ವೀರಶೈವ ಜ್ಞಾನವೇ ವೇದಾಂತಜನ್ಯ ಜ್ಞಾನವಾಗಿ ಸುಜ್ಞಾನವೆನಿಸಿತ್ತು.

ಈ ಸುಜ್ಞಾನದಿಂದ ನಿಜಮೋಕ್ಷವಾಗುವದಲ್ಲದೆ ವೀರಶೈವ ಸುಜ್ಞಾನಹೀನವಾದ ಶ್ರುತಿವಿರಹಿತವಾದ ಅನ್ಯಮತದವರು ಹೇಳುವಂಥ ಬಹುಮುಖದ ಜ್ಞಾನವೆಲ್ಲ ಜಡಕರ್ಮವೂ ಭಿನ್ನವೂ ಆಗಿ, ಮೋಕ್ಷಕ್ಕೆ ಪ್ರಯೋಜನವಲ್ಲವು. ಈ ವೀರಶೈವ ಸುಜ್ಞಾನದಿಂದ ಲೌಕಿಕ ಭೋಗಭುಕ್ತಿಯೂ ಮೋಕ್ಷವೂ ಉಂಟಾಗುವದು. ಈ ಸುಜ್ಞಾನದಿಂದ ಕಾಮಿಗೆ ಸಕಲ ಕಾಮ್ಯಾರ್ಥಂಗಳೂ ನಿಷ್ಕಾಮಿಗೆ ನಿಜಮೋಕ್ಷವೂ ಸಂಭವಿಸುವದು."ಅದು ಬೇಕು. ಇದು ಬೇಕು ಎಂಬ ಎದೆಗುದಿಗೆತನ ಬೇಡ. ಸದ್ಭಕ್ತನಾಗಿರ್ದಡೆ ಸಾಕು. ಪಡಿಪದಾರ್ಥಂಗಳು ತಾನಿದ್ದೆಡೆಗೆ ಬಾಹವಯ್ಯ. ನಿಧಿ ನಿಕ್ಷೇಪಂಗಳು ತಾನಿದ್ದೆಡೆಗೆ ಬಾಹವಯ್ಯ. ಸದುಹೃದಯ ಶುದ್ಧನಾಗಿ ಸಕಳೇಶ್ವರ ದೇವಂಗೆ ಶರಣೆಂದಡೆ ನಿಜಪದವಿಯನೀವನು.

ಈ ಸುಜ್ಞಾನವೆಂಬುವದು ಗೋಚರವಾಗಿ ನಿದರ್ಶನಕ್ಕೆ ನಿಲ್ಲಬೇಕಾದರೆ, ಸಕಲಶಾಸ್ತ್ರಂಗಳ ಬಲವಿಲ್ಲದೆ ಘಟಿಸದಾಗಿ ಜಗದ ಜನರು ತಿಳಿಯಲೆಂದು ವೇದಾದಿ ಸಕಲ ಶಾಸ್ತ್ರಗಳ ಸಾರವೆಲ್ಲ ಸರ್ವರಿಗೆ ತಿಳಿದು ಕೃತಾರ್ಥರಾಗಲೆಂದು ನಿಜಗುಣ ಶಿವಯೋಗಿಗಳು ಕನ್ನಡದಿಂದ ರಚಿಸಿದ ಷಟ್ ಶಾಸ್ತ್ರವನ್ನು ಮೊದಲು ನೋಡಬೇಕು. ತರುವಾಯದಲ್ಲಿ ಆದ್ಯರವಚನಗಳ ನೋಡಿ ಷಟ್‌ಸ್ಥಲ ಬ್ರಹ್ಮಿಯಾಗಿ, ಜ್ಞಾನಕ್ರಿಯೆಗಳಿಂದ ವರ್ತಿಸಬೇಕು. ಯಾಕಂದರೆ "ಆಚಾರವೇ ಸ್ವರ್ಗ, ಅನಾಚಾರವೇ ನರಕ" ಎಂಬ ಬಸವೇಶನ ನುಡಿಯುಂಟು. ಹಾಗು ಗುರುವಚನದಿಂದಧಿಕ ಸುಧೆಯುಂಟೇ? ಎಂಬದಾಗಿ ನಿಜಗುಣಾರಾಧ್ಯರೂ ಹೇಳಿದಾರೆ.

ಸುಜ್ಞಾನವೆಂಬುದು ಕೇವಲ ಶಿವತತ್ವದ ಅಂಶವು. ಆದ್ದರಿಂದ ಅದಕ್ಕೆ ಶಿವಜ್ಞಾನವೆಂಬ ಹೆಸರಾಯಿತು. ಸುಜ್ಞಾನವೆಂಬುದು ಬಚ್ಚಬರಿಯ ಅಚ್ಚಪ್ರಕಾಶವು. ಈ ಪ್ರಕಾಶಕ್ಕೆ ಅನಂತಕೋಟಿ ಸೂರ್ಯಚಂದ್ರರುಗಳ ಪ್ರಕಾಶವು ಸಮಬಾರದು. ಈ ಪರಮ ಪ್ರಕಾಶವಾದ ಶಿವಜ್ಞಾನವೆನಿಸ ಸುಜ್ಞಾನಕ್ಕೆ ಪರಂಜ್ಯೋತಿಯೆಂದೂ ನಿರುಪಾಧಿ ಜ್ಯೋತಿಯೆಂದೂ ಶ್ರುತಿಗಳು ಸಾರುತ್ತವೆ.

ಈ ಸುಜ್ಞಾನವೆಂಬ ಮೋಕ್ಷಚಿಂತಾರತ್ನವನ್ನು ವೇದಾದಿ ಸಕಲ ಶ್ರುತಿ ಸ್ಮೃತಿಗಳು ಹಲವು ರೀತಿಯಿಂದ ಬಣ್ಣಿಸುತ್ತಿಹವು. ಹೇಗೆಂದರೆ– " ದುರಿತಕಾನನವಗ್ನಿ । ಪಂಭವ ಘನಚಂಡ ಮಾರುತ। ಅಜ್ಞಾನ ತಿಮಿರ ತರಣಿ। ಮಾನಸ ಕುಲಗಿರಿ ವಜ್ರ। ಅನುತಾಪ ಸರಸಿಜ ಹಿಮವಿದೆಂದು॥ ಮತ್ತು ಸಾರಸುಖದ ಸುಧಾವಾರಿಧಿ ಸುಕೃತದ ಮೇರು ಮುಕ್ತಿಯ ಜನ್ಮಭೂಮಿ ಚಾರು ಸಿದ್ಧಿಗಳ ಮಂದಾರದಿರವಿನ ಮೂಲ ಕಾರಣವಿದೆಂದು ನಿಗಮಂಗಳರಸುವವು, ಮುನಿಜನರು ಧ್ಯಾನಿಸುವರು. ಸುರೋರುಗರ ಜಾಣ್ಮೆಗೆ ನಿಲುಕದು ಜಗದಾಗು ಹೋಗೆನಿಪ ಸೃಷ್ಟಿಸ್ಥಿತಿ ಸಂಹಾರಾದಿ ಕಾರ್ಯಗಳೊಳು ಸಿಲುಕದೆ ವಿಲಕ್ಷಣವಾಗಿ ಅವಿರಳ ಸಾಕ್ಷಿ ಚೈತನ್ಯ ಸ್ವರೂಪವಾದ ಶಿವಲಿಂಗದಗಣಿತ ನಿಜವಿದೆಂದು, ಸಕಲ ವೇದಾದಿ ಶ್ರುತಿ ಸ್ಮೃತ್ಯರ್ಥಂಗಳು ಸರ್ವಶಾಸ್ತ್ರಾಗಮಂಗಳು ಜ್ಞಾನೋತ್ಕರ್ಷವನ್ನೇ ಬಣ್ಣಿಸುತ್ತಿಹವಾಗಿ " ಜ್ಞಾನಮಾನಂದಮವ್ಯಯಂ " ಎಂದು "ಜ್ಞಾನೇನವಿನಾ ನಾನ್ಯಃ ಪಂಥಃ" ಎಂದು ಈ ಸುಜ್ಞಾನದ ವರ್ಣನೆಯುಂಟು. "ಆಹಾರ ನಿದ್ರಾ ಭಯ ಮೈಥುನಂಚ ಸಾಮಾನ್ಯಮೇತತ್ಪಶುಭಿರ್ನರಾಣಾಂ। ಜ್ಞಾನಿ ನರಾಣಾಂ ಅಧಿಕೋ ವಿಶೇಷಃ। ಜ್ಞಾನೇನ ಹೀನಃ ಪಶುಭಿಃ ಸಮಾನಃ॥ ಎಂಬ ಪ್ರಮಾಣಗಳುಂಟಾಗಿ ಸುಜ್ಞಾನ ಹೀನರಾದ ನರ ಸುರೋರುಗರೆಲ್ಲರು ಪಶುಗಳೆಂದೇ ಹೇಳತಕ್ಕದ್ದು.

ಈ ಸುಜ್ಞಾನೋತ್ಪತ್ತಿಗೆ ಮೊದಲು ಗುರುಕಾರುಣ್ಯವಿಲ್ಲದೆ ಸಿದ್ಧಿಸದಾಗಿ ಗುರುಕಾರುಣ್ಯದಿಂದ ಜೀವ ಸಂಬೋಧನವು, ಅದರಿಂ ಮೇಲೆ ನೀತಿ ಕ್ರಿಯಾಚರಣೆ, ಆಬಳಿಕ ಶಿವಯೋಗಸಾಧನ ಅಥವಾ ಷಟ್‌ಸ್ಥಲಾಚರಣೆ, ಆ ಷಡಾಚರಣೆಯಿಂದಲೇ ಜ್ಞಾನ ಸುಜ್ಞಾನಗಳು ಅಂದರೆ

ಲಿಂಗಾಂಗ ಸಾಮರಸ್ಯ ಎಂಬದಾಗಿ ಉಸುರಿ ಈ ಸದ್ಭಕ್ತಿಯೇ ಮೂಲ ವೆಂದು ಹೇಳಿ ಆ ವಿಷಯವಾಗಿ ಪದವನ್ನು ಕೆಳಗಿನಂತೆ ಅಂದು ತೋರಿಸಿ ಆ ದಿನದ ಪ್ರವಚನವು ಸಮಾಪ್ತಿಗೊಳಿಸಲ್ಪಟ್ಟಿತು.

**ಪದ. ರಾಗ ಮಂಗಳಗೌರಿ.**

ನಂಬುಗೆಯಿಂದ ಶರಣೆನ್ನಿ ಶ್ರೀ ಶರಣರಿಗೆ ।ಪಲ್ಲವ॥

ಶತದಶದಂತಿ ಸಹಸ್ರಲಕ್ಷ ಗೋದಾನ ।
ಶತವಾಜಿ ಅಜಪೆಯ ಕೋಟಿ ಕನ್ಯಾದಾನದ ಫಲ ॥೧॥

ಅತಿಪಾತಕಂಗಳು ಕೋಟ್ಯಾನುಕೋಟಿ ಭ್ರೂಣಹತ್ಯಾ ।
ಶತಲಕ್ಷ ಪಾಪನಾಶನ ಶರಣರದರುಶನ ॥೨॥

ಸಪ್ತಸಾಗರ ಪರ್ಯಂತರ ತೀರ್ಥ ಸ್ನಾನದ ಫಲ ।
ಸ್ವಾರ್ಥವು ಶರಣಾಂಘ್ರಿ ಕಂಕಣಕೆಣೆಯಿಲ್ಲ ॥೩॥

ನಿಮಿಷಂ ನಿಮಿಷಾರ್ಧಂ ವಾಯತ್ರ ತಿಷ್ಠಂತೆ ಯೋಗಿನಃ ।
ಉಮಾನಾಥ ಸಕಲ ತೀರ್ಥ ಸಹಿತ ನಾಗಿಪ್ಪನಲ್ಲಿ ॥೪॥

ಏಕರುದ್ರ ಲೋಕಾದವತೀರ್ಯ ರುದ್ರಯೆನಲಾ ।
ಶ್ರೀ ರುದ್ರ ಲೋಕಪಾವನನಾಗಿ ಚರಿಸುವ ॥೫॥

ನಿತ್ಯಂ ವೇದಕೋವಿದರೊಂದು ಕೋಟಿಯುಂಡ ಫಲ ।
ಸತ್ಯಂ ಶಿವಯೋಗಿಗೆ ನೀಡಿದೊರ್ಕೆಯನ್ನ ಕೆಣೆಯಿಲ್ಲ ॥೬॥

ಯತ್ರಭುಂಕ್ತೇ ಭಸ್ಮಾಂಗೀ ಯಾವನಾದೊಡೇನು ।
ತತ್ರಭುಂಕ್ತೇ ಶಿವನಾರೋಗಿಪನಲ್ಲಿ ॥೭॥

ಲಿಂಗಾರ್ಚನಂ ಗೆಯ್ಯುವ ಶ್ವಪಚ ವಿಪ್ರಗಿಂದಧಿಕ ।
ಲಿಂಗಾರ್ಚನ ವಿಹೀನ ವಿಪ್ರಶ್ವಪಚಗಿಂದತಿಕಷ್ಟ ॥೮॥

ಚತುರ್ವೇದಿಯಾದ ವಿಪ್ರ ಶಿವದೀಕ್ಷಾ ವಿಹೀನನಾಗೆ ।
ನಿಚಿತವ ಗುಣಲಿಕ್ಕದ ಭಕ್ತಂಗಘೋರ ನರಕ ॥೯॥

ಭೂತಿ ರುದ್ರಾಕ್ಷಿ ಲಂಛನಧಾರಿಯು ಶಿವನೆಂ ।
ದಾತನ ಕಾಣುತೆದ್ದೆರಗದಿರ್ದೊಡೆ ಮುಂದೆ ನರಕ ॥೧೦॥

ಕ್ಷೀಯಂತೇ ಸರ್ವಕರ್ಮಾಣಿ ತಮೋಯಜ್ಞಸ ।
ಕ್ಷೀಯಂತೇ ವೀರ ವಕ್ತ್ರಹುತ ಹವಿಯೆಂದುಜಾಗಿ ॥೧೧॥

ದೇಶನಾಮ ಜಾತಿರೂಪು ಸೀಮಾಚಾರವಿದ್ಯೆ ।
ಶೇಷವಕಂಡು ಬೆಸಗೊಳ್ಳದೆ ಶರಣನು ತವೆಮಾಡಿ ॥೧೨॥

ರೂಪಂ ರೂಪಾನ್ವಿತಂ ಮಲಿನಂ ಮಾಲಿನಾಂಬರೋ'ವಾ ।
ಯಾವಪರಿಯಾಗಿರ್ದೊಡೇನ ಶಿವಯೋಗಿಯ ಶಿವನೆಂದಿಪ್ಪುದು ॥೧೩॥

ಮಿಥ್ಯಾಪವಾದವನ್ನು ಭಕ್ತರ ಮೇಲಿಕ್ಕಿನುಡಿದು ।
ತಥ್ಯವಷ್ಟಕೋಷ್ಠದಲ್ಲಿ ಬಿದ್ದು ನರಕಕ್ಕಿಳಿವಾ ॥೧೪॥

ಅನ್ಯಭುಕ್ತಾಪವಾದವನ್ನು ಕಾಣದೆ ಲಾಂಛನದಮೇಲೆ ।
ಅನ್ಯಾಯವ ನುಡಿದು ಕ್ಷಯರೋಗದಿಂ ನರಕಕ್ಕಿಳಿವಾ ॥೧೫॥

ಪಂತಿಭೇದ ವಾದಭೇದಮುಂ ಭಕ್ತರಿಗೆ ಮಾಳ್ಪವನು ।
ಇಂತು ಗರ್ಭರೋಗದಿಂದಧೋಗತಿಗಿಳಿವಾ ॥೧೬॥

ಇದೆ ಜಂಗಮದೊಳಗಿದ್ದು ಭೋಗವ ಮಾಡುವದೆಂದು ।
ಸದ್ಗುರು ಶಂಭು ಸೋಮೇಶನ ವಚನವ ಕೇಳಿ ॥೧೭॥

## ಮತ್ತೇಭ ವಿ- ವೃತ್ತ

ವಿತತಂ ಭಕ್ತಾಯುನಿಂತು ಜಂಗಮದ ಪಾದದ್ವಂದ್ವದೊಳ್ಬಿದ್ದು ಸ ।
ನ್ನುತ ವಸ್ತ್ರಾಭರಣಾನುಲೇಪನ ಸುಧಾನ್ನಂಗೊಟ್ಟೊಡಾತಂಗೆ ವಿ ॥
ಶ್ರುತ ಸೌಖ್ಯಂ ದೊರೆಕೊಳ್ಳುವದೆಂದು ಸುಜನವ್ರಾತಕ್ಕೆ ಸದ್ಬೋಧೆಯಿಂ ।
ಹಿತದಿಂ ಪೇಳ್ದರೆ ರಕ್ಷಿಪಾತನೆ ಶಿವಂ ಶ್ರೀಸಿದ್ಧಲಿಂಗೇಶ್ವರಾ ॥೧॥

ಏಕೋತ್ತರ ಶತಸ್ಥಲ.

---

# ಅಕ್ಕ ಮಹಾದೇವಿ.

(ಲೇ:— ಎಸ್. ಎಮ್. ಜಾಡರ, ಧಾರವಾಡ.)

—o*o—

ಉಡುತಡಿಯ ನಿರ್ಮಲಶೆಟ್ಟಿ ಮತ್ತು ಸುಮತಿದೇವಿಯುವರ ಪುತ್ರಿಯಾದ ಅಕ್ಕ ಮಹಾದೇವಿಯು ಹದಿನಾರು ವರ್ಷದವಳಾಗಿದ್ದಳು. ಅವಳು ರೂಪವತಿ, ರಾಗಿಣಿ, ಕಡುವಿರಾಗ್ಧೆ. ಎಲ್ಲಕ್ಕೂ ಮಿಗಿಲಾಗಿ. ಆಕೆ ತಪಸ್ವಿನಿ. ತುಂಬಿ ತುಳುಕುವ ಜವ್ವನ. ಹುಚ್ಚುಪ್ರಾಯದ ಜೀವನದಲ್ಲಿ ಕಾಲಿಟ್ಟು, ಮನಸ್ಸನ್ನು ಕೆಣಕುತ್ತಿರುವ ಸಂಧಿಕಾಲದಲ್ಲಿ ಅಕ್ಕಗೆ ವೈರಾಗ್ಯ ಪರವಾದ ಮನೋಧರ್ಮ ಉಂಟಾಗಿದೆ. ಅವಳ ನಡತೆ, ರೀತಿ ನೀತಿ ಇವುಗಳನ್ನು ಆ ಶ್ರೀಶೈಲಪತಿಯೊಬ್ಬನೇ ಬಲ್ಲ. ಮದುವೆಯ ಮಾತೆತ್ತಿದೊಡನೆಯೇ ಅವಳು ಹರನೇ ತನ್ನ ಪತಿಯೆಂದುಸುರುವಳು.

ತಂದೆ ತಾಯಿಗಳಿಗೆ ಮಗಳ ಈ ಗುಣಗಳು ಆಶ್ಚರ್ಯಕರವಾಗಿ ವೇದನೆಯನ್ನುಂಟುಮಾಡುವಂಥವು ಆಗಿದ್ದವು. ಪ್ರಾಯದ ಕುವರಿ ಹೆರವರ ವಸ್ತು. ಆ ವಸ್ತುವನ್ನು ಒಂದು ಮನೆಯಿಂದ ಇನ್ನೊಂದು ಮನೆಗೆ ತುಂಬಿಸಿದಾಗಲೇ ಹೆಣ್ಣುಹೆತ್ತವರ ಮನಕ್ಕೆ ನೆಮ್ಮದಿ ಅಲ್ಲವೇ? ಎಂತಲೇ ದಂಪತಿಗಳು ಮಿಡುಕಿದರು. ಮಗಳನ್ನು ಎಂದು ಮದುವೆಮಾಡಿಕೊಟ್ಟು ಸುಖದಿಂದ ಇರುವ ಅವಳನ್ನು ನೋಡುವೆವೋ ಶಿವನೇ, ಎಂಬ ಚಿಂತೆ ಅವರಿಗಿದ್ದರೆ, ಇವಳಿಗೆ ಚೆನ್ನಮಲ್ಲಿಕಾರ್ಜುನನು ವಲಿವನೇ? ಒಲಿವನೇ? ಎಂಬ ಚಿಂತೆ ಅಕ್ಕಗೆ.

> ಅಯ್ಯ ನೀ ಒಲಿದರೆ ಒಲಿ. ಒಲಿಯದಿರ್ದರೆ ಮಾಣು.
> ನಾನಿನ್ನ ಪೂಜಿಸಿದಲ್ಲದೆ ಸೈರಿಸಲಾರೆನಯ್ಯಾ.
> ಅಯ್ಯಾ ಮೆಚ್ಚಿದರೆ ಮೆಚ್ಚು. ಮೆಚ್ಚದಿರ್ದೊಡೆ ಮಾಣು.
> ನಾನಿನ್ನಪ್ಪಿದಲ್ಲದೆ ಸೈರಿಸಲಾರೆನಯ್ಯ, ಎಂದು ಚಿಂತಿಸುವಳು.

ಹೀಗವಳು ದೇವನೇ ಗಂಡನೆಂದು ನಂಬಿರುವಾಗ ವಸಂತಮಾಸ ಬಂದಿತು. ಆಗ ಒಂದು ಸುಪ್ರಭಾತಸಮಯ ಹೆಂಗಳೆಯರು ಅಕ್ಕನನ್ನು ಸಿಂಗರಿಸತೊಡಗಿದ್ದರು. ಆಗವರು ಅಕ್ಕ ಭ್ರಮರಗಳು ನೀನು ಮುಡಿದ ದಂಡೆಯ ಹೂವಿಗೆ ಬರಬಹುದಲ್ಲವೇ ಎನ್ನುವದರೊಳಗೆ ವೈಹಾಳಿಯಿಂದ ತಿರುಗಿ ಬರುವ ಕೌಶಿಕರಾಜನು ಇವಳನ್ನು ನೋಡಿ ಅಕ್ಕ ಮಹಾದೇವಿ

ಯನ್ನು ಮನದಲ್ಲಿಯೇ ಬಯಸಿ, ರಾಜಧಾನಿಗೆ ಹೋದನು. ನಂತರ ಸೇವಕರನ್ನು ಕರೆದು ಹೀಗೆಂದನು. ಅಕ್ಕ ಮಹಾದೇವಿಯನ್ನು ನಾನು ಲಗ್ನಮಾಡಿಕೊಳ್ಳತಕ್ಕವನಿರುವೆ. ಆದ್ದರಿಂದ ಅವಳನ್ನಿಲ್ಲಿಗೆ ಬರಮಾಡು. ಆಗವರು ನಿರ್ಮಲಶೆಟ್ಟಿಯ ಮನೆಗೆ ಬಂದು ಹೀಗೆಂದರು. ದಂಪತಿಗಳು ಮಗಳನ್ನು ಮಹಾರಾಜರ ವಿವಾಹಮಂಟಪಕ್ಕೇರಲು ಕಳುಹಿಸಬೇಕು.

ಕೌಶಿಗನು ಜೈನ ಮಹಾರಾಜನಾದರೇನು? ಶಿವಭಕ್ತರೊಂದಿಗೆ ಜೈನನ ಸಂಗವೆಲ್ಲಿಯದು ? ಶಿವನ ಸಂಗ ಬಯಸಿದ ಮಹಾದೇವಿ ಕೌಶಿಕನ ಕರೆಗೆ ಗಡಗಡನೇ ನಡುಗಿ, ಕಣ್ಣೀರಿಟ್ಟಳು. ತಂದೆ ತಾಯಿಗಳು ವಿಸ್ತಾರವಾಗಿ ಬುದ್ಧಿಹೇಳಿ ಕೆಟ್ಟ ವಿಧಿಗೆ ನಮ್ಮನ್ನು ಹಾಕಬೇಡ ಮಗಳೇ ಸುಮ್ಮನೇ ಕೌಶಿಕನ ಎಂದರು. ಆಗವಳು ತಂದೆತಾಯಿಗಳ ಹಸಾದವನ್ನೆತ್ತಿಕೊಂಡು ಅರಮನೆಗೆ ಬಂದು ರಾಜಗೆ "ಶಿವನ ಪೂಜೆ, ಮಹೇಶ್ವರರ ಗೋಷ್ಠಿ ಮತ್ತು ಗುರುವಿನಂಘ್ರಿಯ ಸೇವೆ ಮಾಡುವದಾದರೆ ಮತ್ತು ಈ ಮೂರು ವರ ಪಾಲಿಸಿದರೆ ಮದುವೆಯಾಗುವೆ ಎಂದಳು. ಅದರಂತೆ ಒಪ್ಪಿಕೊಂಡದ್ದರಿಂದ ಮದುವೆಯಾದಳು ವಿಷಮ ವಿವಾಹ. ಕೇಳುವದೇನು? ರಾಗ ಒಂದು ಕಡೆ. ವಿರಾಗವಿದ್ದೊಂದುಕಡೆ. ಹೀಗಿರುವಾಗ ಕೌಶಿಕನು ಮೂರು ತಪ್ಪುಗಳನ್ನು ಮಾಡಿದ್ದರಿಂದ ಮಹಾದೇವಿಯು ಅರಮನೆ ಬಿಟ್ಟು ಹೊರಟಳು.

ತಾರುಣ್ಯವನ್ನೂ, ಮುಪ್ಪಿನ ತಾಯಿತಂದೆಗಳನ್ನೂ, ರಾಜನ ಕಟ್ಟು ನಿಟ್ಟುಗಳನ್ನೂ, ಭಯ ಲಜ್ಜಾದಿಗಳನ್ನೂ ತೊರೆದು, ಆ ರಾಜನ ಉತ್ತಮವಾದ ಅರಿವೆಗಳನಲ್ಲಿಯೇ ಕಳಚಿ, ದಿಗಂಬರಿಯಾಗಿ ಹೊರಟಳು. ಗಿರಿ ಗಂಹ್ವರ ದಾಟಿದಳು. ಚನ್ನಮಲ್ಲಿಕಾರ್ಜುನನ್ನು ಹುಡುಕಲು ಗಿರ್‍ರನೇ ತಿರುಗಿದಳು. ಹಸಿವೆಯಾದಾಗ ಬಿಕ್ಷೆಬೇಡಿಯೂ, ತೃಷೆಯಾದಾಗ ಜಲಾಶಯಗಳನ್ನಿಂಟುತ್ತಲೂ ನಡೆದಿದ್ದಳು. ಹೀಗೆಯೇ ತಿರುಗುವಾಗ ಚನ್ನಮಲ್ಲಿಕಾರ್ಜುನನು ಸಿಕದಾಗಲು ಜೀಸತ್ತು, ಬಸವಳಿದು, ಅಡವಿಯಲ್ಲಿ ಹುಲಿ, ಕರಡಿ, ನರಿ, ನವಿಲು, ಹಾವು, ಕೋಗಿಲೆ ನೀವು ಕಾಣಿರೇ ನೀವು ತೋರಿರೇ. ಎನ್ನುತ್ತ ಕಲ್ಯಾಣಕ್ಕೆ ಪ್ರಭುದೇವರ ಅನುಭವಮಂಟಪಕ್ಕೆ ಬಂದಳು. ಇವಳ ವಿಚಿತ್ರ ರೀತಿಯಾದ ತ್ಯಜಿಸಿದ ಸೌಂದರ್ಯ, ವೈರಾಗ್ಯ, ರತಿಯನ್ನೂ ಕಾಮ ಮೊದಲಾದ ಗುಣಗಳನ್ನು ನೋಡಿ ಎಲ್ಲರೂ ಚಕಿತ

ರಾದರು. ಮತ್ತು ಪ್ರಭುದೇವರು ಇವಳನ್ನು ಪರೀಕ್ಷಿಸಿದಾಗ ಅದರಲ್ಲಿ ಅವಳು ಸಂಪೂರ್ಣವಾಗಿ ಗೆದ್ದಳು.

ಅವಳು ಅಲ್ಲಿಯೇ ಇದ್ದು ತನ್ನ ಉತ್ತಮವಾದ ವಚನಗಳಿಂದಲೂ ಭಕ್ತಿಭಾವದಿಂದಲೂ ವೈರಾಗ್ಯದಿಂದಲೂ ಅವರೆಲ್ಲರನ್ನು ಹಿಮ್ಮೆಟ್ಟಿಸಿದಳು. ಅನುಭವ ಮಂಟಪದಲ್ಲಿ ಅನುದಿನವೂ ಉಂಟಾಗುತ್ತಲಿದ್ದ ವಚನಕವನದ ಅಮೃತಧಾರಾಕಾರದಿಂದ ಅಕ್ಕನ ಬದುಕು ಪರಿಪಕ್ವವಾಯಿತು. ಮುಂದೆ ಕಲ್ಯಾಣದಲ್ಲಿ ಜೈನರಿಗೂ ಶೈವರಿಗೂ ಧರ್ಮಯುದ್ಧವಾಗಲು ಅಕ್ಕ ಮೊದಲಾದವರು ಕಲ್ಯಾಣ ಬಿಟ್ಟರು. ಅಕ್ಕನು ಮತ್ತೆ ತಿರುಗುತ್ತ

ವನದೊಳಗಿನ ದೇವತರು ತರುವಿನೊಳಗಿನಡಗುವ
ಖಗಮೃಗವೆಲ್ಲ ನೀವೇ ಎನ್ನ ಚನ್ನಮಲ್ಲಿಕಾರ್ಜುನ

ಎಂದು ಹಂಬಲಿಸುತ್ತ ಸಾಕ್ಷಾತ್ಕಾರದ ನಿಚ್ಚಣಿಕೆಯನ್ನು ಏರುತ್ತ ವೈರಾಗ್ಯದ ಸೋಪಾನದಿಂದ ಶ್ರೀಗಿರಿಗೆ ಬಂದಳು. ಅಲ್ಲಿ ಕದಳಿಯ ವನದಲ್ಲಿ ನಿಂತು ದೇವರನ್ನು ಪ್ರಾರ್ಥಿಸಲು ದೇವನು ಪ್ರಸನ್ನನಾಗಿ ಮಗಳೇ ಎಂದನು.

ದಿವ್ಯ ಸ್ವರೂಪನವ ಕಂಡೆ. ಎನ್ನ ಗುರುವನ್ನು ಕಂಡೆ.
ಜಗದಾದಿಶಕ್ತಿಯೊಳು ಬೆರಸಿ ಒಡನಾಡುವ ಪರಮಗುರು
ಚನ್ನಮಲ್ಲಿಕಾರ್ಜುನನ ನೀವನು ಕಂಡು ಬದುಕಿದೆನು

ಎಂದದು ಮೌನವಾದಳಕ್ಕ. ಆಗ ಕದಳಿಯ ವನದಲ್ಲಿ ಗಾಳಿಯು ಬೀಸಿತು. ಭೂವ್ಯೋಮ ತಲ್ಲಣಿಸಿತು. ಈಗ ಉಡುತಡಿಯ ಅಕ್ಕನ ನಶ್ವರ ದೇಹವು ಮಾತ್ರ ಇಲ್ಲದಾಯಿತು. ಆದರೆ ಶ್ರೀಗಿರಿಯು ಜಯ ಭೇರಿಯ ಆ ವೈರಾಗ್ಯಮೂರ್ತಿಯ ಅಮರ ಜ್ಯೋತಿ ಅರ್ಧಚಂದ್ರಾಕಾರವಾಗಿ ತೊಳಗಿ ಬೆಳಗುವದರಲ್ಲಿ ಸಂದೇಹವಿಲ್ಲ. ಕೌಶಿಕನನ್ನು ತೃಣೀಕರಿಸಿ ಭಗವಂತನ ಬಾಯಿಂದ ಹೊಗಳಿಸಿಕೊಂಡು, ಕೀರ್ತಿಶಿಖರಕ್ಕೇರಿದ ಆಕೆಯ ಸತ್ಯವು ನಿಚ್ಚಳವಾಗಿ ಎದ್ದು ತೋರುವದು. ಅಕ್ಕ ನಡೆದಂತೆ ನುಡಿದಳು. ನುಡಿದಂತೆ ನಡೆದಳು. ಆದ್ದರಿಂದಲೇ ಅವಳ ಅವಸ್ಥೆಯು ದೇವಮಂದಾರವಾಯಿತು. ಅವಳ ಬಾಯಿಂದ ಬಂದ ವಚನಗಳು ನಮಗಿಂದು ರತ್ನ ಗೋಲಗಳಂತೆ ಗೋಚರಿಸುತ್ತವೆ.

---

# ಸೃಷ್ಟಿಯು ರೂಪೆ ದೇವನು.



ದೇವನೆಲ್ಲಿಹನೆಂದು ಭ್ರಮಿಸುವ ಮರುಳುತನವೀಡಾಡಿತು |
ಹುರುಳು ತಾ ತೇಲಾಡಿತು ||
ಹೂವಿನೊಳಗವಿತಿರುವ ತುಂಬಿಯು ಎಲ್ಲಿ ಹೂ ತೋರೆನುತ್ತಿದೆ|
ಅಲ್ಲೆ ಇರುವುದ ಮರೆತಿದೆ ||೧||

"ಜಗದೊಳೆಲ್ಲಿಯು ಬೆಟ್ಟ ನದಿಗಳೆ ಜೀವ ಜಂತುಗಳೆತ್ತಲು |
ಮುಗಿಲು ರವಿಶಶಿಸುತ್ತಲು ||
ಹಗಲುನೋಡಿದರಿಲ್ಲ ದೇವನು ಇರುಳು ಕಾಣಿಸಲಾರನು |
ಬಗೆಯು ಜಾಣಿಸಲಾರನು" ||೨||

ಇಂಥ ಸಾವಿರ ಶಂಕೆಗಳ ನೀನೆತ್ತಿ ತಿಣಕುತ ದಣಿವರೆ ? |
ಮಾರನುಡಿಯಿಲ್ಲೆನುವರೆ ||
ಇಂತು ಕೋಲಾಹಲದಿ ಸೋತಿರೆ ಬಂತು ನನಗೊಂದುತ್ತರೆ|
ಮಾತು ತಾನೆಷ್ಟೆತ್ತರ ||೩||

ಕುದುರೆ ಕಂಡಿಲ್ಲೆನುವ ಮಡಿಯನ ಗೋಳು ನಿನಗೀಗೊದಗಿದೆ|
ಗೀಳು ಶಂಕೆಯೊಳಡಿಗೆ ||
ಚದುರ ನಾಗಾಲ್ ಕಂಡೆನೆಂಬನು ಬಾಲಗೊತ್ತಿದೆಯೆನುವನು|
ಬೆನ್ನು ಕಿವಿ ಕಣ್ ತಿಳಿವನು ||೪||

ಕಾಲು ಕಿವಿ ಕಣ್ ಬಾಲಬೆನ್ನಿರೆ ಕುದುರೆಯೆನ್ನಲಿಕೊಪ್ಪನು |
ಕಂಡು ಕಾಣದ ಬೆಪ್ಪನು ||
ಕೇಳು ಕಾಣುವ ಬೆಟ್ಟ ನೆಲಭವ ಜೀವ ಜಂತುಗಳು |
ದೇವನಾ ಕೈಕಾಲ್ಗಳು ||೫||

ಕೆಯ್ಯುಕಾಲ್ಗಳ ಕಂಡವಗೆ ಆ ಮೈಯು ಕಾಣಿಸದಿರುವದೆ ?|
ಅದನು ಲೆಕ್ಕಿಸದುಳಿವುದೆ ? ||
ಅಯ್ಯ! ಸೃಷ್ಟಿಯು ರೂಪೆ ದೇವನು ಬೇರೆ ತಾನೆಲ್ಲಿರುವನು ?|
ಎಂತು ಕಾಣಿಸಿಕೊಳುವನು ? ||೬

—ಸಿಂಪಿ ಲಿಂಗಣ್ಣ

# ದೇವನೊಲುಮೆ

[ಲೇಖಕರುಃ- ಶ್ರೀಯುತ ಭೀ. ಶ್ರೀ. ಕುಲಕರ್ಣಿ, ವಿಜಾಪುರ.]

—※●※—

ಜಗನ್ನಿಯಾಮಕನಾದ ಪರಮಾತ್ಮನು ನಿರ್ಮಿಸಿದ ಸೃಷ್ಟಿಯ ಸೌಂದರ್ಯವನ್ನು ಎಷ್ಟು ಹೊಗಳಿದರೂ ತೀರದು. ಇಂಥ ಸೃಷ್ಟಿಯನ್ನು ನಿರ್ಮಿಸಿದ ದೇವನಾರು ? ಆತನು ಎಲ್ಲಿಹ ? ಆತನನ್ನು ಪಡೆದುಕೊಳ್ಳುವ ಬಗೆ ಹೇಗೆ ? ಹಾಗು ಸುಖದುಃಖಗಳು ಮಾನವನಿಗಾವರಿಸುವ ಕಾರಣಗಳಾವವೆಂಬುದು ಮನಕ್ಕೆ ಆವರಿಸದೇ ಇರದು. ಇಂಥ ವಿಚಾರಗಳನ್ನು ಕುರಿತು ಅಲ್ಪಮಟ್ಟಿಗೆ ಈ ಕೆಳಗೆ ವಿವರಿಸಿದೆ.

ಸೃಷ್ಟಿಕರ್ತನಾದ ದೇವನು ಯಾವರೂಪದಲ್ಲಿಬಹುದು ? ಅವನು ಮಾನವರೂಪದಲ್ಲಿ ಎನ್ನಬಹುದು. ಆದರೆ ಅನೇಕ ಜನ ವಿದ್ವಾಂಸರು ದೇವನು ನಿರಾಕಾರನೂ, ಆತನು ಸೃಷ್ಟಿಭರಿತನೂ ಹಾಗು ಸರ್ವರ ಹೃದಯ ಆತನ ಆಲಯವೆಂದು ಜನರಿಗೆ ಬೋಧಿಸಿದ ಅವರ ನುಡಿಯು ಸತ್ಯವಿದೆ. ಆದರೆ ಇತ್ತೀಚಿಗೆ ಮಾತ್ರ ದೇವನೆಂಬವನಾರು ? ಆತನಿಲ್ಲವೆಂದು ಹಲವು ಜನ ನುಡಿಯುವದು ಅಜ್ಞಾನತನವೇ ಸರಿ. ದೇವನಿಲ್ಲದೇ ಜಗವಿಲ್ಲ. ಕೇವಲ ದೇವಾಲಯವನ್ನು ಕಟ್ಟಿಸಿ, ದೇವಮೂರ್ತಿಯೆಂಬ ಯಾವದೋ ಒಂದು ಆಕಾರದ ಮೂರ್ತಿಯನ್ನು ತಯಾರಿಸಿ ಭಜಿಸುವದು, ಜಾತಿ ವಿಜಾತಿಗಳೆಂಬ ಭೇದವನ್ನು ಮನದಲ್ಲಿ ತಂದುಕೊಳ್ಳುವದು, ಹೊಳೆಯಲ್ಲಿ ಮಿಂದು ಪಾಪ ಪರಿಹರಿಸಿಕೊಂಡೆನೆಂದು ತಿಳಿದುಕೊಳ್ಳುವದು ಹಾಗು ಯಾತ್ರಾ ಸ್ಥಳಗಳನ್ನು ಸಂದರ್ಶಿಸುವದು ಇವೆಲ್ಲವುಗಳೂ ಮೂಢನಂಬಿಕೆಗಳೇ ಸರಿ. ಇಂಥ ಅಜ್ಞಾನ ಮಾನವರಿಗೆ ದೇವನೊಲಿಯನು. ಆತ್ಮದಲ್ಲಿ ದೇವನನ್ನಿರಿಸಿಕೊಂಡು ಬಾಹ್ಯದಲ್ಲಿ ದೇವನನ್ನು ಹುಡುಕಿದರೆ ಇಲ್ಲವೆ ಭಜಿಸಿದರೆ ದೇವನೊಲಿಯಬಹುದೇ ? ಹಾಗಾದರೆ ಆತನನ್ನು ಪಡೆಯುವದೆಂತು ಹಾಗು ಆತ್ಮದೇವನು ಆತ್ಮದಲ್ಲಿ ಎಲ್ಲಿಹನೆಂದು ಕೇಳಬಹುದು. ಇದಕ್ಕೆ ಉತ್ತರವನ್ನು ಹಲವು ಜನ ಹಲವು ತೆರನಾಗಿ ಮಾರ್ಪಡಿಸಿದ್ದಾರೆ. ಆದರೆ ಈ ಲೇಖದಲ್ಲಿ ದೇವನ ಬಗ್ಗೆ ಲೇಖಿಸಿದ್ದು, ದೇವನೆಂದರೆ ಅದ್ಭುತ ಜ್ಞಾನಶಕ್ತಿ. ಆ ಜ್ಞಾನತತ್ವವನ್ನು ಪಡೆದು ಕೊಳ್ಳಲು ಮಾನವನ ಹೊರತಾಗಿ ಇನ್ನಿತರ ಯಾವ ಪ್ರಾಣಿಗಳಿಗೂ ಈ

ಯುಗದಲ್ಲಿ ಶಕ್ಯವಿಲ್ಲ. ಆದರೆ ಆ ಜ್ಞಾನತತ್ವವನ್ನು ಪಡೆವುದೇ ದೇವತ್ವವು. ಆದರೆ ಇಂಥ ಜ್ಞಾನಶಕ್ತಿಯನ್ನು ಪಡೆವುದು ಸಾಮಾನ್ಯವಲ್ಲ. ಕೇವಲ ಮನವನ್ನು ಚಲಿಸದೆ ಒಂದು ಸ್ಥಿರವಾದ ಒಳ್ಳೆಯ ಮಾರ್ಗವನ್ನು ಅನುಸರಿಸಿ ನಡೆಯುವದೇ ದೇವತ್ವ. ಒಳ್ಳೆಯ ಮಾರ್ಗವನ್ನನುಸರಿಸಿ ನಡೆದಿಹೆನೆಂದು ಕಳವು, ದರೋಡೆ, ಕೊಲೆಗಳನ್ನು ಮಾಡಿ ದಾನಧರ್ಮಗಳನ್ನು ಕೈಕೊಂಡರೆ ಅದು ದೇವತ್ವವಲ್ಲ. ಸರ್ವ ಜನರಲ್ಲಿ ಶ್ರೇಷ್ಠನೆನಿಸಿಕೊಂಡು, ಆ ಶ್ರೇಯಸ್ಸಿನ ಹೊಗಳಿಕೆಗೆ ಮೈಮರೆತು ಆನಂದದಿಂದ ಕಾಲಹರಣಮಾಡುವದು ದೇವತ್ವ ವಲ್ಲ. ಹಗಲಿರುಳೂ ಮನದಲ್ಲಿ ವಿಚಾರಘರ್ಷಣೆ ಒಂದೇಸವನೆ ಕಾಲಚಕ್ರ ದಂತೆ ತಿರುಗುತ್ತಿರಬೇಕು. ಕಾಮ, ಕ್ರೋಧ, ಮದ ಮಾತ್ಸರ್ಯಗಳನ್ನು ತೊರೆದು, ತನ್ನಾತ್ಮವನ್ನು ಹೆರವರಿಗಾಗಿ ಮೀಸಲಾಗಿರಿಸಬೇಕು. ಆದಿಕಾಲ ದಲ್ಲಿ ಆಗಿಹೋದ ಅಂಥ ದೇವತಾಪುರುಷರ ವರ್ಣನೆಗಳನ್ನು ಜಗಕ್ಕೆ ಬೋಧಿಸುತ್ತಲೂ, ಜನರ ವಿಚಾರಧಾರೆಯನ್ನು ಹೆಚ್ಚಿಸಲು ಹಾಗು ತಮ್ಮಂತೆ ವಿಚಾರವಂತರನ್ನಾಗಿ ಮಾಡಲು ಪ್ರಯತ್ನಿಸುತ್ತಿರಬೇಕು. ಅಂಥ ಪರಮಪುರುಷನೇ ದೇವನು. ಇಂಥ ದಿವ್ಯವಾದ ಜ್ಞಾನವೆಂಬ ದೇವಶಕ್ತಿ ಆತ್ಮದಲ್ಲಿರಲು ಇನ್ನಿತರ ಮೂರ್ತಿಗಳನ್ನು ಪೂಜಿಸಿದರೆ ಸಿಗುವ ಫಲವೇನು? ಇದು ನಿಜವಾಗಿಯೂ ಒಂದು ದೊಡ್ಡ ತಪ್ಪು. ಈ ತಪ್ಪು ಎಂಬ ಶಬ್ದ ದಿಂದ ಮನದಲ್ಲಿ ವ್ಯಥೆಯುಂಟಾಗಬಹುದು. ಇದಕ್ಕೆ ಸಿದ್ಧಿಸಲು ಸಹ ಕೆಲವೊಂದು ಉದಾಹರಣೆಗಳಿವೆ. ಹಾಗು ಮಾನವರಲ್ಲಿ ಜ್ಞಾನಿಗಳೇ ದೇವತಾ ಪುರುಷರೆಂಬುದೂ ನಾವು ಹಲವು ದೇವತಾಪುರುಷರ ಚರಿತ್ರೆಗಳಿಂದ ತಿಳಿದು ಕೊಳ್ಳಬಹುದು. ಮಹಾತ್ಮಾ ಬಸವಣ್ಣ, ಬುದ್ಧದೇವ, ಶ್ರೀರಾಮಚಂದ್ರ ಮುಂತಾದವರೆಲ್ಲ ಮಾನವರಲ್ಲವೇ ? ಅವರು ದೇವತಾಪುರುಷರಾಗಿರುವದು ಜ್ಞಾನಾಭಿವೃದ್ಧಿಯಿಂದಲೇ. ಮುಖ್ಯವಾಗಿ ಮಾನವನು ಇತರರಿಂದ ಕೆಡುಕೆ ನಿಸಿಕೊಳ್ಳದೇ ಹಗಲಿರುಳೂ ಹೆರವರ ಹಿತದಸಲುವಾಗಿಯೇ ತನ್ನಾತ್ಮವನ್ನು ಮೀಸಲಾಗಿರಿಸಿ ನಡೆಯುವದೇ ದೇವತ್ವ. ಅಂಥ ದೇವತ್ವವನ್ನು ಜಯ ಪಾಲಿಸಿಕೊಂಡು ಇಂದಿನವರೆಗೂ ಜನರ ಹೊಗಳಿಕೆ ಹಾಗು ಭಜನೆಗೆ ಇಂದು ನಾವು ಪೂಜಿಸುವ ದೇವರು ಪಾತ್ರರಾಗಿದ್ದಾರೆ. ಆದರೆ ಹೊಗಳಿಕೆ ಯಿಂದ ಆ ದೇವನು ಮೆಚ್ಚನು. ವ್ಯರ್ಥ ಕಾಲಕಳೆಯದೇ ನಾಲ್ಕುದಿನದ ಜಾತ್ರೆಯಂತಿಹ ಈ ಜೀವನವನ್ನು ವಿಜ್ಞಾನದಿಂದ ಕಳೆಯುವದೇ ಅಮರತ್ವ. ಆದರೆ ಅಂಥ ಅಮರತ್ವವನ್ನು ಪಡೆಯುವದು ಸರ್ವರಿಗೂ ಸಾಧ್ಯವಿಲ್ಲ.

ಅದರೆ ಸಾಧ್ಯವಿಲ್ಲವೆನ್ನಲೂ ಬಾರದು. ಮಾನವನಿಗೆ ಮೀರಿದ ಕಾರ್ಯವು ಯಾವುದೂ ಇಲ್ಲ. ಪ್ರಯತ್ನಕ್ಕೆ ಫಲವಿದೆ. ಆದರೆ ಮನವು ಕಡಿವಾಣವಿಲ್ಲದ ಕುದುರೆಯಂತೆ, ವಾಯುವೇಗಕ್ಕಿಂತಲೂ ಬಹು ಮುಂದೋಟದಿಂದಿರುವ ಕಾರಣ ಅಂಥ ಮನವನ್ನು ಪಾಪಕಾರ್ಯಗಳತ್ತ ಧಾವಿಸಗೊಡದೆ ಪುಣ್ಯಕಾರ್ಯಗಳತ್ತ ಓಟಗೊಟ್ಟು, ಅಂದರೆ ದಾನ ಧರ್ಮ ಹಾಗು ಇನ್ನಿತರರಿಂದ ಜ್ಞಾನವನ್ನು ಸಂಪಾದಿಸಿಕೊಳ್ಳುತ್ತಲೂ, ಹಿಂದಿನ ದೇವತಾಪುರುಷರ ಮಹಿಮೆಯನ್ನರಿತು ಚರ್ಚಿಸುತ್ತ ಹಾಗು ಜನರಿಗೆ ಬೋಧಿಸುವದು ದೇವತ್ವಕ್ಕೆ ಮುಖ್ಯ ಸೋಪಾನ. ಕೇವಲ ದಾನ ಧರ್ಮ ಮಾಡುವದರಿಂದ ಪುಣ್ಯ ಲಭಿಸದು. ಸಿರಿವಂತರು ದಾನಧರ್ಮ ಕೈಕೊಳ್ಳಬಹುದು. ಆದರೆ ಏತಕ್ಕಾಗಿ? ಪುಣ್ಯಪಡೆಯುವದಕ್ಕಾಗಿಯಲ್ಲವೇ ? ಈ ಪುಣ್ಯಪಡೆಯುವದಕ್ಕಾಗಿ ಎಂಬ ಭಾವನೆ ಸಂಪೂರ್ಣವಾಗಿ ಅಳಿಯಬೇಕು. ಶುದ್ಧ ಮನದಿಂದ ಸ್ವವಿಚಾರದ ಕರುಣೆಯಿಂದ ಕೈಕೊಂಡ ದಾನಧರ್ಮವೇ ಪುಣ್ಯಮಯ. ಇಂದು ಅಂಥ ಭಾವನೆ ಅಳಿದು, ಎಲ್ಲಿ ನೋಡಿದಲ್ಲಿ; ಅತ್ಯಾಚಾರ, ಕೊಲೆ, ಸುಲಿಗೆ, ಹಗಲು ದರೋಡೆಗಳು ನಡೆದಿವೆ. ಇದು ಮನುಷ್ಯತ್ವವಲ್ಲ. ಇಂಥ ಜನರು ಮರಣಹೊಂದುವದಕ್ಕಿಂತ ಮುಂಚೆಯೇ ಅವರ ಹೆಸರು ಅಳಿಯುವದು. ಅಂದಮೇಲೆ ಮಾನವನಾಗಿ ಜನ್ಮಿಸಿದುದು ವ್ಯರ್ಥವೇ ಸರಿ. ಹುಟ್ಟಿಬಂದ ಮಾನವನು ವ್ಯರ್ಥ ಜೀವವೆತ್ತುವದು ಸರಿಯಲ್ಲ. ಜನ್ಮತಾಳುವಾಗ್ಗೆ ಏನನ್ನು ತರದೇ ಅಲ್ಪ ಜ್ಞಾನವನ್ನು ಮಾತ್ರ ತಂದಿದ್ದು, ಮತ್ತು ಆ ಜ್ಞಾನಸಂಪಾದನೆಗಾಗಿಯೇ ಈ ಜೀವನ ಜಾತ್ರೆಗೆ ಬಂದಿದ್ದೇವೆ. ಈ ಜಾತ್ರೆಯಲ್ಲಿ ಕೊಳ್ಳುವ ಅತ್ಯುತ್ತಮ ವಸ್ತುವೆಂದರೆ ಜ್ಞಾನ. ಆದರೆ ಜ್ಞಾನವು ವಸ್ತುವಲ್ಲ ಹಾಗು ಅದನ್ನು ಕೊಳ್ಳಲು ಹಣ ಬೇಕಾಗಿಲ್ಲ. ಜ್ಞಾನಸಂಪಾದನೆಗೆ ಬೇಕಾದುದು ಕೇವಲ ನಮ್ರತನ.ಅದುವೇ ಹಣವಿದ್ದಂತೆ. ಅಂತ್ಯಕಾಲದಲ್ಲಿ ಒಯ್ಯುವ ಜ್ಞಾನಕ್ಕೆ ಸಿಗುವ ಶ್ರೇಯಸ್ಸೇ ಆ ಮಾನವನ ಅಮರತ್ವ. ನೀಚ ಕೃತ್ಯಗಳನ್ನು ಕೈಕೊಂಡು ಜನರ ಹೀಯಾಳಿಕೆಗೆ ತುತ್ತಾದ ಮಾನವನೇ ವ್ಯರ್ಥಜೀವಿ. ಜಗದೊಳಗಿನ ಇಂಥ ಅಜ್ಞಾನಿಗಳಿಗಾಗಿಯೇ ದೇವನು ಜನನ ಮರಣಗಳನ್ನು ನಿರ್ಮಿಸಿದ್ದುಂಟು. ಇಂಥ ಅಲ್ಪಾಯುಷ್ಯವನ್ನು ತಿಳಿದುಕೊಂಡು, ವ್ಯರ್ಥಜೀವಿಸದೆ ಮಾನವನು ಮಾಡಬೇಕಾದ ಮುಖ್ಯ ಕಾರ್ಯಗಳೇನೆಂಬುದನ್ನು ಅರಿತುಕೊಂಡಾದರೂ ಜ್ಞಾನಿಯಾಗಬಹುದು. ಇದಕ್ಕೊಂದು ಉದಾಹರಣೆ ಇದೆ. ಅದಾವದೆಂದರೆ,

ಮಹಾತ್ಮ ಬುದ್ಧದೇವನ ಬಾಲ್ಯಜೀವನವನ್ನು ಅರಿತುಕೊಳ್ಳಬಹುದು. ಬುದ್ಧದೇವನ ನಿಜನಾಮ ಸಿದ್ಧಾರ್ಥ. ಆತನ ತಂದೆ ಮಗನಿಗೆ ಕೊಂಚು ಸಹ ದುಃಖವನ್ನು ಆವರಿಸಗೊಡದೇ ಸುಖದಲ್ಲಿರಿಸಬೇಕೆಂದು. ಒಂದು ದಿವ್ಯ ಭವನದಲ್ಲಿ ಆತನ ಆಟಪಾಟ ನೋಟಗಳನ್ನಿರಿಸಿ, ಬಾಹ್ಯ ಜಗತ್ತನ್ನು ಮರೆಸಬೇಕೆಂದು ಆತನು ಮಗನಿಗಾಗಿ ಸುವ್ಯವಸ್ಥೆಯನ್ನು ಕೈಕೊಂಡಿದ್ದ. ಮುಂದೆ ವಿದ್ಯೆಗಲಿತು, ಜ್ಞಾನವನ್ನು ವಿಕಾಸಪಡಿಸಿಕೊಂಡಿದ್ದ ಸಿದ್ಧಾರ್ಥನು ಒಂದು ದಿನ ಅಕಸ್ಮಾತ್ತಾಗಿ ಒಬ್ಬ ಬೇನೆಯಿಂದ ಬಳಲುವ ಮುಪ್ಪಿನ ಮುದುಕನನ್ನು ನೋಡಿ, ಮನದಲ್ಲಿ ವಿಚಾರಿಸುತ್ತ ಮುಂದೆ ತೆರಳಲು ಒಂದು ಶವವು ಆತನ ಕಣ್ಣಿಗೆ ಕಾಣಲು ವಿಚಾರಧಾರೆಯು ಬಹು ವೇಗವಾಗಿ ಸಾಗಿ, ನಾನಾದರೂ ಒಂದಿಲ್ಲೊಂದು ದಿನ ಈ ಅವಸ್ಥೆಗೆ ಬಂದೇ ತೀರಬೇಕಾಗುತ್ತದೆ ಎಂಬ ಕೊನೆಗೆ ವಿಚಾರ ನಿರ್ಧಾರದಿಂದ ವ್ಯಥೆಗೊಂಡು, ನನಗೇಕೆ ಇಂಥ ಸುಖಸಾಮ್ರಾಜ್ಯ, ನನ್ನ ಸುಖವನು ನಾನು ಸುಖಿಸಿದರೆ ಕಾಗೆಯು ಜನ್ಮಕ್ಕಿಂತಲೂ ನನ್ನ ಜನ್ಮ ಕೀಳಾಯಿತಲ್ಲವೇ ಎಂಬ ವಿಚಾರಗಳು ಆತನನು ಆವರಿಸಿ, ಕೊನೆಗೆ ಎಲ್ಲವನ್ನೂ ತೊರೆದು ಸನ್ಯಾಸ ಸ್ವೀಕರಿಸಿ, ಅನೇಕ ಬುದ್ಧಿವಚನಗಳನ್ನು ಜನರಿಗೆ ಬೋಧಿಸಿ, ಜೈನ ಧರ್ಮದ ಮುಖ್ಯ ಗುರುವೆನಿಸಿಕೊಂಡು ಇಂದಿನ ವರೆಗೂ ದೇವತಾಪುರುಷನೆಂದು ಅಮರತ್ವವನ್ನು ತಾಳಿಲ್ಲವೇ ? ಹಾಗೆಯೇ ಅಯೋಧ್ಯಾಧಿಪತಿ ಶ್ರೀರಾಮನಾದರೂ ಬಾಲ್ಯದಲ್ಲಿ ಚಂದ್ರಮನನ್ನು ಕಂಡು, ಆ ಚಂದ್ರಮನನ್ನು ಬೇಡಿ ಕಾಡಲಿಲ್ಲವೇ ? ಇಂಥ ಅಜ್ಞಾನದ ಶಿಶು ಮುಂದೆ ಸುಜ್ಞಾನದ ಸುಧೆಯಾಗಿ ಆ ಸಜ್ಞಾನದ ಸುಧೆಯನ್ನು ಸೇವಿಸುವವರಿಗೆ ಮಾತ್ರ ಸೇವಿಸಲು ಇಂದಿನವರೆಗೂ ನೀಡಿದ್ದಾರೆ. ಶ್ರೀರಾಮನಂತೆ ಮಹಾತ್ಮ ಬಸವಣ್ಣನವರೂ, ಹೆಂಗಳೆಯಾದ ಅಕ್ಕ ಮಹಾದೇವಿಯೂ ಮತ್ತು ಇನ್ನಿತರ ಶಿವಶರಣರೂ ವಚನರೂಪದಲ್ಲಿ ಬೋಧೆಯನ್ನು ಬೋಧಿಸಿದ್ದು, ಇಂದಿನ ವರೆಗೂ ಬಳಿಕೆಯಲ್ಲಿ ಬಾರದೆ ಇದ್ದ ತಾಡವಾಲೆಗಳಲ್ಲಿ ಬರೆದ ಅಂದಿನ ಕಾಲದ ಗ್ರಂಥಗಳನ್ನು ಶೋಧಿಸಿ, ಪ್ರಕಟಿಸಿದ ಶ್ರೀಯುತ ರಾ॥ ಬ॥ ಫ. ಗು. ಹಳಕಟ್ಟಿಯವರಾದರೂ ಆ ಬಸವೇಶ್ವರರ ಸಮಾನರೆಂದರೂ ತಪ್ಪಾಗದು. ಇಂಥ ಅಮೃತದಂಥ ವಚನಗಳನ್ನರಿತು ಆಚರಿಸಿದರೆ ಕಷ್ಟಗಳಾವವೂ ಇರವು. ಕೇವಲ ಜಾತಿ ವಿಜಾತಿಗಳೆಂಬ ಭೇದದಿಂದ ಅವುಗಳನ್ನು ಲೆಕ್ಕಿಸದೆ, ವಚನಗಳನ್ನು ನಾವೇಕೆ ಪಠಿಸಬೇಕು ? ನಮಗೆ ರಾಮಾಯಣವಿದೆ ಎನ್ನುವವರೂ,

ರಾಮಾಯಣವು ನಮಗೇನು ಸಂಬಂಧವೆನ್ನುವವರೂ ಬಹುಜನರಿರುವರು. ಅವರೆಲ್ಲ ನಿಜವಾಗಿಯೂ ಮೂಢರೇ ಸರಿ. ಹೀಗಾಗಿ ಇಂದು ಆ ದೇವತಾ ಪುರುಷರ ಹೆಸರನ್ನು ಹೊಗಳಿಕೊಳ್ಳದೇ ತೆಗಳಿಕೊಳ್ಳುತ್ತಲಿದ್ದಾರೆ. ಇದು ಇಂದಿನ ಜನರ ತಪ್ಪುತಿಳುವಳಿಕೆ. ಅದಾದರೇನು? ಸರ್ವ ಮಹಾತ್ಮರೂ ಬೋಧಿಸಿದ ಬೋಧೆಗಳು ಸತ್ಯ, ಅಹಿಂಸೆಗಳಿಂದೊಡಗೂಡಿದವುಗಳೇ ಇವೆ. ಜ್ಞಾನಕ್ಕೆ ರೂಪವಿಲ್ಲ, ಮಾನವನಿಗೆ ರೂಪವಿದೆ. ಆದರೆ ರೂಪು ಕಡೆಯ ವರೆಗೆ ಲಭಿಸದೆ ಅವರ ಅಮೃತ ನುಡಿಗಳು ಸಿಗುತ್ತವೆ. ಅಂಥವನೇಲೆ ಆತ್ಮ ಹೆಚ್ಚಿನದೋ ಇಲ್ಲವೆ ಜ್ಞಾನ ಹೆಚ್ಚಿನದೋ ಎಂಬುದನ್ನರಿತರೆ ಈಗಿನ ಮೂರ್ತಿಪೂಜೆ ಹಾಗು ಈ ಗ್ರಂಥಗಳಮೇಲಿನ ಭೇದಭಾವನೆ ಸಂಪೂರ್ಣ ನಾಶಹೊಂದುವದರಲ್ಲಿ ಸಂದೇಹವಿಲ್ಲ.

ಜ್ಞಾನವನ್ನು ಯಾವ ಕಾರ್ಯಕ್ಕೆ ಉಪಯೋಗಿಸಿದರೂ ಕೊನೆಗೆ ಆ ಕಾರ್ಯದಲ್ಲಿ ಯಶಸ್ಸನ್ನೇ ಉಂಟುಮಾಡುವದು. ಇಂದಿನ ಯುಗವು ಯಂತ್ರಯುಗವು. ಮನುಷ್ಯನು ತನ್ನ ಜ್ಞಾನವನ್ನು ಯಂತ್ರಶಕ್ತಿಗೆ ಸಾಧನವನ್ನಾಗಿ ಇಟ್ಟುಕೊಂಡಿದ್ದರಿಂದ ಅದರಲ್ಲಿ ಯಶಸ್ಸು ಪ್ರಾಪ್ತಿಯಾಗಿ ಯಂತ್ರೀಕರಣದಲ್ಲಿ ಮಂತ್ರಶಕ್ತಿಗಿಂತಲೂ ಮಿಗಿಲಾದ ಶಕ್ತಿಯನ್ನು ಪ್ರಾಪ್ತಿಸಿಕೊಂಡಿದ್ದಾನೆ. ಒಂದಾನೊಂದು ಕಾಲದಲ್ಲಿ ದೇವತಾಪುರುಷರು ಆಕಾಶ ಮಾರ್ಗವಾಗಿ ಪ್ರಯಾಣಬೆಳಸಿದುದು ಮಂತ್ರಶಕ್ತಿಯಿಂದಲೇ. ಆದರೆ ಆ ಮಂತ್ರಶಕ್ತಿಯು ಇಂದು ಆರಿಗೂ ಲಭಿಸಲು ಸಾಧ್ಯವಿಲ್ಲ. ಇಂದು ಜಗವು ಪಾಪಿಷ್ಠರಿಂದ ಭರಿತವಾಗಿದೆ. ಮಂತ್ರಶಕ್ತಿಯು ಮಾಯವಾಗಿ, ಅದುವೇ ಇಂದು ಯಂತ್ರಶಕ್ತಿಯಾಗಿದೆ. ಒಂದಾನೊಂದು ಕಾಲದಲ್ಲಿ ಪುಣ್ಯವಂತರೇ ಆಕಾಶಯಾನದಲ್ಲಿ ಪ್ರವಾಸಕೈಕೊಳ್ಳುತ್ತಿದ್ದರೆ, ಇಂದು ಪಾಪಿಷ್ಠರು ಸಹ ಅಂಥ ಭಾಗ್ಯವನ್ನು ಸವಿಯಬಹುದು. ಇಂತು ಮುಂದೊರೆದಿರುವ ಜಗವು ದೇವನೆಲ್ಲಿ ಎನ್ನುವದು ತಿಳಿಗೇಡಿತನವೇ ಸರಿ. ಇಂದು ಯಂತ್ರೀಕರಣದಲ್ಲಿ ಯಶಸ್ಸನ್ನು ದೊರಕಿಸಿಕೊಂಡ ಮಾನವರೇ ದೇವರು. ಹಾಗು ಜನಗಳಿಗೆ ಒಳ್ಳೆಯ ಬೋಧೆಯನ್ನು ಬೋಧಿಸುವ ಮಾನವನೇ ದೇವನು. ಆದರೆ ಇಂದು ನಾವೆಲ್ಲ ಆ ದೇವನೆಂಬ ಹೆಸರನ್ನೇ ಅಳಿಸಿದ್ದೇವೆ. ಒಂದು ಮೂಢಬುದ್ಧಿಯಿಂದ ಸಾಗಿದ್ದೇವೆ. ಮೊನ್ನೆ ಮೊನ್ನೆ ಇಹಲೋಕದಿಂದ ತೆರಳಿದ ಗಾಂಧೀಜಿಯವರು ದೇವರಲ್ಲವೇ ? ಇಂದು ನಾವು ತಿಳಿದಿರುವದು

ಕೇವಲ ವ್ಯಕ್ತಿಯೆಂದು. ಆದರೆ ನಮ್ಮ ಭಾವನೆಯೇ ಬದಲಾಗಿದೆಯೆಂದು ತಿಳಿಯಬಹುದು.

ಇನ್ನೊಂದು ತಿಳಿದುಕೊಳ್ಳುವ ವಿಷಯವೇನೆಂದರೆ ಈ ಸೃಷ್ಟಿಯು ನಿರ್ಮಿತವಾದುದು ಹೇಗೆ ಎಂದು ವಿಚಾರಿಸಬಹುದು. ಈ ಸೃಷ್ಟಿಯು ನಿರ್ಮಿತವಾದುದಾದರೂ ಜ್ಞಾನವೆಂಬ ದಿವ್ಯಶಕ್ತಿಯಿಂದಲೇ. ಅದುವೇ ಈ ಲೋಕದಲ್ಲಿ ಮೊದಲು ಜನ್ಮಿಸಿರಬಹುದೆಂದು ವಿಚಾರಿಸಿ ತಿಳಿದುಕೊಳ್ಳಬಹುದು. ಮುಂದೆ ಆ ಜ್ಞಾನವು ಮಾನವನ ಆತ್ಮದಲ್ಲಿ ಬೆರೆತು, ಸೃಷ್ಟಿಯ ಸೊಬಗಿಗೆ ಮಾನವನನ್ನು ಕಾರಣಮಾಡಿತು. ಪಾಪಿಷ್ಟರನ್ನು ಆ ಜ್ಞಾನಶಕ್ತಿಯಿಂದ ಉತ್ಪತ್ಯವಾದ ಮಂತ್ರಶಕ್ತಿಯು ಹಲವು ರೂಪಿನಿಂದ ಪ್ರಾಣಿಗಳನ್ನೂ ಸೃಷ್ಟಿಯ ಸೊಬಗನ್ನೂ ಮಾಡಿರಬಹುದು. ಇವೆಲ್ಲವುಗಳೂ ಹಾಗು ಮರಣವೆಂಬ ಅಂತ್ಯವು ಜನರ ಒಳ್ಳೆಯ ನಡೆಗೆ ಕಾರಣವಾಗಲೆಂದೇ ಒಂದು ಕಾಯಿದೆಯ ಪ್ರಕಾರ ದಿವ್ಯ ಕಾಯಿದೆಯು ಅಚ್ಚಳಿಯದೇ ಉಳಿದು ಇಂದು ಮಾಯವಾಗಹತ್ತಿದೆ. ಇಂತು ಪಾಪಕ್ಕೆ ಗುರಿಯಾದ ಈ ಜಗವು ಅಳಿಯುವ ದಿನವು ಸಮೀಪಿಸಿದೆ. ಜಗದ ಅಂತ್ಯಕ್ಕೆ ಕಾರಣವಾದುದೂ ಜ್ಞಾನವೇ. ಆ ಜ್ಞಾನದಿಂದಲೇ ನಿರ್ಮಿತವಾದ ಅಣುಬಾಂಬುವೇ ಜಗದ ನಾಶಕ್ಕೆ ಕಾರಣವಾಗುವದೆಂಬುದಕ್ಕೆ ಸಂದೇಹವಿಲ್ಲ. ಈಗ್ಗೆ ಒಂದರಘಳಿಗೆಯಲ್ಲಿಯೇ ಜಗತ್ಪ್ರಳಯಮಾಡುವ ಶಕ್ತಿ ಮಾನವನಲ್ಲಿದೆ ಎಂದಮೇಲೆ ಅದು ಉಳಿದುದುದಾದರೂ ಮಾನವನಿಂದಲ್ಲವೇ ? ಅಂದಮೇಲೆ ದೇವನಾರು ? ಆತನ ಒಲುಮೆಗೆ ಸಾಧನವಾವುದೆಂದರಿತು ಆಚರಿಸಿದರೆ ಭೂಲೋಕವೇ ಸ್ವರ್ಗಲೋಕವಾಗುವದರಲ್ಲಿ ಸಂದೇಹವಿಲ್ಲ

## ಮಡಿ

ನೀನಿತ್ತ ಚಿನ್ನದೊಡವೆ
ನಾನೆತ್ತ ಚೆಲ್ಲಿಬಿಡುವೆ॥
ನೀ ಮುಡಿದ ಮೊಗ್ಗೆಯರಳು
ನಾ ತಿಳಿವೆ ಕಲ್ಲುಹರಳು॥
ಊಡಿಸಿದ ಹಾಲುಬೆಣ್ಣೆ
ಸಾಕೆನುವೆ ಹೊಲಸು ಮಣ್ಣೆ ॥
ಸಿಂಗರದ ಸಾದಿನೊಪ್ಪ
ಅಳಿಸಿಡುವೆ ಬೇಡ ಕಪ್ಪ ॥
ಮೈದೊಳೆದು ಕೊಳೆಯ ಕಳೆದೆ
ಹುಡಿಗೆಸರು ಆಡಿ ಬಂದೆ ॥
ತೋಡಿಸಿರುವ ಮಡಿಯುಬಟ್ಟೆ
ಹೊರಳಾಡಿ ಮಾಸಿಬಿಟ್ಟೆ ॥
ಏನೊಂದು ಬೇಸರಿಲ್ಲ
ಸಾಕೆನುವ ನುಡಿಯೆ ಸಲ್ಲ ॥
ಚಣಚಣಕು ಎತ್ತಿ ಹಿಡಿವೆ
ನನ್ನೊಲುಮೆಗಾಗಿ ದುಡಿವೆ ॥
ನಾಚಿಕೆಯು ಸುತ್ತಿ ಬಂದು
ಹೇಸಿಕೆಗೆ ಹೋಗಿ ನಿಂದು
"ಸಾಕಿನ್ನು ಸ್ವಚ್ಛವಿರುವೆ
ಕೊಳೆಯಾಚೆ ದೂರವಿರುವೆ ॥
ನೂರೊಂದು ಆಣೆಮಾಡಿ
ಹತ್ತಾರು ದೃಢವನಾಡಿ ॥
ತಿರುತಿರುಗಿ ಮರೆತು ಜಾರಿ
ಮುಳುಗುವೆನು ಕೊಳೆಗೆ ಹಾರಿ ॥
ಕೊಳೆತೊಳೆಯಬೇಡ ತಾಯಿ
ಕೊಳೆಯಾಗದಿರಿಸು ತಾಯಿ ॥
ಮನಮೈಯ ಪ್ರಾಣದೊಳಗು
ಮಡಿಯರಿಸು ಬೈಗು ಬೆಳಗು ॥—ಸಿಂಪಿಲಿಂಗಣ್ಣ

# ಗ್ರಾಮ ರಕ್ಷಕ ದಲಗಳು

(ಲೇಖಕ:— ರಾ|| ಸಾ|| ಫ. ಗು. ಹಳಕಟ್ಟಿ ವಿಜಾಪುರ)

ooooo

ನಾವು ಶಿವಶರಣರ ಚರಿತ್ರೆಗಳನ್ನು ನಿರೀಕ್ಷಿಸಿದಲ್ಲಿ ಅವರಲ್ಲಿ ಬಹು ಜನರು ಅನೇಕತರದ ಉದ್ಯೋಗಗಳನ್ನು ಮಾಡುವವರು ಇದ್ದುದು ಕಂಡು ಬರುತ್ತದೆ. ಅವರಲ್ಲಿ ಮಡಿವಾಳ ಮಾಚಿದೇವ, ಕಿನ್ನರೀ ಬ್ರಹ್ಮಯ್ಯ, ಕಕ್ಕಯ್ಯ ನಂಥ ವೀರರೂ ಯೋದ್ಧರೂ ಕೂಡ ಇದ್ದರು. ಅವರು ಕೇವಲ ಲಿಂಗ ಪೂಜಕರಾಗಿ ದೇವರಧ್ಯಾನದಲ್ಲಿ ತೊಡಗಿದವರಾಗಿದ್ದಿಲ್ಲ. ಅವರೆಲ್ಲರೂ ತಮ್ಮ ತಮ್ಮ ಕಾಯಕಗಳಲ್ಲಿ ನಿರತರಾಗಿದ್ದರು. ದೇವರ ದಾಸಿಮಯ್ಯನು ನೇಯ್ಗೆಯ ಕಾಯಕದವನಾಗಿ ಅವನು ಅದರಲ್ಲಿ ಅತ್ಯಂತ ನಿಪುಣನಾಗಿ, ಅವನ ನೇಯ್ದ ಒಂದು ವಸ್ತ್ರಕ್ಕೆ ರಾಜರೂ, ಅಧಿಕಾರಿಗಳೂ ಬಹಳ ಬೆಲೆಯನ್ನು ಕೊಡಲಿಕ್ಕೆ ಮುಂದಾದರು. ಈ ಪ್ರಕಾರ ಯಾವ ಸಮಾಜದ ಸ್ಥಿತಿಯು ಇರುತ್ತದೋ ಅದು ಸರ್ವಾಂಗ ಸುಂದರ ಮತ್ತು ಬಲಿಷ್ಠ ಸಮಾಜವಾಗು ವದರಲ್ಲಿ ಸಂದೇಹವಿರಲಾರದು.

ಈಚೆಗೆ ಭಾರತಸರಕಾರವು ಅನೇಕ ವಿಧ ಸಾಮಾಜಿಕ, ಆರ್ಥಿಕ ಸುಧಾರಣೆಗಳನ್ನು ಕೈಕೊಂಡಿರುತ್ತದೆ. ಇವುಗಳ ಉದ್ದೇಶವು ಸಮಾಜ ವನ್ನು ಬಲಿಷ್ಠ ಮಾಡಬೇಕೆಂಬುದೇ ಇರುತ್ತದೆ. ಬ್ರಿಟಿಶರು ಭಾರತದಲ್ಲಿ ಇರುವ ವರೆಗೆ ಅವರು ಜನತೆಯನ್ನು ತಮ್ಮ ಅಧೀನದಲ್ಲಿಟ್ಟು ಕೊಳ್ಳುವ ದೊಂದೇ ಅವರ ಮುಖ್ಯ ಉದ್ದೇಶವಾಗಿತ್ತು. ಇದರಿಂದ ಅವರ ಕಾಲದಲ್ಲಿ ಸರಕಾರೀ ಉದ್ಯೋಗಸ್ಥರೂ ಪೋಲಿಸರೂ ಸೈನ್ಯ ಶಾಖೆಯವರೂ ಇದ ರಲ್ಲಿ ತಾವು ಜನತೆಯ ಸೇವಕರೆಂಬ ಭಾವನೆಯು ಇರಲಿಲ್ಲ. ಆದರೆ ಈಗಿನ ಕಾಲದಲ್ಲಿ ಆಡಳಿತೆಯಲ್ಲಿರುವ ಎಲ್ಲ ಹೊಣೆಗಾರ ಅಧಿಕಾರಿಗಳು ಅಧಿಕಾರಸ್ಥಾನದಲ್ಲಿದ್ದವರು ತಾವು ಜನತೆಯ ಸೇವಕರೆಂಬ ಭಾವನೆಯನ್ನು ಇಟ್ಟುಕೊಂಡು ವರ್ತಿಸಬೇಕೆಂದು ಪದೇ ಪದೇ ಉಪದೇಶ ಮಾಡುತ್ತ ಲಿದ್ದಾರೆ. ಭಾರತವು 'ಕಲ್ಯಾಣ ರಾಜ್ಯ' ವಾಗಬೇಕೆಂದು ಅವರು ಆಗಿಂ ದಾಗ್ಗೆ ಹೇಳುತ್ತಲಿದ್ದಾರೆ.

ಸರಕಾರೀ ಅಧಿಕಾರಿಗಳಲ್ಲಿ ಜನತೆಯಲ್ಲಿ ವಿಶೇಷ ವರ್ಚಸ್ಸುಳ್ಳವ ರೆಂದರೆ ಮುಲಕೀ ಅಧಿಕಾರಿಗಳೂ ಪೋಲೀಸರೂ ಇರುತ್ತಾರೆ. ಇದು

ಸ್ವಾಭಾವಿಕವಾಗಿರುತ್ತದೆ. ಅವರು ಮಾಡುವ ಕಾರ್ಯಗಳು ಅಂಥವೇ ಇರುತ್ತವೆ. ದುಷ್ಟರನ್ನು ಶಿಕ್ಷಿಸುವದೂ ಶಿಷ್ಟರನ್ನು ಪರಿಪಾಲಿಸುವದೂ ಅವರ ಮುಖ್ಯ ಕಾರ್ಯವಾಗಿರುತ್ತದೆ. ಈ ಕಾರ್ಯಗಳಿಗೋಸ್ಕರವೇ ಅವರು ಇರುತ್ತಾರೆಂದು ಹೇಳಬಹುದು. ರಾಷ್ಟ್ರದ ಪ್ರಗತಿಯು ಇವರಮೇಲೆ ಅವಲಂಬಿಸಿರುತ್ತದೆ. ಆದರೆ ಬ್ರಿಟಿಶರ ಆಳಿಕೆಯಲ್ಲಿ ಈ ಅಧಿಕಾರಿಗಳಿಗೆ ಒಂದು ಕೃತ್ರಿಮ ಮಹತ್ವವು ಉಂಟಾಗಿ, ಅವರು ಅದರ ದುರುಪಯೋಗ ಮಾಡಿಕೊಳ್ಳಹತ್ತಿದ್ದರಿಂದ ಈ ಎರಡೂ ಖಾತೆಗಳು ಜನರಿಗೆ ಪ್ರಿಯವಾಗ ಲಿಲ್ಲ. ಜನರು ಆ ಖಾತೆಗಳಲ್ಲಿರುವ ಜನರಿಗೋಸ್ಕರ ಭಯವನ್ನು ತಾಳಿ ದವರಾಗಿ ಅವರೊಡನೆ ಸಹಕರಿಸುತ್ತಿರಲಿಲ್ಲ.

ಈಚೆಗೆ ಭಾರತಸರಕಾರದವರು ಗ್ರಾಮಸಂರಕ್ಷಕ ದಲಗಳು, ಗೃಹಸಂರ ಕ್ಷಕ ದಲಗಳು ಎಂಬ ಹೆಸರಿನ ದಲಗಳನ್ನು ಸ್ಥಾಪಿಸಲು ಮುಂದಾಗಿರು ತ್ತಾರೆ. ಗ್ರಾಮಗಳಲ್ಲಿಯ ಜನರು ಇವುಗಳಲ್ಲಿ ಸೇರಿ ಕಾರ್ಯಮಾಡ ಬೇಕೆಂದು ಸರಕಾರದವರು ಇಚ್ಛಿಸುತ್ತಿದ್ದಾರೆ. ಈ ವಿಷಯವಾಗಿ ಅವರು ಆಗಿಂದಾಗ್ಗೆ ಹಸ್ತಪತ್ರಿಕೆಗಳನ್ನೂ ಪ್ರಕಟನೆಗಳನ್ನೂ ಪ್ರಸಿದ್ಧಿಸುತ್ತಲಿ ದ್ದಾರೆ.

ಇಂಗ್ಲಂಡ ಮೊದಲಾದ ಸುಧಾರಿಸಿದ ದೇಶಗಳಲ್ಲಿ ಮುಲಕೀ ಮತ್ತು ಪೋಲೀಸ ಖಾತೆಗಳಲ್ಲಿಯವರಿಗೆ ತುಂಬಾ ಮನ್ನಣೆಯುಂಟು. ಅಲ್ಲಿಯ ನಾಗರಿಕರು ಈ ಖಾತೆಯವರೊಡನೆ ಯಾವಾಗಲೂ ಸಹಕರಿಸಿ ವರ್ತಿಸು ತ್ತಾರೆ. ಇದರಿಂದ ಆ ದೇಶಗಳಲ್ಲಿ ಗುನ್ಹೆಗಳ ತಪಾಸಣೆಯು ಬಹು ತೀವ್ರವಾಗಿ ಆಗುತ್ತದೆ. ಮತ್ತು ನಿಜವಾದ ಅಪರಾಧಿಗಳೇ ಶಿಕ್ಷಿಸಲ್ಪಡು ತ್ತಾರೆ. ಆದರೆ ಈ ಸ್ಥಿತಿಯು ನಮ್ಮ ದೇಶದಲ್ಲಿ ಇರುವದಿಲ್ಲ. ಇದರಿಂದ ನ್ಯಾಯದಾನ ಕಾರ್ಯಗಳು ಸರಿಯಾಗಿ ಇಲ್ಲಿ ಸಾಗಿರುವದಿಲ್ಲ. ಈ ಸ್ಥಿತಿಯನ್ನು ದೂರ ಮಾಡುವದು ಪ್ರತಿಯೊಬ್ಬ ನಾಗರಿಕನ ಕರ್ತವ್ಯವಾಗಿರುತ್ತದೆ.

ಈ ವಿಷಯಗಳ ಮಹತ್ವವು ಗೃಹರಕ್ಷಕ ದಳ ಅಥವಾ ಗ್ರಾಮ ರಕ್ಷಕ ದಳ ಇವುಗಳಲ್ಲಿ ನಾಗರಿಕರು ಅಂಗವಹಿಸುವದರಿಂದ ಜನತೆಗೆ ಮನದಟ್ಟಾಗುವದು. ಇದರಂತೆಯೇ ಬಾಲಕರಲ್ಲಿ ಸ್ಕೌಟ ಚಳಚಳಿಯು

ಹೆಚ್ಚಾಗಿ ಬೆಳೆಯಬೇಕು. ಈಚೆಗೆ ಸರಕಾರದವರು ಈ ಎಲ್ಲ ಚಳವಳಿಗಳಿಗೆ ಸಹಕಾರವನ್ನು ನೀಡಿದ್ದಾರೆ. ಜನರು ಇವುಗಳ ಉಪಯೋಗವನ್ನು ಪೂರ್ಣವಾಗಿ ಮಾಡಿಕೊಳ್ಳುವದು ಬಹಳ ಮಹತ್ವದ್ದಿದೆ.

ಬಹುಜನರು ಈ ದಳಗಳ ಉಪಯೋಗವು ಯುದ್ಧಕಾಲಕ್ಕೆ ಮಾತ್ರವೆಂದು ತಿಳಿದುಕೊಂಡು ಇವುಗಳ ಬೆಳವಣಿಗೆಯಲ್ಲಿ ಸಹಕಾರವನ್ನು ನೀಡುವದಿಲ್ಲ. ಆದರೆ ಇದು ತಪ್ಪು ತಿಳುವಳಿಕೆಯಾಗಿದೆ. ಇವುಗಳ ಪ್ರತ್ಯಕ್ಷ ಉಪಯೋಗವು ಯುದ್ಧಕಾಲದಲ್ಲಿ ಆಗುತ್ತದೆಂಬುದು ನಿಜವು. ಆದರೆ ಹಳ್ಳಿಗಳ ಈಗಿನ ಪರಿಸ್ಥಿತಿಯನ್ನು ನಾವು ನಿರೀಕ್ಷಿಸಿದರೆ, ಅವುಗಳಲ್ಲಿ ದುಷ್ಟರು ವಾಸವಾಡುತ್ತಾರೆ. ದುರ್ವ್ಯಸನಿಗಳೂ ದುರಾಚಾರಿಗಳೂ ಇರುತ್ತಾರೆ. ಇವರು ಹಳ್ಳಿಗಳಲ್ಲಿ ಪಂಗಡಗಳನ್ನು ಮಾಡಿಕೊಂಡು, ಹೊಡೆದಾಟ, ಕೊಲೆಸುಲಿಗೆಗಳಲ್ಲಿ ಮಗ್ನರಾಗಿರುತ್ತಾರೆ. ಹೀಗೆ ಹಳ್ಳಿಗಳ ಸ್ಥಿತಿಯನ್ನು ಕೆಡಿಸಲಿಕ್ಕೆ ಇಂಥ ಜನರೇ ಕಾರಣರಾಗಿರುತ್ತಾರೆ. ಇಂಥವರ ಕ್ರಿಯೆಗಳನ್ನು ತಡೆದು ಜನತೆಯಲ್ಲಿ ಸದಾಚಾರ, ನೀತಿ, ವ್ಯವಸ್ಥೆ, ಸುರಕ್ಷಿತೆ ಇವುಗಳನ್ನುಂಟುಮಾಡುವದು ಪ್ರತಿಯೊಬ್ಬ ನಾಗರಿಕನ ಕರ್ತವ್ಯವಾಗಿರುತ್ತದೆ. ಪ್ರತ್ಯಕ್ಷ ವ್ಯವಹಾರದಲ್ಲಿ ಧಾರ್ಮಿಕ ಆಚರಣೆಗಳೆಂದರೆ ಇವುಗಳೇ ಇರುತ್ತವೆ. ಇದರಿಂದ ನಾಡಿನಲ್ಲಿ ಸುಧಾರಣೆಯು ಉಂಟಾಗಲಿಕ್ಕೆ ಕಾರಣವಾಗುತ್ತದೆ.

ಈಗಿನ ಗ್ರಾಮಗಳ ಪರಿಸ್ಥಿತಿಯನ್ನು ನಿರೀಕ್ಷಿಸಿದರೆ ಅವುಗಳಲ್ಲಿ ದುಷ್ಟರ ಪ್ರಾಬಲ್ಯವು ಬಹಳ ಹೆಚ್ಚಾಗಿರುವದು ಕಂಡು ಬರುತ್ತದೆ. ಒಳ್ಳೆಯ ಜನರ ಸಂಖ್ಯೆಯು ಗ್ರಾಮಗಳಲ್ಲಿ ಯಾವಾಗಲೂ ಹೆಚ್ಚಿಗಿರುತ್ತದೆ. ಆದರೆ ಅವರು ದುಷ್ಟರ ಅಂಕಿತದಲ್ಲಿರಬೇಕಾಗುತ್ತದೆ. ಈ ದುಷ್ಟರು ತಮಗೆ ಹಾನಿ ಮಾಡುವರೆಂಬ ಭೀತಿಯು ಅವರಲ್ಲಿ ಇದ್ದುದೇ ಇದಕ್ಕೆ ಕಾರಣವಾಗಿರುತ್ತದೆ. ಹೀಗಾದಲ್ಲಿ ನಾಡಿನಲ್ಲಿ ಸುಧಾರಣೆಯು ಆಗುವದು ಅಶಕ್ಯವೇ ಸರಿ. ಈ ಸ್ಥಿತಿಯು ನಮ್ಮ ನಾಡಿನಲ್ಲಿ ಇರುತ್ತದೆ. ಇದು ದೂರಾಗಬೇಕಾದರೆ ಗ್ರಾಮಗಳಲ್ಲಿ ಗೃಹ ಸಂರಕ್ಷಕ ದಳಗಳೂ ಗ್ರಾಮ ರಕ್ಷಕ ದಳಗಳೂ ಹೆಚ್ಚಾಗಿ ಬೆಳೆಯಬೇಕು. ಇವು ಎಂಥ ಮಹತ್ತರ ಕಾರ್ಯಗಳನ್ನು ಮಾಡಿದವೆಂಬುದರ ನಿದರ್ಶನವು ನಿಜಾಮಾನರಾಜ್ಯವು

ಇರುವವರೆಗೆ ಬಹು ಚನ್ನಾಗಿ ತೋರಬಂದಿತು. ಆ ಕಾಲಕ್ಕೆ ಭಾರತದ ಗಡಿ ಪ್ರದೇಶಗಳಲ್ಲಿ ಇಂಥ ದಳಗಳು ಅನೇಕ ಗ್ರಾಮಗಳಲ್ಲಿ ಸ್ಥಾಪಿತವಾದವು. ಇವುಗಳು ನಾಡಿನಲ್ಲಿ ಸುರಕ್ಷಿತೆಯನ್ನು ಕಾಯಲಿಕ್ಕೆ ಬಹಳ ಸಹಾಯ ವಾದವು. ಪುಂಡಾಟಿಕೆ ದರೋಡೆ ಇಂಥ ಕಾರ್ಯಗಳಿಗೆ ಅವು ತಡೆಯ್ಯ ನ್ನುಂಟುಮಾಡಿದವು. ಜನತೆಯಲ್ಲಿ ಪರಸ್ಪರ ಸಹಕಾರ, ಸಹಾಯಗಳು ಹಬ್ಬಲಿಕ್ಕೆ ಕಾರಣವಾದವು. ಇದರಿಂದ ರಜಾಕಾರರ ಹಾವಳಿಗಳು ಬಹಳ ಅಂಶದಿಂದ ಇತ್ತ ಕಡೆಗೆ ತಗ್ಗಿ ಹೋದವು.

ಹೈದರಾಬಾದ ರಾಜ್ಯದಲ್ಲಿ ರಜಾಕಾರರ ಹಾವಳಿಗಳು ನಿಂತು ಹೋದವೆಂಬುದೇನೋ ನಿಜವು. ಆದರೆ ನಮ್ಮಲ್ಲಿ ದುರ್ವ್ಯಸನ ದುರಾಚಾರ ಗಳಲ್ಲಿ ತೊಡಗಿದವರ ಸಂಖ್ಯೆಗೇನೂ ಕಡಿಮೆ ಇಲ್ಲ. ಇವರ ಅಸ್ತಿತ್ವದಿಂದ ಗ್ರಾಮುಗಳಲ್ಲಿ ನೆಮ್ಮದಿಯಾಗದೆ ಪ್ರತಿಬಂಧ ಉಂಟಾಗಿರುತ್ತದೆ. ಇದು ಸರ ಕಾರದವರ ಸಹಾಯವನ್ನು ಅಪೇಕ್ಷಿಸಿ ಅವರ ಬೆಂಬಲವನ್ನು ಪಡೆದರೆ ಮಾತ್ರ ತೀವ್ರ ಸಾಧ್ಯವಾಗುವಂಥದಿರುತ್ತದೆ.

ಶ್ರೀ ಬಸವೇಶ್ವರರು ತಮ್ಮ ಕಾರ್ಯದಲ್ಲಿ ವೀರಗಂಟಿ ಮಡಿವಾಳೇ ಶ್ವರ ಇಂಥವರ ಬೆಂಬಲವನ್ನು ಪಡೆಯಬೇಕಾಗಿ ಬಂದಿತು. ಅವರು ತಾವೂ ಒಬ್ಬ ಅರಸನಲ್ಲಿದ್ದುಕೊಂಡು ರಾಜಸತ್ತೆಯನ್ನು ಸಂಪಾದಿಸಬೇಕಾಯಿತು. ಇದರಿಂದ ಅವರಿಗೆ ಧರ್ಮರಕ್ಷಣೆ ಸಾಧ್ಯವಾಯಿತು. ಧರ್ಮದ ಬೆಳವಣಿ ಗೆಯೂ ಆಯಿತು.

ಜನರು ಇಂಥ ಗ್ರಾಮರಕ್ಷಕ ದಳಗಳಲ್ಲಿದ್ದರೆ ಅವರಲ್ಲಿ ಶಿಸ್ತು, ವಿಧೇಯತನ, ಸಾಮೂಹಿಕವಾಗಿ ಕಾರ್ಯಮಾಡುವದು ಈ ಮೊದಲಾದ ರಾಷ್ಟ್ರೀಯಗುಣಗಳು ಬೆಳೆಯುತ್ತವೆ. ಧರ್ಮದ ಮತ್ತು ದೇಶ ರಕ್ಷಣೆಯ ಕಾರ್ಯಗಳು ರಾಜಕೀಯ ಕ್ಷೇತ್ರದಿಂದ ಸಂಪೂರ್ಣವಾಗಿ ಅಲಿಪ್ತರಾಗಿ ಉಳಿಯುವದರಿಂದ ನೆರವೇರುವದು ದುಸ್ತರವು. ಈ ಕ್ಷೇತ್ರದಲ್ಲಿ ಯೋಗ್ಯ ಜನರು ಇರುವಂತೆ ಮಾಡಿ ಅವರಿಗೆ ಯಾವಾಗಲೂ ಸಹಾಯಮಾಡು ವದರಿಂದ ನತೆಯಲ್ಲಿ ನೀತಿ, ಧರ್ಮ, ಸದಾಚಾರಗಳು ಬೆಳೆಯುತ್ತವೆ. ಆದುದರಿಂದ ಸರಕಾರದವರು ಈಚೆಗೆ ನಡಿಸಿರುವ ಇಂಥ ಗ್ರಾಮಸುಧಾ

ಕಣಾ ಚಟುವಟಿಕೆಗಳಲ್ಲಿ ಎಲ್ಲರೂ ಅಂಗವಹಿಸುವದು ಅಗತ್ಯವಿರುತ್ತದೆ. ಈ ಚಟುವಟಿಕೆಗಳಲ್ಲಿ ಗ್ರಾಮಸಂರಕ್ಷಕ ದಳಗಳು, ಗೃಹರಕ್ಷಕ ದಳಗಳು ದೇಶ ಸೇವಾ ಮಂಡಳಗಳು, ಸ್ಕಾಟದಳಗಳು ಇವೆಲ್ಲವೂ ಬರುತ್ತವೆ. ಇವುಗಳಲ್ಲಿ ಅಂಗವಹಿಸಿ ಜನತೆಯು ಕಾರ್ಯಮಾಡಹತ್ತಿದರೆ ನಾಡಿನಲ್ಲಿ ಧಾರ್ಮಿಕ, ನೈತಿಕ, ಆರ್ಥಿಕ ಸುಧಾರಣೆಗಳು ಬಲಪಡುತ್ತ ಹೋಗುವದರಲ್ಲಿ ಸಂದೇಹವಿರಲಾರದು.

---

## ಸೂಚನೆ.

ನಮ್ಮ ಶಿವಾನುಭವ ಆಫೀಸಿಗೆ ಒಬ್ಬ ಯೋಗ್ಯ ಅನುಭವಿಕ ಮ್ಯಾನೇಜರನು ಬೇಕಾಗಿದ್ದು, ಇದಕ್ಕೆ ಒಪ್ಪಿಗೆ ಇದ್ದವರು ನಮ್ಮಕಡೆಗೆ ಅರ್ಜಿ ಮಾಡಿಕೊಳ್ಳಬೇಕು. ಅವನು ಪ್ರೆಸ್ಸಿನ ವ್ಯವಸ್ಥೆ, ಶಿವಾನುಭವ ಮತ್ತು ನವಕರ್ನಾಟಕ ಪತ್ರಿಕೆಗಳನ್ನು ಕಳಿಸುವದು, ಅವುಗಳ ಬಗ್ಗೆ ಪತ್ರವ್ಯವಹಾರ, ಶಿವಾನುಭವ ಗ್ರಂಥಮಾಲೆಯ ಗ್ರಂಥಗಳನ್ನು ರವಾನಿಸುವದು ಇತ್ಯಾದಿ ಕಾರ್ಯಗಳನ್ನು ಮಾಡತಕ್ಕದ್ದು. ಅವನಿಗೆ ಯೋಗ್ಯ ಸಂಬಳವು ಕೊಡಲ್ಪಡುವದು.

ಫ. ಗು. ಹಳಕಟ್ಟಿ,
ಮಾಲಕ
ಹಿತಚಿಂತಕ ಪ್ರಿಂಟಿಂಗ ಪ್ರೆಸ್,
ವಿಜಾಪುರ.

೩೯. ಮೂಲದ್ವಾರವನೆತ್ತಿ ಮೂಲಾಗ್ನಿಯನೆಬ್ಬಿಸಿ ಮೂಲಾಕ್ಷರವ ಕಟ್ಟೆಯ ಮಾಡಿ, ಭಕ್ತಿಯೆಂಬ ಬತ್ತಿಯ ತೀವಿ, ಅಮೃತವೆಂಬ ತುಪ್ಪವ ನೆರೆದು, ಪರಮಾನಂದವೆಂಬ ಜ್ಯೋತಿಯ ಮುಟ್ಟಿಸಿ, ಆ ಪರಮಾನಂದದ ಪ್ರಭೆಯೊಳು ಲೋಲಾಡುತ್ತಿರ್ದನು ನೋಡಾ, ಅಪ್ರಮಾಣ ಕೂಡಲ ಸಂಗಮ ದೇವಾ.

೪೦. ಇನ್ನು ಅಮೃತಧಾರಣೆ ಅದೆಂತೆಂದೊಡೆ, ಮೂಲ ವಾಯುವ ಪಿಡಿದು, ಮೂಲಜ್ಯೋತಿಯನೆಬ್ಬಿಸಿ, ಏಕಮೇವ ಅದ್ವಿತೀಯ ಅವಲೋಕ್ಯ ದ್ವಾರದಲ್ಲಿ ಜಿಹ್ವೆಯನೇರಿಸಿ, ಚಂದ್ರಮಂಡಲದೊಳಿಹ ಅಮೃತವನುಂಡರೆ, ಹರಿಬ್ರಹ್ಮಾದಿಗಳ ಒಡೆಯನಹುದು ನೋಡಾ, ಅಪ್ರಮಾಣ ಕೂಡಲಸಂಗಮ ದೇವಾ.

೪೧. ಓಂಕಾರ ಕಳಸದೊಳಗಿಹ ಅಮೃತವನುಂಡರೆ, ಕಾಲಕಲ್ಪಿತವಿಲ್ಲದೆ ಶಿವ ತಾನೆಯಾಗಿಹನು ಕಾಣಾ ! ಅಪ್ರಮಾಣ ಕೂಡಲಸಂಗಮದೇವಾ.

೪೨. ಷೋಡಶ ಕಳೆಗಳೊಳಗಿಹ ಅಮೃತವನುಂಡರೆ ಪರಿಪೂರ್ಣವಾಗಿಹನು ಕಾಣಾ ! ಅಪ್ರಮಾಣ ಕೂಡಲಸಂಗಮದೇವಾ.

೪೩. ಜ್ಞಾನಪ್ರಕಾಶವಾಗಿಹ ಮಹಾ ಜ್ಯೋತಿರ್ಮಯ ಲಿಂಗವೆಂಬ ಅಮೃತವನುಂಡರೆ ಹಸಿವು ತೃಷೆಗಳಡಗಿ ಆನಂದ ಸ್ವರೂಪವಾಗಿಹನು ನೋಡಾ! ಅಪ್ರಮಾಣ ಕೂಡಲಸಂಗಮದೇವಾ.

೪೪. ಇನ್ನು ಅವಗುಣಿಯೆಂತೆಂದರೆ:- ಪುಣ್ಯ ಪಾಪ ಸ್ವರ್ಗ ನರಕಂಗಳಿಗೆ ಹೇತುಭೂತನಾಗಿಹ ಅನ್ನಪಾನಾದಿಗಳ ಬಿಟ್ಟು ಚಿದಾನಂದದಲ್ಲಿ ಕಾಳ್ಪುರ್ದ ಮೂಲಬಂಧ ಉಡ್ಯಾಣಬಂಧ ಜಾಳೇಂದ್ರಬಂಧವಂ ಮಾಡಿ ಜಾಗ್ರತ್ ಸ್ವಪ್ನ ಸುಷುಪ್ತಿ ತಲೆದೋರದೆ ಶಬ್ದ ಸ್ಪರ್ಶ ರೂಪ ರಸ ಗಂಧಗಳೆಂಬ ಪಂಚೇಂದ್ರಿಯಂಗಳಲ್ಲಿ ಸೂಸಲೀಯದೆ ಏಕಾಗ್ರಚಿತ್ತನಾಗಿ ಮೂಲ ವಾಯುವಂ ಪಿಡಿದು ಆಕುಂಚನವಂ ಮಾಡಿ, ಮೂಲಾಗ್ನಿಯನೆಬ್ಬಿಸಿ, ಆಧಾರ ಪದ್ಮ ಚತುರ್ದಳ ಪದ್ಮವ ಪೊಕ್ಕು ವರ್ಣಭುವನ ತತ್ತ್ವಕಳೆಗಳಂ ಕಂಡು ಅಲ್ಲಿ ಅಗ್ನಿವರ್ಣವಾಗಿಹ ಜ್ಯೋತಿರ್ಮಯ ಲಿಂಗವ ಬೆರಸಿ, ಅಗ್ನಿಯಂ ಪುಟ ಮಾಡಿ, ಮನಪವನಂಗಳಂ ಸ್ವಾಧಿಷ್ಠಾನ ಚಕ್ರವ ಷಡುದಳ ಪದ್ಮವನು ಪೊಕ್ಕ ನೋಡಾ ! ಅಪ್ರಮಾಣ ಕೂಡಲಸಂಗಮದೇವಾ.

೪೫. ಆಧಾರದೊಳಗೆ ಅರಿದು, ಶಿವನ ಮನವೆ ಆಲಯು, ಪ್ರಾಣವೆ ಪೀಠಿಕೆಯಾಗಿ, ಶಿವನೆಂಬ ಶಿವಲಿಂಗವ ನೆಲೆಗೊಳಿಸಿ, ಅರ್ಪಿಸಿ ಭೇದವಿಲ್ಲದೆ ಬೆರಸುವದು ನೋಡಾ! ಅಪ್ರಮಾಣ ಕೂಡಲಸಂಗಮದೇವಾ.

೪೬. ಇನ್ನು ಆಧಾರಧಾರಣೆಯೆಂತೆಂದಡೆ, ಪ್ರಾಣವೇ ಪೀಠಿಕೆಯಾಗಿ, ಶಿವನೆಂಬ ಶಿವಲಿಂಗವ ನೆಲೆಗೊಳಿಸಿ, ಅರ್ಪಿಸಿ, ಭೇದವಿಲ್ಲದೆ ಬೆರೆವುದು ನೋಡಾ! ಅಪ್ರಮಾಣ ಕೂಡಲಸಂಗಮದೇವಾ.

೪೭. ಬಿಂದುವೇ ಪೀಠ, ನಾದವೇ ಲಿಂಗ, ಕಳೆಯೇ ಪೂಜೆಯಾಗಿ, ಅರ್ಪಿಸುವುದು ನೋಡಾ! ಅಪ್ರಮಾಣ ಕೂಡಲಸಂಗಮದೇವಾ.

೪೮. ಓಂಕಾರವೇ ಪೀಠ, ಅಕಾರವೇ ಕಂಠ, ಉಕಾರವೇ ಮೇಗಣ ಪೀಠವಾಗಿ, ಆ ಮೇಗಣ ಪೀಠದ ಮೇಲಿಹ ಬಟುವೇ ಮಕಾರ, ಆ ಬಟುವಿನೊಳಗಣ ಗುಣಿಯೇ ಬಿಂದು, ಬಿಂದುವಿನೊಳಗಣ ನಾದವೇ ಲಿಂಗ, ಮೂಲಾಕ್ಷರದಲ್ಲಿ ಮಹಾಲಿಂಗ ಸೂಕ್ಷ್ಮವಾಗಿಹುದು ನೋಡಾ, ಅಪ್ರಮಾಣ ಕೂಡಲಸಂಗಮದೇವಾ.

೪೯. ಓಂಕಾರವೆಂಬ ಪೀಠದಮೇಲೆ ನಿಶ್ಯಬ್ದವೆಂಬ ಲಿಂಗವ ನೆಲೆಗೊಳಿಸಿ, ನಿರಾಳಮಯದಲ್ಲಿ ನಿಂದು ನಿರಾಳನಾಗಿಹುದೀ ಪೂಜೆ ನೋಡಾ! ಅಪ್ರಮಾಣ ಕೂಡಲಸಂಗಮದೇವಾ.

೫೦. ನಾಡಿಧಾರಣೆ, ವಾಯುಧಾರಣೆ, ಅಮೃತಧಾರಣೆ, ಅಗ್ನಿಧಾರಣೆ, ಆಧಾರಧಾರಣೆ ಎಂಬ ಪಂಚಧಾರಣೆಯಂ ಮಾಡಿ, ತನ್ನಿಂದ ತಾನೆ ತಿಳಿದು, ಇನ್ನು ಅತ್ತ ಯೋಗಿಯಾಗಿ ಇರಬಾರದೆಂದು, ಭ್ರಮರನು ಸದ್ವಾಸನೆಯುಳ್ಳ ಸುಸ್ವರವ ಹೇಗೆ ಅರಸುವವು ಹಾಗೆ ಆ ಆತ್ಮಯೋಗಿ ಸದ್ಗುರುವನರಸಿ ಕಂಡು, ಅವರ ಕಾರುಣ್ಯವ ಪಡೆವೆನೆಂದು ಬಹನು ಕಾಣಾ ಅಪ್ರಮಾಣ ಕೂಡಲ ಸಂಗಮದೇವಾ.

೫೧. ಆ ಆತ್ಮಯೋಗಿ ಸದ್ಗುರುಸ್ವಾಮಿಯ ಕಂಡು, ಆ ಸದ್ಗುರು ಸ್ವಾಮಿಯ ಚರಣಕ್ಕೆ ದೀರ್ಘ ದಂಡ ನಮಸ್ಕಾರವ ಮಾಡಿ, ಆತ್ಮಯೋಗಿ ಭವಿಯಾಗಿರಬಾರದೆಂದು, ಅಂಗದ ಮೇಲೆ ಲಿಂಗಪ್ರತಿಷ್ಠೆಯ ಮಾಡಲೆಂದು ಬಿನ್ನೈಸಲು, ಆ ಶಿಷ್ಯನ ಬಿನ್ನಹಂ ಕೈಕೊಂಡು, ತನ್ನ ನಿಜ ಕರದಲ್ಲಿ ಹಣೆಯ ಹಿಡಿದೆತ್ತಿದನು ನೋಡಾ! ಅಪ್ರಮಾಣ ಕೂಡಲಸಂಗಮದೇವಾ.

೫೨. ಇನ್ನು ಆ ಶಿಷ್ಯನ ಮಾಂಸಪಿಂಡವ ಕಳೆದು ಮಂತ್ರಪಿಂಡವಂ ಮಾಡುವ ಕ್ರಮವದೆಂತೆಂದಡೆ, ಏಕಭುಕ್ತ ಉಪವಾಸಂಗಳಂ ಮಾಡಿಸಿ, ಪಂಚಗವ್ಯವಂ ಕೊಟ್ಟು, ಗಣತಿಂಥಿಣಿಗೆ ದಂಡ ಪ್ರಣಾಮನುಂ ಮಾಡಿಸಿ, ದಶವಾಯು ಶುದ್ಧ, ಅಷ್ಟತನು ಶುದ್ಧ, ಜೀವ ಶುದ್ಧ, ಆತ್ಮಶುದ್ಧವಂ ಮಾಡಿ, ಇಂದ್ರಿಯ ಲಿಖಿತವಂ ತೊಡೆದು, ಶಿವಲಿಖಿತವಂ ಲಿಖಿಸಿ, ವಿಭೂತಿ ಪಟ್ಟವ ಕಟ್ಟಿ, ಸ್ಥಾನ ಸ್ಥಾನದಲ್ಲಿ ರುದ್ರಾಕ್ಷೆಯ ಧರಿಸಿ, ಕಳಶಾಭಿಷೇಕವಂ ಮಾಡಿ, ಆ ಶಿಷ್ಯನ ಮಸ್ತಕದ ಮೇಲೆ ತನ್ನ ಹಸ್ತಕಮಲವನಿರಿಸಿ, ಬ್ರಹ್ಮರಂಧ್ರದ ಚಿತ್ಕಲಾಪ್ರಭಾವಲಿಂಗವಂ ತೆಗೆದು, ಧ್ಯಾನಿಸಿ, ಆ ಶಿಷ್ಯನ ಹಸ್ತವ ಪಂಚಾ ಮೃತದಲ್ಲಿ ಪ್ರಕ್ಷಾಲಿಸಿ, ಅಂಗದ ಮೇಲೆ ಲಿಂಗಪ್ರತಿಷ್ಠೆಯಂ ಮಾಡಿ, ಕರ್ಣ ದ್ವಾರದಲ್ಲಿ ಮೂಲಮಂತ್ರವ ತುಂಬಿ ಕೃತಾರ್ಥನ ಮಾಡಿದನು ಎನ್ನ ಸದ್ಗುರು ಸ್ವಾಮಿ ಧನ್ಯನಾದೆನಯ್ಯ ಅಪ್ರಮಾಣ ಕೂಡಲ ಸಂಗಮದೇವಾ.

೫೩. ಮತ್ತಂ ಆ ಶಿಷ್ಯನು ಸದ್ಗುರು ಸ್ವಾಮಿಗೆ ದೀರ್ಘ ದಂಡನಮಸ್ಕಾರ ವಂ ಮಾಡಿ, ಇಷ್ಟ ಪ್ರಾಣ ಭಾವಲಿಂಗದ ಭೇದವನು, ಇಷ್ಟ. ಪ್ರಾಣ, ಭಾವ ಲಿಂಗದ ಪೂಜೆಯನು, ಇಷ್ಟ ಪ್ರಾಣ ಭಾವಲಿಂಗಾರ್ಪಿತ ಭೇದವನು, ಗುರು ಲಿಂಗ, ಶಿವಲಿಂಗ, ಜಂಗಮಲಿಂಗದ ಭೇದವನು ಇಂತೀ ತ್ರಿವಿಧ ಲಿಂಗದಲ್ಲಿ ಮಾಡುವ ಪೂಜೆಯ ಕ್ರಮವನು ಷಟ್‌ಸ್ಥಲ ಬ್ರಹ್ಮಿಗಳ ಯಮ ನಿಯಮಾ ಸನ, ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ, ಧಾರಣ, ಸಮಾಧಿ ಭೇದ ವನು ತ್ರಿವಿಧ ಲಿಂಗದಲ್ಲಿ ಸಮುದ್ಭವವಾದ ತ್ರಿವಿಧ ಪ್ರಸಾದದ ಭೇದವನು ತ್ರಿವಿಧೋದಕ ಕ್ರಮವನು, ಷಟ್‌ಸ್ಥಲಂಗಳ ಭೇದವನು ಅರಿಯೆನು, ಎಲೆ ಸದ್ಗುರು ಸ್ವಾಮಿ ನಿರೂಪಿಸೆಂದು ಬಿನ್ನವಿಸಲು, ಸದ್ಗುರು ಸ್ವಾಮಿ ಅನುಗ್ರಹಿಸಿ ಕೊಟ್ಟುದೆ ಇಷ್ಟಲಿಂಗ. ಆ ಲಿಂಗವೇ ಪ್ರಾಣವ ಭೇದಿಸಿ, ಪ್ರಾಣಲಿಂಗವಾ ಯಿತ್ತು. ಭಾವವನೆ ಭೇದಿಸಿ, ಭಾವಲಿಂಗವಾಯಿತ್ತು. ಈ ತ್ರಿವಿಧವು ಒಂದೇ ಲಿಂಗ ಕಾಣಾ ಅಪ್ರಮಾಣ ಕೂಡಲಸಂಗಮ ದೇವಾ.

೫೪. ರಹಸ್ಯೇ-ಸದ್ಗುರೋರನುಗ್ರಹಂ ಇಷ್ಟಂ ತಲ್ಲಿಂಗೇ ಪ್ರಾಣಯೋ ದಿತಂ ಭಾವ ವೇದ್ಯತೆ ಲಿಂಗಂ ತ್ರಿಧಾ ವೇಕಂ ವರಾನನೆ ಎಂದುದಾಗಿ ಅಪ್ರಮಾಣ ಕೂಡಲಸಂಗಮದೇವಾ.

೫೫. ಇನ್ನು ಇಷ್ಟ ಪ್ರಾಣ ಭಾವಲಿಂಗದ ಪೂಜೆಯ ವಿವರವು ಅದೆಂತೆಂದೊಡೆ, ಇಷ್ಟಲಿಂಗದಲ್ಲಿ ಅಷ್ಟವಿಧಾರ್ಚನೆ ಷೋಡಶೋಪಚಾರಂಗಳ

ಮಾಡುವುದು ಇಷ್ಟಲಿಂಗದ ಪೂಜೆ, ಆ ಲಿಂಗವನು ಮನಸ್ಸಿನಲ್ಲಿಯೇ ಧ್ಯಾನಿಸುವುದೆ ಪ್ರಾಣಲಿಂಗದ ಪೂಜೆ ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೫೬. ॥ ಸಾಕ್ಷಿ ॥ ಅಷ್ಟವಿಧಾರ್ಚನಂ ತೂರ್ಯಂ ಇಷ್ಟ ಲಿಂಗಸ್ಯ ಪೂಜನಂ ತಲ್ಲಿಂಗಮನುವೇದ್ಯಸ್ತು ಪ್ರಾಣಲಿಂಗಸ್ಯ ಪೂಜನಂ ಎಂದುದಾಗಿ, ಅಪ್ರಮಾಣ ಕೂಡಲಸಂಗಮದೇವಾ.

೫೭. ಉಪ್ಪು ಉದಕವ ಬೆರಸಿದಂತೆ, ವಾರಿ ಕಲ್ಲು ವಾರಿಯು ಬೆರಸಿದಂತೆ ಕರ್ಪುರ ಅಗ್ನಿಯ ಬೆರಸಿದಂತೆ, ಮನ ಲಿಂಗದಲ್ಲಿ ಲಿಯ್ಯವಾಗಿಹುದು, ಭಾವಲಿಂಗದ ಪೂಜೆ ನೋಡಾ ! ಅಪ್ರಮಾಣ ಕೂಡಲಸಂಗಮದೇವಾ.

೫೮. ॥ ಸಾಕ್ಷಿ ॥ ಮನೋಲಯೋ ನಿರಂಜನಂ ಭಾವಲಿಂಗಸ್ಯ ಪೂಜನಂ ಯತೆ ಲಿಂಗಾರ್ಚನಂ ಜ್ಞಾನಂ ದ್ವಿಶೇಷಂ ಶ್ರೃಣು ಪಾರ್ವತಿ ಎಂದುದಾಗಿ, ಅಪ್ರಮಾಣ ಕೂಡಲಸಂಗಮದೇವಾ.

೫೯. ಇನ್ನು ಇಷ್ಟ ಪ್ರಾಣ ಭಾವಲಿಂಗಾರ್ಪಿತದ ಭೇದವದೆಂತೆಂದಡೆ, ಇಷ್ಟ ಲಿಂಗಕ್ಕೆ ತನ್ನ ಶರೀರವ ಸಮರ್ಪಿಸುವುದು, ಪ್ರಾಣಲಿಂಗಕ್ಕೆ ತನ್ನ ಮನಸ್ಸನೆ ಸಮರ್ಪಿಸುವುದು, ಭಾವಲಿಂಗಕ್ಕೆ ತನ್ನ ಪರಿಣಾಮವನೆ ಸಮರ್ಪಿಸುವುದು ನೋಡಾ ! ಅಪ್ರಮಾಣ ಕೂಡಲಸಂಗಮದೇವಾ.

೬೦. ॥ ಸಾಕ್ಷಿ ॥ ಇಷ್ಟಲಿಂಗಾರ್ಪಿತಂ ಅಂಗಂ ಪ್ರಾಣಲಿಂಗಾರ್ಪಿತಂ ಮನಃ ಭಾವಲಿಂಗಾರ್ಪಿತಂ ತೃಪ್ತಿ, ಇತಿ ಭೇದವರಾನನೆ ಎಂದುದಾಗಿ ಅಪ್ರಮಾಣ ಕೂಡಸಂಗಮದೇವಾ.

೬೧. ಇನ್ನು ಗುರುಲಿಂಗ, ಶಿವಲಿಂಗ, ಜಂಗಮಲಿಂಗದ ವಿವರ, ಅದೆಂತೆಂದಡೆ, ಗುರುಲಿಂಗವು ಸಕಲನು, ಶಿವಲಿಂಗವು ನಿಃಕಲವು, ಜಂಗಮಲಿಂಗ ಸಕಲ ನಿಃಕಲನು ಕಾಣಾ ಅಪ್ರಮಾಣ ಕೂಡಲಸಂಗಮದೇವಾ.

೬೧. ॥ ಸಾಕ್ಷಿ ॥ ಸಕಲಂ ಗುರು ಲಿಂಗಂಚ ನಿಃಕಲಂ ಶಿವಲಿಂಗಕಂ ಸಕಲಂ ನಿಃಕಲಂಚೈವ ಜಂಗಮಂ ಪ್ರಕೀರ್ತಿತ: ಎಂದುದಾಗಿ ಅಪ್ರಮಾಣ ಕೂಡಲಸಂಗಮದೇವಾ.

೬೩. ಇನ್ನು ಪ್ರಥಮಲಿಂಗದಲ್ಲಿ ದ್ವಿತಿಯಲಿಂಗದಲ್ಲಿ ತೃತೀಯ ಲಿಂಗದಲ್ಲಿ ಮಾಡುವ ಪೂಜಾ ವಿಧಿಯ ಕ್ರಮವದೆಂತೆಂದಡೆ। ಶಕ್ತಿ ಪ್ರಥಮಲಿಂಗ, ಆ

ಲಿಂಗವೇ ಗುರುಲಿಂಗ, ಆ ಸನ್ನಿಧೇ ಶಿವಲಿಂಗ, ಅಲಿಂಗವೇ ಜಂಗಮ ಲಿಂಗ, ಈ ತ್ರಿವಿಧವು ಗುರುಲಿಂಗದೊಳಗಿಹವೆಂದು ॥ ಸಾಕ್ಷಿ॥ ಶಕ್ತಿ ಸದ್ಗುರು ಲಿಂಗಂಚ ಸನ್ನಿಧೇ ಗುರುಲಿಂಗಕಂ ತಲ್ಲಿಂಗಂ ಜಂಗಮಲಿಂಗಂ ತ್ರಿವಿಧಂ ಗುರು ಮಿಶ್ರಕಂ ಎಂದುದಾಗಿ ಅಪ್ರಮಾಣ ಕೂಡಲಸಂಗಮದೇವಾ.

೬೪. ಹೀಗೆ ಅರಿದು, ಅರ್ಚಿಸಿ, ವಂದಿಸಿ, ಆರಾಧನೆಯಂ ಮಾಡಿ, ತನ್ನ ಕ್ರಿಯಾಮಾರ್ಗದಿಂದ ಶುದ್ಧ ಪವಿತ್ರಚರಿತನಾಗಿ, ಮಹಾಜ್ಞಾನ ವರ್ತಕ ನಾಗಿ, ಶ್ರೀಗುರುವಾಜ್ಞೆಯಂ ಮೀರದೆ ನಡೆವುದೀಗ ಗುರು ಪೂಜೆಯ ಕ್ರಮ ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೬೫. ಆ ಶ್ರೀಗುರು ಉಪದೇಶ ಮಂತ್ರಮಾರ್ಗದಲ್ಲಿ ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ, ಧಾರಣ, ಸಮಾಧಿ ಎಂಬ ಅಷ್ಟಾಂಗ ಯೋಗದಲ್ಲಿ ನಿರತನಾಗಿ, ಇಂದ್ರಿಯ ವ್ಯವ ಹಾರ ದೇಹವಿಕಾರವಿಲ್ಲದೆ, ನಿರಾಕಾರ ಲಿಂಗಸಂಗಿಯಾಗಿ, ಪ್ರಥಮ ಕಾಲ, ದ್ವಿತೀಯಕಾಲನೆಂಬ ಕಾಲತ್ರಯಂಗಳನುಲ್ಲಂಘಿಸದೆ, ಮಾಡುವುದೀಗ ಲಿಂಗ ಪೂಜೆ ನೋಡಾ ! ಅಪ್ರಮಾಣ ಕೂಡಲಸಂಗಮದೇವಾ.

೬೬. ಇನ್ನು ಗುರುಪೂಜಾ ವಿಧಿಯ ಕ್ರಮವಾತನೇ ಅಷ್ಟಾಂಗ ಯೋಗ, ಅದೆಂತೆಂದಡೆ, ಹಿಂಸೆಯನತಿಗಳೆದು, ಅನ್ಯದೈವವ ಬಿಡುವ, ಅನ್ಯ ಕರ್ಮವನಾಚರಿಸದಿಹ, ಪರಧನ, ಪರಸ್ತ್ರೀವರ್ಜಿತ, ಈ ಐದು ಯಮನಿಯಮ ಯೋಗ ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೬೭. ಬ್ರಹ್ಮಚಾರಿಯಾಗಿಹ, ನಿರಾಪೇಕ್ಷೆಯಾಗಿಹ, ಧನಾಶೆ ಇಲ್ಲದಿಹ, ಆಗಮವಿಡಿದು ಆಚರಿಸುತ್ತಿಹ, ಗುರುತತ್ವ, ಶಿವತತ್ವ, ಪರತತ್ವದ ಸ್ವರೂ ಪಂಗಳನರಿದಿಹ, ಈ ಐದು ನಿಯಮಯೋಗ ನೋಡಾ ! ಅಪ್ರಮಾಣ ಕೂಡಲ ಸಂಗಮದೇವಾ.

೬೮. ವಜ್ರಾಸನ, ಪದ್ಮಾಸನ, ಸ್ವಸ್ತಿಕಾಸನ, ಗೋಮುಖಾಸನ, ಕುಕ್ಕುಟಾಸನ, ಅರ್ಧಾಸನ, ಮಂಡುಕಾಸನ, ಸಿಂಹಾಸನ, ಚಂದ್ರಾಸನ, ಸುಖಾಸನ, ಈ ಹತ್ತು ಆಸನಯೋಗ ನೋಡಾ ! ಅಪ್ರಮಾಣ ಕೂಡಲ ಸಂಗಮದೇವಾ.

೬೯. ಇಂದ್ರಿಯಂಗಳಿಗೆ ವಡೆಯನಹಂತ ಮನಸ್ಸನು, ಆ ಮನಸ್ಸಿಗೆ ವಡೆಯನಹಂತ ಪವನ, ಆ ಮನಪವನಂಗಳಂ ಸಮಾನಂ ಕೊಂಡು, ಇಂದ್ರಿಯಂಗಳನು ಸೂಸಲೀಯ್ಯದೆ ಸ್ಥಿರಚಿತ್ತನಾಗಿಹುದೆ ಪ್ರತ್ಯಾಹಾರಯೋಗ ನೋಡಾ ! ಅಪ್ರಮಾಣ ಕೂಡಲಸಂಗಮದೇವಾ.

೭೦. ಆ ಶ್ರೀಗುರು ನಿರ್ಭಾವ ಸ್ಥಲಕ್ಕೆ ತಂದ, ಆ ಭಾವಸ್ಥಲದ ಲಿಂಗವ ಮನಸ್ಥಲಕ್ಕೆ ತಂದ, ಆ ಮನಸ್ಥಲದ ಲಿಂಗವ ದೃಷ್ಟಿಸ್ಥಲಕ್ಕೆ ತಂದ, ಆ ದೃಷ್ಟಿಸ್ಥಲದ ಲಿಂಗವ ಕರಸ್ಥಲಕ್ಕೆ ತಂದ, ಆ ಕರಸ್ಥಲದ ಮೂರ್ತಿಯ ಧ್ಯಾನಿಸುವುದೇ ಧ್ಯಾನಯೋಗ ನೋಡಾ ! ಅಪ್ರಮಾಣ ಕೂಡಲಸಂಗಮ ದೇವಾ.

೭೧. ಆ ಧ್ಯಾನವನೆಚ್ಚರಿದಿಹುದೀಗ ಅಂತಃಕರಣ ಚತುಷ್ಟಯಂಗಳು ಸುಸ್ಥಿರವಾಗಿಹುದೇ ಸಮಾಧಿ ಯೋಗ ನೋಡಾ ಅಪ್ರಮಾಣ ಕೂಡಲ ಸಂಗಮದೇವಾ.

೭೨. ಇಂತು ಅಷ್ಟಾಂಗಯೋಗ ಜಂಗಮಭಕ್ತಿಯ ವಿವರವೆಂತೆಂದಡೆ, ಶುದ್ಧವಹ ಪಾಕ ಪ್ರಯತ್ನಂಗಳಿಂದ, ಪ್ರಿಯವಾಕ್ಯಂಗಳಿಂದ, ಸಹಜ ಹಸ್ತ ದಿಂದ ಕುಲ, ಛಲ, ಧನ, ಯವ್ವನ, ರೂಪು, ವಿದ್ಯಾ, ರಾಜ್ಯ, ತಪ ವೆಂಬಷ್ಟ ಮದಂಗಳಂ ಬಿಟ್ಟು, ಅಹಂಕಾರವಂ ಬಿಟ್ಟು, ನಿರಹಂಕಾರ ಭರಿತನಾಗಿ, ಉಪಾಧಿಯ ಬಿಟ್ಟು, ನಿರುಪಾಧಿಕನಾಗಿ, ದೇಹಗುಣವಂ ಬಿಟ್ಟು ನಿರ್ದೇಹಿಕನಾಗಿ ಅಪೇಕ್ಷೆಯಂಬಿಟ್ಟು ನಿರಾಪೇಕ್ಷಿತನಾಗಿ ಜಂಗಮಲಿಂಗವೆಂದು ಮನಶುಚಿಯಾಗಿ ಮಾಡುವದು ಜಂಗಮಭಕ್ತಿ ನೋಡಾ ಅಪ್ರಮಾಣ ಕೂಡಲ ಸಂಗಮದೇವಾ.

೭೩. ಇನ್ನು ಪ್ರಥಮಲಿಂಗ, ದ್ವಿತೀಯಲಿಂಗ, ತೃತೀಯಲಿಂಗದಲಿ ಶುದ್ಧ ಗುರುಪ್ರಸಾದ, ಸಿದ್ಧಲಿಂಗಪ್ರಸಾದ, ಪ್ರಸಿದ್ಧಜಂಗಮಪ್ರಸಾದ, ಶಿವ ಜ್ಞಾನ ಮಹಾಪ್ರಸಾದ, ಇಂತು ತ್ರಿವಿಧ ಪ್ರಸಾದ. ಇನ್ನು ಲಿಂಗೋದಕ, ಪಾದೋದಕ, ಪ್ರಸಾದೋದಕ, ಅದೆಂತೆಂದೊಡೆ ಲಿಂಗೋದಕ ಶಿವಮಂತ್ರ ಸಂಸ್ಕಾರದಿಂದಾದುದು, ಲಿಂಗಕ್ಕೆ ಮಜ್ಜನಕ್ಕೆಂದುದೇ ಪಾದೋದಕ, ಲಿಂಗಾ ರೋಗಣೆಯ ಮಾಡಿ ಮಿಕ್ಕುದೇ ಪ್ರಸಾದೋದಕ, ಲಿಂಗೋದಕದಲ್ಲಿ ಪಾಕ ಪ್ರಯತ್ನ ಮಜ್ಜನಾದಿಗಳ ಮಾಡುವುದು ಪಾದೋದಕದಲ್ಲಿ ಮುಖಪ್ರಕ್ಷಾಲ ನವ ಮಾಡುವುದು ಮಸ್ತಕದ ಮೇಲೆ ತಳಿದುಕೊಂಬುವುದು, ಪ್ರಸಾದೋ ದಕವ ಭುಂಜಿಸಿಹುದು ನೋಡಾ, ಅಪ್ರಮಾಣ ಕೂಡಲಸಂಗಮದೇವಾ.

೭೪. ಇನ್ನು ಷಟ್‌ಸ್ಥಲವದೆಂತೆಂದೊಡೆ, ಸದಾಚಾರದಲ್ಲಿ ನಡೆವ, ಶಿವನಲ್ಲಿ ಭಕ್ತಿಯಾಗಿರುಹ ಲಿಂಗಜಂಗನು ಬಂದರೆ, ಸಂತೋಷ ಬುದ್ಧಿಗಿರುಹ ಲಾಂಛನ ಧಾರಿಗಳ ಕಂಡರೆ, ವಂದಿಸುತಿಹ ಇದೀಗ ಭಕ್ತಸ್ಥಲ ನೋಡಾ, ಅಪ್ರಮಾಣ ಕೂಡಲಸಂಗಮದೇವಾ.

೭೫. ಪರಸ್ತ್ರೀ, ಪರಧನದಾಸೆಯು ಬಿಟ್ಟು, ಶುದ್ಧನಾಗಿ ಲಿಂಗನಿಷ್ಠೆಯುಳ್ಳಾತನು ಮಹೇಶ್ವರಸ್ಥಲ ನೋಡಾ, ಅಪ್ರಮಾಣ ಕೂಡಲಸಂಗಮದೇವಾ.

೭೬. ಲಿಂಗಪ್ರಸಾದವ ನೆನಹಿನಿಂಪ ಭುಂಜಿಸುವುದೇ ಅರ್ಪಿತ. ಅನರ್ಪಿತವ ಬಿಡುವುದೀಗ ಪ್ರಸಾದಿಸ್ಥಲ ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೭೭. ಪ್ರಾಣವೇ ಲಿಂಗವಾಗಿ, ಲಿಂಗವೇ ಪ್ರಾಣವಾಗಿ, ಸುಖದುಃಖ ಉಭಯವು ತನಗಿಲ್ಲದಿಹುದೀಗ ಪ್ರಾಣಲಿಂಗಿಸ್ಥಲ ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೭೮. ಲಿಂಗವೇ ಪತಿಯಾಗಿ, ತಾನು ಸತಿಯೆಂಬ ಭಾವದಲ್ಲಿ ಆಚರಿಸಿ, ಪಂಚೇಂದ್ರಿಯ ಸುಖಂಗಳ ಬಯಸದಿಹುದೀಗ ಶರಣಸ್ಥಲ ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೭೯. ಕ್ಷೀರದೊಳಗಣ ಘೃತದಂತೆ, ತಿಲದೊಳಗಣ ತೈಲದಂತೆ, ಪುಷ್ಪದೊಳಗಣ ಪರಿಮಳದಂತೆ, ಉಪ್ಪು ಉದಕವ ಕೂಡಿದಂತೆ, ವಾರಿಕಲ್ಲು ವಾರಿಯು ಕೂಡಿದಂತೆ, ಕರ್ಪುರವು ಜ್ಯೋತಿಯು ಕೂಡಿದಂತೆ, ಮನ ಲಿಂಗದಲ್ಲಿ ಲಯವಾಗಿಹುದೀಗ ಐಕ್ಯಸ್ಥಲ ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೮೦. ಹೀಗೆಂದು ಆ ಶಿಷ್ಯಂಗೆ ಬೋಧಿಸಿ, ಕೃತಾರ್ಥನ ಮಾಡಿದ ಗುರುವಿಂಗೆ ನಮೋ ನಮೋ ಎಂದು ಬದುಕಿದೆನು ಕಾಣಾ ಅಪ್ರಮಾಣ ಕೂಡಲಸಂಗಮದೇವಾ.

೮೧. ಮತ್ತಂ ಆ ಶಿಷ್ಯನು ಸದ್ಗುರುಸ್ವಾಮಿಗೆ ದೀರ್ಘ ದಂಡ ನಮಸ್ಕಾರವಂ ಮಾಡಿ, ಭಯಭಕ್ತಿಯಿಂದ ಎಲೆ ಸದ್ಗುರುಸ್ವಾಮಿ ಲೋಕಾದಿ ಲೋಕಂಗಳೇನೂ ಇಲ್ಲದಂದು, ಶಿವನು ಹೇಗಿರ್ದನೆಂಬುದನು ನಿರಂಜನ ಪ್ರಣಮದುತ್ಪತ್ಯವನು, ಅವಾಚ್ಯ ಪ್ರಣಮದುತ್ಪತ್ಯವನು ಕಲಾಪ್ರಣವದುತ್ಪತ್ಯ

ವನ್ನು, ಅನಾದಿ ಪ್ರಣವದುತ್ಪತ್ಯವನು, ಅಕಾರ, ಉಕಾರ, ಮಕಾರದುತ್ಪತ್ಯವನು ನಾದ ಬಿಂದುಗಳ ಭೇದವನು, ಅಕಾರ, ಉಕಾರ, ಮಕಾರದಲ್ಲಿ ತಾರಕ ಸ್ವರೂಪ, ದಂಡಕ ಸ್ವರೂಪ, ಕುಂಡಲಿಸ್ವರೂಪ, ಅರ್ಧಚಂದ್ರಾಕಾರ, ದರ್ಪಣಾಕಾರ ಜ್ಯೋತಿಸ್ವರೂಪದುತ್ಪತ್ಯವನು, ಅದಕ್ಕೆ ಅಧಿದೇವತೆಯನು, ತಾರಕ ಸ್ವರೂಪ ದಂಡಕ ಸ್ವರೂಪ, ಕುಂಡಲ ಸ್ವರೂಪ, ಅರ್ಧಚಂದ್ರಾಕಾರ, ದರ್ಪಣಾಕಾರ ಜ್ಯೋತಿಸ್ವರೂಪ ಅಕಾರ, ಉಕಾರ, ಮಕಾರದಲ್ಲಿ ಅಡಗಿಹ ಭೇದವನು, ಅಕಾರ, ಉಕಾರ, ಮಕಾರ, ನಾದ, ಬಿಂದು, ಕಳೆ, ಪ್ರಕೃತಿ, ಪ್ರಾಣ ಆಧಾರಂಗಳ ಭೇದವನು, ನಾದ, ಬಿಂದು, ಉಕಾರ ಮಕಾರವು ಕೂಡಿ, ಶಿವಶಕ್ತಿಯಾಗಿ, ಓಂಕಾರವಾದ ಭೇದವನು ಆ ಪ್ರಣವದುತ್ಪತ್ಯದ ಭೇದವನ್ನು ದಶಚಕ್ರದುತ್ಪತ್ಯವನು, ದಶಚಕ್ರದ ನೆಲೆಯನು, ದಶಚಕ್ರದ ನಿವೃತ್ತಿಯನು, ನವಪದ್ಮದುತ್ಪತ್ಯವನು, ನವಪದ್ಮದ ನೆಲೆಯನು, ನವಪದ್ಮದ ನಿವೃತ್ತಿಯನು, ಅಖಂಡಜ್ಯೋತಿಮಯವಾಗಿಹ ಗೋಳಕಾಕಾರ ಪ್ರಣವದ, ತಾರಕಸ್ವರೂಪ, ದಂಡಕಸ್ವರೂಪ, ಕುಂಡಲಾಕಾರ, ಅರ್ಧಚಂದ್ರಾಕಾರ, ದರ್ಪಣಾಕಾರ, ಜ್ಯೋತಿಸ್ವರೂಪ ಕಾಂತಿಯನು ಅತಿ ಸೂಕ್ಷ್ಮ ಪಂಚಾಕ್ಷರದುತ್ಪತ್ಯವನು, ಅತಿಸೂಕ್ಷ್ಮ ಪಂಚಾಕ್ಷರದ ನೆಲೆಯನು, ಅತಿಸೂಕ್ಷ್ಮ ಪಂಚಾಕ್ಷರದ ನಿವೃತ್ತಿಯನು, ಅತಿಸೂಕ್ಷ್ಮ ಪಂಚಾಕ್ಷರದ ಕಾಂತಿಯನು, ಜೀವಾತ್ಮ ಪರಮಾತ್ಮನುತ್ಪತ್ಯವನು, ಜೀವಾತ್ಮ ಪರಮಾತ್ಮನ ನೆಲೆಯನು, ಜೀವಾತ್ಮ ಪರಮಾತ್ಮನ ನಿವೃತ್ತಿಯನು. ಜೀವಾತ್ಮ ಪರಮಾತ್ಮನ ಕಾಂತಿಯನು, ಐವತ್ತೆರಡಕ್ಷರದುತ್ಪತ್ಯವನು ಐವತ್ತೆರಡಕ್ಷರದ ನೆಲೆಯನು, ಐವತ್ತೆರಡಕ್ಷರದ ನಿವೃತ್ತಿಯನು, ಉಕಾರದುತ್ಪತ್ಯವನು ತ್ರಿಯಕ್ಷರದುತ್ಪತ್ಯವನು. ಸಹಸ್ರಾಕ್ಷರದುತ್ಪತ್ಯವನು ಉಕಾರದ ನೆಲೆಯನು ತ್ರಿಯಕ್ಷರದ ನೆಲೆಯನು, ಸಹಸ್ರಾಕ್ಷರದ ನೆಲೆಯನ್ನು ಏಕಾಕ್ಷರದ ನಿವೃತ್ತಿಯನು, ತ್ರಿಯಕ್ಷರದ ನಿವೃತ್ತಿಯನು, ಸಹಸ್ರಾಕ್ಷರದ ನಿವೃತ್ತಿಯನು, ಷಡ್ವಿಧ ಮುಖಂಗಳುತ್ಪತ್ಯವನು, ಷಡ್ವಿಧ ಮುಖಂಗಳ ನೆಲೆಯನು, ಷಡ್ವಿಧ ಮುಖಂಗಳ ನಿವೃತ್ತಿಯನು, ಷಡ್ವಿಧ ಭೂತಂಗಳುತ್ಪತ್ಯವನು. ಷಡ್ವಿಧ ಭೂತಂಗಳ ನೆಲೆಯನು, ಷಡ್ವಿಧ ಭೂತಂಗಳ ನಿವೃತ್ತಿಯನು, ಷಡ್ವಿಧ ಲಿಂಗದುತ್ಪತ್ಯವನು, ಷಡ್ವಿದ ಲಿಂಗದ ನೆಲೆಯನು ಷಡ್ವಿಧ ಲಿಂಗದ ನಿವೃತ್ತಿಯನು. ಷಡ್ವಿಧ ಕಲೆಗಳುತ್ಪತ್ಯವನು. ಷಡ್ವಿಧ ಕಲೆಗಳ ನೆಲೆ, ಷಡ್ವಿಧ ಕಲೆಗಳ ನಿವೃತ್ತಿಯನು. ಷಡ್ವಿಧ ಸಾದಾಖ್ಯದುತ್ಪತ್ಯ, ಷಡ್ವಿಧ ಸಾದಾಖ್ಯದ ನೆಲೆಯನು. ಷಡ್ವಿಧ ಸಾದಾಖ್ಯದ ನಿವೃತ್ತಿಯನು.

ನಿನ್ನ ಕೀರ್ತಿಯೆ ದಿವ್ಯ ಸ್ಫೂರ್ತಿಯು-
ಇದುವೆ ನಮಗೆ ಯುದಧಿ !
ಜನನ ಮರಣಗಳ ದುರಿತ ಹರಿತ
ಪರಬ್ರಹ್ಮ ಜ್ಞಾನ ಬೋಧಿ ! ||೬||

ದಿವ್ಯ ಪುರುಷನೆ ಭವ್ಯ ಪುರುಷನೆ
ಕಲಿಯುಗದ ಪರುಷ ನೀನೇ !
ಯುಗ ಯುಗಗಳಿಂದಲೂ ಬಸವಳಿದ ಜನತೆಗೆ
ನೀನೆ ಅಮೃತ ಸೋನೆ !! ||೭||

ಹಾರುವುದು ಜೀವ ಕೋರುವೆನು ನಲವ-
ಒಲವಿಂದೆ ನೋಡು ಮಲ್ಲೇಶ !
ಸಿದ್ಧ ಮಲ್ಲೇಶ ಭವವಿನಾಶ ಕಾಪಿಡಯ್ಯ
"ಮಳೆಯ ಮಲ್ಲೇಶ !!" ||೮||

---

# ಭಕ್ತಿ.

( ಲೇಖಕ:— ಶ್ರೀ. ಗೌರೀಶಂಕರದೇವರು ಚಂದ್ರಶೇಖರಮಠ ಬೆಳಗಾವ. )

ಜಗತ್ತಿನಲ್ಲಿ ಮನುಷ್ಯನು ಮೋಕ್ಷವನ್ನು ಹೊಂದಬೇಕಾದರೆ ಅತ್ಯಂತ ಸುಲಭವಾದ ಶ್ರೇಷ್ಠವಾದ ಉಪಾಯವೆಂದರೆ ಭಕ್ತಿಮಾರ್ಗವು ಒಂದಾಗಿರುತ್ತದೆ. ಮಾನವನು ಭಕ್ತಿಯನ್ನು ಮಾಡಬೇಕಾದರೆ ಅದಕ್ಕೇನಾದರು ಖರ್ಚು ಮತ್ತು ಎರಡನೇಯವರ ಸಹಾಯ ಹಣ ಮುಂತಾದವು ಏನೂ ಬೇಡ. ತನ್ನ ಮನಸ್ಸನ್ನು ತನ್ನ ಆಧೀನದಲ್ಲಿ ಇಟ್ಟುಕೊಳ್ಳುವದು, ಹೊರತಾಗಿ ಬೇರೆಯವರ ಆಧೀನದಲ್ಲಿ ಏನೂ ಇರುವದಿಲ್ಲ. ಆದ್ದರಿಂದ ತನ್ನ ಚಂಚಲವಾದ ಮನಸ್ಸನ್ನು ತನ್ನ ಹಿಡಿತದಲ್ಲಿ ಇಡಲು ತಾನೇ ಕಾರಣನು. ಮೊದಲು ಮಾನವನು ಮನಸ್ಸನ್ನು ಶುದ್ಧವಾಗಿ ಅತ್ಯಂತ ಪವಿತ್ರವಾಗಿ ಇಟ್ಟುಕೊಳ್ಳತಕ್ಕದ್ದು. ಮನಸ್ಸು ಶುದ್ಧವಾದರೆ ಆತ್ಮಶುದ್ಧಿಯಾಗುವದು. ಭಕ್ತಿಗೆ ಮೂಲಕಾರಣವಾದದ್ದು ಮನಸ್ಸೇ ಇರುವದು. ನಾವು ಶುದ್ಧವಾದ ಮನಸ್ಸಿನಿಂದ ಆ ಪರಮಾತ್ಮನ ನಾಮಸ್ಮರಣೆಯನ್ನು ಮಾಡುವದು. ಮನಸ್ಸಿನಿಂದ ಮಾಡಿದರೆ ಪರಮಾತ್ಮನು ನಮ್ಮಗಳ ಮೇಲೆ ಕೃಪಾಶೀರ್ವಾದ ಮಾಡುವನು. ಇದರಲ್ಲಿ ಏನೂ ಸಂದೇಹವಿಲ್ಲ.

ಆ ಪರಶಿವನ ನಾಮಸ್ಮರಣೆಯನ್ನು ಮಾಡಲು ವೇದ ಘೋಷ ಮಾಡಲು ಕಾರಣವಿಲ್ಲ. ಬರೇ ಶಿವ ಶಿವ ಎಂದು ಎರಡು ಅಕ್ಷರದಿಂದ ಕೂಡಿದ ಈ ಶುದ್ಧವಾದ ಪವಿತ್ರವಾದ ನಾಮಸ್ಮರಣೆಯನ್ನು ಮಾಡಿದರೆ ಸಾಕು; ಆ ಕರುಣಾಳುವಾದ ದಯಾಘನನಾದ ಶಿವನಿಗೆ ನಾವು ಮಾಡಿದ ನಾಮಸ್ಮರಣೆಯು ಮುಟ್ಟುವದು. ಎಷ್ಟೋ ಅಸಂಖ್ಯಾತ ನಾಮಗಳಿಂದ ಕೂಡಿದ ಪರಶಿವನ ಸಹಸ್ರಾರು ನಾಮಗಳನ್ನು ಉಚ್ಚರಿಸಿದರೂ ಅಷ್ಟೇ ಇರುವದು. ಎಲ್ಲವೂ ಆ ಪರಮಾತ್ಮನ ನಾಮವೇ ಆಗಿರುವದು. ಆದರೆ ನಾಮಸ್ಮರಣೆಯನ್ನು ಮಾಡಬೇಕಾದರೆ ಮತ್ತು ಪೂಜಾದಿ ಕರ್ಮಗಳನ್ನೂ ಮಾಡಬೇಕಾದರೆ ಮನಸ್ಸಿನಿಂದ ಮಾಡಬೇಕು. ಇದು ಮೊದಲನೆಯ ಮಾತಾಗಿರುವದು.

ನಮ್ಮದು ಆ ಪರಶಿವನಲ್ಲಿ ದೃಢವಾದ ನಂಬಿಗೆಬೇಕು. ನಮಗೇನಾದರೂ ಕಷ್ಟಗಳು ಬಂದರೆ ಅಸಂತೋಷ ಪಡುವದು ಮತ್ತು ಆತನ ಮೇಲೆ ಸಿಟ್ಟಾಗುವದು. ಇದರಂತೆ ಸುಖಾನಂದಗಳು ಬಂದರೆ ಹಿಗ್ಗಿ ಪರಶಿವನನ್ನು ಆನಂದದಿಂದ ಸ್ಮರಿಸುವದು ಹೀಗೆ ಮಾಡಬಾರದು. ಆತನು ಕಷ್ಟಗಳನ್ನು ಒದಗಿಸಿದರೆ ನಮ್ಮಗಳ ಹಿತದ ಸಲುವಾಗಿ ಮತ್ತು ಸುಖಾನಂದಗಳನ್ನು ಒದಗಿಸಿದರೆ ನಮ್ಮಗಳ ಹಿತದ ಸಲುವಾಗಿ ಎಂದು ಮನದಲ್ಲಿ ಅಸಂತೋಷವನ್ನು ಹೊಂದದೆ ಭಾವಿಸುವದು. ನಾವು ಹೀಗೆ ಭಾವಿಸಿ ದೃಢವಾದ ಮನಸ್ಸಿನಿಂದ ನಾಮಸ್ಮರಣೆಯನ್ನು ಮಾಡುವದು. ಆ ದಯಾಳುವಾದ ಕರುಣಸಾಗರನು ನಮಗೆ ಕಷ್ಟ ಸುಖಾದಿಗಳನ್ನು ಕೊಟ್ಟು ನಮ್ಮಗಳ ಮನಸ್ಸನ್ನು ಪರೀಕ್ಷಿಸುವದಕ್ಕೋಸ್ಕರ ಈ ರೀತಿ ಮಾಡುವನು. ಆದ್ದರಿಂದ ಆತನ ಭಕ್ತಿ ಪರೀಕ್ಷೆಯು ಯಾವ ರೀತಿ ಇರುವದು ? ಎಂಬುದರ ಬಗ್ಗೆ ನಮ್ಮ ವೀರಶೈವರಲ್ಲಿ ಈಗ್ಗೆ ಎಂಟನೂರು ವರ್ಷಗಳ ಹಿಂದೆ ಆಗಿಹೋದ ಆ ಮಹಾನುಭಾವರಾದ, "ಭಕ್ತಿಭಾಂಡಾರಿ ಬಸವಣ್ಣನವರು" ತಮ್ಮ ಸರಳವಾದ ಶೈಲಿಯಲ್ಲಿ ಒಂದು ವಚನವನ್ನು ಹೀಗೆ ಹೇಳಿರುವರು.

"ತನುವನಲ್ಲಾಡಿಸಿ ನೋಡುವೆ ನೀನು, ಮನವನಲ್ಲಾಡಿಸಿ ನೋಡುವೆ ನೀನು, ಧನವನಲ್ಲಾಡಿಸಿ ನೋಡುವೆ ನೀನು, ಇದಕ್ಕೆಲ್ಲಕಂಜದಿದ್ದರೆ ಭಕ್ತಿಕಂಪಿತ ನಮ್ಮ ಕೂಡಲಸಂಗಮದೇವಾ."

ಆ ದಯಾಸಾಗರನು ನಮ್ಮಗಳಿಗೆ ಶರೀರದಿಂದ ಏನಾದರು ರೋಗಾದಿಗಳನ್ನು ಕೊಟ್ಟು ನೋಡುವನು. ಒಮ್ಮೆ ಮನಸ್ಸನ್ನು ಚಂಚಲವನ್ನಾಗಿ ಮಾಡಿ ನೋಡುವನು. ಮತ್ತೊಮ್ಮೆ ದ್ರವ್ಯವನ್ನು ಅಲ್ಲಾಡಿಸಿ ನೋಡುವನು, ದ್ರವ್ಯದಲ್ಲಿ ಅತ್ಯಂತ ಶ್ರೀಮಂತನನ್ನಾಗಿ ಒಮ್ಮೆ ಅತ್ಯಂತ ದರಿದ್ರನನ್ನಾಗಿ ಮಾಡಿ ಪರೀಕ್ಷಿಸಿ ನೋಡಿದರೂ ಕೂಡಾ ಮಾನವನು ತಾನು ಹಿಡಿದಿದ್ದ ನಿಶ್ಚಿತವಾದ ಭಕ್ತಿಯನ್ನು ತ್ಯಜಿಸದಿದ್ದರೆ ಇವನೇ ನಿಜವಾದ ನನ್ನ ಪ್ರೇಮದ ಭಕ್ತನೆಂದು ಆ ಮನುಷ್ಯ ಪ್ರಾಣಿಯನ್ನುದ್ಧರಿಸುವನು.

ಆ ಜಗದ್ ವ್ಯಾಪಕನಾದ ಪರಮಾತ್ಮನು ಕೆಲವು ದಿವಸಗಳ ಹಿಂದೆ ಭಕ್ತರನ್ನು ಹೇಗೆ ಪರೀಕ್ಷಿಸಿದನೆಂಬ ಬಗ್ಗೆ ಒಂದು ಚಿಕ್ಕ ಅನುಭವಸಿದ್ಧವಾದ ಕಥೆಯಾಗಿರುವದು. ಆದರ ಅನುಭವ ಇಂತಿರುವದು.

"ಒಂದು ಗ್ರಾಮದ ಹೊರಗೆ ಮಹಾದೇವನ ದೇವಾಲಯವಿತ್ತು. ಆ ದೇವಾಲಯದ ಪೂಜೆಯಗೋಸ್ಕರ ಕಟ್ಟು ಶಿವಭಕ್ತರಿಬ್ಬರು ಬರುತ್ತಿದ್ದರು. ಒಬ್ಬ ಭಕ್ತನು ವೈದಿಕನು ಇದ್ದನು. ಅವನು ತನ್ನ ವೈದಿಕ ಕರ್ಮಕ್ಕನುಸರಿಸಿ ಸ್ನಾನಮಾಡಿ ಮಡಿಯಿಂದ ಭಸ್ಮ, ಗಂಧ, ಹೂವು, ಪತ್ರಿ ಮೊದಲಾದ ಪೂಜಾ ಸಾಹಿತ್ಯಗಳನ್ನು ತೆಗೆದುಕೊಂಡು ಬಂದು ಪ್ರತಿನಿತ್ಯ ಆ ಮಹಾದೇವನ ಪೂಜೆಯನ್ನು ವಿಧ್ಯುಕ್ತವಾಗಿ ಮಾಡುತ್ತಿದ್ದನು. ಇನ್ನೊಬ್ಬ ಭಕ್ತನು ಕಣ್ಣಪ್ಪನೆಂಬ ಬೇಡರವನು ಇದ್ದನು. ಅವನು ಪ್ರತಿನಿತ್ಯ ದೇವರಿಗೆ ತಾನು ಬೇಟೆಯಾಡಿ ಬಂದು, ತಾನು ತಂದ ಮಾಂಸವನ್ನು ಮೊದಲು ತಾನು ರುಚಿ ನೋಡಿ, ಉತ್ತಮವೆಂದು ತನಗೆ ಅನಿಸಿದರೆ ನೈವೇದ್ಯವೆಂದು ಒಂದು ಕೈಯ್ಯಲ್ಲಿ ತೆಗೆದುಕೊಂಡು, ಮತ್ತು ದೇವರಿಗೆ ಪತ್ರಿಗಳೆಂದು ಕಾಡು ಪತ್ರಿಗಳನ್ನು ತನ್ನ ಮಸ್ತಕದ ಜಡೆಯಲ್ಲಿಟ್ಟುಕೊಂಡು, ದೇವರಿಗೆ ನೀರು ಎಂದು ಬಾಯಿಯಲ್ಲಿ ನೀರನ್ನು ತೆಗೆದುಕೊಂಡು, ಮತ್ತೊಂದು ಕೈಯ್ಯಲ್ಲಿ ತನಗೆ ಬೇಟೆಯಾಡಲು ಬೇಕಾಗುವ ಸಾಹಿತ್ಯಗಳಾದ ಬಾಣಬತ್ತಳಿಕೆಗಳನ್ನು ತೆಗೆದುಕೊಂಡು, ಈ ರೀತಿಯಾಗಿ ಪೂಜೆಗೆ ಬಂದು, ಆ ವೈದಿಕನು ಮಾಡಿದ ಪೂಜೆಯನ್ನು, ತಾನು ಕಾಲುಗಳಲ್ಲಿ ಹಾಕಿಕೊಂಡಿದ್ದ ಪಾದರಕ್ಷೆಗಳಿಂದಲೇ ಸರಿಸಿ, ತನ್ನ ಬಾಯಿಯೊಳಗಿದ್ದ ನೀರನ್ನು ದೇವರ ಮೇಲೆ ಉಗುಳಿ, ತಲೆಯ ಮೇಲಿದ್ದ ಕಾಡು ಪತ್ರಿಗಳನ್ನು ದೇವರ ಮೇಲೆ ಚಲ್ಲಿ, ಕೈಯ್ಯೊಳಗಿದ್ದ ಮಾಂಸವನ್ನು ನೈವೇದ್ಯವೆಂದು ಮುಂದೆ ಇಟ್ಟು, ನಮಸ್ಕರಿಸಿ ಶಿವ ಶಿವ ಎಂದು ಮನಸ್ಸಿನಿಂದ ನಾಮಸ್ಮರಣೆಯನ್ನು ಮಾಡಿ ಹೋಗುತ್ತಿದ್ದನು.

ಇಬ್ಬರು ಹೀಗೆ ಕೆಲವು ದಿವಸ ಪೂಜೆ ಮಾಡುತ್ತಿದ್ದರು. ಒಂದು ದಿವಸ ಬೇಡರ ಕಣ್ಣಪ್ಪನು ಬಂದು ಪೂಜೆ ಮಾಡುತ್ತಿದ್ದನು. ಅಷ್ಟರಲ್ಲಿಯೇ ಆ ವೈದಿಕನು ಬಂದು ಇವನು ಪೂಜೆ ಮಾಡುವದನ್ನು ನೋಡುತ್ತ ದೂರ ನಿಂತಿದ್ದನು. ಶ್ರೀ ನಿರಂಜನನಾದ ಪರಮಾತ್ಮನು ಈರ್ವರಲ್ಲಿ ನಿಜವಾದ ಪ್ರೇಮರವಾದ ಭಕ್ತಿಯನ್ನು ಪರೀಕ್ಷಿಸುವದಕ್ಕೋಸ್ಕರ ಗುಡಿಯನ್ನು ಸ್ವಲ್ಪ ಕೆಡವಿದನು. ಆ ವೈದಿಕನು ತನ್ನ ಮೇಲೆ ಕಲ್ಲುಗಳು ಬಿದ್ದು ಏನಾದರೂ ಪ್ರಾಣಹೋದಿತೆಂದು ತಿಳಿದು ತನ್ನ ಪೂಜಾಸಾಹಿತ್ಯಗಳ ಪರಿವೆ ಇಲ್ಲದೆ ಚಲ್ಲಿ ಓಡಿಹೋದನು. ಆ ಬೇಡರ ಕಣ್ಣಪ್ಪನು ಮಾತ್ರ ಹೀಗೆ ಮಾಡದೆ ಗಾಬರಿಯಿಂದ ನನ್ನಪ್ಪ ದೇವರಿಗೆ ಏನಾದರೂ ಪೆಟ್ಟು ತಗಲೀ

ತೆಂದು ಭಾವಿಸಿ ದೇವರ ಮೇಲೆ ಡಬ್ಬುಬಿದ್ದನು. ಆ ಕಣ್ಣಪ್ಪನ ಇಂಥ ದೃಢವಾದ ಪ್ರೇಮದ ಭಕ್ತಿಗೆ ಮೆಚ್ಚಿ ಪರಮಾತ್ಮನು ಪ್ರಸನ್ನನಾಗಿ ಹಠಾತ ದಿಂದ ಆ ಕಣ್ಣಪ್ಪನನ್ನು ಹಿಡಿದೆಬ್ಬಿಸಿದನು, ಮತ್ತು ಅವನಿಗೆ ಬೇಡಿದ ವರಗಳನ್ನು ಕೊಟ್ಟು ಕಾಪಾಡಿದನು.

ನಾವು ಮಾಡತಕ್ಕ ಭಕ್ತಿಯು ನಿಜವಾದ, ನಿತ್ಯವಾದ, ಪ್ರೇಮದ, ಪರಿಪೂರ್ಣವಾದ ಭಕ್ತಿಯು ನಮ್ಮಲ್ಲಿರಬೇಕು. ನಾವು ಸದ್ಗತಿ (ಮೋಕ್ಷ) ವನ್ನು ಹೊಂದಬೇಕಾದರೆ, ಮೇಲೆ ಹೇಳಿದ ನಿಜವಾದ ಭಕ್ತನಂತೆ ಭಕ್ತಿಯು ಇರಬೇಕು ಇದೇ ಭಕ್ತಿಯು ಮೋಕ್ಷಕ್ಕೆ ಕಾರಣವಾದ ಮಾರ್ಗಗಳಲ್ಲಿ ಎಲ್ಲಕ್ಕೂ ಹೆಚ್ಚಿನದು. ಇದೇ ತರದ ಭಕ್ತಿಯನ್ನು ನಮ್ಮಂಥ ಮಾನವ ಪ್ರಾಣಿಗಳಲ್ಲಿ ಕೊಟ್ಟು ಕಾಪಾಡಲಿ ಎಂದು ಆ ದಯಾಘನನಾದ ನಿತ್ಯ ವಾದ ಜಗತ್ಕರ್ತನಾದ, ಪರಿಪೂರ್ಣವಾದ ಆ ಪರಮಾತ್ಮನಲ್ಲಿ ಅನನ್ಯ ಭಾವದಿಂದ ಬೇಡೋಣ.

---

# "ಆತ್ಮನಿಗೂ-ದೇಹಕ್ಕೂ ಸಂವಾದ"

(ಲೇಖಕರು:— ಪರ್ವತರಾಜ ಜಿ. ಅಂಗಡಿ [ಸಂಗೊಳ್ಳಿ] ಬೆಳಗಾವ)

---

ದೇಹ:— ಎಲೈ-ಆತ್ಮನೇ? ವಸ್ತುತಃ ವಿಚಾರದಲ್ಲಿ ನಾನು ಅಜ್ಞಾನ ರೂಪನು, ಆದರೂ ನಾನು ನಿನಗಿರಲಿಕ್ಕೆ ಸದನವಾಗಿ ಅನೇಕ ಸುಖಗಳನ್ನು ಕೊಡುತಿರಲಿಕ್ಕೆ ನನ್ನನ್ನು ಯಾಕೆ ಹಳಿಯುವಿ......

ಆತ್ಮ:— ಎಲೋ! ನೀನು ಸದನವಾಗಿಗೆ ಆಗಿರುವಿ, ಸುಖವಾಗಿಗೆ ಕೊಡುವಿ, ಯಾರಿಗೆ ಉಪಕಾರ ಮಾಡುವಿ, ನಾನು ನಾಮರೂಪ ಹೀನನು, ಸರ್ವಮಂಗಳನು, ಪರಮಾತ್ಮನೇ ಇರುವೆನು.

ದೇಹ:— ನಿನಗೆ ಛಳಿ ಮಳೆ ಬಿಸಿಲು ತಗಲದಂತೆ ಹೊದಿಕೆಯಾಗಿರುವೆನು, ನಡಿಯಲಿಕ್ಕೆ ಚರಣವಾಗಿರುವೆನು, ಭುಂಜಿಸಲಿಕ್ಕೆ ವದನವಾಗಿರುವೆನು, ಗ್ರಹಿಸಲಿಕ್ಕೆ ಕರವಾಗಿರುವೆನು, ಹೀಗಿದ್ದು ಯಾಕೆ ಹಳಿಯುವಿ?

ಆತ್ಮ:— ಮಂದಮತಿಯೇ? ನಾನು ಛಳಿಯಿಂದ ಬಳಲೆನು, ನೀರಿನಿಂದ ನೆನೆಯನು, ಅಗ್ನಿಯಿಂದ ದಹಿಸೆನು, ಸದಾತೃಪ್ತನು, ನಿಂರಾಕಾರನಾದ ನನಗೆ ಅವಯುವಗಳೆಲ್ಲಿರುವವು?

ದೇಹ:— ಎಲೈ ಎನ್ನಿಂದಲೇ ನಿನಗೆ ಪೂಜ್ಯತೆಯು ಬಂದಿತು, ನನ್ನಿಂದಲೇ ನಿನ್ನನ್ನು ತಿಳದರು, ನನ್ನಿಂದ ಪ್ರತಿಷ್ಠೆಯನ್ನು ಹೊಂದಿದ ನೀನು ಹೀಗೆ ನುಡಿಯುವದು ಆಶ್ಚರ್ಯವಲ್ಲವೇ?

ಆತ್ಮ!— ಪ್ರತಿಷ್ಠೆಯು, ಪೂಜ್ಯತೆಯು, ಮಾಯಾಗುಣಾತ್ಮಕವಾದದ್ದರಿಂದ ಮಾಯಿಕವಾದ ನಿನಗೇ ಸಲ್ಲುವದಲ್ಲದೇ ಮಾಯಾತೀತನಾದ ನನಗೇನಿಲ್ಲವು.

ದೇಹ:— ಎನ್ನ ನೇತ್ರದಿಂದ ನೋಡುವಿ, ಎನ್ನ ಕರ್ಣದಿಂದ ಕೇಳುವಿ ಎನ್ನ ಜಿಹ್ವೆಯಿಂದ ನುಡಿಯುವಿ, ಎನ್ನ ನಾಸಿಕೆಯಿಂದ ಘ್ರಾಣಿಸುವಿ, ಹೀಗಿದ್ದೂ ನನ್ನ ಮೇಲೆ ತಿರುಗಿ ಬೀಳುವಿಯಾ! ..........

ಆತ್ಮಃ— ಮೂಢ ದೇಹವೇ ! ನಾನು ನೇತ್ರವಿಲ್ಲದೇ ನೋಡುವೆನು, ನಾಲಿಗೆಯಿಲ್ಲದೇ ನುಡಿಯುವೆನು, ಕಿವಿಯಿಲ್ಲದೇ ಕೇಳುವೆನು, ನಾಸಿಕವಿಲ್ಲದೇ ಘ್ರಾಣಿಸುವೆನು, ಹೀಗಿದ್ದು ಪೌರುಷ್ಯವನ್ನು ಹೇಳುವಿಯಾ! ಈಗಲೇ ನಿನ್ನನ್ನು ಭಸ್ಮ ಮಾಡುವೆನು.

ದೇಹಃ— ಇಡುವದು, ತೊಡುವದು, ಕೊಡುವದು, ಕೊಂಬುವದು, ಪರಿಮಳ ಗಂಧವನ್ನು ಹಚ್ಚುವದು, ಮಂಚದಲಿ ಮಲಗುವದು, ಸರ್ವ ಸುಖವನ್ನು ನನ್ನಿಂದಲೇ ಪಡಿಯುತ್ತಿದ್ದು ನನ್ನನ್ನೇ ನಿಂದಿಸುವಿಯಾ ?

ಆತ್ಮಃ— ಎಲೈ-ಪಾಪಿಯೇ! ಎಲ್ಲವೂ ಎನ್ನಿಂದೆಂಬ ನಿನ್ನ ನುಡಿಯನ್ನು ಕೇಳಿ ಕೋಪ ಬರುವದು, ವಿಷಯ ಸುಖಕ್ಕೆ ನೀನೇ ಭಾಗಿಯಲ್ಲದೇ, ಸದಾಸುಖಿಯಾದ ನನಗೆ ನಿನ್ನ ಸಂಬಂಧವೇನು?

ದೇಹಃ— ಎನ್ನಿಂದ ತಪ್ಪು ಏನಿರುವದು? ಸದಾ ನಿನ್ನ ಸೇವೆಯಲ್ಲೇ ನಾನು ತತ್ಪರನು. ನಾನು ನಿನಗೆ ಉಪಕಾರ ಮಾಡುವನಲ್ಲದೇ ಅಪಕಾರ ಮಾಡುವವನಲ್ಲ. ನನ್ನ ಚರಣವನ್ನು ತೊಳೆದು ಶರಣನ ಪಾದ ತೀರ್ಥವೆಂದು ನಿನಗೆ ಮರಿಯಾದೆ ಕೊಡುವರು. ಹೀಗಿದ್ದು ನನ್ನ ಮೇಲೆ ಕೋಪಿಸುವಿಯಾಕೆ?

ಆತ್ಮ:— ದೇಹವೇ? ನೀನು ಸೇವೆಯಲ್ಲಿ ಯೋಗ್ಯನಿರುವಿ, ಪರಂತು ವೃಥೋಕ್ತಿಯನ್ನು, ಬಹಳಾಡುವಿ. ಜ್ಞಾನವಿಲ್ಲದೇ ನಿನ್ನ ತೀರ್ಥದಿಂದ ಪ್ರಯೋಜನವೇನು? ನೀನು ನೀಚನಾದ ಕಾರಣ ಯೋಗ್ಯ ಶಿಕ್ಷೆ ಮಾಡುವೆನು.

ದೇಹಃ— ಶುದ್ಧಾತ್ಮನೇ? ನನ್ನ ಕೆಟ್ಟ ಬುದ್ಧಿಗೆ ಕೋಪಿಸಬೇಡ, ನಿನಗೆ ಬೇಡಿಕೊಳ್ಳುವೆನು. ನನ್ನನ್ನು ಶಿಕ್ಷಿಸಬೇಡ. ನೀನು ಯೋಗ ಪುರುಷನು ಸತ್ಯವು.

ಆತ್ಮಃ— ಎಲೋ- ಮೂರ್ಖನೇ? ನನ್ನನ್ನು ಅನೇಕ ವಿಷಯಗಳಲ್ಲಿ ಕೆಡವಿ ಅನೇಕ ಜನ್ಮಗಳಿಗೆ ಗುರಿಮಾಡಿದಿ. ಕಾರಣ ನಿನ್ನನ್ನು ಚಳಿಮಳೆಗಳಲ್ಲಿ ಕೆಡವಿ ದುಃಖಗೊಳಿಸುವೆನು.

ದೇಹಃ— ಎಲೈ-ಮಹತ್ಮನೇ! ನಿನ್ನ ತೇಜದಿಂದಲೇ ನಾನು ಜನಿಸಿರುವೆನು. ನೀನೇ ಕೈಬಿಟ್ಟರೆ ನನ್ನನ್ನು ಸಲಹುವರಾರು? ನೀನೇ ಕೋಪಿಸಿದರೆ ನನ್ನ ಗತಿಯೇನು? ದಯಮಾಡಿ ಎನ್ನಲ್ಲಿ ಕರುಣಿಸು.

ಆತ್ಮ:— ಎಲೈ— ನಿನಗೆ ಹೀನ ಪದಾರ್ಥಗಳನ್ನು ತಿನಿಸುವೆನು, ಬಟ್ಟೆಗಳನ್ನು ಕಸೆದುಕೊಳ್ಳುವೆನು. ಎಲ್ಲರಿಂದಲೂ ಹೀಯಾಳಿಸುವೆನು, ಅನೇಕ ಸಂಕಟ ಕೊಡುವೆನು. ನೀನು ಹ್ಯಾಗೆ ನನಗೆ ಮಾಡಿರುವಿಯೋ ಹಾಗೇ ಮಾಡುವೆನು.

ದೇಹ:— ಮಹನಿಯನೇ! ನಿನ್ನಾಜ್ಞೆಯಂತೆ ನಡಿಯುವೆನು, ನಿನ್ನ ಚರಣಗಳಿಗೆರಗುವೆನು. ದಯ ಮಾಡು—

ಈ ಪ್ರಕಾರ ದೇಹವು ಬೇಡಿಕೊಳ್ಳಲಾಗಿ, ದೇಹಿಯು ಹರ್ಷಿತನಾಗಿ ಎಲೈ ದೇಹವೇ ನೀನು ಯಾವ ಉಪದ್ರವಗಳನ್ನು ಮಾಡದೇ ಅಹಂಭಾವವನ್ನು ತೊರೆದು, ಆತ್ಮನನ್ನು ಹೊಂದುವನಾಗೆನಲು ದೇಹವು ಆತ್ಮನೇ ಮದಮೋಹ ಶೋಕಾದಿಗಳನ್ನು ಇರಿಸದೇ ಅಹಮಸ್ಮಿಯೆಂಬು ನಿನ್ನಲ್ಲಿ ಲೀನವಾಗುವೆನು. ಆತ್ಮನೇ ನಿನ್ನಲ್ಲೇ ಎನ್ನ ಜನನ ಲಯವಿದ್ದ ಬಳಿಕ ನಿನ್ನ ವ್ಯತಿರಿಕ್ತ ಅನ್ಯಗತಿ ಇಲ್ಲವು. ಕಾರಣ ನಿತ್ಯದಲ್ಲಿಯೂ ಬ್ರಹ್ಮಾಸ್ಮಿಯೆಂದು ಭಜಿಸುವೆನು. ದಯಮಾಡಿ ಕರುಣಿಸೆನಲು, ದೇಹಿಯು ಹರುಷಿತನಾಗಿ ತನಗೂ ದೇಹಕ್ಕೂ ಭೇದವಿಲ್ಲೆಂದು ದೇಹಾತ್ಮ ಸಾಮರಸ್ಯ ಮಾಡಿ, ಪರಂಜ್ಯೋತಿ ರೂಪನಾಗಿ, ದಗ್ಧಪಟದಂತೆ ದೇಹಧಾರಿಯೆನಿಸಿದನು. ಈ ಪ್ರಕಾರ ಸಾಧುಗಳು ದೇಹಸಹಿತ ತಾವು ಆತ್ಮರೆನಿಸಿ ನಿಶ್ಚಿಂತ ಪದವನ್ನು ಹೊಂದಿ ಸಾಕ್ಷೀಭೂತರೆನಿಸುವರು.

ಶಿವಾನುಭವಕ್ಕೆ ಇದೇ ಕಟ್ಟಕಡೆಯ ಭೆಟ್ಟಿಯು.

# ನನ್ನ ಲೇಖಗಳು.

[ಶ್ರೀಯುತ ಬ. ಚೆ. ಪಟ್ಟೇದ, ವಂಟಮುರಿ.]



ನನ್ನ ಲೇಖಗಳು ಮುಖ್ಯವಾಗಿ ವಿಜಾಪುರ "ಶಿವಾನುಭವ" ಮಾಸಿಕದಲ್ಲಿ ಪ್ರಸಿದ್ಧವಾಗಿವೆ. ಅವಕ್ಕೆ ನನ್ನ ಲೇಖಗಳೆಂಬುದಕ್ಕಿಂತ, ಶಿವಪ್ರೇರಣೆಯಿಂದುಂಟಾದ ಲೇಖಗಳೆನ್ನುವದು ಹೆಚ್ಚು (ಸಮಂಜಸ) ಸಯುಕ್ತವಾಗಿರುತ್ತದೆ. ಅವನ್ನು ನಾನು ನನ್ನ ಜಾಣತನವನ್ನು ಮೆರೆಸುವದಕ್ಕೆ ಬರೆದಿಲ್ಲ. ನಾನು ಅಂತಹ ಜ್ಞಾನಿಯೂ ಅಲ್ಲ. ಅಲ್ಪ ಸ್ವಲ್ಪ ಅರಿತವನು. ಹೀಗಿದ್ದು ಅವನ್ನು ಬರೆದುದೇಕೆಂದರೆ, ತನಗೆ ಗೊತ್ತಾಗಿರುವದನ್ನು ತನ್ನಲ್ಲಿಯೇ ಇಟ್ಟುಕೊಂಡು ಸಾಯುವದು ಸರಿಯಲ್ಲ. ಅದು ವಿನಾಕಾರಣ ವ್ಯರ್ಥವಾಗಿ ಹೋಗುವದು. ಹೀಗೇನು ಪೂರ್ವಜರು ಮಾಡಿಲ್ಲ. ತಾವು ಅರಿತುದು ಮುಂದಿನವರಿಗೆ ತಿಳಿಯಲಿ; ಅದರಲ್ಲಿಯ ಸ್ವೀಕರಿಸಲು ಯೋಗ್ಯವಾದ ವಿಷಯಗಳು ಅವರಿಗೆ ಗೊತ್ತಾಗಲಿ; ಅದರಿಂದ ಅವರದೂ ಮುಂದಿನವರದೂ ಪ್ರಗತಿ ಸಾಧಿಸಲಿ ಎಂದು ಗ್ರಂಥರೂಪದಲ್ಲಿ ಬರೆದು ಇಟ್ಟಿರುವರು. ಈ ರೀತಿ ಅವರು ಮಾಡದಿದ್ದರೆ, ಜ್ಞಾನವು ಪ್ರಗತಿ ಹೊಂದುತ್ತ ಹೊಂದುತ್ತ ಅದು ವಿಜ್ಞಾನ ಇಲ್ಲವೆ ಸಮ್ಯಗ್‌ಜ್ಞಾನದ ಸ್ವರೂಪಕ್ಕೆ ಬರುತ್ತಿದ್ದಿಲ್ಲ. ನಮ್ಮಲ್ಲಿ ಕೆಲವರಿಗೆ ಎಷ್ಟೋ ವನಸ್ಪತಿಗಳ ಸದುಪಯೋಗದ ಜ್ಞಾನವಿದ್ದರೂ ಅವರು ಅದನ್ನು ಬೇರೆ ಜನರಿಗೆ ತಿಳಿಸುವದಿಲ್ಲ. ತಾವೇ ಅದರ ಲಾಭ ಪಡೆಯಬೇಕೆಂಬ ದುರಾಸೆಗೆ ಬಿದ್ದು ಸತ್ತು ಹೋಗುವದನ್ನು ನಾವು ಪ್ರತ್ಯಕ್ಷ ನೋಡುತ್ತಿದ್ದೇವೆ. ಅಷ್ಟೇಕೆ, ತಮ್ಮ ಮಕ್ಕಳಿಗೂ ಕೂಡ ಅವರು ಹೇಳುವದಿಲ್ಲ. ನೋಡಿರಿ ಇದೆಂತಹ ದಡ್ಡತನ! ಇದರಿಂದ ಅವರಿಗೆ ತಿಳಿದುದು ಅವರಷ್ಟಕ್ಕೇನೇ ಮಣ್ಣುಗೂಡಲಿಲ್ಲವೇ? ಈ ರೀತಿ ವಿಚಾರಕ್ಕೊಳಗಾಗಿ, ನಾನು ನನ್ನ ಲೇಖಗಳನ್ನು ಯಾವಾಗಲೂ ಪ್ರಸಿದ್ಧಿಸುತ್ತಿರುವೆನು. ಅದರಲ್ಲಿ ಯಾರ ನಿಂದೆಯನ್ನೂ ಸಹಸಾ ಮಾಡುವ ಉದ್ದೇಶವಿರುವದಿಲ್ಲ. "ನಿಂದಿಸಿ ನುಡಿಯದಿರಾರನು. ಮನಸಿಗೆ ಬಂದಂತೆ ನಡೆಯದಿರು" ಎಂಬ ಮಹನೀಯರು ಹೇಳಿದುದನ್ನು ನಾನು ಬಲ್ಲೆ. ನನ್ನಿಂದ

ಅನ್ಯರಿಗೇನಾದರೂ ಸೇವೆ ಸಲ್ಲಲೆಂದು ನಾನು ಹಾತೊರೆಯುತ್ತಿರುವೆನು. "ಪರೋಪಯೋಗಾಯ ಇದಂ ಶರೀರಂ॥" ಎಂದು ಹೇಳಿದುದನ್ನು ಎಲ್ಲರೂ ನೆನಿಸಬೇಕಲ್ಲದೆ ನೀಚ ಸ್ವಾರ್ಥಕ್ಕೆ ಬಿದ್ದು ತಮಗೆ ಗೊತ್ತಾದುದನು ಮುಚ್ಚಿಕೊಂಡು ಕೂಡ್ರಬಾರದು. ಅದನ್ನು ತಿಳಿಯಲಪೇಕ್ಷಿಸುವವರಿಗೆ ಅವಶ್ಯವಾಗಿ ಹೇಳಲೇಬೇಕು. "ಯಾರ ದುಡಿತ (ಶ್ರಮ) ಸೇವೆ ಪರರಿಗೋಸ್ಕರ ಸಲ್ಲುವದೋ ಅವರೇ ಧನ್ಯರು." ಹೀಗೆ ಉದಾರ ಬುದ್ಧಿಯಿಂದ ವರ್ತಿಸುವದೇ ಜನ್ಮ ಸಾರ್ಥಕ್ಯದ ಗುರಿಯು. ಮನುಷ್ಯರಾಗಿ ಹುಟ್ಟಿ ಇಂತಹ ಗುರಿಯನ್ನಿಟ್ಟುಕೊಳ್ಳದಿದ್ದರೆ, ಅದಾವಾಗ ಅದನ್ನು ಅನುಸರಿಸುವದು ? ಇರಲಿ.

ನಾನು ಶಿವಾನುಭವದಲ್ಲಿ ಬರೆದ ಲೇಖಗಳನ್ನು ಓದಿದ ಕೆಲವರು ಸರಳ ಹೃದಯರು, ಅವನ್ನು ಶ್ಲಾಘಿಸುವರು; ಪತ್ರ ಮುಖದಿಂದ ಉದ್ಗಾರ ತೆಗೆದಿರುವರು; ಸಮಕ್ಷಮ ಹೇಳಿರುವರು ಆದರೂ ಅವನ್ನು ಬಹುಜನ ಮುಂದಾಳುಗಳು (ಗುರುವರ್ಗದವರು) ಸಮ್ಮತಿಸುವದಿಲ್ಲ. "ನಿಮ್ಮ ಮತಗಳು ಅವರಿಗೆ ತಿರಸ್ಕೃತವಾಗಿ ತೋರುತ್ತಿವೆ" ಎಂಬ ಉಲಿಯೂ ನನ್ನ ಕಿವಿಯಮೇಲೆ ಬಂದಿದೆ. ಅವರು ಹೀಗೆ ತಮ್ಮೊಳಗೇ ಆ ಅಭಿಪ್ರಾಯವನ್ನು ಇಟ್ಟುಕೊಂಡು ಸುಮ್ಮನೇ ಕೂಡ್ರದೆ; ಅವನ್ನು ಬರೆದು ಪ್ರಸಿದ್ಧಿಸಿ ನನ್ನ ತಪ್ಪು ತಿದ್ದಬೇಕು. ಅದರಿಂದ ಅವರು ನನ್ನ ಉದ್ಧಾರಕ್ಕೆ ಕೈ ಚಾಚಿದಂತಾಗುವದು. ಉದಾರಧೀಗಳಾಗುವರು, ಪುಣ್ಯಭಾಜನರಾಗುವರು. ಬರಿಯ ಹಿಂದೆಯೇ ಮನಸ್ಸಿನಲ್ಲಿ ಸಂತಾಪಿಸುವದು ಅವರಿಗೆ ಭೂಷಣವಲ್ಲ. ಮುಂದೆ ಬರಲು ಧೈರ್ಯಪಡದಿದ್ದರೆ, ಅವರು ಹೀನವೃತ್ತಿಯವರು. ತಮ್ಮ ಜನ್ಮೋದ್ಧಾರವನ್ನು ಸಹ ಅಲಕ್ಷಿಸುವವರು, ಎಂಬುದು ಸ್ಪಷ್ಟವದೆ.

ನಾನು ನನ್ನ ಲೇಖಗಳನ್ನು ಒಳಿತಾಗಿ ವಿಂಗಡಿಸಿ, ಸ್ಪಷ್ಟೀಕರಿಸಿ, ಸಾಮಾನ್ಯ ಬುದ್ಧಿಯವರಿಗೂ ಸಹ, ಮನಂಬುಗುವಂತೆ ಬರೆಯುತ್ತಿರುವೆನು. ಹೀಗೆ ಯಾವದೊಂದು ಮುಚ್ಚು ಮರೆಯಿಲ್ಲದೆ, ತೀರ ತೆರೆದು ಬರೆಯುವದು, ಆ ಮುಂದಾಳು ವರ್ಗದವರ ಮನಸ್ಸಿಗೆ ಬರುವದಿಲ್ಲೆಂದು ತೋರುತ್ತದೆ. ಹಾಗೆ ಮಾಡಿದರೆ, ವಿಷಯದ ಅತಿ ಪರಿಚಯವಾಗಿ, ಆ ಬಗೆಗೆ ಜನರಲ್ಲಿ ಅವಜ್ಞೆಯುಂಟಾಗುವದೆಂಬುದು ಅವರ ಮತ. ಗೂಢ ವಿಷಯಗಳನ್ನು ಯಾವಾಗಲೂ ಮುಚ್ಚಿಯೇ ಇಡಬೇಕು. ಬೇಕಾದವರು 'ತಮಗೆ ಶರಣು ಬಂದು ತನು-ಮನ ಧನಗಳನ್ನು ಸಾಷ್ಟಾಂಗ ನಮಸ್ಕಾರಪೂರ್ವಕ

ಗುರುವಿಗೆ (ತನಗೆ) ಸಮರ್ಪಿಸಿ, ಅವನ್ನು ಅರಿಯಬೇಕು. ಸರ್ವ ರೀತಿಯಲ್ಲಿ ಅವರು ತಮಗೆ ಅಂಕಿತರಾಗಿ, ಪರಿಪರಿಯಿಂದ ತನಗೆ ಸೇವೆಯನ್ನು ಒದಗಿಸುತ್ತಿರಬೇಕು.' ಎಂದು ಅವರ ಮನ್ಸೀಷೆ. ನನ್ನ ಲೇಖಗಳು ಅವರ ಈ ಅಪೇಕ್ಷೆಗೆ ಅಡ್ಡಾಗುತ್ತವೆ. ಅಂತೇ ಅವರು ಅವನ್ನು ತಿರಸ್ಕರಿಸುತ್ತಿರಬಹುದೆಂದು ನನಗನಿಸುತ್ತಿದೆ. ಅವುಗಳಲ್ಲಿ ಯಾರದೇನೂ ನಿಂದೆಯಿಲ್ಲ. ಅರಿಯದವರಿಗೆ ತಿಳಿಯುವಂತೆ ವಿವರವಾಗಿ ಮಾತ್ರ ಬರೆಯಲ್ಪಟ್ಟಿವೆ. ತಪ್ಪುಗಳಿದ್ದರೆ ತಿಳಿಸಬೇಕು. ನಾನು ಅದರ ಉಪಕಾರ ನೆನೆಸುವುದಲ್ಲದೆ ಅಭಿನಂದನವನ್ನೂ ಮಾಡುವೆನು. ಬರೇ ನನ್ನ ಸೇವೆಯನ್ನು ಸಲ್ಲಿಸುವ ಉದ್ದೇಶವೇ ಅವುಗಳಲ್ಲಿರುವದು.

ಗೂಢ ವಿಷಯಗಳನ್ನು ಮುಚ್ಚಿಯೇ ಇಡಬೇಕೆಂದರೆ, "ಪುರಾ ಸಾನಂದ ಯೋಗೀಶ: ಶಿವಜ್ಞಾನ ಪರಾಯಣ: । ಪಂಚಾಕ್ಷರಂ ಸಮುಚ್ಚಾರ್ಯ ನರಕಾತ್ತಾನ್ (ನರಕಾತ + ತಾನ್ ನರಕ ವಾಸಿಗಳನ್ನು) ಅದಾರಯತ್।" ಎಂದು ನಿಜಗುಣ ಶಿವಯೋಗಿಗಳ ಕೈವಲ್ಯ ಪದ್ಧತಿಯಲ್ಲಿರುವದು. ಸದಾನಂದ ಯೋಗೀಶನು (ಆನಂದದಿಂದ ಕೂಡಿಕೊಂಡ ಶಿವನಲ್ಲಿ ಬೆರೆದಿರುವ ಮಹಿಮನು) ಸತ್ಪುರುಷನು, ಶರಣನು ನರಕ-ದುಃಖದ ಹೊರತು ಬೇರೊಂದಲ್ಲ.) ಪ್ರಪಂಚದಲ್ಲಿ ನಿಮಗ್ನರಾಗಿರುವ ಜನರೆಲ್ಲರೂ ನರಕಿಗಳೇ! ಅವರು ಸದಾ ದುಃಖದಲ್ಲಿಯೇ ಕೊಳೆಯುತ್ತಿರುವರು. ಇಂತಹರ ಉದ್ಧಾರವಾಗಬೇಕೆಂದು ಆ ಯೋಗೀಶನು ಪ್ರಸಿದ್ಧವಾಗಿಯೇ ಎಲ್ಲರಿಗೂ ತಿಳಿಯುವಂತೆಯೇ ಶಿವಪಂಚಾಕ್ಷರಿ ಮಂತ್ರವನ್ನು ಒದರಿ ಉಚ್ಚರಿಸಿದನು. ಅದು ಆ ದುಃಖಿತರ ಕಿವಿಗೆ ಬಿದ್ದು, ಸ್ಮರಣದಲ್ಲುಳಿದು, ತಾವೂ ಅದರಂತೆ ಉಚ್ಚರಿಸಿ, (ಜಪಗಯ್ದು) ನರಕದಿಂದ ಬಿಡುಗಡೆಹೊಂದಿ ಮುಕ್ತರಾದರು, ಎಂದು ಅಲ್ಲಿ ಬರೆಯಲಾಗಿದೆ. ಇದು ಏಕೆ ಅವಜ್ಞೆಗೆ ಕಾರಣವಾಗಲಿಲ್ಲ! ಸಿದ್ಧಾರೂಢರು ಸದ್ಗುರುಗಳಾದರೂ ಸಾನಂದ ಯೋಗೀಶ್ವರರೇ! ಅವರೂ ಜನರ ಉದ್ಧಾರಕ್ಕಾಗಿ, ಪಂಚಾಕ್ಷರಿ ಮಂತ್ರವನ್ನು ಜನಸಮುದಾಯಕ್ಕೇ ಒತ್ತಿ ಹೇಳಿರುವರು. ಅದನ್ನು ಕೇಳಿದ ಅವರ ಶಿಷ್ಯರು ಕೂಡ ಈಗಲೂ ಆ ಮಂತ್ರವನ್ನು ಮುಚ್ಚುಮರೆಯಿಲ್ಲದೆ ಪ್ರಸಿದ್ಧವಾಗಿ ಭಜನೆಯಲ್ಲಿ ಕುಣಿಕುಣಿದು ಅನ್ನುತ್ತಿರುವರು. ಇದು ಸರಿಯಲ್ಲವೆಂದೇ ಗುರುವರ್ಗದವರ ಮತವು. ಅಂತಹ ಜನರನ್ನೆಲ್ಲ ಇದರು ಕಟುವಾಗಿ ಟೀಕಿಸುವರು; ತಿರಸ್ಕರಿಸುವರು. ಆದರೂ "ಭಾವನೆಯಂತಿಹುದಂತೆ ಫಲಂಗಳ್" ಎಂಬುದು

ಸುಪ್ರಸಿದ್ಧವಿರುವದು. ಆ ಪ್ರಕಾರ ಅವರ ಭಾವನೆಯಂತೆ ಅವರಿಗೆ ಫಲ ಪ್ರಾಪ್ತಿಯಾಗಲೇಬೇಕು. ಅಂತೇ ಅವರು "ಸಿದ್ಧಾರೂಢ ಸದ್ಗುರು ತಂದೆ ಉದ್ಧಾರಾದೆವು ನಿನ್ನಿಂದೆ" ಎಂದು ಭಕ್ತಿಪೂರ್ವಕವಾಗಿ ಮ್ಮ ಜಗದ್ಗುರ್ರು ಗಳನ್ನು ಸ್ಮರಿಸುವರು. ಇದೆಲ್ಲ ಯೋಗ್ಯವು. ಆದರೆ ಅವರು ಅಪೇಯ ಪಾನಾದಿಗಳಿಗೆ ಒಳಗಾಗುವದು ಮಾತ್ರ ಅಪರಾಧ.

ಇದರಂತೆಯೇ ನಾಗಲಿಂಗಪ್ಪನೆಂಬ ಒಬ್ಬ ಸತ್ಪುರುಷನು ಸವದತ್ತೀ ತಾಲೂಕಿನಲ್ಲಿ ಸುಮಾರು ೬೦|೭೦ ವರ್ಷಗಳ ಹಿಂದೆ ಆಗಿ ಹೋದನು. ಆತನು ಮಹಾ ಸತ್ಪುರುಷನೇ! ಆದರೆ ಇವರೀರ್ವರನ್ನು ಯಾರೂ ಪುರಸ್ಕರಿಸುವದಿಲ್ಲ. ಗುರುವರ್ಗದವರ ಅವಹೇಳನೆಗೇನೇ ಅವರು ತಕ್ಕವ ರಾದರು.

ನಿಜಗುಣಶಿವಯೋಗಿಗಳು ಮೂಲತಃ ಆರಾಧ್ಯರೇ! ಆದರೂ ಅವರು ತಮ್ಮ ಆರಾಧ್ಯ ಮತಕ್ಕಿಂತ, ಪ್ರಮಥರಿಂದ ಸ್ಥಾಪಿತವಾದ ವೀರಶೈವ (ಲಿಂಗವಂತ) ಮತವು ಪ್ರಗತಿಪರವಾದ-ದೆಂಬುದನ್ನು ಗಮನಿಸಿ, ಆರಾಧ್ಯ ತ್ವದ ಒಣ ಅಭಿಮಾನಕ್ಕೊಳಗಾಗದೇ, ಬಹು ಅಂಶದಿಂದ, (೧೦೦ಕ್ಕೆ ೯೦/೯೫ ಪಾಲು) ಪ್ರಮಥರ ಮಾರ್ಗವನ್ನೇ ಅವಲಂಬಿಸಿ, ಬೆಳಕಿಗೆ ಬಂದು, "ಶಿವಯೋಗಿ' ಗಳೆಂದು ಹೆಸರಾದರು. ಅವರ ಗ್ರಂಥಗಳನ್ನು ನೋಡಿದ ವರಿಗೆ ಇದು ಸ್ಪಷ್ಟವಾಗಿ ಹೊಳೆಯುವದು. ಅವರನ್ನು ಬ್ರಾಹ್ಮಣಾಚಾರಿ ಗಳು ಸ್ವಲ್ಪವೂ ಪುರಸ್ಕರಿಸುವದಿಲ್ಲ. ಆದರೆ ನಿಜಗುಣರೇನು ಅಜ್ಞಾನಿ ಗಳಲ್ಲ; ಅಪಾರ ಜ್ಞಾನಿ ನಿಧಿಗಳು. ಹೀಗಿದ್ದು ತಿರಸ್ಕಾರವೇಕೆಂದರೆ, ಅವರು ಪ್ರಮಥಾನುಯಾಯಿಗಳಾಗಿ, ಆ ರೀತಿ ಗ್ರಂಥಗಳನ್ನು ರಚಿಸಿದರು.

ಈಗೀಗ ನಮ್ಮ ಗುರುವರ್ಗದವರು, ನಿಜಗುಣ ಶಿವಯೋಗಿಗಳ ವಾರ್ಷಿಕ ಮಹೋತ್ಸವಗಳು, ಎಲ್ಲೆಡೆಗೂ ನಡೆಯಬೇಕೆಂದು ಯತ್ನಿಸು ತ್ತಿರುವರು. ಇದು ಸ್ತುತ್ಯವೇ ಸರಿ! ಆದರೆ ಇವರ ಶಿವಯೋಗಿತ್ವ ವನ್ನು ಹಿಂದಕ್ಕೆ ಸರಿಸಿ, ತಮ್ಮಂತೆ ಆರಾಧ್ಯರೆಂಬುದನ್ನು ಮುಂದಿಟ್ಟು ಕೊಂಡು, ಅವರ ವಾರ್ಷಿಕೋತ್ಸವದ ಸಿದ್ಧತೆ ನಡೆದಿದ್ದರೆ ಮಾತ್ರ, ಅದು ಗೌಣ! ಅವರ ಬೆಳಕಿನಲ್ಲಿಯೇ ತಾವು ಬೆಳಗಬಹುದೆಂದು, ತಿಳಿದಿದ್ದರೆ ಅದು ತಪ್ಪು! ಅದರಂತೆಯೇ ತಾವು ಆರಾಧ್ಯತ್ವವನ್ನು ಸರಿಸಿ, ಪ್ರಮ ಥರ ಮಾರ್ಗವನ್ನನುಸರಿಸಿದರೆ ಮಾತ್ರ, ಪ್ರಕಾಶವಂತರಾಗುವರು. ನಾನು

ಗುರುವರ್ಗದವರಿಗೆ ಇದನ್ನೇ ಮೇಲಿಂದ ಮೇಲೆ ಹೇಳುತ್ತ ಬಂದಿರುವೆನು. "ನ ಬ್ರೂಯಾತ್ ಸತ್ಯಮಪ್ರಿಯಮ್" ಎಂಬಂತೆ ನಾನು ಅವರಿಗೆ ಅಪ್ರಿಯನೂ ತಿರಸ್ಕೃತನೂ, ಆಗಿರುವೆನು. ಇದಕ್ಕೆ ನನ್ನ ಉಪಾಯವಿಲ್ಲ. ಆದರೂ ಅವರು—"ಅಪ್ರಿಯಸ್ಯ ತು ಪಥ್ಯಸ್ಯ ವಕ್ತಾ ಶ್ರೋತಾ ಚ ದುರ್ಲಭಃ" ಎಂಬುದನ್ನು ನೆನೆಸಬೇಕೆಂದು; ನಾನು ನಮ್ರತೆಯಿಂದ ಬೇಡಿಕೊಳ್ಳುವೆನು.

ಅಥಣಿಯ ಶ್ರೀ ಮುರಿಗೆಪ್ಪನವರೂ, ಮುಳುಗುಂದದ ಬಾಲಮುಕುಂದ ಸ್ವಾಮಿಗಳೂ ಮೊದಲಾದವರು ಗುರುವರ್ಗದವರೇ ಆಗಿದ್ದು, ಅವರು ಒಳ್ಳೇ ಬೆಳಕಿಗೆ ಬಂದು, ಶಿವಸಾಯುಜ್ಯವನ್ನೈದಿದರು. ಆದರೆ ಅದು ಯಾವಾಗ! ಅವರು ತಮ್ಮ ಆರಾಧ್ಯತ್ವಕ್ಕೆ ಶರಣು ಹೊಡೆದು, ಪ್ರಮಥರ ಮಾರ್ಗಾನುಯಾಯಿಗಳಾಗಿ, ಹೊನ್ನು ಹೆಣ್ಣು ಮಣ್ಣುಗಳನ್ನು ಅಲ್ಲಗಳೆದು, ಷಟ್‌ಸ್ಥಲ ಮಾರ್ಗವನ್ನು ಸ್ವೀಕರಿಸಿದಾಗ! ಈಗ ಬಹುಕಡೆಗೆ ಮುಪ್ಪಿನವರಾದ ವಿರಕ್ತರು, ತಮ್ಮ ಶಿಷ್ಯರಿಗೆ ಮಠಾಧಿಕಾರವನ್ನು ಸ್ವೀಕರಿಸಿ, ತಾವು ಆ ಜಂಜಡದಿಂದ ಅಥಣಿಯ ಸ್ವಾಮಿಗಳಂತೆ ಮುಕ್ತರಾಗಿ, ಪ್ರಮಥರ ಮಾರ್ಗವನ್ನೇ (ಶ್ರೀ ಪ್ರಭುದೇವರ ಪದ್ಧತಿಯನ್ನೇ) ಅನುಸರಿಸುತ್ತಿರುವದು ಕಂಡುಬರುತ್ತಿದೆ. ಇತ್ತ ಗುರುವರ್ಗದವರು ಗಮನಿಸುವರೇ!

ಇಲ್ಲಿಗೆ ಈ ಮುಖ್ಯ ಲೇಖವು ಮುಗಿಯಿತು. ಇನ್ನು ನನ್ನ ಆ ಹಿಂದಿನ ಲೇಖಗಳಲ್ಲಿ ತಿಳಿಯದೆ ಬಿದ್ದಿರುವ, ಎದ್ದು ಕಾಣುವ, ತಪ್ಪುಗಳನ್ನು ತಿದ್ದಿ, ಒಪ್ಪಾದುವನ್ನು ಬರೆದು, ಈ ಲೇಖವನ್ನು ಸಮಾಪ್ತಿಗೊಳಿಸುವೆನು. ಅವು:-

೧. ಏಕಾದಶ ಪ್ರಸಾದ ಲೇಖದೊಳಗೆ, ಹತ್ತನೆಯದಾದ ಸಮತಾಪ್ರಸಾದವು:— ಇಲ್ಲಿ ಸಮತಾ ಪ್ರಸಾದವೆಂದರೆ, ಸಮತ್ವದ ಪ್ರಸಾದವೆಂದು ತಿಳಿದಿರುವೆನು. ಅದು ತಪ್ಪು. ಸಮತೆ (=ಸ+ಮತ= ಮತದಿಂದೊಡಗೂಡಿದ) ವೆಂದರೆ ವೀರಶೈವ ಮತಕ್ಕೆ ಸಮ್ಮತವಾದ ಪ್ರಸಾದವೆಂದರಿಯಬೇಕು. ಹಿಂದಿನ ಒಂಬತ್ತು ಪ್ರಸಾದಗಳನ್ನು ಸರಿಯಾಗಿ ಆಚರಿಸುವದೆ ಸಮತಪ್ರಸಾದವು.

೨. ಏಕೋತ್ತರಶತಸ್ಥಲದೊಳಗಿನ, ಪ್ರಾಣಲಿಂಗಿಯ ಅಂಗಸ್ಥಲದೊಳಗಿನ, ೪ನೆಯ ಹಾಗೂ ೫ನೆಯ ಸ್ಥಲಗಳು ತಪ್ಪಿರುವವು. ಅವುಗಳ ವಿಶದೀಕರಣವು:— ನಾಲ್ಕನೆಯದು ಲಿಂಗ ನಿಜಸ್ಥಳ:— ಮಹೇಶ್ವರನ ಅಂಗಸ್ಥಳಗಳಲ್ಲಿ ಒಂಬತ್ತನೆಯದು, "ಭಕ್ತದೇಹಿಕ ಲಿಂಗಸ್ಥಳ"ವೆಂಬುದಿದೆ.

ಆದಕ್ಕೂ ಮುಂದೆ ಹೋಗಿ, ಈ ಲಿಂಗ ನಿಜಸ್ಥಳವನ್ನು ಹೇಳಿದ್ದಾರೆ. ಭಕ್ತನ ದೇಹದಲ್ಲಿಯೇ ಅಂಗಗಳೆಂಬ ವಿಭಾಗಗಳನ್ನು ಮಾಡಿದ್ದಾರೆ. ಅವು ಕೆಳಗೆ ಬರುವವು:—

ಐದನೆಯದಾದ ಅಂಗ ಲಿಂಗಸ್ಥಳ:— ಅಂಗಗಳು ಹನ್ನೆರಡು:— (೧) ತ್ಯಾಗಾಂಗ; (೨) ಭೋಗಾಂಗ; (೩) ಯೋಗಾಂಗ; (೪) ಭಕ್ತಾಂಗ (ಈಶ್ವರಾಂಗ); (೫) ಮಹೇಶ್ವರಾಂಗ; (೬) ಪ್ರಸಾದ್ಯಂಗ; (೭) ಪ್ರಾಣಲಿಂಗ್ಯಂಗ; (೮) ಶರಣಾಂಗ (೯) ಐಕ್ಯಾಂಗ; (೧೦) ಸ್ಥೂಲಾಂಗ; (೧೧) ಸೂಕ್ಷ್ಮಾಂಗ; (೧೨) ಕಾರಣಾಂಗ. ಇನ್ನು ಲಿಂಗಗಳಾದರೂ ಹನ್ನೆರಡು ಅವೆ:— ಅವು ಈ ಅಂಗಗಳಲ್ಲಿ ಕ್ರಮವಾಗಿ ವಾಸಿಸುವವು.

(೧) ಇಷ್ಟಲಿಂಗ; (೨) ಪ್ರಾಣಲಿಂಗ; (೩) ಭಾವಲಿಂಗ; (೪) ಆಚಾರಲಿಂಗ; (೫) ಗುರುಲಿಂಗ; (೬) ಶಿವಲಿಂಗ; (೭) ಚರ (ಜಂಗಮ) ಲಿಂಗ; (೮) ಪ್ರಸಾದಲಿಂಗ; (೯) ಮಹಾಲಿಂಗ; (೧೦) ನಿಷ್ಕಲಲಿಂಗ; (೧೧) ನಿಃಶೂನ್ಯಲಿಂಗ; (೧೨) ನಿರಂಜನಲಿಂಗ. ಹೀಗೆ ತಿಳಿಯುವದೇ ಅಂಗ-ಲಿಂಗಸ್ಥಳವು.

೩. ಷಟ್-ತ್ರಿಂಶತ್‌ಸ್ಥಲದೊಳಗಿನ ಐಕ್ಯಸ್ಥಳದ ಲಿಂಗಸ್ಥಳಗಳು ತಪ್ಪಿರುವವು. ಅವುಗಳ ಸ್ಪಷ್ಟೀಕರಣವು—

ಪಿಂಡಜ ಲಿಂಗ:— ಅನೇಕ ಜನ್ಮಗಳಲ್ಲಿ ಮಾಡಿದ ಪುಣ್ಯಪರಿಪಾಕದಿಂದ, ಪಾಪನೆಲ್ಲ ನಷ್ಟವಾಗಿ, ಕೇವಲ ಪುಣ್ಯಮಯನಾದ ಜೀವನೇ ಪಿಂಡವು. ಇಂತಹ ಪಿಂಡದಿಂದ ಜನಿಸಿದ ಲಿಂಗವೇ ಪಿಂಡಜ ಲಿಂಗವು.

ಅಂಡಜ ಲಿಂಗ:— ಜಗತ್ತಿನ ಇಡಿ ಸ್ವರೂಪವೇ ಬ್ರಹ್ಮಾಂಡವು. ಬ್ರಹ್ಮನ ಅಂಶಗಳು (ಬಿಂದುಗಳು) ಸಿಡಿದು ಹೋಗಿ, ಜಗದೊಳಗಿನ ಬೇರೆ ಬೇರೆ ಪದಾರ್ಥಗಳಲ್ಲಿ, ಚೈತನ್ಯ ರೂಪದಿಂದ ವಾಸಿಸುತ್ತವೆ. ಅದರಂತೆ ಮನುಷ್ಯನ ಶರೀರವೊಳಗೂ, ಜೀವರೂಪದಿಂದ ಇರುತ್ತದೆ. ಆದುದರಿಂದ ಪರಮಾತ್ಮನ ಸ್ವರೂಪವಾದ ಈ ಜೀವವೇ ಅಂಡಜ ಲಿಂಗವು.

ಬಿಂದ್ವಜಲಿಂಗ:— ಬಿಂದು+ಅ-ಜ=ಬಿಂದ್ವಜ. (ಬಿಂದುವಿನಿಂದ ಹುಟ್ಟದೆ ಇದ್ದುದು) ಇಂತಹ ಲಿಂಗವೇ ಬಿಂದ್ವಜ ಲಿಂಗವು. ಬಿಂದುವಿ

ನಿಂದ ಹುಟ್ಟದೆ ಇದ್ದುದು ಅಂದರೆ, ಅದರಾಚೆ ಇರುವ ನಾದದಿಂದ ಜನಿಸಿದುದೆಂದು ತಿಳಿಯಬೇಕು. ಮಂತ್ರವೆಲ್ಲ ನಾದಮಯ—ಆ ಕಾರಣ, ಗುರುಮುಖದಿಂದ ಮಂತ್ರವನಾಲಿಸಿ, ಅದನ್ನು ಜಪಿಸಿ, ತತ್ಸ್ವರೂಪವಾದುದೇ (ಮನೋರ್ಲಯವಾದುದೇ) ಬಿಂದ್ವಜಲಿಂಗವು.

೪. ಅವಸ್ಥೆಗಳನ್ನು ಕುರಿತು ಬರೆದ ಲೇಖದಲ್ಲಿ, ನಾಲ್ಕನೆಯದಾದ ತುರೀಯಾವಸ್ಥೆಯು ತಪ್ಪಿದೆ. "ಲಿಂಗವು ಕಮಲದಿಂದ ಹೊರಬಿದ್ದರೆ" ಎಂಬುದನ್ನು "ಲಿಂಗವು ಜಗತ್ತಿನಲ್ಲಿ ಸೇರಿದರೆ" ಎಂದು ಆಗ ತಿಳಿದದೆ. ಅದು ಜಗದಲ್ಲಿ ಅಲ್ಲ! ಲಿಂಗವು (ಮಹಾಲಿಂಗವು—ಇದು ಕಲಾಲಿಂಗ) ಕಮಲ. (ಆಜ್ಞಾಚಕ್ರ) ದಿಂದ ಹೊರಬಿದ್ದರೆ; ಅಂದರೆ ಕಲೆಯು ಬಿಂದುವಿನಲ್ಲಿ ಸೇರಿದರೆ, ಅದು ತುರೀಯಾವಸ್ಥೆಯಾಗುವದು. ಮುಂದೆ ಲಿಂಗವು ನಾದದಲ್ಲಿ ಬೆರೆದರೆ ತುರೀಯಾತೀತ ಅವಸ್ಥೆಯು.

೫. ಹಿಂದೆ ಜಪಗಳ ಲೇಖದೊಳಗೆ 'ಸೋಹಂ' ದ ಬಗೆಗೆ ಬರೆದುದು ಅಷ್ಟೇನು ಸ್ಪಷ್ಟವಾಗಿಲ್ಲ. ಆದುದರಿಂದ ಇಲ್ಲಿ ಅದನ್ನೇ ಮತ್ತಿಷ್ಟು ವಿಶದವಾಗಿ ಕೆಳಗೆ ಬರೆದದೆ—

ಸೋಹಂ {
(೧) ಸಃ + ಹಂ = { ಸಃ = ಅವನು. ಇಲ್ಲವೆ ಶಿವನು.
ಹಂ = "ಹ" ಕಾರವು. ಇಲ್ಲವೆ ನಿರಂಜನಲಿಂಗವು. / ಪ್ರಣವವು.

(೨) ಸಃ + ಅಹಂ { ಸಃ = ಅವನು ಇಲ್ಲವೆ ಶಿವನು.
ಅಹಂ = ನಾನು / ಜೀವನು ಇಲ್ಲವೆ 'ಹ'ಕಾರವಲ್ಲದ-ಅಸತ್ತದ 'ಅಲ್ಲವೆ ಬದಲಾಗುವ ಸತ್ತು ಎನಿಸುವ ಜಗತ್ತು. / ಶಕ್ತಿ

ಇನ್ನು ಹಲಕೆಲವು ಚಿಕ್ಕಪುಟ್ಟ ದೋಷಗಳು ಹೊರಡಬಹುದು. ಅವನ್ನು ಸುಜ್ಞ ವಾಚಕರು ತಾವೇ ದಯವಿಟ್ಟು ತಿದ್ದಿಕೊಳ್ಳುವರೆಂದು ನಂಬಿ ಈ ಲೇಖವನ್ನು ಮುಗಿಸುವೆನು. ಶಿವಾನುಭವದ ವಾಚಕ ವೃಂದಕ್ಕೂ, ಸನ್ಮಾನ್ಯ ಸಂಪಾದಕರಿಗೂ ಲೋಭವಿರಲೆಂದು ಪ್ರಾರ್ಥಿಸುತ್ತೇನೆ.

---

# ವೇದಪೂರ್ವ ವೀರಶೈವ ಧರ್ಮ

[ಲೇ: ಶ್ರೀಯುತ ಎನ್. ಎಸ್. ವಿರೂಪಾಕ್ಷಯ್ಯ, ಬೆಂಗಳೂರು]

---

"ವಚನಧರ್ಮ ಅರ್ಥಾತ್ ಲಿಂಗವಂತ ಧರ್ಮವು" ಈ ತಲೆಬರಹ ದಿಂದ "ಶಿವಾನುಭವದ" ಮಾರ್ಚ-ಏಪ್ರೀಲ ಸಂಚಿಕೆಯಲ್ಲಿ 'ಧರ್ಮಾಭಿಮಾನಿ ಎಂಬ ಗುಟ್ಟು ಹೆಸರಿನವರು ಒಂದು ಲೇಖವನ್ನು ಬರೆದಿದ್ದಾರೆ. ಅದು ತುಂಬಾ ವಿಚಿತ್ರವಾಗಿದೆ; ವಿತರ್ಕಮೂಲವಾಗಿದೆ. ಬರೀ ಕಲ್ಪಿತವಾಗಿದೆ; ಕಲುಷಿತವಾಗಿದೆ.

'ವೀರಶೈವವು ಅನಾದಿಕಾಲದ್ದೆಂದು ವಾದಿಗಳು; ಹನ್ನೊಂದನೆಯ ಶತಮಾನದ ದೇವರದಾಸಿಮಯ್ಯನಿಂದ ಉಗಮವಾಯಿತೆಂದು ಪ್ರತಿವಾದಿಗಳು' ಎಂದು ಧರ್ಮಾಭಿಮಾನಿಗಳು ಪ್ರಾರಂಭಿಸಿದ್ದಾರೆ. ವಾದಿಗಳು ಯಾರೆಂಬುದನ್ನು ಹೆಸರಿಸಿಲ್ಲ. ಪ್ರತಿವಾದಿಗಳು ಇವರ ಕಲ್ಪನಾಸೃಷ್ಟಿಯವರು. ಇಲ್ಲವಾದರೆ ಇವರ ಹೆಸರನ್ನು ಏಕೆ ಉಲ್ಲೇಖಿಸಬಾರದಾಗಿತ್ತು?

ವಚನ ಧರ್ಮವೇ ಲಿಂಗಾಯತ ಧರ್ಮವೆಂದು ಹೇಳ ಹೊರಟ ಧರ್ಮಾಭಿಮಾನಿಗಳು ತಮ್ಮ ಈ ಅಭಿಪ್ರಾಯವನ್ನು ಸಮರ್ಥನೆ ಮಾಡದೆ ಪ್ರತಿಯಾಗಿ ವೀರಶೈವ ಧರ್ಮ ವೇದಕ್ಕೆ ಪೂರ್ವದಲ್ಲಿದ್ದುದೆಂಬ ವಾಸ್ತವ ವಿಷಯವನ್ನು ಹೃದಯಾರೆ ಒಪ್ಪಿ ಹೀಗೆ ಸಮರ್ಥನಗೊಳಿಸಿದ್ದಾರೆ.

"ವಾದಿಗಳು ಉದಹರಿಸುವ ಮಹಂಜೋದಾರೋ ಅವಶೇಷಗಳಿಂದ ಆರ್ಯರು ಭರತಖಂಡಕ್ಕೆ ಬರುವದಕ್ಕೆ ಮುಂಚೆ ಅಲ್ಲಿ ಅತಿ ಶ್ರೇಷ್ಠವಾದ ದ್ರಾವಿಡ ಸಂಸ್ಕೃತಿ ಇತ್ತೆಂದು ತಿಳಿದುಬರುತ್ತದೆ. ಈ ಅವಶೇಷಗಳಲ್ಲಿ ಲಿಂಗ ನಂದಿ ವಿಗ್ರಹಗಳು ದೊರೆತಿರುವದರಿಂದಲೂ ಇಜಿಪ್ತ, ಗ್ರೀಸ್, ಬೆಬಿಲೋನಿಯಾ, ಬ್ರಿಟನ್‌ದ ಡ್ರೂಯಿಡ್ಸ (ದ್ರಾವಿಡರು) ಅಸ್ಸಿರಿಯ ಮುಂತಾದ ದೇಶಗಳಲ್ಲಿ ಈ ಲಿಂಗ ಮೂರ್ತಿಗಳು ದೊರೆಯುತ್ತಿರುವದರಿಂದ ಲಿಂಗ ಪೂಜೆಯು ಆರ್ಯರಿಗಿಂತಲೂ ಮುಂಚೆಯೇ ವಿಶ್ವವ್ಯಾಪ್ತಿ ಹೊಂದಿತ್ತೆಂದು ತಿಳಿಯಬಾರದೇ ಇರದು. ಆದುದರಿಂದ ಲಿಂಗಾರಾಧನೆಯು ಅವೈದಿಕ ಧರ್ಮವು ಎಂದು ವಾದಿಗಳು ಎಷ್ಟು ಬೇಗನೆ ತಿಳಿದುಕೊಳ್ಳುವರೋ ಅಷ್ಟು ಬೇಗನೆ ಮೇಲ್ಕಂಡ ವಿವಾದವು ಬಗೆಹರಿಯುವದು. ಲಿಂಗಾರಾಧನೆಯು

ಸಂಪುಟ ೨೮ ಸಂಚಿಕೆ ೧೨



# ಶಿವಾನುಭವ



-: ಸಂಪಾದಕರು :-
ಫ. ಗು. ಹಳಕಟ್ಟಿ,
ಬಿ. ಏ. ಎಲ್. ಎಲ್. ಬಿ.



ವಾ. ಚ. ೫-೧೨-೦] ವಿಜಾಪೂರ [ಡಿಸೆಂಬರ ೧೯೫೫

# ವಿಷಯಾನುಕ್ರಮಣಿಕೆ

# ಶಿವಾನುಭವ

ಸಂಪುಟ ೨೮ ಡಿಸೆಂಬರ ೧೯೫೪ ಸಂಚಿಕೆ ೧೨

ಲೇಖಾಂಕ ೧.

## ವೀರಶೈವರಲ್ಲಿ ಧಾರ್ಮಿಕ ಮೂಢ ನಂಬಿಗೆಗಳು

[ಬೇಡಿಕೊಳ್ಳಬಾರದು]

[ಲೇಖಕರು:- ಶ್ರೀ ಸ್ವಾಮಿ ಶಿವಾನಂದರು ಗವಿಮಠ, ತೆಗ್ಗಿಹಳ್ಳಿ ತಾ॥ ಇಂಡಿ.]

ವೀರಶೈವ ಧರ್ಮವು ಬಹು ಉದಾತ್ತವಾದದ್ದು. ಅದರ ನಿಯಮಗಳು ಬಹು ಉಚ್ಚ ತರಗತಿಯವು. ಸಮಾಜದಲ್ಲಿ ಸಂಘಟನೆ, ಶ್ರೀಮಂತಿಕೆ, ಶಿವಾನುಭವ ಜ್ಞಾನ, ಕಾಯಕ, ಆರೋಗ್ಯ, ಆಯುಷ್ಯ, ಐಶ್ವರ್ಯಗಳು ಎಲ್ಲ ವೀರಶೈವರಿಗೂ ಸಮನಾಗಿ ಒದಗಿಸುವಂತೆ ವ್ಯವಸ್ಥೆ ಅದೆ. ಜಾತಿಭೇದ ವಿಲ್ಲ. ಎಲ್ಲರಿವೂ ಸೇಸಮಾನತೆ ಬೇಡಿಕೊಳ್ಳಲೇಬಾರದು. ಇದು ಮಹಾ ಪಾಪವೆಂದು ಧಾರಾಳವಾಗಿ ಘಂಟಾಘೋಷವಾಗಿ ಹೇಳುತ್ತಿರುವರು ಹಾಗು ಹೇಳಿದ್ದಾರೆ. ಇನ್ನೂ ಅನೇಕ ತತ್ವಗಳು ಅಡಕವಾಗಿವೆ. ಪ್ರಸ್ತುತ ಲೇಖಕ್ಕೆ ಬೇಕಾಗುವುಗಳನ್ನು ಮಾತ್ರ ತಕ್ಕೊಳ್ಳಲಾಗುವದು. ವೀರಶೈವರಿಗೆ ಆಧಾರ ಗ್ರಂಥಗಳು ಹಲವಾದರೂ ವಚನಗಳು ಮಾತ್ರ ಬಹು ಬಲವಾದ ಗ್ರಂಥಗಳೇ ಸರಿ. ಯಾವದನ್ನಾದರೂ ಉದಾಹರಿಸಿ ಎತ್ತಿ ಬರೆಯಬೇಕಾದರೆ ಬಹುತರ ಹೆಚ್ಚಾಗಿ ವಚನಗ್ರಂಥಗಳಿಗೇ ಕೈಹಾಕುತ್ತಾರೆಂದರೂ ಅಡ್ಡಿಯಿಲ್ಲ. ಯಾಕೆಂದರೆ ಉಳಿದ ಗ್ರಂಥಗಳು ವಚನಗ್ರಂಥಗಳಷ್ಟು ತಿಳಿಯುವದು ಬಹು ಕಡಿಮೆ.

ಈ ಬೇಡಿಕೊಳ್ಳುವದರ ಬಗ್ಗೆ ವಚನಕಾರರು ಬಹು ಕಡುತರವಾದ ಟೀಕೆ ಮಾಡಿದ್ದಾರೆ. ಇಲ್ಲಿ ಒಂದೆರಡು ವಚನಗಳನ್ನು ಉದಹರಿಸುವೆನು.

"ಅನ್ಯರ ಮನೆಗೆ ಹೋಗಿ, ತನ್ನ ಉದರವ ಹೊರೆಯದ ಅಚ್ಚ ಶರಣರ ಕಂಡರೆ ನಿಶ್ಚಯವಾಗಿ ಕೂಡಲಸಂಗಯ್ಯನೆಂಬೆ"

"ಬೇಡಲಾಗದು ಜಂಗಮ, ಬೇಡಿಸಲಾಗದು ಭಕ್ತ. ಬೇಡಿದನ ನೋಡಿದರೆ ಬೇಡ ಬೇಡ ಭಕ್ತಿಯು ಆಡಂಬರವ ಮೃಡಮೂರ್ತಿ ಕಪಿಲಸಿದ್ಧಮಲ್ಲಿಕಾರ್ಜುನಾ"

"ಬೇಡುವವ ಜಂಗಮನೆ ? ಬೇಡಿಸಿಕೊಳ್ಳುವವ ಸದ್ಭಕ್ತನೇ ? ಈ ಮರ್ಮವನರಿಯದ ಹಿರಿಯರು ನರಮಾಂಸ ಭಕ್ಷಕರಯ್ಯ. ಇದು ಕಾರಣ ಕೂಡಲ ಚನ್ನಸಂಗಮದೇವಾ ಲಕ್ಷಕ್ಕಾದಡೂ ಒಬ್ಬ ಭಕ್ತನುಂಟು. ಕೋಟಿ ಗಾದಡೂ ಒಬ್ಬ ಜಂಗಮನಿಲ್ಲ."

ಈ ಪ್ರಕಾರ ಬೇಡಬಾರದೆಂಬ ಬಗ್ಗೆ ಸರಸಾಗಿ ಹೇಳಲಾಗಿದೆ. ಜಂಗಮ ನೆಂದರೆ ಪರಮ ಜ್ಞಾನಿ, ಜಗಭರಿತ ಮಹಾತ್ಯಾಗಿ ಯೋಗೇಶ್ವರನು ಇಂಥ ಏನೂ ಕೂಡ ಬೇಡಿಕೊಳ್ಳಲೇಬಾರದೆಂದು ಹೇಳಿದ್ದಾರೆ. ಇವನಾದರೂ ಕಾಯಕ ಮಾಡಬೇಕೆಂದು ಹೇಳಲಾಗಿದೆ. ಇಂಥ ಸಿದ್ಧಪುರುಷನು ಜಗಕ್ಕ ರಿಯದೆ ಲೋಕ ಕಲ್ಯಾಣವನ್ನು ಸೂಕ್ಷ್ಮವಾಗಿ ಮಾಡುತ್ತಿರುವನು. ಇಂಥ ಸ್ಥಿತಿಗೆ ಹೋದವನಿಗೆ ಕರ್ಮದ ಕಟ್ಟಿಲ್ಲ. ಅದು ತಾನೇ ಕಳಚಿ ಹೋಗು ವದು. ಧರ್ಮದ ಬಂಧನಗಳೂ ಕೂಡ ಇಲ್ಲ. ಇಂಥವನಿಗೂ ಕೂಡ ಬೇಡಿ ಕೊಳ್ಳಬಾರದೆಂದು ವಿಧಿಸಿದ ಶರಣರ ತತ್ವವೇನು ಸಾಮಾನ್ಯವಲ್ಲ. ತಾವಾಗಿ ಭಕ್ತರು ಕೊಟ್ಟರೆ ನೀಡಿದರೆ ತಕ್ಕೊಳ್ಳಲಿಕ್ಕೆ ಏನೂ ಅಡ್ಡಿ ಇಲ್ಲೆಂದು ಸಹ ಹೇಳಿದ್ದಾರೆ. ಇಂಥ ಜಗಭರಿತ ಜಂಗಮರ ಪಾಡು ಹೀಗಾದ ಬಳಿಕ ಸದಾ ಬಿಕ್ಷುಕವೃತ್ತಿಯನ್ನೇ ಕೈಕೊಂಡ ಅಯ್ಯಗಳ ಗತಿ ಏನು ? ಇವರು ಸಂಸಾರಿಗಳು, ಅವಿವೇಕಿಗಳು, ಸ್ವಾರ್ಥಿಗಳು, ಎಲ್ಲ ಚಟಗಳಲ್ಲಿ ಮುಳುಗಿದ ವರು. ಹೀಗಿದ್ದರೂ ಅಧಿಕಾರಯುಕ್ತ ವಾಣಿಯಿಂದಲೇ ಬೇಡಿಕೊಳ್ಳುವರು. ಇದೆಂಥ ಹೀನತನ ವಿಚಾರಿಸಿರಿ. ಇಷ್ಟಾದರೂ ಇವರು ಗುರುಗಳಂತೆ. ಇವರ ಪಾದೋದಕ ಪ್ರಸಾದ ವೊದಲಾದವುಗಳನ್ನು ಭಕ್ತರು ತಕ್ಕೊಳ್ಳಬೇಕಂತೆ. ಕೆಲವರಿಗೆ ಎದೆ ಸೀಳಿದರೂ ನಾಲ್ಕಕ್ಷರಗಳಿರುವದಿಲ್ಲ. ಒಂದು ಮಂತ್ರ ಗೊತ್ತಿಲ್ಲ. ತಮ್ಮ ಜಾತಿ ಯಾವದು ಎಂದು ಕೇಳಿದರೆ ನಮ್ಮ ಜಾತಿ ಬಿಗೋಳು ಎಂದು ಅಂಜಿಕೆಯಿಲ್ಲದೆ ಹೇಳುವರು. ಮಣೆಯಮೇಲೆ ಕೂಡ್ರ ಲಿಕ್ಕೆ ಬರುವದಿಲ್ಲ. ಸರಿಯಾಗಿ ಊಟಮಾಡಲಿಕ್ಕೂ ಬರುವದಿಲ್ಲ. ಇದರ ಮೇಲಿಂದ ಮಾತಾಡಲಿಕ್ಕೆ ಎಷ್ಟು ಬರುವದೆಂದು ವಾಚಕರೇ ವಿಚಾರಿಸಿರಿ.

ಎಲ್ಲೋ ಯಾರ ಮುಖದಿಂದಲೋ "ಶಿವಾ ಶಿವಾ ಬಸವಾ" ಎಂದು ನುಡಿಯುವದನ್ನು ಕೇಳಿ ಯಾವಾಗಾದರೆ ನ್ನು ತಾವು ಅಪ್ರಾಸಂಗಿಕವಾಗಿ ನುಡಿಯುತ್ತಿರುವರು. ಮುಂಜಾನೆ ಮನೆ ಮನೆ ಬಿಕ್ಷೆಗೆ ಬಂದು "ಕ್ವಾರ್ಯಾಣ ಬಿಕ್ಸಾ" ಎಂದು ನುಡಿಯುವರು. ಇಷ್ಟು ಹೆಡ್ಡರಿರುವರು. ಎಲ್ಲರೂ ಹೀಗೆ ಇರುತ್ತಾರೆಂದು ಅರ್ಥವಲ್ಲ. ವಿಶೇಷ ಕಲಿತವರು ಈ ಭಿಕ್ಷೆಗೆ ಹೋಗುವದಿಲ್ಲ. ಅವರು ನೌಕರಿ ಅಥವಾ ಉದ್ಯೋಗ ಏನಾದರೂ ಮಾಡಿ ಮಾನದಿಂದ ತಮ್ಮ ಬಾಳ್ವೆ ಸಾಗಿಸುವರು. ಸಾಧಾರಣ ಕಲಿತವರು ವ್ಯಾಪಾರ, ಒಕ್ಕಲತನ ಮಾಡುವರು. ಆದರೆ ಕಲಿಯುಲಾರದವರೇ ಹೆಚ್ಚಾಗಿ ಇರುವರು. ಇವರಿಗೆ ಯಾತರದೂ ವಿಚಾರವೇ ಇರುವದಿಲ್ಲ. ಅಶಿಕ್ಷಿತರೇ ಹೆಚ್ಚಾಗಿ ಇರುವದುಂಟು. ಹಬ್ಬದಲ್ಲಿ ಮನೆ ಶೀರಿಸಲಿಕ್ಕೇ ಇವರು ಉಪಯೋಗ ಮಾತ್ರ ಬೀಳುವರು. ಭಕ್ತರಿಗೆ ಆಗ ಉಂಡವರಿಗೆ ಹೊಟ್ಟೆ ತುಂಬಿದವರಿಗೆ ಉಣಿಸುವ ಚಟವು ಬಹಳೇ ಇರುವದುಂಟು. ಹಸಿದವರಿಗೆ ಉಣಿಸುವದಿಲ್ಲ. "ಕಲ್ಲು ನಾಗರ ಕಂಡರೆ ಹಾಲೆರೆ ಎಂಬರು, ಉಣ್ಣುವ ಜಂಗಮ ಬಂದರೆ ನಡೆ ಎಂಬರು" ಎನ್ನುವಂತೆ ಇರುವರು

ಹೀಗೆ ಮಾಡದೆ ಸರಿಯಾಗಿ ಶಿಕ್ಷಣ ಪಡೆದು ಸರಿಯಾದ ಉದ್ಯೋಗ ಧಂದೆಗಳನ್ನು ಮಾಡಿ ಮಾನ ಮರ್ಯಾದೆಯಿಂದ ತಮ್ಮ ಬಾಳನ್ನು ಸಾಗಿಸಿದರೆ ಸಮಾಜಕ್ಕೂ ಧರ್ಮಕ್ಕೂ ಬಹು ಭೂಷಣವಾಗುವದು. ಈ ಬೇಡಿಕೊಳ್ಳುವ ವೃತ್ತಿಯಿಂದ ಇವರು ಅತಿ ಬಡತನದಲ್ಲಿಯೇ ಕಾಲ ಕಳೆಯುವರು. ಬೇಡಿಕೊಳ್ಳುವದರಲ್ಲೇ ಇವರ ಕಾಲ ಹೋಗಿ ದಣಿದು ಮನೆಗೆ ಬಂದು ಬಿಡುವರು. ದುಡಿಯಲಿಕ್ಕೆ ಯಾವಾಗ ಹೋಗಬೇಕು, ಕಾಲ ಸಿಗುವದಿಲ್ಲ. ಸಮಾಜದಲ್ಲಿ ಗುರುವರ್ಗವೆನಿಸಿಕೊಳ್ಳುವವರ ಈ ಕನಿಕರ ಸ್ಥಿತಿಯು ಬಹು ಹೇಯವಾದದ್ದು. ಈ ಕಾಲದಲ್ಲಿ ವೀರಶೈವರಿಗೆ ಒಂದು ತರದ ಹಾನಿ ಅಪಮಾನವೇ ಸರಿ. ಅದಕ್ಕೆ ಈ ವರ್ಗದವರಿಗೆ ಸರಿಯಾದ ಶಿಕ್ಷಣ ಶಿಗುವಂತೆ ಮಾಡಿ ಉದ್ಯೋಗ ಧಂದೆಗಳನ್ನು ಮಾಡುವಂತೆ ಶಿರಿವಂತರೂ, ಮುಂದುವರಿದವರೂ, ಸುಧಾರಿಸಿದವರೂ, ಯತ್ನಿಸಬೇಕೆಂದು ಬೇರೆ ಹೇಳಬೇಕಾಗಿಲ್ಲ. ಕಾಯಕವೇ ಕೈಲಾಸವೆಂಬ ಹಿರಿದಾದ ತತ್ವದ ಅನುಭವವೂ ಈ ಬಡ ಅಯ್ಯಗಳಿಗೆ ದಯವುಳ್ಳವರು ಮಾಡಿಕೊಡಬೇಕೆಂದು ಆಶಿಸುವೆವು. ಎಲ್ಲರಿಗೂ ಕಾಯಕವು ಅತಿ ಮಹತ್ವದ್ದಾಗಿದೆ. ಯಾರೂ ಬೇಡಿಕೊಳ್ಳಬಾರದು. ಅಂದರೆ ಸಮಾಜದಲ್ಲಿ ಆರ್ಥಿಕ ಅಭಿವೃದ್ಧಿ ಯಾವದೆಂದು ಹೇಳ

ಲಾಗಿದೆ. ಇನ್ನು ಕೆಲವರು ಮಾತ್ರ ಅವಶ್ಯ ಬೇಡಿಕೊಳ್ಳಬೇಕಾಗುವದು. ಸಮಾಜ ಕಾರ್ಯಕ್ಕೆ, ದಾಸೋಹಕ್ಕೆ ಶಾಲೆ ಕಾಲೇಜುಗಳಿಗೆ ಧಾರ್ಮಿಕ ಸುಧಾರಣೆಗೆ, ಗ್ರಂಥ ಪ್ರಕಾಶನಕ್ಕೆ ಮೊದಲಾದ ಸಾರ್ವಜನಿಕ ಉಪಯುಕ್ತ ಕರ್ಮಗಳಿಗೆ ಬೇಡಿಕೊಳ್ಳಬೇಕೆಂದು ಧರ್ಮ ಗ್ರಂಥಗಳು ಹೇಳುತ್ತವೆ. ಪರರ ಸಲುವಾಗಿ ಜುಲುಮೆಯಿಂದಾಗಲಿ, ಕದ್ದುತಂದಾಗಲಿ ನೇವ ದ ಉದಾಹರಣೆ ಗಳು ಸಹ ಇರುವವು. ಇಂಥ ಪ್ರಸಂಗಗಳಲ್ಲಿ ಯಾಂದೂ ಸ ಕಾರದವ ರದೂ ಕೂಡ ತಕರಾರು ಇಲ್ಲ. ಹೆಂಡರು ಮಕ್ಕಳಿಗಾಗಿ ಶಕ್ತಿ ಇರಲಿಕ್ಕಾಗಿ ಉದ್ಯೋಗ ಮಾಡದೆ ಎಂದೂ ಬೇಡಿಕೊಂಡು ತಿನ್ನಬಾರದೆಂದು ಹೇಳಲಾ ಗಿದೆ. ಸಾಧಿಸಿದರೆ ಮೇಲೆ ವರ್ಣಿಸಿದ ಜಂಗಮನೂ ಕೂಡ ಕಾಯಕ ಮಾಡಿ ದರೆ ಒಳ್ಳೇದೆಂದು ಹೇಳಲಾಗಿದೆ.

"ಗುರುವಾದರೂ ಕಾಯಕದಿಂದಲೇ ಜೀವನ್ಮುಕ್ತ. ಲಿಂಗವಾದಡೂ ಕಾಯಕದಿಂದಲೇ ಶಿಲೆಯ ಕಳೆ ಹರಿಯುವದು ಜಂಗಮವಾದಡೂ ಕಾಯಕ ದಿಂದಲೇ ವೇಷದ ಪಾಶ ಹರಿಯುವದು. ಇದು ಚನ್ನ ಬಸವಣ್ಣ ಪ್ರಿಯ ಚಂದೇಶ್ವರ ಲಿಂಗದ ಅರಿವು."

"ನೇಮವ ಮಾಡಿಕೊಂಡು ಭಕ್ತರ ಭವನಂಗಳ ಹೊಕ್ಕು ಕಾಯಕ ಬಿಟ್ಟು ಹೊನ್ನ ಬೇಡಿಹನೆಂಬುದು ಕಷ್ಟವಲ್ಲವೇ? ಆ ಗುಣ ಅಮಳೇಶ್ವರ ಲಿಂಗಕ್ಕೆ ದೂರು."

"ಕಾಯಕದಲ್ಲಿ ನಿರತನಾದಡೆ ಗುರುದರ್ಶನವಾದರೂ ಮರೆಯಬೇಕು. ಲಿಂಗಪೂಜೆಯಾದಡೂ ಮರೆಯಬೇಕು. ಜಂಗಮ ಮುಂದಿದ್ದಡೂ ಹಂಗು ಹರಿಯಬೇಕು. ಕಾಯಕವೇ ಕೈಲಾಸವಾದ ಕಾರಣ ಅಮಳೇಶ್ವರ ಲಿಂಗ ವಾಯಿತ್ತಾದಡೂ ಕಾಯಕದೊಳಗು."

ಅದಕ್ಕೆ ಎಲ್ಲರೂ ಕಾಯಕ ಮಾಡಬೇಕೆಂದು ವಿಧಿಸಿದ್ದಾರೆ. ಗುರುಗಳು ಜಂಗಮರು ದೊಡ್ಡವರು ಬೇಡಿಕೊಳ್ಳದೆ ಕಾಯಕ ಮಾಡಿ ಹೊಟ್ಟೆ ತುಂಬಿ ಕೊಂಡರೆ ಕೆಳಗಿನ ಭಕ್ತ ವರ್ಗದವರೂ ಕಾಯಕ ಮಾಡುವರೆಂದು ಇದರ ಮರ್ಮ. ದೊಡ್ಡವರು ಯಾವ ಆಳತೆ ಯಾವ ರೀತಿ ಯಾವ ನಿಯಮ ಯಾವ ಪದ್ಧತಿ ಹಾಕುವರೋ ಅದರಂತೆ ಕೆಳಗಿನವರು ನಡೆಯುವರೆಂದು ಗೀತೆ ಯಲ್ಲಿ ಹೇಳಿದೆ. ತ್ಯಾಗಿ ಯೋಗಿಗಳಾದ ಜಂಗಮರೂ, ಗುರುಗಳೂ ಕಾಯಕ

ಮಾಡಿದರೆ ಇದನ್ನು ನೋಡಿ ಉಳಿದ ಸಂಸಾರಿಗಳೂ ನಾಚಿ ಬೇಡಿಕೊಳ್ಳುವದನ್ನು ಬಿಟ್ಟು ಕಾಯಕ ಮಾಡುವರೆಂದು ಇದರ ಮರ್ಮವಾಗಿದೆ.

ನಮ್ಮಲ್ಲಿ ಅಸಂಖ್ಯ ಶಿವಶರಣರು ಆಗಿ ಹೋಗಿದ್ದಾರೆ. ಅವರಲ್ಲಿ ೭೭೦ ಅಮರಗಣಂಗಳು ಅಂದರೆ ಬಹು ಉಚ್ಚ ಸ್ಥಿತಿಗೆ ಹೋಗಿ ಮುಟ್ಟಿದವರು. ಇವರೂ ಕೂಡ ಕಾಯಕ ಮಾಡಿದ್ದಾರೆಂದು ಅವರ ಚರಿತೆಯಿಂದ ಗೊತ್ತಾಗುವದು. ಶಂಕರದಾಸಿಮಯ್ಯನು ಸಿಂಪಿ ಕೆಲಸವ ಮಾಡುತ್ತಿದ್ದನು. ದೇವರ ದಾಸಿಮಯ್ಯ ನೇಗಿಯ ಕೆಲಸ, ಮುದ್ದಯ್ಯನು ಒಕ್ಕಲುತನ, ಚಂದಯ್ಯನು ನುಲಿಯ ಕೆಲಸ, ಮಾಚಯ್ಯನು ಒಗೆಯುವ ಕೆಲಸ, ಕಕ್ಕಯ್ಯ ಡೋರ ಕೆಲಸ, ಹರಳಯ್ಯ ಸಮಗಾರ ಕೆಲಸ, ಮಾರಯ್ಯನು ಕಟ್ಟಿಗೆ ಮಾರುವ ಕೆಲಸ ಹೀಗೆ ಬೇರೆ ಬೇರೆ ಕೆಲಸಗಳನ್ನು ಮಾಡುತ್ತಿದ್ದರು. ವೀರಶೈವ ಧರ್ಮಕ್ಕೆ ಕಳಸಪ್ರಾಯನಾದ ಜಗದ್ಗುರು ಬಸವಣ್ಣನು ಮಂತ್ರಿಯ ಕೆಲಸವನ್ನು ಮಾಡುತ್ತಿದ್ದನು. ಹೀಗೆ ಶಿವಶರಣರೆಲ್ಲರೂ ಸರಿಯಾಗಿ ಕಾಯಕ ಮಾಡಿದ್ದರಿಂದ ಆಗ ಕರ್ನಾಟಕವು ಸಿರಿಸಂಪತ್ತಿನ ನಾಡಾಗಿತ್ತು. ಬೇಡಿಕೊಳ್ಳುವವರೇ ಇರಲಿಲ್ಲ. ಸದಾ ಉದ್ಯೋಗ ಮಾಡುವವರೆಂದರೆ ಸಿರಿ ತಾನೇ ಬರುವದು. ಧರ್ಮವೇತ್ತರಾದ ಶಿವಶರಣರು ಕಾಯಕವನ್ನು ಒಳ್ಳೇ ಸತ್ಯ ನ್ಯಾಯದಿಂದಲೇ ಮಾಡುತ್ತಿದ್ದರೆಂದು ಬೇರೆ ಹೇಳಬೇಕಾಗಿಲ್ಲ. ಆದರೂ ಕಾಯಕದಲ್ಲಿ ದಾಸೋಹ ಭಾವವಿತ್ತು. ತಮ್ಮ ಹೊಟ್ಟೆ ಬಟ್ಟೆಯ ಪೂರ್ತಿ ಗಳಿಸಿದ್ದನ್ನು ಇಟ್ಟುಕೊಂಡು ಉಳಿದುದನ್ನು ಸಮಾಜಕೆಲಸಕ್ಕೆ ದಾನ ಮಾಡುತ್ತಿದ್ದರು. ಹೀಗಾಗಿ ನಮ್ಮ ಧರ್ಮದ ಜನರು ಸ್ವಾವಲಂಬಿಯಾಗಿದ್ದರು. ಹೀಗೆ ಇವರೆಲ್ಲರೂ ಚನ್ನಾಗಿ ಕಾಯಕ ಮಾಡಿಯೂ ಕೂಡ ಮಹಾ ಧರ್ಮಾತ್ಮರಾಗಿದ್ದರು. ಆದರೆ ಈಗಿನ ನಮ್ಮ ಸಮಾಜದಲ್ಲಿ ಇಂಥ ಸುಧಾರಿಸಿದ ಕಾಲದಲ್ಲಿ ಗುರುವರ್ಗವೆನಿಸುವ ಕೆಲವು ಅಯ್ಯಗಳು ಇನ್ನೂ ಅನೇಕ ರೀತಿಯ ಸೋಗು ಹಾಕಿ ಬೇಡಿಕೊಳ್ಳುತ್ತಿರುವರು. ಇದೇ ತಮ್ಮ ಕಾಯಕವೆಂದು ಒಳ್ಳೇ ಧೈರ್ಯದಿಂದಲೇ ಹೇಳುವರು. ಇವರು ಕಾಯಕದ ಅರ್ಥವನ್ನು ಎಷ್ಟು ಅರಿತಿದ್ದಾರೆಂದು ಎಲ್ಲರಿಗೂ ತಿಳಿಯುವದು. ಬೇಡಿಕೊಳ್ಳುವದೇ ನಮ್ಮ ಶ್ರೇಷ್ಠ ಧರ್ಮ ಹಕ್ಕು ಎಂದು ಹೇಳಿ ಅಧಿಕಾರ ವಾಣಿಯಿಂದಲೇ ಬೇಡಿಕೊಳ್ಳುವರು. ಈ ಹೀನ ಸ್ಥಿತಿ ಹೋಗದೆ ವೀರಶೈವರ ಅದರಲ್ಲಿ ಈ ಅಯ್ಯಗಳ ಆರ್ಥಿಕ ಸ್ಥಿತಿ ಸುಧಾರಿಸುವದೇ ಶಕ್ಯವಿಲ್ಲೆಂದು ಧಾರಾಳವಾಗಿ ಹೇಳಬಹುದು. ಪ್ರಯತ್ನ

ಮಾಡಿದರೆ ಇವರಿಗೆ ಶಿಕ್ಷಣವು ಪುಕ್ಕಟೆ ಸಿಗುವದು ಕೂಡ ಶಕ್ಯವಿದೆ. ಶಾಲೆ ಕಲಿಯುವ ವಯಸ್ಸಿನಲ್ಲಿಯೇ ತಮ್ಮ ಕೈಯೊಳಗಿನ ಜೋಳಿಗೆಯನ್ನು ಮಗನ ಕೈಗೆ ಹಾಕಿಬಿಡುವರು. ಇದರಿಂದ ಇವರಿಗೆ ವಿದ್ಯೆ ಸಿಗುವದಿಲ್ಲ. ಬೇಡಿ ಕೊಳ್ಳುವದು ಬಿಡುವದಿಲ್ಲ. ಬೇಡಿಕೊಳ್ಳುವ ಬಗೆಯನ್ನು ವಾಚಕರೇ ಊಹಿಸಿರಿ.

---

# ಭಕ್ತಿಯೋಗ

ಯಾಪ್ರೀತಿರವಿವೇಕಾನಾಂ ವಿಷಯೇಷ್ವನಪಾಯಿನೀ

ತ್ವಾಮನುಸ್ಮರತಃ ಸಾಮೇ ಹೃದಯಾನ್ಮಾಪಸರ್ಪತು ||

ಇದರ ಅರ್ಥವೇನೆಂದರೆ, "ಅವಿವೇಕಿಗಳಿಗೆ ಕ್ಷಣಭಂಗುರವಾದ ಇಂದ್ರಿಯ ವಿಷಯುಗಳಲ್ಲಿ ಎಂಥಹ ಅಚಲವಾದ ಪ್ರೀತಿ ಇರುವದೋ ಅಂತಹ ಪ್ರೀತಿಯು ಪರಮಾತ್ಮನನ್ನು ಸ್ಮರಿಸುವಾಗ ನನ್ನ ಹೃದಯದಿಂದ ಹೊರಹೊಮ್ಮಲಿ" ಬಹುಶಃ ಈ ಜಗತ್ತಿನ ಪ್ರತಿಯೊಂದು ಪ್ರಾಣಿಗಳಿಗೆಲ್ಲ ಪ್ರೀತಿ ಪ್ರೇಮಗಳಿಲ್ಲದೆ ಇಲ್ಲವೇ ಇಲ್ಲ. ಈ ಪ್ರೀತಿ ಪ್ರೇಮಕ್ಕಾಗಿ ಎಲ್ಲರೂ ಹುಚ್ಚರೇ ಆಗಿ ಆಗಿದ್ದಾರೆ. ಕೆಲವರು ಹೊನ್ನು, ಹೆಣ್ಣು, ಮಣ್ಣು, ಚಟ, ಚಯನಿ, ಆಟ, ನೋಟ, ವಿಷಯವನ್ನು, ಇಂದ್ರಿಯ ಸುಖ ವಿಷಆರಾಮಿ ತುಡುಗು, ಕಳವು, ಮೋಸ ಹಾದರು, ಅನ್ಯರಿಗೆ ಕೇಡುಮಾಡುವದು, ಕಾಮ, ಕ್ರೋಧ, ಮದ, ಮತ್ಸರ, ಲೋಭ, ಅಹಂಕಾರ, ಮಮಕಾರ ಮೊದಲಾದ ಒಂದಲ್ಲ ಅನೇಕ ವಿಷಯಗಳಲ್ಲಿ ಒಳ್ಳೇ ಪ್ರೀತಿ ಪ್ರೇಮಗಳುಳ್ಳವರೇ ಇರುವರು. ಈ ಪ್ರೇಮಕ್ಕಾಗಿ ಅವರು ತಮ್ಮ ಸರ್ವಸ್ವವನ್ನು ಕಡೆಗೆ ಜೀವಿತವನ್ನೂ ಸೂರೆ ಮಾಡುವರು. ಯಾರನ್ನೂ ಪ್ರೀತಿ ಪ್ರೇಮವು ಬಿಟ್ಟುಹೋಗುವದು ಶಕ್ಯವಿಲ್ಲ. ಪ್ರೀತಿ ಪ್ರೇಮಗಳು ಎಲ್ಲರಲ್ಲಿ ಇದ್ದೇ ಇರುವದು ಪ್ರಾಣಿಮಾತ್ರದ ಹುಟ್ಟು ಗುಣವೇ ಸರಿ. ಕೆಲವರಿಗೆ ಇಂದ್ರಿಯಗಳಿಗೆ ಗೋಚರವಾಗದ ಮನ ಬುದ್ಧಿ ಗಳಿಗೆ ಹೊಳೆಯದ, ವಾಙ್ಮನಗಳಿಗೆ ನಿಲುಕದ ಪರಮಾತ್ಮನಲ್ಲಿ ಪ್ರೀತಿ ಇರು

ವದು ಕಂಡುಬರುವದು. ಈ ಎಲ್ಲರಲ್ಲಿ ಇರುವದು ಅದೊಂದೇ ಪ್ರೀತಿಪ್ರೇಮ ವಲ್ಲದೆ ಬೇರೆ ಇಲ್ಲ. ಪ್ರೀತಿ ಈ ಬ್ರಹ್ಮಾಂಡವನ್ನೇ ಮುತ್ತಿಬಿಟ್ಟಿದೆ.

ಈ ಬ್ರಹ್ಮಾಂಡವು ಪ್ರಕೃತಿ ಪುರುಷರ ಸಂಯೋಗವಾಗಿದೆ. ಇವೆರಡರ ಸಂಯೋಗವನ್ನು ಮನವು ಮಾಡುವದು. ಈ ಮನವು ಪ್ರಕೃತಿಗಳ ಕಡೆಗೆ ವಿಶೇಷ ಹರಿದರೆ ಅವುಗಳನ್ನು ಬಿಟ್ಟು ಅಗಲದಿದ್ದರೆ ವಿಷಯಲಂಪಟನಾಗು ವನು. ಈ ಪ್ರೀತಿಗೆ ಬಯಕೆ ವಾಸನಾ ಆಸಕ್ತಿ ತಿಂಡಿ, ಕಾಮನಾ ದುಶ್ಚಟ ಚಯನಿ ಮೋಹಗಳೆಂದು ಬೇರೆ ಬೇರೆ ಹೆಸರುಗಳುಂಟು. ಇದೇ ಪ್ರೀತಿ ಯನ್ನು ನಾವು ಪರಮಾತ್ಮನ ಮೇಲೆ ಹಾಕಿದರೆ ಅವನನ್ನು ಪ್ರೀತಿಸಿದರೆ ಅದೇ ಭಕ್ತಿಯಾಗುವದು. ಮನುಷ್ಯರಲ್ಲಿ ಯಾವನಿಗೂ ಪ್ರೀತಿಪ್ರೇಮಗಳು ಬಿಟ್ಟಿಲ್ಲ. ಅವು ಯಾವನನ್ನೂ ಬಿಟ್ಟುಹೋಗುವದು ಶಕ್ಯವಿಲ್ಲ. ಅದು ಇಲ್ಲ ದಿದ್ದರೆ ಒಂದು ಕ್ಷಣ ಸಹ ನಡೆಯುವದಿಲ್ಲ ಪ್ರೀತಿಯೇ ನಮ್ಮ ಉಸಿರಾ ಗಿದೆ. ಪ್ರೀತಿಯೇ ನಮ್ಮ ಜೀವಿತವಾಗಿದೆ. ಪ್ರೀತಿಪ್ರೇಮಗಳ ಹೊರತು ಜಗತ್ತು ಕೂಡ ಬಾಳಲಾರದು. ಪ್ರತಿಪ್ರಾಣಿ ಮಾತ್ರರಲ್ಲಿ ಪ್ರೀತಿಯು ರೋಮ ರೋಮಗಳಲ್ಲಿ ನರನಾಡಿಗಳಲ್ಲಿ ಪ್ರತಿಕಣಗಳಲ್ಲಿ ಅಣುರೇಣುಗಳಲ್ಲಿ ಇರುವದು. ಆದರೆ ಆ ಪ್ರೀತಿ ಪ್ರೇಮಗಳನ್ನು ಪ್ರಕಟ ಮಾಡುವ ಸ್ಥಾನಗಳಲ್ಲಿ ಮಾತ್ರ ಅಂಕುರವಾಗುತ್ತ ಹೋಗುವದು. ತಂತಿಗಳಲ್ಲಿ ಹರಿಯುವ ವಿದ್ಯುತ್ತು ಒಂದೇ ಇರುವದು. ಆದರೆ ಬೇರೆ ಬೇರೆ ಬಣ್ಣದ ಬೇರೆ ಬೇರೆ ಆಕಾರದ ಬಲ್ಬು ಗಳಲ್ಲಿ ಅದು ಬೇರೆ ಬೇರೆ ಬಣ್ಣ, ಬೇರೆ ಬೇರೆ ಆಕಾರಗಳಂತೆ ತೋರು ವದು. ತಂತಿಗಳ ಯೋಗ್ಯತೆಯು ಮೇಲೆ ಅದು ಕೂಡ ಹೇಗೆ ಅವಲಂಬಿ ಸಿದೆಯೋ ಅದರಂತೆ ಪ್ರೀತಿಯಾದರೂ ಯಾತರ ಮೇಲೆ ಯಾವ ಪ್ರಮಾಣ ದಲ್ಲಿ ಬಿದ್ದಿರುವದೋ ಅದಕ್ಕೆ ತಕ್ಕಂತೆ ನಾಮಗಳು ಬಂದಿವೆ. ಆದರೆ ಪ್ರೀತಿ ಪ್ರೇಮಗಳು ಎಲ್ಲರಿಗೂ ಬೇಕೇ ಬೇಕೆಂದು ಅನಿಸದೆ ಇರಲಾರದು. ಸಾಯುವ ದಾದರೂ ಕೂಡ ಪ್ರೀತಿಯಿಂದಲೇ ಎಂದು ಅನೇಕ ಸಲ ತೋರುವದು. ಪ್ರೀತಿಯನ್ನು ವಿಷಯಗಳ ಕಡೆಗೆ ಹರಿಸದೆ ದೇವ ದೇವನ ಕಡೆಗೆ ಹರಿಸಿದರೆ ಒಳ್ಳೇ ಸಾರ್ಥಕವಾಗುವದು. ಪ್ರೀತಿ ಎಂಬ ಬೀಜನ್ನು ಪರಮಾತ್ಮನು ಎಲ್ಲ ರಿಗೂ ಕೊಟ್ಟು ಕಳಿಸಿದ್ದಾನೆ. ಆ ಬೀಜವನ್ನು ನಾಶಮಾಡದೆ ವಿಶ್ವವ್ಯಾಪಿ ಯಾಗುವಂತೆ ಮಾಡೆಂದು ಅವನ ಸಂದೇಶವಿದೆ. ಜನರಿಗೆ ಈ ಸಂದೇಶದ ಅರ್ಥ ತಿಳಿಯದೆ ಗೊಂದಲದಲ್ಲಿ ಬಿದ್ದಿದ್ದಾರೆ. ಈ ಪ್ರೀತಿ ಪ್ರೇಮವೆಂಬ ಬೀಜನ್ನು ಯೋಗ್ಯ ರೀತಿಯಲ್ಲಿ ಬೆಳಸಲು ಬರಲಾರದಕ್ಕಾಗಿ ಅದನ್ನು

ಹಾಳುಮಾಡಿದವರೇ ಇದ್ದಾರೆ. ಈ ಬೀಜಕ್ಕೆ ವಿಷಯವೆಂಬ ನೀರನ್ನು ಹಾಕಿದರೆ ಅದು ಬೆಳೆಯದೆ ಬಾಡಿ ಒಣಗಿ ಕಮರಿಹೋಗಿ ಸಾಯುವದು. ಆದರೆ ಆ ಬೀಜಕ್ಕೆ ನಿರ್ವಿಷಯವೆಂಬ ನೀರನ್ನು ಹಾಕಿದರೆ ಬೆಳೆಯಹತ್ತುವದು. ಆಗ ಅದಕ್ಕೆ ದೇವಭಕ್ತಿ ಎಂಬ ಗೊಬ್ಬರವನ್ನು ನಿತ್ಯ ಹಾಕುತ್ತಿರಲು ಬೆಳೆಯುತ್ತ ಸಾಗುವದು. ಸೇವೆ ಎಂಬ ಹನಿಯನ್ನು ಒಡಿಸಲು ಬಹು ಪ್ರಫುಲ್ಲಿತವಾಗಿ ಬಹು ವಿಶಾಲವಾಗಿ ವಿಶ್ವವ್ಯಾಪಿಯಾಗಿ ಬೆಳೆಯುತ್ತ ಹೋಗುವದು. ಇದೇ ದಿವ್ಯ ಭಕ್ತಿ ಎನಿಸುವದು. ಇದಕ್ಕೆ ಆಗ ಪ್ರೇಮ, ಪ್ರೀತಿ ಎನ್ನುವರು. ಬೀಜರೂಪದಲ್ಲಿ ಅಥವಾ ಅಂಕುರದಲ್ಲಿ ಅಥವಾ ಸಸಿಯಲ್ಲಿ ಅದಕ್ಕೆ ಪ್ರೇಮವೆಂದು ಅನ್ನಲಾಗದು. ಅದು ಬೆಳೆ ಬೆಳೆದಂತೆ, ಅದು ವ್ಯಾಪಿಸಿದಂತೆ ಅದಕ್ಕೆ ಬೇರೆ ಬೇರೆ ಹೆಸರುಗಳಿಂದ ಸಂಬೋಧಿಸಬಹುದು. ಆದರೆ ಅದು ವಿಶ್ವವ್ಯಾಪಿಯಾದರೆ ಅದೇ ಪ್ರೇಮಕ್ಕೆ ದೇವತ್ವ, ಜ್ಞಾನ ಪೂರ್ಣ, ನಿರ್ವಿಕಲ್ಪ, ಪರಿಪೂರ್ಣ ಭಕ್ತಿ, ಮಹಾ ದಿವ್ಯ ಭಕ್ತಿ ಎಂದು ದೊಡ್ಡ ಹೆಸರು ಬರುವದು. ಇಂಥ ಪ್ರೀತಿಯನ್ನು ದೊರಕಿಸುವದು ಪ್ರತಿಯೊಬ್ಬ ಮಾನವನ ಹೆಗ್ಗುರಿಯಾಗಿರವದು. ಇದನ್ನು ದೊರಕಿಸಲಿಕ್ಕೆ ವಿಷಯವನ್ನು ತಬ್ಬಿಕೊಂಡು ಅಪ್ಪಿಕೊಳ್ಳದೆ ಪರಮಾತ್ಮನನ್ನು ನಂಬಿ ಬಲವಾಗಿ ಅಪ್ಪಿಕೊಳ್ಳುವದೇ ಇದಕ್ಕೆ ತಕ್ಕ ಉಪಾಯ. ಇದರ ಹೊರತು ಬೇರೆ ಮಾರ್ಗಗಳೇ ಇಲ್ಲ.

ಇದಲ್ಲಕ್ಕೂ ಮನವೇ ಕಾರಣ. ಅದಕ್ಕಂತಲೇ "ಮನ: ಏವ ಮನುಷ್ಯಾಣಾಂ ಕಾರಣಂ ಬಂಧ ಮೋಕ್ಷಯೋ: । ಬಂಧಶ್ಚ ವಿಷಯಾಸಕ್ತಿ: ನಿರ್ವಿಷಯಶ್ಚ ಮೋಕ್ಷ: " ಎಂದು ಮನುಸ್ಮೃತಿಯಂತೆ ಈ ಮನವನ್ನು ಯಾತರಲ್ಲಿ ನಾವು ಹಾಕುವೆವೋ ಅದರಂತೆ ನಾವು ನಿರ್ಮಾಣರಾಗುವೆವು. ಮನವನ್ನು ವಿಷಯದಲ್ಲಿ ಹಾಕಿದರೆ ವಿಷಯಿಯಾಗುವನು, ಮನವನ್ನು ದೇವನಲ್ಲಿ ಹಾಕಿದರೆ ದೇವನಾಗುವನು. ಅದಕ್ಕಂತಲೇ ಮನವು ಬಹಿರ್ಮುಖವಾಗಲು ಮಾಯಾಪ್ರಪಂಚಿ ಮನವು ಅಂತರ್ಮುಖವಾಗಲು ಅವಿರಳ ಜ್ಞಾನಿ. ಮನವು ಮಹದಲ್ಲಿ ನಿಂದಿರಲಾತ ಮುಕ್ತನೆಂದು ಬಸವಣ್ಣನವರು ಹೇಳಿದ್ದು ಬಹು ಮಾರ್ಮಿಕವಾದ ವಚನವಿದೆ. ಮನವು ಕೆಳಗಿಳಿಯಲೂ ಬಲ್ಲದು. ಮಧ್ಯದಲ್ಲಿರ ಬಲ್ಲದು, ದೇವನ ಕಡೆಗೆ ಹೋಗಬಲ್ಲದು. ದೇವನಲ್ಲಿ ಲೀನವಾಗಲೂ ಬಲ್ಲದು. ಹೇಗೆ ಹೇಗೆ ಅದು ಹೋಗುವದೋ ಹಾಗೆ ಹಾಗೆ ಅದಕ್ಕೆ ಸ್ಥಿತಿ ಬಂದು ಮಾನವನು ಅದರಂತೆ ಆಗುವನು. ಮನಸ್ಸಿಗೆ 'ಬೇರೆ ರೀತಿಯಿಂದ ಪ್ರೀತಿ ಪ್ರೇಮವೆಂದು ಅರ್ಥವಾಗುವದು. ಅದೇ ಮನಸ್ಸನ್ನು ದೇವನಲ್ಲಿ ಇಟ್ಟರೆ

ಭಕ್ತನಾಗುವನು. ವಿಷಯದಲ್ಲಿಯ ನಿನ್ನ ಮನವನ್ನು ಕಿತ್ತಿ ತೆಗೆದು ದೇವನಲ್ಲಿ ಆ ಮನವನ್ನು ನಿಲಿಸು ಸ್ಥಿರಗೊಳಿಸು ಎಂದು ಅನ್ನುವ ರೂಢಿಯಾಗಿದೆ. ಪವಿತ್ರ, ನಿರ್ಮಲ, ನಿಶ್ಚಲವಾದ ಮನವೇ ಬ್ರಹ್ಮವೆಂದೆನಿಸುವದು. ಮನವನ್ನು ವಿಷಯದಿಂದ ಬಿಡಿಸಿ ಸಂಪೂರ್ಣ ನಿರ್ವಿಷಯಿಯನ್ನಾಗಿ ಮಾಡಿ ದೇವನಲ್ಲಿ ನೆಲೆಸುವದೇ ಭಕ್ತಿಯೋಗವೆನಿಸುವದು. ಮನವು ಅಸಂಖ್ಯ ವಿಷಯಗಳಲ್ಲಿ ಅಸಂಖ್ಯ ತುಣುಕು ಮಿಣುಕಾಗಿ ಹೋಗಿದ್ದರಿಂದ ಅದಕ್ಕೆ ಯಾವ ಶಕ್ತಿಯೂ ಬಂದಿಲ್ಲ. ತುಣುಕು ಮಿಣುಕಾದರೆ ಪ್ರೀತಿ ಪ್ರೇಮವೆಂಬ ನಾಮವು ಇದಕ್ಕೆ ಬರಲಾರದು. ಅದೆಲ್ಲ ಕೂಡಿ ಒಂದಾದರೆ, ಒಂದೇ ಸ್ಥಾನದಲ್ಲಿ ಬಿದ್ದರೆ ಅಂದರ ಒಟ್ಟು ಪರಮಾತ್ಮನಲ್ಲೇ ನೆಲೆಸಿದರೆ ಅದಕ್ಕೆ ಶಕ್ತಿ ಬರುವದು. ಆಗ ಅದಕ್ಕೆ ದಿವ್ಯ ಪ್ರೀತಿ, ಪ್ರೇಮಗಳೆಂದು ನಾಮ ಬರುವದು. ಅದೇ ಆಗ ಭಕ್ತಿಯೋಗವಾಯಿತು. ಪ್ರೀತಿ ಪ್ರೇಮದಿಂದ ಪರಮಾತ್ಮನನ್ನು ಕೂಡುವದು ಎಂದು ಅರ್ಥವಾಗುವದು. ಎಲ್ಲ ಯೋಗಗಳಲ್ಲಿ ಈ ಚಂಚಲವಾದ ಮನವನ್ನು (ಪ್ರೀತಿ ಪ್ರೇಮ) ಒಂದುಗೂಡಿಸುವದೇ ಇದೆ ಹೊರತು ಬೇರೆ ಏನೂ ಇಲ್ಲ. ಹರಿದು ಹಂಚಿ ಹೋದ ಒಡಕು, ತುಣುಕು, ಮಿಣುಕಾದ ಚೂರ್‍ರ ಚೂರಾದ ಮನವನ್ನು ಒಂದುಗೂಡಿಸಲಿಕ್ಕೆ ಈ ಎಲ್ಲ ಯೋಗಗಳೂ ಸಾಧನಗಳಾಗಿವೆ. ಆ ಎಲ್ಲ ಯೋಗಗಳಲ್ಲಿ ಭಕ್ತಿಯೋಗವು ಒಳ್ಳೇ ಸರಳ ಸುಲಭ. ಎಲ್ಲ ಹವಾಮಾನಕ್ಕೂ ಒಗ್ಗೂಡುವಂಥಾದ್ದು. ಎಲ್ಲ ತರಗತಿಯವರಿಗೆ ಸಾಧಿಸುವಂಥಾದ್ದು ಇರುತ್ತದೆಂದು ಹಿಂದಿನ ಲೇಖದಲ್ಲಿ ವಿವರಿಸಲಾಗಿದೆ. ಯಾವ ಪ್ರೀತಿಯನ್ನು ಮೊದಲು ವಿಷಯಗಳ ಮೇಲೆ ತೋರಿದ್ದೆವೋ ಅದೇ ಪ್ರೀತಿಯನ್ನು ಇಂದ್ರಿಯಾತೀತವಾದ ದೇವನ ಮೇಲೆ ಸ್ಥಿರಗೊಳಿಸಿದರೆ ಭಕ್ತಿ ಎನಿಸುವದು. ನಿರ್ವಿಷಯದಿಂದ ಮನಕ್ಕೆ ಬಲ ಬರುವದು. ನಿರ್ವಿಷಯದಿಂದ ಅದು ಪ್ರೀತಿ ಎನಿಸಿ ಪ್ರಕಾಶಮಾನವಾಗುವದು. ಇದೇ ದಿವ್ಯ ಭಕ್ತಿ ಎನಿಸುವದು. ಅದೇ ದೇವತ್ವವೆನಿಸುವದು. ಇದೆಲ್ಲ ಆದರ ಅಂತಿಮ ಮೆಟ್ಟಿಲೇ ಸರಿ. Love is God. God is love. love & God are one. pure, calm, & steady mind is God itself. ಎಂದು ಇದೇ ಸಾರದ ಇಂಗ್ಲೀಷ ವಾಕ್ಯಗಳಿವೆ. ಯೋಗವೆಂದರೆ ಮನಸ್ಸಿನ ಸರ್ವ ಪ್ರಕಾರದ ವ್ಯಾಪಾರಗಳನ್ನು ನಿಲ್ಲಿಸುವದೇ ಆಗಿದೆ ಎಂದು ಪಾತಂಜಲಿಯೂ ಕೂಡ ಹೇಳಿದ್ದಾನೆ. ಇದರಮೇಲಿಂದ ನೋಡಲಾಗಿ ಮನ-ಪ್ರೀತಿ-ದೇವ ಯೋಗ ಎಲ್ಲವೂ ಒಂದೇ ಅನಿಸದೆ ಇರಲಾರದು. ಅದಕ್ಕೆ ಭಕ್ತಿಯೋಗ

ಅರ್ಥಾತ್ ಪ್ರೀತಿಯೋಗವೆಂದೂ ಹೆಸರು ಇದ್ದುದು ಸರ್ವರಿಗೂ ತಿಳಿದಿರಲಿಕ್ಕೆ ಸಾಕು. ತ್ಯಾಗ, ವೈರಾಗ್ಯ, ಜಪ ತಪ, ಸತ್ಯ, ಅಹಿಂಸೆ, ಸಾಧನ, ಶಾಸ್ತ್ರ, ಶ್ರವಣ ಇದೆಲ್ಲವನ್ನೂ ಮಾಡುವದು ಬರೇ ಒಂದು ಮನವನ್ನು ಶುದ್ಧಗೊಳಿಸಿ ಶಾಂತಗೊಳಿಸಿ ನಿಶ್ಚಲವಾಗಿ ನಿಲ್ಲಿಸಲಿಕ್ಕೆ ಹೊರತು ಬೇರೆ ಯಾತಕ್ಕೂ ಇಲ್ಲ. ಇದಕ್ಕಾಗಿಯೇ ಸರ್ವ ಯೋಗಗಳೂ ಕೂಡ ಯತ್ನಿಸುವವು.

( ಲೇಖಾಂಕ ೨.)

## ಭಕ್ತಿಯೋಗ

ಹಿಂದಿನ ಒಂದನೇ ಲೇಖದಲ್ಲಿ ಭಕ್ತಿಯೋಗದ ಸಾಮಾನ್ಯ ರೂಪರೇಷೆಯನ್ನು ಕುರಿತು ಬರೆಯಲಾಗಿದೆ. ಎರಡನೇ ಲೇಖದಲ್ಲಿ ಭಕ್ತಿಯೋಗಕ್ಕೆ ಮನಸ್ಸಿನ ಸಂಬಂಧವನ್ನು ವಿವರಿಸಲಾಗಿದೆ. ಇನ್ನು ಭಕ್ತಿಯೋಗಕ್ಕೆ ಒಳ್ಳೇ ಮಹತ್ವ ಪೂರ್ಣವಾದ ಸತ್ಸಂಗದ ಅವಶ್ಯಕತೆಯು ಬಗೆಗೆ ವಿವರಿಸಬೇಕಾಗಿದೆ. ಯಾಕಂದರೆ ಇದೇ ಭಕ್ತಿಯೋಗಕ್ಕೆ ತಳಹದಿಯಾಗಿದೆ. ಯಾವುದಕ್ಕಾದರೂ ಇದು ಬೇಕೇ ಬೇಕು. ಇದರ ಅವಶ್ಯಕತೆ ಬಹಳೇ ಇರುತ್ತದೆ. ಈ ತಳಹದಿಯು ಚನ್ನಾಗಿದ್ದರೆ ಯಾತರದೂ ಯಾವ ತರದ್ದೂ ಎಲ್ಲಿಯೂ ಭಯವಿಲ್ಲ. ಇದರ ಮೇಲೆ ಕಟ್ಟಿದ ಪ್ರತಿಯೊಂದು ಕಟ್ಟಡವು ಶಾಶ್ವತವೂ ಸುರಕ್ಷಿತವೂ ಬಲವುಳ್ಳವೂ ಆಗುವವು. ಕಾರಣ ಈ ಸತ್ಸಂಗದ ಬಗೆಗೆ ವಿಚಾರಿಸುವೆನು. ಇದು ಸತ್ಸಂಗ ಇದು ದುಸ್ಸಂಗವೆಂದು ತಿಳಿಯಬೇಕಾದರೆ ಸರಿಯಾಗಿ ವಿವೇಕವನ್ನು ಉಪಯೋಗಿಸಬೇಕು. ಈ ವಿವೇಕದ ಗೊಂದಲವೇ ಬೇಡೆಂದು ಈಗೀಗ ಇದನ್ನು ಒಹುವುಟ್ಟಿಗೆ ಬಹುಜನರು ತೆಗೆದುಹಾಕಿದ್ದಾರೆ. ಅದಕ್ಕಂತಲೇ ಬೇಕಾದಂತೆ ಜನರು ಸಾಗಿದ್ದಾರೆ. ದಿಕ್ಕುಗಾಣದೆ ಗತಿಗಾಣದೆ ಬರೇ ಮುಗ್ಗರಿಸುತ್ತಿರುವರು. ಅದಕ್ಕೆ ವಿವೇಕವನ್ನು ಉಪಯೋಗಿಸಿ ಅದರ ಕಾರಭಾರ ನಡೆಯಂತೆ ಮಾಡಿದರೆ ಸತ್ಸಂಗವೆಂದರೆ ಏನು ? ಸತ್ಸಂಗದಲ್ಲಿ ಏನೇನು ಅಡಕವಾಗಿರುವವು ಎಂಬುದು ಚನ್ನಾಗಿ ತಿಳಿದು; ಭಕ್ತಿಯೋಗಕ್ಕೆ ಇವೆಷ್ಟು ಸಂಬಂಧವಾಗುವವೆಂದು ಹೊಳೆಯುವದು.

ಈ ಶರೀರವೆಂಬ ಏಳು ಸುತ್ತಿನ ಕೋಟೆಗೆ ಒಂಭತ್ತು ಮುಖ್ಯ ಬಾಗಿಲುಗಳುಂಟು. ಈ ಎಲ್ಲ ಬಾಗಿಲುಗಳಿಂದ ಒಳಗಿನವನಿಗೆ ಯಾವ ರೀತಿಯಿಂದ ಸಂಗ ಲಭಿಸುವದೋ ಅದರಂತೆ ಒಳಗಿನವನೂ ನಿರ್ಮಾಣನಾಗುವನು.

ಆದಕ್ಕೆ ಒಳಗಿನವನಿಗೆ ಈ ಮಾರ್ಗಗಳಿಂದ ಒಳ್ಳೇದನ್ನು ಕಳಿಸಿದರೆ ಒಳ್ಳೇ ಯವನೂ, ಕೆಡಕಾದವುಗಳನ್ನು ಕಳಿಸಿದರೆ ದುರುಳನೂ ಹೊಲಸಾದುದನ್ನು ಕಳಿಸಿದರೆ ಹೊಲೆಯನೂ ಆಗುವನು. ಇದೆಲ್ಲಕ್ಕೂ ಕೂಡಿ ಸಂಗವೆನ್ನುವರು. ಅವನು ಭಕ್ತಿಯೋಗಿಯಾಗಬೇಕಾದರೆ ಈ ಮಾರ್ಗಗಳಿಂದ ಅವನಿಗೆ ಯಾವುದನ್ನು ಕಳಿಸಬೇಕೆಂಬುದೇ ಬಹು ಮಹತ್ವವಾಗಿದೆ. ಮೊದಲು ಮನವನ್ನು ಶುದ್ಧವೂ ಪವಿತ್ರವೂ ನಿರ್ಮಲವೂ ಆಗುವಂತೆ ಮಾಡಬೇಕು. ಆಹಾರದಿಂದ ಮನವು ತಯಾರ ಆಗುವದು. ಒಳ್ಳೇ ಆಹಾರದಿಂದ ಒಳ್ಳೇ ಮನ, ಕೆಟ್ಟ ಆಹಾರದಿಂದ ಕೆಟ್ಟ ಮನವು ತಯಾರ ಆಗುವದು. ಆದಕ್ಕೆ ಮೊದಲು ಆಹಾರದ ಶುದ್ಧಿ ಅವಶ್ಯವಿದೆ. ಶರೀರಕ್ಕಂತೂ ಆಹಾರದ ಅವಶ್ಯಕತೆ ಉಂಟೆಂದು ಎಲ್ಲರೂ ತಿಳಿದ ವಿಷಯ. ಪೌಷ್ಟಿಕ ಆಹಾರದಿಂದ ಶರೀರ ಮನಗಳು ಪುಷ್ಟಿಗೊಳ್ಳುವವು. ಕಾಮುಕ ಆಹಾರದಿಂದ ಕಾಮುಕ ಶರೀರ ಮನಗಳಾಗುವವು. ದುಷ್ಟ [illegible] ವು.

ಸಾತ್ವಿಕ ಆಹಾರ, ರಾಜಸ ಆಹಾರ, ತಾಮಸ ಆಹಾರ ಎಂದು ಮೂರು ವಿಧಗಳುಂಟು. ಕಾರಣ ಭಕ್ತನು ಯಾವಾಗಲೂ ಸಾತ್ವಿಕ ಆಹಾರವನ್ನೇ ಸೇವಿಸಬೇಕು. ನಮಗೆ ಬರುವ ಕಷ್ಟಗಳಲ್ಲಿ ಮುಕ್ಕಾಲು ಪಾಲ ಆಹಾರದಿಂದಲೇ ಬರುವವು. ಅತಿ ಊಟ ಮಾಡಿದರೆ ಮನಸ್ಸನ್ನು ನಿಗ್ರಹಿಸುವದು ಆಗುವದಿಲ್ಲ. ಬಹು ಚಂಚಲವಾಗುವದು. ಇದು ಭಕ್ತಿಯೋಗಕ್ಕೆ ಒಳ್ಳೇ ವಿರೋಧವೇ ಇರುವದು. ಮಾಂಸ ಮೊದಲಾದ ತಾಮಸ ಆಹಾರ ಸೇವಿಸಿದರೆ ಮನಸ್ಸು ಕಾಮ ಕ್ರೋಧದಿಂದ ಚಂಚಲವಾಗುವದು. ರಾಜಸ ಆಹಾರದಿಂದ ಮನುಷ್ಯನ ಮನಸ್ಸು ಸದಾ ಮಾಯಾಪ್ರಪಂಚಿಯಾಗುವದು. ಸಾತ್ವಿಕ ಆಹಾರದಿಂದ ಮನುಷ್ಯನು ಸಾತ್ವಿಕನಾಗಿ, ಭಕ್ತಿ ಜ್ಞಾನವಂತನಾಗುವನು. ಪಾಪಿಗಳಿಂದ ಆ ಆಹಾರ ತಯಾರ ಆಗಬಾರದು. ಅವರು ಅದನ್ನು ಸ್ಪರ್ಶ ಸಹ ಮಾಡಬಾರದು. ಹಳಸಿದ, ತಂಗುಳ, ಹೊತ್ತಿದ ಆಹಾರದಿಂದ ಮನಸು ಶುದ್ಧಿಯಾಗುವದಿಲ್ಲ. ಮಬ್ಬು ಮದಡ ಆಗುವದು. ಶೀಲವಂತರು ಆಹಾರವನ್ನು ತಯಾರಿಸಿರಬೇಕು. ತುಡುಗು ಮಾಡಿದವನಿಂದ ಕೊಂಡು, ಧಾನ್ಯವನ್ನು ತಂದು ನಾವೇ ಅಡಿಗೆ ಮಾಡಿ ತಿಂದರೂ ನಮ್ಮಲ್ಲಿ ತುಡುಗಿನ ಭಾವನೆ ಬರುವವು. ಸತ್ಯ ರೀತಿಯಿಂದ ಆಹಾರವನ್ನು ಗಳಿಸಿರಬೇಕು. ಕರಿದ ಪದಾರ್ಥ, ಉಳ್ಳಾಗಡ್ಡಿ, ಮಾಂಸ, ಬೊಳ್ಳಿ, ಮಾಂಸ, ದಾರು, ಚಾಹಾ, ಗಾಂಜಿ, ಮೊದಲಾದ ಉದ್ರೇಕವಾದ ಆಹಾರಗಳನ್ನು ಭಕ್ತನು ಅವಶ್ಯ

ವರ್ಜಿಸಬೇಕು. ಅನ್ಯರ ಎಂಜಲವನ್ನು ಮುಟ್ಟಬಾರದು. ಅಡಿಗೆಯ ಬಾಂಡೆಗಳೂ ಶುದ್ಧವಾದವುಗಳಿರಬೇಕು. ಈ ಪ್ರಕಾರ ಶುದ್ಧ ಆಹಾರದ ಅವಶ್ಯಕತೆಯನ್ನು ಅರಿತು ಒಳ್ಳೇ ವಿವೇಕವನ್ನು ಉಪಯೋಗಿ ಆದಷ್ಟು ಶುದ್ಧ ಆಹಾರ ಸೇವನೆಗೆ ಜಾಗ್ರತವಾಗಿ ಇರಬೇಕು. ಶುದ್ಧ ಆಹಾರದಿಂದ ಶುದ್ಧ ಮನವು ತಯಾರ ಆಗುವದು. ಶುದ್ಧ ಮನಸ್ಸು, ಧ್ಯಾನ ಜಪ ತಪ, ಯೋಗ ಮೊದಲಾದ ಪಾರಮಾರ್ಥಿಕ ಕೆಲಸಕ್ಕೆ ಬಹು ಸಾಧಕವಾಗುವದು. ಭಕ್ತನಿಗೆ ಇದರ ಅವಶ್ಯ ಬಹಳೇ ಇದೆ. ಹಲ್ಲುರುಚಿಗಾಗಿ ಏನನ್ನೂ ತಿನ್ನಬಾರದು. ಹೀಗಾದರೆ ಉಳಿದವುಗಳು ರುಚಿ ಸಹ ಬೆಳೆಯುಹತ್ತುವವು. ಜೀವನ ಧಾರಣ ಪೋಷಣೆಗಾಗಿ ಮಾತ್ರ ಸತ್ವ ಆಹಾರ ಸೇವನೆ ಮಾಡಿದರೆ ಭಕ್ತನಾಗುವನು.

ನಾಲಿಗೆ ಆಹಾರ- ಕೆಟ್ಟ ಹೊಲಸು ನುಡಿಗಳನ್ನು ನುಡಿಯಬಾರದು. ಇದು ದುಸ್ಸಂಗವಾಗುವದು. ಒಳಗೆ ಅದರ ಪರಿಣಾಮವಾಗುವದು. "ಅಯ್ಯಾ ಎಂದರೆ ಸ್ವರ್ಗ ಎಲವೋ ಎಂದರೆ ನರಕ" "ಹೊಯ್ದರೆ ಹೊಯ್ಗಳು ಕೈಮೇಲೆ, ಬಯ್ದರೆ ಬಯಿಗಳ ಕೈಮೇಲೆ" "ದಿಟವ ನುಡಿಯುವದು ನುಡಿದಂತೆ ನಡೆಯುವದು" "ಸತ್ಯವ ನುಡಿಯುವದೇ ದೇವಲೋಕ, ಮಿಥ್ಯವ ನುಡಿಯುವದೇ ಮೃತ್ಯುಲೋಕ" ಇದು ನುಡಿಯ ಶುದ್ಧಿ. ಇದರಿಂದ ಭಕ್ತಿಯೋಗಕ್ಕೆ ಬಹು ಸಹಾಯವಾಗುವದೆಂಬುವದರಲ್ಲಿ ಸಂದೇಹವಿಲ್ಲ. ಕಾರಣ ಸಾತ್ವಿಕ ನುಡಿಗಳನ್ನು ಸದಾ ನುಡಿಯುತ್ತಿರಬೇಕು.

ಕಣ್ಣಿನ ಆಹಾರವೂ ಕೂಡ ಒಳ್ಳೇ ಸಾತ್ವಿಕವಾದುದೇ ಇರಬೇಕು. ರಾಜಸ ತಾಮಸವಾದದನ್ನು ನೋಡುವದು ದುಸ್ಸಂಗವಾಗುವದು. ಸಿನೇಮಾ ನಾಟಕ ನೋಡಕೂಡದು. ಅಲ್ಲಿ ಸ್ತ್ರೀಪುರುಷರ ಅಶ್ಲೀಲ ನಡತೆಗಳೇ ಹೆಚ್ಚಾಗಿ ಇರುವವು. ಮನಸ್ಸಿನ ಮೇಲೆ ಇವುಗಳ ಕೆಟ್ಟ ಪರಿಣಾಮಗಳು ಆಗುವವು. ಒಳ್ಳೇ ಸಾತ್ವಿಕ ನೋಟಗಳನ್ನು ನೋಡು. ರಾಜಸ, ತಾಮಸ ಸ್ತ್ರೀಯ ಸಿಂಗಾರಗಳನ್ನು ಅವಲೋಕಿಸಕೂಡದು. ಶ್ರಿಂಗಾರ ಮಾಡುವ ವನಪು ವಯ್ಯಾರದ ಸ್ತ್ರೀಯರ ಹತ್ತಿರ ಸುಳಿಯಬೇಡ. ಇದು ಬಹು ಹಾನಿಕರ. ದೇವರ ಮೇಲಿನ ಭಕ್ತಿ ಹೋಗಿ ಇಂಥ ಸ್ತ್ರೀಯರ ಮೇಲೆ ಭಕ್ತಿ ಬೀಳಬಹುದು. ಅದಕ್ಕೆ ಮನಸ್ಸು ಉದ್ರೇಕಗೊಳ್ಳುವ ಆಹಾರವನ್ನು ನಯನಗಳಿಗೆ ಕೊಡಬೇಡ. ಇದೇ ದೃಷ್ಟಿ ಶುದ್ಧಿ ಎನಿಸುವದು. ಇದಾದರೆ ಭಕ್ತಿಯೋಗವು ಬಹು ತೀವ್ರ ಬೆಳೆಯುವದು.

ಕಿವಿಯ ಆಹಾರವು ಬಹು ಮಹತ್ವವಾದುದು. ಇದು ಕೂಡ ಸಾತ್ವಿಕವಾದುದನ್ನೇ ಕೇಳಬೇಕು, ಸಾತ್ವಿಕವಾದುದನ್ನೇ ಓದಬೇಕು. ಅಂದರೆ ಇದರ ಸಂಗದಿಂದ ಒಳಗಿನವನು ಶುದ್ಧ ಪವಿತ್ರನಾಗುವನು. ಅಶ್ಲೀಲ ಹೊಲಸು ಹಾಡು ಗಾಯನ ಗೀಗಿಗಳನ್ನು ಕೇಳಬಾರದು. ಅಶ್ಲೀಲ ಶ್ರಿಂಗಾರಗಳಿಂದ ತುಂಬಿದ ಕಾದಂಬರಿ ಕಥೆ, ಕಾವ್ಯ, ಆಟ, ನಾಟಕಗಳನ್ನು ಎಂದೂ ಓದಬಾರದು. ಇವುಗಳಿಂದ ಮನಸ್ಸಿನ ಮೇಲೆ ಬಹು ತೀವ್ರ ಕೆಟ್ಟಪರಿಣಾಮವಾಗಿ ಮನವು ಬಹು ಅಶುದ್ಧವಾಗುವದು. ಈಗಿನ ಸಾಹಿತ್ಯವು ಬರೀ ಶ್ರಿಂಗಾರ ಅಶ್ಲೀಲಗಳಿಂದ ತುಂಬಿ ಹೋಗಿವೆ. ಬರೆಯುವವರು ಹೆಚ್ಚಿನ ಯೋಗ್ಯತೆಯುವರಿಲ್ಲ. ಓದುವವರೂ ಕೂಡ ಅದೇ ತರಗತಿಯುವರೇ ಇರುವರು. ಇಂಗ್ಲೀಷರ ಆಳಿಕೆಯಿಂದ ಇಂಗ್ಲೀಷ ಸಾಹಿತ್ಯದ ಪರಿಣಾಮವಾಗಿ ಈಗ ಇದೇ ತರಗತಿಯ ಸಾಹಿತ್ಯವೇ ಬೆಳೆದಿವೆ. ಇದು ಕೀಳತರಗತಿಯ ಸಾಹಿತ್ಯವೇ ಬೆಳೆದಿವೆ. ಇದು ಕೀಳತರಗತಿಯ ಸಾಹಿತ್ಯವೇ ಸರಿ. ಮೊದಲಿನಿಂದಲೂ ನೀತಿ, ಭಕ್ತಿ, ಜ್ಞಾನ, ವೈರಾಗ್ಯ, ಸೇವೆಗಳಿಗೆ ಸಂಬಂಧಿಸಿದ ಸಾಹಿತ್ಯವೇ ಹೆಚ್ಚಾಗಿತ್ತು. ಪುರಾಣ, ವೇದ, ಉಪನಿಷತ್ತು, ಆಗಮ, ವಚನ, ಕಾವ್ಯ, ಸ್ಮೃತಿ, ಕಥೆ, ನಾಟಕುಗಳಲ್ಲಿ ಪಾರಮಾರ್ಥಕಕ್ಕೆ ಸಂಬಂಧಿಸಿದವುಗಳೇ ಇರುವವು. ಸ್ತ್ರೀಪುರುಷರೆಲ್ಲರೂ ಇವುಗಳನ್ನು ಓದಿ ಅವುಗಳಂತೆ ಆಚರಿಸುವದು ಹೆಚ್ಚಾಗಿದೆ. ಭಕ್ತಿಯ ಲವಲೇಶವೇ ಇವುಗಳಲ್ಲಿ ಇಲ್ಲ. ಭಕ್ತರಾಗಬೇಕೆನ್ನುವವರು ಇಂಥ ಕೆಟ್ಟ ಸಾಹಿತ್ಯದ ಸಂಗವೆಂದೂ ಮಾಡಬಾರದು. ಇವುಗಳನ್ನು ಓದುವವನು ಎಂದೂ ಭಕ್ತನಾಗಲಾರನು. ಒಳ್ಳೇ ಭಕ್ತಿಯ ಸಾಹಿತ್ಯವನ್ನು ಓದಬೇಕು. ಪುರಾಣಿಕರೂ, ಕೀರ್ತನಕಾರರೂ ಕೂಡ ಈಗಿನ ಕಾಲದಲ್ಲಿ ಬರೀ ಶ್ರಿಂಗಾರವಾದ ವಿಷಯಗಳನ್ನೇ ಹೆಚ್ಚಾಗಿ ಬಳಸುವರು. ಇದು ಶುದ್ಧತಪ್ಪು. ಬರೇ ಜನರನ್ನು ಮೆಚ್ಚಿಸುವ ಉದ್ದೇಶ ಇಟ್ಟುಕೊಂಡರೆ ಅವನು ಸ್ವಾರ್ಥಿ ಪುರಾಣಿಕ ಕೀರ್ತನಕಾರರಾಗುವರು. ದೊಡ್ಡ ಹೆಸರಿಟ್ಟುಕೊಂಡ ಗೊಡ್ಡವಾದದ್ಧನ್ನು ಹೇಳಿ ಜನರ ಕಡೆಯಿಂದ ಶಹಾಬಾಶಿ ಜಯಜಯ ಎನಿಸಿಕೊಳ್ಳಲಿಕ್ಕೆ ಯತ್ನಿಸಬಾರದು. ಇದು ಮಹಾ ದೊಡ್ಡ ವಂಚನೆಯಾಗುವದು. ಭಕ್ತನಾಗಬೇಕೆನ್ನುವವನು ಭಕ್ತರನ್ನೂ ತಯಾರಿಸುವವನು ಸಾತ್ವಿಕ ಶುದ್ಧ ಸಾಹಿತ್ಯವನ್ನು ಉಪಯೋಗಿಸುವದು ಅತಿ ಅವಶ್ಯ.

ನಾಸಿಕದ ಆಹಾರವೂ ಸಾತ್ವಿಕವಿರಬೇಕು ಮನವನ್ನು ಶ್ರಿಂಗಾರದ ಕಡೆಗೆ ಉದ್ರೇಕಗೊಳಿಸುವ ವಾಸನೆಯ ಒಡವೆಗಳನ್ನು ಎಂದೂ ಉಪಯೋ

ಗಿಸಬಾರದು. ಅದರಲ್ಲೇನು ಆದೆ ಎಂದು ಸಹನ ಮಾಡಬಾರದು. ಸಾತ್ವಿಕ ವಾಸನೆಗಳನ್ನು ಮಾಸಬೇಕು. ಗಂಧೆಣ್ಣೆ ಅತ್ತರ ಮೊದಲಾದವುಗಳನ್ನು ಉಪಯೋಗಿಸಬಾರದು. ಭಕ್ತನು ಇದರ ಬಗ್ಗೆ ಬಹು ಜಾಗರೂಕನಾಗಿಯೇ ಇರಬೇಕು. ಮನಸ್ಸು ಚಂಚಲವಾಗಿ ಧ್ಯಾನವು ಸಾಧಿಸುವದಿಲ್ಲ. ಇದರ ಅರ್ಥ ಹೊಲಸಿನಲ್ಲಿ ಕೊಳಚಿಯಲ್ಲಿ ಭಕ್ತನಿರಬೇಕೆಂದು ಅಲ್ಲ. ಶುದ್ಧವಾದ ಸಾತ್ವಿಕ ಹವೆಯಲ್ಲಿ ಇದ್ದರೇ ಭಕ್ತನಿಗೆ ಭಕ್ತಿ ಮಾಡಲಿಕ್ಕೆ ಸಾಧಿಸುವದು ಹೊರತು ಸಿಕ್ಕಲ್ಲಿ ಗಲಿಚದಲ್ಲಿ ಕುಳಿತರೆ ಏನೂ ಸಾಧಿಸುವದಿಲ್ಲ.

ಚರ್ಮಕ್ಕೆ ಮೋಹಕ-ಮಾಯಿಕ ಮೃದು ಮಧುರ ಆಹಾರವನ್ನು ಕೊಡಬಾರದು. ಸಾತ್ವಿಕ ಸ್ಪರ್ಶಗಳಿರಬೇಕು ಮನವು ಉದ್ರೇಕಗೊಳ್ಳುವ ವಡವೆಗಳನ್ನು ಮುಟ್ಟಬಾರದು. ಸ್ತ್ರೀಯರನ್ನು ಮುಟ್ಟಿದರೆ ಮನವು ಕೆಡುವದು. ಹೀಗೆ ಮಾಡಹತ್ತಿದರೆ ಅದಕ್ಕೆ ಅದೇ ಚಟ ಬೀಳುವದು. ಇದನ್ನು ಬಿಡಿಸುವದು ಬಹು ಕಠಿಣ. ಭಕ್ತರು ಇಂಥ ಸ್ಪರ್ಶಗಳಿಂದ ದೂರಿರಬೇಕು. ಸಾದಾ ಹಾಸಿಗೆಗಳನ್ನು ಉಪಯೋಗಿಸಬೇಕು. ಬಹು ನಯನ ಮನೋಹರವಾದ ಬಹು ಮೃದುವಾದ ಮೊಳವೆರಡುಮೊಳ ಎತ್ತರವಾದ ಗಾದಿ ಅಂದವಾದ ಪಲ್ಲಂಗ ಮೊದಲಾದವುಗಳನ್ನು ಉಪಯೋಗಿಸಬಾರದು. ಹೊದಕೆಗಳು ಸಾದಾ ಇರಬೇಕು ಬಹು ಬೆಲೆಯುಳ್ಳ ಬಣ್ಣ ಬಣ್ಣದ ತೀಳವಾದ ಜರದ ರೇಶಿಮೆಯ ಉಣ್ಣೆಯ ಬಟ್ಟೆಗಳನ್ನು ಎಂದೂ ಉಪಯೋಗಿಸಬಾರದು ಸಾದಾಖಾದಿ ಅಥವಾ ದಿಪ್ಪು ಅರಿವೆಗಳನ್ನು ಉಪಯೋಗಿಸಬೇಕು, ಮೈಯ್ಯಲ್ಲಿ ಅವಯವಗಳು ಕಾಣುವಂಥ ಅರಿವೆಗಳಿರಬಾರದು. ಇದರಿಂದಲೂ ಮನಸ್ಸು ಬಹು ಚಂಚಲವಾಗುವದು. ಇದರ ಅಭಿಮಾನವೂ ಬೀಳುವದು. ಇದೆಲ್ಲ ದುಸ್ಸಂಗವಾಗುವದು. ಕಾರಣ ಸಾತ್ವಿಕ ಬಟ್ಟೆಗಳನ್ನು ಉಪಯೋಗಿಸಬೇಕು. ಭಕ್ತನು ಇದರ ಬಗ್ಗೆ ಬಹು ಜಾಗರೂಕನಾಗಿ ಇರಬೇಕು.

ಇನ್ನು ಎಲ್ಲಕ್ಕಿಂತಲೂ ಹೆಚ್ಚಿನದು ಹಾಗು ಮಹತ್ವದು ಆದ ಆಹಾರದ ಬಗ್ಗೆ ಬಹು ವಿವೇಕವನ್ನು ಉಪಯೋಗಿಸಬೇಕು. ಇಂದ್ರಿಯ ಸುಖ, ಕಾಮವಾಸನೆ ಸಂಸಾರಿ ಇದ್ದರೆ ಬಹು ಮಿತಿಯಾಗಿ ಇರಬೇಕು. ಅದರಲ್ಲಿ ಮನಸ್ಸು ನಿಂತರೆ ಭಕ್ತಿಯ ಸಾಧನೆ ಸಾಧಿಸುವದಿಲ್ಲ. ಅಲ್ಲಿ ಸರ್ವ ಇಂದ್ರಿಯಗಳ ಶುದ್ಧೀಕರಣವು ಇದೊಂದರಿಂದಲೇ ಹಾಳಾಗುವದು. ಸನ್ಯಾಸ ಬ್ರಹ್ಮಚಾರಿ ವ್ರತವನ್ನು ಕೈಕೊಂಡರೆ ಅದನ್ನು ಕಾಯಾ ವಾಚಾ ಮನಸಾ ಪಾಲಿಸಬೇಕು. ಮೇಲೆ ಹೇಳಿದವುಗಳನ್ನು ಪಾಲಿಸಿ ಇದೊಂದರಲ್ಲಿ ಮನುಷ್ಯನು

ಮುಳುಗಿದರೆ ಅವೆಲ್ಲವುಗಳು ಎಂದೋ ಹೇಳಹೆಸರಿಲ್ಲದೆ ಹಾಳಾಗಿ ಹೋಗುವವು. ಕಾರಣ ಸಂಸಾರಿಯಾದ ಭಕ್ತನು ಕೂಡ ಕಾಮದಿಂದ ನಿಷ್ಕಾಮದ ಕಡೆಗೆ ಸಾಗುವ ಎತ್ತುಗಡೆಯನ್ನೇ ಸದಾ ಮಾಡುತ್ತಿರಬೇಕು. ಏನೋ ಮನೆತನಕ್ಕೆ ಸಂತಾನಬೇಕೆಂಬ ದೃಷ್ಟಿಯಿಂದ ಅದನ್ನು ಉಪಯೋಗಿಸಬೇಕು. ಇಂದ್ರಿಯ ಸುಖಕ್ಕಾಗಿ ಇದನ್ನು ನಡಿಸಬಾರದು. ಇದರ ಬಗ್ಗೆ ಸದಾ ವಿವೇಕ ಉಳ್ಳವನಾಗಿರಬೇಕು. ಅಂದರೆ ಭಕ್ತಿಮಾರ್ಗದಲ್ಲಿ ಭಕ್ತನು ಮುಂದೆ ಮುಂದೆ ಸಾಗುವನು. ಶರಣರ, ಋಷಿಗಳ, ಯೋಗಿಗಳ, ಮಹಾತ್ಮರ ಸಂಸಾರವನ್ನು ಬಹು ಸೂಕ್ಷ್ಮವಾಗಿ ವಿಚಾರಿಸುತ್ತಿರು. ನಿಷ್ಕಾಮ ಸಂಸಾರದ ಅರ್ಥ ಮಾಡಿಕೊಳ್ಳಲು ಯತ್ನಿಸಿರಿ. ಶರಣರು ಇದಕ್ಕಾಗಿ "ಬಳಸಿ ಬ್ರಹ್ಮಚಾರಿ, ಉಂಡು ಉಪವಾಸಿ" ಎಂದು ಕರೆದಿದ್ದಾರೆ. ಹೆಣ್ಣಿನ ಕೂಡ ಇರುತ್ತಿದ್ದರೂ ಬ್ರಹ್ಮಚಾರಿಯಾಗಿರಬೇಕು. ಉಪವಾಸವಿದ್ದರೂ ಉಂಡವನಂತೆ ಸದಾ ತೃಪ್ತಿಯಾಗಿರು. ವಿಷಯ ಭೋಗಿಸದಿದ್ದರೂ ಸದಾ ಸಂತೃಪ್ತನಾಗಿರು. ಮನಸ್ಸಿನಲ್ಲಿ ಅದರ ಬಗ್ಗೆ ಯಾವ ರೀತಿಯಿಂದಲೂ ವ್ಯಗ್ರನಾಗದಿರುವದು. ಇಂದ್ರಿಯಗಳನ್ನು ಕಟ್ಟಿ, ಮನವನ್ನು ಬಿಟ್ಟರೆ ಇದು ಎಂದೂ ನಿಗ್ರಹವಾಗುವದಿಲ್ಲ. ಇಂಥವನು ಭಕ್ತನಾಗಲಾರನು. ಕೆಲವರು ಇದಕ್ಕೆ ವಿಪರೀತ ಅರ್ಥವನ್ನೇ ಮಾಡುವರು. ಕಾಮನನ್ನು ಉಪಯೋಗಿಸಿ, ಬ್ರಹ್ಮಚಾರಿಯಾಗುವನು ಯಾರು? ಉಂಡರೂ ಉಪವಾಸಿಯಂತೆ ಇರುವನು ಯಾರು? ಇದು ಶಕ್ಯವಿಲ್ಲ. ಇಂಥ ಆಚರಣೆಯು ಅವಧೂತರಿಗೆ, ಷಟ್ಸ್ಥಲಬ್ರಹ್ಮಿಗಳಿಗೆ, ಶಕ್ಯನೆಂದು ಶಾಸ್ತ್ರಗಳು ಹೇಳುತ್ತಾವಂತೆ. ಶಾಸ್ತ್ರಕ್ಕೆ ಇಲ್ಲದ ಅರ್ಥಮಾಡಿ ಕೆಡಬಾರದು. ಜನರನ್ನೂ ಕೆಡಿಸಬಾರದು. ರಾಮನಿದ್ದಲ್ಲಿ ಕಾಮನಿಲ್ಲ. ರಾಮನಿದ್ದಲ್ಲಿ ಕಾಮನಿಲ್ಲ. ಇವರಿಬ್ಬರಿಗೂ ಎಂದೂ ಗೆಳೆತನ ಕೂಡಿ ಬರುವದಿಲ್ಲೆಂದು ಶ್ರೀ ರಾಮಕೃಷ್ಣ ಪರಮಹಂಸ ಶ್ರೀಶಿವಾನಂದ ಸರಸ್ವತಿ, ಶ್ರೀ ಅರವಿಂದ ಮೊದಲಾದವರು ಆಧುನಿಕ ಕಾಲದಲ್ಲಿಯೂ ಕೂಡ ಹೇಳುತ್ತಾರೆ. ಹೀಗಿದ್ದರೂ ನಮ್ಮ ಮಹಾ ಶಿವಶರಣರ ಜೀವನವನ್ನು ಸರಿಯಾಗಿ ತಿಳಿಯದೆ ವಿಪರೀತ ಅರ್ಥಮಾಡದೆ ಶರಣರ ಮಾರ್ಗ ಬೇರೆ ಇಂದ್ರಿಯಗಳನ್ನು ಬಳಲಿಸಬಾರದು. ಸಂಸಾರ ಮಾಡಿಯೇ ಮೋಕ್ಷ. ಎಲ್ಲ ಶರಣರೂ ಈಗಿನ ಜನರಂತೆ ಸಂಸಾರ ಮಾಡಿರುವರು. ಆ ಸಂಸಾರಕ್ಕೂ ಇದಕ್ಕೂ (ಜ್ಞಾನಕ್ಕೂ) ಯಾವ ಸಂಬಂಧವಿಲ್ಲ ಇದರಂತೆ ಯಾವ ಇಂದ್ರಿಯಗಳನ್ನು ಬಳಲಿಸಬಾರದು. ಮರುಗಿಸಬಾರದು ಎಂದು ಶರಣರು ಕೆಲವು ವಚನಗಳನ್ನು ಯಾಕೆ ಬರೆದರು? ಎಂದು ಅನೇಕ ಬಗೆಯ ಶಂಕೆ ತರ್ಕೊ

ಳ್ಳುವರು. ಇದು ಸರಿಯಲ್ಲ. ಇಂಥ ವಚನಗಳನ್ನು ಮಹಾ ಶಿವಶರಣರು ಎಂದೂ ಮಾಡುವದು ಶಕ್ಯವಿಲ್ಲ. ಅವುಗಳನ್ನು ಯಾವನಾದರೂ ಒಬ್ಬ ಕಾಮುಕನ ರಚನೆ ಅವರ ಹೆಸರಿನಿಂದ ಪ್ರಸಿದ್ಧಿಸಿರಬೇಕು. ಇದರಂತೆ ರಾಮಾಯಣ ಮಹಾರತ ಗ್ರಂಥಗಳಲ್ಲಿ ಸೇರಿಸಿದ್ದಾರೆ. ಕೆಲವು ಇಂಥ ವಚನಗಳನ್ನು ಯಾವನಾದರೂ ಕಾಮುಕನು ಬರೆದಿರಬೇಕು ಹೊರತು ಶಿವ ಶರಣರ ಜೀವನವು ಬಹು ಉದಾತ್ತ, ಸಾದಾ, ನಿಷ್ಕಾಮಶಾಸ್ತ್ರಕ್ಕೆ ಹೊಂದಿಕೆ ಯಾಗುವಂಥ ಬಹು ಆದರ್ಶ, ಶುದ್ಧ, ಜನಪ್ರಿಯ, ಪವಿತ್ರವಾದದ್ದು. ಸದಾ ದೇವನಲ್ಲೇ ರಮಿಸುವವನು ಕಾಮನ ಕಡೆ ಹೇಗೆ ಬರಬೇಕು. ಒಂದಕ್ಕೊಂದು ವಿರುದ್ಧವೆನಿಸುವವು. ಇದರ ಬಗ್ಗೆ ಒಂದು ವಿಸ್ತಾರ ವಾದ ಪ್ರತ್ಯೇಕ ಲೇಖವನ್ನು ಸಾಧಿಸಿದರೆ ಬರೆಯುವೆನು. ಈಗ ಇಷ್ಟೇ ಸಾಕು. ಭಕ್ತನು ಇದರ ಮೇಲಿಂದ ಕಾಮನ ವಿಷಯಕ್ಕೆ ಹೇಗೆ ವರ್ತಿಸ ಬೇಕೆಂದು ಹೇಳಲಾಗಿದೆ. ಅಂದರೆ ಮಾತ್ರ ಭಕ್ತನ ಮನವು ದೇವನಲ್ಲಿ ನೆಲಿಸುವದು. ಇಲ್ಲವಾದರೆ ಶಕ್ಯವಿಲ್ಲ. ಆಧಾರ ಶುದ್ಧಿಗೆ (ಮನ ಬುದ್ಧಿ, ಶರೀರ, ಪ್ರಾಣಗಳ ಶುದ್ಧಿಗೆ) ಮೇಲಿನವುಗಳಂತೆ ಆಚರಿಸಬೇಕು. ಅದರಲ್ಲಿ ವಿಶೇಷವಾಗಿ ಕಾಮ ಗಂಧ ಹೀನವಾದ ಆಚರಣೆಯು ಸರ್ವದರಲ್ಲಿ ಹೆಚ್ಚಿ ನದು. ಬಹು ಮಹತ್ವವಾದುದು. ಭಕ್ತನು ಆದಷ್ಟು ಕಾಮ ಗಂಧ ಹೀನ ವಾದ ಜೀವನವನ್ನು ಸಾಗಿಸಿ ಭಕ್ತಿ ಸಾಧನ ಮಾಡುತ್ತಿರಬೇಕು.

ಹೀಗೆ ಮಾಡುವದು ಎಲ್ಲದಕ್ಕೂ ಕೂಡೇ ಸತ್ಸಂಗವೆನ್ನುತ್ತಾರೆ. ಬರೇ ಸಜ್ಜನರ ಸಂಗವೇ ಸತ್ಸಂಗವಲ್ಲ. ಬರೇ ದುರ್ಜನರ ಸಂಗವಷ್ಟೇ ಹೀನವಲ್ಲ. ಇದರ ವಿವರಣೆಯನ್ನು ಮೇಲೆ ಕೊಡಲಾಗಿದೆ. ಸಾರ ಸಜ್ಜನರ ಸಂಗವ ಮಾಡುವದು. ದುರ ದುರ್ಜನರ ಸಂಗ ಬೇಡಯ್ಯ. ಅಂತರಂಗ ಶುದ್ಧವಿಲ್ಲ ದವರ ಸಂಗ ಸಿಂಗಿ ಕಾಳಕೂಟ ವಿಷ. ಸಜ್ಜನರ ಸಂಗ ಲೇಸು, ದುರ ದುರ್ಜನರ ಸಂಗವದು ಭಂಗವಯ್ಯ. ಕಾಮನ ತೊರೆದಾತ, ಹೇಮನ ಜರಿ ದಾತ, ಭಾನುವಿನ ಉದಯಕ್ಕೆ ಒಳಗಾಗದಾತ ಶರಣನು. ಶರಣರ ಮನೆಯಲ್ಲಿ ಶ್ವಾನವಾಗಿರಿಸು. ಹೊಲೆಯ ಹೊಲಬಿಗನಾದಡೆ ಅವನ ಹೊರೆಯಲ್ಲಿದ್ದು ಲೇಸು. ಬೇವಿನ ಬೀಜ ಬಿತ್ತಿ, ಬೆಲ್ಲದ ಕಟ್ಟೆಯ ಕಟ್ಟಿ, ಆಕಳ ಹಾಲ ನೆರೆದು, ಜೇನತುಪ್ಪ ಹೊಯ್ದರೆ ಸಿಹಿಯಾಗಬಲ್ಲುದೋ ? ಶಿವಭಕ್ತರಲ್ಲದವರ ಕೂಡ ನುಡಿಯಲಾಗದು, ಅರೆಭಕ್ತರಾದವರ ನೆರೆ ಬೇಡ, ಹೊರೆಬೇಡ, ದಾರಿ ಸಂಗಡ ಬೇಡ, ದೂರ ನುಡಿಯಲು ಬೇಡ. ಅಚ್ಚ ಲಿಂಗೈಕ್ಯಂಗೆ ತೊತ್ತಾ

ಗಿಪ್ಪುದು ಲೇಸು. ಪರುಷ ಮುಟ್ಟಲು ಕಬ್ಬುಣವು ಸುವರ್ಣವಾಯಿತ್ತು. ಭವಿಯ ಸೇರಿಸಲಾಗದು. ಈ ಪ್ರಕಾರ ಬಸವಣ್ಣನವರು ದುಸ್ಸಂಗ ಸತ್ಸಂಗ ಬಗ್ಗೆ ಹೇಳಿದ್ದು ಸರ್ವರಿಗೂ ವಿಧಿತವದೆ. ಇದನ್ನು ಹೆಚ್ಚು ವಿವರಿಸುವ ಕಾರಣವಿಲ್ಲ. ಒಳ್ಳೇ ಭಕ್ತರ, ಜ್ಞಾನಿಗಳ, ಮಹಾತ್ಮ ಮಹಿಮರ, ಸಿದ್ಧರ ಸಂಗವನ್ನು ಅವಶ್ಯ ಮಾಡಬೇಕು. ಇದಕ್ಕೆ ವಿರೋಧವಿದ್ದವರ ಸಂಗವನ್ನು ಎಂದೂ ಮಾಡಬಾರದು. ಅಂದರೆ ಭಕ್ತನು ತನ್ನ ಮಾರ್ಗದಲ್ಲಿ ಪತನವಾಗದೆ ಸುರಕ್ಷಿತ ಮುಂದುವರಿದು ದಂಡ ಕಾಣುವನು. ಭಕ್ತನು ಇವುಗಳನ್ನಲ್ಲದೆ ಇನ್ನೂ ಹೆಚ್ಚಿನ ಸತ್ಸಂಗದ ಆಹಾರವನ್ನು ಸೇವಿಸಬೇಕು. ಅವುಗಳನ್ನು ಸಂಕ್ಷೇಪವಾಗಿ ವಿವರಿಸುವೆನು.

ಯಾವ ಪ್ರಾಪಂಚಿಕ ವಸ್ತುಗಳ ಮೇಲೆ ಆಸಕ್ತಿಯನ್ನು ತೋರಬಾರದು. ತೋರಿದರೆ ಸ್ವಾರ್ಥಿಯಾಗುವನು. ಈ ಸ್ವಾರ್ಥತೆಯಿಂದ ಎರಡನೇಯವರ ಬಗ್ಗೆ ಅಸೂಯೆ ಉತ್ಪನ್ನವಾಗುವರು. ಅಸೂಯೆಯ ಎಲ್ಲ ಪಾಪಕ್ಕೂ ಮೂಲವಾಗಿದೆ. ಇದರ ತರುವಾಯ ಮೋಹ ಇದರ ಬಗ್ಗೆ ಹೇಳುವದು ಬಹಳವದೆ. ಯಾತರಲ್ಲಿಯೂ ನಾವು ಮೋಹಗೊಳ್ಳಬಾರದು. “ಇಂದ್ರಿಯಗಳು ಅತಿ ಆಸಕ್ತಿ ಇಲ್ಲದೆ ಅಸೂಯೆ ಇಲ್ಲದೆ, ಮೋಹ (ಭ್ರಾಂತಿ) ಇಲ್ಲದೆ ಕೆಲಸ ಮಾಡಬೇಕು. ಇಂಥ ಕೆಲಸಕ್ಕೆ ಶ್ರೀಶಂಕರಾಚಾರ್ಯರು ಆಧ್ಯಾತ್ಮದ ಶುದ್ಧ ಆಹಾರವೆನ್ನುವರು” ಶುದ್ಧ ಪವಿತ್ರ ನಿರ್ಮಲ ಆಹಾರವನ್ನು ನಿತ್ಯಸೇವಿಸುತ್ತ ಹೋದರೆ ಮಾತ್ರ ಈ ಅಸೂಯೆ ಆಸಕ್ತಿ ಮೋಹ (ಭ್ರಾಂತಿ) ಗಳಿಲ್ಲದೆ ನಮ್ಮ ಮನಸ್ಸು ಯೋಚಿಸಬಲ್ಲದು ಆಗ ಇದು ಶುದ್ಧಮನಸ್ಸೆನಿಸುವದು. ಇಂಥ ಮನಸ್ಸಿನಲ್ಲಿ ದೇವನ ನೆನಹು ಭಕ್ತಿ, ಪ್ರೀತಿ, ಧ್ಯಾನ, ಜಪ. ಮೊದಲಾದವುಗಳು ಸಹಜ ಸ್ವಾಭಾವಿಕ ನೆಲಗೊಳ್ಳುವದರಲ್ಲಿ ಎಳ್ಳಷ್ಟು ಸಂದೇಹವಿಲ್ಲ. ಕಾರಣ ಸದಾ ಈ ತರದ ಆಹಾರವನ್ನು ಸೇವಿಸಿದರೆ ಬಹು ಉತ್ತಮುವಲ್ಲವೆ?

ನಮ್ಮ ಆಧ್ಯಾತ್ಮ ಮಾರ್ಗದಲ್ಲಿ ಯಾವದು ನಿಜವಾಗಿ ನಿರಂತರವಾಗಿ ಸಹಾಯಮಾಡಿ ಮುಂದುವರಿಯುವಂತೆ ಮಾಡಿ ಗುರಿಯನ್ನು ಸೇರಿಸಲಿಕ್ಕೆ ನೆರವಾಗುವದೋ ಅದೆಲ್ಲ ಅವುಗಳೆಲ್ಲ ನಾವು ಮಾಡುವ ಸತ್ಸಂಗವೆಂದು ಹೇಳಬಹುದು. ಯಾವದು ಇದರ ವಿರುದ್ಧ ಫಲವನ್ನುಂಟು ಮಾಡಿ ವಿಷಯದಲ್ಲಿ ಪ್ರಪಂಚದಲ್ಲಿ ಕೊಳೆಯಲಿಕ್ಕೆ ಹಚ್ಚುವದೋ ಅದೆಲ್ಲ

ಕುಸಂಗವೆಂದು ಹೇಳಬಹುದು. ಇದರ ಬಗ್ಗೆ ಇನ್ನೂ ಕುಲಂಕುಷವಾಗಿ ವಿಚಾರಿಸುತ್ತಿದ್ದರೆ ಇದರ ಮರ್ಮವು ಸಹಜ ತಿಳಿಯುವದು ಈ ತರದ ಸತ್ಸಂಗಗಳ ಮಹಿಮೆಯನ್ನು ಬಣ್ಣಿಸುವದು ಬಹುಬಿಗಿ. ಕಾಮುಕ ಸಂಸಾರಿಗಳ ಯಾವ ವಸ್ತು ಒಡವೆಗಳನ್ನಾಗಲಿ, ಹಾಸಿಗೆ ಹೊದಿಕೆಗಳನ್ನಾಗಲಿ, ಭಾಂಡೆಕೊಂಡೆಗಳನ್ನಾಗಲಿ ವಾಹನವನ್ನಾಗಲಿ, ಉಪಯೋಗಿಸಕೂಡದು. ಅವುಗಳ ಸಂಗದಿಂದ ಅವನ ಗುಣಗಳೇ ಭಕ್ತರಿಗೂ ಬಂದು ಸೇರುವವು. ಇವೆಲ್ಲವುಗಳ ಬಗ್ಗೆ ಮೊದಮೊದಲಿಗೆ ಭಕ್ತಿಯ ಸಾಧನ ಮಾಡುವ ಭಕ್ತನು ಮಾತ್ರ ಅವಶ್ಯ ಪಾಲಿಸಬೇಕು. ತನ್ನಲ್ಲಿಯ ಭಕ್ತಿಯು ಕಿಡಿಯು ದಾವಾಗ್ನಿಯಾಗುವ ತನಕ ಜಾಗ್ರತೆಯನ್ನು ವಹಿಸಬೇಕು. ಭಕ್ತಿಯು ದಾವಾಗ್ನಿಯಂತಾದರೆ ಈ ಎಲ್ಲವುಗಳ ಸಂಗವು ಏನೂ ಮಾಡವು. ಇವನ ಹತ್ತರ ಈ ದುಃಸ್ಸಂಗಗಳು ಸುಳಿಯಹತ್ತಿದರೆ ಭಸ್ಮೀಭೂತವಾಗಿ ಹೋಗುವವು. ಇವುಗಳ ಆಟ ಏನೂ ಎಳ್ಳಷ್ಟು ನಡೆಯಲಾರದು. ಕಾರಣ ಮೊದಲು ಆಧಾರಶುದ್ಧಿಗೆ ಅವಶ್ಯ. ಇವೆಲ್ಲ ಬೇಕೇಬೇಕು. ಭಕ್ತನು ಆದಷ್ಟು ಶಮದಮೆಗಳನ್ನು ಹೆಚ್ಚಾಗಿ ಸಾಧಿಸುವದು ಬಹು ಸುರಕ್ಷಿತ ಕ್ಷೇಮಕರ. ಅಂದರೆ ಹೊಸ ಭಕ್ತನು ತನ್ನ ಸಾಧನೆಯನು ಬಹು ವೇಗವಾಗಿ ಸಾಗಿ ಬಲು ಮುಂದುವರಿಯುವನು. ಇವೆಲ್ಲವುಗಳು ಭಕ್ತಿಮಾರ್ಗಕ್ಕೆ ತಳಹದಿಗಳಾಗಿವೆ.

————

## ಮಹಾತ್ಮರ ಜಯಂತಿ



ಮಹಾತ್ಮರು ಬಂದರೆ ಶರಣರು. ಪರರ ಸಲುವಾಗಿ ದುಡಿಯುವವರೆಲ್ಲ ಮಹಾತ್ಮರು. ಅದಕ್ಕೆ "ಕಾಯಕವೇ ಕೈಲಾಸವೆಂದು" ರೂಢಿಯಾಗಿದೆ. ಸರ್ವ ತನು, ಮನ, ಧನ, ವಿತ್ತಜೀವಿತ, ಕೆಲಸ, ಮೊದಲಾದ ತನ್ನದೆನ್ನುವದೆಲ್ಲಿವನ್ನೂ ಪರರಿಗಾಗಿ ಅರ್ಪಣಮಾಡುವದು ಕಾಯಕವೆನಿಸುವದು. ಇದೆಲ್ಲವೂ ಸಾಲದಿದ್ದಕೆ ಪರರಿಗಾಗಿ ಕಡೆಗೆ ಸ್ವತ್ಯಾಗವನ್ನು ಕೂಡ ಮಾಡುವವನೇ ಮಹಾತ್ಮನೆನಿಸುವನು. ಹೀಗೆಲ್ಲ ಮಾಡಬೇಕಾದರೆ ಅವನು ನಿಜವಾಗಿ ಅಹಂಕಾರ ಮಮಕಾರಗಳನ್ನು ಸಂಪೂರ್ಣ

ತ್ಯಾಗ ಮಾಡಿಗಲಿಕ್ಕೆಬೇಕು. ನರರಲ್ಲಿ ಹರನನ್ನು ಕಂಡವರಿದ್ದರೆ ಇದೆಲ್ಲ ಸಾಧಿಸುವದು. ಬರೀ ಬಾಯಿ ಬ್ರಹ್ಮ ನುಡಿಯುವ ದುರುಳ ವೇದಾಂತಿ ಗಳಲ್ಲಿ ಇಂಥವರು ಏನೂ ತ್ಯಾಗವಾಡುವದಿಲ್ಲ ಮಾಡುವದೂ ಶಕ್ಯವಿಲ್ಲ. ಬರೀ ಇವರು ನಾಲ್ಕು ಪುಸ್ತಕಗಳನ್ನು ಓದಿ ಬ್ರಹ್ಮನಾದವರು. ಇವರು ಮಹಾತ್ಮರಾಗಲಾರರು.

ಶರಣರೆಲ್ಲರೂ ಹೀಗೇ ಮಹಾತ್ಮರಾಗಿದ್ದಾರೆ. ಅವರು ಮೊದಲು ಭಕ್ತಿಯನ್ನು ಅಳವಡಿಸಿದ ಮೇಲೆ ಜ್ಞಾನೋದಯವಾಗಲು ನರರೇ ಹರ ನೆಂಬ ಭಾವದಿಂದ ಸರ್ವವನ್ನೂ ತಮ್ಮ ಕಾಯಕದ ಸರ್ವಫಲವನ್ನು ಎಲ್ಲವನ್ನು ಪರರಿಗಾಗಿ ದಾಸೋಹ ಭಾವದಿಂದ ಅರ್ಪಣ ಮಾಡುವರು ಪ್ರಸಂಗ ಬಂದಾಗ ಶರಣರು ತಮ್ಮ ಪ್ರಾಣವನ್ನು ಸಹ ಅನ್ಯರಿಗಾಗಿ ಅರ್ಪಿಸಿದ್ದಾರೆ. ಅಂದರೆ ಸ್ವತ್ಯಾಗವನ್ನು ಕೂಡ ಮಾಡಿದ್ದಾರೆ. ಅದಕ್ಕೆ ಶರಣರಿಗೂ ಮಹಾತ್ಮರಿಗೂ ಅಂತರವಿಲ್ಲ ಕಾಯಕವೆಂದರೆ ಹೊಟ್ಟೆಹೊರ ಕೊಳ್ಳಲಿಕ್ಕೆ ಹೂಡಿದ ಒಂದು ಕಾರಸ್ಥಾನವಿಲ್ಲ. ಏನೂ ಮಾಡಿದರೂ ಪರರ ಸಲುವಾಗಿ ದುಡಿಯುವದೊ ಕಾಯಕ. ಅದೇ ದಾಸೋಹವೆಂದು ಅನ್ನುವರು.

ಇದೇ ಪ್ರಕಾರ ಉದಾತ್ತ ಭಾವದಿಂದ ಪೂರಿತರಾಗಿ ಮಹಾತ್ಮಾ ಗಾಂಧಿಯವರು ೪೦ ಕೋಟಿ ಜನರೆಲ್ಲ ದೇವರೆಂದೇ ನಂಬಿ ಅವರ ಹೀನ ಸ್ಥಿತಿ ಸುಧಾರಿಸಲಿಕ್ಕೆ ಅಖಂಡ ತಮ್ಮ ಆಯುಷ್ಯವನ್ನೇ ಧಾರೆಯರೆದಿ ದ್ದಾರೆ. ಇವರೂ ಮೊದಲಿನ ಭಾಗದಲ್ಲಿ ಸಂಸಾರವಾಡಿ ನಾಲ್ಕು ಮಕ್ಕ ಳನ್ನು ಹಡೆದ ತರುವಾಯ ತ್ಯಾಗದ ಮಹತ್ವದ ತಿಳಿದಾಗ ಹೆಂಡತಿ ಯನ್ನ ಗೆಳತಿಯಂತೆ ತಿಳಿದು ನಿರ್ವಿಷಯಿಗಳಾಗಿ ಸದಾ ಒಬ್ಬರಿಗೊಬ್ಬರು ನೆರವಾಗುತ್ತ ದೇಶೋದ್ಧಾರದಲ್ಲಿ ತಮ್ಮ ಪವಿತ್ರ ಜೀವನವನ್ನು ಸವಿಸಿ ಮುಕ್ತರಾಗಿದ್ದಾರೆ. ಇದೇ ಪ್ರಕಾರ ಶರಣರೂ ಕೂಡಾ ತಮ್ಮ ಹೆಂಡತಿ ಯೊಡನೆ ನಡೆದು ಪರರಿಗಾಗಿ ಸದಾ ಕಾಯಕಮಾಡಿ ಮಹಾತ್ಮರಾಗಿ ದ್ದಾರೆ. ಈಗಿನ ಸುಧಾರಿಸಿದ ಕಾಲದಲ್ಲಿ ಗಾಂಧಿಯವರದೆಲ್ಲ ಬರೆದ್ದು ಇಡಲು ಅನುಕೂಲವಾಯಿತು. ರೇಲು, ಶೀಘ್ರಲಿಪಿ, ಮೋಟಾರು, ತಾರ, ರೇಡಿಯೊ, ವಿಮಾನ, ಹಡಗ, ವಾಯರಲೆಸ್ ದೊದಲಾದ ಸಾಧನಗ ಳಿಂದ ಜಗತ್ತಿಗೆ ಇವರದೆಲ್ಲವೂ ಗೊತ್ತಾಯಿತು. ಪ್ರಚಾರ ಮತ್ತೂ ಹೆಚ್ಚು

ರಕ್ಕೆ ಇವೆಲ್ಲ ಅನುಕೂಲವಾದವು. ಆದರೆ ಶರಣರ ಕಾಲಕ್ಕೆ ೮೦೦ ವರ್ಷ ಗಳ ಹಿಂದೆ ಇವಾವ ಸಾಧನಗಳಿಲ್ಲದ ಮೂಲಕ ಪ್ರಚಾರವಾಗಲಿಲ್ಲ. ಶರಣರ ಚರಿತ್ರೆಗಳು ಈಗ ಏನೋ ಅಲ್ಪಸ್ವಲ್ಪ ಮಾತ್ರ ' ಶಿವಾನುಭವ , ಸಂಪಾದಕರಿಂದ ಪ್ರಕಾಶಕ್ಕೆ ಬಂದುದು ನಮ್ಮ ಭಾಗ್ಯವೇ ಸರಿ. ಶರಣರ ತತ್ವಕ್ಕೂ ಗಾಂಧಿಯವರ ತತ್ವಕ್ಕೂ ಅಂತರವಿಲ್ಲ. ಖಾದಿ, ಹರಿಜನೋದ್ಧಾರ, ಸತ್ಯ, ಅಹಿಂಸೆ, ಪರಸೇವೆ, ಸತ್ಯಾಗ್ರ, ಗ್ರಾಮೋದ್ಯೋಗಗಳ ಉದ್ಧಾರ ಇವೇ ತತ್ವಗಳನ್ನು ಪ್ರಚಾರ ಮಾಡಿದರು. ಕಾಂಗ್ರೆಸ್ಸುಗಳನ್ನು ಅವರೂ ಇವರೂ ಸ್ಥಾಪಿಸಿ ಹಳ್ಳಿಪಟ್ಟಣಗಳನ್ನು ಜಾಗ್ರತಗೊಳಿಸಿದ್ದಾರೆ. ಇವರದು ಹೆಚ್ಚಾಗಿ ಸಾಮಾಜಿಕವೆನಿಸಿದರೆ ಅವರದು ಧಾರ್ಮಿಕವಾಗಿತ್ತು. ಇಷ್ಟೇ ಇವರದಾದರೂ ರಾಷ್ಟ್ರಧರ್ಮನೆಂದು ಸಹ ಕರೆಯುತ್ತಿರುವರು. ಅಂತು ಗಾಂಧಿಯವರೂ ಕೂಡ ನಿಜವಾದ ಶರಣರೇ ಸರಿ. ಇಂಥ ಶರಣರ ಜಯಂತಿಯನ್ನು ನಾಡಿನ ತುಂಬ ಮಾಡಿ ಶರಣರಿಂದ ನಾವೂ ಸ್ಫೂರ್ತಿಯನ್ನು ಪಡೆಯೋಣ ಎಂದು ಹಾರೈಸುವೆ. ನಮ್ಮ ಉದ್ಧಾರಕ್ಕೆ ಶರಣರ ಜಯಂತಿ ಪುಣ್ಯಾರಧಿ ಸಪ್ತಾಹ ಮೊದಲಾದವುಗಳು ಅತ್ಯವಶ್ಯಕವೆಂದು ಈ ಲೇಖಕನ ಅಭಿಪ್ರಾಯ.

---

## ನಿರ್ಗುಣ (ಪರಾ) ಪೂಜೆ

೧

ಎಲ್ಲೆಡೆಗೆ ತುಂಬಿರ್ದ। ಆವ್ಹಾನ ವೆಲ್ಲಿ? ।
ಎಲ್ಲಕ್ಕೂ ಆಧಾರ। ಆಸನಗಳೆಲ್ಲಿ ? ।
ನಿರ್ಮಲನು ಎನಿಸಿರ್ದ। ಅರ್ಘ್ಯಪಾದ್ಯಗಳೇಕೆ? ।
ಶುದ್ಧ ತಾನಾದವಗೆ। ಆಚಮನವೇಕೆ? ।

೨

ಹೊಲಸು ಇಲ್ಲದ ನಿನಗೆ। ಸ್ನಾನವದು ಹೇಗೆ? ।
ವಿಶ್ವವ್ಯಾಪ್ಯವಾದವಗೆ। ಹೊದಿಕೆಗಳೆಲ್ಲಿಹವು? ।

ಅನ್ಯರಾಶ್ರಯಿಸದವಗೆ । ಲಿಂಗಧಾರಣವೆಲ್ಲಿ? ।
ವಾಸನಾರಹಿತಂಗೆ । ಹೂವುಗಳಿಂದೇನು? ।

೩

ಸ್ವಪ್ರಕಾಶನಾದವಗೆ । ದೀಪವದು ಎಂತು? ।
ನಿರ್ಲೇಪನಾದವಗೆ । ಗಂಧವದು ಎಲ್ಲಿ? ।
ರಮ್ಯರಮಣಗೆಇನ್ನು । ಆಭರಣವೆಲ್ಲಿಹವು? ।
ನಿತ್ಯತೃಪ್ತನಾದವಗೆ । ನೈವೇದ್ಯಹೇಗುಂಟು? ।

೪

ವಿಭು ಎನಿಸಿದ ನಿನಗೆ । ತಾಂಬೂಲವೆಲ್ಲಿಹುದು? ।
ಆದ್ಯಂತ ರಹಿತಂಗೆ । ಪ್ರದಕ್ಷಿಣೆಯದು ಎಂತು? ।
ವೇದಾಗಮಾತೀತಂಗೆ । ಸ್ತೋತ್ರವದು ಹೇಗೆ? ।
ವಿಶ್ವವ್ಯಾಪಿಯನಿಸಿರ್ದ । ಸಾಷ್ಟಾಂಗ ಕೆಡೆಯಲ್ಲಿ? ।

೫

ನಾಮಾತೀತಂಗೆ । ಜಪಗಳದು ಎಂತು? ।
ರೂಪಾತೀತಂಗೆ । ಪೂಜೆಯದು ಹೇಗೆ? ।
ನಿರ್ಗುಣಾತೀತಂಗೆ । ಸುಗುಣವೆಲ್ಲಿರಬೇಕು? ।
ನೀನೆ ನಾನಾಗಿರುವಾಗ । ಬೇಡುವದು ಯಾರಿಂಗೆ? ।

ಓಂಶಾಂತಿಃ ಓಂಶಾಂತಿಃ ಓಂಶಾಂತಿಃ

---

## ಶಿವ+ ಶಕ್ತಿಯರು = ಸತ್ + ಚಿತ್ = ಲಿಂಗ

ಓಂ ಪೂರ್ಣಮದಃ ಪೂರ್ಣಮಿದಂ। ಪೂರ್ಣಾತ್ ಪೂರ್ಣಮುದಚ್ಯತೆ॥
ಪೂರ್ಣಸ್ಯ ಪೂರ್ಣಮಾದಾಯ। ಪೂರ್ಣಮೇವ ಶಿಷ್ಯತೆ॥(ಉಪನಿಷತ್ತು)

ಸತ್ ಪರಶಿವನು ಪೂರ್ಣನೇ ಇರುವನು. ಅದರೊಳಗಿಂದ ಚಿತ್ ಪಾರ್ವತಿಯು ಸಹ ಪೂರ್ಣಳೇ ಇರುವಳು. ಪರಶಿವ (ಸತ್) ಪಾರ್ವತಿ (ಚಿತ್) ಕಳೆದರೂ ಪೂರ್ಣವೇ ಉಳಿಯುವದು. ಅದರಂತೆ ಆದಿಶಕ್ತಿ ಪಾರ್ವತಿಯು ಜಗತ್ತನ್ನು ನಿರ್ಮಿಸಿದರೂ ಪೂರ್ಣಳೇ ಉಳಿಯುವಳು.

ಎಂದು ಉಪನಿಷತ್ತಿನಲ್ಲಿ ಬಹು ಗಂಭೀರವಾಗಿ ಘಂಟಾಘೋಷವಾಗಿ ಋಷಿಗಳು ಸಾರಿದ್ದಾರೆ ಈ ಶಿವಚಿತ್ ಕಳೆಯು ಸತ್ ಪರಶಿವನಿಂದ ಹೇಗೆ ಬಂದು ಬ್ರಹ್ಮಾಂಡಗಳನ್ನು ಯಾಕೆ ನಿರ್ಮಿಸಿದಳೆಂದು ಈ ಜಗನ್ಮಾತೆ ಪಾರ್ವತಿಯೆಂಬ ಗ್ರಂಥದಲ್ಲಿ ವಿವರಿಸುವನು-

ಯಥಃ ಬ್ರಹ್ಮಾಂಡ ತಥಃ ಪಿಂಡಾಂಡ ಎಂಬಂತೆ ಬ್ರಹ್ಮಾಂಡದುಲ್ಲಿದ್ದುದರ ಸಾರ ಅಥವ ಫಲವ ರೂಪದಲ್ಲಿ ಈ ಪಿಂಡಾಂಡದಲ್ಲಿ ಇರುವದು. ಮಹಾವುಟ ವೃಕ್ಷದ ಸಾರವೆಲ್ಲ ಒಂದೇ ಒಂದಾದ ಚಿಕ್ಕ ಬೀಜದಲ್ಲಿ ಇರುವಂತೆ ಸರ್ವಬ್ರಹ್ಮಾಂಡದ ಸಾರವೆಲ್ಲವೂ ಈ ಮಾನವ ಶರೀರದಲ್ಲಿ ಅಡಕವಾಗಿದೆ. ಬ್ರಹ್ಮಾಂಡದಲ್ಲಿ ಸತ್, ಚಿತ್, ಆನಂದ, ವಿಜ್ಞಾನ, ಮನ, ಪ್ರಾಣ ಅನ್ನ ಎಂಬ ತತ್ವಗಳು ಅಡಕವಾಗಿರುವಂತೆ ನಮ್ಮ ಈ ಪಿಂಡಾಂಡದಲ್ಲಿಯೂ ಇರುವವು. ಸತ್, ಚಿತ್, ಆನಂದ (ಸಚ್ಚಿದಾನಂದ) ಕೂಡಿದ್ದೇ ಮಹಾ ಕಾರಣ. ವಿಜ್ಞಾನವೇ ಕಾರಣ. ಮನ ಪ್ರಾಣಗಳ ಕೂಡಿ ಸೂಕ್ಷ್ಮ. ಅನ್ನ (ಭೌತಿಕವು) ಸ್ಥೂಲವೆನಿಸುವದು.

ಸತ್-ಯಾವಾಗಲೂ ಇದ್ದಂತೆ ಇರುವಂಥಾದ್ದು, ಸತ್ಯವಾದದು ನಿಜವಾದದ್ದು ಅದೇ ಅಕ್ಷರ ಅವ್ಯಯ ಅವ್ಯಕ್ತ ಅದೇ ಪರಬ್ರಹ್ಮ ಪರಶಿವನೆಂದು ಸಂಬೋಧಿಸಲಾಗಿದೆ. ಚಿತ್-ಜ್ಞಾನಪೂರ್ಣವಾದದ್ದು ಎಲ್ಲ ಬ್ರಹ್ಮಾಂಡಗಳ ಪರಿಪೂರ್ಣ ಜ್ಞಾನ (ಗರ್ಭಿ)ವು ಇದೇ ಚಿತ್‌ದಲ್ಲಿ ಇರುವದು. ಸತ್‌ದಲ್ಲಿ ಈ ಚಿತ್ ಅಡಕವಾಗಿದೆ. ಇದೇ ಸತ್‌ದಲ್ಲಿರುವ ಸಂಕಲ್ಪಶಕ್ತಿ, ಚಿಚ್ಛಕ್ತಿ ಆದಿಶಕ್ತಿ ಪಾರ್ವತಿ ಎನಿಸಿದ್ದಾಳೆ. ಸತ್ ಮತ್ತು ಚಿತ್ ಕೂಡಿದ್ದರಿಂದ ಅದು ಆನಂದ ಪೂರ್ಣವಾಗುವದು. ಸತ್, ಚಿತ್, ಆನಂದ ಇವುಗಳ ಶಬ್ದಾರ್ಥ ಮಾಡಲಿಕ್ಕೆ ವಿಂಗಡಿಸಿದಂತೆ ಸರಿ. ಪರಿಪೂರ್ಣಾವಸ್ಥೆಯು ತುಟ್ಟ ತುದಿಯಲ್ಲಿ ಅದೆಲ್ಲ ಒಂದೇ ಇರುವದು. ಎಲ್ಲಿ ಸತ್ ಇರುವದೊ ಅಲ್ಲಿ ಚಿತ್ ಇರಲಿಕ್ಕೆ ಬೇಕು. ಸತ್ ಚಿತ್ ಕೂಡಿದ್ದು ಆನಂದ ವಿರಲಿಕ್ಕೆಬೇಕು. ಅದಕ್ಕಂತಲೇ ಸಚ್ಚಿದಾನಂದವೆಂದು ಒಂದೇ ನಾಮದಿಂದ ಆ ಪರಶಿವನಿಗೆ ಸಂಬೋಧಿಸುವದು ಸಹಜವದೆ. ಪರಶಿವನಲ್ಲಿ ಇವು ಮೂರು ಹೊಂದಿಕೊಂಡಿರುವವೆಂದು ಭಾವ ಇದು ಮಕಾರದ ಜಗದ ಸ್ಥಿತಿಯಾಯಿತು. ಇದರ ಜ್ಞಾನವೇ ಮುಕ್ತಿ ಎನಿಸುವದು. ಮಹಾಕಾರಣ ಜಗದಿಂದ ಅಂದರೆ ಸತ್-ಚಿತ್ ಆನಂದ (ಸಚ್ಚಿ

ಶಾನಂದ) ದಿಂದ ಕಾರಣ ಜಗವು ಉತ್ಪನ್ನವಾಯಿತು. ಅದೇ ವಿಜ್ಞಾನಮಯ ಜಗತ್ತು ಇಲ್ಲಿ ಸಕಲ ನಾಮರೂಪ ಗುಣಕ್ರಿಯೆಗಳ ನಿಜಸ್ವರೂಪದ ಸ್ಥಿತಿಯು ಬೀಜರೂಪದಲ್ಲಿ ಇರುವದು. ಈ ಕಾರಣ ಅಥವಾ ವಿಜ್ಞಾನಮಯ ಜಗತ್ತು ಅವರವು ಅಮೃತವೂ, ಶಾಶ್ವತವೂ, ಸತ್ಯವೂ ಆಗಿರುತ್ತದೆ. ಇಲ್ಲಿ ನಾಶ ಕೇಡುಗಳಿಲ್ಲಿ, ಜನನ ಮರಣಗಳಿಲ್ಲಿ ಸರ್ವವೂ ಇಲ್ಲಿ ಶಾಶ್ವತವಾಗಿರುವದು. ಆದರೆ ಒಂದು ರೂಪದಿಂದ ಮತ್ತೊಂದಕ್ಕೆ, ಒಂದು ಪೂರ್ಣತೆಯಿಂದ ಮತ್ತೊಂದು ಪೂರ್ಣತೆಗೆ ಮಾತ್ರ ಹೋಗಬಲ್ಲದು. ಅಂದರೆ ನಾವು ರೂಪುಗಳನ್ನು ಮಾತ್ರ ಬದಲಿಸುವದು. ಇಲ್ಲಿ ಎಲ್ಲವೂ ಸುಷುಪ್ತಾವಸ್ಥೆಯಲ್ಲಿರುವದು. ಈ ಕಾರಣದ ಜ್ಞಾನವೇ ಯೋಗಶಾಸ್ತ್ರವೆನಿಸುವದು. ಇದನ್ನು ಜ್ಞಾನದ ಸಹಾಯದಿಂದ ಅರಿಯುವನು. ಕಾರಣ (ವಿಜ್ಞಾನ) ಜಗದಿಂದ ಸೂಕ್ಷ್ಮವಾದ ಜಗತ್ತು ಉತ್ಪನ್ನವಾಯಿತು. ಇದು ಸ್ಥೂಲ ಇಂದ್ರಿಯಗಳಿಗೆ ಅತೀತವಾಗಿರುವದು. ಸ್ವಪ್ನಾವಸ್ಥೆಯಲ್ಲಿ ಇದು ಪ್ರಜ್ಞೆ ಬರುವದು. ಇದು ಮನ ಬುದ್ಧಿಯ ಜಗತ್ತು. ತರ್ಕ, ಕಲ್ಪನೆ, ಸ್ಮೃತಿ ಅನುಮಾನಗಳದೇ ಈ ಸೂಕ್ಷ್ಮ ಜಗತ್ತು ಹೊರತು ಬೇರೆ ಇಲ್ಲ. ಇವುಗಳಲ್ಲಿ ಮಿದುಳಿನ ಮಧ್ಯದಲ್ಲಿ ಉತ್ಪನ್ನವಾಗುವವು. ಈ ಸೂಕ್ಷ್ಮ ಜಗವನು ಉಚ್ಚತರ ಬುದ್ಧಿಯಿಂದ ಅರಿಯಬಹುದು. ಇದರ ಜ್ಞಾನವೇ ತತ್ವಶಾಸ್ತ್ರವೆನಿಸುವದು. ಸೂಕ್ಷ್ಮ ಪಂಚ ಭೂತಗಳು, ಸೂಕ್ಷ್ಮ ತನ್ಮಾತ್ರೆಯಗಳು, ಸೂಕ್ಷ್ಮ ಇಂದ್ರಿಯ ಸೂಕ್ಷ್ಮ ಕರಣಗಳು, ಸೂಕ್ಷ್ಮ ಪ್ರಾಣಗಳು ಕೂಡಿ ಈ ಸೂಕ್ಷ್ಮ ಜಗವು ಅಥವಾ ಶರೀರವು ಉತ್ಪನ್ನವಾಗಿದೆ. ಸ್ವಪ್ನದಲ್ಲಿ ಜಾಗ್ರುತೆಯಲ್ಲಿ ಕಂಡ ಸ್ಥೂಲ ರೂಪದ ಅನೇಕ ಒಡವೆಗಳ ಅನೇಕ ಭಾಗಗಳು ಕೂಡಿ ಒಂದೇ ರೂಪ ತಾಳಿ ಸೂಕ್ಷ್ಮವಾಗಿ ತೋರುವದು. ಈ ಸೂಕ್ಷ್ಮ ಜಗದಿಂದ ತೋರುವ ಈ ಸ್ಥೂಲ ಜಗವು ಉತ್ಪನ್ನವಾಯಿತು. ಸ್ಥೂಲ ಪಂಚಭೂತಗಳು, ಸ್ಥೂಲ ಪ್ರಾಣಗಳು, ಸ್ಥೂಲ ಕರಣಗಳು, ಸ್ಥೂಲ ಇಂದ್ರಿಯಗಳು, ತನ್ಮಾತ್ರೆಯಗಳು ಕೂಡಿ ಆದ ಜಗವು ಸ್ಥೂಲ ಜಗವೆನಿಸುವದು. ಈ ಸ್ಥೂಲದ ಜ್ಞಾನವು ಭೌತಿಕಶಾಸ್ತ್ರವೆನಿಸುವದು. ಅದನ್ನು ಜ್ಞಾನೇಂದ್ರಿಯಗಳಿಂದ ಅರ್ಥಾತ್ ಮನದ ಸಹಾಯದಿಂದ ಅರಿಯಬಹುದು.

ಮಹಾ ಕಾರಣದಿಂದ ( ಸಚ್ಚಿದಾನಂದ ಪರಶಿವನಿಂದ ) ಕಾರಣ (ವಿಜ್ಞಾನ). ಕಾರಣ (ವಿಜ್ಞಾನ) ದಿಂದ ಸೂಕ್ಷ್ಮ (ಮನಪ್ರಾಣ), ಈ

ಸೂಕ್ಷ್ಮ (ಮನಪ್ರಾಣ) ದಿಂದ ಸ್ಥೂಲ ಇಂದ್ರಿಯಗಳಿಗೆ ಗೋಚರವಾಗುವ ಜಗವು ಹೀಗೆ ಈ ಪದ್ಧತಿಯಿಂದ ಒಂದರಿಂದ ಒಂದು ಹೊರಗೆ ಬಂದವು. ಈ ನಮ್ಮ ಶರೀರವಾದರೂ ಮಹಾಕಾರಣ. ಕಾರಣ ಸೂಕ್ಷ್ಮ ಸ್ಥೂಲ ಈ ನಾಲ್ಕೂ ತತ್ವಗಳಿಂದ ಕೂಡಿದ್ದಾಗಿದೆ. ಇದೆಲ್ಲದರ ಉತ್ಪತ್ತಿಗೆ ಸತ್‌ದಲ್ಲಿಯ ಚಿತ್‌ಳೇ ಕಾರಣವಾಗಿರುವಳು. ಸತ್ ಪರಶಿವನಲ್ಲಿ ಸುಪ್ತವಾಗಿರುವ ಸಂಕಲ್ಪ ಶಕ್ತಿಯು ಚಿಚ್ಛಕ್ತಿ ಪಾರ್ವತಿಯು ಅವನ ಇಚ್ಛೆಯಂತೆ ಈ ಪ್ರಕಾರ ಅನೇಕ ಬ್ರಹ್ಮಾಂಡಗಳ ರೂಪತಾಳಿ ಒಳಸೇರಿ ಪರಶಿವ ಸಲುವಾಗಿ ಪಾರ್ವತಿಯು ಅನೇಕ ಪ್ರಕಾರದ ಲೀಲೆಗಳನ್ನು ಆಡಲು ಇಂಥತ್ಯಾಗ ಬಲಿದಾನಗಳಿಗೆ ಸಿದ್ಧಳಾಗಿ ಈ ಮಹಾಕಾರ್ಯಕ್ಕೆ ಕೈ ಹಾಕಿದ್ದಾಳೆ ಸತ್ ಪರಶಿವ ಇವನು ಪರಮಶಾಂತಮಯ ಸ್ವರೂಪದವನು. ಚಿತ್ ಪಾರ್ವತಿಯು ಜಗನ್ಮಾತೆ ಪರ ಶಕ್ತಿಮಯ ಸ್ವರೂಪಳು. ಕಾರಣ ಪರಮ ಶಾಂತಿಮಯನೂ ಪರಮ ಶಕ್ತಿಯುವಳೂ ಕೂಡಿಯೇ ಅರ್ಧ ನಾರೀ ನಟೇಶ್ವರನ ಲೀಲೆಕೋರಿದ ಶಿವ+ಶಕ್ತಿಯರ ಒಂದೇ ರೂಪವಾಗಿದೆ. ಪರಮ ಶಾಂತಿಮಯ ಪರಶಿವನ ಸಂಕಲ್ಪ ಮತ್ತು ಪರಮಶಕ್ತಿಮಯ ಪಾರ್ವತಿಯ ಕ್ರಿಯಾಶಕ್ತಿಗಳೆರಡೂ ಕೂಡಿದ್ದೇ ಈ ವಿರಾಟ ವಿಶ್ವದ ವಿರಾಟ ಲೀಲೆ ಹೊರತು ಬೇರೆ ಏನೂ ಇಲ್ಲ.

ಈ ಪರಶಿವನ ಚಿಚ್ಛಕ್ತಿಯ ಈ ಬ್ರಹ್ಮಾಂಡಗಳೊಳಗೆ ಅತಿ ಭರಿತಳಾಗಿ ತುಂಬಿ ತನ್ನ ಕ್ರಿಯಾ ಶಕ್ತಿಯಿಂದ ಕಾರ್ಯ ಮಾಡುವದರಲ್ಲಿ ಅತಿ ವಿಖ್ಯಾತ ಪ್ರಖ್ಯಾತಳೆನಿಸಿದ ಆ ಜಗನ್ಮಾತೆಯೆ ಪಾರ್ವತಿ ಎನಿಸಿದ್ದಾಳೆ. ಈ ಪರಶಿವನು ಕಾರಣ ರೂಪನು ಪಾರ್ವತಿಯು ಕಾರ್ಯರೂಪಳು. ಈ ಶುದ್ಧ ಸತ್ (ಪರಶಿವ) ವಾಙ್ಮನಕ್ಕೆ ಅಗೋಚರನು, ತ್ರಿಗುಣಾತೀತನು, ಭಾವಾತೀತನು, ಯಾವುದರ ಮಿಶ್ರಣವಿಲ್ಲದೆ ಒಂದೇ ಒಂದಾದ ಅಮರ ಆನಂದ ಮಯ ಪ್ರಜ್ಞೆಯಾಗಿದ್ದಾನೆ. ಇವನೇ ಪುರುಷನೂ ಅನಿಸುವನು. ನಾಮರೂಪಾತೀತ ಅದ್ವಿತೀಯ ಅವ್ಯಕ್ತ ದೇಶ ಕಾಲಾತೀತ ಸ್ವಯಂ ಪ್ರಭುಸ್ವಯಂಭು ಅನಂತನು ಶಾಶ್ವತನು ಅನಿರ್ವಚನೀಯನು. ಏಕಮೇವಾ ದ್ವಿತೀಯನು. ಈ ಪರಾತ್ಪರ ಪರಮಾತ್ಮನ ಸತ್ ನಿಗೂಢ ಶಾಂತ ನಿಶ್ಶಬ್ದತೆಯಲ್ಲಿ ಈ ಸಾರ್ವಭೌಮಿಕ ಪರಿಪೂರ್ಣಚಿತ್ ಆದಿಶಕ್ತಿ ಪಾರ್ವತಿಯು ಸುಪ್ತವಾಗಿರುವಳು. ಇವಳ

ವಿಚಿತ್ರವಾದ ಅಗ್ನಿಮಯಳಿರುವಳು. ಇವಳು ನಿರಾಕಾರ ಸಾಕಾರಳಾಗಿರುವಳು. ಇವೆರಡೂ ಒಂದಾಗಿ ದಿವ್ಯತರ ಸೇತುವೆಯಾಗಿರುವಳು. ಪರಶಿವನ ಭವ್ಯ ದಿವ್ಯ ಪರವಪರತರ ಹೃದಯಳಾಗಿರುವಳು. ಈ ಪರಶಿವನು ತಾನೇ ಸ್ವತಂತ್ರವಾಗಿ ಬ್ರಹ್ಮಾಂಡಗಳನ್ನು ನಿರ್ಮಿಸುವದಿಲ್ಲ. ಆದಿಶಕ್ತಿ ಚಿಚ್ಛಕ್ತಿ ಪಾರ್ವತಿಯು ಆತನೊಳಗಿಂದ ಆತನ ಸಂಕಲ್ಪಮಾತ್ರದಿಂದ ಹೊರಬಿದ್ದು ಅವಳು ತನ್ನ ಕಾರ್ಯದ ಅನೇಕ ಪ್ರಕಾರಗಳನ್ನು ನಿರ್ಮಿಸಿದ್ದಾಳೆ. ಅವುಗಳ ಮುಖಾಂತರವಾಗಿಯೂ ಮತ್ತು ತನ್ನಿಂದಲೇ ನಿರ್ಮಿಸಿದ ಅನೇಕ ಮಂತ್ರಿ ಪ್ರತಿನಿಧಿಗಳ ಅಂದರೆ ದೇವದೇವತೆಯರ ಮುಖಾಂತರವಾಗಿಯೂ ಅವತರಣ ಆಗುತ್ತಾಗುತ್ತ ಅತಿ ಕೆಳಪ್ರಕೃತಿಯ ವರೆಗೂ ಅಂದರೆ ಚರದಲ್ಲಿ ಪರ್ಷಲಿಕರತನಕ ಅಚನದಲ್ಲಿ ಅಣುಪರಮಾಣು ಆತನಕ ಇಳಿದು ಬಂದಿರುವಳು. ಈ ಮಹಾತಾಯಿ ಪಾರ್ವತಿಯು ಪರಶಿವನ ಸರ್ವಸತ್ತಾಧಿಕಾರಿಯಾಗಿ ಮಹಾಮಂತ್ರಿಯಾಗಿದ್ದಾಳೆ. ರಾಜನ ಯಾವತ್ತು ಸಂಕಲ್ಪಗಳನ್ನೆಲ್ಲ ಮಂತ್ರಿಯೇ ನೆರವೇರಿಸುವಂತೆ ಆ ಪರಾತ್ಪರ ಪರಶಿವನ ಸಂಕಲ್ಪಗಳನ್ನೆಲ್ಲ ಈ ಮಹಾತಾಯಿ ಪಾರ್ವತಿಯು ತನ್ನ ಮಂತ್ರಿ ಉಪಮಂತ್ರಿ ಪ್ರತಿನಿಧಿ ಮೊದಲಾದ ಹಲವು ದೇವದೇವತಿಯರಿಂದ ನೆರವೇರಿಸುತ್ತಿರುವಳು. ಇದಲ್ಲದೆ ಆ ಪರತ್ಪರ ಪರಶಿವ ಹಾಗೂ ಈ ವಿಶ್ವ ಇವುಗಳ ನಡುವೆ ಮಧ್ಯಸ್ಥಳಾಗಿಯೂ ನಿಂತಿದ್ದಾಳೆ. ಕೆಳಗಿನಿಂದ ಮಾನವನ ಪರಿಶುದ್ಧ ಹೃದಯ ಗುಹೆಯಿಂದ ಅನನ್ಯಭಕ್ತಿಯ ಕರೆಯ ಕೂಗು ಏಳಬೇಕು. ಆ ಪರಶಿವನ ಕೃಪೆಯು ಇವಳ ಮಧ್ಯಸ್ಥಿಕೆಯಿಂದಲೇ ಇಳಿದು ಬರುವದು ಶಕ್ಯವಿದೆ ಇಲ್ಲವಾದರೆ ಇಲ್ಲ. ಪರಾತ್ಪರ ಪರಶಿವನು ಮಹಾಶಾಂತಿಯುತ ಮಹಾತಂದೆ ಮತ್ತು ಚಿಚ್ಛಕ್ತಿ ಆದಿಶಕ್ತಿಯು ಮಹಾಶಕ್ತಿಶಾಲಿನಿ ಪಾರ್ವತಿಯು ಮಹಾತಾಯಿ ಇವರೇ ಸಾಮಾನ್ಯ ಭಾಷೆಯಲ್ಲಿ ಶಿವ-ಶಕ್ತಿಯರೆನಿಸಿದ್ದಾರೆ. (ಸತ್-ಚಿತ್)

ದೇಹ, ಪ್ರಾಣ, ಮನಗಳಿಂದ ಕೂಡಿದ ಕೆಳಗಿನ ದೇವಕೋಟಿಯ ಜಗತ್ತು ಮತ್ತು ಸತ್‌ಚಿತ್ ಆನಂದಗಳಿಂದ ಕೂಡಿದ ಅತಿ ಮೇಲಿನ ಪರಾತ್ಪರನ ಸ್ವಾನಂದ ಸಾಮ್ರಾಜ್ಯ ಇದೆರಡರ ನಡುವೆ ವಿಜ್ಞಾನಮಯ ಕಾರಣ ನಿತ್ಯ ದಿವ್ಯ ಜಗತ್ತೇ ಇವೆರಡಕ್ಕೂ ಮಹಾ ಸೇತುವೆಯಂತೆ ಇರುವರು. ಸತ್-ಚಿತ್-ಆನಂದಮಯ ಮಹಾಕಾರಣ ಸ್ವಾನಂಡ ಸಾಮ್ರಾಜ್ಯದಲ್ಲಿ ಇವನು ನಿಗೂಢ ಆನಂದದ ನಿರಾಕಾರ ಮಹೇಶ್ವರ ಅಥವಾ

ಪರಾತ್ಪರ ಪರಶಿವನೆನಿಸುವನು. ಆತನ ಶಕ್ತಿಯಾದ ಇವಳಿಗೆ ಮಹೇಶ್ವರಿ ಪರಮೇಶ್ವರಿ ಪಾರ್ವತಿ ಎನಿಸುವಳು, ವಿಜ್ಞಾನಮಯ ಕಾರಣ ಜಗದಲ್ಲಿ ಆವನೇ ಸಕಲೈಶ್ವರ್ಯ ಸಂಪನ್ನನಾದ ಈಶ್ವರನೆನಿಸುತ್ತಾನೆ. ಆತನ ದಿವ್ಯ ಶಕ್ತಿಯೇ ಈಶ್ವರಿ ಎನಿಸುವಳು. ಆ ಸತ್-ಚಿತ್-ಆನಂದ ಗಳು ಇಲ್ಲಿ ಪ್ರಕಾಶ-ಶಕ್ತಿ-ಜಡತ್ವಗಳಾಗಿ ಮಾರ್ಪಡುತ್ತವೆ. ಇನ್ನು ಪ್ರಾಣ-ಮನ-ದೇಹ (ಅನ್ನ)ಗಳ ಬಾಹ್ಯ ಜಗದಲ್ಲಿ ಅವನೇ ಅನೀಶನಾದ ಜೀವನೆನಿಸುತ್ತಾನೆ. ಅವನ ಶಕ್ತಿಯೇ ಪ್ರಾಣವೆನಿಸುತ್ತಾಳೆ. ಆಗ ಆ ಪ್ರಕಾಶ-ಶಕ್ತಿ ಜಡತ್ವಗಳೇ ಸತ್ವ, ರಜ, ತಮಗಳೆಂದು ಮಾರ್ಪಾಡಾ ಗುತ್ತವೆ. ಮೇಲೆ ಹೇಳಿದಂತೆ ಪರಶಿವನ ಸಂಕಲ್ಪಮಾತ್ರದಿಂದ ಅವ ನಿಂದ ಚಿಚ್ಛಕ್ತಿ ಪಾರ್ವತಿಯು ಹೊರಹೊರಡುವಾಗ ಓಂಕಾರ ನಾದ ವಾಯಿತು. ಅದೇ ಪ್ರಕಾಶ ಶಕ್ತಿ ಶಾಂತಿ (ಜಡತ್ವ) ಗಳ ಮೊತ್ತವು. ಅ-ಉ-ಮ ಗಳು ಕೂಡಿದ್ದೇ ಓಂಕಾರವು. ಇವುಗಳಿಂದ ಸತ್ವ-ರಜ-ತಮ ಗಳು ಹುಟ್ಟಿದವು. ಜಗತ್ತಿನ ಉತ್ಪತ್ತಿ ಸ್ಥಿತಿಲಯಗಳಿಗೆ ಕರ್ತರಾಗಿ ಬ್ರಹ್ಮ ಹರಿ ರುದ್ರರು ಜನಿಸಿದರು. ಇವರಿಂದ ಪಂಚಭೂತ ಮೊದ ಲಾದವುಗಳು ಉತ್ಪನ್ನವಾದವು. ಅನಂತ ಬ್ರಹ್ಮಾಂಡಗಳೇ ಅನಂತ ಜೀವಕೋಟಿಗಳೂ ಹುಟ್ಟಿದವು. ಈ ಪ್ರಕಾರ ಸತ್-ಚಿತ್ (ಶಿವ-ಶಕ್ತಿ ಯರು ಪರಮನ ರಾಜ್ಯದಿಂದ ಒಳ್ಳೇ ಕೆಳರಾಜ್ಯಕ್ಕೆ ಅವತರ ಆಗುತ್ತಾ ಗುತ್ತ ಈ ಮಟ್ಟಕ್ಕೆ ಇಳಿದು ಬಂದರೂ ಕೂಡ ಪರಶಿವನು ಸಾಕ್ಷೀ ಅನಮಂತಾ ಅವ್ಯಯ ಅವ್ಯಕ್ತವಾಗಿಯೇ ಇರುವನು. ಆದರೆ ಮಹಾ ತಾಯಿ ಪಾರ್ವತಿ ಮೇಲಿನಿಂದ ಅವತರಣವಾಗಿ ಬರುವಾಗಲೇ ಕ್ರಿಯಾ ಶಕ್ತಿ ಜ್ಞಾನಶಕ್ತಿ ಸಂಕಲ್ಪಶಕ್ತಿ ಬುದ್ಧಿಶಕ್ತಿ ಇಚ್ಛಾಶಕ್ತಿಗಳಿಂದ ಕೂಡಿ ದವಳಿರುವದರಿಂದಲೇ ಮೇಲೆ ವಿವರಿಸಿದಂತೆ ಸಂಕುಚಿತಗಳ ಸಕಲ ಆಕಾರ ತಾಳುತ್ತ ಬಹುರೂಪಕೊಂಡುತ್ತ ಅನಂತ ಬಣ್ಣ ತೋರುತ್ತ ಲಳ ಲಕ್ಷ ಜೀವರಾಶಿಯಾಗಿ ಅನೇಕ ಬ್ರಹ್ಮಾಂಡಗಳಾಗಿ ಚರದಲ್ಲಿ ಪಿಪೀಲಿ ಕದವರೆಗೆ ಅಚರದಲ್ಲಿ ಅಣುರೇಣುವಿನತನಕ ಕೆಳಮಟ್ಟಕ್ಕೆ ಇಳಿದು ಬಂದು ವುಗಳಿಗನುಗುಣವಾಗಿ ಅವುಗಳಲ್ಲಿ ಬೇರೆ ಬೇರೆ ಶಕ್ತಿಯ ರೂಪದಲ್ಲಿ ಪ್ರವೇಶಿಸಿ ನಿಂತಿದ್ದಾಳೆ. ಶಿವ-ಶಕ್ತಿಯರ (ಸತ್-ಚಿತ್) ಸಂಯೋಗವು ಮೇಲಿನಿಂದ ಕೆಳಮಟ್ಟದವರೆಗೆ ಎಲ್ಲದರಲ್ಲಿ ಎಲ್ಲಿ ಬೇಕಾದಲ್ಲಿ ಇರುವದು ಕಂಡುಬರುವದು. ತಂದೆ ಶಿವನು ಒಂದುರೂಪಿ ತಾಯಿ ಪಾರ್ವತಿ

ಬಹುರೂಪಿ ಇವೆರಡೂ ಕೂಡಿ ಎಲ್ಲ ಕಡೆಗೂ ನಿಂತಿದ್ದಾರೆ. ಇದ ಗುರ್ತಿಗಾಗಿಯೇ ಲಿಂಗನ್ನು ರಚಿಸಿದ್ದಾರೆ. ಪಿಂಡಿಕೆಯೇ ಪರಶಿವ, ಸತ್, ಪುರುಷ, ಆತ್ಮದ ಗುರ್ತು. ಪೀಠವೇ ಪಾರ್ವತಿ, ಚಿತ್, ಪ್ರಕೃತಿ ಕುಂಡಲಿ ಶಕ್ತಿಯ ಗುರ್ತು ಪರಶಿವನಿಂದ (ಪೆಂಡಿಕೆ) ಕೆಳಗಿಳಿದು ಬಹು ವಾದ (ದೊಡ್ಡದಾದ ಪೀಠ) ದ ರೂಪದಿಂದ ರಚಿಸಿದ ಶಿವಲಿಂಗವನ್ನು ಪೂಜಿಸುವರು. ಅಂದರೆ ಮಹಾ ತಂದೆ ಶಿವನನ್ನೂ ಪಾರ್ವತಿಯನ್ನೂ ಕೂಡಿಯೇ ಪೂಜಿಸುವರ ಗುರ್ತು ಅದು ಕುರಡ (ಪೀಠ, ಪಕೃತಿ) ವ ಮೇಲೆ ಕುಂಟ (ಪೆಂಡಿಕೆ ಪುರಷ) ನು ಕೂತು ಹೊಳೆ ದಾಟಿದ್ದರ ಗುರ್ತು. ಈ ಲಿಂಗವನ್ನು ನಾವು ಪೂಜಿಸುವ ಎರಡೂ ಮಹಾ ತಾಯಿ ತಂದೆಯರನ್ನು ಪೂಜಿಸಿದಂತೆ ಇರುವದು ಪೂರ್ಣ ಪೂಜೆ ಇರುವದು. ಇನ್ನು ಮುಂದಿನ ಲೇಖದಲ್ಲಿ ಪಾರ್ವತಿಯಿಂದ ಈ ಜಗತ್ತಿನ ಸರ್ವ ಚರಾ ಚರಗಳ ಉತ್ಪತ್ತಿ ಕ್ರಮ ಹಾಗೂ ಪಾಲನೆ ಪೋಷಣಗಳನ್ನು ವಿವರಿ ಸುವೆನು. ವಾಚಕರು ನೋಡಿಕೊಳ್ಳಬೇಕಾಗಿ ವಿನಂತಿ.

———

## "ಶಾಂತಿ"

ಶಾಂತಸಮಯದೇಕಾಂತದಿ ವೀಣಾ
ತಂತ್ರಿ ಜನಿತ ಮಧುನಾದ ತರಂಗಿಣಿ
ಯಂತೆ ನಿನ್ನ ಏಕಾಂತ ಭಕುತ ಹೃದ
ಯಾಂತ ರಂಗದಲಿ ನಲಿಯುತ ಸುಳಿಯುತ
ದಿನಾಂತ ಸಮಯದೇಕಾಂತ ವನಾಂತ ವ
ಸಂತ ಮುಕುಳಗಳು ಬಿರಿಯುವ ಪರಿಮಳ
ದಂತೆ ವಿಷಯ ತಾಪಾಂತ ಸಮಯದಲಿ
ಶಾಂತಿಸಾರ ಭವ ಬೀರುತ ಮನದಲಿ
ಕರ್ಮಾಂತ ಸಮಯದೇಕಾಂತ ಭಕುತ ಶಾ
ಕುಂತತತಿಯ ಕೋಲಾಹಲ ಶೋಭಿತ
ಶಾಂತಿಮಯನ ಆನಂದ ಜ್ಞಾನ ಲಾವಣ್ಯ
ಶಾಂತವಿಪಿನನವ ವಸಂತ ಮೋಹಿನಿ
ಅನಂತ ಮಂಗಳ ಪ್ರಸನ್ನ ಶಿವಪ್ರಿಯ
ಕಾಂತೆ ನಿನ್ನ ಹಂಬಲಿಸುವ ಶಿಶುಗಳ
ಭ್ರಾಂತಿ ಹರಿಸಿ ಸುಖಶಾಂತಿ ನೀಕೇತನ
ದಂತಿರಲಿ ಕರದೆತ್ತಿ ಮುದ್ದಿಡಲು

— ಪಿ. ಜಿ. ಅಂಗಡಿ (ಸಂಗೊಳ್ಳಿ) ಇಂಟರ ಆರ್ಟ್ಸ ಬೆಳಗಾವಿ

ಕಂಡು ಶಿವಾನುಭವದ ಮಹತ್ತ್ವವನ್ನು ಅವನಿಗೆ ತಿಳಿಸಿಕೊಟ್ಟು ಸಿದ್ಧರಾಮನನ್ನು ಕಲ್ಯಾಣಕ್ಕೆ ಕರೆದುಕೊಂಡುಬಂದನು. ಅಲ್ಲಿ ಚನ್ನಬಸವನಿಂದ ಅವನಿಗೆ ಲಿಂಗದೀಕ್ಷೆಯನ್ನು ಕೊಡಿಸಿದನು.

ಅಂದಿನಿಂದ ಸಿದ್ಧರಾಮನು ಶಿವಾನುಭವಿಯಾಗಿ ಶಿವಶರಣರೊಡನೆ ಇದ್ದು ಪ್ರಸಿದ್ಧಿಗೆ ಬಂದನು. ಅವನು ಅನೇಕ ಉಕ್ತಿಗಳನ್ನು ರಚಿಸಿದ್ದಾನೆ. ಅಲ್ಲದೆ ಬೇರೆ ಗ್ರಂಥಗಳನ್ನು ಸಹ ಬರೆದಿದ್ದಾನೆ. ಆದ್ದರಿಂದ ಅವನು ಶಿವಶರಣರಲ್ಲಿ ಪ್ರಖ್ಯಾತನಾಗಿದ್ದಾನೆ.

ಚನ್ನಬಸವನ ತರುವಾಯ ಅವನು ಶಿವಶರಣರಿಂದ ಜಗದ್ಗುರುವಾಗಿ ನಿಯಮಿಸಲ್ಪಟ್ಟನು. ಚನ್ನಬಸವನು ಉಳವಿಗೆ ಪ್ರಯಾಣ ಮಾಡುವಾಗ ಅವನಿಗೆ ಎಲ್ಲತರದ ಸಹಾಯವನ್ನು ಒದಗಿಸಿಕೊಟ್ಟನು. ಈ ಕಾಲದಲ್ಲಿ ಪಶ್ಚಿಮ ಕರ್ನಾಟಕದಲ್ಲಿ ಕದಂಬ ರಾಜರು ಗೋವೆ, ಹಾನಗಲ್ಲು, ಹಲಸಿಗೆಯಲ್ಲಿ ಆಳುತ್ತಿದ್ದರು. ಅವರು ಸೊನ್ನಲಿಗಿಯ ಕಪಿಲಮಲ್ಲಿಕಾರ್ಜುನನ ಭಕ್ತರಾಗಿ ಸಿದ್ಧರಾಮನನ್ನು ಬಹಳ ಮನ್ನಿಸುತ್ತಿದ್ದರು. ಶಿವಮೊಗ್ಗೆ ಜಿಲ್ಲೆಯಲ್ಲಿ ಕೋಳೀಸಾಲೆ, ಹಾವೇರಿ ತಾಲೂಕಿನಲ್ಲಿ ಸಂಗೂರು, ಈ ಗ್ರಾಮಗಳಲ್ಲಿ ಈ ರಾಜರು ಕಪಿಲಸಿದ್ಧಮಲ್ಲಿಕಾರ್ಜುನನ ದೇವಾಲಯಕ್ಕೆ ಕೊಟ್ಟ ದಾನಶಾಸನಗಳಿರುತ್ತವೆ. ಸಿದ್ಧರಾಮೇಶ್ವರನು ಸೊನ್ನಲಿಗೆಯಲ್ಲಿಯೇ ಲಿಂಗೈಕ್ಯನಾದನು. ಅವನು ಇಲ್ಲಿ ಇದ್ದಾಗ್ಗೆ ಕೇದಾರಗುರು, ಹಾವಿನಹಾಳ ಕಲ್ಲಯ್ಯ ಮೊದಲಾದ ಪ್ರಸಿದ್ಧ ವಚನಕಾರರು ಅವನ ಸನ್ನಿಧಿಯಲ್ಲಿ ವಾಸ ಮಾಡಿದರು. ಸಿದ್ಧರಾಮನು ೧೨ನೇ ಶತಮಾನದ ಕಡೆಯ ಭಾಗದಲ್ಲಿ ಬಸವೇಶ್ವರನಿಗೆ ಸಮಕಾಲೀನನಾಗಿದ್ದಾನೆ.

---

## ಮಡಿವಾಳಮಾಚಿದೇವ

ಮಡಿವಾಳಮಾಚಿದೇವನು ವಿಜಾಪುರ ಜಿಲ್ಲೆಯಲ್ಲಿರುವ ಹಿಪ್ಪರಗಿ ಎಂಬ ಗ್ರಾಮದಲ್ಲಿ ಪರ್ವತಯ್ಯನೆಂಬ ಒಬ್ಬ ಮಡಿವಾಳನ ಮಗನಾಗಿ ಜನಿಸಿದನು. ಅವನು ವಸ್ತ್ರವನ್ನು ತೊಳೆಯುವ ಕಾಯಕವನ್ನು ಮಾಡುತ್ತ ಬಂದನು. ಹೀಗಿರುವಲ್ಲಿ ಈ ಗ್ರಾಮದಲ್ಲಿ ಮಲ್ಲಿಕಾರ್ಜುನನೆಂಬ ಮಂತ್ರವಿದನೊಬ್ಬನು ಇದ್ದು ಅವನಿಂದ ಮಾಚಿದೇವನು ದೀಕ್ಷೆಯನ್ನು ಹೊಂದಿದನು. ಈ ಗ್ರಾಮದಲ್ಲಿ ಕಲ್ಲಿನಾಥನೆಂಬ ಹೆಸರಿನ ದೇವಾಲಯವಿದ್ದು ಈ ಕಲ್ಲಿನಾಥನಿಗೆ ಭಕ್ತಿಯುಳ್ಳ

ವಸಾಗಿ ಮಡಿವಾಳಮಾಚಿದೇವನು ಕಲ್ಲಿನಾಥ ಎಂಬ ಮುದ್ರಿಕೆಯಿಂದ ಅಸಂಖ್ಯ ವಚನಗಳನ್ನು ರಚಿಸಿದ್ದಾನೆ. ಬಸವಾದಿಪ್ರಮುಥರು ಕಲ್ಯಾಣದಲ್ಲಿದ್ದಾರೆಂಬು ದನ್ನು ಅವನು ತಿಳಿದು ಅಲ್ಲಿಗೆ ಹೋಗಿ ಶರಣರ ಬಟ್ಟೆಗಳನ್ನು ಒಗೆಯುವ ಕಾಯಕವನ್ನು ಕೈಕೊಂಡನು. ಅವನು ಬಹು ಧೈರ್ಯಶಾಲಿಯಾಗಿ ವೀರ ಮಾಹೇಶ್ವರಸ್ಥಲದವನೆಂದು ಶರಣರಲ್ಲಿ ಪ್ರಸಿದ್ಧಿಗೆ ಬಂದನು. ಅವನು ಷಟ್ ಸ್ಥಲಶಾಸ್ತ್ರದಲ್ಲಿ ಒಳ್ಳೇ ಪ್ರವೀಣನಾಗಿದ್ದನು. ಮುಂದೆ ಚನ್ನಬಸವನು ಉಳವಿಗೆ ಹೋಗಲು ಸನ್ನದ್ಧನಾದ ಕಾಲದಲ್ಲಿ ಮಡಿವಾಳಮಾಚಿದೇವನು ಶರಣರ ದಂಡಿಗೆ ಅಧಿಪತಿಯಾಗಿ ಬಿಜ್ಜಳನ ದಂಡಾಳುಗಳೊಡನೆ ಶೂರತನ ದಿಂದ ಕಾದಾಡುತ್ತ ಹೊರಟನು. ಅವನು ತೊರಗಲ್ಲು ನಾಡಿನಲ್ಲಿದ್ದಾಗ ಯುದ್ಧದಲ್ಲಿ ಮರಣಹೊಂದಿದನೆಂದು ತೋರುತ್ತದೆ. ಅವನ ಸಮಾಧಿಯು ಕಾರೀಮನೆ ಎಂಬ ಗ್ರಾಮದಲ್ಲಿ ಇದ್ದದ್ದು ತಿಳಿಯುತ್ತದೆ. ವೀರಶೈವರು ಅವನು ವೀರಭದ್ರನ ಅವತಾರವೆಂದು ತಿಳಿದು ಅವನ ಸಲುವಾಗಿ ಅತ್ಯಂತ ಭಕ್ತಿಭಾವವನ್ನು ತಾಳಿದ್ದಾರೆ.

---

## ರುದ್ರಮುನಿ

ರುದ್ರಮುನಿಯು ರೇವಣಸಿದ್ಧೇಶ್ವರನ ಮಗನು. ರೇವಣಸಿದ್ಧೇಶ್ವರನು ಚೋಳರಾಜನ ಪುತ್ರಿಯಾದ ಮಹಾದೇವಿ ಎಂಬವಳನ್ನು ಲಗ್ನವಾಗಿದ್ದನು. ಅವಳ ಮಗನೇ ಈ ರುದ್ರಮುನಿಯು. ಅವಳು ರೇವಣಸಿದ್ಧೇಶ್ವರನ ಕೂಡ ಮಂಗ ಳವಾಡಕ್ಕೆ ತಿರುಗಿ ಬಂದಾಗ ಇಲ್ಲಿಂದ ಕೆಲವು ಮೈಲು ದೂರವಿರುವ ಸಿದ್ಧನ ಕೆರೆ ಎಂಬಲ್ಲಿ ಕೆರೆ ಕಟ್ಟುವ ಕೆಲಸವನ್ನು ರೇವಣಸಿದ್ಧೇಶ್ವರನು ಪ್ರಾರಂಭಿಸಿ ದನು. ಅವನು ಅದಕ್ಕೆ ಮಣ್ಣುಹಾಕಬೇಕೆಂದು ಮಹಾದೇವಿಗೆ ಹೇಳಿದನು. ಅದಕ್ಕೆ ಆಕೆಯು ನಾನು ಇಂಥ ಕಾರ್ಯವನ್ನು ಎಂದೂ ಮಾಡಿಲ್ಲ, ಎಂದು ಕೆಲಸಮಾಡಲು ಒಪ್ಪಿಕೊಳ್ಳಲಿಲ್ಲ. ಆಗ ಅವಳು ರೇವಣಸಿದ್ಧೇಶ್ವರನ ಅಪ್ಪಣೆಯು ಮೇರೆಗೆ ಈ ಸ್ಥಳವನ್ನು ಬಿಟ್ಟು ಹೋಗಬೇಕಾಯಿತು. ಆಗ ಅವಳು ಗರ್ಭಿಣಿ ಯಾಗಿದ್ದು ಅವಳು ಹೋಗುವಾಗ ಆ ಗರ್ಭವನ್ನು ಅಲ್ಲಿಯೇ ಬಿಟ್ಟು ಹೋಗ ಲಿಕ್ಕೆ ರೇವಣಸಿದ್ಧೇಶ್ವರನು ಹೇಳಲಾಗಿ ಅವಳು ಹಾಗೆಯೇ ಮಾಡಿದಳು. ಆಗ ಆ ಗರ್ಭವನ್ನು ರೇವಣಸಿದ್ಧೇಶ್ವರನು ನೆಲದಲ್ಲಿ ಹುದುಗಿಸಿಟ್ಟಬಳಿಕ ಅದು ಸಕಾಲದಲ್ಲಿ ಪೂರ್ಣವಾಗಿ ಭೂಮಿಯೊಳಗಿಂದ ರುದ್ರಮುನಿಯು ಬಹಿರ್ಗತ ನಾದನು. ಮುಂದೆ ರುದ್ರಮುನಿಯು ತನ್ನ ತಂದೆಯ ಜತೆಯಲ್ಲಿಯೇ

ದೊಡ್ಡವನಾಗಿ ಅವನ ಹತ್ತಿರ ವಿದ್ಯಾಭ್ಯಾಸ ಮಾಡಿದನು. ಅವನು ಹದಿನಾರು ವರ್ಷದವನಾಗಲು ರೇವಣಸಿದ್ಧೇಶ್ವರನು ಒಂದು ಮಠವನ್ನು ಮಂಗಳವಾಡದಲ್ಲಿ ಸ್ಥಾಪಿಸಿ ಅದಕ್ಕೆ ರುದ್ರಮುನಿಯನ್ನು ಅಧಿಪತಿಯನ್ನಾಗಿ ಮಾಡಿದನು. ಮುಂದೆ ರುದ್ರಮುನಿಯು ಷಟ್‌ಸ್ಥಲಶಾಸ್ತ್ರ ಸಂಪನ್ನನಾಗಿ ಪ್ರಸಿದ್ಧಿಯನ್ನು ಹೊಂದಿದನು. ಮಂಗಳವಾಡದಿಂದ ಮೂವತ್ತು ಮೈಲು ದೂರವಿರುವ ಹಾವಿನಹಾಳ ಎಂಬಲ್ಲಿ ಕಲ್ಲಯ್ಯನೆಂಬ ಶಿವಶರಣನು ವಾಸಿಸುತ್ತಿದ್ದನು. ಅವನಿಗೆ ರುದ್ರಮುನಿಯು ವೀರಶೈವ ದೀಕ್ಷೆಯನ್ನು ಕೊಟ್ಟನು. ಮುಂದೆ ರೇವಣಸಿದ್ಧೇಶ್ವರನು ದಕ್ಷಿಣದೇಶಗಳಿಗೆ ಪ್ರವಾಸಕ್ಕೆ ಹೋದಾಗ ರುದ್ರಮುನಿಯು ಅವನೊಡನೆ ಇದ್ದನು. ಬೆಂಗಳೂರು ಜಿಲ್ಲೆಯಲ್ಲಿ ಕ್ಲೋಸಪೇಟೆ ಎಂಬಲ್ಲಿ ರೇವಣಸಿದ್ಧೇಶ್ವರನ ಸ್ಥಾನವಿದ್ದು ಅಲ್ಲಿ ರುದ್ರಮುನಿಯ ದೇವಾಲಯವೂ ಇರುತ್ತದೆ. ಇಲ್ಲಿ ರುದ್ರಮುನಿಯು ಕೆಲವು ಕಾಲ ವಾಸಮಾಡಿರಬಹುದು. ಮುಂದೆ ರುದ್ರಮುನಿಯು ಮಂಗಳವಾಡಕ್ಕೆ ತಿರುಗಿ ಬಂದು ಅಲ್ಲಿ ತನ್ನ ಮಠದಲ್ಲಿ ಇರಹತ್ತಿದನು. ಕೆಲವು ದಿವಸಗಳಾದಮೇಲೆ ಹರಳಯ್ಯ ಮತ್ತು ಮಧುವಯ್ಯ ಇವರ ಬಗ್ಗೆ ಕಲ್ಯಾಣದಲ್ಲಿ ಬಿಜ್ಜಳ ಮತ್ತು ಶಿವಶರಣರ ನಡುವೆ ಕಲಹಗಳು ಉದ್ಭವಿಸಲಾಗಿ ಶಿವಶರಣರು ಉಳಿವಿಯ ಕಡೆಗೆ ಹೊರಟು ಹೋದರು. ಆಗ ರುದ್ರಮುನಿಯು ಅವರಿಗೆ ಎಲ್ಲ ತರದ ಸಹಾಯ ಸಲಕರಣೆಗಳನ್ನು ಒದಗಿಸುತ್ತ ಅವರೊಡನೆ ಹೊರಟನು. ರುದ್ರಮುನಿಯ ದೇವಸ್ಥಾನವು ಉಳಿವಿಯ ಮಾರ್ಗದಲ್ಲಿರುವ ನಾಗಳಾಪುರ ಎಂಬಲ್ಲಿ ಈಗಲೂ ಉಂಟು. ಉಳಿವಿಯಲ್ಲಿ ಚನ್ನಬಸವ ಮೊದಲಾದ ಶಿವಶರಣರು ವೈರಿಗಳೊಡನೆ ಕಾದಾಡುತ್ತ ಪರಂಧಾಮವನ್ನೈದಿದರು. ಅಲ್ಲಿ ನಾಗಲಾಂಬಿಕೆ, ನುಲಿಯ ಚಂದಯ್ಯ, ಹಡಪದ ರೇಚಣ್ಣ ಇವರು ಮಾತ್ರ ಜೀವಂತ ಉಳಿದರು. ಆಗ ಅವರನ್ನು ರುದ್ರಮುನಿಯು ಕಡೂರ ಜಿಲ್ಲೆಯಲ್ಲಿರುವ ಬಾಳೇಹಳ್ಳಿಯ ಕಡೆಗೆ ಕಳಿಸಿಕೊಟ್ಟು ತಾನು ಶ್ರೀಶೈಲಕ್ಕೆ ತಿರುಗಿ ಬಂದನು. ಇಲ್ಲಿ ಬಹುಜನರು ಶಿವಶರಣರು ಸುಸಂಘಟಿತರಾಗಿ ಸುರಕ್ಷಿತವಾಗಿ ಇದ್ದುದರಿಂದ ಅವರಲ್ಲಿದ್ದ ಕೆಲಭಾಗ ಸೈನ್ಯವನ್ನು ರುದ್ರಮುನಿಯು ಬಾಳೇಹಳ್ಳಿಗೆ ಕಳಿಸಲಾಗಿ ಅಲ್ಲಿ ಪರವಾದಿಗಳ ಕೂಡ ಯುದ್ಧಗಳು ನಡೆದವು. ಪರವಾದಿಗಳನ್ನು ಶಿವಶರಣರು ಪೂರ್ಣವಾಗಿ ಸೋಲಿಸಿ ಜಯಶೀಲರಾಗಿ ಇಲ್ಲಿ ಒಂದು ಸಿಂಹಾಸನ ಮಠವನ್ನು ಸ್ಥಾಪಿಸಿದರು. ಈ ಕಾರ್ಯವು ರುದ್ರಮುನಿಯ ಸಹಾಯದಿಂದ ಅಲ್ಲಿ ಸಂಭವಿಸಿತು. ಮುಂದೆ ರುದ್ರಮುನಿಯು ಶ್ರೀಶೈಲದಲ್ಲಿಯೇ ಸಮಾಧಿಸ್ಥ

ನಾದನು. ಈ ಪ್ರಕಾರ ರುದ್ರಮುನಿಯು ಶಿವಶರಣರಿಗೆ ವಿಪತ್ಕಾಲ ಬಂದಾಗ್ಗೆ ಅವರನ್ನು ಸಂರಕ್ಷಿಸಿ ವೀರಶೈವ ಸಮಾಜದಲ್ಲಿ ಖ್ಯಾತಿವಂತನಾಗಿದ್ದಾನೆ.

---

## ಕಿನ್ನರಿ ಬ್ರಹ್ಮಯ್ಯ

ಆಂಧ್ರದೇಶದಲ್ಲಿ ಸೂಡೂರೆಂಬ ಗ್ರಾಮವಿರುತ್ತದೆ. ಅಲ್ಲಿ ಕಿನ್ನರಿ ಬ್ರಹ್ಮಯ್ಯನೆಂಬ ಶಿವಶರಣನು ಅಕ್ಕಸಾಲಿಗ ಕಾಯಕವನ್ನು ಮಾಡುತ್ತ ಜೀವಿಸುತ್ತಿದ್ದನು. ಅವನು ಶಿವಭಕ್ತಿಯುಳ್ಳವನಾಗಿ ದಿನಾಲು ಶಿವಾಲಯಕ್ಕೆ ಹೋಗಿ ಭಕ್ತಿಯಿಂದ ಪರಮಾತ್ಮನನ್ನು ಪ್ರಾರ್ಥಿಸಿ ಕಿನ್ನರಿಯನ್ನು ಬಾರಿಸಿ ಮನೆಗೆ ಬರುವನು. ಪರಮಾತ್ಮನು ಅವನ ಭಕ್ತಿಗೆ ಪ್ರೀತನಾಗಿ ದಿನಾಲು ಅವನಿಗೆ ಹನ್ನೊಂದು ಹಣ ದ್ರವ್ಯವನ್ನು ದಯಪಾಲಿಸುವನು. ಆ ಹಣ ದಿಂದ ಅವನು ತನ್ನ ದಾಸೋಹ ಕಾರ್ಯಗಳನ್ನು ಮಾಡುವನು. ಇದ ಕ್ಕೋಸ್ಕರ ಅವನಿಗೆ ಕಿನ್ನರಿ ಬ್ರಹ್ಮಯ್ಯನೆಂಬ ಹೆಸರು ಪ್ರಾಪ್ತವಾಯಿತು.

ಅವನು ಶಿವಾನುಭವಿಯು. ಅವನು ಕಲ್ಯಾಣದಲ್ಲಿ ಬಸವೇಶ್ವರನು ನಡಿಸುತ್ತಿದ್ದ ಭಕ್ತಿಕಾರ್ಯಗಳನ್ನು ಕೇಳಿದವನಾಗಿ ಅವನನ್ನು ಕಾಣಲು ಕಲ್ಯಾಣಕ್ಕೆ ಬಂದು ಅಲ್ಲಿಯೇ ನಿಂತನು. ಅವನು ಅಲ್ಲಿ ಅಕ್ಕಸಾಲಿಗ ಕಾಯಕವನ್ನು ಮಾಡುತ್ತ ಹಣವಂತನಾದನು. ಆದರೆ ಅವನು ತಾನು ಗಳಿಸಿದ ಹಣವನ್ನು ತನ್ನಸಲುವಾಗಿ ಉಪಯೋಗಿಸದೆ ದಾನಮಾಡಿಬಿಡುವನು. ಅವನು ದಿನಾಲು ತ್ರಿಪುರಾಂತಕೇಶ್ವರ ದೇವಾಲಯಕ್ಕೆ ಹೋಗಿ ಕಿನ್ನರಿಯನ್ನು ನುಡಿಸಿ ಪರಮಾತ್ಮನು ಆಗ ಮೊದಲಿನಂತೆ ಕೊಡುತ್ತಿದ್ದ ಹನ್ನೊಂದು ಹಣ ದ್ರವ್ಯವನ್ನು ತೆಗೆದುಕೊಂಡು ಬರುವನು.

ಹೀಗಿರಲು ಅವನು ಒಂದು ದಿನ ದೇವಾಲಯದಲ್ಲಿದ್ದಾಗ ಒಂದು ಕುರಿಯು ಕಟಕನ ಕೈಯಿಂದ ತಪ್ಪಿಸಿಕೊಂಡು ದೇವಾಲಯವನ್ನು ಹೊಕ್ಕಿತು. ಅದನ್ನು ಕಿನ್ನರಯ್ಯನು ಕಂಡು ಅದಕ್ಕೆ ಲಿಂಗಮುದ್ರೆಯನ್ನೊತ್ತಿ ದೇವಾಲಯ ದಲ್ಲಿ ಕಟ್ಟಿಬಿಟ್ಟನು. ಅಲ್ಲಿಯೇ ಅದು ಮೇಯುತ್ತಾ ಇರುತ್ತಿತ್ತು. ಮುಂದೆ ಕಟಕನು ಅದನ್ನು ಹುಡುಕುತ್ತ ಅಲ್ಲಿಗೆ ಬಂದು ಅದನ್ನು ಗುರುತಿಸಿ ಇದು ನನ್ನ ಕುರಿ ಎಂದು ಬಲಾತ್ಕಾರದಿಂದ ಜಗ್ಗಿ ಒಯ್ಯಹತ್ತಿದನು. ಅದನ್ನು ಕಿನ್ನರಯ್ಯನು ನೋಡಿ ಇದು ದೇವರ ಕುರಿ, ಅದನ್ನು ಒಯ್ಯಬೇಡ, ಅದರ

ಬೆಲೆಯನ್ನು ಕೊಡುವೆನೆಂದು ಎಷ್ಟು ಹೇಳಿದರೂ ಅವನು ಕೇಳಲಿಲ್ಲ. ಅವನು ಅದನ್ನು ಹೊಡೆದುಕೊಂಡು ಹೋಗಹತ್ತಿದನು. ಆಗ ಕಿನ್ನರಯ್ಯನು ಕಟುಕನು ಪರಮಾತ್ಮನಿಗೆ ಕೂಡ ಅಪರಾಧಿಯಾಗಿ ವರ್ತಿಸುತ್ತಾನೆಂದು ಅಬ್ಬರಿಸಿ ಅವನು ಆ ಕಟುಕನ ರುಂಡವನ್ನು ಹಾರಿಸಿಬಿಟ್ಟನು. ಕಿನ್ನರಯ್ಯನು ಮಾಡಿದ ಈ ಅಪರಾಧದ ಬಗ್ಗೆ ಬಿಜ್ಜಳನ ಕಡೆಗೆ ಫಿರ್ಯಾದು ಹೋಗಲಾಗಿ ಬಿಜ್ಜಳನು ದೇವಾಲಯಕ್ಕೆ ಬಂದು ಅಲ್ಲಿ ಇದ್ದ ಕಿನ್ನರಯ್ಯನನ್ನು ನೀನು ಹೀಗೇಕೆ ಮಾಡಿದೆ ಎಂದು ಕೇಳಲಾಗಿ ಕಿನ್ನರಯ್ಯನು ಇಲ್ಲಿರುವ ಪರಮಾತ್ಮನನ್ನೇ ಕೇಳು ಎಂದು ಹೇಳಲಾಗಿ ಕಿನ್ನರಯ್ಯನು ತಪ್ಪುಗಾರನಲ್ಲ ಎಂಬ ಶಬ್ದವು ಮೂರ್ತಿಯೊಳಗಿಂದ ಹೊರಗೆ ಬರಲು ಬಿಜ್ಜಳನು ಚಕಿತನಾಗಿ ಕಿನ್ನರಯ್ಯನನ್ನು ಬಿಟ್ಟುಕೊಟ್ಟನು.

ಮುಂದೆ ಕೆಲವು ದಿವಸಗಳಲ್ಲಿ ಹರಳಯ್ಯ ಮಧುವಯ್ಯಗಳನ್ನು ಬಿಜ್ಜಳನು ಕೊಲೆಮಾಡಲು ಶಿವಶರಣರು ಕಲ್ಯಾಣವನ್ನು ಬಿಟ್ಟು ಉಳವಿಗೆ ಹೊರಟರು. ಕಿನ್ನರಿಬ್ರಹ್ಮಯ್ಯನು ಅವರೊಡನೆ ಇದ್ದುಕೊಂಡು ಬಿಜ್ಜಳನ ದಂಡಿನಲ್ಲಿದ್ದು ಯುದ್ಧ ಮಾಡುತ್ತ ಸಾಗಿದನು. ಶರಣರ ದಂಡಾಳುಗಳು ಉಳವಿಯನ್ನು ಸಮೀಪಿಸಲು ಚನ್ನಬಸವನು ದಂಡಿನ ಆಧಿಪತ್ಯವನ್ನು ಕಿನ್ನರಿಬ್ರಹ್ಮಯ್ಯನಿಗೆ ಒಪ್ಪಿಸಿದನು. ಕಿನ್ನರಯ್ಯನು ಯುದ್ಧಮಾಡುತ್ತ ಮಹಾಮನೆಯ ಮುಂದೆ ಹರಿಯುತ್ತಿರುವ ನದಿಯನ್ನು ಗವಿಯೊಳಗೆ ತಿರುಗಿಸಿದನು. ಶತ್ರುಗಳ ದಂಡು ಬಹಳ ನಾಶವಾಯಿತು. ಆದರೆ ಬಿಜ್ಜನ ದಂಡಾಳುಗಳ ಕೂಡ ನಿಕರವಾದ ಯುದ್ಧವು ನಡೆಯಿತು. ಕಿನ್ನರಯ್ಯನು ಮರಣಹೊಂದಿದನು. ಶಿವಶರಣರೆಲ್ಲರು ಶಿವಸಾಯುಜ್ಯವನ್ನು ಹೊಂದಿದರು. ಮಹಾಮನೆಗೆ ಸಮೀಪವಾಗಿ ಕಿನ್ನರಿಬ್ರಹ್ಮಯ್ಯನ ಸಮಾಧಿ ಇರುತ್ತದೆ. ಈ ನದಿಗೆ ಕಿನ್ನರಿಬ್ರಹ್ಮಯ್ಯನ ಹೊಳೆ ಅಥವಾ ಕಾನೇರಿ ಹೊಳೆ ಎಂಬ ಹೆಸರು ಬಿದ್ದಿರುತ್ತದೆ. ಈ ಪ್ರಕಾರ ಕಿನ್ನರೀಬ್ರಹ್ಮಯ್ಯನು ಶಿವಶರಣರ ಸಲುವಾಗಿ ತನ್ನ ಪ್ರಾಣವನ್ನು ಸಹ ಅರ್ಪಿಸಿದ್ದಾನೆ.

---

## ಹರಳಯ್ಯ

ಹರಳಯ್ಯನು ಕೇವಲ ಶಿವಾನುಭವಿಯಾಗಿ ಕಲ್ಯಾಣದಲ್ಲಿ ಮಚ್ಚೆಗಳನ್ನು ಹೊಲಿಯುವ ಕಾಯಕವನ್ನು ಮಾಡುತ್ತ ಜೀವಿಸುತ್ತಿದ್ದನು. ಅವನು ಶಿವಾ

ನುಭವ ಮಂಟಪಕ್ಕೆ ಹೋಗಿ ಅಲ್ಲಿ ನಡಿಯುತ್ತಿದ್ದ ಗೋಷ್ಠಿಗಳನ್ನು ಕೇಳು ವನು. ಒಂದುದಿನ ಅವನು ಕಲ್ಯಾಣಪಟ್ಟಣದ ಬೀದಿಯೊಳಗಿಂದ ಹಾಯ್ದು ಹೋಗುತ್ತಿರುವಾಗ ಬಸವೇಶ್ವರನನ್ನು ಇದಿರಿಗೆ ಕಂಡು ಅವನಿಗೆ—ಶರಣು ಎಂದು ಅವನು ನುಡಿದನು. ಅದಕ್ಕೆ ಬಸವೇಶ್ವರನು "ಹರಳಯ್ಯನೇ ನಿನಗೆ ಶರಣು, ಶರಣು" ಎಂದು ಎರಡು ಬಾರಿ ನುಡಿದನು. ಮುಂದೆ ಹರಳ ಯ್ಯನು ಮನೆಗೆ ಬಂದು ತನ್ನ ಹೆಂಡತಿ ಕಲ್ಯಾಣಮ್ಮನಿಗೆ— ನಾನು ಒಮ್ಮೆ ಶರಣು ಎಂದು ಬಸವೇಶ್ವರನಿಗೆ ನುಡಿದರೆ ಅವನು ಶರಣು, ಶರಣು ಎಂದು ಎರಡುಸಾರಿ ನುಡಿದನು. ನಾನು ಘೋರ ಪಾತಕ ಮಾಡಿದ್ದರಿಂದ ಹೀಗಾ ಯಿತು. ಈ ಪಾತಕವನ್ನು ಹೇಗೆ ದೂರಮಾಡಬೇಕೆಂದು ಉಭಯ ದಂಪತಿ ಗಳು ಯೋಚಿಸಿ ಅವರು ತಮ್ಮ ತಮ್ಮ ಮೆಯ್ಯ ಚರ್ಮವನ್ನು ಸುಲಿದು ಒಂದು ಜೋಡು ಮಚ್ಚೆಯನ್ನು ಮಾಡಿ ಅದನ್ನು ಬಸವೇಶ್ವರನಿಗೆ ಒಪ್ಪಿಸ ಬೇಕೆಂದು ನಿರ್ಧರಿಸಿದರು. ಆ ಪ್ರಕಾರ ಹರಳಯ್ಯನು ಬಸವೇಶ್ವರನಿಗೆ ಒಪ್ಪಿ ಸಲು ಅವನ ಅರಮನೆಗೆ ಹೋದನು. ಆದರೆ ಬಸವೇಶ್ವರನು ನಡೆದ ಸಂಗತಿ ಯನ್ನು ತಿಳಿದು ಈ ಜೋಡು ಪವಿತ್ರವಾದದ್ದು, ಇದು ನನಗೆ ಬೇಡ ಇದನ್ನು ಒಬ್ಬ ಮಹೇಶ್ವರನಿಗೆ ಅರ್ಪಿಸಿಬಿಡು ಎಂದು ಹೇಳಿಕಳಿಸಿದನು. ಹರಳಯ್ಯನು ಬಸವೇಶ್ವರನ ಅಪ್ಪಣೆಯನ್ನು ಮೀರಲಾರದೆ ಆ ಜೋಡನ್ನು ತೆಗೆದುಕೊಂಡು ದಾರಿಯಿಂದ ಬರುತ್ತಿರಲು ಮಧುವರಸನೆಂಬ ಬಿಜ್ಜಳನ ಅಧಿಕಾರಿಯು ಅವ ನನ್ನು ನೋಡಿ ಅವನ ಬಗಲಲ್ಲಿದ್ದ ಮಚ್ಚೆಯ ಜೋಡನ್ನು ಕಂಡು— ಇದು ನನಗೆ ಬೇಕೆಂದು ಬಲಾತ್ಕಾರದಿಂದ ಅದನ್ನು ಕಸೆದುಕೊಂಡು ಹೋಗಿ ದಿನಾಲು ಮೆಟ್ಟಹತ್ತಿದನು.

ಮಧುವರಸನು ಹೀಗೆ ಮಾಡಿದ ಬಳಿಕ ಅವನಿಗೆ ಕುಷ್ಠ ರೋಗವು ಹತ್ತಿ ಬಹಳ ಉರಿಪು ಮೈಯೆಲ್ಲ ಉಂಟಾಗಿ ಬಹಳ ಕಷ್ಟಪಡಹತ್ತಿದನು. ಒಂದು ದಿನ ಅವನ ದಾಸಿಯು ಅವನ ಸ್ನಾನಕ್ಕೋಸ್ಕರ ನೀರು ತರಲು ಹೋದಾಗ ದಾರಿಯಲ್ಲಿ ಹರಳಯ್ಯನ ಬಚ್ಚಲಮನೆಯ ಗುಂಡಿಯೊಳಗೆ ನೀರು ನಿಂತದ್ದನ್ನು ಕಂಡು, ಆ ನೀರನ್ನು ಕೊಡದೊಳಗೆ ತುಂಬಿಕೊಂಡು ಮಧು ವರಸನ ಸ್ನಾನಕ್ಕಾಗಿ ಇಟ್ಟಿದ್ದ ಹಂಡೆಯೊಳಗೆ ಸುರುವಿದಳು. ಮಧುವರಸನು ದಾಸಿಯು ಹೀಗೆ ಮಾಡಿದ್ದನ್ನು ಏನೂ ತಿಳಿಯದೆ ಆ ನೀರಿನಿಂದಲೇ ಸ್ನಾನ ಮಾಡಿದನು. ಅವನು ಹೀಗೆ ಮಾಡಿದ ಕೂಡಲೇ ಅವನ ಮೈಯ್ಯಲ್ಲಿದ್ದ ಉರಿಪು ನಿಂತುಹೋಯಿತು. ಮಧುವರಸನು ಹೀಗಾದುದಕ್ಕೆ ಚಕಿತಗೊಂಡು

ಶೋಧಿಸಲಾಗಿ ದಾಸಿಯು ಮಾಡಿದ ವಿವರಗಳು ಅವನಿಗೆ ತಿಳಿದವು. ತನಗೆ ವಾಸಿಯಾದದ್ದು ಶಿವಶರಣರ ಸಂಪರ್ಕದಿಂದ ಎಂದು ತಿಳಿದು ಮಧುವರಸನು ವೀರಶೈವ ದೀಕ್ಷೆಯನ್ನು ಹೊಂದಿದನು. ಇಷ್ಟೇ ಅಲ್ಲ, ಅವನು ತನ್ನ ಮಗಳನ್ನು ಹರಳಯ್ಯನ ಮಗನಿಗೆ ಕೊಟ್ಟು ಲಗ್ನಮಾಡಿದನು.

ಹೀಗೆ ಉಭಯತರು ಪರಸ್ಪರ ಲಗ್ನ ವ್ಯವಹಾರ ಮಾಡಲಾಗಿ ಸನಾತನಿಗಳು ಕುಪಿತರಾಗಿ ಬಿಜ್ಜಳನಿಗೆ ದೂರು ಹೇಳಿದರು. ಬಿಜ್ಜಳನು ಬಸವೇಶ್ವರನನ್ನು ಕರೆಯಿಸಿಕೊಂಡು ಕೇಳಲಾಗಿ ಹರಳಯ್ಯ ಮಧುವಯ್ಯಗಳು ದೀಕ್ಷೆಯನ್ನು ಹೊಂದಿ ವೀರಶೈವರಾಗಿದ್ದಾರೆ. ವೀರಶೈವರಲ್ಲಿ ಜಾತಿಭೇದವಿಲ್ಲ. ಅವರಲ್ಲಿ ನಡೆದ ಈ ವಿವಾಹವು ಯೋಗ್ಯವಾದದ್ದು ಎಂದು ಅವನು ಎಷ್ಟು ತಿಳಿಸಿ ಹೇಳಿದರೂ ಬಿಜ್ಜಳನು ಅವನನ್ನು ಕೇಳದೆ ಉಭಯತರಿಗೆ ಎಳಹೂಟೆ ಶಿಕ್ಷೆಯನ್ನು ವಿಧಿಸಿ ಅವರನ್ನು ಕೊಲ್ಲಿಸಿದನು. ಈ ಪ್ರಕಾರ ಹರಳಯ್ಯ ಮಧುವಯ್ಯಗಳು ಶರಣರ ಮಾರ್ಗದಂತೆ ನಡೆದದ್ದಕ್ಕೋಸ್ಕರ ಅವರು ತಮ್ಮ ಪ್ರಾಣವನ್ನು ಮೇಲೆ ಹೇಳಿದಂತೆ ನೀಗಬೇಕಾಯಿತು. ಇದರಿಂದ ಮುಂದೆ ಬಿಜ್ಜಳ ರಾಜ್ಯದಲ್ಲಿ ಒಂದು ಮಹತ್ತರವಾದ ಕ್ರಾಂತಿಯು ಉಂಟಾಯಿತು.

---

## ಜಗದೇವ—ಮೊಲ್ಲಿಬೊಮ್ಮಣ್ಣಗಳು

ಜಗದೇವ ಮೊಲ್ಲಿಬೊಮ್ಮಣ್ಣಗಳು ಸಹೋದರರಾಗಿದ್ದರು. ಹರಳಯ್ಯ ಮಧುವರಸರಿಗೆ ಎಳಹೂಟೆ ಶಿಕ್ಷೆಯನ್ನು ವಿಧಿಸಿದಾಗ ಅಸಂಖ್ಯ ಜನರು ಅಲ್ಲಿ ನೆರೆದು ಅದನ್ನು ನೋಡುತ್ತಾ ಇದ್ದರು. ಅವರಲ್ಲಿ ಜಗದೇವ ಮೊಲ್ಲಿಬೊಮ್ಮಣ್ಣಗಳೆಂಬ ಇಬ್ಬರು ಸಹೋದರರೂ ಇದ್ದರು. ಅವರು ತಮ್ಮ ಮನೆಗೆ ಬಂದ ಬಳಿಕ ತಮ್ಮ ತಾಯಿ ಸೋಮವ್ವೆಗೆ ಆದ ಸಂಗತಿಗಳನ್ನೆಲ್ಲ ವಿವರಿಸಿ ಹೇಳಿದರು. ಆಗ ಅವಳು ಹೀಗೆ ಘಾತಿಸಲ್ಪಟ್ಟವರು ಯಾರು ಎಂದು ಕೇಳಲು ಅವರು ಶರಣರು, ಎಂದು ಹೇಳಲು ಸೋಮವ್ವೆಯು ಅತ್ಯಂತ ಕ್ರೋಧಾವೇಶವುಳ್ಳವಳಾಗಿ ಅವಳು ಅಂದದ್ದು— ಹರಹರಾ ನಾನು ಇಂದು ಭಕ್ತದ್ರೋಹವನ್ನು ಕೇಳಿದೆನು. ನೀವು ಉಭಯತರು ಸಮರ್ಥರು. ನೀವು ಹೀಗೆ ಸುಮ್ಮನೆ ಅವರನ್ನು ಹಿಂಸಿಸಿದ್ದನ್ನು ನೋಡುತ್ತ ನಿಂತಿರಾ? ಭಕ್ತರನ್ನು ನೋಯಿಸಿದ ಬಿಜ್ಜಳನನ್ನು ನೀವು ಕೊಂದುಹಾಕುವವರೆಗೂ ನಾನು ನಿಮ್ಮ

ಅನ್ನವನ್ನು ನೆಲದಮೇಲೆ ಚೆಲ್ಲುವೆನು. ನೀವು ಅಲ್ಲಿಂದಲೇ ಅದನ್ನು ನಾಯಿಗಳಂತೆ ತಿನ್ನಿರಿ, ಎಂದು ನುಡಿದಳು. ಆಗ ಅವರಿಬ್ಬರು ನಮ್ಮ ತಾಯಿಯು ನನುಗೆ ಲೇಸಾದ ವ್ರತವನ್ನು ಹಾಕಿ ಕೊಟ್ಟಳು. ಬಿಜ್ಜಳನನ್ನು ಕೊಂದು ಹಾಕುವವರೆಗೆ ನಾವು ಹೀಗೆಯೇ ಉಣ್ಣುವೆವು ಎಂದು ಪ್ರತಿಜ್ಞೆಮಾಡಿದರು. ಮುಂದೆ ಅವರು ಬಿಜ್ಜಳನಲ್ಲಿ ಪಂಜುಗಾರರಾಗಿ ನಿಂತು ಕೆಲವೊಂದು ಗೊತ್ತು ಮಾಡಿದ ದಿವಸ ಬಿಜ್ಜಳನ ಪಲ್ಲಕ್ಕಿಯು ಹೊನ್ನಮ್ಮನ ಚಾವಡಿಯು ಮುಂದೆ ಹೋಗುತ್ತಿರುವಾಗ್ಗೆ ಈ ಉಭಯತರು ತಾವಾರೆಂಬುದನ್ನು ಘೋಷಿಸುತ್ತ ಬಿಜ್ಜಳನನ್ನು ಕೊಂದುಹಾಕಿದರು. ಮುಂದೆ ಅವರು ತಮ್ಮ ತಾಯಿಯ ಕಡೆಗೆ ಹೋಗಿ ತಮ್ಮ ಪ್ರತಿಜ್ಞೆಯನ್ನು ಪೂರೈಸಿದೆವೆಂದು ಹೇಳಿ ಸಾಷ್ಟಾಂಗ ವೆರಗಿದರು. ಅಷ್ಟರಲ್ಲಿ ಮಡಿವಾಳಮಾಚಿದೇವನು ಸೈನ್ಯದೊಂದಿಗೆ ಚಾವಡಿಗೆ ಬರಲಾಗಿ ಅಲ್ಲಿ ಬಿಜ್ಜಳನ ಸೈನ್ಯದೊಡನೆ ಹೋರಾಟವು ಒದಗಿತು. ಈ ಹೋರಾಟದಲ್ಲಿ ಜಗದೇವ ಮೊಲ್ಲಿಬೊಮ್ಮಣ್ಣಗಳನ್ನು ಗಣಾಧೀಶ್ವರರು ಶಿವನ ಸನ್ನಿಧ್ಯಕ್ಕೆ ತೆಗೆದುಕೊಂಡು ಹೋದರು.

---

## ಕಕ್ಕಯ್ಯ

ಕಕ್ಕಯ್ಯನು ಮಾಳವಾ ದೇಶದವನಾಗಿ ಢೋರರ ಕುಲದಲ್ಲಿ ಹುಟ್ಟಿದವನಾಗಿದ್ದನು. ಕಲ್ಯಾಣದಲ್ಲಿ ಬಸವಾದಿ ಪ್ರಮಥರು ಬಂದು ಶಿವಾನುಭವ ಸದ್ಗೋಷ್ಠಿಗಳನ್ನು ನಡೆಸುತ್ತಿರುವದನ್ನು ಕೇಳಿ ಅವನು ಅಲ್ಲಿಗೆ ಬಂದು ವೀರಶೈವ ದೀಕ್ಷೆಯನ್ನು ಹೊಂದಿದನು. ಬಸವೇಶ್ವರನು ಕಕ್ಕಯ್ಯನನ್ನು ತನ್ನ ವಚನಗಳಲ್ಲಿ ಆಗಿಂದಾಗ್ಗೆ ಸ್ತುತಿಸುತ್ತಾನೆ. ಕಕ್ಕಯ್ಯನು ವಚನಕಾರನೂ ಆಗಿದ್ದಾನೆ. ಶಿವಶರಣರು ಕಲ್ಯಾಣವನ್ನು ಬಿಟ್ಟು ಉಳಿವಿಗೆ ಹೊರಡಲು ಕಕ್ಕಯ್ಯನು ಅವರಲ್ಲಿ ಸೇರಿಕೊಂಡು ಪ್ರತಿಯೊಂದು ಕಾಳಗದಲ್ಲಿ ಬಿಜ್ಜಳನ ಸೈನ್ಯದೊಂದಿಗೆ ಹೋರಾಡುತ್ತ ಶಿವಶರಣರಿಗೆ ಧೈರ್ಯ ಕೊಡುತ್ತ ನಡೆದನು. ಕಾತರವಳ್ಳಿಯ ಕಾಳಗವಾದ ಬಳಿಕ ಅವನು ಅರಣ್ಯ ಪ್ರದೇಶವನ್ನು ಪ್ರವೇಶಿಸಿ ಈಗಿನ ಕಕ್ಕೇರಿ ಎಂಬ ಗ್ರಾಮದಲ್ಲಿ ತನ್ನ ಸೈನ್ಯದೊಂದಿಗೆ ಬಿಡಾರಗೊಂಡನು. ಅಲ್ಲಿಯೇ ಅವನು ಐಕ್ಯನಾದನೆಂದು ತೋರುತ್ತದೆ. ಯಾಕಂದರೆ ಇಲ್ಲಿ ಕಕ್ಕಯ್ಯನ ದೇವಾಲಯವಿದೆ. ಅದರ ಸಮೀಪದಲ್ಲಿ ಕಕ್ಕಯ್ಯನ ಕೆರೆ, ಕಕ್ಕಯ್ಯನ ಭಾವಿ ಎಂಬ ಜಲಾಶಯಗಳಿವೆ. ಕಕ್ಕಯ್ಯನ ಸಮಾಧಿಯೂ

ಕೂಡ ಇಲ್ಲಿ ಇರುತ್ತದೆ. ಈ ಪ್ರಕಾರ ಇಲ್ಲಿಯೇ ಅವನು ತೀರಿಕೊಂಡಿರ ಬೇಕು. ಕಕ್ಕಯ್ಯನು ಶಿವಶರಣರಲ್ಲಿ ಅಗ್ರಗಣ್ಯನಾಗಿ ಧರ್ಮ ಪರಿಪಾಲನೆ ಗಾಗಿ ಹೋರಾಡುತ್ತ ಕಡೆಗೆ ಈ ಕಾರ್ಯದಲ್ಲಿಯೇ ಅವನು ತನ್ನ ದೇಹ ವಿಟ್ಟನು.

---

## ಹಿಪ್ಪರಿಗೆಯ ಮಲ್ಲಿಕಾರ್ಜುನ

ಮಲ್ಲಿಕಾರ್ಜುನನು ವಿಜಾಪುರ ಜಿಲ್ಲಾ ಹಿಪ್ಪರಿಗೆ ಗ್ರಾಮದವನು. ಅವನು ಮಡಿವಾಳಮಾಚಿದೇವನ ಗುರುವಾಗಿದ್ದನು. ಅವನು ಆ ಕಾಲಕ್ಕೆ ಶಿವಶರಣರಲ್ಲಿ ವರ್ಚಸ್ಸುಳ್ಳವನಾಗಿದ್ದನು. ಶಿವಶರಣರು ಉಳಿವಿಯ ವರೆಗೆ ಶತ್ರುಗಳ ಕೂಡ ಹೋರಾಡುತ್ತ ಹೋದಾಗ ಈತನು ರುದ್ರಮುನಿಯ ಕೂಡ ಉಳಿವಿಗೆ ಹೋಗಿ ಶಿವಶರಣರು ಉಯ್ಯಾಲೆಯಲ್ಲಿ ಕುಳಿತು ಶಿವನ ಸಾನ್ನಿಧ್ಯ ವನ್ನು ಹೊಂದಿದಬಳಿಕ ಅಲ್ಲಿ ಹಿಂದೆ ಉಳಿದ ನಾಗಲಾಂಬಿಕೆ, ನುಲಿಯ ಚಂದಯ್ಯ ಇವರಿಗೆ ಭದ್ರಾನದಿಯ ತೀರ ಪ್ರದೇಶದಲ್ಲಿರಲು ಸೂಚಿಸಿ ತಾನು ಹಿಪ್ಪರಿಗೆಗೆ ಹಿಂದಿರುಗಿದನು. ಅಲ್ಲಿಯೇ ಈತನ ಒಂದು ದೇವಾಲಯವಿರು ತ್ತದೆ. ಈ ಗ್ರಾಮದಲ್ಲಿಯೇ ಆತನ ಸಮಾಧಿಯು ಇರುತ್ತದೆ.

---

## ಮುಕ್ತಿಮುನಿ

ಶ್ರೀಶೈಲಕ್ಕೆ ಈ ಕಾಲದಲ್ಲಿ ಹೋದ ಶಿವಶರಣರಲ್ಲಿ ಮುಕ್ತಿಮುನಿಯು ಮುಖ್ಯನಾಗಿದ್ದನು. ರುದ್ರಮುನಿಯು ಶ್ರೀಶೈಲಕ್ಕೆ ಬಂದ ಬಳಿಕ ತನ್ನ ಪಟ್ಟವನ್ನು ಮುಕ್ತಿಮುನಿಗೆ ಕೊಟ್ಟು ಅವನನ್ನು ಸಿಂಹಾಸನಾಧಿಪತಿಯನ್ನಾಗಿ ಮಾಡಿದನು. ಮುಕ್ತಿಮುನಿಯು ಶಿವಶರಣರ ಮೇಲೇರಿ ಬರುತ್ತಿರುವ ವೈರಿ ಗಳನ್ನು ಹಿಂದಕ್ಕಟ್ಟಿದನು. ಅವನು ಶೂರನಾಗಿದ್ದನು. ರುದ್ರಮುನಿಯು ಶ್ರೀಶೈಲಕ್ಕೆ ಬಂದ ಬಳಿಕ ಪಶ್ಚಿಮದ ಮಲೆರಾಜ್ಯದಲ್ಲಿ ಶಿವಶರಣರ ಮೇಲೆ ನಡಿಸಿದ ಪೀಡೆಗಳನ್ನು ಶ್ರೀಶೈಲದಲ್ಲಿದ್ದ ಶಿವಶರಣರಿಗೆ ಅವನು ತಿಳಿಸಿ, ಪರವಾದಿಗಳ ಉಪಟಳವನ್ನು ದೂರ ಮಾಡಲಿಕ್ಕೆ ಒಂದು ಪಡೆಯನ್ನು ಸಿದ್ಧ ಪಡಿಸಿ ಅದನ್ನು ನಾಗಲಾಂಬಿಕೆಯ ಸಹಾಯಕ್ಕೋಸ್ಕರ ಮಲೆದೇಶಕ್ಕೆ ರುದ್ರ ಮುನಿಯು ಕಳಿಸಿಕೊಟ್ಟನು. ಮುಕ್ತಿಮುನಿಯು ರೇವಣಸಿದ್ಧೇಶ್ವರನಿಂದ ನಡೆದು ಬಂದ ತನ್ನ ಪಟ್ಟವನ್ನು ದಿಗಂಬರನು ಮುಕ್ತಿಮುನಿ ಎಂಬವನಿಗೆ

ತಾನು ಕೊಟ್ಟು ತಾನು ಶ್ರೀಶೈಲದಲ್ಲಿ ಸಮಾಧಿಸ್ಥನಾದನು. ಅದಕ್ಕೂ ಪೂರ್ವದಲ್ಲಿ ಅವನು ದೇವರ ಜಾತ ಭಿಕ್ಷಾವರ್ತಿ ಎಂಬವನನ್ನು ಶ್ರೀಶೈಲ ಪೀಠಾಧಿಪತಿಯಾಗಿ ನಿಯೋಜಿಸಿದ್ದನು.

---

## ದಿಗಂಬರ ಮುಕ್ತಿಮುನಿ

ಮುಕ್ತಿಮುನಿಯು ಪಂಡಿತಾರಾಧ್ಯ ಸಿಂಹಾಸನಕ್ಕೆ ದೇವರಜಾತ ಭಿಕ್ಷಾವರ್ತಿ ಎಂಬವನನ್ನು ನಿಯಮಿಸಿದ್ದನು ಮತ್ತು ರುದ್ರಮುನಿಯಿಂದ ನಡೆದು ಬಂದ ತನ್ನ ಪಟ್ಟಕ್ಕೆ ದಿಗಂಬರ ಮುಕ್ತಿಮುನಿಯನ್ನು ನಿಯಮಿಸಿಕೊಂಡನು. ಈತನು ಮಹಾಪುರುಷನು, ವೀರಧೀರನು, ವೀರಶೈವ ಸಮಾಜ ಸಂರಕ್ಷಕನು. ಅವನು ಶ್ರೀಶೈಲದಲ್ಲಿ ಬಹು ಜನ ಗಣವರರನ್ನು ಸಂಗ್ರಹಿಸಿ ಮಲೆದೇಶಕ್ಕೆ ಹೊರಟನು. ಅವನು ನಾಗಲಾಂಬಿಕೆಯ ಸಹಾಯಕ್ಕೋಸ್ಕರ ಹೊರಟು ಅವನು ಅಲ್ಲಿ ಮುಟ್ಟುವಷ್ಟರಲ್ಲಿಯೇ ಮಹಾಸಾಧ್ವಿಯಾದ ನಾಗಲಾಂಬಿಕೆಯು ತೀರಿಕೊಂಡಿದ್ದಳು. ದಿಗಂಬರ ಮುಕ್ತಿಮುನಿಯು ಮುಂದೆ ಪರವಾದಿಗಳೊಡನೆ ಘೋರವಾದ ಕಾಳಗಗಳಲ್ಲಿ ತೊಡಗಿದನು. ಅವನು ಪರವಾದಿಗಳನ್ನು ಸೋಲಿಸಿ ಬಾಳೇಹೊನ್ನೂರಿನ ಬಳಿಯಲ್ಲಿ ಕಿತ್ತಿ ಬಿಸಾಡಲ್ಪಟ್ಟ ಶಿವಲಿಂಗವನ್ನು ಎತ್ತಿತಂದು ಅಲ್ಲಿಯೇ ಅದನ್ನು ಪ್ರತಿಷ್ಠಾಪಿಸಿದನು ಮತ್ತು ಅಲ್ಲಿ ಒಂದು ದೇವಾಲಯವನ್ನು ಕಟ್ಟಿಸಿದನು. ಬಾಳೇಹಳ್ಳಿ ಎಂಬ ಹೆಸರಿನಿಂದ ಒಂದು ಗ್ರಾಮವನ್ನು ಅಲ್ಲಿಯೇ ಸ್ಥಾಪಿಸಿದನು. ಆಗ ನಡೆದ ಯುದ್ಧಗಳಲ್ಲಿ ಅಸಂಖ್ಯ ಪರವಾದಿಗಳು ಮೃತರಾದರು. ಅದೇ ಸ್ಥಳದಲ್ಲಿಯೇ ಒಂದು ಸಿಂಹಾಸನವನ್ನು ಸ್ಥಾಪಿಸಿದನು. ದಿಗಂಬರ ಮುಕ್ತಿಮುನಿಯು ಸಿಂಹಾಸನದ ಮೇಲೆ ಬೇರೊಬ್ಬರನ್ನು ನಿಯಮಿಸಿ ಅಲ್ಲಿಯೇ ತಾನು ಸಮಾಧಿಸ್ಥನಾದನು. ಆಗ ತನ್ನ ತರುವಾಯ ಸಿಂಹಾಸನದ ಮೇಲೆ ಸುಕುಮಾರ ಚನ್ನಬಸವೇಶ್ವರ ಎಂಬವನನ್ನು ನಿಯಮಿಸಿದ್ಧನು.

---

## ಸುಕುಮಾರ ಚನ್ನಬಸವೇಶ್ವರ

ಸುಕುಮಾರ ಚನ್ನಬಸವೇಶ್ವರನು ಅತ್ಯಂತ ಶೂರ ಪುರುಷನಾಗಿದ್ದನು. ಅವನು ವೀರಶೈವ ಮತಕ್ಕೆ ಮಾಡಿದ ಸಹಾಯವು ಅಪಾರವಾದದ್ದು. ಅವನು ಶರಣರ ಅಧಿಕಾರವನ್ನು ಎಲ್ಲಕಡೆಗೂ ಸ್ಥಾಪಿಸಿದನು. ಈ ಕಾರ್ಯದಲ್ಲಿ ಅವನು ಬಹುಜನ ದುಷ್ಟ ಪರವಾದಿಗಳನ್ನು ಸಂಹರಿಸಬೇಕಾಯಿತು. ಇದ

ರಲ್ಲಿ ಅವನು ಕಡೆಗೆ ಯಶಸ್ಸನ್ನು ಹೊಂದಿದನು. ಅವನು ಬಹುಜನ ಅಮರ ಗಣಾಧೀಶ್ವರರನ್ನು ಧರ್ಮ ಪ್ರಸಾರ ಮಾಡಲು ನಾಡಿನ ಸುತ್ತಲೂ ಕಳಿಸಿದನು. ಅವರು ಗ್ರಾಮಾಂತರಗಳಲ್ಲಿ ಸಂಚರಿಸುತ್ತ ಶಿವಾನುಭವದ ರೀತಿಗಳನ್ನು ಜನರಿಗೆ ತಿಳಿಸುತ್ತ ಅಲ್ಲಲ್ಲಿ ಬಾಳೇಹಳ್ಳಿಯ ಸಿಂಹಾಸನ ಮಠಕ್ಕೆ ಹೊಂದಿ ಅಸಂಖ್ಯ ಮಠಗಳನ್ನು ಸ್ಥಾಪಿಸುತ್ತ ಧರ್ಮವೃದ್ಧಿಗೋಸ್ಕರ ದೀರ್ಘ ಪ್ರಯತ್ನ ಗಳನ್ನು ಮಾಡಿದರು. ಆ ಕಾಲಕ್ಕೆ ಈ ನಾಡು ಬಸವ, ಅಲ್ಲಮಪ್ರಭು, ಮಹಾದೇವಿಯಕ್ಕ, ರುದ್ರಮುನಿ, ದಿಗಂಬರಸು, ಮುಕ್ತಿಮುನಿಗಳು ಚನ್ನಬಸ ವೇಶ್ವರ, ಈ ಮಹಾನುಭಾವರ ಹೆಸರುಗಳು ಎಲ್ಲರ ಸ್ಮರಣೆಯಲ್ಲಿದ್ದವು. ಆಗ ಅಸಂಖ್ಯ ಜನರು ವೀರಶೈವ ಮತಾವಲಂಬಿಗಳಾದರು. ಒಂದು ಕಾಲಕ್ಕೆ ಬಿಜ್ಜಳನ ನಾಡೆಂದು ಹೆಸರುಗೊಂಡ ಈ ಬನವಾಸಿ ಬಳ್ಳಿಗಾವಿ ಪ್ರದೇಶವು ಅಮರಗಣಾಧೀಶ್ವರರ ನಾಡೆಂದು ಹೆಸರಾಯಿತು. ಒಂದು ಕಾಲಕ್ಕೆ ಶಿವಮತವು ಅಳಿದುಹೋಗುವದೆಂಬ ಭೀತಿಯು ಎಲ್ಲರಲ್ಲಿ ಉಂಟಾಗಿತ್ತು. ಆದರೆ ನಾಗ ಲಾಂಬಿಕೆ, ಗಂಗಾಂಬಿಕೆ, ಮೊದಲ್ಗೊಂಡು ಅನೇಕ ಸಿಂಹಾಸನಾಧಿಪತಿಗಳು ನಡಿಸಿದ ಪ್ರಯತ್ನಗಳ ಮೂಲಕ ಈ ಭೀತಿಯು ದೂರಾಯಿತು. ಈ ನಾಡಿ ನಲ್ಲಿದ್ದ ಮರುಳಸಿದ್ಧನು ಇದಕ್ಕೂ ಪೂರ್ವ ಭಾಗದಲ್ಲಿರುವ ಪ್ರದೇಶದಲ್ಲಿ ವೀರಶೈವ ಮತವನ್ನು ಹಬ್ಬಿಸಿದನು. ಹೀಗೆ ವೀರಶೈವ ಮತವು ಬನವಾಸಿ ಬಳ್ಳಿಗಾಂವಿ ಪಟ್ಟಣಗಳಿಂದ ಉಜ್ಜನಿಯ ವರೆಗೂ ಹಬ್ಬಿ ಅದು ಶಿವಶರಣರ ನಾಡಾಗಿ ಉಳಿಯಿತು. ಈ ಶ್ರೇಷ್ಠ ಕಾರ್ಯವನ್ನು ಈ ಮಹಾನುಭಾವರು ಮಾಡಿರುವರು. ಇದರ ಅನುಕರಣವು ಮುಂದೆ ಹಬ್ಬಲು ಪುಲಿಗೆರೆ ಮುಂತಾದ ಪಟ್ಟಣಗಳ ಕಡೆಗೂ ವೀರಶೈವ ಮತವು ಹಬ್ಬಿತು. ಮುಂದೆ ಕಲಬುರ್ಗಿ ಮತ್ತು ವಿಜಾಪೂರ ಪ್ರಾಂತಗಳಲ್ಲಿ ಶಿವಶರಣರ ವಾಙ್ಮಯವು ಒತ್ತರದಿಂದ ಬೆಳೆಯು ಹತ್ತಿತು. ಮತ್ತು ಈ ಯಾವತ್ತೂ ಕಡೆಗೆ ವೀರಶೈವರ ಸಂಖ್ಯೆಯು ಬಹು ಪ್ರಬಲವಾಗಿ ಬೆಳೆಯಿತು.

---

## ಹಡಪದಪ್ಪಣ್ಣ

ಹಡಪದಪ್ಪಣ್ಣನು ಬಸವೇಶ್ವರನ ಏಕನಿಷ್ಠ ಸೇವಕನಾಗಿದ್ದನು. ಅವನು ವಚನಕಾರನಿದ್ದಾನೆ. ಅವನ ಹೆಂಡತಿ ಲಿಂಗಮ್ಮನು. ಅವಳೂ ವಚನಕಾರ ಳಾಗಿದ್ದಾಳೆ. ಹಡಪದಪ್ಪಣ್ಣನ ಗುರುವು ಚನ್ನಮಲ್ಲೇಶ್ವರನು. ಹಡಪದಪ್ಪ

ಣ್ಣನು ಬಸವೇಶ್ವರನನ್ನು ಬಿಟ್ಟು ಒಂದು ಗಳಿಗೆ ಸಹ ಇರುತ್ತಿದ್ದಿಲ್ಲ. ಅವನು ಬಸವೇಶ್ವರನಿಗೆ ವೀಳೆಯವನ್ನು ತಯಾರಿಸಿ ಕೊಡುವನು. ಅವನ ಹಸ್ತ ಪಾದಗಳಿಗೆ ನೀರು ಕೊಡುವನು. ಈ ಮೊದಲಾದ ಕಾಯಕಗಳನ್ನು ಅವನು ತಪ್ಪದೆ ಮಾಡುವನು.

ಹರಳಯ್ಯ ಮಧುವರಸರ ವಧೆಯಾದ ಬಳಿಕ ಬಸವೇಶ್ವರನು ಕೂಡಲ ಸಂಗಮಕ್ಕೆ ಬಂದನು. ಅವನ ಕೂಡ ಹಡಪದಪ್ಪಣ್ಣನೂ ಇದ್ದನು. ಬಸವೇಶ್ವರನು ಕೂಡಲಸಂಗಮಕ್ಕೆ ಬಂದ ಬಳಿಕ ಅವನು ತನ್ನ ಹೆಂಡತಿ ನೀಲಾಂಬಿಕೆಯನ್ನು ಕರೆತರಲು ಕಲ್ಯಾಣಕ್ಕೆ ಅವನನ್ನು ಕಳಿಸಿದನು. ಅವನು ಅವಳನ್ನು ಕರೆದುಕೊಂಡು ಬಂದು ಕೃಷ್ಣಾನದಿಯ ದಂಡೆಯಮೇಲಿರುವ ತಂಗಡಿಗಿ ಈ ಗ್ರಾಮಕ್ಕೆ ಬಂದನು. ಅಲ್ಲಿಗೆ ಬರುವಷ್ಟರಲ್ಲಿ ಬಸವೇಶ್ವರನು ಲಿಂಗದಲ್ಲಿ ಐಕ್ಯನಾಗಿದ್ದನು. ಈ ಸುದ್ದಿಯು ತಿಳಿದ ಕೂಡಲೆ ನೀಲಾಂಬಿಕೆಯು ಮತ್ತು ಹಡಪದಪ್ಪಣ್ಣನು ತಮ್ಮ ತಮ್ಮ ಲಿಂಗದಲ್ಲಿ ಬಯಲಾದರು. ತಂಗಡಗಿ ಗ್ರಾಮದ ಬದಿಯಲ್ಲಿ ನದೀ ತೀರದಲ್ಲಿ ಈ ಉಭಯತರ ಸಮಾಧಿಗಳಿವೆ. ಅವುಗಳ ಮೇಲೆ ಚಿಕ್ಕ ದೇವಾಲಯುಗಳನ್ನು ಭಕ್ತರು ಕಟ್ಟಿಸಿದ್ದಾರೆ. ಪೂರ್ವ ಕಡೆಯ ದೇವಾಲಯವು ನೀಲಾಂಬಿಕೆಯದೂ ಪಶ್ಚಿಮಕಡೆಯುದು ಹಡಪದಪ್ಪಣ್ಣನದೂ ಇವೆ. ವೀರಶೈವರಿಗೆಲ್ಲ ಈ ಸಮಾಧಿಗಳು ಈಗಲೂ ಅತ್ಯಂತ ಪೂಜ್ಯವಾದವುಗಳಾಗಿರುತ್ತವೆ.

---

## ಲಿಂಗಮ್ಮ

ಲಿಂಗಮ್ಮನು ಹಡಪದಪ್ಪಣ್ಣನ ಹೆಂಡತಿಯು. ಆಕೆಯ ಗುರುವು ಚನ್ನಮಲ್ಲೇಶ್ವರನು. ಅವಳು ತನ್ನ ವಚನಗಳಲ್ಲಿ ತಾನು ಚನ್ನಬಸವನ ಕರುಣದ ಶಿಶು ಎಂದು ಹೇಳಿಕೊಂಡಿದ್ದಾಳೆ. ಅವಳ ವಚನಗಳು ಬಹಳ ಮಿಗಿಲಾದವುಗಳು. ಪ್ರಾಣಲಿಂಗದ ಆಚೆಗಿರುವ ಭಾವಲಿಂಗ ಅಥವಾ ನಿರವಯ ಸ್ಥಿತಿ ಅಥವಾ ಬೆಳಗು ಇವುಗಳನ್ನು ಹೇಗೆ ಸಾಧಿಸಬೇಕೆಂಬುದನ್ನು ಅವಳು ತನ್ನ ಉಕ್ತಿಗಳಲ್ಲಿ ಬಹು ಚನ್ನಾಗಿ ನಿರೂಪಿಸಿದ್ದಾಳೆ. ಈಗ ಅವಳ ವಚನಗಳು ಪ್ರಕಟವಾಗಿರುತ್ತವೆ.

---

## ನಾಗಲಾಂಬಿಕೆ

ನಾಗಲಾಂಬಿಕೆಯು ಬಸವೇಶ್ವರನ ಅಕ್ಕನು ಮತ್ತು ಚನ್ನಬಸವೇಶ್ವರನ ತಾಯಿಯು ಇದ್ದಾಳೆ. ಅವಳ ಗಂಡನ ಹೆಸರು ಶಿವಸ್ವಾಮಿಯು. ಬಸವೇಶ್ವರನು ಬಾಗೇವಾಡಿಯಿಂದ ಹೊರಗೆ ಹಾಕಲ್ಪಟ್ಟ ಬಳಿಕ ಅವಳು ಅವನ ಕೂಡ ಕೂಡಲಸಂಗಮ ಕ್ಷೇತ್ರಕ್ಕೆ ಬಂದು ಅಲ್ಲಿಯೇ ಇದ್ದಳು. ನಾಗಲಾಂಬಿಕೆಯು ಬಾಗೇವಾಡಿಯಲ್ಲಿ ಇದ್ದಾಗಲೇ ಅವಳ ಲಗ್ನವಾಗಿತ್ತು. ಮತ್ತು ಅವಳು ಕೂಡಲಸಂಗಮ ಕ್ಷೇತ್ರಕ್ಕೆ ಬರುವ ಮೊದಲೆ ಚನ್ನಬಸವೇಶ್ವರನನ್ನು ಹಡೆದಿದ್ದಳು. ಅನೇಕರು ನಾಗಲಾಂಬಿಕೆಗೆ ಲಗ್ನವಾಗಿದ್ದಿಲ್ಲ, ಅವಳು ಕಕ್ಕಯ್ಯನ ಪ್ರಸಾದದಿಂದ ಗರ್ಭಿಣಿಯಾಗಿ ಹಡೆದಳೆಂದು ತಿಳಿಯುತ್ತಾರೆ. ಆದರೆ ಇದು ತಪ್ಪು ತಿಳುವಳಿಕೆ ಎಂದು ತೋರುತ್ತದೆ. ಈ ಕಾಲಕ್ಕೆ ಬಿಜ್ಜಳನು ಕಲ್ಯಾಣಕ್ಕೆ ಬಂದಿದ್ದಿಲ್ಲ. ಮತ್ತು ಬಸವನು ಅವನ ಪ್ರಧಾನಿಯೂ ಆಗಿದ್ದಿಲ್ಲ. ಈ ಸ್ಥಿತಿಯಲ್ಲಿ ಕಕ್ಕಯ್ಯನು ಕಲ್ಯಾಣಕ್ಕೆ ಅವನನ್ನು ಕಾಣಲು ಬರುವ ಸಂಭವವಿಲ್ಲ. ನಾಗಲಾಂಬಿಕೆಯೂ ಚನ್ನಬಸವನೂ ವೀರಶೈವ ಶಿವ ಶರಣರಲ್ಲಿ ಅತ್ಯಂತ ಉನ್ನತ ಸ್ಥಾನವನ್ನು ಹೊಂದಿದವರು ಇದ್ದಾರೆ. ಅವರ ಹೆಸರಿಗೆ ಕಲಂಕ ತರುವದರ ಸಲುವಾಗಿ ಬಸವೇಶ್ವರನ ವಿರೋಧಿಗಳು ಈ ತರದ ಸುಳ್ಳು ವೃತ್ತಾಂತವನ್ನು ಪ್ರಕಟಿಸಿದ್ದಾರೆಂದು ತೋರುತ್ತದೆ.

ನಾಗಲಾಂಬಿಕೆಯು ಒಬ್ಬ ಯೋಗಿಣಿಯು, ಶ್ರೇಷ್ಠ ಶಿವಾನುಭವಿಯು. ಅವಳ ಹೆಸರಿನ ಗವಿಯು ಇಂಗುಳೇಶ್ವರದಲ್ಲಿ ಈಗಲೂ ಇರುತ್ತದೆ. ಅಲ್ಲಿ ಅವಳ ಮೂರ್ತಿಯೂ ಇದೆ. ಮುಂದೆ ಬಲದೇವ ಮಂತ್ರಿಯು ಬಿಜ್ಜಳನಲ್ಲಿ ಮಂತ್ರಿಯಾದ ಬಳಿಕ ಅವನು ಬಸವೇಶ್ವರರನ್ನು ಕಲ್ಯಾಣಕ್ಕೆ ಬರಮಾಡಿಕೊಂಡು ಅವನಿಗೆ ತನ್ನ ಮಗಳಾದ ಗಂಗಾಂಬಿಕೆಯನ್ನು ಕೊಟ್ಟು ಲಗ್ನ ಮಾಡಿದನು. ನಾಗಲಾಂಬಿಕೆಯು ಅಂದಿನಿಂದ ಕಲ್ಯಾಣದಲ್ಲಿಯೇ ಇರಹತ್ತಿದಳು.

ನಾಗಲಾಂಬಿಕೆಯು ವಚನಕಾರಳಿದ್ದಾಳೆ, ಅವಳ ಕೆಲವು ವಚನಗಳು ಉಪಲಬ್ಧವಿರುತ್ತವೆ. ಅವಳ ಮುದ್ರಿಕೆಯು ಬಸವಣ್ಣಪ್ರಿಯ ಚನ್ನಸಂಗಯ್ಯ ಎಂದಿರುತ್ತದೆ.

ಕಲ್ಯಾಣವಲ್ಲಿ ಹರಳಯ್ಯ ಮಧುವರಸರ ಸಂಬಂಧವಾಗಿ ಕೋಲಾಹಲಗಳು ಉಂಟಾದಬಳಿಕ ಶಿವಶರಣರು ತೊರಗಲ್ಲು ನಾಡಿಗೆ ಯುದ್ಧಮಾಡುತ್ತ

ಹೊರಟರು. ಅವರ ಕೂಡ ನಾಗಲಾಂಬಿಕೆಯೂ ಹೊರಟಿದ್ದಳು. ಮಧ್ಯ ದಲ್ಲಿ ನಾಗಳಾಪುರ ಎಂಬ ಗ್ರಾಮವಿದ್ದು ಅಲ್ಲಿ ಕೆಲವು ದಿವಸ ಅವಳು ವಾಸಮಾಡಿದ್ದಳು. ಆದ್ದರಿಂದ ಅಲ್ಲಿ ಅವಳ ದೇವಾಲಯವಿರುತ್ತದೆ. ಕಾದರ ವಳ್ಳಿಯ ಕಾಳಗದಲ್ಲಿ ಅವಳು ಪ್ರತ್ಯಕ್ಷ ಶಿವಶರಣರನ್ನು ಹುರಿದುಂಬಿಸುತ್ತ ಕಾಳಗಮಾಡಿದಳು. ಮುಂದೆ ಶಿವಶರಣರು ಮಹಾಮನೆಯ ವರೆಗೆ ಪ್ರಯಾಣ ಮಾಡುತ್ತಿದ್ದಾಗ ಅವಳು ಅವರೊಡನೆ ಇದ್ದು ಉಳಿವಿಯ ವರೆಗೂ ಹೋದಳು. ಅಲ್ಲಿ ನಡೆದ ಘೋರ ಕಾಳಗವನ್ನು ಅವಳು ಕಂಡಿದ್ದಾಳೆ. ಅಲ್ಲಿ ಶಿವಶರ ಣರು ಕೈಲಾಸಕ್ಕೆ ತೆರಳಿದ್ದನ್ನು ಅವಳು ನೋಡಿದ್ದಾಳೆ. ಇಷ್ಟರಲ್ಲಿ ನುಲಿಯ ಚಂದಯ್ಯನು ಉಳಿವಿಗೆ ಬಂದು ಅವಳನ್ನು ಕಂಡನು. ಆಗ ರುದ್ರಮುನಿಯೂ ಈ ಸ್ಥಾನಕ್ಕೆ ಬರುವವನಾದನು. ಅವನ ಸಲಹೆಯಿಂದ ನುಲಿಯಚಂದಯ್ಯನೂ ನಾಗಲಾಂಬಿಕೆಯೂ ಶಿವಮೊಗ್ಗಾ ಜಿಲ್ಲಾ ಭದ್ರಾನದೀ ತೀರದಲ್ಲಿ ಸಿದ್ಧವೀರ ಸ್ವಾಮಿಗಳೆಂಬವರು ಇದ್ದು ಅಲ್ಲಿಗೆ ಬಂದು ಅವರು ಅಲ್ಲಿ ಕಟ್ಟಿಸಿದ ಮಠದಲ್ಲಿ ಉಭಯತರು ಇದ್ದರು. ಮುಂದೆ ನಾಗಲಾಂಬಿಕೆಯು ಅಲ್ಲಿಯೇ ಸಮಾಧಿ ಸ್ಥಳಾದಳು. ಅವಳ ಸಮಾಧಿಯು ಈಗಲೂ ಇದೇ ಸ್ಥಳದಲ್ಲಿ ಇದೆ. ಅಲ್ಲಿ ಜಾತ್ರೆಯಾಗುತ್ತದೆ.

ಈ ಪ್ರಕಾರ ನಾಗಲಾಂಬಿಕೆಯ ಅದ್ಭುತ ಚರಿತ್ರೆ ಇದೆ. ಆರಂಭದಿಂದ ಕಡೆಯವರೆಗೆ ಅವಳು ಬಸವೇಶ್ವರನ ಕೂಡ ಇದ್ದು ಅವನ ಕಷ್ಟನಷ್ಟಗಳಿಗೆ ಅವಳು ಪಾಲುಗಾರಳಾದಳು. ಮೊದಲು ಕೂಡಲಸಂಗಮ ಕ್ಷೇತ್ರದಲ್ಲಿ ಮುಂದೆ ಕಲ್ಯಾಣಪಟ್ಟಣದಲ್ಲಿ ಧರ್ಮವೃದ್ಧಿಯ ಕಾರ್ಯಮಾಡಿದಳು. ಮುಂದೆ ತೊರ ಗಲ್ಲುನಾಡಿನ ಕಾಳಗಗಳಲ್ಲಿ ಅವಳು ಅಂಗ ವಹಿಸಿದಳು. ಮಹಾಮನೆಯ ಕಠಿಣ ಕಾಳಗದಲ್ಲಿದ್ದು ಮುಂದೆ ಭದ್ರಾನದಿಯುವರೆಗೂ ಹೋಗಿ ಅಲ್ಲಿ ಸಮಾಧಿ ಸ್ಥಳಾದಳು. ಹೀಗೆ ಅವಳು ಬಸವೇಶ್ವರನಿಗೆ ಸಹಾಯಕಳಾಗಿ ಕಡೆಯವರೆಗೂ ಧರ್ಮಪೋಷಣೆಗಾಗಿ ಪ್ರಯತ್ನಿಸುತ್ತ ಬಂದಿದ್ದಾಳೆ.

---

## ನೀಲಾಂಬಿಕೆ

ನೀಲಾಂಬಿಕೆಯು ಸಿದ್ದಣ್ಣ ಮಂತ್ರಿಯ ಮಗಳು. ಅವಳು ಬಸವೇ ಶ್ವರನ ಭಾರ್ಯೆಯಾಗಿದ್ದಾಳೆ. ಅವಳು ವಿದ್ವಾಂಸಳಾಗಿ ಶಿವಶರಣರಲ್ಲಿ ಉನ್ನತ ಸ್ಥಾನವನ್ನು ಹೊಂದಿದ್ದಾಳೆ. ಅವಳು ಬಸವೇಶ್ವರನಿಗೆ ಸಹಾಯಕಳಾಗಿ ಇದ್ದು

ಕಾರ್ಯ ಮಾಡಿದ್ದಾಳೆ. ಅವಳು ವಚನಕಾರಳೂ ಇದ್ದಾಳೆ. ಬಸವಪ್ರಿಯ ಕೂಡಲಸಂಗಮದೇವಾ ಎಂಬುದು ಅವಳ ಮುದ್ರಿಕೆಯಾಗಿದೆ. ಬಸವೇಶ್ವರನು ಕಲ್ಯಾಣವನ್ನು ಬಿಟ್ಟು ಕೂಡಲಸಂಗಮಕ್ಕೆ ಹೋದ ಬಳಿಕ ಅವಳಿಗೆ ಅಲ್ಲಿಗೆ ಬರಲು ಹೇಳಿಕಳಿಸಿದನು. ಅಷ್ಟರಲ್ಲಿ ಬಸವನು ಅಲ್ಲಿ ಐಕ್ಯ ಹೊಂದಿದನು. ಅದನ್ನು ಕೇಳಿ ಅವಳಾದರೂ ತನ್ನ ಲಿಂಗದಲ್ಲಿ ಐಕ್ಯ ಹೊಂದಿದಳು. ಆಕೆಯ ಸಮಾಧಿಯು ಕೃಷ್ಣಾತೀರದಲ್ಲಿ ತಂಗಡಿಗಿ ಗ್ರಾಮದ ಹತ್ತರವಿದೆ.

---

## ಗಂಗಾಂಬಿಕೆ

ಗಂಗಾಂಬಿಕೆಯು ಬಸವೇಶ್ವರನ ಹೆಂಡತಿಯು. ಬಲದೇವ ಮಂತ್ರಿಯ ಮಗಳು. ಬಲದೇವನು ಬಸವನನ್ನು ಕೂಡಲಸಂಗಮದಿಂದ ಕಲ್ಯಾಣಕ್ಕೆ ಬರಮಾಡಿಕೊಂಡನು. ಅವಳು ಕಡೆಯ ವರೆಗೆ ಅಲ್ಲಿಯೇ ಇದ್ದಳು ರುದ್ರ ಮುನಿಯು ಅವಳ ಗುರುವಾಗಿದ್ದನು. ಶಿವಶರಣರನ್ನು ಬಿಜ್ಜಳನ ದಂಡಾಳು ಗಳೊಡನೆ ಹೋರಾಡುತ್ತ ತೊರಗಲ್ಲು ನಾಡಿಗೆ ಹೋಗುವಾಗ ಅವಳು ಶಿವಶರಣರ ದಂಡಿನ ಕೂಡ ಅತ್ತ ಹೊರಟಳು. ಕಾದರವಳ್ಳಿ ಮೊದಲಾದ ಕಡೆಗೆ ನಡೆದ ಕಾಳಗಗಳನ್ನು ಅವಳು ಕಂಡಿದ್ದಾಳೆ. ಕಾದರವಳ್ಳಿಯಿಂದ ೩-೪ ಮೈಲು ದೂರವಿರುವ ಮುಗುಟಖಾನ ಹುಬ್ಬಳ್ಳಿಯಲ್ಲಿ ಅವಳು ಸಮಾಧಿಸ್ಥಳಾದಳು. ಈ ಸ್ಥಳದಲ್ಲಿ ಮಲಾಪಹಾರಿ ನದಿಯು ಇದ್ದು ಇದರ ದಂಡೆಯ ಮೇಲೆ ಈಕೆಯ ದೇವಸ್ಥಾನವು ಈಗಲೂ ಇರುತ್ತದೆ.

---

## ಶಿವಸ್ವಾಮಿ

ಶಿವಸ್ವಾಮಿಯು ಚನ್ನಬಸವೇಶ್ವರನ ತಂದೆಯಾಗಿದ್ದನು. ಅವನು ನಾಗಲಾಂಬಿಕೆಯನ್ನು ಲಗ್ನವಾಗಿದ್ದನು. ಅವನು ನಾಗಲಾಂಬಿಕೆ ಮತ್ತು ಬಸವೇಶ್ವರ ಇವರ ಕೂಡ ಕೂಡಲಸಂಗಮ ಕ್ಷೇತ್ರದಲ್ಲಿ ವಾಸಮಾಡಿದನು. ಮುಂದೆ ಬಸವೇಶ್ವರನ .ಲಗ್ನವು ಗಂಗಾಂಬಿಕೆಯ ಕೂಡ ಕಲ್ಯಾಣದಲ್ಲಿ ನಡೆದಾಗ್ಗೆ ಅವನು ಈ ಕಾಲದಲ್ಲಿ ಅಲ್ಲಿಯೇ ಇದ್ದನು. ಇದರ ತರುವಾಯ

ಅವನು ಬಹಳ ದಿವಸ ಜೀವಿಸಿದಂತೆ ತೋರುವದಿಲ್ಲ. ಅವನ ಮುಂದಿನ ವೃತ್ತಾಂತವು ಇನ್ನು ಉಪಲಬ್ಧವಿರುವದಿಲ್ಲ.

---

## ಮಹಾದೇವಿ ಅಕ್ಕ

ಮಹಾದೇವಿಯಕ್ಕನು ಶಿವಶರಣರ ಸಮೂಹದಲ್ಲಿ ಅತಿ ಉಜ್ವಲ್ಯವಾಗಿ ಪ್ರಕಾಶಿಸುತ್ತಾಳೆ. ಅವಳು ಶಿವಮೊಗ್ಗಾ ಜಿಲ್ಲೆಯಲ್ಲಿ ಉಡುತಡಿ ಎಂಬ ಗ್ರಾಮದಲ್ಲಿ ಇರುತ್ತಿದ್ದಳು. ಆ ಗ್ರಾಮದಲ್ಲಿ ಅವಳು ವಿಮಲ ಮತ್ತು ಸುಮತಿ ಎಂಬವರ ಮಗಳಾಗಿ ಜನಿಸಿದಳು. ಇವಳಿಗೆ ಗುರುಲಿಂಗದೇವ ನೆಂಬವನು ಗುರುವಾಗಿದ್ದನು. ಉಡುತಡಿ ಗ್ರಾಮದಲ್ಲಿ ಕೌಶಿಕನೆಂಬವನು ರಾಜ್ಯವಾಳುತ್ತಿದ್ದನು. ಅವನು ಮಹಾದೇವಿಅಕ್ಕನ ರೂಪು ಲಾವಣ್ಯಗಳನ್ನು ನೋಡಿ ಮೋಹಿತನಾಗಿ ಅವಳನ್ನು ತನ್ನ ಅರಮನೆಗೆ ಬರಮಾಡಿಕೊಂಡನು ಮತ್ತು ತನ್ನನ್ನು ಲಗ್ನವಾಗಲಿಕ್ಕೆ ಒತ್ತಾಯಪಡಿಸಿದನು. ಅದಕ್ಕೆ ಅವಳು ನೀನು ಲಿಂಗಧಾರಣೆ ಹೊಂದಿದರೆ ನಾನು ಲಗ್ನವಾಗುತ್ತೇನೆಂದು ಹೇಳಿದಳು. ಅದಕ್ಕೆ ಅವನು ಒಪ್ಪದ್ದರಿಂದ ಅವಳು— ನಾನು ಇನ್ನು ಮೇಲೆ ಯಾರನ್ನೂ ಲಗ್ನವಾಗುವದಿಲ್ಲ, ಎಂದು ಹೇಳಿ ದಿಗಂಬರಿಯಾದಳು. ಆಗ ಕೌಶಿಕನು ಅವಳಿಗೆ ಯಾವ ಬಲಾತ್ಕಾರವನ್ನು ಮಾಡದೆ ಅವಳನ್ನು ಬಿಟ್ಟುಕೊಟ್ಟನು. ಆಗ ಅವಳು ಕಲ್ಯಾಣಕ್ಕೆ ಬಂದು ಬಸವನ ಅರಮನೆಯಲ್ಲಿ ಇರಹತ್ತಿದಳು. ಶಿವಾನುಭವ ಮಂಟಪದಲ್ಲಿ ಸೇರಿಕೊಂಡು ಅಧ್ಯಾತ್ಮ ವಿಚಾರದಲ್ಲಿ ಕಾಲ ಕಳೆಯಹತ್ತಿದಳು. ಅವಳು ಸುಂದರವಾದ ಅಸಂಖ್ಯ ವಚನಗಳನ್ನು ರಚಿಸಿದ್ದಾಳೆ. ಇದರಿಂದ ಅವಳ ಖ್ಯಾತಿಯು ಶಿವಶರಣರಲ್ಲಿ ಬಹಳ ಹೆಚ್ಚಿತು. ಅವಳನ್ನು ಎಲ್ಲರೂ ಅತ್ಯಂತವಾಗಿ ಆದರಿಸಹತ್ತಿದರು. ಮುಂದೆ ಹರಳಯ್ಯ ಮಧುವರಸರ ಬಗ್ಗೆ ನಾಡಿನಲ್ಲಿ ವಿತುಷ್ಟಿಯು ಬೆಳೆಯಹತ್ತಿತು. ಆಗ ಅವಳು ಅಲ್ಲಮಪ್ರಭುವಿನ ಕೂಡ ಶ್ರೀಶೈಲಕ್ಕೆ ಹೋಗಿ ಅಲ್ಲಿಯೇ ಸಮಾಧಿಸ್ಥಳಾದಳು.

---

## ಶೂಲದ ಬ್ರಹ್ಮಯ್ಯ

ಬಿಜ್ಜಳನಿಗೆ ಗರುಡಭೂಪನೆಂಬವನು ಮಾಂಡಲಿಕನಾಗಿ ಪನ್ನಾತಪುರ ಎಂಬಲ್ಲಿ ರಾಜ್ಯವಾಳುತ್ತಿದ್ದನು. ಅವನ ಮನೆಯ ಹಡಪಿಗನಾದ ರಾಮನಾಥ ನೆಂಬವನು ರಾಜನ ಆಭರಣವನ್ನು ಕದ್ದು ಬ್ರಹ್ಮಯ್ಯನ ಮನೆಯಲ್ಲಿಟ್ಟನು.

ಜನ ಆಳುಗಳು ನೋಡಿ ಬಿಜ್ಜಳನಲ್ಲಿ ಅವನ ಮೇಲೆ ಫಿರ್ಯಾದು ಏನೂ ವಿಚಾರ ಮಾಡದೆ ಬ್ರಹ್ಮಯ್ಯನು ಕಳವು ಮಾಡಿದ್ದಾನೆಂದು ತಿಳಿದು ಅವನನ್ನು ಶೂಲಕ್ಕೇರಿಸಿದನು. ಇದರಿಂದ ಬ್ರಹ್ಮಯ್ಯನು ಮರಣಹೊಂದಲಿಲ್ಲ. ಅಷ್ಟೇ ಅಲ್ಲ, ಅವನಲ್ಲಿ ನೆಟ್ಟ ಶೂಲದ ತುದಿಯು ಚಿಗಿದು ಟೊಂಗೆಯಾಗಿ ಬೆಳೆಯಿತು. ಅದನ್ನು ಎಲ್ಲರೂ ನೋಡಿ ಚಕಿತರಾಗಿ ಬ್ರಹ್ಮಯ್ಯನು ಶ್ರೇಷ್ಠ ಶರಣನೆಂದು ಎಲ್ಲರೂ ಅವನನ್ನು ಹೊಗಳ ಹತ್ತಿದರು. ಮುಂದೆ ಆತನು ಕಲ್ಯಾಣದಲ್ಲಿಯೇ ವಾಸಮಾಡಲಿಕ್ಕೆ ಹತ್ತಿದನು. ಮುಂದೆ ಶಿವಶರಣರು ಯುದ್ಧಮಾಡುತ್ತ ತೊರಗಲ್ಲು ನಾಡಿಗೆ ಹೋದಾಗ ಶೂಲದ ಬ್ರಹ್ಮಯ್ಯನು ಶರಣರಿಗೆ ಮುಂದಾಳುವಾಗಿ ನಿಂತು ವೈರಿಗಳ ಕೂಡ ಹೋರಾಡಿದನು. ಅವನು ಉಳಿವಿಯ ವರೆಗೆ ಹೋಗಿ ಅಲ್ಲಿಯೇ ಸಮಾಧಿಸ್ಥ ನಾದನು.

---

## ಬಂಕನಾಥ

ಬಂಕನಾಥನು ತೊರಗಲ್ಲು ನಾಡಿನಲ್ಲಿದ್ದ ಇಂಚಲ ಗ್ರಾಮದವನು. ಅವನು ಶಿವಶರಣನಾಗಿದ್ದು ವಚನಕಾರನಿರುತ್ತಾನೆ. 'ದಹನ ಚಂಡಿಕೇಶ್ವರ ಲಿಂಗ' ಎಂಬುದು ಅವನ ಮುದ್ರಿಕೆಯಾಗಿದೆ. ಅವನು ಮೊದಲು ಕಲ್ಯಾಣ ಪಟ್ಟಣದಲ್ಲಿದ್ದು ಶರಣರಿಗೆ ಯುದ್ಧಮಾಡುವ ಪ್ರಸಂಗ ಬರಲು ಅವನು ತೊರಗಲ್ಲು ನಾಡಿನವರೆಗೆ ಹೋರಾಡುತ್ತ ಬಂದನು. ಅವನು ಇಂಚಲ ಗ್ರಾಮದಲ್ಲಿ ನಿಂತುಕೊಂಡನು. ಅವನು ಅಲ್ಲಿಯೇ ಮರಣ ಹೊಂದಿದನು. ಅಲ್ಲಿ 'ಬಂಕನಾಥನ ಗುಡಿ' ಎಂದು ಈಗಲೂ ಒಂದು ದೇವಾಲಯವು ಪ್ರಸಿದ್ಧವಿದೆ.

---

## ಕೂಗಿನ ಮಾರಿತಂದೆ

ಕೂಗಿನ ಮಾರಿತಂದೆಯು ಬಸವೇಶ್ವರನ ಕಾಲದಲ್ಲಿ ಕಲ್ಯಾಣಕ್ಕೆ ಬಂದು ಶಿವಾನುಭವ ಮಂಟಪದ ಗೋಷ್ಠಿಗಳಲ್ಲಿ ಅಂಗವಹಿಸುತ್ತಾ ಇದ್ದು ಶ್ರೇಷ್ಠ ಶಿವಾನುಭವಿ ಎಂದು ಪ್ರಸಿದ್ಧಿಯನ್ನು ಹೊಂದಿದನು. ಅವನು ವಚನಕಾರನಿದ್ದಾನೆ. 'ಮಹಾ ಮಹಿಮ ಮಾರೇಶ್ವರಾ' ಎಂಬುದು ಅವನ ಮುದ್ರಿಕೆಯಾಗಿದೆ. ಶಿವಶರಣರು ಕಲ್ಯಾಣವನ್ನು ಬಿಟ್ಟು ತೆರಳಲಾಗಿ ಬಿಜ್ಜಳನ

ದಂಡಾಳುಗಳು ಅವರನ್ನು ಬೆನ್ನಟ್ಟಿದರು. ಕೂಗಿನ ಮಾರಿತಂದೆಯು ಶಿವಶರಣರ ಸಂಗಡ ಇದ್ದು ಶತ್ರುಗಳು ಸಮೀಪಕ್ಕೆ ಬಂದ ಕೂಡಲೇ ಇವನು ಉಚ್ಚ ಧ್ವನಿಯಿಂದ ಕೂಗು ಹಾಕುವನು. ಆಗ ಶಿವಶರಣರು ಯುದ್ಧಕ್ಕೆ ಸನ್ನದ್ಧರಾಗುವರು. ಈ ಭಾಗದಲ್ಲಿ ಶಿವಶರಣರ ಕೂಡ ಅವನು ಹಂಗುದೊರೆದು ಕಾದಾಡಿದ್ದಾನೆ.

---

## ದೇವರದಾಸಿಮಯ್ಯ

ದೇವರದಾಸಿಮಯ್ಯನು ಈಗ ಕಲಬುರ್ಗಿ ಜಿಲ್ಲೆಯಲ್ಲಿರುವ ಸುರಪುರ ತಾಲೂಕಿನ ಒಂದು ಗ್ರಾಮವಾಗಿದೆ. ಅದು ಪುರಾತನ ಪ್ರಸಿದ್ಧ ಪಟ್ಟಣವಿರುತ್ತದೆ. ಇಲ್ಲಿ ಪುರಾತನ ಅವಶೇಷಗಳು ಈಗಲೂ ವಿಪುಲವಾಗಿ ಸಿಗುತ್ತವೆ. ಈ ಗ್ರಾಮದಲ್ಲಿ ಕಾಮಯ್ಯ ಮತ್ತು ಶಂಕರಿ ಎಂಬ ದಂಪತಿಗಳು ವಾಸಿಸುತ್ತಿದ್ದರು. ಅವರ ಉದರದಲ್ಲಿ ದೇವರದಾಸಿಮಯ್ಯನು ಜನಿಸಿದನು. ಈ ಗ್ರಾಮದಲ್ಲಿ ರಾಮನಾಥ ದೇವಾಲಯವೆಂಬ ಪ್ರಸಿದ್ಧ ದೇವಾಲಯವಿರುತ್ತದೆ. ದೇವರದಾಸಿಮಯ್ಯನು ಜನಿಸಿದ ಕೂಡಲೇ ರಾಮನಾಥ ಲಿಂಗದೊಳಗಿಂದ ಒಬ್ಬ ಜಂಗಮನು ಉದ್ಭವಿಸಿ ಅವನು ದೇವರ ದಾಸಿಮಯ್ಯನಿಗೆ ಲಿಂಗಧಾರಣೆ ಮಾಡಿದನು. ಮುಂದೆ ದೇವರದಾಸಿಮಯ್ಯನಲ್ಲಿ ತನ್ನ ಶಿವಜ್ಞಾನವನ್ನು ಹೆಚ್ಚಿಸಬೇಕೆಂಬ ಆಕಾಂಕ್ಷೆಯು ಉಂಟಾಗಲಾಗಿ ಅವನು ಶ್ರೀಶೈಲ ಪರ್ವತ ಪ್ರದೇಶಕ್ಕೆ ಹೋಗಿ ಅಲ್ಲಿ ಸಿಂಹಾಸನಾಧಿಪತಿಯಾದ ಚಂದ್ರಗುಂಡ ದೇಶಿಕೇಂದ್ರನಿಂದ ಶಿವಾನುಭವದ ಪರಮ ರಹಸ್ಯಾರ್ಥವನ್ನು ತಿಳಿಯುವವನಾದನು. ಅವನು ವಸ್ತ್ರಗಳನ್ನು ಮಾಡುವದನ್ನೇ ತನ್ನ ಕಾಯಕವನ್ನಾಗಿ ಇಟ್ಟುಕೊಂಡು ಅದರಿಂದ ದೊರಕಿದ ದ್ರವ್ಯದಿಂದ ಗುರುಲಿಂಗ ಜಂಗಮದ ದಾಸೋಹಗಳನ್ನು ಜರುಗಿಸುತ್ತ ವಿರಕ್ತಾಶ್ರಮಿಯಾಗಿ ಕೆಲವು ಕಾಲ ಅಲ್ಲಿಯೇ ಕಳೆದನು. ಅವನು ಕಷ್ಟತರವಾದ ತಪಸ್ಸನ್ನಾಚರಿಸದೆ ಲಿಂಗಧಾರಿಯಾಗಿ ಲಿಂಗದ ನೆಲೆಕಲೆಗಳನ್ನು ಅರಿತುಕೊಂಡು ಲಿಂಗನಿಷ್ಠನಾಗಿ ತ್ರಿಲಿಂಗಗಳ ರೀತಿಯನ್ನು ಅರಿತುಕೊಂಡು ಕೆಲವು ಕಾಲ ಮಲ್ಲಿಕಾರ್ಜುನನ ಸನ್ನಿಧಿಯಲ್ಲಿ ಇದ್ದನು. ಮುಂದೆ ಅವನು ಕೆಲವು ದಿವಸಗಳಾದಮೇಲೆ ತನ್ನ ಗ್ರಾಮವಾದ ಮುದನೂರಿಗೆ ಹೊರಟನು. ಅವನು ಊರಿಗೆ ಬರುತ್ತಾ ಇರುವಲ್ಲಿ ಕಾಡಿನಲ್ಲಿ ಕಾಡು ಜನರ ತಂಡಗಳು ಬೇಟೆಯಾಡುತ್ತ ಹಿಂಸಾ

ಚರಣೆಯುಲ್ಲಿ ಇರುವದನ್ನು ನೋಡಿ ಕನಿಕರಪಟ್ಟು ಲಿಂಗದ ರೀತಿಗಳನ್ನು ಅವರಿಗೆ ತಿಳಿಸಿ ಹಿಂಸೆಯಿಂದ ನರ್ತಿಸಬಾರದೆಂದು ಹೇಳಿ ಮುಂದೆ ಪ್ರಯಾಣ ಮಾಡುತ್ತ ಗೌಡಗೆರೆ ಎಂಬ ಗ್ರಾಮಕ್ಕೆ ಬಂದನು. ಅಲ್ಲಿ ಬಹುಜನ ಒಕ್ಕಲಿಗರು ಅವ್ಯವಸ್ಥಿತವಾಗಿ ಇರುವದನ್ನು ನೋಡಿ ಅವರಿಗೆ ನೀವು ದಿನಾಲು ಸ್ನಾನ ಮಾಡಿ ಲಿಂಗಪೂಜೆಯುಲ್ಲಿರಲು ತಿಳಿಸಿ ಅವರಿಗೆ ಲಿಂಗ ಧಾರಣೆಯನ್ನು ಮಾಡಿದನು. ಮುಂದೆ ಅವನು ಮುದನೂರು ಗ್ರಾಮಕ್ಕೆ ಬಂದು ತನ್ನ ನೇಗಿಯ ಕಾಯಕ ಮಾಡುತ್ತ ಶಿವಾನುಭವ ಗೋಷ್ಠಿಯಲ್ಲಿರುವನು. ಇಲ್ಲಿ ಇದ್ದುಕೊಂಡು ಅವನು ಸುಂದರವಾದ ಅಸಂಖ್ಯ ವಚನಗಳನ್ನು ರಚಿಸಿದನು. ಮುಂದೆ ಅವನು ಗೊಬ್ಬೂರ ಗ್ರಾಮಕ್ಕೆ ಹೋಗಿ ಅಲ್ಲಿ ತನಗೆ ಅನುಕೂಲಳಾದ ಒಬ್ಬ ಸ್ತ್ರೀಯಳ ಲಗ್ನವಾಗಬೇಕೆಂದು ಯೋಚಿಸಿ, ಅವಳ ಶೋಧ ಮಾಡುತ್ತಿರುವಲ್ಲಿ ಅವಳು ಶಿವಪುರ ಎಂಬ ಗ್ರಾಮದಲ್ಲಿ ಇರುವದನ್ನು ತಿಳಿದು ಅಲ್ಲಿ ಅವಳ ಲಗ್ನವಾದನು. ಆಕೆಯು ದುಗ್ಗಳವ್ವೆಯು ಇರುತ್ತಾಳೆ.

ಈ ಕಾಲದಲ್ಲಿ ಚಾಲುಕ್ಯ ರಾಜನಾದ ಜಯಸಿಂಹನು ಪೊಟ್ಟಲಕೆರೆ ಎಂಬಲ್ಲಿ ಆಳುತ್ತಿದ್ದನು. ಅವನು ೧೦೦೮ ರಿಂದ ೧೦೪೦ ರ ವರೆಗೆ ರಾಜ್ಯವಾಳಿದನು. ಪುರನಿವಾಸಿಗಳಲ್ಲಿ ಜೈನರೇ ಬಹುಸಂಖ್ಯಾಕರಾಗಿದ್ದರು. ಆದರೆ ಜಯಸಿಂಹನ ಹೆಂಡತಿಯಾದ ಸುಗ್ಗಲೆಯು ದಾಸಿಮಯ್ಯನಿಂದ ವೀರಶೈವ ದೀಕ್ಷೆಯನ್ನು ಹೊಂದಿದಳು. ಮುಂದೆ ದೇವರದಾಸಿಮಯ್ಯನಿಗೂ ಜೈನರಿಗೂ ವೀರಶೈವ ಧರ್ಮದ ವಿಷಯವಾಗಿ ಚರ್ಚೆಗಳು ನಡೆದು ಅವುಗಳಲ್ಲಿ ದೇವರ ದಾಸಿಮಯ್ಯನು ಜಯಶಾಲಿಯಾದನು. ಮುಂದೆ ದೇವರದಾಸಿಮಯ್ಯನು ಮುದನೂರಿಗೆ ಬಂದು ತನ್ನ ನೇಗಿಯ ಕೆಲಸಗಳಲ್ಲಿ ತೊಡಗಿದವನಾದನು. ಅವನು ತನ್ನ ನೇಕಾರಿಕೆಯ ಜಾಣತನದಿಂದ ಒಂದು ಅಗಾಧವಾದ ಪಾವುಡವನ್ನು ಮಾಡಿದನು. ಒಬ್ಬ ಜಂಗಮನು ಅದನ್ನು ತನಗೆ ಕೊಡಬೇಕೆಂದು ಕೇಳಲು ಅವನು ಅದನ್ನು ಅವನಿಗೆ ದಾನಮಾಡಿದನು. ಆದರೆ ಆ ಜಂಗಮನು ಅವನ ಇದಿರಿಗೆ ಆ ಪಾವುಡವನ್ನು ಹರಿದುಹಾಕಿಬಿಟ್ಟನು. ಆದರೆ ದೇವರದಾಸಿಮಯ್ಯನು ಅವನ ಮೇಲೆ ಎಷ್ಟು ಮಾತ್ರವೂ ಸಿಟ್ಟಿಗೇಳಲಿಲ್ಲ. ಅವನು ಯಾವಾಗಲೂ ತನ್ನ ಕಾಯಕ ಮಾಡುತ್ತ ಕಡೆಗೆ ರಾಮನಾಥ ಲಿಂಗದಲ್ಲಿ ಐಕ್ಯ ಹೊಂದಿದನು. ವೀರಶೈವ ಪ್ರಸಿದ್ಧ ಗ್ರಂಥಕಾರರೆಲ್ಲ ದೇವರ ದಾಸಿಮಯ್ಯನನ್ನು ತಮ್ಮ ಗ್ರಂಥದಲ್ಲಿ ಹೊಗಳಿದ್ದಾರೆ.

---

## ವರದಾನಿ ಗುಡ್ಡನ್ಮ

ವಿಜಾಪುರ ಪಟ್ಟಣದಿಂದ ಪಶ್ಚಿಮಕ್ಕೆ ಇಪ್ಪತ್ತು ಮೈಲುಗಳ ಮೇಲೆ ಉಮರಾಣಿ ಎಂಬ ಗ್ರಾಮವಿದೆ. ಅಲ್ಲಿ ಅನಂತರಾಯನೆಂಬ ಅಕ್ಕಸಾಲಿಗನು ವಾಸಮಾಡುತ್ತಿದ್ದನು. ಅವನ ಹೆಂಡತಿಯ ಹೆಸರು ಸಿರಸಮ್ಮನು. ಅವರಿಗೆ ಲಿಂಗಮ್ಮನೆಂಬ ಮಗಳು ಹುಟ್ಟಿದಳು. ಉಭಯ ದಂಪತಿಗಳು ಶಿವಜ್ಞಾನಿಗಳಾಗಿ ಲಿಂಗದೀಕ್ಷೆಯನ್ನು ಹೊಂದಿ ಶಿವಶರಣರ ನಡೆಯಂತೆ ನಡಿಯುತ್ತಿದ್ದರು. ಲಿಂಗಮ್ಮನು ಶಿವಯೋಗದಲ್ಲಿ ನಿರತಳಾಗಿ ಶಿವಾನುಭವವನ್ನು ಹೊಂದಬೇಕೆಂದು ಕಲ್ಯಾಣಕ್ಕೆ ಬರುವವಳಾದಳು. ಅವಳು ಅಲ್ಲಿ ಬಸವೇಶ್ವರನ ಉದ್ಯಾನವನಕ್ಕೆ ಹೋಗಿ ದಿನಾಲು ಏಕಾಂತದಲ್ಲಿ ಶಿವಯೋಗದಲ್ಲಿರುವಳು. ಇದು ಬಸವೇಶ್ವರನಿಗೆ ತಿಳಿದುಬರಲು ಅವನು ತನ್ನ ಹೆಂಡತಿ ನೀಲಲೋಚನೆಯೊಂದಿಗೆ ಅವಳಿದ್ದಲ್ಲಿಗೆ ಹೋಗಿ ಅವಳನ್ನು ಕಂಡನು. ಅವನು ಅವಳ ಅಗಾಧವಾದ ಜ್ಞಾನಕ್ಕೆ ಸೋಜಿಗಗೊಂಡು ಇವಳು ತನ್ನ ಶಿವಯೋಗದ ಮಹತ್ವದಿಂದ ಗಣಾಧೀಶ್ವರರನ್ನು ತೃಪ್ತಿಬಡಿಸುತ್ತಾಳೆಂಬುದನ್ನು ತಿಳಿದು ಅವಳಿಗೆ ನೀನು ಇನ್ನುಮೇಲೆ 'ದಾನಮ್ಮ ಶರಣೆ' ಎಂಬ ಹೆಸರಿನಿಂದ ಜಗತ್ತಿನಲ್ಲಿ ಪ್ರಸಿದ್ಧಳಾಗು ಎಂದು ನುಡಿದನು. ಅಂದಿನಿಂದ ಲಿಂಗಮ್ಮನು ದಾನಮ್ಮ ಎಂಬ ಹೆಸರಿನಿಂದ ಜನರಲ್ಲಿ ಪ್ರಸಿದ್ಧಳಾದಳು. ದಾನಮ್ಮನ ಹತ್ತರ ಕೊಡಲಿಕ್ಕೆ ಏನೂ ಹಣವಿರಲಿಲ್ಲ. ಆದರೂ ಅವಳು ಅರ್ಪಿತವನ್ನರಿತು ಆಚರಿಸುವವಳಾದ್ದರಿಂದ ಅವಳಿಗೆ ದಾನಮ್ಮ ಎಂಬ ಹೆಸರು ಪ್ರಾಪ್ತವಾಗಿರುತ್ತದೆ. ಮುಂದೆ ಕಲ್ಯಾಣಪಟ್ಟಣದಲ್ಲಿ ಹರಳಯ್ಯ ಮಧುವರಸರ ಮೂಲಕ ಅನಾಹುತಗಳು ಸಂಭವಿಸಿದವು. ದಾನಮ್ಮನು ಕಲ್ಯಾಣವನ್ನು ಬಿಟ್ಟು ತನ್ನ ಗ್ರಾಮವಾದ ಉಮರಾಣಿಗೆ ಬಂದಳು. ಅಲ್ಲಿ ಅವಳು ೧೨ ಮೈಲು ದೂರವಿರುವ ಸಂಕವೆಂಬ ಗ್ರಾಮದಲ್ಲಿ ವಾಸಿಸುತ್ತಿದ್ದ ಸಂಗಮನಾಥನೆಂಬ ಶಿವಶರಣನೊಡನೆ ಲಗ್ನವಾದಳು. ಉಭಯ ದಂಪತಿಗಳು ಪ್ರಾಣಲಿಂಗಾನುಸಂಧಾನದಲ್ಲಿರುವವರಾಗಿದ್ದರು. ಆದ್ದರಿಂದ ಅವರು ತಮ್ಮ ಆಚರಣೆಗೆ ಅನುಕೂಲವಾಗಬೇಕೆಂದು ಸಂಕ ಗ್ರಾಮದ ಪಶ್ಚಿಮಕ್ಕೆ ಎಂಟು ಮೈಲುಗಳ ಮೇಲಿರುವ ಗುಡ್ಡಾಪೂರ ಎಂಬ ಗ್ರಾಮಕ್ಕೆ ಬಂದು ಅಲ್ಲಿ ವಾಸಮಾಡಹತ್ತಿದರು. ಇದು ಗುಡ್ಡುಗಾಡ ಪ್ರದೇಶವಿದೆ. ಇಲ್ಲಿ ಸೋಮೇಶ್ವರನ ದೇವಾಲಯವಿದ್ದು ಇದರ ನೆರೆಯಲ್ಲಿ ದಾನಮ್ಮನು ತನ್ನ ಲಿಂಗಾನುಸಂಧಾನದಲ್ಲಿ ತೊಡಗುವವಳಾದಳು.

ಮುಂದೆ ಶಿವಶರಣರಿಗೂ ಪರವಾದಿಗಳಿಗೂ ಸಂಗ್ರಾಮಗಳು ನಡೆಯುತ್ತ ಇರಲು ರಾಯಚೂರ ಜಿಲ್ಲೆಯಲ್ಲಿ ಶ್ರೀಶೈಲಕ್ಕೆ ಸಮೀಪವಾಗಿರುವ ಅಲಂಪುರದಲ್ಲಿ ಬಾಲಬ್ರಹ್ಮೇಶನೆಂಬ ಲಿಂಗವನ್ನು ಕಿತ್ತುಹಾಕಿ ಪರವಾದಿಗಳು ಹೊಳೆಯಲ್ಲಿ ಒಗೆದರು. ಆಗ ವರದಾನಿಯು ಒಂದು ಸೈನ್ಯವನ್ನು ಕೂಡಿಸಿ ಅಲ್ಲಿಗೆಹೋಗಿ ಪರವಾದಿಗಳನ್ನು ಜಯಿಸಿ ಲಿಂಗವನ್ನು ಆದರ ಸ್ಥಳದಲ್ಲಿ ಪ್ರಸ್ಥಾಪಿಸಿದಳು.

ಮುಂದೆ ಅವಳು ದಕ್ಷಿಣದಿಕ್ಕಿಗೆ ಸಂಚಾರಕ್ಕೆ ಹೊರಟು ಕಪಿಲಾ—ಕಾವೇರಿ ಸಂಗಮ ಸ್ಥಳಕ್ಕೆ ಬಂದಳು. ಅಲ್ಲಿ ಅವಳು ಒಂದು ವರೆ ವರುಷ ಕಾಲ ಕಳೆದಳು. ಮುಂದೆ ಅವಳು ರಾಮೇಶ್ವರ ಕ್ಷೇತ್ರಕ್ಕೆ ಹೋಗಿ ಅಲ್ಲಿ ಬಸವೇಶ್ವರನ ದೇವಾಲಯವನ್ನು ಕಟ್ಟಿಸಿದಳು. ಮುಂದೆ ಅವಳು ಚೋಳ ರಾಜನ ರಾಜಧಾನಿಯಾದ ಕಾಂಚೀನಗರಕ್ಕೆ ಬಂದು ಅನೇಕ ಪವಾಡಗಳನ್ನು ಮಾಡಿದಳು. ಮುಂದೆ ಅವಳು ಉತ್ತರಕ್ಕೆ ತೆರಳಿ ಕಾಶೀ ವಿಶ್ವೇಶ್ವರನ ದರ್ಶನವನ್ನು ಹೊಂದಿ ಪುನಃ ದಕ್ಷಿಣಕ್ಕೆ ಬಂದು ಸೊನ್ನಲಾಪೂರದಲ್ಲಿ ಸಿದ್ಧರಾಮೇಶ್ವರನ ದರುಶನವನ್ನು ಹೊಂದಿದಳು. ಮುಂದೆ ಅವಳು ಕೂಡಲಸಂಗಮಕ್ಕೆ ಹೋಗಿ ಅಲ್ಲಿಂದ ಬಸವೇಶ್ವರನ ಜನ್ಮಸ್ಥಳವಾದ ಬಾಗೇವಾಡಿಯನ್ನು ಕಂಡು ಗುಡ್ಡಾಪುರಕ್ಕೆ ತಿರುಗಿ ಬಂದಳು. ಒಂದು ದಿವಸ ಆವಳು ಸಂಭ್ರಮದಿಂದ ತನ್ನ ಪೂಜಾದಿ ಕಾರ್ಯಗಳನ್ನು ಮಾಡುವಾಗ ತನ್ನ ಅಂತ್ಯ ಸಮಯವು ಪ್ರಾಪ್ತವಾಯಿತೆಂದು ತಿಳಿದವಳಾಗಿ ಅವಳು ತನ್ನ ಲಿಂಗದಲ್ಲಿ ಬೆರೆದಳು. ಅವಳ ದೇಹವು ನೋಡನೋಡುತ್ತಿರುವಾಗ ಭವ್ಯವಾದ ಶಿಲಾಮೂರ್ತಿಯಾಗಿ ಜನರೆದುರಿಗೆ ನಿಂತುಬಿಟ್ಟಿತು.

ವರದಾನಿ ಗುಡ್ಡಮ್ಮೆಯು ಶರಣೆಯಾಗಿದ್ದಾಳೆ. ದೇವಗಿರಿ ಯಾದವರ ಮಾಂಡಲಿಕನಾದ ಸಾಯಿದೇವನು ಭೀಮಾತೀರದಲ್ಲಿ ಆಕೆಗೆ ಕಾಣಿಕೆಯಾಗಿ ವಾಡಪುರಿ ಎಂಬ ಗ್ರಾಮವನ್ನು ಕಟ್ಟಿಸಿದನು. ಗುಡ್ಡಾಪುರದಲ್ಲಿ ದಾನಮ್ಮನ ದೇವಾಲಯವು ಭವ್ಯವಾಗಿರುತ್ತದೆ.

---

## ಶಂಕರದಾಸಿಮಯ್ಯ

ಶಂಕರದಾಸಿಮಯ್ಯನು ಬಸವೇಶ್ವರನಕಿಂತಲೂ ಮೊದಲಿನವನು ಮತ್ತು ದೇವರದಾಸಿಮಯ್ಯನ ಸಮಕಾಲೀನನು. ವಿಜಾಪೂರ ಜಿಲ್ಲೆಯಲ್ಲಿ ಇಳಕಲ್ಲ

ಗ್ರಾಮವಿದ್ದು ಅದರ ಪೂರ್ವಕ್ಕೆ ಹತ್ತು ಮೈಲುಗಳ ಮೇಲೆ ಕಂದಗಲ್ಲ ಎಂಬ ಹೆಸರಿನ ಗ್ರಾಮವಿದೆ. ಇದರ ಪುರಾತನ ಹೆಸರು ಕಂದಶಿಲೆ ಎಂಬುದಾಗಿತ್ತು. ಈ ಗ್ರಾಮದಲ್ಲಿ ಗೋವಿಂದಭಟ್ಟನೆಂಬ ಬ್ರಾಹ್ಮಣನೂ ಅವನ ಹೆಂಡತಿ ಉಮ್ಮವ್ವೆಯೂ ವಾಸಮಾಡುತ್ತ ಇದ್ದರು. ಅವರು ಕಾಶೀ ಯಾತ್ರೆ ಮಾಡಬೇಕೆಂದು ಕಾಲನಡಿಗೆಯಿಂದ ಅತ್ತ ಕಡೆಗೆ ಹೊರಟರು. ಅವರು ಸಂಜೆಯಾಗುವಷ್ಟರಲ್ಲಿ ತಮ್ಮ ಗ್ರಾಮದಿಂದ ಉತ್ತರಕ್ಕೆ ಹನ್ನೆರಡು ಮೈಲುಗಳ ಮೇಲೆ ಇರುವ ನವಿಲಿ ಎಂಬ ಗ್ರಾಮಕ್ಕೆ ಬಂದರು ಅದು ಕೃಷ್ಣಾನದಿಯ ದಂಡೆಯ ಮೇಲೆ ಇದೆ. ಅಲ್ಲಿ ನದಿಯು ವಿಶಾಲವಾಗಿ ಭವ್ಯವಾಗಿ ಹರಿಯುತ್ತಿದೆ. ಅಲ್ಲಿ ಒಂದು ಪುರಾತನ ದೇವಾಲಯವಿದ್ದು ಅಲ್ಲಿ ಪೂಜಾರ್ಚನಾದಿಗಳು ಅವರು ಬಂದಕಾಲದಲ್ಲಿ ಬಹು ಸಂಭ್ರಮದಿಂದ ನಡೆದಿದ್ದವು. ಗೋವಿಂದಭಟ್ಟನು ಅವುಗಳನ್ನು ನೋಡಿ ಭಕ್ತಿಯ ಭರವು ಅವನ ಮನಸ್ಸಿನಲ್ಲಿ ತುಂಬಿ ಬಂದು, ಇನ್ನೇಕೆ ವಾರಣಾಸಿಯು? ನಾನಿಲ್ಲೆ ಇರುವೆನು, ಎಂದು ತನ್ನೂರಿಗೆ ತಿರುಗಿ ಹೋಗಿ ಅಲ್ಲಿಂದ ನವಿಲಿಗೆ ದಿನಾಲು ಬಂದು ಶಂಕರಲಿಂಗನನ್ನು ಭಜಿಸುವೆನೆಂದು ನಿಶ್ಚಯಿಸಿದನು. ಮುಂದೆ ಒಂದು ದಿವಸ ಶಂಕರದಾಸಿಮಯ್ಯನು ದೇವಾಲಯಕ್ಕೆ ಬರಲು ಶಂಕರನು ಜಂಗಮ ವೇಷದಿಂದ ಅವನಿಗೆ ಮೈದೋರಿ ಅವನಿಗೆ ಇಷ್ಟಲಿಂಗೋಪದೇಶ ಮಾಡಿ ಲಿಂಗದ ನೆಲೆ ಕಲೆಗಳನ್ನು ತಿಳಿಸಿದನು. ಆಮೇಲೆ ಅವನು ತನ್ನ ಮೊದಲಿನ ಹೆಸರಿನ ಬದಲು ಶಂಕರದಾಸಿಮಯ್ಯನೆಂತಲೂ ತನ್ನ ಹೆಂಡತಿಗೆ ಶಿವದಾಸಿ ಎಂತಲೂ ಹೆಸರು ಇಟ್ಟು ಹೊಲಿಗೆಯ ಕಾಯಕವನ್ನು ಮಾಡುತ್ತ ನವಿಲಿ ಗ್ರಾಮದಲ್ಲಿ ಇರಹತ್ತಿದನು. ಹೀಗೆ ಒಂದು ದಿವಸ ಅವನು ಶಿವಯೋಗ ನಿದ್ರೆಯಲ್ಲಿರುವಾಗ ಪರಮಾತ್ಮನು ಪ್ರತ್ಯಕ್ಷನಾಗಲು ಅವನಿಗೆ ಈಗ ದೇಶದಲ್ಲಿ ಕ್ಷುದ್ರ ದೇವತೆಗಳನ್ನು ಭಜಿಸುವ ಪರಸಮಯಿಗಳು ಬಹಳ ಹೆಚ್ಚಿದ್ದಾರೆ. ಅವರನ್ನು ಧೂಳಿಪಟಮಾಡುವದನ್ನು ದಯಪಾಲಿಸು ಎಂದು ಬೇಡಿಕೊಳ್ಳಲು ಅವನಿಗೆ ಅಗ್ನಿಯನ್ನು ಹೊರಚೆಲ್ಲುವ ಒಂದು ಹಣೆಗಣ್ಣನ್ನು ಪರಮಾತ್ಮನು ದಯಪಾಲಿಸಿದನು. ಶಂಕರದಾಸಿಮಯ್ಯನು ಇದನ್ನು ಕ್ಷುದ್ರ ದೇವತೆಗಳ ನಿವಾರಣೆ ಮಾಡುವದಕ್ಕೋಸ್ಕರ ಉಪಯೋಗಿಸುವೆನೆಂದು ಶಂಕರನಿಗೆ ಅಭಿವಚನ ಕೊಟ್ಟನು.

ಈ ಕಾಲದಲ್ಲಿ ಜಯಸಿಂಹರಾಜನು ಚಾಲುಕ್ಯರ ರಾಜ್ಯವನ್ನು ಕಲ್ಯಾಣ ಪಟ್ಟಣದಲ್ಲಿದ್ದು ಆಳುತ್ತಿದ್ದನು. ಅರಸನು ನರಸಿಂಹನ ಭಕ್ತನಾಗಿದ್ದನು.

ಆಗ ಶಂಕರದಾಸಿಮಯ್ಯನ ಕೂಡ ಪರವಾದಿಗಳು ವಾಗ್ವಾದ ಮಾಡಲು ಅವರು ಸೋತುಹೋದರು. ಆಗ ಶಂಕರದಾಸಿಮಯ್ಯನು ತನ್ನ ನೊಸಲ ಕಣ್ಣನ್ನು ತೆರೆದು ನರಸಿಂಹನನ್ನು ಸುಟ್ಟುಬಿಟ್ಟನು. ಮುಂದೆ ಅವನು ಶಾಕ್ತರ ಮುಖ್ಯ ದೇವಸ್ಥಾನವಾದ ಉಜ್ಜಯಿನಿಗೆ ಹೋದನು. ಅಲ್ಲಿ ಮಹಾಂಕಾಳಿಯೇ ಮುಖ್ಯ ದೇವತೆಯಾಗಿದ್ದಳು. ಅಲ್ಲಿಯ ಜನರು ಆಕೆಯ ಹೆಸರಿನ ಮೇಲೆ ಸುರೆ, ಮಾಂಸ ಭಕ್ಷಣಮಾಡುತ್ತಿದ್ದರು. ಅಲ್ಲಿ ಶಂಕರದಾಸಿಮಯ್ಯನು ಹೋಗಲು ಮಹಾಕಾಳಿಯು ಶಕ್ತಿಪೂಜೆಯು ಕನಿಷ್ಠವಾದದ್ದು, ಶಿವಶರಣರ ಮತವು ಶುದ್ಧವಾದದ್ದು, ನನ್ನನ್ನು ಕ್ಷಮಿಸಬೇಕು, ಎಂದು ಬೇಡಿಕೊಳ್ಳಲು ಶಂಕರದಾಸಿಮಯ್ಯನು ಉಜ್ಜಯಿನಿಯನ್ನು ಬಿಟ್ಟು ದಕ್ಷಿಣ ದಿಕ್ಕಿಗೆ ಸಂಚಾರ ಮಾಡುತ್ತ ಈಗ ಸಾತಾರೆಯ ದಕ್ಷಿಣಕ್ಕೆ ಹದಿನಾರು ಮೈಲುಗಳ ಮೇಲೆ ಇರುವ ತರಲಾ ಎಂಬ ನದಿಯ ಮೇಲೆ ಪೆಂಬರ ಎಂಬ ಗ್ರಾಮವಿದ್ದು ಅಲ್ಲಿ ಮಲ್ಲಾರಿಯ ಪ್ರಸಿದ್ಧ ದೇವಸ್ಥಾನವಿದೆ. ಅದರ ಭಕ್ತರು ಅಸಂಖ್ಯಾತರಾಗಿದ್ದರು.ಶಂಕರದಾಸಿಮಯ್ಯನು ಇಲ್ಲಿಗೆ ಬರಲು ಮೈಲಾರನು ಅವನಿಗೆ ನಮಸ್ಕರಿಸಿ ಅವನಿಗೆ ಕೊಡೆ ಹಿಡಿಯಲು ಮುಂದಾದನು. ಇದರಿಂದ ಅಲ್ಲಿಯ ಮೈಲಾರನ ಭಕ್ತರು ಶಂಕರದಾಸಿಮಯ್ಯನನ್ನು ಅನುಸರಿಸಹತ್ತಿದರು. ಮುಂದೆ ಶಂಕರದಾಸಿಮಯ್ಯನು ನವನಾಥ ಸಿದ್ಧರು ವಾಸಿಸುತ್ತಿದ್ದಲ್ಲಿಗೆ ಬಂದನು. ಇವರು ಮಾಂತ್ರಿಕರಾಗಿ ಭೈರವ, ಶಕ್ತಿ ಇಂಥ ಕ್ರೂರ ದೇವತೆಗಳನ್ನು ಭಜಿಸುವರು. ಆಗ ಶಂಕರದಾಸಿಮಯ್ಯನು ಅವರಿಗೆ ಇಂಥ ಭಜನೆಯಿಂದ ಮೋಕ್ಷವಿಲ್ಲ, ನೀವು ಸ್ಥಿರಚಿತ್ತರಾಗಿ ತ್ರಿಲಿಂಗಗಳನ್ನು ಸಾಧಿಸಬೇಕು, ಎಂದು ಬೋಧಿಸಿದನು. ಅದನ್ನು ಆ ಜನರು ಒಪ್ಪಿ ಶರಣ ಮಾರ್ಗವನ್ನು ಅನುಸರಿಸಹತ್ತಿದರು. ಈ ಪ್ರಕಾರ ಶಂಕರದಾಸಿಮಯ್ಯನು ತನ್ನ ಸಂಚಾರವನ್ನು ಮುಗಿಸಿಕೊಂಡು ನವಿಲಿ ಗ್ರಾಮಕ್ಕೆ ತಿರುಗಿಬಂದು ಇಲ್ಲಿಯೇ ಅವನು ಐಕ್ಯವನ್ನು ಹೊಂದಿದನು.

---

## ಹಡಪದ ರೇಚಯ್ಯ

ಆಂಧ್ರದೇಶದಲ್ಲಿ ಪೆನ್ನಾಗರವೆಂಬ ಗ್ರಾಮವಿದೆ. ಅಲ್ಲಿ ವೆಂಗಿಭೂಪಾಲನೆಂಬ ರಾಜನು ಆಳುತ್ತಿದ್ದನು. ಈತನಲ್ಲಿ ರೇಚಯ್ಯನು ಹಡಪದ ಸೇವೆ ಮಾಡುತ್ತ ಇದ್ದನು. ಅರಸನು ಒಂದುದಿನ ವೈಹಾಳಿಗೆ ಹೋದಾಗ, ಒಂದು ನದೀತೀರದಲ್ಲಿ ವಿಶ್ರಮಿಸುತ್ತಿರುವಾಗ ಅಲ್ಲಿ ಸಮೀಪದಲ್ಲಿ ದೇವರಿಗೆ ಬಿಟ್ಟ

ಒಂದು ಗೂಳಿಯು ಹೊಲದಲ್ಲಿ ಮೇಯುತ್ತ ಇದ್ದಿತು. ಅದನ್ನು ಅಲ್ಲಿದ್ದವರು ನೋಡಿ ಆ ಗೂಳಿಯನ್ನು ಹೊಡೆದು ಕೊಂದುಹಾಕಿದರು. ಅರಸನು ಇದನ್ನು ನೋಡುತ್ತಿದ್ದರೂ ಗೂಳಿಯನ್ನು ಬಿಡಿಸಲಿಕ್ಕೆ ಏನೂ ಪ್ರಯತ್ನ ಮಾಡಲಿಲ್ಲ. ಇದನ್ನು ರೇಚಯ್ಯನು ನೋಡಿ ಖತಿಗೊಂಡು ಅರಸನ ಶಿರವನ್ನು ತತ್‌ಕ್ಷಣ ಹಾರಿಸಿಬಿಟ್ಟನು. ಅರಸನ ಸೈನಿಕರು ಅವನ ಮೇಲೇರಿ ಬರಲು ಅವರೊಡನೆ ಅವನು ಕಾದಿ ಅವರನ್ನು ಓಡಿಸಿಬಿಟ್ಟನು. ಆಮೇಲೆ ಅವನು ಈ ಗ್ರಾಮದಲ್ಲಿ ಇನ್ನುಮೇಲೆ ಇರಬಾರದೆಂದು ಕಲ್ಯಾಣಕ್ಕೆ ಬಂದು ಚನ್ನಬಸವೇಶ್ವರನಲ್ಲಿ ಅವನ ಊಳಿಗ ಮಾಡುತ್ತ ಇರಹತ್ತಿದನು.

ರೇಚಣ್ಣನು ಶಿವಾನುಭವ ಮಂಟಪದಲ್ಲಿ ಸೇರಿ ವಚನಗಳನ್ನು ರಚಿಸುವವನಾದನು. 'ನಿಃಕಳಂಕ ಕೂಡಲ ಚನ್ನ ಸೋಮಣ್ಣದೇವ' ಎಂಬುದೇ ಅವನ ಮುದ್ರಿಕೆಯಾಗಿತ್ತು. ಅವನು ಕಲ್ಯಾಣದಲ್ಲಿ ಜಂಗಮ ದಾಸೋಹದಲ್ಲಿ ಇರುತ್ತಿದ್ದನು.

ಮುಂದೆ ಅವನು ಶಿವಶರಣರ ಕೂಡ ಉಳಿವಿಯ ವರೆಗೆ ಕಾದಾಡುತ್ತ ಹೋಗಿದ್ದನು. ಚನ್ನಬಸವೇಶ್ವರನು ಅಲ್ಲಿಗೆ ಹೋದಬಳಿಕ ಅವನು ರೇಚಯ್ಯನಿಗೆ ಬಯಲು ಬಸವೇಶ್ವರ ದೇವಾಲಯದಲ್ಲಿ ನಾನು ನನ್ನ ಹಾವುಗೆಗಳನ್ನು ಮರೆತು ಬಂದಿದ್ದೇನೆ, ಅವುಗಳನ್ನು ನೀನು ತೆಗೆದುಕೊಂಡು ಬಾ ಎಂದು ಹೇಳಿ ಕಳುಹಿಸಿದನು. ಅವನು ಅವುಗಳನ್ನು ತೆಗೆದುಕೊಂಡು ಉಳಿವಿಗೆ ಬರುವಷ್ಟರಲ್ಲಿ ಅಲ್ಲಿ ಯಾರೂ ಇದ್ದಿದ್ದಿಲ್ಲ. ಎಲ್ಲರೂ ಉಯ್ಯಾಲೆಯಲ್ಲಿ ಶಿವಲೋಕಕ್ಕೆ ಹೋಗಿದ್ದರು. ರೇಚಯ್ಯನು ಇದನ್ನು ನೋಡಿ ನನ್ನನ್ನು ಬಿಟ್ಟು ಹೋದರೆಂದು ಬಹಳ ದುಃಖಿಸಿದನು. ಆಮೇಲೆ ಅವನು ಸಾಯುವ ವರೆಗೂ ವೇಣು ಗ್ರಾಮ, ಹಲಸಿಗೆ ಇವುಗಳ ಸಮೀಪದಲ್ಲಿ ಜಂಗಮ ದಾಸೋಹ ಮಾಡುತ್ತ ಕಾಲ ಕಳೆದನು. ಮುಂದೆ ಅವನು ಆ ಕಡೆಯಲ್ಲಿಯೇ ಸಮಾಧಿಯನ್ನು ಹೊಂದಿದನು.

---

## ಪಡಿಹಾರಿ ಉತ್ತಣ್ಣ

ಪಡಿಹಾರಿ ಉತ್ತಣ್ಣನು ಬಸವೇಶ್ವರನ ಸ್ವಾಮಿನಿಷ್ಠ ಸೇವಕನು. ಅವನು ಬಸವೇಶ್ವರನ ದ್ವಾರಪಾಲಕನಾಗಿ ಅವನ ಆಜ್ಞೆಗಳನ್ನು ಜನರಿಗೆ ಉದ್ಘೋಷಿಸಿ ಹೇಳುವನು. ಇದೇ ಅವನ ಕಾಯಕವಾಗಿತ್ತು. ಹೀಗೆ ಅವನು ಬಸವೇಶ್ವರ

ನಿಗೆ ಮಾದರಿ ಸೇವಕನಾಗಿ ಕಾಲ ಕಳೆಯುತ್ತ ಗಣಾಧೀಶ್ವರರಲ್ಲಿ ಶ್ರೇಷ್ಠ ನೆಂದೆನಿಸಿಕೊಂಡನು.

## ಕೊಂಡೇಮಂಚಣ್ಣ

ಕೊಂಡೇಮಂಚಣ್ಣನು ಬಸವೇಶ್ವರನ ಬಗ್ಗೆ ಸುಳ್ಳು ಆರೋಪಗಳನ್ನು ಹುಟ್ಟಿಸುವವನೆಂದು ಬಹಳ ಪ್ರಸಿದ್ಧನಾಗಿದ್ದಾನೆ. ಬಸವೇಶ್ವರನ ವರ್ತನೆಯಲ್ಲಿ ಸ್ವಲ್ಪ ವ್ಯತ್ಯಾಸಗಳು ಕಂಡುಬಂದರೆ ಸಾಕು, ಅವನು ಅವುಗಳ ಬಗ್ಗೆ ತಪ್ಪು ತಿಳುವಳಿಕೆಯಾಗುವಂತೆ ಬಿಜ್ಜಳನಿಗೆ ಹೇಳಿ ಸುದ್ದಿಗಳನ್ನು ಹರಹುವನು. ಆಗ ಬಿಜ್ಜಳನು ಬಸವೇಶ್ವರನಿಗೆ ಆ ಬಗ್ಗೆ ಕೇಳಿದ ಕೂಡಲೇ ಬಸವೇಶ್ವರನು ಅವನಿಗೆ ನಿಜಸಂಗತಿಗಳನ್ನು ತಿಳಿಸಿ ಹೇಳುವನು. ಹೀಗೆ ಬಸವೇಶ್ವರನ ಕೀರ್ತಿಗೆ ಕೊಂಡೇಮಂಚಣ್ಣನು ಒಂದು ರೀತಿಯಾಗಿ ಕಾರಣನೆಂದು ಭಾವಿಸ ಬಹುದು. ಹೀಗೆ ಅವನು ಪ್ರಸಿದ್ಧಿಯನ್ನು ಹೊಂದಿದ್ದಾನೆ. ಆದರೆ ಕೆಲವು ಕಾಲವಾದಮೇಲೆ ಕೊಂಡೇಮಂಚಣ್ಣನು ಬಸವೇಶ್ವರನ ವಿಷಯವಾಗಿ ಗುಪ್ತ ಭಕ್ತಿಯುಳ್ಳವನಾಗಿ ಆಚರಿಸಹತ್ತಿದನು. ಅವನು ಗುಪ್ತವಾಗಿ ಹನ್ನೆರಡು ಸಾವಿರ ಜಂಗಮರಿಗೆ ದಿನಾಲು ಊಟಹಾಕುವನು. ಅವನು ಮುಂದೆ ಬಿಜ್ಜಳನ ಸಂಚಾರಗಳನ್ನೂ ಅವನ ಅಭಿಪ್ರಾಯಗಳನ್ನೂ ಸಕಾಲದಲ್ಲಿ ಬಸ ವೇಶ್ವರನಿಗೆ ತಿಳುಹಿಸುತ್ತಾ ಇದ್ದನು. ಹೀಗೆ ಅವನು ಕಟ್ಟಕಡೆಗೆ ಬಸವೇಶ್ವರನ ಕೇವಲ ಸಹಾಯಕನಾಗಿ ವರ್ತಿಸುತ್ತ ಬಂದನು.

## ಲಕ್ಷ್ಮಮ್ಮ

ಲಕ್ಷ್ಮಮ್ಮನು ಕೊಂಡೇಮಂಚಣ್ಣನ ಹೆಂಡತಿಯು ಇರುತ್ತಾಳೆ. ಅವಳು ಶಿವಾನುಭಾವಿಯಾಗಿ ವಚನಕಾರಳೂ ಇದ್ದಾಳೆ. ಅವಳ ವಚನಗಳ ಮುದ್ರಿಕೆಯು 'ಅಗಜೇಶ್ವರ ಲಿಂಗ' ಎಂದು ಇದೆ. ಅವಳು ಬಸವೇಶ್ವರನ ಬಗ್ಗೆ ಗುಪ್ತ ಭಕ್ತಿಯುಳ್ಳವಳಾಗಿ ವರ್ತಿಸಿದ್ದಾಳೆ.

## ಸಿದ್ದಣ್ಣ

ಸಿದ್ದಣ್ಣ ಮಂತ್ರಿಯು ಬಸವೇಶ್ವರನ ತಾಯಿಯಾದ ಮಾದಲಾಂಬಿಕೆಯ ಸಹೋದರನು. ಅವನು ಮಂಗಳವಾಡದಲ್ಲಿ ಬಿಜ್ಜಳನ ಮಂತ್ರಿಯಾಗಿದ್ದನು.

ಬಿಜ್ಜಳನ ತಂದೆಯು ಬಿಜ್ಜಳನು ಸಣ್ಣವನಿದ್ದಾಗ ತೀರಿಕೊಂಡನು. ಬಿಜ್ಜಳನು ದೊಡ್ಡವನಾಗುವ ವರೆಗೆ ಅವನನ್ನು ಸಿದ್ದಣ್ಣ ಮಂತ್ರಿಯು ರಕ್ಷಿಸುತ್ತ ರಾಜ್ಯ ಕಾರಭಾರ ನಡಿಸಿದನು. ಬಸವೇಶ್ವರನು ನೌಕರಿಗಾಗಿ ಮಂಗಳವಾಡಕ್ಕೆ ಬಂದಾಗ್ಗೆ ಅವನನ್ನು ತನ್ನಲ್ಲಿ ಒಂದು ನೌಕರಿಯನ್ನು ಕೊಟ್ಟು ಕಾಪಾಡಿದನು. ಅವನಿಗೆ ನೀಲಾಂಬಿಕೆ ಎಂಬ ಮಗಳು ಇದ್ದು ಅವಳನ್ನು ಬಸವೇಶ್ವರನಿಗೆ ಕೊಟ್ಟು ಲಗ್ನಮಾಡಿದನು. ಬಸವೇಶ್ವರನು ಮಂಗಳವಾಡದಲ್ಲಿ ಬಹಳ ದಿವಸ ಇರಲಿಲ್ಲ. ಅವನು ಪುನಃ ಕೂಡಲಸಂಗಮಕ್ಕೆ ಬಂದು ಅಲ್ಲಿ ಶಿವಾನುಭವದ ಚರ್ಚೆಗಳಲ್ಲಿ ಕಾಲ ಕಳೆಯಹತ್ತಿದನು. ಮುಂದೆ ಕೆಲವು ದಿವಸಗಳಾದ ಮೇಲೆ ಸಿದ್ದಣ್ಣ ಮಂತ್ರಿಯು ತೀರಿಕೊಂಡನು.

---

## ಬಲದೇವ

ಬಲದೇವ ಮಂತ್ರಿಯು ಸಿದ್ದಣ್ಣ ಮಂತ್ರಿಯ ತಮ್ಮನು. ಆಗ ಬಿಜ್ಜಳನು ಮಂಗಳವಾಡದಲ್ಲಿ ಚಾಲುಕ್ಯರ ಮಾಂಡಲಿಕನಾಗಿ ರಾಜ್ಯವಾಳುತ್ತಾ ಇದ್ದನು. ಮುಂದೆ ಬಿಜ್ಜಳನು ಚಾಲುಕ್ಯ ರಾಜನ ವಿರುದ್ಧ ಒಳಸಂಚು ನಡಿಸಿ ಅವನನ್ನು ಪದಚ್ಯುತ ಮಾಡಿ ತಾನೇ ಕಲ್ಯಾಣ ರಾಜ್ಯದ ಚಕ್ರವರ್ತಿಯಾದನು. ಮುಂದೆ ಬಲದೇವ ಮಂತ್ರಿಯು ಅವನ ಪ್ರಧಾನಿಯಾಗಿದ್ದನು. ಆಗ ಬಲದೇವನು ಕೂಡಲಸಂಗಮದಲ್ಲಿದ್ದ ಬಸವೇಶ್ವರನನ್ನು ಕಲ್ಯಾಣಕ್ಕೆ ಬರಮಾಡಿಕೊಂಡು ಅವನಿಗೆ ತನ್ನ ಮಗಳು ಗಂಗಾಂಬಿಕೆಯನ್ನು ಕೊಟ್ಟು ಲಗ್ನ ಮಾಡಿದನು. ಇಷ್ಟರಲ್ಲಿ ಬಸವೇಶ್ವರನು ಒಬ್ಬ ಶ್ರೇಷ್ಠ ಶಿವಾನುಭವಿ ಎಂದು ದೇಶದಲ್ಲೆಲ್ಲ ಬಹಳ ಪ್ರಸಿದ್ಧನಾಗಿದ್ದನು. ಬಿಜ್ಜಳನು ಬಸವೇಶ್ವರನ ಸಲಹೆಯಂತೆ ತಾನು ನಡಿಯುವೆನೆಂದು ಬಸವೇಶ್ವರನಿಗೆ ವಚನ ಕೊಟ್ಟಿದ್ದರಿಂದ ಮತ್ತು ಬಸವೇಶ್ವರನು ಕೈಕೊಂಡ ಧರ್ಮಕಾರ್ಯಗಳಿಗೆ ಅನುಕೂಲನಾಗಿ ತಾನು ವರ್ತಿಸುವೆನೆಂದು ಹೇಳಿದ್ದರಿಂದ ಬಿಜ್ಜಳನು ದೇಶದಲ್ಲಿ ಜನಪ್ರಿಯನಾಗಹತ್ತಿದನು. ಅವನ ರಾಜವು ಬಸವೇಶ್ವರನ ಮೂಲಕ ಸ್ಥಿರವಾಗಿ ನೆಲೆಗೊಳ್ಳಲು ಕಾರಣವಾಯಿತು. ಬಸವೇಶ್ವರನು ಒಂದು ರಾಜ್ಯದ ಮಂತ್ರಿಯಾದ್ದರಿಂದ ಬಸವೇಶ್ವರನ ಕೀರ್ತಿಯು ಎಲ್ಲ ಕಡೆಗೆ ಹಬ್ಬಿತು. ಅಸಂಖ್ಯ ಅಮರಗಣಾಧೀಶ್ವರರು ಕಲ್ಯಾಣಕ್ಕೆ ಬರಲು ಪ್ರಾರಂಭಿಸಿದರು. ಬಸವೇಶ್ವರನು ಅವರನ್ನು ಆದರದಿಂದ ಪೋಷಿಸುತ್ತ ಬಂದನು. ಅಷ್ಟರಲ್ಲಿ ಶಿವಾನುಭವ

ಮಂಟಪವು ಕಲ್ಯಾಣದಲ್ಲಿ ಸ್ಥಾಪಿತವಾಯಿತು. ಆಗ ವಚನ ವಾಙ್ಮಯವು ಅಪಾರವಾಗಿ ಬೆಳೆಯಿತು. ಅಮರಗಣಾಧೀಶ್ವರರು ದೇಶದ ತುಂಬೆಲ್ಲ ಪಸರಿಸ ಹತ್ತಿದರು. ಶಿವಾನುಭವದ ಮಹತ್ವವನ್ನು ಜನತೆಗೆ ತಿಳಿಸಿಕೊಡಹತ್ತಿದರು. ಈ ಕಾರ್ಯವು ಬಸವನು ಕಲ್ಯಾಣ ಪಟ್ಟಣದಲ್ಲಿ ಇರುವ ವರೆಗೆ ಅವ್ಯಾಹತ ವಾಗಿ ನಡೆಯಿತು. ಇದರಿಂದ ವೀರಶೈವ ಧರ್ಮವು ಆಂಧ್ರ, ಕರ್ನಾಟಕ ಮೊದಲಾದ ದೇಶಗಳಲ್ಲಿ ರಭಸದಿಂದ ಬೆಳೆಯಿತು.

---

**ಟೀಪು:**— ನಾವು ಆರಂಭದ ೬೬ ಪುಟಗಳ ವರೆಗೆ ಅಮರಗಣಾಧೀಶ್ವರರ ಧರ್ಮ ತತ್ವಗಳನ್ನು ಸಂಕ್ಷಿಪ್ತವಾಗಿ ವಿವರಿಸಿದೆವು. ಮುಂದೆ ಅವರ ವೃತ್ತಾಂತಗಳನ್ನು ಸ್ವಲ್ಪ ವಿವರವಾಗಿ ನಿರೂಪಿಸಿದೆವು. ಇವರಲ್ಲಿ ಹಲವರು ಧರ್ಮ ಸ್ಥಾಪಕರೆಂತಲೂ ಬೇರೆ ಅನೇಕರು ಧರ್ಮ ರಕ್ಷಕರೆಂತಲೂ ನಾವು ಕರೆಯಬಹುದು. ಶಿವಾನುಭವ ಅಥವಾ ಷಟ್‌ಸ್ಥಲ ಮಾರ್ಗವನ್ನು ಸಂಶೋಧಿಸಿ ಅದನ್ನು ಪ್ರಸಾರ ಮಾಡಿದಂಥವರು ಧರ್ಮ ಸ್ಥಾಪಕ ರೆಂದು ಹೇಳಬಹುದು. ಇವರು ೭-೮ ಜನರು ಮಾತ್ರ ಆಗಬಹುದು. ಮುಂದೆ ವೀರಶೈವ ಸಮಾಜವನ್ನು ನಾಶ ಮಾಡಲು ಪ್ರಯತ್ನಗಳಾದವು. ಆಗ ಇದನ್ನು ಉಳಿಸಿದವರು ಅನೇಕ ರಿದ್ದಾರೆ. ಅವರು ೧೦-೧೫ ಜನರಾಗಬಹುದು. ಇವರು ಧರ್ಮರಕ್ಷಕರೆಂದು ಹೇಳಬಹುದು. ಈ ಉಭಯ ವರ್ಗದವರು ವೀರಶೈವರಿಗೆ ಅತ್ಯಂತ ಪೂಜ್ಯರಾಗಿದ್ದಾರೆ. ಅವರ ಚರಿತ್ರೆಗಳು ಬಹು ಸ್ವಲ್ಪ ಜನರಿಗೆ ಗೊತ್ತಿರುವದರಿಂದ ನಾವು ಇವುಗಳನ್ನು ಸ್ವಲ್ಪ ವಿವರವಾಗಿ ನಿರೂಪಿಸಿದೆವು. ಇವರ ತರುವಾಯ ಅಸಂಖ್ಯ ಶಿವಶರಣರು ನಾಡಿನಲ್ಲಿ ಉತ್ಪನ್ನರಾದರು. ಅವರು ಸಮಾಜವನ್ನು ಅನೇಕ ರೀತಿಯಿಂದ ಪೋಷಿಸಿದರು. ಇವರು ಸಮಾಜಪೋಷಕರೆಂದು ನಾವು ಹೇಳಬಹುದು. ಇವರ ವೃತ್ತಾಂತಗಳನ್ನು ನಾವು ಸ್ಥಳಾಭಾವದ ಮೂಲಕ ಬಹು ಸಂಕ್ಷಿಪ್ತವಾಗಿ ವಿವರಿ ಸುವೆವು. ಇದಲ್ಲದೆ ಅನೇಕ ಪ್ರಮುಖರು ಪರಮಾತ್ಮನ ಸನ್ನಿಧಿಯಲ್ಲಿ ಇದ್ದುಕೊಂಡೇ ಕಠಿಣ ಕಾಲಗಳಲ್ಲಿ ಸಮಾಜವನ್ನು ಯೋಗ್ಯ ಹಾದಿಯಿಂದ ಒಯ್ದಿದ್ದಾರೆ. ಹೀಗೆ ಈ ನಾಲ್ಕು ವರ್ಗದವರಿಂದ ವೀರಶೈವ ಸಮಾಜವು ಉನ್ನತಿಯನ್ನು ಹೊಂದುತ್ತ ಬಂದಿದೆ. ಈ ಕಡೆಯ ೩-೪ನೇ ವರ್ಗದವರ ವೃತ್ತಾಂತಗಳು ನಾವು ಸ್ಥಳಾಭಾವದ ಮೂಲಕ ಅತ್ಯಂತ ಸಂಕ್ಷಿಪ್ತ ವಾಗಿ ವಿವರಿಸುವೆವು. ಇದಕ್ಕೋಸ್ಕರ ನಾವು ವಾಚಕರ ಕ್ಷಮಾಪಣೆಯನ್ನು ಬೇಡಿಕೊಳ್ಳುತ್ತೇವೆ.

—ಸಂಪಾದಕ

**ಆಯುದಕ್ಕಿ ಮಾರಯ್ಯ ಮತ್ತು ಲಕ್ಕಮ್ಮಗಳು:**— ಆಯುದಕ್ಕಿ ಮಾರಯ್ಯ ಮತ್ತು ಲಕ್ಕಮ್ಮಗಳು ಇಬ್ಬರು ದಂಪತಿಗಳು. ಅವರು ಬಹಳ ಬಡವರು. ಅವರು ತಮ್ಮ ಉಪಜೀವನ ಸಾಗಿಸಲಿಕ್ಕೆ ಕಲ್ಯಾ ಣಕ್ಕೆ ಬರುವವರಾದರು. ಅವರ ಗ್ರಾಮವು ರಾಯಚೂರು ಜಿಲ್ಲೆಯಲ್ಲಿ

ರುವ ಅಮರೇಶ್ವರವು. ಉಭಯತರು ಕಲ್ಯಾಣಕ್ಕೆ ಹೋದ ಬಳಿಕ ಯಾವ ಉದ್ಯೋಗವೂ ಅವರಿಗೆ ಸಿಕ್ಕಲಿಲ್ಲ. ಕಡೆಗೆ ಅವರು ವ್ಯಾಪಾರಿಗಳಿರುವ ಬೀದಿಗಳಲ್ಲಿಯೂ ಅವರ ಅಂಗಡಿಯ ಮುಂದೆಯೂ ಅಕ್ಕಿ ಬಹಳ ಬೀಳುವದನ್ನು ನೋಡಿ ಅವುಗಳನ್ನು ದಿನಾಲು ಆರಿಸಿಕೊಂಡು ಬಂದು ಅದರಿಂದ ಅನ್ನವನ್ನು ಮಾಡಿ ಉಪಜೀವನ ಸಾಗಿಸಬೇಕೆಂದು ನಿರ್ಧರಿಸಿದರು. ಆ ಪ್ರಕಾರ ಮಾರಯ್ಯನು ದಿನಾಲು ಅಕ್ಕೀಕಾಳು ಆರಿಸಿಕೊಂಡು ಬಂದು ತನ್ನ ಹೆಂಡತಿ ಲಕ್ಷ್ಮಮ್ಮನ ಕಡೆಗೆ ಕೊಡುವನು. ಅವಳು ಈ ಅಕ್ಕಿಯಿಂದ ಅನ್ನ ಮಾಡಿ ದಾಸೋಹ ಕಾರ್ಯಗಳನ್ನು ನಡಿಸುವಳು. ಮಾರಯ್ಯನು ಹೆಚ್ಚಿಗೆ ಅಕ್ಕಿ ಸಿಕ್ಕರೆ ಅದನ್ನು ಅವನು ಮನೆಗೆ ತರುತ್ತಿರಲಿಲ್ಲ. ಸಂಗ್ರಹ ಎಂದೂ ಮಾಡಲಿಲ್ಲ. ಬಸವೇಶ್ವರನು ಮಾರಯ್ಯನ ಈ ಬಡತನ ಸ್ಥಿತಿಯನ್ನು ನೋಡಿ ಅವನು ಅಕ್ಕಿ ಆರಿಸುತ್ತ ಹಾಯ್ದು ಹೋಗುತ್ತಿದ್ದ ಬೀದಿಯಲ್ಲಿ ಒಂದು ದಿವಸ ತನ್ನ ಸೇವಕರಿಂದ ಹೆಚ್ಚಿಗೆ ಅಕ್ಕೀಕಾಳನ್ನು ಚೆಲ್ಲಿಸಿದನು. ಮಾರಯ್ಯನು ಕಾಳು ಇಷ್ಟೇಕೆ ಬಿದ್ದಿವೆಂಬುದನ್ನು ವಿಚಾರಿಸಲು ಬಸವೇಶ್ವರನು ಹಾಗೆ ಕಾಳು ಒಗಿಸಿದ್ದು ಅವನಿಗೆ ತಿಳಿಯಿತು. ಆದರೂ ಅವನು ಅವುಗಳನ್ನು ಗುಡಿಸಿಕೊಂಡು ಮನೆಗೆ ಬಂದು ಕಾಳನ್ನು ತನ್ನ ಹೆಂಡತಿಗೆ ಕೊಟ್ಟನು. ಲಕ್ಷ್ಮಮ್ಮನು ಮಾರಯ್ಯನಿಗೆ ಇಷ್ಟು ಧಾನ್ಯ ನಿಮಗೆ ಹೇಗೆ ದೊರಕಿತು? ಇಷ್ಟು ಶೀಘ್ರ ಹೇಗೆ ಬಂದಿರಿ? ಈ ಸಂಗತಿಗಳನ್ನು ಚೌಕಸಿ ಮಾಡಲಾಗಿ ಬಸವೇಶ್ವರನು ಹೀಗೆ ಕಾಳು ಒಗಿಸಿದನೆಂದು ಅವಳಿಗೆ ತಿಳಿಯಿತು. ಆಗ ಲಕ್ಷಮ್ಮನು ಬಹಳ ಸಿಟ್ಟಿಗೆದ್ದು, ಬಸವೇಶ್ವರನು ನಾವು ಬಡವರೆಂದು ಸೊಕ್ಕಿಗೆ ಬಂದು ಹೀಗೆ ಮಾಡಿಸಿದ್ದಾನೆ. ಇಂಥವನಿಂದ ನಾವು ದಾನವನ್ನು ತೆಗೆದುಕೊಳ್ಳಬಾರದು. ನೀವು ಗುಡಿಸಿದ ಈ ಕಾಳನ್ನು ಬಸವನ ಅರಮನೆಯ ಮುಂದೆ ತಿರುಗಿ ಒಗೆದು ಬರಬೇಕು ಮತ್ತು ಅಲ್ಲಿ ಇದ್ದ ಗಣಾಧೀಶ್ವರರಿಗೆಲ್ಲ ಇವೊತ್ತು ನಮ್ಮ ಮನೆಗೆ ಊಟಕ್ಕೆ ಬರಹೇಳಬೇಕು, ಎಂದು ಗಂಡನಿಗೆ ಹೇಳಿ ಕಳಿಸಿದಳು. ಮಾರಯ್ಯನು ಅದೇ ಪ್ರಕಾರ ಬಿನ್ನಹ ಮಾಡಲು ಅಸಂಖ್ಯ ಶಿವಗಣಗಳು ಅವನ ಮನೆಯಲ್ಲಿ ಊಟಕ್ಕೆ ಬಂದರು. ಮನೆಯಲ್ಲಿ ಅಡಿಗೆಯ ಯಾವ ಸಂರಂಭವು ಕಾಣಲಿಲ್ಲ. ಅವರಿಗೆ ಒಂದು ಸಣ್ಣ ಪಾತ್ರೆಯಲ್ಲಿ ಲಕ್ಷಮ್ಮನು ಅಡಿಗೆ ಮಾಡಿದ್ದಳು. ಅದು ಎಲ್ಲರಿಗೂ ಸಾಕಾಯಿತು. ಎಷ್ಟು ತೆಗೆದರೂ ಅನ್ನ ಒಳಗೆ ಇದ್ದೇ ಇದ್ದಿತು. ಇದು ಕಾಯಕದ ಪವಾಡವು ಎಂದು ನೆರೆದ ಗಣಾಧೀಶ್ವರರು ಲಕ್ಷಮ್ಮನನ್ನು ಹೊಗಳುತ್ತ ತಮ್ಮ ಮನೆಗೆ

ತೆರಳಿದರು. ಕಾಯಕವನ್ನು ಸರಿಯಾಗಿ ಮಾಡಿದರೆ ಅನ್ನವು ಎಂದೂ ಯಾರಿಗೂ ಕಡಿಮೆ ಬೀಳುವದಿಲ್ಲ, ಎಂಬುದು ಈ ಕಥೆಯಿಂದ ತಿಳಿಯ ತಕ್ಕ ಸಂಗತಿಯಾಗಿದೆ.

**ಇಂಡಿಯ ಶಾಂತಯ್ಯ:—** ಇಂಡಿಯ ಶಾಂತಯ್ಯನು ವಿಜಾಪುರ ಜಿಲ್ಹೆಯಲ್ಲಿರುವ ಇಂಡೀ ಗ್ರಾಮದವನು. ಬಾಲಕರಿಗೆ ಪಾಠ ಹೇಳುವದೇ ಅವನ ಕಾಯಕವಾಗಿತ್ತು. ಅವನು ಕೀರ್ತನಕಾರನಾಗಿ ಸ್ತೋತ್ರಗಳನ್ನು ರಚಿಸುತ್ತ ಪರಮಾತ್ಮನನ್ನು ಭಜಿಸುವನು. ಅವನು ಅತ್ಯಂತ ಭಕ್ತಿಯುಳ್ಳವನು. ಒಮ್ಮೊಮ್ಮೆ ಅವನು ಹಸಿವು ತೃಷೆಗಳನ್ನು ಸಹ ಮರೆದು ಶಿವಭಜನೆಯಲ್ಲಿರುವನು. ಒಂದು ದಿವಸ ಅವನಿಗೆ ಪರಮಾತ್ಮನು ಪ್ರೀತನಾಗಿ ಪುಷ್ಪದ ಹಾರವನ್ನು ಅವನಿಗೆ ಹಾಕಿದನು. ಹೀಗೆ ಹಾರವನ್ನು ದಿನಾಲು ಅವನು ಹಾಕುವನು. ಮತ್ತೊಂದು ದಿನ ಪರಮಾತ್ಮನು ಅವನನ್ನು ಪರೀಕ್ಷಿಸಬೇಕೆಂದು ಹಾರವು ಅವನ ಕೊರಳಲ್ಲಿ ಬೀಳಲಿಲ್ಲ. ಆಗ ಶಾಂತಯ್ಯನು ತನ್ನಿಂದ ಏನೋ ಒಂದು ಪ್ರಮಾದವು ಘಟಿಸಿರಬಹುದೆಂದು ಎಣಿಸಿ ತನ್ನ ಶಿರವನ್ನರಿದು ಲಿಂಗದ ಮುಂದಿಟ್ಟನು. ಮತ್ತು ಆ ಲಿಂಗದಲ್ಲಿಯೇ ಅಡಗಿದನು. ಈ ಪ್ರಕಾರ ಶಾಂತಯ್ಯನು ಪರಮಾತ್ಮನಿಂದ ಇಂಡೆ ಅಂದರೆ ಪುಷ್ಪದ ಹಾರವನ್ನು ಪಡೆಯುತ್ತಿದ್ದುದರಿಂದ ಅವನಿಗೆ ಇಂಡೆಯ ಶಾಂತಯ್ಯನೆಂಬ ಹೆಸರು ಬಂದಿತು. ಇದೇ ಹೆಸರು ಗ್ರಾಮಕ್ಕೆಯೂ ಬಿದ್ದಿತು.

**ಉರಿಲಿಂಗದೇವ:—** ಉರಿಲಿಂಗದೇವನು ಈಗ ಹೈದರಾಬಾದ ರಾಜ್ಯದಲ್ಲಿರುವ ನಾಂದೇಡ ಜಿಲ್ಹೆಯಲ್ಲಿರುವ ಕಂಧಾರವೆಂಬ ಗ್ರಾಮದಲ್ಲಿ ಇರುತ್ತಿದ್ದನು. ಅವನು ಕೇವಲ ಶಿವಾನುಭವಿಯು. ಹಿಂಸ್ರ ಪ್ರಾಣಿಗಳು ಅವನನ್ನು ಬಾಧಿಸುತ್ತಿರಲಿಲ್ಲ. ಹೀಗಿರುವಲ್ಲಿ ಅವನು ನದೀ ತೀರದಲ್ಲಿ ಒಂದು ಗುಡಿಸಲನ್ನು ಹಾಕಿಕೊಂಡು ಲಿಂಗಾರ್ಚನೆಯಲ್ಲಿ ಕುಳಿತಿದ್ದನು. ಕೆಲವು ಕಿಡಿಗೇಡಿಗಳು ಅವನ ಗುಡಿಸಲಿಗೆ ಬೆಂಕಿಹಚ್ಚಿದರು. ಆಗ ಉರಿಲಿಂಗದೇವನು ತನ್ನ ಲಿಂಗ ಪೂಜೆಯಲ್ಲಿ ಮಗ್ನನಾಗಿದ್ದನು. ಗುಡಿಸಲಿಗೆ ಹತ್ತಿದ ಬೆಂಕಿಯು ಅವನ ಸಮೀಪಕ್ಕೆ ಬರದೆ ಅವನ ಸಮೀಪದಲ್ಲಿಯೇ ನಂದಿಹೋಯಿತು. ಕಿಡಿಗೇಡಿಗಳು ಇದನ್ನು ಕಂಡು ಪಶ್ಚಾತ್ತಾಪಪಟ್ಟು ತಮ್ಮ ಅಪರಾಧವನ್ನು ಕ್ಷಮಿಸಬೇಕೆಂದು ಉರಿಲಿಂಗದೇವನಿಗೆ ಬೇಡಿಕೊಂಡು ತೆರಳಿದರು. ಇವನು ಶ್ರೇಷ್ಠ ತರದ ವಚನಕಾರನಾಗಿದ್ದಾನೆ.

**ಉರಿಲಿಂಗಪೆದ್ದಿ:—** ಉರಿಲಿಂಗಪೆದ್ದಿಯು ಅಸ್ಪೃಶ್ಯನು. ಅವನು ಕನ್ನ ಹಾಕಿ ಕಳವು ಮಾಡುವದೇ ಅವನ ಉದ್ಯೋಗವಾಗಿತ್ತು. ಅವನು ಒಂದು

ದಿವಸ ಉರಿಲಿಂಗ ದೇವನ ಮಠದ ಮಾಳಿಗೆಯನ್ನೇರಿ ಬೆಳಕಿಂಡಿಯೊಳಗಿಂದ ಕೆಳಗೆ ಹಣಿಕಿಹಾಕಿ ನೋಡಲು ಉರಿಲಿಂಗದೇವನು ಒಬ್ಬರಿಗೆ ಲಿಂಗ ದೀಕ್ಷೆ ಮಾಡುತ್ತಿದ್ದುದನ್ನು ಕಂಡನು. ಅವನು ಅದನ್ನು ನೋಡುತ್ತ ಅಲ್ಲಿಯೇ ಕುಳಿತುಬಿಟ್ಟನು. ಆಗ ಅವನಲ್ಲಿ ಭಕ್ತಿಯು ಉತ್ಪನ್ನವಾಗಿ ತಾನೂ ಲಿಂಗ ಧಾರಣೆಯನ್ನು ಹೊಂದಬೇಕೆಂಬ ಅಪೇಕ್ಷೆಯು ಉಂಟಾಯಿತು. ಮರುದಿವಸ ಅವನು ಒಂದು ಕಟ್ಟಿಗೆಹೊರೆಯನ್ನು ಕಡಿದುಕೊಂಡು ಬಂದು ಮಠದಮುಂದೆ ಅದನ್ನು ಒಗೆದನು. ಹೀಗೆ ಅವನು ಕೆಲವು ದಿವಸ ಮಾಡಲಾಗಿ ಉರಿಲಿಂಗ ದೇವನು ಕಟ್ಟಿಗೆಗಳ ಬೆಲೆಯನ್ನು ಕೊಡಬೇಕೆಂದು ಅವನು— ಇನ್ನುಮೇಲೆ ನಮಗೆ ಕಟ್ಟಿಗೆ ಬೇಡ. ನೀನು ಈ ವರೆಗೆ ಹಾಕಿದ ಕಟ್ಟಿಗೆಯ ಬೆಲೆಯನ್ನು ಕೊಡುವೆನೆಂದು ಕೊಡಲಿಕ್ಕೆ ಹೋದನು. ಆಗ ಉರಿಲಿಂಗಪೆದ್ದಿಯು- ನನಗೆ ಬೆಲೆ ಬೇಡ. ನೀವು ನನಗೆ ಲಿಂಗಧಾರಣೆ ಮಾಡಬೇಕೆಂದು ಕೇಳಿಕೊಂಡನು. ಆಗ ಉರಿಲಿಂಗದೇವನು ಅವನ ವೃತ್ತಾಂತವನ್ನು ಕೇಳಲು ಅವನು ಅಸ್ಪೃಶ್ಯನು, ಕಳವು ಮಾಡುವದೇ ಅವನ ಉದ್ಯೋಗವು ಎಂದು ತಿಳಿದು ಅವನಿಗೆ ಲಿಂಗಧಾರಣೆಮಾಡಲಿಕ್ಕೆ ಒಪ್ಪಲಿಲ್ಲ. ಆದರೆ ಉರಿಲಿಂಗಪೆದ್ದಿಯು ಇಷ್ಟಕ್ಕೆ ಬಿಡದೆ ಉರಿಲಿಂಗದೇವನನ್ನು ಕಂಡಲ್ಲಿ ಅವನಿಗೆ— ನನಗೆ ಲಿಂಗಧಾರಣೆ ಮಾಡಬೇಕು ಎಂದು ಬಹಳ ಹೇಳಿಕೊಳ್ಳಹತ್ತಿದನು. ಆದರೆ ಉರಿಲಿಂಗ ದೇವನು ಅವನನ್ನು ದುರ್ಲಕ್ಷಿಸುತ್ತಲೇ ಬಂದನು. ಒಂದು ದಿವಸ ಅವನು ಬಹಳ ಸಿಟ್ಟಿಗೆ ಬಂದು ಅಲ್ಲಿ ಬಿದ್ದ ಒಂದು ಕಲ್ಲನ್ನು ' ತೆಗೆದುಕೊಂಡು ಮಹಾರಾಷ್ಟ್ರ ಭಾಷೆಯಲ್ಲಿ "ಘೇ ಜಾ ದಗಡೀಚ" ಎಂದು ಅನ್ನುತ್ತ ಅವನ ಕಡೆಗೆ ಆ ಕಲ್ಲನ್ನು ಒಗೆದನು. ಉರಿಲಿಂಗಪೆದ್ದಿಯು ಅವನು ನುಡಿದದ್ದೇ ಷಡಕ್ಷರ ಮಂತ್ರವೆಂದು ತಿಳಿದುಕೊಂಡು ಆ ಕಲ್ಲನ್ನು ತೆಗೆದುಕೊಂಡು ಲಿಂಗ ದಂತೆ ಪೂಜಿಸಹತ್ತಿದನು. ಕೆಲವು ದಿವಸಗಳಾದ ಮೇಲೆ ಆ ಕಲ್ಲು ಲಿಂಗ ರೂಪವನ್ನು ತಳೆಯಿತು. ಇದು ಉರಿಲಿಂಗದೇವನಿಗೆ ತಿಳಿಯಲಾಗಿ ಅವನನ್ನು ತನ್ನ ಮಠಕ್ಕೆ ಬರಮಾಡಿಕೊಂಡು ಅವನಿಗೆ ಲಿಂಗದೀಕ್ಷೆಯನ್ನು ವಿಧಾನ ಪೂರ್ವಕವಾಗಿ ಮಾಡಿದ್ದಲ್ಲದೆ ಅವನಿಗೆ ತನ್ನ ಪಟ್ಟಾಧಿಕಾರವನ್ನು ಸಹ ಕೊಟ್ಟನು. ಉರಿಲಿಂಗಪೆದ್ದಿಯು ಮುಂದೆ ಸಂಸ್ಕೃತ, ಕನ್ನಡವನ್ನು ಚನ್ನಾಗಿ ಕಲಿತು ಬಹು ದೊಡ್ಡ ವಿದ್ವಾಂಸನಾದನು. ಅವನು ಶ್ರೇಷ್ಠ ವಚನಕಾರ ನೆಂದು ಹೆಸರು ಪಡೆದನು. ಅವನ ವಚನಗಳನ್ನು ನಾವು ಪ್ರಸಿದ್ಧಿಸಿದ್ದೇವೆ. 'ಉರಿಲಿಂಗಪೆದ್ದಿ ಮಠ' ವೆಂದು ಹೈದರಾಬಾದ ಪ್ರಾಂತದಲ್ಲಿ ಕಲ್ಯಾಣ, ಕೊರಳಿ,

ಭಾಲ್ಕಿ ಮತ್ತು ಚಿಂಚೋಳಿ ಎಂಬ ನಾಲ್ಕು ಗ್ರಾಮಗಳಲ್ಲಿ ಈಗಲೂ ಇರುತ್ತವೆ.

**ಎಡೆಮಠದ ನಾಗಿದೇವ:—** ಎಡೆಮಠದ ನಾಗಿದೇವನು ಚೋಳ ಮಂಡಲದಲ್ಲಿ ಕಾಂಚೀಪಟ್ಟಣದಲ್ಲಿ ವಾಸಮಾಡುತ್ತಿದ್ದನು. ಅವನು ಬಸವೇಶ್ವರನ ಭಕ್ತಿಯನ್ನು ಕೇಳಿ ಅವನನ್ನು ಕಾಣಬೇಕೆಂದು ಕರ್ನಾಟಕಕ್ಕೆ ಬಂದನು. ಅವನು ಬಾಗೇವಾಡಿ ತಾಲೂಕು ಚಿಮ್ಮಲಗಿಯ ಹತ್ತರ ವಾಸಮಾಡುತ್ತಿದ್ದನು. ಅವನು ನಿಜಗುಣನಿಂದ ಬೋಧೆಯನ್ನು ತೆಗೆದುಕೊಂಡು ಪ್ರಸಿದ್ಧ ಶಿವಾನುಭವಿಯಾದನು.

**ಏಲೇಶ ಕೇತಯ್ಯ:—** ಏಲೇಶ ಕೇತಯ್ಯನು ಕಲಬುರ್ಗಿ ಜಿಲ್ಲೆಯಲ್ಲಿರುವ ಏಲೇಶ್ವರವೆಂಬ ಗ್ರಾಮದಲ್ಲಿ ವಾಸಿಸುತ್ತಿದ್ದನು. ಆತನು ಶಿವಶರಣರ ಉಕ್ತಿಗಳಲ್ಲಿ ಭಕ್ತಿಭಾವವನ್ನು ಇಟ್ಟುಕೊಂಡು ಯಾವ ಪದಾರ್ಥವಿದ್ದರೂ ತಪ್ಪದೆ ಲಿಂಗಾರ್ಪಿತ ಮಾಡಿ ಉಪಯೋಗಿಸುವನು. ಹೊಲಕ್ಕೆ ಲಿಂಗಮುದ್ರೆ, ದನಗಳಿಗೆ ಲಿಂಗಮುದ್ರೆ ಹಾಕಿ, ಲಿಂಗಾರ್ಪಿತವಾದ ಹೊಟ್ಟು, ಕಣಿಕೆ, ಮೇವು ನೀರನ್ನು ದನಗಳಿಗೆ ಉಣಿಸಿ ಅವುಗಳನ್ನು ಪ್ರೀತಿಯಿಂದ ಜೋಕೆ ಮಾಡುವನು. ಅವುಗಳು ಕೂಡ ಲಿಂಗಾರ್ಪಣವಾಗದ ಮೇವನ್ನು ತಿನ್ನುತ್ತಿರಲಿಲ್ಲ. ಇತರ ಮತಸ್ಥರು ಅವನ ದೇವಭಕ್ತಿಯನ್ನು ನೋಡಿ ಮಾತ್ಸರ್ಯ ಭಾವವನ್ನು ತಾಳಿ ಅವನು ಬಿತ್ತಲಿಕ್ಕೆ ಇಟ್ಟ ಬೀಜಗಳನ್ನು ಸುಟ್ಟುಬಿಟ್ಟರು. ಆದರೆ ಕೇತಯ್ಯನು ಸುಟ್ಟುಹೋದ ಬೀಜಗಳನ್ನು ಬಿತ್ತಲು ಅವು ಮೊಳಕೆಯೊಡೆದು ಚನ್ನಾಗಿ ನಾಟಿದವು. ಎಲ್ಲವೂ ಹುಲುಸಾಗಿ ಬೆಳೆದವು. ಆಗ ಜನರು ಕೇತಯ್ಯನು ನಿಜವಾದ ಭಕ್ತನು, ಎಂದು ತಿಳಿದು ಅವನ ಸಲುವಾಗಿ ಅತ್ಯಂತ ಭಕ್ತಿಭಾವವನ್ನು ತಾಳಿದನರಾದರು. ಏಲೇಶ ಕೇತಯ್ಯನು ವಚನಕಾರನಿದ್ದಾನೆ. ಅವನ ಅನೇಕ ವಚನಗಳನ್ನು ನಾವು ಅಚ್ಚು ಹಾಕಿದ್ದೇವೆ.

**ಅಲ್ಲಯ್ಯ:—** ಅಲ್ಲಯ್ಯನೆಂಬ ಶಿವಶರಣನು ಸಂಗೀತದಲ್ಲಿ ಬಲ್ಲಿದನಾಗಿ ಲಿಂಗಕ್ಕೆ ಗಾನವನ್ನು ಕೇಳಿಸುವ ಕಾಯಕವನ್ನು ಕೈಕೊಂಡಿದ್ದನು. ಯಾವಾಗಲೂ ಭಕ್ತಿಪೂರಿತವಾದ ಹಾಡುಗಳನ್ನೇ ಹಾಡುವನು. ಜನರು ಅವನನ್ನು ಹಾಡಲಿಕ್ಕೆ ತಮ್ಮಲ್ಲಿ ಕರೆದುಕೊಂಡು ಹೋಗುವರು. ಅವನು ಎಲ್ಲಿ ಹೋದರೂ ಭಕ್ತಿಯುಕ್ತ ಹಾಡುಗಳನ್ನೇ ಹಾಡುವನು. ಹೀಗೆ ಅವನು ಆಚರಿಸುತ್ತ ಇರಲು ಪರಮಾತ್ಮನು ಅವನಿಗೆ ಪ್ರೀತನಾಗಿ ಅವನಿಗೆ ಸಾಮರಸ್ಯ ಪದವನ್ನು ದಯಪಾಲಿಸಿದನು.

**ಕುಂಬಾರ ಗುಂಡಯ್ಯ:—** ಕುಂಬಾರ ಗುಂಡಯ್ಯನು ಹೈದರಾಬಾದ ಸಂಸ್ಥಾನದಲ್ಲಿರುವ ಭಾಲ್ಕಿ ಗ್ರಾಮದವನು. ಅವನ ಹೆಂಡತಿಯ ಹೆಸರು

ಕೇತಲದೇವಿ. ಅವರು ಗಡಿಗೆಗಳನ್ನು ಮಾಡಿ ಉಪಜೀವಿಸುತ್ತಿದ್ದರು. ಅವನು ಕಾಯಕ ಮಾಡುತ್ತಿರುವಾಗ ಅವನ ಶರೀರದ ಷಟ್‌ಚಕ್ರಗಳಲ್ಲಿ ಲಿಂಗಕಳೆಯು ಪ್ರಸ್ಫುರಿಸಹತ್ತುವದು. ಅವನು ತಿಗರಿಯನ್ನು ತಿರುಗಿಸಹತ್ತಲು ಅದು ಅವನಿಗೆ ಸೂಕ್ಷ್ಮ ಶರೀರದಲ್ಲಿರುವ ಚಕ್ರಗಳಂತೆ ಭಾಸವಾಗುವದು. ಅವನು ತಿಗರಿ ಸುತ್ತು ದಾರವು ಲಿಂಗ ಪೂಜೆಯ ಕಾಲಕ್ಕೆ ಉಪಯೋಗಿಸುವ ದಾರದಂತೆ ಇತ್ತು. ಮಡಿಕೆಗಳು ಸಿದ್ಧವಾದ ಬಳಿಕ ಅವುಗಳನ್ನು ಬಾರಿಸಿ ಧ್ವನಿಮಾಡಿ ನೋಡುವನು. ಇವೆಲ್ಲವು ಅವನಿಗೆ ಲಿಂಗಪೂಜಾ ಸಂಭ್ರಮದಂತೆ ತೋರುವವು. ಈ ರೀತಿ ಅವನು ಪರಮಾತ್ಮನನ್ನು ಭಜಿಸುತ್ತ ಕಾಯಕ ಮಾಡುವನು. ಒಂದುದಿನ ಪರಮಾತ್ಮನು ಅವನಿಗೆ ಪ್ರತ್ಯಕ್ಷನಾಗಿ ಅವನೊಡನೆ ಕುಣಿಯಹತ್ತಿದನು. ಆದರೆ ಗುಂಡಯ್ಯನಿಗೆ ಅದರ ಅರಿವು ಸಹ ಇರಲಿಲ್ಲ. ಈ ಪ್ರಕಾರ ಕುಂಬಾರ ಗುಂಡಯ್ಯನು ಲೋಕದಲ್ಲಿ ಆಚರಿಸುತ್ತ ಪರಮಾತ್ಮನಲ್ಲಿ ಲಯವಾದನು.

**ಕೆಂಭಾವಿ ಭೋಗಣ್ಣ:—** ಕಲಬುರ್ಗಿ ಜಿಲ್ಹೆಯಲ್ಲಿ ಕೆಂಭಾವಿ ಎಂಬ ಗ್ರಾಮವಿದೆ. ಅಲ್ಲಿ ಭೋಗಣ್ಣನೆಂಬ ಶರಣನು ವಾಸಮಾಡುತ್ತಿದ್ದನು. ಅವನು ಮುಂದೆ ಶಿವಾನುಭವದ ವಿಚಾರಗಳಿಗೆ ಒಲಿದವನಾಗಿ ವೀರಶೈವ ಧರ್ಮವನ್ನು ಸ್ವೀಕರಿಸಿದನು. ಅಂದಿನಿಂದ ಅವನು ಜಾತಿಭೇದವನ್ನು ಎಣಿಸದೆ ಹೊಲೆಯರೊಡನೆ ಸಹ ಭೋಜನಾದಿಗಳನ್ನು ನಡೆಸುವನು. ಊರಲ್ಲಿದ್ದ ಬ್ರಾಹ್ಮಣರು ಭೋಗಣ್ಣನ ಈ ರೀತಿಯನ್ನು ನೋಡಿ ಕುಪಿತರಾಗಿ ಅರಸನ ಇದಿರಿಗೆ ಅವನ ಬಗ್ಗೆ ಫಿರ್ಯಾದು ಮಾಡಿದರು. ಆಗ ಅರಸನು ಅವನಿಗೆ ತನ್ನ ಗ್ರಾಮವನ್ನು ಬಿಟ್ಟುಹೋಗಲಿಕ್ಕೆ ಅಪ್ಪಣೆಕೊಟ್ಟನು. ಭೋಗಣ್ಣನು ಹಾಗೆಯೇ ಆಗಲೆಂದು ಊರಬಿಟ್ಟು ಹೊರಬಿದ್ದನು. ಆಗ ಗ್ರಾಮದಲ್ಲಿದ್ದ ದೇವಾಲಯಗಳಲ್ಲಿಯ ಲಿಂಗಗಳೆಲ್ಲ ತಮ್ಮ ಸ್ಥಾನಗಳನ್ನು ಬಿಟ್ಟುಕೊಟ್ಟು ಭೋಗಣ್ಣನ ಬೆನ್ನುಹತ್ತಿ ಹೊರಟವು. ಆಗ ದೇವಾಲಯಗಳಲ್ಲಿ ದೇವರೇ ಉಳಿಯಲಿಲ್ಲ. ಪಟ್ಟಣದಲ್ಲಿಯ ಜನರು ಇದನ್ನು ನೋಡಿ ಹೌಹಾರಿ ಭೋಗಣ್ಣನು ಮಹಾತ್ಮಿಕನು ಎಂದು ತಿಳಿದು ಅವನನ್ನು ತಿರುಗಿ ಪಟ್ಟಣಕ್ಕೆ ಬರಮಾಡಿಕೊಂಡರು. ಮತ್ತು ಮುಂದೆ ಅವನೊಡನೆ ಭಕ್ತಿಯುಳ್ಳವರಾಗಿ ಆಚರಿಸಹತ್ತಿದರು.

**ಗೋರಕ್ಷ:—** ಗೋರಕ್ಷನು ಬದಾಮಿಹತ್ತರಿರುವ ಪಟ್ಟದಕಲ್ಲಿನವನು. ಅವನು ಪಟ್ಟದಕಲ್ಲಿನ ರಾಜನ ಗೋವುಗಳನ್ನು ಕಾಯುತ್ತ ಇದ್ದನು. ಅವನು